# ಮತ್ಸ್ಯ ಮಹಾಪುರಾಣ

ಭಾಗ-1

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಮತ್ಸ್ಯ ಮಹಾಪುರಾಣ ಭಾಗ-1

ಅನುವಾದ- ಲೇಖಕರು
ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯ ಗಲಗಲಿ**
ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ
ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

-: ಪ್ರಕಾಶಕರು :-
**ಖೋಡೇ ಫೌಂಡೇಶನ್**
ಗ್ರಂಥ ಪ್ರಕಟಣಾ ವಿಭಾಗ
ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ
ಬೆಂಗಳೂರು-560 009
ದೂರವಾಣಿ : 26320014 ಫ್ಯಾಕ್ಸ್ : 0091-80-26321416

MATSYA MAHAPURANA Part - 1 of Bhagavan Sri Vedavyasa Maharshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 1967

Second Edition : 2004

No. of Pages : xxii + 455

No. of Copies : 1,000



Price : Rs. 180 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ನಾಲ್ಕುವೇದ, ಆರುಶಾಸ್ತ್ರ, ಹದಿನೆಂಟುಪುರಾಣ. ಇದು ಭಾರತದ ಜ್ಞಾನಭಾಂಡಾರ. ಭಾರತೀಯ ಸಂಸ್ಕೃತಿಯ ರತ್ನಕೋಶ. ಹಿಂದೂಧರ್ಮದ ತವನಿಧಿ. ಸಂಸ್ಕೃತದ ಸಾರಸರ್ವಸ್ವ.

ಇವುಗಳಲ್ಲಿ ನಾಲ್ಕುವೇದಗಳು ಉಚ್ಚವರ್ಣದ ಆಧ್ಯಾತ್ಮಜೀವಿಗಳಿಗೆ ಮಾತ್ರ ಮೀಸಲು, ಆರುಶಾಸ್ತ್ರಗಳು ಪಂಡಿತ ಪ್ರಕಾಂಡರ ಸೊತ್ತು. ಶ್ರೀ ಸಾಮಾನ್ಯನ ಬಾಳನ್ನು ತಿದ್ದಿ, ಬದುಕನ್ನು ಮಿದ್ದಿ, ಬೆಳಕನ್ನು ಬೀರಿ, ದಾರಿತೋರಿ, ಪ್ರಗತಿಪಥದಲ್ಲಿ ಮುನ್ನಡೆಸುವ ಭಾರ ಪುರಾಣಗಳ ಮೇಲೆಯೇ ಇದೆ.

ಪುರಾಣಗಳು ಯಾವ ಜಾತಿಯ ಸೊತ್ತೂ ಅಲ್ಲ, ಹೆಂಗಸರು ಓದಬಾರದೆಂದಿಲ್ಲ. ಹರಿಜನರು ಕೇಳಬಾರದೆಂದಿಲ್ಲ. ಎಲ್ಲರ ಕಿವಿಗೆ ಬೀಳಬೇಕು. ಎಲ್ಲ ಹೃದಯಗಳಿಗೂ ತಿಳಿಯಬೇಕು ಎಂಬ ಉದ್ದೇಶದಿಂದಲೇ ಇವುಗಳ ನಿರ್ಮಾಣ. ಅವುಗಳ ಭಾವ ಸರ್ವರ ಉದ್ಧಾರವೇ ಈ ಪುರಾಣಗಳ ಉದ್ದೇಶ. 'ಸರ್ವೇ ಜನಾಃ ಸುಖಿನೋ ಭವಂತು' ಎಂಬುದೇ ಇವುಗಳ ಆದೇಶ. ಜಾತಿ, ಮತ, ಲಿಂಗ, ಬಣ್ಣ, ನಾಡು, ನುಡಿ ಯಾವ ಕಟ್ಟು ಕಟ್ಟಳೆಯಿಲ್ಲದೆ ಹುಟ್ಟಿದ ಜೀವ ಜಂಗುಳಿಯನ್ನೆಲ್ಲ ದಿವ್ಯಜೀವನದ ಭವ್ಯಭವಿಷ್ಯದೆಡೆಗೆ ಕರೆದೊಯ್ಯುವದೇ ಅವುಗಳ ಹೆಗ್ಗುರಿ.

ಬಾಳೊಂದು ಕಗ್ಗಾಡು. ಅದರ ವಿಷಮವೀಥಿಗಳ ಏರುಪೇರು, ತಿಟ್ಟು ತಗ್ಗುಗಳಲ್ಲಿ ಯಾರ ಬದುಕಿನ ಬಂಡಿಗಳೂ ಒಗ್ಗಾಲಿಯಾಗಿ ಮುಗ್ಗರಿಸದೇ ಉಳಿಯುವುದಿಲ್ಲ. ಆದರೂ ಈ ಎಲ್ಲ ಏಳುಬೀಳು, ಏಟಕಾಟ, ಸಾವುನೋವುಗಳು ಬೇಕಾದಷ್ಟು ಬಂದೆರಗಿದರೂ ಕಂಗೆಡದೆ, ಧೈರ್ಯಬಿಡದೆ ಧ್ಯೇಯದ ಧ್ರುವತಾರೆಯತ್ತ ದೃಷ್ಟಿಯಿಟ್ಟು ಸಹನಾಮೂರ್ತಿಗಳಾಗಿ ಮುಂದುವರಿಯಬೇಕು. ಆ ಮುಕ್ತಿಮಂದಿರದ ಸುಂದರ ನಿಲ್ದಾಣವನ್ನು ತಲುಪಿದ, ಧೀರಚೇತನಗಳ ಜೀವನಯಾತ್ರೆಯ ರೋಮಹರ್ಷಣ ವೃತ್ತಾಂತಗಳನ್ನು ಪುರಾಣಗಳು ಬಿಡಿಸಿಡುತ್ತವೆ. ಅಂಥ ದೀರ್ಘಪಯಣದ ಪಥಿಕರಾದ ನಮ್ಮೆಲ್ಲರ ಬದುಕಿಗೊಂದು ಭರವಸೆಯನ್ನು ಈ ಪುರಾಣಗಳು ಒದಗಿಸುತ್ತವೆ. ನಾವೆಲ್ಲರೂ ಊನರು ಹೀನರು ಎಂಬ ನ್ಯೂನಗಂಡದ ಗಂಡಾಂತರದಿಂದ ಪಾರುಮಾಡಿ 'ತತ್ವಮಸಿ', 'ತದಿವ ತ್ವಮಸಿ' ಆ ಪರಂಜ್ಯೋತಿಯ ಪ್ರತಿಬಿಂಬನೇ ನೀನು ಎಂದು ಆತ್ಮವಿಶ್ವಾಸವನ್ನು ಮೂಡಿಸಿ ಪ್ರತಿಯೊಬ್ಬನಲ್ಲಿಯೂ ಆ ದೈವಭಾವದ ಆವಿರ್ಭಾವ ಯಥಾಯೋಗ್ಯ ಆಗಬಲ್ಲದು ಎಂಬುದನ್ನು ಅನೇಕಾನೇಕ ದೃಷ್ಟಾಂತಗಳಿಂದ ಮನಗಾಣಿಸಿ ಕೊಡುತ್ತವೆ ಈ ಪುರಾಣಗಳು.

ಪೃಥು, ರಾಮು, ಹರಿಶ್ಚಂದ್ರ, ಹನುಮಂತ, ರಂತಿದೇವ, ಮಾಂಧಾತ, ವಸಿಷ್ಠ ವಾಮದೇವರಂಥ ದೇವ, ಮಾನವ, ಮುನಿ, ಮಹಾರಾಜರ ಆದರ್ಶಜೀವನ ದೃಷ್ಟಾಂತಗಳನ್ನು ತೋರಿಸಿ ಉದಾತ್ತ ಜೀವನದ ಧ್ಯೇಯ ಧೋರಣೆಗಳು ಎಂತಿರಬೇಕೆಂಬುದನ್ನು ತಿಳಿಸುತ್ತವೆ. ಸೌಭರಿ, ನಹುಷ, ವಿಶ್ವಾಮಿತ್ರ, ನಲ,

ಯಯಾತಿ, ಮಾಂಡವ್ಯ, ಗೌತಮ, ಧರ್ಮರಾಜ ಮುಂತಾದವರ ರೋಮಾಂಚಕ ಇತಿವೃತ್ತಗಳನ್ನು ಬಿತ್ತರಿಸುತ್ತವೆ. ವಿಧಿಯು ವಿಘ್ನವಿಡ್ಡೂರಗಳನ್ನು ಒಡ್ಡಿದಾಗ ಅಥವಾ ದಾರಿ ಜಾರಿದಾಗ ಕೂಡಲೆ ಎಚ್ಚತ್ತು ತಪ್ಪನ್ನು ತಿದ್ದಿಕೊಂಡು ಮೇಲೆದ್ದು ಸಾವರಿಸಿಕೊಂಡು ಮತ್ತೆ ಸತ್ಪಥದಲ್ಲಿ ಮುಂಬರುವ ಹದಹವಣುಗಳೆಂತು ಹೇಗೆ ಎಂಬುದನ್ನೂ ಈ ಪುರಾಣ ಪ್ರಬಂಧಗಳು ತಿಳಿಸಿಕೊಡುತ್ತವೆ.

ಇದರಂತೆ ಪರಿಸರ ಪರಿಸ್ಥಿತಿ ಹಾಗೂ ಪುರಾಣಪುರುಷರು ಎಷ್ಟೇ ಎಚ್ಚರಿಕೆಯ ಗಂಟೆಬಾರಿಸಿದರೂ ಕೇಳದೆ, ಕೀಳುತನದ ಕಾಡುದಾರಿಯಲ್ಲಿ ಛಲಬಲದಿಂದ ದೈತ್ಯ ಧಾವನಗೈದ ವೇನ, ಹಿರಣ್ಯಕಶಿಪು, ರಾವಣ, ಕೀಚಕ, ದುರ್ಯೋಧನ ಮುಂತಾದ ದುರುಳ ದಾನವ ಮಾನವರ ಜೀವನದ ದುರಂತಚಿತ್ರಗಳನ್ನು ಎದ್ದುಕಾಣುವಂತೆ ಚಿತ್ರಿಸಿ ಜನರು ಅಂಥ ಅಪಮಾರ್ಗದಿಂದ ಪರಾವೃತ್ತರಾಗಿ ಸನ್ಮಾರ್ಗಗಾಮಿಗಳಾಗುವಂತೆ ಈ ಪುರಾಣಗಳು ಪ್ರಚೋದಿಸುತ್ತವೆ.

ಇದೇ ರೀತಿಯಾಗಿ ಸೀತೆ, ಸಾವಿತ್ರಿ, ಅನಸೂಯಾ, ಅರುಂಧತೀ, ಚಂದ್ರಮತೀ, ದೇವಹೂತಿ, ಸುನೀತಿ ಮುಂತಾದ ಸತೀಮಣಿಯರ ಉಜ್ವಲಜೀವನಚರಿತ್ರೆಗಳು ನಾರೀಕುಲದ ಗೌರವದ ಗೌರೀಶಿಖರಗಳಾಗಿ ಇಂದಿಗೂ ಮನುಕುಲದ ಮಹಿಳೆಯರಿಗೆಲ್ಲ ಮಾರ್ಗದರ್ಶನಮಾಡಿಸುತ್ತವೆ. ಈ ಎಲ್ಲ ಪುರಾಣಕಾಲದ ಸ್ತ್ರೀ-ಪುರುಷರು ಹಾಕಿದ ಭದ್ರಬುನಾದಿಯಮೇಲೆ ಸುಪ್ರತಿಷ್ಠಿತವಾದುದರಿಂದಲೇ ಭಾರತೀಯ ಜನಜೀವನದ ಶೀಲ, ಚಾರಿತ್ರ್ಯ, ಸದ್ಭಾವ, ಸಜ್ಜನಿಕೆ ಮುಂತಾದ ಸಂಸ್ಕೃತಿಯ ಪದರುಗಳು ಎಷ್ಟೇ ಬಾಹ್ಯಾಘಾತಗಳಾದರೂ ಅಳಿಯದೇ ಉಳಿದುಕೊಂಡಿವೆ. ಇತ್ತೀಚೆಗೆ ವೈದೇಶಿಕ ಸಂಸ್ಕೃತಿ, ವಿದ್ಯೆ, ಆಚಾರ ವಿಚಾರಗಳ ಘನಿಷ್ಠ ಸಂಪರ್ಕದ ನೈಕಟ್ಯ ವೈಕಟ್ಯಗಳಿಂದಾಗಿ ಆ ಶೀಲ ಸಚ್ಚಾರಿತ್ರ್ಯದ ಭದ್ರಭಿತ್ತಿಗೆ ಅಲ್ಲಲ್ಲಿ ಬಿರುಕು ಕೊರಕು ಬಿದ್ದುದು ಕಂಡುಬರುತ್ತದೆ.

ಅದಕ್ಕಾಗಿ ಇದೇ ನಾವು ನಿಂತ ನಾಡ ನೆಲದಲ್ಲಿಯೇ ನೆಲಿಸಿ, ನಿಂತು, ನಡೆದು, ನುಡಿದು, ನಲಿದುಲಿದು ಹೋದ ಆ ಮಹಾಪುರುಷರ ಉಜ್ವಲಜೀವನದ ದೇದೀಪ್ಯಮಾನ ಘಟನಾವಳಿಗಳು, ಮಿಂಚಿನ ಕ್ಷಣಗಳು, ಮತ್ತೊಮ್ಮೆ ನಮ್ಮೆಲ್ಲರ ಕಣ್ಣೆದುರು ಸುಳಿದು ತಿಳಿದುಹೋಗುವಂತಾಗಬೇಕು. ಆಗ ಮಾತ್ರ ನಮ್ಮ ನಮ್ಮತನದ ಮರವುಗೆಟ್ಟ ಅರಿವು ತನ್ನ ಆತುಕ್ಕುಮುಕ್ಕು ಕಳೆದುಕೊಂಡು ಮತ್ತೊಮ್ಮೆ ಬೆಳಗಲಿಕ್ಕೆ ಅನುವಾಗುವದು. ನಾಡಿನ ಈ ನೈತಿಕ ಪುನರುತ್ಥಾನದ ಘನತರಉದ್ದೇಶವನ್ನು ಕಣ್ಣೆದುರು ಇರಿಸಿಗೊಂಡು ದೇವಭಾಷೆಯಾದ ಸಂಸ್ಕೃತದಲ್ಲಿದ್ದ ಆ ಹದಿನೆಂಟೂ ಮಹಾಪುರಾಣಗಳನ್ನು ನಮ್ಮ ನಾಡುನುಡಿಯಾದ ಕನ್ನಡದಲ್ಲಿ ಇಳಿಸುವ ಸಾಹಸವನ್ನು ಕೈ ಕೊಂಡದ್ದಾಗಿದೆ.

ಶ್ಲಿಷ್ಟಕ್ಲಿಷ್ಟವಾದ ಸಂಸ್ಕೃತದ ವಿದ್ವದ್ಗಮ್ಯ ಶೈಲಿಯಲ್ಲಿಯೇ ಹೆಚ್ಚಾಗಿ ಬಿತ್ತರಿಸಲ್ಪಟ್ಟ ಹದಿನೆಂಟು ಪುರಾಣಗಳನ್ನು ಕನ್ನಡಿಸುವ ಕಾರ್ಯ ಸುಲಭ ಸಾಧ್ಯವೇನಲ್ಲ. ಅದರಲ್ಲಿಯೂ ಮೂಲಪುರಾಣ ಪುಸ್ತಕಗಳ ಸರಿಯಾದ ನಿರ್ದುಷ್ಟ ಸಂಶೋಧಿತ ಆವೃತ್ತಿಗಳೂ ಪ್ರಕಟನೆಗಳೂ ದೊರಕುವದು ದುರ್ಲಭವಾಗಿದೆ.

ಅದಕ್ಕಾಗಿ ದೇಶದ ನಾನಾಭಾಗಗಳಲ್ಲಿರುವ ಪ್ರಾಚ್ಯಗ್ರಂಥಭಾಂಡಾರಗಳಿಗೆ ಹೋಗಬೇಕಾಗುತ್ತದೆ. ಮತ್ತು ಅಲ್ಲಿಯ ಗ್ರಂಥಾಗಾರ ಅಧಿಕಾರಿಗಳ ನಿಕಟಸಂಪರ್ಕ ಬೆಳೆಸಿ ಅಲ್ಲಿಯ ಸ್ಥಳೀಯ ಪಂಡಿತರ ಸಹಕಾರ ಪಡೆದು ತಾಡವಾಲೆಯ ಗ್ರಂಥಗಳಿಂದ ಪ್ರತಿಮಾಡಿ ತರಬೇಕಾಗುತ್ತದೆ. ಹೀಗೆ ಬೇರೆಬೇರೆ ಗ್ರಂಥಾಲಯಗಳಿಂದ ನಕಲು ಮಾಡಿತಂದ ಎಲ್ಲ ಪ್ರತಿಗಳನ್ನು ಪಂಡಿತಮಂಡಲಿಯ ಸಹಾಯದಿಂದ ಸಂಶೋಧನಮಾಡಿ ಶುದ್ಧಪ್ರತಿಯನ್ನು ಕಂಡುಕೊಂಡು ಸಿದ್ಧಗೊಳಿಸಿದ ಬಳಿಕವೇ ಭಾಷಾಂತರ ಕಾರ್ಯವನ್ನು ಕೈಕೊಳ್ಳಬೇಕಾಗುವದು. ಆದುದರಿಂದ ಈ ಕಾರ್ಯ ಬಹುದ್ರವ್ಯವ್ಯಯ ಸಾಧ್ಯವೂ, ಬಹುಕಾಲ ಶ್ರಮಸಾಧ್ಯವೂ, ಬಹುಪಂಡಿತರ ಸಹಕಾರೈಕಸಾಧ್ಯವೂ ಆಗಿರುತ್ತದೆ. ಈ ಕ್ರಮದಿಂದ ಪ್ರಯತ್ನಮಾಡಿ ನಾವು ಈಗಾಗಲೇ ಶ್ರೀ ವಿಷ್ಣುಪುರಾಣ, ಕೂರ್ಮಪುರಾಣ, ಬ್ರಹ್ಮವೈವರ್ತಪುರಾಣ, ವರಾಹಪುರಾಣ, ವಾಮನಪುರಾಣ ನಾರದಪುರಾಣ ಮೊದಲಾದ ಮಹಾಪುರಾಣ ಗ್ರಂಥಗಳನ್ನು ಸಂಶೋಧಿಸಿ, ಕನ್ನಡಿಸಿ ಕಳೆದ ವರ್ಷವೇ ಪ್ರಕಟಪಡಿಸಿದ್ದೇವೆ.

ಈಗ ಎಲ್ಲ ದೃಷ್ಟಿಯಿಂದಲೂ ಅತ್ಯುತ್ತಮವಾದ ಮತ್ಸ್ಯಮಹಾಪುರಾಣದ ಸಂಶೋಧನ, ಸರಿಯಾದ ಪಾಠಪರಿಶೋಧನ, ಶುದ್ಧ ಪಾಠನಿರ್ಧಾರಣಾದಿಗಳಿಂದ ಮೂಲ ಮತ್ಸ್ಯಪುರಾಣವನ್ನು ಬಹುಪರಿಶ್ರಮದಿಂದ ಮುದ್ರಣಕ್ಕೆ ಸಿದ್ಧಗೊಳಿಸಲಾಗಿದೆ.

ಈ ಪುರಾಣ ಪ್ರತಿಗಳನ್ನು ಸಂಶೋಧಿಸುವಾಗ ಕಲಕತ್ತೆಯ ವಂಗವಾಸಿ ಪ್ರೆಸ್ಸಿನವರು ಮುದ್ರಿಸಿದ ಮತ್ಸ್ಯಪುರಾಣ ಮತ್ತು ಪುಣೆಯ ಆನಂದಾಶ್ರಮದವರು ಪ್ರಕಟಿಸಿದ ಮತ್ಸ್ಯಪುರಾಣ ಹಾಗೂ ಕಲಕತ್ತೆಯ ಕ್ಲಾಯ್ವರೋಡಿನಲ್ಲಿ ಶ್ರೀ ಮನಸುಖರಾವ ಮೋರ ಎಂಬುವರು ಇತ್ತೀಚೆಗೆ ಪ್ರಕಟಿಸಿದ ಮತ್ಸ್ಯಪುರಾಣ ಮತ್ತು ಮೈಸೂರ ಅರಮನೆಯ ಪ್ರಕಟಣೆ ಮುಂತಾದ ಮುದ್ರಿತ ಪ್ರತಿಗಳನ್ನೂ, ಐದು ಹಸ್ತಲಿಖಿತ ಪ್ರತಿಗಳನ್ನೂ ಪಂಡಿತ ಮಂಡಲಿಯ ಸಹಾಯದಿಂದ ಸಂಶೋಧನೆ ಮಾಡಲಾಯಿತು. ಇವುಗಳಲ್ಲಿ ವಂಗವಾಸಿ ಆವೃತ್ತಿ ಮತ್ತು ಆನಂದಾಶ್ರಮದ ಆವೃತ್ತಿಗಳಲ್ಲಿ ಹಲಕೆಲವು ಪಾಠಾಂತರಗಳು ಇದ್ದರೂ ವಿಶೇಷ ವ್ಯತ್ಯಾಸವಿಲ್ಲ. ಆದರೆ ಆನಂದಾಶ್ರಮದ ಪ್ರತಿಯಲ್ಲಿ ಕೊನೆಗೆ ಕಂಡುಬರುವ ಪುರಾಣ ಶ್ರವಣದ ಫಲ ಶ್ರುತಿ ವಿಭಾಗವು ವಂಗವಾಸಿ ಪ್ರಕಟಣೆಯಲ್ಲಿ ಇರುವುದಿಲ್ಲ. ಕಲಕತ್ತೆಯ ಇತ್ತೀಚಿನ ಶ್ರೀ ಮನಸುಖರಾವ್ ಮೋರರವರು ಪ್ರಕಟಿಸಿದ ಮತ್ಸ್ಯಪುರಾಣದ ಪ್ರತಿಯಲ್ಲಿ ವಿಪರೀತ ತಪ್ಪುಗಳು ಉಳಿದುಕೊಂಡಿವೆ.

ನಾವು ಸಂಗ್ರಹಿಸಿದ ತಾಡವಾಲೆಯ ಹಸ್ತಲಿಖಿತ ಮತ್ಸ್ಯಪುರಾಣಗಳಲ್ಲಿ ಕುಂಭಕೋಣಂ ನರಹರ ಮೂರ್ತಿಯವರ ***'ಕ'*** ಪ್ರತಿ. ಗಾಲವ ಗ್ರಂಥ ಭಾಂಡಾರದ ***'ಗ'*** ಪ್ರತಿ, ಹಿಂದಿನ ರಾಮದುರ್ಗ ಸಂಸ್ಥಾನದ ಗ್ರಂಥಾಲಯದರ ಪ್ರತಿ, ನಾಸಿಕದ ದಶಗ್ರಂಥಿ ಬಾಪೂ ದೀಕ್ಷಿತರ ***'ನ'*** ಪ್ರತಿ, ಕಲಕತ್ತೆಯ ಕೀರ್ತಿಶೇಷ ಯತೀಂದ್ರ ವಿಮಲ ಚಕ್ರವರ್ತಿಯವರ ಮನೆಗ್ರಂಥಾಲಯದಲ್ಲಿನ ***'ಯ'*** ಪ್ರತಿಗಳು ಮುಖ್ಯವಾಗಿವೆ. ಇದಲ್ಲದೆ ಬೇರೆ ಬೇರೆ ಮಾಧ್ವ ಪಂಡಿತರಿಂದ ಮೂರು ಹಸ್ತಲಿಖಿತ ಮತ್ಸ್ಯಪುರಾಣ ಪ್ರತಿಗಳು ನಮಗೆ ದೊರಕಿದ್ದವು. ಅವುಗಳಲ್ಲಿ ದಕ್ಷಿಣ ಕನ್ನಡದ ಒಂದು ತುಳು

ಪ್ರತಿಯು ಶುದ್ಧವಿದ್ದರೂ ಆದಿ ಅಂತ್ಯ ಶೂನ್ಯವಾಗಿ ನಡುವಿನ ೧೩೪ನೇ ಅಧ್ಯಾಯದಿಂದ ೨೧೦ನೇ ಅಧ್ಯಾಯದವರೆಗೆ ಮಾತ್ರವಿದೆ. **ಬುಧಗಾವದಲ್ಲಿ** ದೊರೆತ ಒಂದು ಪ್ರತಿಯು ಪುಣೆಯ ಆನಂದಾಶ್ರಮ ಪ್ರಕಟಣೆಯ ಸಂಪೂರ್ಣ ನಕಲಾಗಿದೆ. ಕೇಶವ ಕುಂದರಗಿ ಎನ್ನುವವರ ಮನೆಯಲ್ಲಿಯ ಪ್ರತಿಯ ಮೇಲೆ ಮಳೆನೀರು ಬಿದ್ದು ಅಕ್ಷರಗಳೆಲ್ಲವೂ ಸಾರಿಸಿದಂತಾಗಿ ಓದಲಿಕ್ಕೆ ಬಾರದಂತಾಗಿದೆ. ಆದುದರಿಂದ ಈ ಮೂರು ಪ್ರತಿಗಳನ್ನು ಬಿಟ್ಟು ಉಳಿದ ಐದು ಹಸ್ತಪ್ರತಿಗಳನ್ನೂ ನಾಲ್ಕು ಮುದ್ರಿತ ಪ್ರತಿಗಳನ್ನೂ ಆಧರಿಸಿ ಶೋಧಿಸಿ ಶುದ್ಧಪ್ರತಿಯನ್ನು ಸಿದ್ಧಗೊಳಿಸಲಾಯಿತು.

ಒಟ್ಟು ಈ ಮತ್ಸ್ಯಪುರಾಣವು ೨೯೧ ಅಧ್ಯಾಯವಿರುತ್ತದೆ. ಕೆಲವು ಪ್ರತಿಗಳಲ್ಲಿ ೨೯೦ ಅಧ್ಯಾಯಗಳು ಮಾತ್ರ ಇರುತ್ತದೆ. ಒಟ್ಟು ಪುರಾಣಗಳ ಕಾಲ ಮೀಮಾಂಸೆಯನ್ನು ವಿಷ್ಣು ವರಾಹ ವಾಮನ ಪುರಾಣಗಳಿಗೆ ನಾವು ಬರೆದ ಮುನ್ನುಡಿಯಲ್ಲಿ ಮಾಡಲಾಗಿದ್ದು ಇಲ್ಲಿ ಮತ್ತೆ ವಿಷಯವನ್ನು ಪುನರುಕ್ತಿ ಮಾಡುವದಿಲ್ಲ.

ಸಾಮಾನ್ಯವಾಗಿ ಹದಿನೆಂಟು ಪುರಾಣಗಳೂ ಭಗವದವತಾರಿಗಳಾದ ಶ್ರೀ ವೇದವ್ಯಾಸರಿಂದ ರಚಿತವಾಗಿರುತ್ತವೆ. ಮುಂದೆ ಎರಡು ಮೂರು ಸಲ ಈ ಪುರಾಣ ಗ್ರಂಥಗಳ ಪರಿಷ್ಕರಣ ನಡೆದಿದೆ. ಅದನ್ನೇ ಪಾಶ್ಚಾತ್ಯ ಸಂಶೋಧಕರು ಪುರಾಣಗಳ ನಿರ್ಮಾಣ ಕಾಲ ಎಂದು ಪರಿಗ್ರಹಿಸಿದ್ದು ಶುದ್ಧ ತಪ್ಪು. ಅವರು ಹೇಳುವಂತೆ ಎಲ್ಲ ಪುರಾಣಗಳಲ್ಲಿಯೂ ಪ್ರಕ್ಷೇಪ ವಿಕ್ಷೇಪಗಳಾದದ್ದೇನೋ ನಿಜ. ಅದೀಗ ವಿಂಗಡಿಸಲಿಕ್ಕೆ ಬಾರದಷ್ಟು ವಿಕಟವಾಗಿ ನಡೆದಿದೆ. ಪಾಶ್ಚಾತ್ಯ ಹಾಗೂ ಆಧುನಿಕ ಪೌರ್ವಾತ್ಯ ವಿಮರ್ಶಕರು ಪುರಾಣಗಳಲ್ಲಿ ಬರುವ ಧರ್ಮಶಾಸ್ತ್ರ ಭಾಗವೆಲ್ಲವೂ ಪ್ರಕ್ಷಿಪ್ತ ಎಂದು ಹೇಳುವದು ಪೂರ್ವಗ್ರಹ ದೂಷಿತವೇ ಸರಿ. ''ಪುರಾಣೇ ಧರ್ಮ ನಿರ್ಣಯಃ'' ಎಂಬ ಉಕ್ತಿಯನ್ನು ಅವರು ಗಮನಿಸಿದಂತೆ ಇಲ್ಲ. ಧರ್ಮಾಧರ್ಮ ನಿರ್ಣಯವೂ ಒಂದು ಪುರಾಣದ ಅಂಗ. ಆದುದರಿಂದಲೇ ಪ್ರಾಚೀನ ಧರ್ಮಶಾಸ್ತ್ರಕಾರರು ಪುರಾಣಗ್ರಂಥಗಳಿಂದ ಧಾರಾಳವಾಗಿ ಧರ್ಮಾನುಶಾಸನದಂತಿದ್ದ ಅನೇಕ ಪದ್ಯಗಳನ್ನು ಎತ್ತಿ ಉದಾಹರಿಸಿ ಧರ್ಮ ನಿರ್ದೇಶನವನ್ನು ಮಾಡಿದ್ದುಂಟು. ಆದುದರಿಂದ ಸ್ಮಾರ್ತಭಾಗ ಬಂದಿದ್ದರಿಂದ ಪುರಾಣಗಳು ಅರ್ವಾಚೀನ ಎಂದು ಹೇಳುವದು ಸೂಕ್ತವಲ್ಲ. ಸಾಮಾನ್ಯವಾಗಿ ಮಹಾಭಾರತಕ್ಕಿಂತ ಮುಂಚೆಯೇ ಭಗವಾನ್ ಶ್ರೀ ವೇದವ್ಯಾಸರಿಂದ ಹದಿನೆಂಟು ಪುರಾಣಗಳೂ ರಚಿತವಾಗಿದ್ದವು.

**''ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ॥**
**ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ ॥**

ಸತ್ಯವತಿಯ ಪುತ್ರರಾದ ಬಾದರಾಯಣರು ಅರ್ಥಾತ್ ವೇದವ್ಯಾಸರು ಪುರಾಣವಿಷಯಗಳ ಉಪಬೃಂಹಣರೂಪವಾದ ಮಹಾಭಾರತವನ್ನು ರಚಿಸಿದರು ಎಂದು ಸ್ಪಷ್ಟ ಪ್ರಮಾಣವಿದೆ. ಆದುದರಿಂದ ಕ್ರಿಸ್ತಪೂರ್ವ ಎರಡುಸಾವಿರವರ್ಷಗಳ ಹಿಂದೆಯೇ ಎಲ್ಲ ಹದಿನೆಂಟು ಪುರಾಣಗಳ ಮೂಲ ರೂಪವು ನಿರ್ಮಾಣಗೊಂಡು ಕಾಲಾಂತರದಲ್ಲಿ ಪರಿವರ್ತನಗೊಂಡು ಈಗ ಈ ರೂಪಕ್ಕೆ ಇಳಿದಿರುತ್ತದೆ.

ಪ್ರಕೃತ ಮತ್ಸ್ಯಪುರಾಣವು ಹದಿನಾಲ್ಕು ಸಾವಿರ ಶ್ಲೋಕಾತ್ಮಕವಾಗಿದೆ. ಇದರ ವರ್ಣ್ಯವಿಷಯವನ್ನು ಇದೇ ಪುರಾಣದಲ್ಲಿ,

''ಶ್ರುತೀನಾಂ ಯತ್ರ ಕಲ್ಪಾದೌ ಪ್ರವೃತ್ತ್ಯರ್ಥಂ ಜನಾರ್ದನಃ ।
ಮತ್ಸ್ಯರೂಪೇಣ ಮನವೇ ನರಸಿಂಹಸ್ಯ ವರ್ಣನಮ್ ॥

ಅಧಿಕೃತ್ಯಾಽ ಬ್ರವೀತ್ ಸತ್ಯಕಲ್ಪವೃತ್ತಂ ಮುನೀಶ್ವರಾಃ ।
ತನ್ಮಾತ್ಸ್ಯಮಿತಿ ಜಾನೀಧ್ವಂ ಸಹಸ್ರಾಣಿ ಚತುರ್ದಶ ॥

ಕಲ್ಪದ ಆದಿಕಾಲದಲ್ಲಿ ವೇದಗಳ ಉದ್ಧಾರಕ್ಕಾಗಿ ಅವತಾರಮಾಡಿದ ಮತ್ಸ್ಯರೂಪಿ ಶ್ರೀಹರಿಯು ಶ್ರೀ ನರಸಿಂಹದೇವರ ಮಹಾಮಹಿಮೆಯನ್ನೂ ಸತ್ಯಕಲ್ಪದ ವೃತ್ತಾಂತವನ್ನೂ ಬಣ್ಣಿಸಿದ್ದಾನೆ. ಹದಿನಾಲ್ಕು ಸಾವಿರ ಪದ್ಯಗಳುಳ್ಳ ಆ ಪುರಾಣವೇ ಮತ್ಸ್ಯಪುರಾಣವೆಂದು ತಿಳಿಯಿರಿ'' ಎಂದು ಇದರ ವಿಷಯ, ವ್ಯಾಪ್ತಿ, ವಿಸ್ತಾರಗಳನ್ನು ಅರುಹಲಾಗಿದೆ. ನಾರದಪುರಾಣದಲ್ಲಿ ಮತ್ಸ್ಯಪುರಾಣದ ವಿಷಯಾನುಕ್ರಮಣಿಕೆಯ ಪಟ್ಟಿಯೊಂದನ್ನು ಕೊಟ್ಟಿದ್ದಾರೆ. ನಾರದೋಕ್ತ ಮತ್ಸ್ಯ ಪುರಾಣ ವಿಷಯಸೂಚಿಗೂ ಈಗ ಉಪಲಬ್ಧವಿರುವ ಮತ್ಸ್ಯಪುರಾಣದ ವಿಷಯಾನುಕ್ರಮಣಿಕೆಗೂ ಬಹುತರ ಹೊಂದಿಕೆ ಇದ್ದರೂ ಅಲ್ಲಲ್ಲಿ ಕೊಂಚ ವ್ಯತ್ಯಾಸವೂ ಇದೆ.

ಅಥ ಮಾತ್ಸ್ಯಂ ಪುರಾಣಂ ತೇ ಪ್ರವಕ್ಷ್ಯೇ ದ್ವಿಜಸತ್ತಮ ।
ಯತ್ರೋಕ್ತಂ ಸತ್ಯಕಲ್ಪಾನಾಂ ವೃತ್ತಂ ಸಂಕ್ಷಿಪ್ಯ ಭೂತಲೇ ॥

ವ್ಯಾಸೇನ ವೇದವಿದುಷಾ ನರಸಿಂಹೋಪವರ್ಣನಮ್ ।
ಉಪಕ್ರಮ್ಯ ತದುದ್ದಿಷ್ಟಂ ಚತುರ್ದಶ ಸಹಸ್ರಕಮ್ ॥

ಮನುಮತ್ಸ್ಯಸುಸಂವಾದೋ ಬ್ರಹ್ಮಾಂಡವರ್ಣನಂ ತತಃ ।
ಬ್ರಹ್ಮದೇವಾಸುರೋತ್ಪತ್ತಿಃ ಮಾರುತೋತ್ಪತ್ತಿರೇವ ಚ ॥

ಮದನದ್ವಾದಶೀ ತದ್ವಲ್ಲೋಕಪಾಲಾಭಿಪೂಜನಮ್
ಮನ್ವಂತರ ಸಮುದ್ದೇಶೋ ವೈನ್ಯರಾಜಾಭಿಷೇಚನಮ್ ॥

ಸೂರ್ಯವೈವಸ್ವತೋತ್ಪತ್ತಿರ್ಬುಧಸಂಗಮನಂ ತಥಾ
ಪಿತೃವಂಶಾನುಕಥನಂ ಶ್ರಾದ್ಧಕಾಲಸ್ತಥೈವ ಚ

ಪಿತೃತೀರ್ಥಪ್ರಚಾರಶ್ಚ ಸೋಮೋತ್ಪತ್ತಿಸ್ತಥೈವ ಚ
ಕೀರ್ತನಂ ಸೋಮವಂಶಸ್ಯ ಯಯಾತಿ ಚರಿತಂ ತಥಾ

ಕಾರ್ತವೀರ್ಯಸ್ಯ ಚರಿತಂ ಶಿಷ್ಟಂ ವಂಶಾನುಕೀರ್ತನಮ್
ಭೃಗುಶಾಪಸ್ತಥಾ ವಿಷ್ಣೋರ್ದಶಧಾ ಜನ್ಮ ಚ ಕ್ಷಿತೌ ॥

ಕೀರ್ತನಂ ಪುರುವಂಶಸ್ಯ ವಂಶೋ ಹೌತಾಶನಃ ಪರಃ ।
ಕ್ರಿಯಾಯೋಗಃ ತತಃ ಪಶ್ಚಾತ್ ಪುರಾಣಪರಿಕೀರ್ತನಮ್ ॥

ವ್ರತಂ ನಕ್ಷತ್ರಪುರುಷಂ ಮಾರ್ತಂಡಶಯನಂ ತಥಾ ।
ಕೃಷ್ಣಾಷ್ಟಮೀ ವ್ರತಂ ತದ್ವದ್ರೋಹಿಣೀಶಯನಂ ತಥಾ ॥

ತಡಾಗ ವಿಧಿ ಮಾಹಾತ್ಮ್ಯಂ ಪಾದಪೋತ್ಸರ್ಗ ಏವ ಚ ।
ಸೌಭಾಗ್ಯ ಶಯನಂ ತದ್ವದಗಸ್ತ್ಯ ವ್ರತಮೇವ ಚ ॥

ತಥಾಽನಂತ ತೃತೀಯಾ ಯಾ ರಸಕಲ್ಯಾಣಿನೀ ವ್ರತಮ್ ।
ತಥೈವಾನಂದ ಕಾರ್ಯಶ್ಚ ವ್ರತಂ ಸಾರಸ್ವತಂ ಪುನಃ ॥

ಉಪರಾಗಾಭಿಷೇಕಶ್ಚ ಸಪ್ತಮೀಶಯನಂ ತಥಾ ।
ಭೀಮಾಖ್ಯಾದ್ವಾದಶೀ ತದ್ವದನಂಗಶಯನಂ ತಥಾ ॥

ಅಶೂನ್ಯಶಯನಂ ತದ್ವತ್ ತಥೈವಾಂಗಾರಿಕ ವ್ರತಮ್ ।
ಸಪ್ತಮೀ ಸಪ್ತಕಂ ತದ್ವದ್ವಿಶ್ಶೋಕದ್ವಾದಶೀವ್ರತಮ್ ॥

ಮೇರು ಪ್ರದಾನಂ ದಶಧಾ ಗ್ರಹ ಶಾಂತಿಸ್ತಥೈವ ಚ ।
ಗ್ರಹಸ್ವರೂಪಕಥನಂ ತಥಾ ಶಿವ ಚತುರ್ದಶೀ ॥

ತಥಾ ಫಲತ್ಯಾಗಃ ಸೂರ್ಯವಾರವ್ರತಂ ತಥಾ ।
ಸಂಕ್ರಾಂತಿ ನಪನಂ ತದ್ವದ್ವಿಭೂತಿ ದ್ವಾದಶೀ ವ್ರತಮ್ ॥

ಷಷ್ಠಿವ್ರತಾನಾಂ ಮಾಹಾತ್ಮ್ಯಂ ದ್ವೀಪಲೋಕಾನುವರ್ಣನಮ್ ।
ತಥಾಂತರಿಕ್ಷಚಾರಶ್ಚ ಧ್ರುವಮಾಹಾತ್ಮ್ಯಮೇವ ಚ ॥

ಭುವನಾನಿ ಸುರೇಂದ್ರಾಣಾಂ ತ್ರಿಪುರೋದ್ಯೋತನಂ ತಥಾ ।
ಪಿತೃಪ್ರವರ ಮಾಹಾತ್ಮ್ಯಂ ಬ್ರಹ್ಮದೇವಾನುಕೀರ್ತನಂ ॥

ಪಾರ್ವತೀ ಸಂಭವಸ್ತದ್ವತ್ತಥಾ ಶಿವ ತಪೋವನಂ ।
ಅನಂಗ ದೇಹದಾಹಶ್ಚ ರತಿಶೋಕಸ್ತಥೈವಚ ॥

ಗೌರೀ ತಪೋವನಂ ತದ್ವತ್ ಶಿವೇನಾಥ ಪ್ರಸಾದನಂ ।
ಪಾರ್ವತೀ ಋಷಿ ಸಂವಾದಃ ತಥೈವೋದ್ವಾಹ ಮಂಗಲಮ್ ॥

ಕುಮಾರ ಸಂಭವಸ್ತದ್ವತ್ ಕುಮಾರ ವಿಜಯಸ್ತಥಾ ।
ತಾರಕಸ್ಯ ವಧೋ ಘೋರೋ ನರಸಿಂಹೋಪವರ್ಣನಮ್ ॥

ಪದ್ಮೋದ್ಭವವಿಸರ್ಗಸ್ತು ತಥೈವಾಂಧಕಶಾತನಮ್ ।
ವಾರಾಣಸ್ಯಾಸ್ತು ಮಾಹಾತ್ಮ್ಯಂ ನರ್ಮದಾಯಾಸ್ತಥೈವ ಚ ॥

ಪ್ರವರಾನುಕ್ರಮಸ್ತದ್ವತ್ ಪಿತೃಗಾಥಾನುಕೀರ್ತನಮ್ ।
ತಥೋಭಯಮುಖೀದಾನಂ ದಾನಂ ಕೃಷ್ಣಾಜಿನಸ್ಯ ಚ ॥

ತತಃಸಾವಿತ್ರ್ಯುಪಾಖ್ಯಾನಂ ರಾಜಧರ್ಮಾಸ್ತಥೈವ ಚ
ವಿವಿಧೋತ್ಪಾತ ಕಥನಂ ಗ್ರಹ ಶಾಂತಿಸ್ತಥೈವ ಚ ॥

ಯಾತ್ರಾ ನಿಮಿತ್ತ ಕಥನಂ ಸ್ವಪ್ನಮಂಗಲಕೀರ್ತನಮ್
ವಾಮನಸ್ಯ ತು ಮಾಹಾತ್ಮ್ಯಂ ವಾರಾಹಸ್ಯ ತತಃ ಪರಮ್ ॥

ಸಮುದ್ರಮಥನಂ ತದ್ವತ್ ಕಾಲಕೂಟಾಭಿಶಾತನಮ್ ॥
ದೇವಾಸುರವಿಮರ್ದಶ್ಚ ವಾಸ್ತು ವಿದ್ಯಾ, ತಥೈವ ಚ

ಪ್ರತಿಮಾಲಕ್ಷಣಂ ತದ್ವದ್ದೇವತಾಸ್ಥಾಪನಂ ತಥಾ
ಪ್ರಾಸಾದಲಕ್ಷಣಂ ತದ್ವನ್ಮಂಡಪಾನಾಂ ಚ ಲಕ್ಷಣಂ ॥

ಭವಿಷ್ಯರಾಜ್ಞಾಮುದ್ದೇಶೋ ಮಹಾದಾನಾನುಕೀರ್ತನಂ
ಕಲ್ಪಾನಾಂ ಕೀರ್ತನಂ ತದ್ವತ್ ಪುರಾಣೇಽಸ್ಮಿನ್ ಪ್ರಕೀರ್ತಿತಮ್ ॥

ಸತ್ಯಕಲ್ಪ ವೃತ್ತಾಂತವನ್ನು ಬಿತ್ತರಿಸುವ ಮತ್ಸ್ಯ ಪುರಾಣದ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ.

ಶ್ರೀ ವೇದವ್ಯಾಸರು ಈ ಮತ್ಸ್ಯಪುರಾಣದಲ್ಲಿ ನರಸಿಂಹ ದೇವರ ವರ್ಣನೆ ಯಿಂದ ಉಪಕ್ರಮಿಸಿ ಹದಿನಾಲ್ಕು ಸಾವಿರ ಪದ್ಯಗಳಲ್ಲಿ ಅನೇಕ ವಿಷಯಗಳನ್ನು ಬಿತ್ತರಿಸಿದ್ದಾರೆ. ಮನುಮಹಾರಾಜ ಹಾಗೂ ಮತ್ಸ್ಯಾವತಾರಿ ಶ್ರೀ ಹರಿಯ ನಡುವಿನ ಸಂಭಾಷಣಾರೂಪವಾದ ಈ ಪುರಾಣದಲ್ಲಿ ಬ್ರಹ್ಮಾಂಡ ವರ್ಣನೆ, ಬ್ರಹ್ಮದೇವರ ಉತ್ಪತ್ತಿ, ನಂತರ ಅಸುರರ ಹಾಗೂ ಮರುದ್ಗಣದ ಉತ್ಪತ್ತಿ, ಮದನದ್ವಾದಶೀ ವ್ರತ, ಲೋಕಪಾಲಕರ ಪೂಜಾವಿಧಾನ, ಮನ್ವಂತರ ವರ್ಣನೆ, ಪೃಥುವಿನ ಪಟ್ಟಾಭಿಷೇಕ, ಸೂರ್ಯಮನು ವೈವಸ್ವತ ಮನುಗಳ ಉತ್ಪತ್ತಿ, ಬುಧನ ವೃತ್ತಾಂತ, ಪಿತೃವಂಶಕಥನ, ಶ್ರಾದ್ಧಕಾಲ, ಪಿತೃತೀರ್ಥ ಪ್ರಚಾರ, ಚಂದ್ರನ ಉತ್ಪತ್ತಿ, ಚಂದ್ರ ವಂಶದ ಬಣ್ಣನೆ, ಯಯಾತಿಯಚರಿತ್ರ, ಕಾರ್ತವೀರ್ಯನಚರಿತ್ರ, ಭೃಗುವಿನಶಾಪ, ವಿಷ್ಣುವಿನ ದಶಾವತಾರ, ಪುರುವಂಶ ವೃತ್ತಾಂತ, ಮತ್ತೊಂದು ಅಗ್ನಿಯ ವಂಶವಿಸ್ತಾರ, ಕ್ರಿಯಾಯೋಗ, ಪುರಾಣ ಪರಿಚಯ, ನಕ್ಷತ್ರ ಪುರುಷವ್ರತ, ಮಾರ್ತಂಡಶಯನ, ಕೃಷ್ಣಾಷ್ಟಮೀ, ರೋಹಿಣೀ ಶಯನ, ಕೆರೆ ಕಾಲುವೆ ಕಟ್ಟಿಸುವ ವಿಧಾನ. ವೃಕ್ಷಾರೋಪಣ

ವಿಧಿ, ಸೌಭಾಗ್ಯಶಯನವ್ರತ, (ಗಸ್ತ) ವ್ರತ, ಅನಂತ ತೃತಿಯಾ, ಸಾರಸ್ವತವ್ರತ, ಗ್ರಹಣಸ್ನಾನ, ಸಪ್ತಮೀಶಯನ, ಭೀಮದ್ವಾದಶೀ, ಅನಾಗಶಯನವ್ರತ, ಅಶೂನ್ಯಶಯನ, ಅಂಗಾರಕವ್ರತ, ಏಳುಸಪ್ತಮೀವ್ರತ, ವಿದ್ಧೈಕಾದಶೀ ದ್ವಾದಶೀವ್ರತ, ಮೇರುದಾನ, ದಶಾಗ್ರಹಶಾಂತಿ, ಗ್ರಹಸ್ವರೂಪಕಥನ, ಶಿವಚತುರ್ದಶೀ, ಸರ್ವಫಲತ್ಯಾಗ, ಸೂರ್ಯವಾರ ವ್ರತ, ಸಂಕ್ರಾಂತಿ ಸ್ನಾನವಿಧಿ, ವಿಭೂತಿದ್ವಾದಶೀ ವ್ರತ, ಷಷ್ಠೀವ್ರತಗಳ ಮಹಿಮೆ, ದೇವತೆಗಳ ಭುವನಗಳು, ಪಿತೃಪ್ರವರ ಮಾಹಾತ್ಮ್ಯ, ಪಾರ್ವತಿಯ ಉತ್ಪತ್ತಿ ಶಿವತಪೋವನ, ಅನುಗದೇಹದಾಹ, ರತಿವಿಲಾಪ, ಗೌರೀತಪೋವನ, ಶಿವನಿಂದ ಪ್ರಸಾದನ, ಪಾರ್ವತೀ ಋಷಿ ಸಂವಾದ, ಪಾರ್ವತೀಪರಮೇಶ್ವರ ವಿವಾಹ ಮಂಗಲ, ಕುಮಾರನ ಉತ್ಪತ್ತಿ, ಸ್ಕಂದನ ವಿಜಯ, ತಾರಕಾಸುರ ಸಂಹಾರ, ನರಸಿಂಹಮಾಹಾತ್ಮ್ಯ ವರ್ಣನ, ಪುಷ್ಕರಪ್ರಾದುರ್ಭಾವ, ಪುಷ್ಕರ ಪ್ರಾದುರ್ಭಾವ ಅಂಧಕಾಸರ ನಿಗ್ರಹ, ಕಾಶಿಯ ಮಾಹಾತ್ಮೆ, ನರ್ಮದೆಯ ಮಹಿಮೆ, ಗೋತ್ರಪ್ರವರ ವಿವರಣೆ, ಪಿತೃಗಾಥಾ, ಉಭಯಮುಖೀಗೋದಾನ, ಕೃಷ್ಣಾಜಿನ ದಾನಾದಿ ವಿಧಿಫಲ ಕಥನ, ಸಾವಿತ್ರೀ ಉಪಾಖ್ಯಾನ, ರಾಜಧರ್ಮ, ವಿವಿಧ ಉತ್ಪಾತ ಕಥನ, ಗ್ರಹಶಾಂತಿ, ಪ್ರಯಾಣ ಶಕುನ ವಿವೇಚನ, ಕನಸುಗಳ ಶುಭಾಶುಭ ಫಲನಿರೂಪಣ, ವಾಮನಾವತಾರದ ವರ್ಣನೆ, ವರಾಹಾವತಾರ ಮಾಹಾತ್ಮ್ಯ, ಸಮುದ್ರಮಥನ ವೃತ್ತಾಂತ, ಕಾಲಕೂಟ ಭಕ್ಷಣ, ದೇವದೈತ್ಯಯುದ್ಧ, ವಾಸ್ತುವಿದ್ಯಾ, ಪ್ರತಿಮೆಗಳ ಲಕ್ಷಣ, ದೇವತಾ ಮೂರ್ತಿಗಳ ಪ್ರತಿಷ್ಠೆ, ಪ್ರಾಸಾದಗಳ ಲಕ್ಷಣ, ಮಂಡಪಗಳ ಲಕ್ಷಣ, ಭವಿಷ್ಯಕಾಲದ ರಾಜರ ವಂಶಾನುಕೀರ್ತನ, ಮಹಾದಾನಗಳ ವಿಧಿವಿಧಾನ, ಕಲ್ಪಗಳ ಕೀರ್ತನ, ಮಹಾದಾನಗಳ ವಿಧಿವಿಧಾನ, ಕಲ್ಪಗಳ ಕೀರ್ತನೆ ಇವಿಷ್ಟು ವಿಷಯಗಳನ್ನು ಇಲ್ಲಿ ವಿವರಿಸಲಾಗಿದೆ.

ಮೂಲತಃ ಮತ್ಸ್ಯಪುರಾಣವು ಒಂದು ವೈಷ್ಣವ ಪುರಾಣವಾಗಿದೆ. ಇದನ್ನು ಹೇಳಿದವನು ವಿಷ್ಣುವಿನ ಅವತಾರನಾದ ಮತ್ಸ್ಯನೇ. ಮತ್ತು ಈ ಪುರಾಣದಲ್ಲಿ ಮುಖ್ಯ ಪ್ರತಿಪಾದ್ಯವಾದ ವಿಷಯ ನರಸಿಂಹನ ವರ್ಣನೆ ''ಮತ್ಸ್ಯ ರೂಪೇಣ ಮನವೇ ನರಸಿಂಹಸ್ಯ ವರ್ಣನಮ್'' ಎಂದು ಹೇಳಲಾಗಿದೆ (೫೦-೫೩) ನಾರದಪುರಾಣ ಸೂಚಿಯಲ್ಲಿಯೂ ''ವ್ಯಾಸೇನ ವೇದವಿದುಷಾ ನರಸಿಂಹೋಪ ವರ್ಣನಮ್'' ಎಂದು ಮೊಟ್ಟಮೊದಲೇ ಈ ಪುರಾಣದ ಉದ್ದೇಶದ ನಿರ್ದೇಶನವನ್ನು ಮಾಡಲಾಗಿದೆ.

ಈ ಮತ್ಸ್ಯಪುರಾಣದ ಪ್ರಾರಂಭದಲ್ಲಿ ಮನುಮಹಾರಾಜನು ಸಮುದ್ರದ ಒಡಲನ್ನೆಲ್ಲ ವ್ಯಾಪಿಸಿ ನಿಂತ ಮೀನ ಮೂರ್ತಿಯನ್ನು ಕಂಡು ''ನೀನು ಸಾಕ್ಷಾತ್ ವಿಷ್ಣುವೇ ಸರಿ. ಅವನ ಹೊರತು ಬೇರೆ ಯಾರಿಗೆ ಇಂಥ ವ್ಯಾಪ್ತಿ ಉಂಟು ?'' ಇಪ್ಪತ್ತು ಯೋಜನ ವಿಸ್ತಾರವಾದ ಶರೀರವು ವಿಷ್ಣುವಿನ ಹೊರತು ಬೇರೆ ಯಾರಿಗೂ ಇಲ್ಲ.

''ಅಥವಾ ವಾಸುದೇವಸ್ತ್ವಮನ್ಯ ಈದೃಕ್ಕಥಂ ಭವೇತ್'' ।
ಯೋಜನಾಯತವಿಂಶತ್ಯಾ ಕಸ್ಯ ತುಲ್ಯಂ ವಪುರ್ಭವೇತ್ ।

ಎಂದು ನುಡಿದು ವಿಷ್ಣುವಿಗೇ ಇಂಥ ಅಸಾಧಾರಣ ಸಾಮರ್ಥ್ಯ ಉಂಟೆಂದು ನಿರ್ಣಯಿಸಿದ್ದಾನೆ.

ಇದರಂತೆ ಒಂಬತ್ತನೆಯ ಅಧ್ಯಾಯದಲ್ಲಿ

**ಏತೇ ಯುಗಸಹಸ್ರಾಂತೇ ವಿನಶ್ಯಂತಿ ಪುನಃ ಪುನಃ ।**

**ಬ್ರಹ್ಮಾದ್ಯಾ ವಿಷ್ಣು ಸಾಯುಜ್ಯಂ ಯಾತಾ ಯಾಸ್ಯಂತಿ ವೈ ದ್ವಿಜಾಃ॥**

ಯುಗಸಹಸ್ರಗಳ ಕೊನೆಗೆ ನಡೆಯುವ ಪ್ರಳಯದಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ಮತ್ತೆ ನಾಶಹೊಂದಿ ಕೊನೆಗೆ ಶ್ರೀವಿಷ್ಣುವಿನ ಸಾಯುಜ್ಯ ರೂಪವಾದ ಮೋಕ್ಷವನ್ನು ಹೊಂದುವರು. ಈ ವಚನದಲ್ಲಿ ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳ ಜೀವನದ ಮುಖ್ಯ ಗುರಿ ವಿಷ್ಣುವಿನ ಸಾಯುಜ್ಯ ಹೊಂದುವದೇ ಆಗಿದೆ. ಈ ಎಲ್ಲ ದೇವತೆಗಳೂ ಜನನ ಮರಣದ ಕಟ್ಟಿಗೆ ಒಳಪಟ್ಟವರೇ! ಜನನ ಮರಣಗಳಿಗೆ ಅತೀತನಾದ ಮತ್ತು ಎಲ್ಲರಿಗೂ ಮೋಕ್ಷವನ್ನು ಕರುಣಿಸುವ ಒಂದೇ ವ್ಯಕ್ತಿ ಎಂದರೆ ಶ್ರೀಮನ್ನಾರಾಯಣನೇ ಎಂದು ಈ ಪುರಾಣದಲ್ಲಿ ಸಮರ್ಥಿಸಿದ್ದಾರೆ.

ಮತ್ತು ಈ ಪುರಾಣದಲ್ಲಿ 'ಪರಮಾತ್ಮ' ಎಂಬ ವಿಶೇಷ ವಿಶೇಷಣ ಇದೆ. ಇದನ್ನು ಶ್ರೀ ವಿಷ್ಣುವಿಗೇ ಪ್ರಯೋಗಿಸಿದ್ದು ಕಂಡುಬರುತ್ತದೆ. ಇಲ್ಲಿಯ ಇಪ್ಪತ್ತು ಮೂರನೆಯ ಅಧ್ಯಾಯದ ೧೭ನೇ ಪದ್ಯದಲ್ಲಿ ''ಪ್ರೋವಾಚ ಪರಮಾತ್ಮಾ ಜನಾರ್ದನಃ'' ಎಂದು ಜನಾರ್ದನನಾದ ವಿಷ್ಣುವೇ ನಿಜವಾದ 'ಪರಮ ಆತ್ಮ'. 'ಪರಚೇತನ' ಎಂದು ಸ್ಪಷ್ಟವಾಗಿ ಕಾಣಿಸಲಾಗಿದೆ. ಹೀಗೆ ಈ ಪುರಾಣದಲ್ಲಿ ಸಂದರ್ಭ ಬಂದಾಗೆಲ್ಲ ವಿಷ್ಣುವಿನ ಪಾರಮ್ಯವನ್ನು ನಿರೂಪಿಸಲಾಗಿದೆ. ಇದರಂತೆ ಶಿವಶಕ್ತಿಯರ ಮಹಿಮಾನುವರ್ಣನೆ ಯಲ್ಲಿಯೂ ಈ ಪುರಾಣಕಾರರು ಅತೀವ ಶ್ರದ್ಧೆವಹಿಸಿ ಬಿತ್ತರಿಸುವದನ್ನು ಕಾಣುತ್ತೇವೆ. ಪಾರ್ವತೀ ಪರಮೇಶ್ವರರ ವಿವಾಹ ಹಾಗೂ ವಿವಾಹಪೂರ್ವದ ಸತೀದೇವಿಯ ತಪಸ್ಸು ಮುಂತಾದ ಭಾಗಗಳು ಈ ಪುರಾಣದಲ್ಲಿಯೇ ಅತ್ಯಂತ ಮನೋಹರವಾದ ಸನ್ನಿವೇಶಗಳಾಗಿವೆ. ಕಾಳಿದಾಸನು ತನ್ನ ಕುಮಾರಸಂಭವ ಕಾವ್ಯದಲ್ಲಿ ಪಾರ್ವತಿಯ ತಪ್ಪಸು, ಶಿವ ನಿಂದಾಸ್ತುತಿ, ಸಪ್ತರ್ಷಿಗಳ ಮಧ್ಯಸ್ಥಿಕೆಯಿಂದ ಶಿವಸತಿಯರ ವಿವಾಹ ಮುಂತಾದ ಇಲ್ಲಿಯ ರಸಮಯ ಸನ್ನಿವೇಶಗಳನ್ನೆತ್ತಿಕೊಂಡು ರಸಾಳ ಶೈಲಿಯಿಂದ ಮನೋಜ್ಞವಾಗಿ ಮೂಡಿಸಿದ್ದು ಕಂಡುಬರುತ್ತದೆ. ಇದರಲ್ಲಿ ಬರುವ ಪಾರ್ವತೀ ಪರಮೇಶ್ವರರ ಪ್ರಣಯ ಕಲಹವೂ, ಕಾಳಿಯು ಗೌರಿಯಾಗಿ ಮಾರ್ಪಟ್ಟು ತಪೋಬಲದಿಂದ ಅವನನ್ನು ಮೆಚ್ಚಿಸಿದ ಸಂದರ್ಭವೂ ಹೃದ್ಯವೂ ಆಸ್ವಾದ್ಯವೂ ಆಗಿವೆ. ಈ ಮತ್ಸ್ಯಪುರಾಣದಲ್ಲಿ ಬರುವ ಅನೇಕ ಧಾರ್ಮಿಕ ಅನುಶಾಸನ ವಚನಗಳು ಪ್ರಾಯಶಃ ಎಲ್ಲ ಧರ್ಮಶಾಸ್ತ್ರಕಾರರಿಗೂ ನಿಬಂಧಕಾರರಿಗೂ ಸ್ಮೃತಿಕಾರರಿಗೂ ಪ್ರೇರಕವಾಗಿ ಮಾರ್ಗದಶಕವೂ ಆಗಿವೆ.

ಮತ್ಸ್ಯಪುರಾಣದಲ್ಲಿಯ ಅನೇಕ ಪದ್ಯಗಳನ್ನು ಧರ್ಮಶಾಸ್ತ್ರೀಯ ನಿಬಂಧಕಾರರು ತಮ್ಮ ಕೃತಿಗಳಲ್ಲಿ ಹೇರಳವಾಗಿ ಉದಾಹರಿಸಿದ್ದು ಕಂಡುಬರುತ್ತದೆ. ಕೆಲವೊಂದು ನಿಬಂಧಕಾರರಂತೂ ಈ ಮತ್ಸ್ಯಪುರಾಣದೊಳಗಿನ ಒಂದೊಂದು ಅಧ್ಯಾಯಗಳನ್ನೇ ಸಾಗ್ರಸಮಗ್ರವಾಗಿ ಇಡಿಕಿಡಿಯಾಗಿ ಎತ್ತಿ ಉದಾಹರಿಸಿದ್ದಾರೆ.

ವಿಜ್ಞಾನೇಶ್ವರನು ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ತನ್ನ ಮಿತಾಕ್ಷರಾ ಎಂಬ ವ್ಯಾಖ್ಯಾನದಲ್ಲಿ ಮತ್ಸ್ಯ ಪುರಾಣದ ೯೪ನೇ ಅಧ್ಯಾಯವನ್ನು ಸಂಪೂರ್ಣವಾಗಿ ಎತ್ತಿ ಉದಾಹರಿಸಿದ್ದಾನೆ.

ಇದೇ ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ಮತ್ತೊಂದು ಸುಪ್ರಸಿದ್ಧವಾದ ಅಪರಾರ್ಕ ವ್ಯಾಖ್ಯೆಯಲ್ಲಿಯೂ ಮತ್ಸ್ಯಪುರಾಣದ ೫೩ನೇ ಅಧ್ಯಾಯದ ಕೊನೆಯ ಪದ್ಯಗಳನ್ನು ಬಿಟ್ಟು ಉಳಿದೆಲ್ಲ ಶ್ಲೋಕಗಳೂ ಪ್ರಮಾಣತ್ವೇನ ಉದಾಹರಿಸಲ್ಪಟಟವೆ. ೫೭ನೇ ಅಧ್ಯಾಯವಂತೂ ಪೂರ್ತಿಯಾಗಿ ಉದಾಹರಿಸಲ್ಪಟ್ಟಿದೆ. ೧-೧೯ ಪದ್ಯ ಉಳಿದು ಮತ್ಸ್ಯಪುರಾಣದ ೫೯ನೇ ಅಧ್ಯಾಯವು ಸಮಗ್ರವಾಗಿ ಅಪರಾರ್ಕ ಟೀಕೆಯಲ್ಲಿ ಪುನರುಕ್ತವಾಗಿದೆ.

ಬಲ್ಲಾಳಸೇನನ ದಾನಸಾಗರದಲ್ಲಿ ಮತ್ಸ್ಯಪುರಾಣದ ೨೭೪-೨೭೫-೨೭೬-೨೭೭-೨೭೮-೨೭೯-೨೮೦-೨೮೧-೨೮೨-೨೮೩-೨೮೪-೨೮೫-೨೮೬-೨೮೭-೨೮೮-೨೮೯ ಇಷ್ಟು ಅಧ್ಯಾಯಗಳೂ ಇಡಿಇಡಿಯಾಗಿ ಎತ್ತಿ ಹೇಳಲ್ಪಟ್ಟಿವೆ. ಮತ್ಸ್ಯಪುರಾಣದ ೨೮೯ನೇ ಅಧ್ಯಾಯದಲ್ಲಿಯ ೧೦ನೇ ಪದ್ಯದಲ್ಲಿ 'ಗುರುಣೋಕ್ತ ಮಂತ್ರೈಃ' ಎಂದು ಇದ್ದುದನ್ನು ದಾನಸಾಗರದಲ್ಲಿ 'ಗುಡಧೇನು ಮಂತ್ರೈಃ ॥ ಎಂದು ಉಲ್ಲೇಖಿಸಿದ್ದಾರೆ. ಇದಿಷ್ಟೇ ವ್ಯತ್ಯಾಸ. ಉಳಿದೆಲ್ಲ ಅಧ್ಯಾಯಗಳು ಮತ್ಸ್ಯಪುರಾಣದಲ್ಲಿದ್ದಂತೆಯೇ ಬಲ್ಲಾಳಸೇನನಿಂದ ಪುನರುಚ್ಚರಿಸಲ್ಪಟ್ಟಿವೆ. ಇದರಂತೆ ಬಲ್ಲಾಳಸೇನನು ತನ್ನ ಕೃತಿಯಲ್ಲಿ ಒಂದೂ ಅಕ್ಷರ ವ್ಯತ್ಯಾಸವಿಲ್ಲದೇ ಮತ್ಸ್ಯಪುರಾಣದ ೯೨ನೇ ಅಧ್ಯಾಯವನ್ನು ಎತ್ತಿ ಉದಾಹರಿಸಿದ್ದಾನೆ. ಹೀಗೆ ಬಿಡಿ ಬಿಡಿಯಾಗಿ ಈ ಪುರಾಣದಿಂದ ಮಧುರ ಮಾರ್ಮಿಕವಾದ ಶ್ಲೋಕಗಳನ್ನೂ ಧರ್ಮನೀತಿ ನಿರ್ದೇಶಕ ಪದ್ಯಗಳನ್ನೂ ಎತ್ತಿ ಗೌರವದಿಂದ ಉಲ್ಲೇಖಿಸಿದ ಗ್ರಂಥಗಳಿಗೆ ಲೆಕ್ಕವಿಲ್ಲ. ನಾವು ನೋಡಿದ ಕೆಲವು ವಿಮರ್ಶಾತ್ಮಕ ಗ್ರಂಥಗಳ ಪರಿಶಿಷ್ಟದಲ್ಲಿ ಕಾಣಿಸಲಾದ ಈ ಪುರಾಣದ **ಗ್ರಂಥಾಂತರಗಳ** ಉದ್ಧರಣೆಗಳನ್ನು ಕೆಳಗೆ ಕಾಣಿಸಿದ್ದೇವೆ. ಮದನಪಾಲನ ಮದನ ಪಾರಿಜಾತದಲ್ಲಿ ಮತ್ಸ್ಯಪುರಾಣದ ಕೆಲವು ಅಧ್ಯಾಯಗಳಿಂದ ಹಲವಾರು ಪದ್ಯಗಳನ್ನು ಎತ್ತಿಕೊಳ್ಳಲಾಗಿದೆ. ಅವುಗಳ ವಿವರ ಕೆಳಗೆ ಕಾಣಿಸಿದಂತೆ

| ಮತ್ಸ್ಯ ಪುರಾಣ | ಮದನ ಪಾರಿಜಾತದ ಪುಟಗಳಲ್ಲಿ |
| --- | --- |
| ೫೨ನೇ ಅಧ್ಯಾಯ ೫-೬-೭-೮-೯-೧೦-೧೧-೧೨-೧೩ನೆಯ ಪದ್ಯಗಳು | ೩ನೇ ಅಧ್ಯಾಯದಲ್ಲಿ ಉದಾಹೃತವಾಗಿರುತ್ತವೆ. |
| ೧೦೧ ಅಧ್ಯಾಯದ ೩೭ನೇ ಪದ್ಯವು | ೧೩ರಲ್ಲಿ ಉದಾಹೃತವಾಗಿದೆ. |
| ೧೦೧ ಅಧ್ಯಾಯದ ೩೭ನೇ ಪದ್ಯವು | ೨೪ " |
| ೧೮೪, ೨೧, ೨೨, ೨೩ | ೩೨೫ " |
| ೧೭, ೬, ೭, ೮, ೬೫, ೬೬ | ೫೪೦ " |
| ೧೬, ೧೧, ೧೨, ೨೭, ೨೮ | ೫೫೮ " |

ಮಾಧವಾಚಾರ್ಯರು ಪರಾಶರಸ್ಮೃತಿಯ ಮೇಲಿನ ತಮ್ಮ ವ್ಯಾಖ್ಯಾನದಲ್ಲಿ ಮತ್ಸ್ಯಪುರಾಣದ ಕೆಳಗಿನ ಪದ್ಯಗಳನ್ನು ಉದ್ಧರಿಸಿದ್ದಾರೆ.

| ಮತ್ಸ್ಯ ಪುರಾಣದ | ಪರಾಶರಸ್ಮೃತಿ ಟೀಕಾಗ್ರಂಥದಲ್ಲಿ |
|---|---|
| ೧೬ನೇ ಅಧ್ಯಾಯ ೧೯. ೨೦, ೨೭, ೨೯, ೪೭ ೫೪, ೫೫, ೫೬, ೫೭ ಸಂಖ್ಯೆಯ ಪದ್ಯಗಳು | ೩೬೫, ೩೯೬, ೪೩೪, ೪೩೮ ೪೪೦, ೪೪೩ ಅಧ್ಯಾಯಗಳಲ್ಲಿ ಉದಾಹರಿಸಲ್ಪಟ್ಟಿವೆ. |

ಗೋವಿಂದಾನಂದನು ತನ್ನ ಶ್ರಾದ್ಧಕ್ರಿಯಾಕೌಮುದಿ ಎಂಬ ಗ್ರಂಥದಲ್ಲಿ ಮತ್ಸ್ಯಪುರಾಣದಿಂದ ಅನೇಕ ಪದ್ಯಗಳನ್ನು ಎತ್ತಿ ಉದಾಹರಿಸಿದ್ದಾನೆ.

| ಮತ್ಸ್ಯ ಪುರಾಣ | ಶ್ರಾದ್ಧಕ್ರಿಯಾ ಕೌಮುದಿ |
|---|---|
| ೧೫ನೇ ಅಧ್ಯಾಯ ೩೨, ೩೩, ೩೭, | ೧೧, ೨೭, ೨೮, ೩೨, ೫೯, ೧೦೩, ೧೨೨, |

ಚಂಡೇಶ್ವರನ ಕೃತ್ಯರತ್ನಾಕರದಲ್ಲಿ ಮತ್ಸ್ಯಪುರಾಣದ ೫೩ನೇ ಅಧ್ಯಾಯದ ೨೩, ೨೪, ೨೮, ೨೯, ೩೧, ೩೨ನೇ ಪದ್ಯಗಳನ್ನೂ ಮತ್ತು ಸಂಪೂರ್ಣ ೫೬ನೇ ಅಧ್ಯಾಯವನ್ನೂ, ಸಂಪೂರ್ಣ ೯೫ನೇ ಅಧ್ಯಾಯವನ್ನೂ ಎತ್ತಿ ಉದಾಹರಿಸಲಾಗಿದೆ.

ಹೇಮಾದ್ರಿಯು 'ಚತುರ್ವರ್ಗ ಚಿಂತಾಮಣಿ'ಯಲ್ಲಿ ಇಲ್ಲಿ ಉದಾಹರಿಸಲು ಬಾರದಷ್ಟು ಅಸಂಖ್ಯ ಪದ್ಯಗಳನ್ನು ಮತ್ಸ್ಯಪುರಾಣದಿಂದೆತ್ತಿ ಉದಾಹರಿಸಿದ್ದಾನೆ. ಅವೆಲ್ಲವನ್ನು ಪುಟ ಹಾಗೂ ಶ್ಲೋಕ ಸಂಖ್ಯೆ ಕೊಡಲು ಇಲ್ಲಿ ಸ್ಥಳಾವಕಾಶ ಇಲ್ಲದ್ದರಿಂದ ಸಾಮಾನ್ಯವಾಗಿ ಸೂಚಿಸಲಾಗಿದೆ. ಇದರಂತೆ ಅನಿರುದ್ಧ ಭಟ್ಟನ, 'ಹಾರಲತಾ' ಬಲ್ಲಾಳ ಸೇನನ 'ಅದ್ಭುತಸಾಗರ' ಉಲ್ಲೂಕಭಟ್ಟನ 'ಮನುಸ್ಮತಿ ವ್ಯಾಖ್ಯಾನ', ಹರದತ್ತನ 'ಗೌತಮಸ್ಮೃತಿಯ ವ್ಯಾಖ್ಯಾನ', ದೇವಣ ಭಟ್ಟನ 'ಸ್ಮೃತಿಚಂದ್ರಿಕಾ' ಶ್ರೀದತ್ತ ಉಪಾಧ್ಯಾಯನ 'ಕೃತ್ಯಾಚಾರ' ಶೂಲಪಾಣಿಯ, 'ವ್ರತಕಲಾವಿವೇಕ', 'ಪ್ರಾಯಶ್ಚಿತ್ತ ವಿವೇಕ' 'ಸಂಬಂಧವಿವೇಕ' ಮುಂತಾದ ಗ್ರಂಥಗಳಲ್ಲಿ ಧಾರಾಳವಾಗಿ ಈ ಮತ್ಸ್ಯಪುರಾಣದ ಪದ್ಯಗಳನ್ನು ಉದಾಹರಿಸಲಾಗಿದೆ. ಇವಲ್ಲದೆ, ಪದ್ಮಪುರಾಣ, ವಾಯುಪುರಾಣ, ಭವಿಷ್ಯಪುರಾಣ ಮುಂತಾದ ಪುರಾಣಗಳಲ್ಲಿಯೂ ಕೂಡ ಅನೇಕ ಮತ್ಸ್ಯಪುರಾಣದ ಶ್ಲೋಕಗಳನ್ನು ಪ್ರಚಂಡ ಪ್ರಮಾಣದಲ್ಲಿ ಎತ್ತಿ ಉಲ್ಲೇಖಿಸಿದ್ದು ಕಂಡುಬರುತ್ತದೆ. ಇದರ ಮೇಲಿಂದ ಮತ್ಸ್ಯಪುರಾಣವು ಒಂದಾನೊಂದು ಕಾಲದಲ್ಲಿ ಸರ್ವಮಾನ್ಯವಾದ ಪರಮ ಪ್ರಮಾಣಭೂತವಾದ ಮೂರ್ಧನ್ಯ ಗ್ರಂಥವಾಗಿದ್ದು ತಿಳಿದ್ದು ಬರುತ್ತದೆ.

ಭಾಷಾಶೈಲಿಯ ದೃಷ್ಟಿಯಿಂದ ಮತ್ಸ್ಯಪುರಾಣವು ಅತ್ಯಂತ ಸುಂದರವೂ ಭಾವಬಂಧುರವೂ ಆದ ಒಳ್ಳೇ ಕಮನೀಯ ಕಾವ್ಯದಂತೆ ಇರುತ್ತದೆ. ಉಪಮೆ, ಉತ್ಪ್ರೇಕ್ಷೆ ಶ್ಲೇಷ ಅರ್ಥಾಲಂಕಾರ, ಅನುಪ್ರಾಸ, ಮುಂತಾದ ಅಲಂಕಾರಗಳಂತೂ ಪದೇ ಪದೇ ಈ ಪುರಾಣದಲ್ಲಿ ಗೋಚರವಾಗುತ್ತವೆ. ಪುರಾಣಸಾಹಿತ್ಯದಲ್ಲಿ ಭಾಷಾ ಅಲಂಕಾರ ಶೈಲಿ, ಭಾವಬಂಧುರತೆ ಮುಂತಾದ ಸಾಹಿತ್ಯಿಕ ಗುಣಗಳ ಕಡೆಗೆ ಗಮನ ವಿರಿಸುವುದು ಕಡಿಮೆ. ಆದರೆ ರಸವತ್ತಾದ ಅಂತಹ ಸಾಹಿತ್ಯಿಕ ಶೈಲಿಯೇ

ಅಪರೂಪವಾಗಿ ಇಲ್ಲಿ ಮೂಡಿ ಬಂದಿದೆ. ಈ ಮತ್ಸ್ಯಪುರಾಣವು ವಾಗರ್ಥಸಂಪೃಕ್ತಿಯ ಸೊಗಸು, ಕಾವ್ಯದ ಕಮನೀಯ ಕಾಂತಿಯಿಂದ ಕಂಗೊಳಿಸುತ್ತದೆ. ಈ ಪುರಾಣದ ಛಂದೋಬಂಧ ಸೌಂದರ್ಯ, ಭಾವಗಾಂಭೀರ್ಯ, ಶೈಲೀ ಮಾಧುರ್ಯಗಳಿಗೆ ಮೊಟ್ಟಮೊದಲಿನ ಎರಡು ಮಂಗಲಪದ್ಯಗಳೇ ಸಾಕ್ಷಿಯಾಗಿರುತ್ತವೆ.

'ಪ್ರಚಂಡ ತಾಂಡವಾಟೋಪೇ ಪ್ರಕ್ಷಿಪ್ತಾ ಯೇನ ದಿಗ್ಗಜಾಃ ।
ಭವಂತು ವಿಘ್ನಭಂಗಾಯ ಭವಸ್ಯ ಚರಣಾಂಬುಜಾಃ ॥೧॥

ಪಾತಾಲಾದುತ್ಪತಿಷ್ಣೋರ್ಮಕರ ವಸತಯೋ ಯಸ್ಯ ಪುಚ್ಛಾಭಿಘಾತಾ-
-ದೂರ್ಧ್ವಂ ಬ್ರಹ್ಮಾಂಡಖಂಡವ್ಯತಿಕರ ವಿಹಿತ ವ್ಯತ್ಯಯೇನಾಪತಂತಿ ॥

ವಿಷ್ಣೋರ್ಮತ್ಸ್ಯಾವತಾರೇ ಸಕಲವಸುಮತೀ ಮಂಡಲಂ ವ್ಯಶ್ನುವಾನ-
-ಸ್ತಸ್ಯಾಸ್ಯೋದೀರಿತಾನಾಂ ಧ್ವನಿರಪಹರತಾದಶ್ರಿಯಂ ವಃ ಶ್ರುತೀನಾಮ್।

(ಇವುಗಳ ಭಾವಾರ್ಥವನ್ನು ಈ ಪುರಾಣದ ಪ್ರಾರಂಭದ ಪುಟಗಳಲ್ಲಿ ನೋಡಬಹುದು)

ಇಲ್ಲಿಯ ನಾದ ಮಾಧುರ್ಯ, ಶಬ್ದ ಸೌಂದರ್ಯಗಳಿಂದ ಎಷ್ಟೋ ನೀರಸ ಸಂದರ್ಭಗಳೂ ಕೂಡ ರಸಮಯವಾಗಿ ಓದುಗರಿಗೆ ವಾಚನೀಯವೆನಿಸುತ್ತವೆ.

ಈ ಪುರಾಣದ ಹೆಣಿಗೆ ಅಥವಾ ಸನ್ನಿವೇಶಗಳ ಸರಿಯಾದ ನೇಯ್ಗೆಯು ವೈಶಿಷ್ಟ್ಯ ಪೂರ್ಣವಾಗಿದೆ. ಕಥೆ, ನೀತಿ, ತತ್ವಜ್ಞಾನ, ಸುಭಾಷಿತ, ಭೂಗೋಲ, ಖಗೋಲವಿಚಾರ, ದೇವ, ಮುನಿ, ಮನುಜರ ಹೃದ್ಯ, ಆಖ್ಯಾನ, ಉಪಾಖ್ಯಾನ, ಮುಂತಾದ ಅನೇಕ ರಸಮಯ ಸಂದರ್ಭಗಳು ಒಂದರಮೇಲೊಂದು ಹಾಸು ಹೊಕ್ಕಾಗಿ ಹೆಣೆದುಕೊಂಡು ಓದುಗರಿಗೆ ಬೇಸರಬಾರದಂತೆ ಮನರಂಜನೆ ಮಾಡುತ್ತಲೇ ಆತ್ಮಶೋಧನ, ಪುಣ್ಯಸಾಧನ ಮಾಡಿಸುತ್ತವೆ.

ಈ ಪುರಾಣವನ್ನು ಭಾಷಾಂತರಿಸುವ ಕಾರ್ಯಕ್ಕೆ ಮುಖ್ಯವಾಗಿ ಸಹಾಯ ಸಲ್ಲಿಸಿದ ಕಲಿಯುಗದ ಕರ್ಣ ಎನಿಸಿದ ಶ್ರೀ ಹರಿಶೋಡೆ ಕುಟುಂಬಕ್ಕೆ ನಾವು ಮತ್ತೊಮ್ಮೆ ನಮ್ಮ ಕೃತಜ್ಞತೆ ಸಮರ್ಪಿಸುತ್ತೇವೆ. ಮತ್ತು ಮೊದಲಿನಿಂದ ಕೊನೆಯವರೆಗೂ ನಮಗೆ ಸಂಶೋಧನ ಪರಿವರ್ತನೆ, ಪರಿಷ್ಕರಣಾದಿಗಳಲ್ಲಿ ಸರ್ವ ವಿಧದಿಂದ ಸಹಾಯ ಸಹಕಾರಗಳನ್ನು ನೀಡಿ ಈ ಗ್ರಂಥವು ಹೊರಬರುವುದಕ್ಕೆ ಸಕಲ ವಿಧದಿಂದಲೂ ನಮ್ಮ ಬೆಂಬಲವಾಗಿ ನಿಂತು ನಮ್ಮ ಸುಖದುಃಖಗಳಲ್ಲಿ ಭಾಗಿಯಾದ ಪಂಡಿತ ಮಂಡಲಿಯವರಿಗೆ ನಮ್ಮ ಪ್ರಣಾಮಗಳನ್ನು ಸಮರ್ಪಿಸುತ್ತೇವೆ. ಅನುವಾದ ಲೇಖನ, ಲಿಪಿಕರಣಾದಿ ಕಾರ್ಯದಲ್ಲಿ ನಮಗೆ ನೆರವನ್ನಿತ್ತು ಸಹಕರಿಸಿದ ಆತ್ಮೀಯ ಜನರಿಗೆಲ್ಲ ಹಾರ್ದಿಕ ಶುಭಾಶಯಗಳನ್ನು ಕೋರುತ್ತೇವೆ.

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 6 – 9 – 2004 — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

ಶ್ರೀ

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ '**ನ ಭೂತೋ ನ ಭವಿಷ್ಯತಿ**' ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜಿನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ ಶ್ರೆಯಸ್ಸನ್ನೂ ಪ್ರೇಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಮತ್ಸ್ಯ ಪುರಾಣದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮುವತ್ತು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಆಶಂಸಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 6 – 9 – 2004 ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಮತ್ಸ್ಯ ಮಹಾಪುರಾಣ ಭಾಗ - ೧

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

—o—

ಶ್ರೀ ವೇದವ್ಯಾಸಃಪ್ರಸೀದತು

ಭಗವಾನ್ ಬಾದರಾಯಣರಿಂದ ರಚಿತವಾದ

# ಮತ್ಸ್ಯ ಮಹಾಪುರಾಣ ಭಾಗ - 1

## ಮತ್ಸ್ಯರೂಪವನ್ನೆತ್ತಿದ ಮಹಾವಿಷ್ಣು

ಅಧ್ಯಾಯ - ೧

**ಪ್ರಚಂಡ ತಾಂಡವಾಟೋಪೇ ಪ್ರಕ್ಷಿಪ್ತಾಯೇನ ದಿಗ್ಗಜಾಃ**
**ಭವಂತು ವಿಘ್ನ ಭಂಗಾಯ ಭವಸ್ಯ ಚರಣಾಂಬುಜಾಃ ॥**

ತಾಂಡವನೃತ್ಯದ ರಭಸದಲ್ಲಿ ದಿಗ್ಗಜಗಳನ್ನೆಲ್ಲ ಹೆದರಿಸಿ ಚೆದರಿಸಿದ ಪರಮೇಶ್ವರನ ಅಡಿದಾವರೆಗಳು ನಮ್ಮ ವಿಘ್ನವಿಡ್ದೂರಗಳನ್ನು ತೊಡೆದುಹಾಕಲಿ.

**ಪಾತಾಲಾದುತ್ಪತಿಷ್ಣೋರ್ಮಕರವಸತಯೋ ಯಸ್ಯ ಪುಚ್ಛಾಭಿಘಾತಾ**
**ದೂರ್ಧ್ವಂ ಬ್ರಹ್ಮಾಂಡ ಖಂಡ ವ್ಯತಿಕರ ವಿಹಿತ ವ್ಯತ್ಯಯೇನಾಪತಂತಿ ॥**

**ವಿಷ್ಣೋರ್ಮತ್ಸ್ಯಾವತಾರೇ ಸಕಲ ವಸುಮತೀಮಂಡಲಂ ವ್ಯಶ್ನುವಾನ**
**ಸ್ತಸ್ಯಾಸ್ಯೋದೀರಿತಾನಾಂ ಧ್ವನಿರಪಹರತಾದಶ್ರಿಯಂ ವಃ ಶ್ರುತೀನಾಮ್ ॥**

ಮತ್ಸ್ಯರೂಪಿ ಶ್ರೀಹರಿಯ ಮುಖದಿಂದ ಹೊರಟು ತಿರೆಯನ್ನೆಲ್ಲ ತುಂಬಿ ವಿಜೃಂಭಿಸುವ ವೇದಧ್ವನಿಯು ನಿಮ್ಮ ಕೆಡಕನ್ನು ಕಳೆಯಲಿ. ಏನದ್ಭುತ ಆ ಮತ್ಸ್ಯಾವತಾರಿಯ ಲೀಲೆ ! ಆ ಆದಿ ಮೀನು ಪಾತಾಲಮೂಲದಿಂದ ಸಿಡಿದು ಮೇಲೆದ್ದಾಗ ಅವನ ಬಾಲದ ಹೊಡೆತದಿಂದ ಸಾಗರಗಳನೀರೆಲ್ಲ ಚಿಮ್ಮಿ ಮೇಲೆ ಪುಟಿದವು. ಭರದಿಂದ ಮೇಲೆಮೇಲೆ ಬೀಸಿ ಎಸೆಯಲ್ಪಟ್ಟ ಆ ಎಲ್ಲ ಸಮುದ್ರಗಳ ಜಲರಾಶಿಯು ಬ್ರಹ್ಮಾಂಡದ ತುದಿಯ ಕೊಪ್ಪರಕ್ಕೆ ಬಡಿದು ಮತ್ತೆ ಮರಳಿ ಕೆಳಗೆ ಉರುಳಿ ನೆಲದೆಡೆಗೆ ಹೊರಳಿ ಬಂದು ಬಿದ್ದವು. ಇಂಥ ಮೀಮೂರುತಿಯ ಮುಖದಿಂದ ಹೊರಹೊಮ್ಮಿದ ವೇದಘೋಷವು ನಮ್ಮ ನಿಮ್ಮೆಲ್ಲರ ಅಶುಭವನ್ನು ದೂರಮಾಡಲಿ.

ಪ್ರಪಂಚದ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವ ಗುಣಪೂರ್ಣ ನಾರಾಯಣನಿಗೆ ನಮಸ್ಕಾರ. ಜೀವೋತ್ತಮರಾದ ವಾಯುದೇವರಿಗೆ ವಂದನೆ. ಶೇಷದೇವರಿಗೂ ನಮಃ. ಇದರಂತೆ ಲಕ್ಷ್ಮೀದೇವಿಗೂ ಸರಸ್ವತಿಗೂ ಹಾಗೂ ಶ್ರೀ ವೇದವ್ಯಾಸರಿಗೂ ನಮಿಸಿ, ಈ ಮತ್ಸ್ಯಪುರಾಣವನ್ನು ಪಠಿಸಬೇಕು. ಪವಿತ್ರವಾದ ನೈಮಿಷ ಒಂದು

ಪುಣ್ಯಾರಣ್ಯ. ಅಲ್ಲಿ ಒಂದು ಋಷಿಗಳ ಪರಿಷತ್ತು. ಕಲಿಯ ಭಯದಿಂದ ಅವರೆಲ್ಲರೂ ದೀರ್ಘ ಕಾಲದ ಒಂದು ಜ್ಞಾನಸತ್ರವನ್ನು ಕೈಗೊಂಡಿದ್ದಾರೆ. ಭಗವತ್ ಕಥಾಪ್ರವಚನ ಶ್ರವಣಗಳೇ ಆ ಜ್ಞಾನಸತ್ರದ ಮುಖ್ಯ ಕಾರ್ಯ. ಒಂದು ದಿನ ಏಕಾಂತದಲ್ಲಿ ಭಗವದ್ಧ್ಯಾನಗೈಯುವ ಸೂತರನ್ನು ಶೌನಕಾದಿ ಮುನಿಗಳು ಕಂಡು ಅಭಿನಂದಿಸಿದರು. ''ಪೂಜ್ಯರೇ, ನೀವು ಈ ವರೆಗೆ ಬಿತ್ತರಿಸಿದ ಪುರಾಣಗಳೆಲ್ಲ ಪುಣ್ಯಕರವಾಗಿವೆ. ಅಷ್ಟೇ ಲಲಿತಬಂಧುರವೂ ಅಹುದು. ನಿಮ್ಮ ಮುಖದಿಂದ ಬರುವ ಪೌರಾಣಿಕ ಕಥಾಧಾರೆ ಸುರಿಯುವ ಸೊದೆಯ ಸೋನೆಯೇ ಸರಿ. ಕೇಳಿದಷ್ಟೂ ಮತ್ತೆ ಮತ್ತೆ ಕೇಳಬೇಕೆಂದೇ ಎನಿಸುವುದು.''

ಜಗದೊಡೆಯ ಭಗವಂತ ಈ ಪ್ರಪಂಚವನ್ನು ನಿರ್ಮಿಸಿದ್ದೆಂತು ? ಈ ಚರಾಚರ ವಿಶ್ವದ ರಚನೆಯ ಪರಿ ಯಾವುದು ? ವಿಶ್ವವ್ಯಾಪ್ತನಾದ ವಿಷ್ಣು 'ಭಗವಾನ್ ! ಷಡ್ಗುಣೈಶ್ವರ್ಯ ಸಂಪನ್ನ. ಆದರೂ ಅವನಿಗೆ ಮೀನಾಗಿ ನೀರಲ್ಲಿ ಹರಿದಾಡುವ ಪ್ರಸಂಗ ಬಂದುದೇಕೆ ? ಈ ಮತ್ಸ್ಯಾವತಾರದ ಗುಟ್ಟೇನು ? ಶಿವನಿಗೆ ಭೈರವ ಎನ್ನುವರು. ಏಕೆ ! ಪುರಾರಿ ಎಂದು ಅವನಿಗೆ ಹೆಸರು ಬರಲು ಕಾರಣವೇನು ? ಎತ್ತನ್ನು ಹತ್ತಿ ತಿರುಗಾಡುವ ಆ ಕೈಲಾಸಪತಿ 'ಕಪಾಲಿ' ಆದುದರ ರಹಸ್ಯವೇನು ? ಆ ತಲೆಬುರುಡೆ (ಕಪಾಲ) ಶಿವನಕೈಗೆ ತಗಲಿಕೊಂಡದ್ದರ ಕಾರಣವೇನು ? ಇದನ್ನೆಲ್ಲ ಸನಗೆ ವಿಸ್ತಾರವಾಗಿ ಹೇಳಿರಿ. ಆ ಹೇಳಿಕೆಯಲ್ಲಿ ಒಂದು ಕ್ರಮವಿರಲಿ. ನಿಮ್ಮ ಮಾತು ಅಮೃತ ಕುಡಿದಂತೆ. ಕೇಳಿದಷ್ಟೂ ಹೆಚ್ಚುವ ಕುತೂಹಲ. ಕುಡಿದಷ್ಟೂ ಅಮೃತಾನಂದ. ಮನು ಮೀನದ ಸಂವಾದವೇ ಈ ಮತ್ಸ್ಯ ಪುರಾಣ.

## ಸೂತ ಉವಾಚ

ಮತ್ಸ್ಯಪುರಾಣ ಪರಮಪವಿತ್ರ. ಅದರ ಶ್ರವಣದಿಂದಲೇ ಪರಮಪುಣ್ಯ, ಮೇಲೆ ಆಯುಷ್ಯಾಭಿವೃದ್ಧಿ, ಇದನ್ನು ಹೇಳಿದವ ಸಾಕ್ಷಾತ್ ನಾರಾಯಣನೇ. ಇದರ ಹೆಸರು ಮತ್ಸ್ಯ ಪುರಾಣ. ಹಿಂದೊಬ್ಬ ರಾಜ ಇದ್ದ. ಅವನ ಹೆಸರು ಸತ್ಯವ್ರತ. ಅವನು ಮಾಡಿದ ತಪ ಅಲ್ಪವಲ್ಲ ವಿಪುಲ. ಅವನು ಮಹಾಭಗವದ್ ಭಕ್ತ. ಕ್ಷಮಾಗುಣಕ್ಕೆ ಅವನೇ ತವರು. ಅವನು ತನ್ನ ಯೋಗ್ಯಪುತ್ರನ ತಲೆಯಮೇಲೆ ತನ್ನ ರಾಜ್ಯಭಾರದ ಹೊರೆಯನ್ನು ಇರಿಸಿದ. ತಾನು ತಪೋವನಕ್ಕೆ ನಡೆದ. ಮಲಯಗಿರಿಯ ವಿವಿಕ್ತ ತಾಣ. ಅಲ್ಲಿ ಆ ರಾಜರ್ಷಿಯ ಉಗ್ರತಪಸ್ಸು. ಹಸಿವೆ ಬಾಯಾರಿಕೆಗಳ ಪರಿವೆಯೆಲ್ಲಿ ಆತನಿಗೆ ? ಸುಖವೂ ಅಷ್ಟೇ. ದುಃಖವೂ ಅಷ್ಟೇ ! ರಣರಂಗದಲ್ಲಿಯಂತೆ ತಪೋರಂಗದಲ್ಲಿಯೂ ಅವನು ವೀರ ಎನಿಸಿದ. ಧ್ಯಾನಯೋಗದಲ್ಲಿ ಲೀನನಾದ. ಹೀಗೆ ಹತ್ತುಸಾವಿರ ವರ್ಷ ಕಳೆಯಿತು. ತಾವರೆಯ ಪೀಠದಲ್ಲಿ ಕುಳಿತ ಬ್ರಹ್ಮ ಧಾವಿಸಿ ಬಂದ. ಬೇಕಾದ ವರ ಕೇಳು ಎಂದ. ಅಷ್ಟು ಹಿಗ್ಗಾಗಿತ್ತು ಆ ಕಮಲದ ಕೂಸಿಗೆ ಇವನ ತಪ ಕಂಡು. ರಾಜರ್ಷಿ ಕೈಮುಗಿದು ಕೇಳಿದ ''ಭಗವನ್, ನನ್ನದೊಂದು ಬಯಕೆ. ಈ ಚರಾಚರ ಪ್ರಪಂಚವೆಲ್ಲ ಪ್ರಳಯಕಾಲದಲ್ಲಿ ನೀರಿನಾಳದಲ್ಲಿ ಮುಳುಗುವದಷ್ಟೇ! ಆ ಜಲಪ್ರಳಯದಲ್ಲಿ ಈ ಸ್ಥಾವರ ಜಂಗಮಾತ್ಮಕವಾದ ವಿಶ್ವವನ್ನೆಲ್ಲ ರಕ್ಷಿಸುವ ಆ ಭಗವಂತನ

ವಿಶಿಷ್ಟಲೀಲೆಯನ್ನು ಕಾಣುವ ಶಕ್ತಿಯ್ನನು ನನಗೆ ಕರುಣಿಸು. ಪ್ರಳಯ ಕಾಲದಲ್ಲಿ ಪ್ರಪಂಚರಕ್ಷಕನ ಪ್ರೇಕ್ಷಕನು ನಾನಾಗಬೇಕು'' ''ತಥಾಸ್ತು'' ಎಂದ ಆ ಹಂಸವಾಹನ. ರಾಜ ಕೇಳಿದ ವರ ಕರುಣಿಸಿದ. ಚತುರ್ಮುಖ ಅಲ್ಲಿಯೇ ಅಂತರ್ಧಾನ ಹೊಂದಿದ. ಕೂಡಲೇ ತಪಃಸ್ಸಿದ್ಧಿ ಪಡೆದ ಆ ಮಹಾರಾಜ ಪುರುಷನಮೇಲೆ ಹೂವುಗಳ ಸುರಿಮಳೆ. ಮುಗಿಲ ಹೂವುಗಳೆಲ್ಲ ಮಹಾರಾಜನ ಮುಕುಟದ ಮೇಲೆ. ಒಂದು ದಿನ ತಪಸ್ಸಿದ್ಧನಾದ ಆರಾಜ ತನ್ನ ಆಶ್ರಮದ ಬಳಿಯ ಪಿತೃದೇವತೆಗಳಿಗೆ ತರ್ಪಣ ಕೊಡುತ್ತಿದ್ದ. ನೀರಿನಲ್ಲಿಯ ಮೀನವೊಂದು ಮನುವಿನ ಕೈಯಲ್ಲಿ ಬಂದಿತು. ನೀರಿನೊಡನೆ ಆ ಮರಿ ಮೀನು ಬೊಗಸೆಯಲ್ಲಿ ಬಂದುದನ್ನು ಕಂಡು ರಾಜನಿಗೆ ತುಂಬ ಕರುಣೆ. ಕೂಡಲೇ ಅದನ್ನು ಅವನು ತನ್ನ ಕಮಂಡಲದಲ್ಲಿ ಇಟ್ಟು ರಕ್ಷಿಸಿದ. ಒಂದು ಹಗಲಿರುಳು ಕಳೆದಿರಬಹುದು ಅಷ್ಟೇ. ಹದಿನಾರು ಬೆರಳು ಬೆಳೆಯಿತು ಆ ಪುಟ್ಟ ಮೀನು. 'ನನ್ನನ್ನು ಸಾಕಿಸಲಹು ಮಹಾರಾಜ' ಎಂದು ಮೊರೆಯಿಟ್ಟಿತು ಮತ್ಸ್ಯಶಿಶು. ಅದನ್ನೆತ್ತಿ ನೀರು ತುಂಬುವ ಹಂಡೆಯಲ್ಲಿ ಇರಿಸಿದ ಮಹಾರಾಜ. ಅಲ್ಲಿ ಒಂದೇ ಇರುಳು. ಮೂರು ಮೊಳವಾಗಿತ್ತು ಆ ಮೀನದ ಮರಿ.

''ಮಹಾರಾಜ, ನೀನು ಮಹಾರಾಜ ತಾನೇ ! ನೀನೇ ನನಗೆ ಶರಣು ಶರಣು. ನನ್ನನ್ನು ಕಾಯುವ ಹೊಣೆ ನಿನ್ನದು. '' ಎಂದು ಮೊರೆಹೊಕ್ಕಿತು ಆ ಮೀನದ ಮರಿ. ಹಂಡೆಯಲ್ಲಿ ಹಿಡಿಸದ, ಕೊಳಗದಲ್ಲಿ ಸಾಲದ ಆ ಮೀನವನ್ನು ಮನೆ ಮುಂದಿನ ಬಾವಿಯಲ್ಲಿ ಹಾಕಿದ ಆ ರಾಜಮಹರ್ಷಿ. ಅಲ್ಲಿ ಇದ್ದದ್ದು ಒಂದೇ ರಾತ್ರಿ. ಬೆಳಗಾಗುವಷ್ಟರಲ್ಲಿ ಬಾವಿ ಹಿಡಿಸದಷ್ಟು ಬೆಳೆದು ನಿಂತಿದೆ ಮತ್ಸ್ಯಮೂರ್ತಿ. ಅಲ್ಲಿಂದ ಆ ಕಾಡಿನಲ್ಲಿಯ ಕೆರೆಗೆ ಅದನ್ನು ದೊರೆ ಸಾಗಿಸಿದ. ಮಾರನೆಯ ದಿನ ಕೆರೆ ತುಂಬಿದಾಗ ದೊಡ್ಡ ಸರೋವರಕ್ಕೆ ಬಿಜಯಂಗೈಸಿದ. ಅಲ್ಲಿ ಆ ಮೀನು ಇಪ್ಪತ್ತೇಳು ಮೈಲು ಉದ್ದಗಲ ಬೆಳೆದು ನಿಂತಿತು.

''ರಕ್ಷಿಸು ರಕ್ಷಿಸು. ಕಾಪಿಟ್ಟು ಕರುಣಿಸು'' ಮೀನು ತನ್ನ ಆರ್ತನಾದವನ್ನು ಮುಂದುವರಿಸಿತು. ಇದಕ್ಕೆ ಉಳಿದಾವ ಪಾತ್ರೆಯೂ ಉಪಯೋಗವಿಲ್ಲವೆಂದು ತಿಳಿದು ಗಂಗೆಯಲ್ಲಿಯೇ ಅದನ್ನು ಮಹಾರಾಜ ತಂದು ಬಿಟ್ಟ. ಗಂಗೆಯ ಒಡಲೆಲ್ಲ ತುಂಬಿ ಹೋಯಿತು. ಸಮುದ್ರದ ಹೊರತು ಗತಿಯಿಲ್ಲದಾಯಿತು. ಸಾಗರಕ್ಕೇ ಸಾಗಿಸಿದ್ದೂ ಆಯಿತು. ಆದರೆ ಇದೇನು ಅಚ್ಚರಿ. ಸಮಗ್ರ ಸಮುದ್ರದ ಅಪಾರ ನೀರಿನ ಹರವು ಆಳಗಳನ್ನೆಲ್ಲ ತುಂಬಿ ವಿಜೃಂಭಿಸಬೇಕೇ ಆ ಅದ್ಭುತ ಮೀನು ! ಮಹಾರಾಜನ ಕೌತುಕಕ್ಕೆ ಕೊನೆಯಿಲ್ಲ. ದಿಗಿಲು, ದಿಗ್ಭ್ರಮೆ, ಭಯ ಭ್ರಾಂತಿ, ಭಕ್ತಿ ಜಿಜ್ಞಾಸೆ ನೂರು ಭಾವಗಳ ರಿಂಗಣಗುಣಿತ ಮಿದುಳಿನ ಮೊನೆಯಲ್ಲಿ. ಕೊನೆಗೆ ಕೇಳಿಯೇ ಬಿಟ್ಟ ಮಹಾರಾಜ.

''ನೀನಾವ ದೇವನಪ್ಪ ! ಏನಿದು ಆಕಾರ ! ಎಂಥ ವಿಚಿತ್ರ ಬೆಳವಣಿಗೆಯ ಪ್ರಕಾರ ! ಅಥವಾ ನೀನೇನು ಸಾಕ್ಷಾದ್ ವಾಸುದೇವನೇ ಇರುವೆಯೋ ! ನಿಜ. ನೀನು ಆ ಶ್ರೀ ಹರಿಯೇ ಸರಿ. ತಪಸ್ಸಿದ್ಧಿ ಪಡೆದ ನನ್ನ ಬಳಿಗೆ ದೈತ್ಯದಾನವರು ಹೇಗೆ ಬಂದಾರು ! ಇಂಥ ಲೋಕ ವಿಲಕ್ಷಣ ಸಾಮರ್ಥ್ಯ, ಆಕಾರ ಇರುವದಾದರೂ

**ಯಾರಿಗೆ, ಆ ಪರಮಾತ್ಮನ ಹೊರತು! ಲಕ್ಷಯೋಜನ ವಿಶಾಲವಾದ ದೇಹ ಯಾರಿಗಾದರೂ ಇರಲಿಕ್ಕುಂಟೇ! ನೀನು ನಿಜವಾಗಿಯೂ ನಾರಾಯಣನೇ ಸರಿ. ಇಂದ್ರಿಯಗಳಿಗೆ ನಿಯಾಮಕನಾದ ಜಗನ್ನಾಥನೇ, ನನಗೆ ಈಗ ಆಯಿತು ನಿನ್ನ ಅರಿವು. ಜಗದೊಡೆಯ, ಈ ಮೀನದ ಮೈ ತಳೆದು ಮಾಯೆಯಿಂದ ನನ್ನನ್ನೇಕೆ ಮೋಹಿಸುವೆ! ಸಮಸ್ತ ಜಗದಾಧಾರ ನೀನೇ ! ನಿನಗೆ ನಮೋನಮಃ.**

ಮತ್ಸ್ಯ ರೂಪಿ ಮಧುಸೂದನ ಮಾತನಾಡಿದ. ''ಭಲೇ ಭಾಪು ಮಹಾರಾಜ. ಅಂತೂ ನನ್ನನ್ನು ಸರಿಯಾಗಿ ಗುರುತಿಸಿದೆ. ಇನ್ನು ಕೆಲದಿನಗಳಲ್ಲಿ ಪ್ರಳಯ. ಈ ಭೂಮಿಯೆಲ್ಲ ಪ್ರಳಯದ ನೀರಿನಲ್ಲಿ ಮುಳುಗಿ ಹೋಗುವುದು. ಇದರ ಮೇಲಿನ ಬೆಟ್ಟ, ಬಯಲು ನೆಲ, ಹೊಲ, ಮನೆ, ಮಳಲು, ಹೊಳಲು, ಹಳ್ಳಿ, ನಗರ ಎಲ್ಲ ಸಾಗರದ ಜಲದಲ್ಲಿ ಲೀನವಾಗುವದು. ಆಗ ಆ ಅಪಾರ ವಾರಿವಿಸ್ತಾರದ ರುಂದ್ರ ಸಿಂಧುವಿನ ತೆರೆಗಳ ತಲೆಯ ಮೇಲೆ ಒಂದು ನೌಕೆ ತೇಲಿ ಬರುವದು.

ಎಲ್ಲ ಜೀವ ರಾಶಿಗಳ ರಕ್ಷಣೆಗಾಗಿ ಜಗದೀಶನಿಂದ ನಿರ್ಮಿತವಾದುದು ಆ ನಾವೆ. ಈ ಜೀವಜಂತುಗಳು ನಾಕು ಬಗೆ. ಬೆವರಿನಿಂದ ಬೆಳೆದವು ಕೆಲವು. ಮೊಟ್ಟೆ ಒಡೆದು ಹುಟ್ಟಿ ಬಂದ ಪಕ್ಷಿಗಳು ಇನ್ನೊಂದು ತರಹ. ನೆಲದೆದೆಸೀಳಿ ಮೇಲೆದ್ದುದರಿಂದ ಸಸ್ಯಗಳದು ಮತ್ತೊಂದು ಜಾತಿ. ಮತ್ತು ತಾಯಿಯ ಬಸಿರು ಬಗೆದು ಬಂದ ಪ್ರಾಣಿಗಳದು ನಾಕನೆಯವರ್ಗ. ಈ ನಾಕು ಬಗೆಯ ಜೀವ ರಾಶಿಗಳನ್ನೂ ಆ ನೌಕೆಯಲ್ಲಿಟ್ಟು ನಾನೇ ರಕ್ಷಿಸುತ್ತೇನೆ. ಪ್ರಳಯಕಾಲದಲ್ಲಿ ದಿಕ್ಕಿಲ್ಲದ ಆ ಜೀವ ಕೋಟಿಗೆಲ್ಲ ನಿಮಿತ್ತ ಮಾತ್ರಕ್ಕೆ ನೀನೂ ರಕ್ಷಕನಾಗು. ರಾಜನ್, ಅಂದಿನ-ಮುಂದಿನ ಪ್ರಳಯದ ಪ್ರಸಂಗದಲ್ಲಿ ಬೀಸುವ ಬಿರುಗಾಳಿ ಬಹುಭೀಕರ. ಆ ಪ್ರಳಯ ವಾತದ ಮಹಾಆಟೋಪಕ್ಕೆ ಈ ನೌಕೆ ಹೊಯ್ದಾಡ ತೊಡಗುವುದು. ಆಗ ನೀನು ಮಾತ್ರ ಹೆದರಬೇಡ. ಆ ನೌಕೆಯನ್ನು ಇದೋ ನನ್ನ ಈ ಕೊಂಬಿಗೆ ಬಿಗಿದು ಬಿಡು. ನನ್ನ ಕೋಡಿಗೆ ಗಟ್ಟಿಯಾಗಿ ಕಟ್ಟಿದ, ನೌಕೆಯನ್ನೂ ನಿನ್ನನ್ನೂ ನಾನು ಪ್ರಳಯೋದಕದಲ್ಲಿ ಎಲ್ಲ ಕಡೆಗೂ ತೇಲಾಡಿಸಿ ತಿರುಗಾಡಿಸುವೆ. ಹೀಗೆ ಸುಖ ರೂಪವಾಗಿ ನಿನ್ನ ಪ್ರಳಯೋದಧಿಯ ಸಲಿಲ ಸಂಚಾರ ಮುಗಿದ ಬಳಿಕ ಹೊಸ ಯುಗ ಸುರುವಾಗುವದು. ಆಗ ನೀನು ವಿವಸ್ವಾನ್ ಎಂದರೆ ಸೂರ್ಯನ ಮಗನಾಗಿ ಹುಟ್ಟಿ ವೈವಸ್ವತ ಮನು ಎಂದು ಪ್ರಖ್ಯಾತನಾಗುವೆ. ಆದುದರಿಂದ ಇಂದಿನಿಂದಲೇ ನೀನು **'ಮನು'** ನನ್ನಿಂದ ಸಂಬೋಧಿಸಲ್ಪಡುವೆ. ಮನುಕುಲದ ಕಲ್ಯಾಣಕ್ಕಾಗಿ ನಾನು ಇಂದಿನಿಂದಲೇ ನಾಮಕನಾದ ನಿನ್ನ ಪ್ರಶೆಗಳಿಗೆಲ್ಲ ನಾನೇ ಉತ್ತರ ಹೇಳುವೆನು. ಬಳಿಕ ಅಂದಿನ ನವಯುಗದ ಚರಾಚರ ಪ್ರಪಂಚಕ್ಕೆಲ್ಲ ನೀನೇ ಪ್ರಜಾಪತಿಯಾಗುವೆ. ಇಂತು ಕೃತಯುಗದ ಆದಿಯಲ್ಲಿ ಮನ್ವಂತರದ ಆಧಿಪತ್ಯವನ್ನು ಪಡೆದ ನೀನು ಎಲ್ಲವನ್ನೂ ಅರಿತು : ಸರ್ವಜ್ಞನೆಂದು ಹೆಸರುವಾಸಿಯಾಗುವೆ. ಧೀರನಾದ ನಿನ್ನನ್ನು ದೇವತೆಗಳೂ ಕೂಡ ಪೂಜಿಸುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಒಂದನೇಯ ಅಧ್ಯಾಯ ಮುಗಿದುದು*

—o—

## ಪ್ರಳಯ ಹೇಗೆ ? ಎಂದು ? | ಅಧ್ಯಾಯ - ೨

**ಏವಮುಕ್ತೋ ಮನುಸ್ತೇನ ಪಪ್ರಚ್ಛ ಮಧುಸೂದನಂ**
**ಭಗವನ್ ಕಿಯದ್ಭಿರ್ವರ್ಷೈರ್ಭವಿಷ್ಯತ್ಯಂತರಕ್ಷಯಃ ।**

ಮತ್ಸ್ಯಾವತಾರಿಯಾದ ಅಚ್ಯುತನ ಈ ನುಡಿ ಕೇಳಿ, ಮಹಾರಾಜನು ಪ್ರಶ್ನಿಸಿದ ''ಭಗವನ್ ನೀನು ಹೇಳಿದ ಈ ಅವಾಂತರ ಪ್ರಳಯವು ಇನ್ನು ಎಷ್ಟು ವರ್ಷಗಳ ಮೇಲೆ ಸಂಭವಿಸುವದು? ಆ ಸಮಯದಲ್ಲಿ ಮಧುಸೂದನ, ಪ್ರಾಣಿರಾಶಿಯನ್ನು ನಾನು ಸಂರಕ್ಷಿಸುವ ಬಗೆಯಾವುದು?''

ಮನುವಿನ ಈ ಪ್ರಶ್ನೆಗೆ ಪರಮಾತ್ಮನು ಉತ್ತರಿಸಿದ.

''ಮಹಾರಾಜ, ಆ ಅವಾಂತರ ಪ್ರಳಯಕ್ಕೆ ಇಂದಿನಿಂದಲೇ ನಾಂದಿ. ಮಳೆ ಪೂರ್ತಿ ಹೋಗಿಬಿಡುವದು. ಇಡೀ ಭೂಮಂಡಲದಲ್ಲಿ ಒಂದು ಹನಿ ಕೂಡ ಇನ್ನು ಮಳೆ ಬೀಳಲಾರದು. ಈ ಅನಾವೃಷ್ಟಿ ಒಂದೆರಡು ತಿಂಗಳ ಅಥವಾ ವರ್ಷಗಳದ್ದಲ್ಲ. ನೂರು ವರ್ಷಗಳವರೆಗೆ ಹಾಳಹನಿ ಇಲ್ಲದಂತೆ ಮಳೆ ಹಾರಿಹೋಗುವದು. ಈ ಭೀಕರ ಅನಾವೃಷ್ಟಿಯಿಂದ ಪ್ರಪಂಚದ ತುಂಬ ಭೀಷಣ ಬರಗಾಲ. ಅಕ್ಷಯಕ್ಷಾಮ. ನಿರಂತರ ದುರ್ಭಿಕ್ಷ. ಸೂರ್ಯಮಂಡಲವಂತೂ ಕಾಯ್ದು ಕೆಂಪಕೆಂಡ. ಅವನ ಕಿರಣಗಳೆಲ್ಲವೂ ಕಿಡಿಕಿಡಿ, ಸಣ್ಣ ಪುಟ್ಟ ಪ್ರಾಣಿಗಳೆಲ್ಲವೂ ಬಿಸಿಲಿನ ಬೇಗೆ ತಾಳದೆ ಸತ್ತು ಹೋಗುವವು.

ಪ್ರಳಯ ಕಾಲ ಸಮೀಪಿಸಿದಂತೆ ಸಮುದ್ರದ ಒಡಲಿನಲ್ಲಿರುವ ವಡವಾಗ್ನಿಯು 'ಭುಗಿಲ್' ಎನ್ನುವದು. ಜ್ವಾಲಾಮುಖಿಯಂತೆ ಅಗ್ನಿರಸವನ್ನೇ ಉಗುಳುವುದು. ಪಾತಾಳ ಮೂಲದಲ್ಲಿರುವ ಆದಿಶೇಷನ ಮುಖದಿಂದ ಬೆಂಕಿಯ ದ್ರವದಂತೆ ಉಲ್ಬಣ ವಿಷವು ಹೊಮ್ಮಿ ಚಿಮ್ಮತೊಡಗುವುದು. ಇದೇ ವೇಳೆಯಲ್ಲಿ ಮಹಾದೇವನ ಹಣೆಗಂಟುಗೂಡುವದು. ಒಮ್ಮೆಲೇ ಅವನ ಮೂರನೆಯ ಕಣ್ಣು ಪ್ರಜ್ವಲಿಸಿ ಹಣೆಸಿಡಿದು ಬೆಂಕಿಯ ಬಣವೆಯೇ ಧಗಧಗಿಸುವುದು.

ಹೀಗೆ ಎಲ್ಲ ಕಡೆಯಿಂದ ಚಿಮ್ಮಿ, ಚಾಚಿ, ಭಗ್ಗನೆ ಉರಿಯುತ್ತ ಬರುತ್ತಲಿರುವ ಬೆಂಕಿಯ ಜ್ವಾಲೆಗಳ ಮಾಲೆಗಳಿಂದ ಮೂರು ಲೋಕವೆಲ್ಲವೂ ಸುಟ್ಟು ನಷ್ಟವಾಗುವದು. ಭೂಮಂಡಲವೆಲ್ಲವೂ ಇಂತು ಸುಟ್ಟುಬೂದಿಯಾದ ಬಳಿಕ, ಮುಗಿಲು ಕೂಡ ಭಯಂಕರ ಬೇಗೆಯಿಂದ ಭುಗಿಲೆದ್ದು ಸುಡತೊಡಗುವದು. ಹೀಗೆ ಬೆಟ್ಟ, ಬಯಲು ಸಹಿತ ಭೂಮಿಯೂ ನಕ್ಷತ್ರ ನೀಹಾರಿಕೆ ಗ್ರಹಮಂಡಲಗಳಿಂದೊಡಗೂಡಿದ ಅಂತರಿಕ್ಷವೂ, ದೇವತಾಧಾಮಾರಾಮ ಸಹಿತವಾದ, ಸುರಲೋಕವೂ ಸುಟ್ಟು ಸೀಕರಿಗೊಂಡು ವಿನಾಶವನ್ನು ಹೊಂದುವವು. ಹೀಗೆ ಅಗ್ನಿ ಪ್ರಳಯವಾದ ಬಳಿಕ ಜಲಪ್ರಳಯ ಪ್ರಾರಂಭ. ಸಂವರ್ತ, ಭೀಮನಾದ, ದ್ರೋಣ, ಚಂಡ, ಬಲಾಹಕ, ವಿದ್ಯುತ್ಪತಾಕ, ಶೋಣ ಇವು ಏಳು ಪ್ರಳಯಕಾಲದ ಮೋಡಗಳು. ನೂರುವರ್ಷದ ಅಗ್ನಿವರ್ಷದಿಂದ ಬೆಂದು ದಂದಹಿಸಿ ಹೋದ

ಭೂಮಂಡಲವನ್ನು ಈ ಏಳು ಪ್ರಳಯ ಮೇಘಗಳು ನಿರಂತರ ಧಾರಾಕಾರ ಜಡಿ ಮಳೆಗಳಿಂದ ತೋಯಿಸಿ, ತಂಪುಗೊಳಿಸುವವು, ಬೆಂಕಿಯಲ್ಲಿ ಬೆಂದು ಭೂಮಿಯೆಲ್ಲ ಮಳೆ ನೀರಿನಿಂದ ನೆನೆದು ಹೋಗುವುದು. ಸಮುದ್ರಗಳೆಲ್ಲವೂ ಉಕ್ಕೇರಿ ಅಲ್ಲೋಲ ಕಲ್ಲೋಲವಾಗಿ ಒಂದು ಗೂಡುವವು. ನಾಕುನಿಟ್ಟಿನ ಸಾಗರಗಳೆಲ್ಲವೂ ಭೋರ್ಗರೆದು ಏರಿಸಾರಿ ಸಂಗಮಿಸುವವು.

ಆಗ ಮೂರುಲೋಕವೆಲ್ಲವೂ ಆ ಪ್ರಳಯಜಲದಲ್ಲಿ ಮುಳುಗಿ ಪ್ರಪಂಚವೆಲ್ಲವೂ ಏಕಾರ್ಣವವಾಗುವುದು. ಅಂದರೆ ವಿಶ್ವದ ತುಂಬ ಒಂದೇ ಅಂಬುಧಿಯು ತುಂಬಿತುಳುಕಿ, ತನ್ನ ಸಲಿಲ ಸಂಭ್ರಮದಿಂದ ಒಂದೇ ಸಿಂಧುವಾಗಿ ವಿಜೃಂಭಿಸುವದು. ವ್ರತನಿಷ್ಠನಾದ ಮನುರಾಜನೇ, ಇಂಥ ಭಯಂಕರ ಪ್ರಳಯ ಪ್ರಸಂಗದಲ್ಲಿ ನಾನು ಹೇಳಿದ ನೌಕೆಯು ನಿನ್ನ ಎದುರು ನೀರಿನಲ್ಲಿ ತೇಲಿ ಬರುವುದು. ಆ ವೇಗ ರೂಪವಾದ ದೋಣಿಯನ್ನು ನೀನು ಹಿಡಿದು ಹತ್ತು. ಜೀವರಾಶಿಯ ಬೀಜಗಳನ್ನೆಲ್ಲ ಅದರಲ್ಲಿರಿಸು. ನಾನು ಕೊಟ್ಟ ಹಗ್ಗದ ತುದಿಯನ್ನು ಈ ನೌಕೆಗೆ ಕಟ್ಟು, ಅದರ ಇನ್ನೊಂದು ತುದಿಯನ್ನು ಆ ಪ್ರಳಯೋದಧಿಯಲ್ಲಿ ಈಸುತ್ತ ಬರುವ ಮತ್ಸ್ಯರೂಪಿಯಾದ ನನ್ನ ಕೋಡಿಗೆ ಬಿಗಿದು ಕಟ್ಟು. ಘೋರ ತೆರೆಗಳ ಭೋರಾಟಏರಾಟದಿಂದ ಘೂರ್ಮಿಸುವ ಮಹಾಸಮುದ್ರದ ಆರ್ಭಟಿಯನ್ನು ನೋಡಿ ನೀನು ಹೆದರಬೇಡ, ಹೌಹಾರಬೇಡ. ಧೈರ್ಯದಿಂದ ನೀನು ಕುಳಿತ ನೌಕೆಯನ್ನು ನಾನು ಕೊಟ್ಟ ಹಗ್ಗದಿಂದ ನನ್ನ ತಲೆಗೆ ತಗಲಿಸಿಬಿಡು. ಮುಂದೆ ನನ್ನ ಪ್ರಭಾವವೇ ನಿನ್ನನ್ನು ರಕ್ಷಿಸುವುದು. ಎಲ್ಲ ದೇವಾಧಿದೇವತೆಗಳೂ ಆ ಪ್ರಳಯದಲ್ಲಿ ಸುಟ್ಟು ಸತ್ತು ಹೋಗುವರು. ಆಗ ಅಳಿಯದೆ ಉಳಿಯುವವರೆಂದರೆ ಬ್ರಹ್ಮದೇವರು, ಸತ್ಯಲೋಕವೇ ಮೊದಲಾದ ನಾಲ್ಕುಲೋಕಗಳು, ಸೂರ್ಯ ಚಂದ್ರರು, ಪುಣ್ಯ ನದಿಯಾದ ನರ್ಮದೆ, ಮಾರ್ಕಂಡೇಯ ಮಹಾಋಷಿ, ಈಶ್ವರ, ವೇದಪುರಾಣಗಳು, ಮತ್ತು ನೀನು. ಹಾಗೂ ಇದೆಲ್ಲ ಅನಾದಿ ವಿಶ್ವ. ಇವಿಷ್ಟು ಈ ಅವಾಂತರ ಪ್ರಳಯದಲ್ಲಿ ನಾಶವಾಗದೆ ಉಳಿಯುವವು. ಹೀಗೆ ಪ್ರಪಂಚವೆಲ್ಲವೂ ನೀರಿನಿಂದ ಏಕಾಕಾರ ಸಮುದ್ರವಾಗಿ, ಅಲ್ಲೋಲಕಲ್ಲೋಲವಾದಾಗ ಕ್ಲಪ್ತ ಸಮಯವು ಕಳೆದ ಬಳಿಕ ಚಾಕ್ಷುಷ ಮನ್ವಂತರ ಕೊನೆಗೊಳ್ಳುವುದು. ಆ ಬಳಿಕ ಷುರುವು ನಿನ್ನ ವೈವಸ್ವತ ಮನ್ವಂತರ.

ನಿನ್ನ ಮನ್ವಂತರದ ಆದಿ ಕಾಲದಲ್ಲಿ ಓ ಮನುರಾಜ, ನಾನೇ ವೇದಗಳನ್ನು ಪ್ರವರ್ತಿಸುವೆನು.'' ಹೀಗೆ ಹೇಳಿ ಭಗವಂತನು ನಿಂತಲ್ಲಿಯೇ ಅಂತರ್ಧಾನ ಹೊಂದಿದನು. ಬಳಿಕ ಮನುಚಕ್ರವರ್ತಿಯು ಭಗವಂತನ ಅನುಗ್ರಹದಿಂದ ತಾನು ಕಲಿತುಕೊಂಡ ಧ್ಯಾನಯೋಗದಲ್ಲಿ, ಅವನು ಸೂಚಿಸಿದ ಪ್ರಳಯ ಕಾಲವು ಬರುವ ವರೆಗೆ ಮಗ್ನನಾಗಿ ಕುಳಿತುಕೊಂಡನು. ಕೆಲಕಾಲ ಕಳೆದ ಬಳಿಕ ಶ್ರೀ ಹರಿಯು ಸೂಚಿಸಿದಂತೆ ಬರಗಾಲ, ಬಿರುಗಾಳಿ, ಬೆಂಕಿಯಮಳೆ, ನೀರಿನಮಳೆ, ಏಕಾರ್ಣವ ಎಲ್ಲವೂ ಒಂದರ ಹಿಂದೆ ಒಂದು ಘಟಿಸಿ ಗೋಚರವಾದವು. ಭಯಂಕರ ಪ್ರಳಯದ



ಸಪ್ತರ್ಷಿಗಳು ಹಾಗೂ ಮನು ಮಹಾರಾಜನನ್ನು ಪ್ರಳಯ ಸಾಗರದಲ್ಲಿ ತೇಲಿಸುತ್ತಿರುವ ಮತ್ಸ್ಯಾವತಾರಿ ಶ್ರೀಹರಿ

ಅಪಾರ ಪಾರಾವಾರದ ಪಯೋರಾಶಿಯಲ್ಲಿ ಮನುಮಹಾರಾಜನು ಬೆಕ್ಕಸ ಬೆರಗುಗೊಂಡು, ದಿಕ್ಕುಗಾಣದೆ ಕಕ್ಕಾವಿಕ್ಕಿಯಾಗಿ ತೇಲುತ್ತ ಈಸುತ್ತ ನಿಂತುಕೊಂಡಾಗ, ಸಮುದ್ರದ ಮಧ್ಯದಿಂದ ಮೀನವೊಂದು ಎದ್ದು ಬರುವದು ಗೋಚರಿಸಿತು. ಅದರ ಆಕಾರ ಪ್ರಕಾರ ಹಾಗೂ ಬಂಗಾರದ ಕೊಂಬು ಮುಂತಾದವುಗಳನ್ನು ಕಂಡು ಆ ಮಹಾರಾಜನು.

''ಇದೇ ಪರಮಾತ್ಮನು ಸೂಚಿಸಿದ ಮತ್ಸ್ಯಾವತಾರಿ ಶ್ರೀ ಹರಿ'' ಎಂದು ನಿಶ್ಚಿತವಾಗಿ ತಿಳಿದುಕೊಂಡನು. ಆದಿಶೇಷ ಎಂಬ ಹಾವು ಹಗ್ಗವಾಗಿ ಮನುಮುನಿಯ ಬಳಿಗೆ ಹರಿದು ಬಂದಿತು. ಭಗವಂತನೇ ಹೇಳಿಕೊಟ್ಟ ಮಂತ್ರಯೋಗದ ಪ್ರಭಾವದಿಂದ ಎಲ್ಲ ಜೀವರಾಶಿಗಳನ್ನೂ, ಔಷಧಿ ವನಸ್ಪತಿಗಳನ್ನೂ ಆಕರ್ಷಿಸಿ ಬೀಜ ರೂಪದಿಂದ ಸಂಗ್ರಹಿಸಿ ನೌಕೆಯಲ್ಲಿ ಇರಿಸಿದನು. ಆ ಹಾವಿನ ಹಗ್ಗದಿಂದ ಬಿಗಿದು ನೌಕೆಯನ್ನು ಆ ಮಾಯಾಮೀನದ ಕೊಂಬಿನಲ್ಲಿ ತೊಡಗಿಸಿದನು. ಮತ್ತು ಮತ್ಸ್ಯ ರೂಪಿಯಾದ ಆ ಮಹಾಪ್ರಭುವಿಗೆ ಸಾಷ್ಟಾಂಗನಮಸ್ಕಾರ ಗೈದು ಆ ನೌಕೆಯಲ್ಲಿ ತಾನೂ ಕುಳಿತುಕೊಂಡನು.

ಆನಂತರ ಆ ಮೀನಾಕೃತಿಯ ಶ್ರೀ ಹರಿಯು ಆ ನೌಕೆಯನ್ನೂ ಅದರಲ್ಲಿ ಕುಳಿತ ಮನು ಮಹರ್ಷಿಯನ್ನೂ ಪ್ರಳಯಸಾಗರದ ಜಲರಾಶಿಯ ತುಂಬ ಎಲ್ಲೆಡೆಗೂ ತಿರುಗಾಡಿಸಿದನು. ಆ ಪ್ರಳಯಕಾಲವು ಮುಗಿಯ ಬಂದಾಗ ಮನುಮಹಾರಾಜನು ಮೀನ ದೇವನಿಗೆ ಪ್ರಶ್ನೆಮಾಡಿದನು. ಅದಕ್ಕೆ ಉತ್ತರ ರೂಪವಾಗಿ ಮತ್ಸ್ಯಾವತಾರಿಯಾದ ಮಹಾವಿಷ್ಣುವು ಒಂದು ಮಹಾಪುರಾಣವನ್ನೇ ಹೇಳಿದನು. ಅದಕ್ಕೆ ಮತ್ಸ್ಯಪುರಾಣವೆಂದು ಹೆಸರು. ಅದನ್ನೇ ನಾನು ನಿನಗೆ ಹೇಳುತ್ತೇನೆ. ಋಷಿವರ್ಯರೇ, ನಾನು ಹೇಳುವ ಈ ಪುರಾಣವನ್ನು ನೀವು ಆದರದಿಂದ ಆಲಿಸಿರಿ. ಬ್ರಾಹ್ಮಣರೇ, ಇದೀಗ ನೀವು ನನಗೆ ಕೇಳಿದ ಸೃಷ್ಟ್ಯಾದಿ ವಿಚಾರವನ್ನು ಮನು ಮಹಾರಾಜನು ಆ ಪ್ರಳಯಕಾಲದಲ್ಲಿಯೇ ಮೀನ ಮೂರುತಿಯಾದ ಸಾಕ್ಷಾತ್ ಶ್ರೀ ಹರಿಯನ್ನೇ ಕೇಳಿದನು.

## ಪರಬ್ರಹ್ಮನಿಂದ ಚತುರ್ಮುಖಬ್ರಹ್ಮನ ಉದಯ

### ಮನುಃ ಉವಾಚ

**ಉತ್ಪತ್ತಿಂ ಪ್ರಳಯಂ ಚೈವ ವಂಶಾನ್ ಮನ್ವಂತರಾಣಿ ಚ**
**ವಂಶ್ಯಾನುಚರಿತಂ ಚೈವ ಭುವನಸ್ಯ ಚ ವಿಸ್ತರಮ್ ॥**

**ಮನು :-** ಪ್ರಪಂಚದ ಸೃಷ್ಟಿ, ಪ್ರಳಯ, ದೇವಮಾನವರ ವಂಶಾವಳಿ ಮನ್ವಂತರ, ಋಷಿ ಮುನಿ, ರಾಜರೇ ಮುಂತಾದ ಎಲ್ಲ ಮಾನವರ ಚಾರಿತ್ರಿಕ ಇತಿಹಾಸಗಳನ್ನೂ, ಮತ್ತು ಭೂಮಂಡಲದ ವ್ಯಾಪ್ತಿ ವಿಸ್ತರಗಳನ್ನೂ, ನನಗಾಗಿ ಬಿತ್ತರಿಸು. ಇವಲ್ಲದೇ ದಾನಧರ್ಮಗಳ ವಿಧಿವಿಧಾನಗಳನ್ನೂ, ನನಗಾಗಿ ಅರುಹು. ಶ್ರಾದ್ಧ ಕಲ್ಪದ ಬಗೆಯನ್ನು ತಿಳಿಸು. ಶಾಶ್ವತವಾದ ವರ್ಣಾಶ್ರಮದ

ವಿಚಾರವನ್ನೂ ಕೇಳಿಸು. ಇದರಂತೆ ದೇವತಾ ಪ್ರತಿಷ್ಠೆಯ ವಿಷಯವನ್ನೂ ನನಗಾಗಿ ನಿರೂಪಿಸಬೇಕು. ಕೆರೆ ಕಾಲುವೆ, ಬಾವಿ, ಛತ್ರ ಮುಂತಾದ ಜನೋಪಯೋಗಿ ಕಟ್ಟಡ ನಿರ್ಮಾಣ ಧರ್ಮಕಾರ್ಯಗಳ ಬಗೆಗೂ ತಿಳುವಳಿಕೆಯನ್ನು ನನಗೆ ಮಾಡಿಕೊಡು. ಇದೆಲ್ಲವನ್ನು ವಿವರವಾಗಿ ಹೇಳಿಕೊಡಲು ನೀನೊಬ್ಬನೇ ಸಮರ್ಥ.'' ಮನು ಮಹಾರಾಜನ ಈ ಜಿಜ್ಞಾಸೆಯನ್ನು ಕೇಳಿ ಮೀನರೂಪಿಯಾದ ಪರಮೇಶ್ವರನಿಗೆ ಅತ್ಯಂತ ಸಂತಸವಾಗಿ, ಅವನು ಉತ್ಸಾಹದಿಂದ ಹೇಳತೊಡಗಿದನು.

**ಮತ್ಸ್ಯ** :- ಮಹಾಪ್ರಳಯದ ಕೊನೆಯಲ್ಲಿ ಈ ಚರಾಚರವಾದ ಪ್ರಪಂಚವೆಲ್ಲವೂ ತಮೋಮಯ. ಎತ್ತೆತ್ತಲೂ ಕತ್ತಲು. ಎಲ್ಲವೂ ಶೂನ್ಯ. ಬರಿದೋ ಬರಿದು, ತೆರವೋ ತೆರವು. ಏನೂ ತಿಳಿಯದು. ಯಾವದೂ ಹೊಳೆಯದು. ಊಹೆಗೆ ಅವಕಾಶವಿಲ್ಲ. ಅರಿವು ಮರವುಗಟ್ಟಿದೆ. ಅದೊಂದು ಮಹಾಮೂರ್ಛೆ. ಅಜ್ಞಾನದ ಸಾಮ್ರಾಜ್ಯ. ಶೂನ್ಯದ ಸಂಸಾರ. ಇಂಥ ಸರ್ವಶೂನ್ಯದ ಬಸಿರನ್ನು ಬಗಿದು ಪೂರ್ಣಾತ್ಮನು ಪ್ರಕಟನಾದನು. ಯಾವ ಇಂದ್ರಿಯಗಳಿಗೂ ನಿಲುಕದ, ಯಾವ ಪ್ರಮಾಣಗಳಿಗೂ ಸಿಲುಕದ ಆ ಪರಂಜ್ಯೋತಿ ಪರಮಾತ್ಮನಿಗೆ **ನಾರಾಯಣ** ಎಂದು ಹೆಸರು. ಧರ್ಮಕರ್ಮಗಳಿಗೆಲ್ಲ ಅವನೇ ನೆಲೆ. ಪುಣ್ಯಪ್ರವಾಹಕ್ಕೆಲ್ಲ ಅವನೇ ಸೆಲೆ. ಅವ್ಯಕ್ತದಿಂದ ಈ ಚರಾಚರಪ್ರಪಂಚವನ್ನೆಲ್ಲ ಅರಳಿಸುವುದೇ ಅವನ ಕುಶಲಕಲೆ. ಅವನು ಅಣುವಿಗಿಂತ ಅಣು. ಮಹತ್ತಿಗಿಂತ ಮಹಾನ್. ಅವನೇ ನಿತ್ಯ. ಅವನೇ ಸತ್ಯ. ಕತ್ತಲೆ ಹರಿಯುವುದು ಅವನಿಂದ. ಬೆಳಕು ಸುರಿಯುವುದು ಅವನಿಂದಲೇ. ಅವನು ಏಕಮೇವ ಅದ್ವಿತೀಯ, ಅನುಪಮ. ಅವನನ್ನು ಹುಟ್ಟಿಸಿದವರು ಯಾರೂ ಇಲ್ಲ.

ಅವನ ಹೋಲಿಕೆ ಇನ್ನೊಬ್ಬರಿಗಿಲ್ಲ. ಅವನು ಯಾರಿಗೂ ಗೋಚರಿಸುವದಿಲ್ಲ. ಆದುದರಿಂದಲೇ ಅವನಿಗೆ ಸ್ವಯಂಭೂ, ಏಕಮೇವಾದ್ವಿತೀಯ. ಅವ್ಯಕ್ತ. ಮುಂತಾದ ಹೆಸರು. ಇಂಥ ಭಗವಂತನು ಸ್ವಯಂ ಪ್ರಾದುರ್ಭೂತನಾದನು. ಅವನಿಗೆ ಬಗೆಬಗೆಯ ಸಂಸಾರವನ್ನು ಹುಟ್ಟಿಸಬೇಕೆಂದು ಹಂಬಲ. ತನ್ನ ಶರೀರಭೂತವಾದ ವ್ಯಕ್ತಾವ್ಯಕ್ತ ಪ್ರಕೃತಿ ಪಟದಲ್ಲಿಯೇ, ಈ ವಿಶ್ವದ ಚಿತ್ರವನ್ನು ಬಿಡಿಸಿ ಬರೆಯುವ ಬಯಕೆ ಅವನದು. ಅದಕ್ಕಾಗಿ ಆ ಜಗದೀಶನು ಮೊದಲು ನಿರ್ಮಿಸಿದ್ದು ನೀರು. ಆ ಜಲರಾಶಿಯಲ್ಲಿ ಭಗವಂತನು ಪ್ರಪಂಚದ ಬೀಜವನ್ನು ಇರಿಸಿದನು. ಆ ಬೀಜವೇ ಸಾವಿರ ವರ್ಷಗಳ ತರುವಾಯ ಒಂದು ಚಿನ್ನದ ಮೊಟ್ಟೆಯಾಯಿತು. ಹತ್ತು ಸಾವಿರ ಸೂರ್ಯರಷ್ಟಿತ್ತು ಆ ಮಿಸುನಿಮೊಟ್ಟೆಯ ಕಳಕಳಿಸುವ ಕಾಂತಿ. ಈ ಪ್ರಚಂಡ ಅಂಡದ ಒಳಗೇ ಪ್ರವೇಶಿಸಿ, ಅದರ ತುಂಬ ವ್ಯಾಪಿಸಿದ, **'ವಿಷ್ಣು'** ಎನಿಸಿದ ಆ ಪರಮಾತ್ಮ. ಈ ಬ್ರಹ್ಮಾಂಡದ ಅಂತರ್ಭಾಗದಲ್ಲಿ ಮೊಟ್ಟಮೊದಲು ಪ್ರವೇಶಿಸಿ, ಸೂರ್ಯ ಮಂಡಲವನ್ನು ರಚಿಸಿ, ತಾನೂ ಸೂರ್ಯ ಎನಿಸಿದ.

ಸವಿತೃಮಂಡಲ ಮಧ್ಯವರ್ತಿಯಾದ ಆ ನಾರಾಯಣನಿಗೆ **ಆದಿತ್ಯ** ಎಂದು ಹೆಸರು. ಪ್ರಪಂಚಕ್ಕೆಲ್ಲ ಅವನೇ ಆದಿಭೂತಕಾರಣ. ಆ ಭಗವಂತನ ಮುಖ್ಯ ಅಧಿಷ್ಠಾನವೆಂದರೆ ಅಪರಬ್ರಹ್ಮ. ಬ್ರಹ್ಮ ಶಬ್ದಕ್ಕೆ ಮುಖ್ಯ ಅರ್ಥ ಗುಣ ಪರಿಪೂರ್ಣ

ನಾರಾಯಣ. ವೇದರಾಶಿಗೂ ಬ್ರಹ್ಮ ಎಂದು ಹೆಸರಿದೆ. ಮುಖದಿಂದ ಸಂತತವೂ ವೇದೋಚ್ಚಾರವನ್ನು ಮಾಡುತ್ತಲಿರುವುದರಿಂದ ಅವನಿಗೆ ಬ್ರಹ್ಮ ಎಂದೇ ಹೆಸರಾಯಿತು. ಆ ಪರಬ್ರಹ್ಮನೇ ಮೊಟ್ಟಮೊದಲು ಬ್ರಹ್ಮವನ್ನು ನಿರ್ಮಿಸಿದನು. ಇವನು ಭಗವದುಪದಿಷ್ಟವಾದ ವೇದರೂಪ ಬ್ರಹ್ಮವನ್ನು ನಿರಂತರವೂ ಪಠಿಸುವದರಿಂದಲೂ, ಪರಬ್ರಹ್ಮನಾದ ಪರಮಾತ್ಮನ ಮುಖ್ಯ ಅಧಿಷ್ಠಾನಭೂತ ನಾದುದರಿಂದಲೂ, **ಬ್ರಹ್ಮ** ಎಂದೇ ಹೆಸರಾದನು. ಇವನು ಅಪರಬ್ರಹ್ಮ. ಅಥವಾ ಚತುರ್ಮುಖ **ಬ್ರಹ್ಮ** ಎಂದು ಕರೆಯಲ್ಪಡುವನು. ಈ ಚತುರ್ಮುಖ ಬ್ರಹ್ಮನಲ್ಲಿ ನಿಂತು ಆ ಪೂರ್ಣಬ್ರಹ್ಮ ಅಥವಾ ಪರಬ್ರಹ್ಮನು ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುವನು. ನೀರಿನಲ್ಲಿ ತೇಲುವ ಆ ಬಂಗಾರದ ಮೊಟ್ಟೆಯನ್ನು ಬ್ರಹ್ಮನು ಎರಡು ಭಾಗವನ್ನಾಗಿ ಮಾಡಿದನು. ಮೇಲ್ಭಾಗವೇ ಸ್ವರ್ಗ. ಕೆಳಭಾಗವೇ ಭೂಮಿ. ನಡುವಿನದೇ ಅಂತರಿಕ್ಷಲೋಕ. ಹಾಗೂ ದಶದಿಕ್ಕುಗಳು.

ಮೇರು ಮೊದಲಾದ ಪರ್ವತಗಳು ಆ ಮೊಟ್ಟೆಯ ಗರ್ಭಕೋಶ. ಮಿಂಚಿನ ಗೊಂಚಲುಗಳಿಂದ ಮಿನುಗುವ ಮೇಘಮಂಡಲವು ಅದರ ಗರ್ಭದ ಆವರಣ. ಮುಂದೆ ಆ ಮೊಟ್ಟೆಯಲ್ಲಿಯೇ ನದಿಗಳೂ, ಪಿತೃಗಳೂ, ಮನ್ವಂತರದ ಅಧಿಪತಿಗಳೂ ಹುಟ್ಟಿದರು. ಈ ಸಪ್ತಸಾಗರಗಳು ಆ ಅಂಡದೊಳಗಿನ ನೀರು ಒಂದೆಡೆ ಶೇಖರಿತವಾಗಿಯೇ ರೂಪುಗೊಂಡಿವೆ. ಹಾಲಿನಕಡಲು. ಉಪ್ಪಿನಸಮುದ್ರ, ಶೆರೆಯಶರಧಿ, ತುಪ್ಪದಸಿಂಧು, ರತ್ನಾಕರ ಮುಂತಾದವುಗಳ ಉತ್ಪತ್ತಿಯೂ ಅಂತೆಯೇ ಅಲ್ಲಿಂದಲೇ. ಈ ಪ್ರಪಂಚವನ್ನೆಲ್ಲ ತನ್ನ ಕುಶಲತೆಯ ಕುಂಚದಿಂದ ಅರಳಿಸಿ ಜಗಚ್ಚಿತ್ರವನ್ನು ರೇಖಿಸುವುದಕ್ಕಾಗಿಯೇ ಭಗವಂತ ಬ್ರಹ್ಮನಾದ. ನಾಕುಮುಖದ ಕಮಲದ ಕೂಸಿನಲ್ಲಿ ತಾನೇ ಬ್ರಹ್ಮಶಬ್ದವಾಚ್ಯನಾಗಿ ನಿಂತುಕೊಂಡ. ಆ ಬ್ರಹ್ಮನ ತೇಜಸ್ಸಿನಿಂದಲೇ ರವಿಯ ಉದಯ. ಮೃತವಾದ ಅಂಡ ಅಥವಾ ಮೊಟ್ಟೆಯಲ್ಲಿ ಮೊಟ್ಟಮೊದಲು ಹುಟ್ಟಿಬಂದುದರಿಂದ ಅವನಿಗೆ **ಮಾರ್ತಂಡ** ಎಂದು ಹೆಸರು. ಲೋಕಸೃಷ್ಟಿಗಾಗಿ ಪರಬ್ರಹ್ಮನಿಂದ ನಿಯುಕ್ತನಾದ ಈ ನಾಲ್ಮೊಗದ ಬ್ರಹ್ಮ ರಜೋರೂಪಿ. ದೇವ, ಮಾನವ, ದಾನವ ಸಹಿತ ಈ ವಿಶ್ವಕ್ಕೆಲ್ಲ ಆ ಬ್ರಹ್ಮನೇ ರೂಪದರ್ಶಿ. ಪ್ರಥಮ ನಿರ್ಮಾತಾರ. ಈ ಜಗತ್‌ಸೃಷ್ಟಾರನಿಗೆ ಲೋಕಪಿತಾಮಹ ಎಂದೂ ಕರೆಯುವರು. ರಜೋಗುಣಮಯನಾದ ಈ ಬ್ರಹ್ಮ ಭಗವತ್ಸೃಷ್ಟಿಯಲ್ಲಿ ಒಂದು ಮಹಾಚೇತನ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎರಡನೇ ಅಧ್ಯಾಯ ಮುಗಿದುದು*

—o—

**ಮನುಃ ಉವಾಚ**

**ಚತುರ್ಮುಖತ್ವಮಗಮತ್ ಕಸ್ಮಾಲ್ಲೋಕ ಪಿತಾಮಹಃ**
**ಕಥಂ ತು ಲೋಕಾನಸೃಜತ್ ಬ್ರಹ್ಮಾ ಬ್ರಹ್ಮವಿದಾಂ ವರಃ ॥**

**ಮನು**:-ಲೋಕಪಿತಾಮಹನಾದ ಈ ಬ್ರಹ್ಮನಿಗೆ ಮುಖ ನಾಲ್ಕು ಏಕೆ? ಪರಬ್ರಹ್ಮನನ್ನು ಬಲ್ಲಿದರಲ್ಲಿ ಶ್ರೇಷ್ಠನಾದ ಅವನು ಲೋಕಗಳನ್ನು ನಿರ್ಮಿಸಿದುದು ಎಂತು ?

**ಮತ್ಸ್ಯ ಉವಾಚ**

**ತಪಶ್ಚಚಾರ ಪ್ರಥಮಮಮರಾಣಾಂ ಪಿತಾಮಹಃ ॥**
**ಆವಿರ್ಭೂತಾಸ್ತತೋ ವೇದಾಸ್ಸಾಂಗೋಪಾಂಗ ಪದ ಕ್ರಮಾಃ**

ದೇವಾಧಿದೇವತೆಗಳಿಗೂ ಕೂಡ ಪಿತಾಮಹನಾದ, ಆ ಬ್ರಹ್ಮನು ಮೊಟ್ಟಮೊದಲು ಶ್ರೀ ಹರಿಯನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ತಪೋನಿರತನಾದ ಆ ಚತುರ್ಮುಖನ ಮುಖಗಳಿಂದ ವೇದವೇದಾಂಗಗಳು ಪ್ರಕಟವಾದವು. ಅವುಗಳ ಉಪಾಂಗಗಳಿಗೂ, ಪದಕ್ರಮಗಳಿಗೂ, ಆ ವೇದಗಳೊಟ್ಟಿಗೇ ಆವಿರ್ಭಾವ.

ಅಪೌರುಷೇಯವಾದ ಸಾಂಗವೇದಗಳ ಪ್ರಥಮ ಆವಿರ್ಭಾವಕ ಬ್ರಹ್ಮದೇವರು.*

ವೇದಗಳ ಅನಂತರ ಬ್ರಹ್ಮದೇವರು ಪುರಾಣಗಳನ್ನು ಸ್ಮರಣೆಗೆ ತಂದುಕೊಂಡರು. ಇವು ಸರ್ವಶಾಸ್ತ್ರಗಳಿಗೂ ಮೂಲ. ಪುರಾಣರೂಪವಾದ ಈ ಶಾಶ್ವತ ಶಬ್ದರಾಶಿಯು ನೂರಾರು ಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿದೆ. ಅಷ್ಟೇ ಪುಣ್ಯಪ್ರದವೂ ಅಹುದು. ಪುರಾಣಗಳ ಅನಂತರವೇ ಬ್ರಹ್ಮದೇವರ ಮುಖಗಳಿಂದ ವೇದಗಳ ಆವಿಷ್ಕಾರ. ತದನಂತರ ಕರ್ಮಕಾಂಡ ಪ್ರತಿಪಾದಕವಾದ ಪೂರ್ವಮೀಮಾಂಸಾ, ಜ್ಞಾನಕಾಂಡವನ್ನು ಪ್ರತಿಪಾದಿಸುವ ಉತ್ತರಮೀಮಾಂಸಾ. ಹೀಗೆ ಎರಡು ಬಗೆಯಾದ ಮೀಮಾಂಸಾಶಾಸ್ತ್ರದ ಉತ್ಪತ್ತಿ. ಇದರ ನಂತರ

---

*ವೇದ ನಾಲ್ಕು, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ ಎಂದು. ವೇದಾಂಗಗಳು ಆರು. ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ. ಪುರಾಣ ಧರ್ಮಶಾಸ್ತ್ರ, ನ್ಯಾಯಶಾಸ್ತ್ರ, ಮಿಮಾಂಸಾಶಾಸ್ತ್ರ ಇವು ನಾಲ್ಕು ವೇದದ ಉಪಾಂಗ ಎನಿಸುವವು. ಅರ್ಥಕ್ಕೆ ಅನುಸಾರವಾಗಿ ಸಂಹಿತಾರೂಪ ವೇದ ಮಂತ್ರಗಳ ಪದವಿಭಾಗಕ್ಕೆ ' ಪದ ' ಎಂದೂ, ವಿಶಿಷ್ಟ ರೀತಿಯ ಆಮಂತ್ರಗಳ ಆವೃತ್ತಿಮಾಡುವ ರೀತಿಗೆ ಪದ್ಧತಿಗೆ ಎಂದೂ ಕರೆಯುವರು.

ತರ್ಕಶಾಸ್ತ್ರದಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ ಇವು ಎಂಟು ನೈಯಾಯಿಕರ ಅಷ್ಟಪ್ರಮಾಣಗಳು.

ವೇದಾಭ್ಯಾಸದಲ್ಲಿ ಬ್ರಹ್ಮ ತೊಡಗಿದ್ದಾನೆ. ಅವನಿಗೆ ಒಮ್ಮೆಲೆ ಬಯಕೆ ಸೃಷ್ಟಿ ಮಾಡಬೇಕೆಂದು. ಮಕ್ಕಳನ್ನು ಹುಟ್ಟಿಸಬೇಕು, ಎಂದು ಮನಸ್ಸಿನಲ್ಲಿ ಹುಟ್ಟುವದೇ ತಡ, ಹತ್ತು ಜನ ಹುಟ್ಟಿಬಿಟ್ಟರು. ಅವರೇ ಬ್ರಹ್ಮನ ಮಾನಸಪುತ್ರರು. ಅವರಲ್ಲಿ ಮರೀಚಿಮುನಿ ಬ್ರಹ್ಮನ ಚೊಚ್ಚಿಲ ಮಗ. ಮರುಚಲ ಮಗನೇ ಅತ್ರಿ, ಮೂರನೆಯವ ಅಂಗಿರಸ, ಪುಲಸ್ತ್ಯನು ಚತುಮುರ್ಖನ ಚತುರ್ಥ ಕುಮಾರ. ಅನಂತರ ಪುಲಹ, ಪ್ರಚೇತಸ, ಭೃಗು, ವಶಿಷ್ಠ, ನಾರದ ಎಂದು ಹೆಸರಾದ ಈ ಹತ್ತು ಜನ ಬ್ರಹ್ಮರ್ಷಿಗಳೂ ಬ್ರಹ್ಮದೇವರ ಮಾನಸ ಪುತ್ರರು. ಇವರಂತೆಯೇ ತಾಯಿ ಇಲ್ಲದೇ ಬ್ರಹ್ಮನೇ ತಂದೆಯಾಗಿ ಇನ್ನೂ ಕೆಲವು ಮುನಿಗಳು ಉದಿಸಿ ಬಂದರು. ಹಿಂದಿನ ಹತ್ತು ಮುನಿಗಳು ಬ್ರಹ್ಮನ ಮನಸ್ಸಿನಿಂದ ಹುಟ್ಟಿದಂತೆ ಮುಂದಿನವರು ಅವನ ದೇಹದಿಂದ ಜನಿಸಿ ಬಂದರು.

ಬ್ರಹ್ಮದೇವನ ಬಲಗೈ ಹೆಬ್ಬೆರಳಿನಿಂದ ದಕ್ಷ ಪ್ರಜಾಪತಿಯು ಹುಟ್ಟಿದನು. ಎದೆಯಿಂದ ಧರ್ಮ, ಹುಬ್ಬಿನ ಮಧ್ಯದಿಂದ ಕೋಪ, ಹೃದಯದಿಂದ ಕಾಮ, ತುಟಿಯಿಂದ ಲೋಭ, ಬುದ್ಧಿಯಿಂದ ಮೋಹ. ಅಹಂಕಾರದಿಂದ ಮನ, ಇದರಂತೆ ಕೊರಳಿನಿಂದ ಸಂತೋಷ ಕಣ್ಣಿನಿಂದ ಮೃತ್ಯು. ಅಂಗೈ ಮಧ್ಯದಿಂದ ಭರತ, ಹೀಗೆ ಒಂಬತ್ತು ಜನ ಗಂಡು ಮಕ್ಕಳು ಬ್ರಹ್ಮದೇವರ ದೈಹಿಕ ಸಂತತಿ. ಹತ್ತನೆಯವಳೇ ಹೆಣ್ಣು ಮಗಳು. ಅವಳ ಹೆಸರು ಅಂಗಜಾ. ಮತ್ಸ್ಯಾವತಾರಿಯಾದ ಭಗವಂತನ ಈ ಸೃಷ್ಟಿ ನಿರೂಪಣೆಯನ್ನು ಕೇಳಿ ಮನುರಾಜನಿಗೆ ಸಂಶಯ ಬಂದಿತು. ಅವನು ಪ್ರಶ್ನೆ ಮಾಡಿದ.

''ಭಗವನ್, ಬ್ರಹ್ಮದೇವರ ಬುದ್ಧಿಯಿಂದ ಮೋಹ ಜನಿಸಿತು. ಅಹಂಕಾರದಿಂದ ಮನಸ್ಸು ಹುಟ್ಟಿತು. ಎಂದು ಹೇಳಿದಿರಷ್ಟೇ ! ಅಹಂಕಾರಕ್ಕೆ ಮಗನು ಹುಟ್ಟಿದನು ಎಂದರೆ ಏನು ? ಬುದ್ಧಿಯಿಂದ ಮೋಹವು ಜನಿಸಿತು ಇದರ ಅರ್ಥವೇನು ?''

**ಮತ್ಸ್ಯ :-** ಸತ್ವ, ರಜಸ್, ತಮಸ್, ಎಂದು ಮೂರು ಗುಣಗಳು ಇರುತ್ತವೆ. ಇವುಗಳನ್ನು ಗುಣತ್ರಯ ಎಂದು ಕರೆಯುವರು. ಈ ಮೂರು ಗುಣಗಳ ಸಮಾನ ಸ್ಥಿತಿಯೇ ಪ್ರಕೃತಿ ಎಂದು ಹೇಳಲ್ಪಟ್ಟಿದೆ. ಈ ಪ್ರಕೃತಿಯನ್ನು ಕೆಲವರು ಪ್ರಧಾನ ಎಂದು ಕರೆದರೆ ಹಲವರು ಅವ್ಯಕ್ತ ಎಂದು ಇದನ್ನು ಹೆಸರಿಸುತ್ತಾರೆ. ಈ ಪ್ರಕೃತಿಯು ವಿಕಾರವನ್ನು ಹೊಂದಿದ ಕೂಡಲೇ ಸೃಷ್ಟಿಗೆ ಮೊದಲಾಗುತ್ತದೆ. ಸತ್ವ, ರಜ, ತಮ ಈ ಮೂರು ಗುಣಗಳು ತಮ್ಮ ಸಾಮ್ಯಸ್ಥಿತಿಯನ್ನು ಬಿಟ್ಟಾಗ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ದೇವತೆಗಳು ಹುಟ್ಟಿದರು. ಒಂದೇ ಭಗವನ್‌ಮೂರ್ತಿಯ ಮೂರು ಭಾಗವಾಯಿತು.

ವಿಕಾರವನ್ನೈದಿದ ಪ್ರಧಾನತತ್ವದಿಂದ ''ಮಹತ್'' ಎಂಬ ತತ್ವವು ಹುಟ್ಟಿತು. ಇದರಿಂದಲೇ ದೊಡ್ಡ ವ್ಯಕ್ತಿಗಳಿಗೆ ''ಮಹಾನ್'' ಎಂಬ ಹೆಸರು ಬರುತ್ತದೆ. ಈ ಮಹತ್‌ತತ್ವದಿಂದ ಅಹಂಕಾರದ ಉತ್ಪತ್ತಿ. ಇದರಿಂದಲೇ ಅಭಿಮಾನದ ಅಭಿವೃದ್ಧಿ. ಅದರಿಂದ ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ ಹುಟ್ಟುವವು.

ಕಿವಿ, ಕಣ್ಣು, ನಾಲಿಗೆ, ಚರ್ಮ, ಮೂಗು ಇವು ಪಂಚಜ್ಞಾನೇಂದ್ರಿಯಗಳು. ಗುದ, ಗುಹ್ಯ, ಕೈ, ಕಾಲು, ಮಾತು ಇವು ಐದು ಕರ್ಮೇಂದ್ರಿಯಗಳು. ಜ್ಞಾನೇಂದ್ರಿಯಗಳಾದ ಕಿವಿಯಿಂದ ಶಬ್ದ, ಕಣ್ಣಿನಿಂದ ರೂಪ, ನಾಲಿಗೆಯಿಂದ ರಸ, ಚರ್ಮದಿಂದ ಸ್ಪರ್ಶ, ಮೂಗಿನಿಂದ ವಾಸನೆ ಇವುಗಳ ಜ್ಞಾನ ಆಗುವುದು. ಕರ್ಮೇಂದ್ರಿಯಗಳಾದ ಗುದದಿಂದ ದೇಹದ ಕೊಳೆಯನ್ನು ಹೊರಗೆ ದೂಡಲು ಬರುವುದು. ಗುಹ್ಯೇಂದ್ರಿಯದಿಂದ ಕಾಮವಿಲಾಸದ ಆನಂದವನ್ನು ಪಡೆಯಲಾಗುವುದು. ಕೈಗಳಿಂದ ಬೇಕಾದ ಕೆಲಸಮಾಡಲು ಅನುಕೂಲ ವಾಗಬಹುದು. ಕಾಲುಗಳಿಂಧ ನಡೆದಾಡುವುದು, ನಾಲಿಗೆಯಿಂದ ಮಾತನಾಡುವ ಕಾರ್ಯವು ನಡೆಯುವುದು. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಎಂದು ಇಂದ್ರಿಯಗಳು ಹತ್ತು. ಇವಲ್ಲದೇ ಹನ್ನೊಂದನೆಯ ಇಂದ್ರಿಯವೂ ಒಂದಿದೆ. ಅದೇ ಮನಸ್ಸು. ಈ ಮನಸ್ಸು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಗುಣಗಳಿಂದ ಒಡಗೂಡಿದೆ. ಈ ಎಲ್ಲ ಇಂದ್ರಿಯಗಳೂ, ಅವಯವಗಳೂ, ಮನಸ್ಸೂ ಸೂಕ್ಷ್ಮವಾಗಿವೆ. ಸ್ವಚ್ಛಂದವೂ ಆಗಿವೆ. ಚಂಚಲವೂ ಆಗಿವೆ. ಆದುದರಿಂದಲೇ ಪಂಡಿತರು ಇವುಗಳನ್ನು ತಮ್ಮ ಅಂಕೆಯಲ್ಲಿ ಇಟ್ಟುಕೊಳ್ಳಲು ಬಯಸುತ್ತಾರೆ. ಈ ಎಲ್ಲ ಇಂದ್ರಿಯಗಳೂ ತನ್ಮಾತ್ರಗಳದೇ ದೇಹವನ್ನು ಆಶ್ರಯಿಸಿಕೊಂಡು ಇರುತ್ತವೆ. ಆಶ್ರಯಸ್ಥಾನವಾದುದರಿಂದಲೇ ಇದಕ್ಕೆ **ಶರೀರ** ಎಂದು ಹೆಸರು. ಈ ಶರೀರದಲ್ಲಿ ಇದ್ದುದರಿಂದಲೇ ಜೀವನು **"ಶರೀರಿ"** ಎಂದು ಬಲ್ಲವರಿಂದ ಹೆಸರಿಸಲ್ಪಟ್ಟಿದ್ದಾನೆ.

ಸಾತ್ವಿಕಾಹಂಕಾರದಿಂದ ಮನಸ್ಸು ಹುಟ್ಟಿದ ಬಳಿಕ, ಸೃಷ್ಟಿಕಾರ್ಯವನ್ನು ಮುಂದುವರಿಸಲೆಳಸಿದ ಆ ಬ್ರಹ್ಮ. ತಾಮಸಾಹಂಕಾರದಿಂದ ಶಬ್ದ ತನ್ಮಾತ್ರವು ಜನಿಸಿತು. ಶಬ್ದ ತನ್ಮಾತ್ರದಿಂದ ಆಕಾಶವು ಹುಟ್ಟಿತು. ಇದರ ಗುಣ ಶಬ್ದ. ಆಕಾಶವು ವಿಕಾರ ಹೊಂದಿ ವಾಯು ಜನಿಸಿತು. ಇದರಲ್ಲಿ ಶಬ್ದಸ್ಪರ್ಶಗಳೆಂಬ ಎರಡು ಗುಣಗಳಿವೆ. ಸ್ಪರ್ಶ ತನ್ಮಾತ್ರವುಳ್ಳ ವಾಯುವಿನಿಂದ ತೇಜಸ್ಸು ಉದ್ಭವಿಸಿತು. ಇದಕ್ಕೆ ಶಬ್ದ, ಸ್ಪರ್ಶ, ರೂಪಗಳೆಂಬ ಮೂರು ಗುಣಗಳುಂಟು. ಇದು ರೂಪ ತನ್ಮಾತ್ರಕವಾದುದು. ಈ ತೇಜಸ್ಸಿನ ವಿಕಾರದಿಂದ ಶಬ್ದ, ಸ್ಪರ್ಶ, ರೂಪ, ರಸಗಳೆಂಬ ಚತುರ್ಗುಣವುಳ್ಳ ರಸತನ್ಮಾತ್ರವಾದ ಜಲವು ಜನಿಸಿತು. ಇದರಿಂದ ಗಂಧತನ್ಮಾತ್ರವೂ ಅದರಿಂದ ಶಬ್ದಾದಿ ಪಂಚಗುಣಾತ್ಮಕವಾದ ಭೂಮಿಯೂ ಉತ್ಪನ್ನವಾದವು. ಇದರ ಮುಖ್ಯ ಗುಣವು ಗಂಧ. ಹೀಗೆ ಜಗತ್ ಸೃಷ್ಟಿಗೆ ಕಾರಣವಾದ ಆ ಬುದ್ಧಿ ಅಥವಾ ಮಹತ್ತತ್ವವೇ ಶ್ರೇಷ್ಠವಾದುದು. ಮೇಲೆ ಹೇಳಿದ ಇಪ್ಪತ್ನಾಲ್ಕು ತತ್ವಗಳಿಗಿಂತ ಬೇರೆಯವನಾಗಿ ಎಂದರೆ ಇಪ್ಪತ್ತೈದನೆಯವನಾಗಿರುವ ಜೀವನು, ಈ ಇಂದ್ರಿಯಾದಿಗಳಿಂದ ಲಬ್ಧವಾದ ಸುಖದುಃಖಗಳನ್ನು ಅನುಭವಿಸುತ್ತಾನೆ. ಆ ಜೀವಾತ್ಮನೂ ಕೂಡ ಇಪ್ಪತ್ತಾರನೆಯ ಮುಖ್ಯತತ್ವ ಎನಿಸಿದ ಈಶ್ವರನ ಇಚ್ಛಾಧೀನನೆಂದು ಜ್ಞಾನಿಗಳು ಹೇಳುತ್ತಾರೆ. ಹೀಗೆ ಮನುಷ್ಯ ಶರೀರವು ಇಪ್ಪತ್ತಾರು ತತ್ವಗಳ ನೆಲೆಯೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿವೆ. ಕಪಿಲಾದಿ ಮಹರ್ಷಿಗಳು ಸಂಖ್ಯಾರೂಪಗಳಾದುದರಿಂದ ಈ ತತ್ವಗಳನ್ನು ಸಾಂಖ್ಯವೆನ್ನುತ್ತಾರೆ. ಬ್ರಹ್ಮನು ಜಗತ್ತನ್ನು ಈ ತತ್ವರೂಪವಾಗಿ ನಿರ್ಮಿಸಿದನು.

ಅನಂತರ ಲೋಕಸೃಷ್ಟಾರನಾದ ಆ ವಿಧಾತನು, ಪ್ರಪಂಚದ ಸೃಷ್ಟಿಗಾಗಿ ಏಕಾಂತಚಿತ್ತದಿಂದ ಸವಿತೃನಾಮಕನಾದ ಭಗವಂತನ ರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿದನು. ಹೀಗೆ ಜಪನಿರತನಾದ ಆ ವಿಧಿಯ ನಿರ್ಮಲವಾದ ದೇಹವನ್ನು ಭೇದಿಸಿ ಸಾವಿತ್ರಿಯ ರೂಪವು ಹೊರಬಂದಿತು. ಅದು ಅರ್ಧ ಹೆಣ್ಣು, ಅರ್ಧ ಗಂಡು. ಅದಕ್ಕೆ ಚತುರೂಪಾ ಎಂದೂ ಸಾವಿತ್ರಿ ಎಂದೂ ಪ್ರಸಿದ್ಧಿ. ಅನಂತರ ಗಾಯತ್ರಿ, ಸರಸ್ವತಿಯರನ್ನು ಬ್ರಹ್ಮದೇವನು ನಿರ್ಮಿಸಿದನು. ಚತುರ್ಮುಖನ ದೇಹದಿಂದ ಜನಿಸಿದ ಸರಸ್ವತಿಯ ಸೌಂದರ್ಯ ಅಸಾಮಾನ್ಯ. ಅವಳ ಚೆಲುವು ಚಾರಿಮೆಯನ್ನು ಕಂಡು ಬ್ರಹ್ಮನ ಮನಸ್ಸು ಚಂಚಲವಾಯಿತು. ಕಾಮಬಾಣಗಳಿಂದ ಅವನ ಹೃದಯವು ತೊಳಲಿತು. ಓಹ ! ಎಂಥ ಚೆಲುವು ? ಏನು ರೂಪ ? ಎಂದು ಪ್ರಜಾಪತಿಯ ಉದ್ಗಾರ. ಅದನ್ನು ನೋಡಿದ ಬ್ರಹ್ಮನ ಮಾಸನಪುತ್ರರೆಲ್ಲ ಬೆಕ್ಕಸ ಬೆರಗಾದರು.

''ಈ ನಮ್ಮ ತಂಗಿಯು ಬ್ರಹ್ಮದೇವನ ಮಗಳಲ್ಲವೆ ? ಮಗಳ ಅಂಗಸೌಷ್ಠವವನ್ನು ಕಂಡು ವಿಧಾತನಿಗೆ ಇಂಥ ವಿಕಾರವೇಕೆ ? '' ಎಂದು ಆಶ್ಚರ್ಯ ತುಂಬಿ ಕೇಳಿದರು. ಆದರೆ ಆ ಪರಮೇಷ್ಠಿಗೆ ಇತ್ತ ಲಕ್ಷ್ಯವೆಲ್ಲಿ ? ತನ್ನ ಹೊಟ್ಟೆಯಿಂದ ಹುಟ್ಟಿದ ಶಾರದೆಯ ತುಂಬುದಾವರೆಯ ಮುಖವನ್ನು ನಿಟ್ಟಿಸಿ ನೋಡುತ್ತಿದ್ದನು.

''ಅಬ್ಬ ! ಎಂಥ ಸೌಂದರ್ಯ ಏನು ಚೆಲುವು '' ಮತ್ತೆ ಮತ್ತೆ ಇದೇ ಉದ್ಗಾರ. ಅನಂತರ ಸರಸ್ವತಿಯು ತನ್ನನ್ನು ಹುಟ್ಟಿಸಿದ ವಿಧಿಯ ಬಳಿಗೆ ಬಂದು ಭಕ್ತಿಯಿಂದ ಬಾಗಿ ನಿಂತಳು. ಮತ್ತೆ ಬ್ರಹ್ಮನು ಅವಳನ್ನು ಆಶೆಯಿಂದ ಅವಲೋಕಿಸಿದನು. ಸರಸ್ವತಿಯು ತನ್ನ ತಂದೆಗೆ ಪ್ರದಕ್ಷಿಣೆ ಹಾಕತೊಡಗಿದಳು. ಪ್ರದಕ್ಷಿಣೆಗಾಗಿ, ಅವಳು ತನ್ನ ಹಿಂದೆ, ಮುಂದೆ, ಎಡ, ಬಲ ಬದಿಗೆ ಒಲಿದು ಅಲೆಯತೊಡಗಲು ಬ್ರಹ್ಮನಿಗೆ ಚಿಂತೆಯಾಯಿತು. ಸರಸ್ವತಿಯು ಪ್ರದಕ್ಷಿಣೆ ಹಾಕುವಾಗ ಇದ್ದಲ್ಲಿ ಅವಳನ್ನು ನೋಡಬೇಕೆಂದು ಕಣ್ಣಿನ ಚಪಲ. ಆದರೆ ವಸಿಷ್ಠ ಮೊದಲಾದ ಮಕ್ಕಳು ಎದುರೇ ಇದ್ದುದರಿಂದ ಹೊರಳಿ ನೋಡಲು ನಾಚಿಕೆ. ಹೀಗಾಗಿ ಇಚ್ಛೆಯಿದ್ದರೂ ತನ್ನ ಬಲಬದಿಗೆ ಬಂದ ಶಾರದೆಯನ್ನು ನೋಡಲು ಮುಖವನ್ನು ತಿರುಗಿಸದೇ ಹಾಗೇ ಕುಳಿತನು. ಆದರೆ ಪಕ್ಕದಲ್ಲಿ ನಿಂತ ಅವಳನ್ನು ಕಾಣಬೇಕೆಂಬ ಹಂಬಲವು ಮಾತ್ರ ಹೃದಯವನ್ನು ತುಡಿಯುತ್ತಲೇ ಇತ್ತು. ಆ ಇಚ್ಛಾಶಕ್ತಿಯ ಪ್ರಭಾವದಿಂದ ಅವರ ಮುಖದ ಬಲಬದಿಗೆ ಮತ್ತೂ ಒಂದು ಮುಖವು ಚಿಗಿಯಿತು. ಅದರ ಗಲ್ಲಗಳು ಬೆಳ್ಳಗಿದ್ದವು. ಆನಂತರ ಸರಸ್ವತಿಯು ಪ್ರದಕ್ಷಿಣೆಯ ಕ್ರಮದಿಂದ ಬ್ರಹ್ಮದೇವರ ಹಿಂಬದಿಯಲ್ಲಿ ಬಂದಾಗ ಅಲ್ಲಿಯೂ ಒಂದು ಮುಖವು ಕಾಣಿಸಿಕೊಂಡಿತು. ಮತ್ತೆ ಅವಳು ಬ್ರಹ್ಮನ ಎಡಕ್ಕೆ ಪ್ರದಕ್ಷಿಣೆಗಾಗಿ ಹೊರಳಿದಾಗ ಅವಳನ್ನು ಕಾಣುವ ಕುತೂಹಲವು ಬ್ರಹ್ಮನಿಗೆ ಬಲವತ್ತರವಾದಾಗ, ಆ ಎಡಬದಿಯಲ್ಲಿಯೂ ಒಂದು ಮೋರೆ ಉದಯಿಸಿತು. ಹೀಗೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಅರ್ಥಾತ್ ಮುಂದೆ ಹಿಂದೆ ಎಡ ಬಲ ಹೀಗೆ ನಾಕೂ ನಿಟ್ಟಿಗೆ ಒಂದೊಂದು ಮುಖಗಳು ಚಿಗಿತವು. ಅಂದಿನಿಂದ ಪ್ರಜಾಪತಿಯು ಚತುರ್ಮುಖನಾದನು. ಅನಂತರ ಪಿತಾಮಹನಾದ ಬ್ರಹ್ಮನಿಗೆ ನಮಸ್ಕಾರಮಾಡಿ

ಮೇಲಕ್ಕೆ ಏಳಲಿರುವ, ಆ ಸರಸ್ವತಿಯನ್ನು ಮೇಲೆ ಮುಖಮಾಡಿ ವಿಧಾತನು ನೋಡ ತೊಡಗಿದಾಗ, ಐದನೆಯ ಒಂದು ಮೇಲ್ಮುಖವೂ ಮೂಡಿಬಂದಿತು. ತನ್ನ ತಲೆಯ ಮೇಲು ಬದಿಯಲ್ಲಿ ರೂಪಗೊಂಡ ಈ ಮುಖವನ್ನು ಜಡೆಗಳಿಂದ ಮುಚ್ಚಿದನು. ಹೀಗೆ ತಾನೇ ಹುಟ್ಟಿಸಿದ ಮಗಳ ಮೋಹನಾಂಗ ಸೌಂದರ್ಯವನ್ನು ಕಂಡು ಕಾಮಪರವಶನಾಗಿ, ಕ್ರೀಡಾತುರತೆಯನ್ನು ತೋರಿಸಿದ್ದಕ್ಕಾಗಿ, ಬ್ರಹ್ಮನು ಸೃಷ್ಟಿಗಾಗಿ ಇಷ್ಟು ದಿನ ಮಾಡಿದ ತಪಸ್ಸೆಲ್ಲವೂ ಹಾಳಾಯಿತು.

ಅನಂತರ ಆ ಪ್ರಜಾಪತಿಯು ತನ್ನ ಮಕ್ಕಳಿಗೆ ''ದೇವ ದಾನವ ಮಾನವ ರೂಪ ಪ್ರಜೆಗಳನ್ನು ಎಲ್ಲೆಡೆಯಲ್ಲಿಯೂ ಸೃಷ್ಟಿಸಿರಿ.'' ಎಂದು ಆದೇಶ ಕೊಟ್ಟನು. ಪಿತಾಮಹನ ಆಣತಿಯಂತೆ ಅವನ ಮಕ್ಕಳಾದ ಮರೀಚಿ ಮೊದಲಾದ ಮಹಾಮುನಿಗಳೆಲ್ಲರೂ ಬಗೆಬಗೆಯ ಪ್ರಜಾಸೃಷ್ಟಿಯ ಕಾರ್ಯ ಕೈಕೊಂಡರು.

ಹೀಗೆ ಬ್ರಹ್ಮನ ಮಾನಸಪುತ್ರರಾದ ಮಹರ್ಷಿಗಳೆಲ್ಲರೂ ಸೃಷ್ಟಿ ಕಾರ್ಯಕ್ಕಾಗಿ ಅಲ್ಲಿಂದ ತೆರಳಿದ ಬಳಿಕ, ತನ್ನೆದುರು ನಮಸ್ಕರಿಸಿ ನಮ್ರಳಾಗಿ ನಿಂತ ಸುಂದರಿ, ಶಾರದಾ. ಸಾವಿತ್ರೀ ಅಥವಾ ಶತರೂಪೆಯನ್ನು, ಆ ಪ್ರಜಾಪತಿಯು ವಿಧಿಪೂರ್ವಕವಾಗಿ ವಿವಾಹವಾದನು. ಕಾಮಲೋಲುಪನಾಗಿ ಲಜ್ಜೆಯಿಂದ ತಲೆತಗ್ಗಿಸಿದ, ಶತರೂಪೆಯೊಡನೆ ಕಾಮಕೇಳಿಗೆ ಇಳಿದನು. ತಾನು ಕುಳಿತ ಕಮಲದ ಒಳಭಾಗವನ್ನೇ ಕ್ರೀಡಾಮಂದಿರವನ್ನಾಗಿ ಮಾಡಿಕೊಂಡನು. ದೇವಮಾನದ ನೂರುವರ್ಷಗಳವರೆಗೆ ಈ ಆದಿದಂಪತಿಗಳ ವಿಹಾರವು ಸಾಗಿತು. ಸಾಮಾನ್ಯರಾದ ಪ್ರಾಕೃತ ಜನರಂತಾಗಿತ್ತು ವಿಧಿಯ ಈ ವಾಮಾಚಾರ. ಹೀಗೆ ಎಷ್ಟೋ ಕಾಲ ಉರುಳಿದ ಬಳಿಕ ಆ ಶಾರದಾ ಶತರೂಪೆಯಿಂದ ಒಂದು ಮಗು ಜನಿಸಿತು. **ಸ್ವಾಯಂಭುವ** ಎಂದು ಹೆಸರು. ವಿರಾಟಯೆಂತಲೂ ಅವನನ್ನು ಕರೆಯುವದನ್ನು ಕೇಳಿದ್ದೇವೆ. ಸಾಮಾನ್ಯವಾಗಿ ಬ್ರಹ್ಮದೇವರ ಗುಣಗಳು ಇದ್ದುದರಿಂದ ಆದಿಪುರುಷ ಎಂದೂ ಅವನನ್ನು ಕರೆದರು. ಈ ಸ್ವಾಯಂಭುವ ಮನುವಿನ ವಂಶದಲ್ಲಿ ವ್ರತನಿಷ್ಠರಾದ ಬಹು ಜನರು ಜನಿಸಿದರು. ವೈರಾಗ್ಯ ಎಂದು ಅವರ ಹೆಸರು. ಇದರಂತೆ ಸ್ವಯಂಭೂ ಆದ ಬ್ರಹ್ಮದೇವರಿಗೆ ಈ ಶತರೂಪೆಯಲ್ಲಿ ಒಟ್ಟು ಹದಿನಾಲ್ಕು ಜನ ಮಕ್ಕಳು ಹುಟ್ಟಿದರು.

ಅವರ ಹೆಸರು (೧)ಸ್ವಾಯಂಭುವ (೨) ಸ್ವಾರೋಚಿಷ (೩) ಉತ್ತಮ (೪) ತಾಮಸ (೫) ರೈವತ (೬) ಚಾಕ್ಷುಷ (೭) ವೈವಸ್ವತ (೮) ಸಾವರ್ಣಿ (೯) ದಕ್ಷಸಾವರ್ಣಿ (೧೦) ಬ್ರಹ್ಮಸಾವರ್ಣಿ (೧೧) ಧರ್ಮಸಾವರ್ಣಿ (೧೨) ರುದ್ರಸಾವರ್ಣಿ (೧೩) ದೇವಸಾವರ್ಣಿ (೧೪) ಇಂದ್ರಸಾವರ್ಣಿ. ಹೀಗೆ ಹದಿನಾಲ್ಕು ಬ್ರಹ್ಮಪುತ್ರರು ಹಲವಾರು ಗುಣಗಳಲ್ಲಿ ಬ್ರಹ್ಮದೇವರಿಗೆ ಸಮಾನರಾಗಿರುವರು. ಒಬ್ಬೊಬ್ಬರು ಒಂದೊಂದು ಮನ್ವಂತರಕ್ಕೆ ಅಧಿಪತಿಗಳಾಗಿ ಆಳುವರು. ಆ ಹದಿನಾಲ್ಕು ಮನುಕುಮಾರರಲ್ಲಿ ನೀನು ಏಳನೆಯ ಮನು. ಇವರೆಲ್ಲರ ಆಳಿಕೆಯ ಅವಧಿಯು ಮನ್ವಂತರ ಎಂದು ಕರೆಯಲ್ಪಡುವುದು. ಈಗ ಇನ್ನು ಮುಂದೆ ನಡೆಯುತ್ತಲಿರುವುದು ವೈವಸ್ವತ ಮನ್ವಂತರ.

—o—

## ಮಾನಸಸೃಷ್ಟಿ, ಮೈಥುನಸೃಷ್ಟಿಗಳ ಪ್ರಾರಂಭ

## ಅಧ್ಯಾಯ - ೪

**ಮನುಃ ಉವಾಚ :**

**ಅಹೋ ಕಷ್ಟತರಂ ಚೈತದಂಗಜಾ ಗಮನಂ ವಿಭೋಃ ।**
**ಕಥಂ ನ ದೋಷಮಗಮತ್ ಕರ್ಮಣಾಽನೇನ ಪದ್ಮಭೂಃ ॥**

ಸ್ವಾಮಿ, ಇದೊಳ್ಳೇ ಕಷ್ಟಕ್ಕಿಟ್ಟಿತು. ಲೋಕಪಿತಾಮಹನು ತನ್ನ ಮಗಳನ್ನೇ ಕಾಮಿಸುವದೇ ! ಈ ಕಾಮ್ಯ ಗ್ರಾಮ್ಯ ಕೃತ್ಯದಿಂದ ಆ ಕಮಲಕುಮಾರನಾದ ವಿಧಿಗೆ ಏನೂ ದೋಷ ತಟ್ಟಲಿಲ್ಲವೇ ! ಅದರಂತೆ ಮುಂದೆ ಈ ಬ್ರಹ್ಮನ ಮಕ್ಕಳು, ಮೊಮ್ಮಕ್ಕಳಲ್ಲಿ ದೇಹಸಂಬಂಧವಾಗಿದೆ. ಇದಾದರೂ ಹೇಗೆ ಆಯಿತು. ಗೋತ್ರ ಒಂದಾದರೆ ಶರೀರಸಂಬಂಧವನ್ನು ಮಾಡಬಾರದು ಎಂದು ಶಾಸ್ತ್ರದ ಆದೇಶ. ಅಂದ ಬಳಿಕ ಒಂದು ತಂದೆಯ ಅರ್ಥಾತ್ ಬ್ರಹ್ಮದೇವನ ಮಕ್ಕಳಾದ ಮುನಿಮನುಜರೆಲ್ಲರೂ ಏಕಗೋತ್ರೋತ್ಪನ್ನರಾದುದರಿಂದ ವಿವಾಹ ಸಂಬಂಧವು ಆದುದಾದರೂ ಎಂತು ? ಮನುಮಹಾರಾಜನ ಈ ಪ್ರಶ್ನೆಗೆ ಮತ್ಸ್ಯರೂಪಿ ಭಗವಂತನು ಉತ್ತರಿಸಿದನು.

**ಮತ್ಸ್ಯ** :- ರಾಜನ್, ಭಗವಂತನು ರಜೋಗುಣದಿಂದ ರೂಪಿಸಿದ ಸೃಷ್ಟಿ ಎನಿಸಿದ ದಿವ್ಯಸೃಷ್ಟಿಯ, ಆ ಕಾಲದ ವ್ಯಕ್ತಿಗಳ, ಇಂದ್ರಿಯ ವ್ಯಾಪಾರಗಳ ರಹಸ್ಯವನ್ನು ನಮ್ಮ ಮತ್ತು ಜ್ಞಾನೇಂದ್ರಿಯಗಳು ತಿಳಿಯಲಾರವು. ಅವರ ಶರೀರಗಳೂ ಗೈಮೆಗಳೂ ಸಾಮಾನ್ಯ ಮಾನವರ ಇಂದ್ರಿಯಾತೀತ. ದಿವ್ಯಜ್ಞಾನ, ದಿವ್ಯತೇಜಸ್ಸು, ದಿವ್ಯತಪಸ್ಸುಗಳಿಂದ ರೂಪಗೊಂಡ ಆ ದೈವಿಕ ಸೃಷ್ಟಿಯ ಕ್ರಮಗಳು ಮಾನವೀಯ ಚರ್ಮ ಚಕ್ಷುಸ್ಸಿಗೆ ಗೋಚರವಾಗಲಾರವು. ಹಾವುಗಳ ಹೆಜ್ಜೆ ಹಾವುಗಳಿಗೇ ಗೊತ್ತು. ಮುಗಿಲಿನ ಮಾರ್ಗವನ್ನು ಹಕ್ಕಿಗಳೇ ಬಲ್ಲವು. ಅದರಂತೆ ದಿವ್ಯ ಪುರುಷರ ಚರಿತ್ರೆ ದೈವೀ ವ್ಯಕ್ತಿಗಳಿಗೆ ಮಾತ್ರ ಅರಿವಾಗುತ್ತದೆ. ದೇವತೆಗಳುಮಾಡುವ ಕಾರ್ಯ ಅಕಾರ್ಯಗಳಿಂದ ಅವರಿಗೆ ಪುಣ್ಯಾಪಾಪಗಳ ಲೇಪವಿಲ್ಲ. ಒಳಿತುಕೆಡುಕಗಳ ಸಂಭವವಿಲ್ಲ. ಆದುದರಿಂದ ಅದರ ಬಗ್ಗೆ ಮಾನವರು ತಲೆಕೆಡಿಸಿಕೊಳ್ಳುವ ಕಾರಣವಿಲ್ಲ. ಮಹಾಪುರುಷರ ಅಲೌಕಿಕ ಕಾರ್ಯಗಳ ಬಗೆಗೆ ಮನುಷ್ಯರು ವಿಚಾರಮಾಡುವದು ಒಳಿತಲ್ಲ. ಮೇಲಾಗಿ ಚತುರ್ಮುಖನು ಎಲ್ಲ ವೇದಗಳ ಅಧಿಷ್ಠಾನ. ಅವನ ದೇಹದಿಂದ ಜನಿಸಿದ ಸರಸ್ವತೀ ಶತರೂಪಾ ಅಥವಾ ಗಾಯತ್ರಿಯೂ ವೇದಾಭಿಮಾನಿನಿ. ಅವರ ಸಂಗಮ ವೇದವಿದ್ಯೆಯ ಮಿಲನದ ಸಂಕೇತ. ಮೂರ್ತವೇ ಇರಲಿ ಅಮೂರ್ತವೇ ಇರಲಿ. ಈ ಜೋಡಿಯು ಅರ್ಥಾತ್ ಸರಸ್ವತೀ ಬ್ರಹ್ಮದೇವರ ದ್ವಂದ್ವವು ವೇದಾಭಿಮಾನಿಗಳ ಭಾವೈಕ್ಯ ಅಥವಾ ಸಾಮರಸ್ಯದ ದ್ಯೋತಕ ಎಂದು ತಿಳಿಯಬೇಕು.

"ವೇದರಾಶಿಃ ಸ್ಮೃತೋ ಬ್ರಹ್ಮಾ ಸಾವಿತ್ರೀ ತದಧಿಷ್ಠಿತಾ ।
ತಸ್ಮಾನ್ನ ಕಶ್ಚಿದ್ದೋಷೋऽತ್ರ ಸಾವಿತ್ರೀ ಗಮನೇ ವಿಭೋಃ ॥"

ಬ್ರಹ್ಮನು ವೇದರಾಶಿಯೆನಿಸುವನು. ಸಾವಿತ್ರಿಯು ಅದರ ಅಧಿದೇವತೆ. ಆದುದರಿಂದ ಬ್ರಹ್ಮನು ಸಾವಿತ್ರಿಯ ಜೊತೆಗೆ ಕೂಡಿದರೆ ಏನೂ ದೋಷವಿಲ್ಲ.

ಪೂಜ್ಯನಾದ ಬ್ರಹ್ಮದೇವನು ಇದ್ದಲ್ಲಿ ಭಾರತಿದೇವಿಯು ಅರ್ಥಾತ್ ಸಾವಿತ್ರಿಯು ಇರುವಳು. ಬ್ರಹ್ಮನ ಭಾರ್ಯೆಯಾದ ಆ ಭಾರತಿಗೆ ಬ್ರಹ್ಮಾಣಿ, ಸರಸ್ವತಿ, ಗಾಯತ್ರಿ, ಸಾವಿತ್ರಿ, ಶತರೂಪಾ, ಶಾರದಾ, ವಾಣೀ ಮುಂತಾದ ನಾನಾ ನಾಮಗಳು ಇರುತ್ತವೆ. ಸೂರ್ಯನನ್ನು ಬಿಟ್ಟು ಬಿಸಿಲು ಇರುವುದಿಲ್ಲ. ಅದರಂತೆ ಬ್ರಹ್ಮನನ್ನು ಬಿಟ್ಟು ಈ ಸರಸ್ವತೀದೇವಿಯೂ ಇರುವುದಿಲ್ಲ. ನಿತ್ಯಾವಿಯೋಗಿಗಳಾದ ಅವರೀರ್ವರ ಸಂಬಂಧದಲ್ಲಿ ಯಾವ ದೋಷವೂ ಇಲ್ಲದಿದ್ದರೂ ಬ್ರಹ್ಮದೇವನಿಗೆ ಲೋಕದೃಷ್ಟಿಯಿಂದ ವಿಚಾರಿಸಿದಾಗ ತುಸು ನಾಚಿಕೆಯೆನಿಸಿತು. ತನ್ನ ಈ ಮನೋವಿಕಾರಕ್ಕೆ ಕಾಮನೇ ಕಾರಣ ಎಂದು ತಿಳಿದು ಅವನನ್ನು ಶಪಿಸಿದನು. "ನನ್ನಂಥ ದೇವೋತ್ತಮನ ಮನಸ್ಸನ್ನೂ ಕೂಡ ನೀನು ನಿನ್ನ ಬಾಣಗಳಿಂದ ಹೊಡೆದು ವಿಕಾರ ವಶವಾಗುವಂತೆ ಮಾಡಿದೆ. ಅದಕ್ಕಾಗಿ ನಿನ್ನ ದೇಹವನ್ನು ರುದ್ರ ದೇವನು ಸುಟ್ಟು ಬೇಗನೇ ಬೂದಿ ಮಾಡಲಿ." ಇದನ್ನು ಕೇಳಿ ಕಾಮನು ಹೆದರಿ ಬ್ರಹ್ಮನಿಗೆ ಮೊರೆ ಇಟ್ಟು ಬೇಡಿಕೊಂಡನು.

"ಮಹನೀಯರೇ, ಹೀಗೆ ಕಾರಣವಿಲ್ಲದೆ ತಾವು ನನ್ನನ್ನು ಶಪಿಸುವುದು ಸರಿಯಲ್ಲ. ಎಲ್ಲ ಪ್ರಾಣಿಗಳ ಇಂದ್ರಿಯಗಳನ್ನೂ ಕಾಮವಿಕಾರಕ್ಕೆ ಒಳಪಡಿಸುವುದಕ್ಕಾಗಿಯೇ ನೀನು ನನ್ನನ್ನು ಸೃಷ್ಟಿಸಿದ್ದು. ಇಂದ್ರಿಯ ಕ್ಷೋಭೆ ಮತ್ತು ಚಿತ್ತವಿಕಾರಗಳನ್ನು ಉಂಟುಮಾಡಲಿಕ್ಕಾಗಿಯೇ ಸೃಜಿಸಲ್ಪಟ್ಟ ನಾನು ಈಗ ನಿಮಗೆ ಅದಕ್ಕೂ ಹೆಚ್ಚಿನದೇನನ್ನು ಮಾಡಿದ್ದೇನೆ ! ನಿಮಗೆ ಸರಸ್ವತಿಯನ್ನು ನೋಡಿ ಚಿತ್ತಚಂಚಲಿಸಿದರೆ ನೀವು ನನ್ನನ್ನು ಸೃಷ್ಟಿಸಿದ ಉದ್ದೇಶವು ಸಫಲವಾಗಿದೆ ಎಂದು ತಿಳಿದು ಸಂತೋಷಪಡಬೇಕು. ನಿಮ್ಮ ಆಜ್ಞೆಯಂತೆ ನಡೆಯುವ ನನ್ನನ್ನು ಶಪಿಸಿದ್ದೇಕೆ ? "ಗಂಡಸಿರಲಿ, ಹೆಂಗಸಿರಲಿ, ದೊಡ್ಡವರಿರಲಿ, ಚಿಕ್ಕವರಿರಲಿ, ದೇವತೆಗಳಿರಲಿ, ಮನುಷ್ಯರಿರಲಿ ಯಾರೇ ಇದ್ದರೂ ಬಿಡದೇ ಮೋಹಗೊಳಿಸು. ಎಲ್ಲರ ಮನಸ್ಸೂ ಕಾಮಪ್ರೇಮಗಳಿಗೆ ಒಳಪಡುವಂತೆ ಮಾಡು" ಎಂದು ತಾವೇ ವಿಧಿಸಿರುವಿರಲ್ಲವೇ ! ಆದುದರಿಂದ ನಿಮ್ಮ ನಿರ್ದೇಶನದಂತೆಯೇ ನಿಮ್ಮ ಹೃದಯವನ್ನು ಕದಡಿ ಕೆರಳಿಸಿದ ಈ ಕಾಮ ಸರ್ವಥಾ ನಿರಪರಾಧಿ. ಇವನಿಗೆ ಶಾಪವೇಕೆ? ಇವನ ಮೇಲೆ ಕೋಪವೇಕೆ ? ಪ್ರಸನ್ನರಾಗಿರಿ. ನಿಶ್ಶಾಪಕೊಡಿರಿ. ರುದ್ರನು ನನ್ನ ದೇಹವನ್ನು ದಹಿಸಿದರೆ ಮತ್ತೆ ನನಗೆ ಮತ್ತೊಂದು ದಿವ್ಯ ದೇಹ ದೊರಕುವಂತೆ ಅನುಗ್ರಹಿಸಿರಿ." ಎಂದು ಬೇಡಿಕೊಂಡನು. ಆಗ ಬ್ರಹ್ಮದೇವರಿಗೆ ಕಾಮನ ಮಾತು ಯಥಾರ್ಥ ಎನಿಸಿತು. ಅವರು ಅವನನ್ನು ಹತ್ತಿರ ಕರೆದು ಸಂತೈಸುತ್ತ ಹೇಳಿದರು.

**ಬ್ರಹ್ಮ** :- ''ಕಾಮ, ನೀನು ಹೇಳಿದ್ದು ಸರಿ. ವೈವಸ್ವತ ಮನ್ವಂತರವು ಪ್ರಾಪ್ತವಾದ ಬಳಿಕ, ಭೂಲೋಕದಲ್ಲಿ ಬಲರಾಮ ಎಂಬ ಮಹಾಪುರುಷನು ಯಾದವವಂಶದಲ್ಲಿ ಜನಿಸುವನು. ದೈತ್ಯಕುಲ ವಿಧ್ವಂಸಕ್ಕಾಗಿ ಅವತರಿಸಿದ ಆ ಬಲರಾಮನ ತಮ್ಮನಾದ ಶ್ರೀಕೃಷ್ಣನು ಸಾಕ್ಷಾತ್ ಶ್ರೀಹರಿಯ ಅವತಾರ. ಅವರೀರ್ವರೂ ದ್ವಾರಕಾಪಟ್ಟಣದಲ್ಲಿ ವಾಸಿಸುವರು. ಅವರಲ್ಲಿ ಶ್ರೀಕೃಷ್ಣನ ಹೊಟ್ಟೆಯ ಮಗನಾಗಿ ನೀನು ಅಲ್ಲಿ ಮರಳಿ ದಿವ್ಯದೇಹದಿಂದ ಜನಿಸುವೆ. ಆಗ ಸಕಲ ಸುಖಭೋಗಗಳನ್ನು ಅನುಭವಿಸುವೆ. ಅನಂತರ ಭರತವಂಶದ ಕೊನೆಗೆ ವತ್ಸರಾಜನ ಮಗನಾಗಿ ಮತ್ತೊಮ್ಮೆ ಭೂಮಿಯಲ್ಲಿ ಜನ್ಮ ಪಡೆಯುವೆ. ಬಳಿಕ ಪ್ರಳಯಕಾಲದವರೆಗೆ ವಿದ್ಯಾಧರರ ಒಡೆಯನಾಗಿ ಧರ್ಮಕರ್ಮಗಳಿಂದ ಸುಖ ಸೌಭಾಗ್ಯಗಳನ್ನು ಅನುಭವಿಸಿ ಕಡೆಗೆ ನನ್ನ ಬಳಿಗೆ ಬರುವೆ.'' ಹೀಗೆ ಶಾಪ ಮತ್ತು ವಿಶ್ಶಾಪ, ಕೋಪ ಪ್ರಸಾದ, ನಿಗ್ರಹ ಅನುಗ್ರಹ ಎರಡನ್ನೂ ಪಡೆದು ಕಾಮನು ಸುಖ ದುಃಖ ಎರಡನ್ನೂ ಪಡೆದು ತನ್ನ ಮನೆಗೆ ತಾನು ತೆರಳಿದನು.

**ಮನು** :- ಯದುಮಹಾರಾಜನಿಂದ ಪ್ರಾರಂಭವಾಗುವ ಯಾದವ ವಂಶದಲ್ಲಿ ಶ್ರೀಕೃಷ್ಣ ಪರಮಾತ್ಮನಿಂದ ಪುನಃ ಕಾಮನ ಜನ್ಮವಾಗುವುದು ಎಂದು ತಿಳಿಸಿದಿರಿ. ಆದರೆ ಆ ಯಾದವ ವಂಶದ ಮೂಲಪುರುಷ **'ಯದು'** ಎಂದರೆ ಯಾರು ? ಮತ್ತು ಬ್ರಹ್ಮ ಶಾಪದಂತೆ ಮಹಾದೇವನು ಕಾಮನನ್ನು ಹೇಗೆ ಮತ್ತು ಏತಕ್ಕಾಗಿ ಸುಟ್ಟು ಹಾಕಿದನು ? ಇದೆಲ್ಲವೂ ಆದನಂತರ ಭರತವಂಶದಲ್ಲಿ ಮದನನು ಮತ್ತೆ ಜನಿಸಿದ್ದು ಏಕೆ ? ಎಂತು ? ಎಂದು ? ಎಲ್ಲ ಇತಿಹಾಸವನ್ನು ಮೊದಲಿನಿಂದ ಆರಂಭಿಸಿ ವಿವರವಾಗಿ ನನಗೆ ಅರುಹಬೇಕು. ನನ್ನ ಸಂದೇಹವನ್ನು ಪರಿಹರಿಸಬೇಕು.

**ಮತ್ಸ್ಯ** :- ಗಾಯತ್ರೀದೇವಿಯು ಬ್ರಹ್ಮದೇವರ ದೇಹಾರ್ಧದಿಂದ ಜನಿಸಿ ಬಂದಳಷ್ಟೇ! ಬ್ರಹ್ಮವಾದಿನಿಯಾದ ಆ ಮನುವಿನ ತಾಯಿಯು ಶತರೂಪಿಣಿಯು. ಶತೇಂದ್ರಿಯಳು. ಅವಳ ಇಂದ್ರಿಯ ಶಕ್ತಿ ಅದ್ಭುತವಾದುದು. ಅನಂತವಾದುದು. ಅವಳ ಸೌಂದರ್ಯಕ್ಕೂ ಎಣೆ ಇಲ್ಲ. ಇಂಥ ಈ ಗಾಯತ್ರಿದೇವಿಯಲ್ಲಿ ಬ್ರಹ್ಮನು ರತಿ, ಮನ, ತಪ, ಬುದ್ಧಿ, ಮಹತ್, ದಿಕ್, ಸಂಭ್ರಮ ಎಂಬ ಏಳು ಮಕ್ಕಳನ್ನು ಪಡೆದನು.

ಶತರೂಪೆಯಿಂದ ಹುಟ್ಟಿದ ಈ ಎಲ್ಲ ಬ್ರಹ್ಮಕುಮಾರರೂ ಮತ್ತು ಇವರಿಗಿಂತ ಮೊದಲು ಚತುರ್ಮುಖನು ತನ್ನ ಮನಸ್ಸಿನಿಂದ ಹುಟ್ಟಿಸಿದ ಮರೀಚಿ ಮೊದಲಾದ ಮಾನಸಪುತ್ರರೂ ಕೂಡಿ, ಬುದ್ಧಿಜೀವಿ ಪ್ರಾಣಿಗಳಿಂದ ಒಡಗೂಡಿದ ಈ ಚರಾಚರ ಪ್ರಪಂಚವನ್ನೆಲ್ಲ ನಿರ್ಮಾಣಗೈದರು. ಅನಂತರ ಬ್ರಹ್ಮದೇವನು ತ್ರಿಶೂಲವನ್ನು ಧರಿಸಿದ ಮಹಾದೇವನನ್ನು ಸೃಜಿಸಿದನು. ಮತ್ತು ಹಿಂದಿನ ಹಿರಿಯರೆಲ್ಲರಿಗೂ ಹಿರಿಯನಾದ ಮಹಾಪ್ರಭು ಸನತ್ಕುಮಾರನನ್ನು ಹುಟ್ಟಿಸಿದನು. ಬಳಿಕ ಭಗವಾನ್ ಪರಮೇಶ್ವರಬ್ರಹ್ಮನು ತನ್ನ ಮುಖದಿಂದ ಬ್ರಾಹ್ಮಣರನ್ನು, ಬಾಹುಗಳಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಪಾದಗಳಿಂದ ಶೂದ್ರರನ್ನೂ ನಿರ್ಮಾಣಮಾಡಿದನು. ಇದರಂತೆ ಮಿಂಚು, ಸಿಡಿಲು, ಮೋಡ, ಕಾಮನಬಿಲ್ಲು

ಮತ್ತು ಛಂದಸ್ಸು ಇವುಗಳೆಲ್ಲವೂ ಆ ಬ್ರಹ್ಮನ ಅಪ್ಪಣೆಯಿಂದ ದೇವನದೇ ಸೃಷ್ಟಿವೈವಿಧ್ಯ. ಅನಂತರ ವರುಣನ ಸೃಷ್ಟಿಯೂ ಅವನಿಂದಲೇ. ಮುಂದೆ ಮಹೇಶ್ವರನಾದ ರುದ್ರನು ಎಂಬತ್ನಾಲ್ಕುಕೋಟಿ ಸಾಧ್ಯರಗಣವನ್ನು ನಿರ್ಮಾಣಗೈದನು. ಅವರೆಲ್ಲರಿಗೂ ಮುಪ್ಪು ಇಲ್ಲ, ಸಾವು ಇಲ್ಲ, ಮೇಲಾಗಿ ಎಲ್ಲರೂ ಮುಕ್ಕಣ್ಣರು. ಸದಾಸುಖಿಗಳು. ಹೀಗೆ ರುದ್ರದೇವನು ಸೃಷ್ಟಿಸಿದ ಜೀವಿಗಳೆಲ್ಲರು ಮುಪ್ಪು, ಸಾವುಗಳಿಲ್ಲದೆ ಅಮರರಾದುದನ್ನು ನೋಡಿ ಬ್ರಹ್ಮದೇವರು ಬೇಸರಗೊಂಡು ಶಿವನನ್ನು ಕರೆದು ಹೇಳಿದರು.

"ಸೃಷ್ಟಿಯು ಹೀಗೆ ಮರಣಶೂನ್ಯವಾಗಬಾರದು. ಜನನ, ಮರಣ, ಸುಖ ದುಃಖ ಮುಪ್ಪು, ತಪ್ಪು, ಶುಭ, ಅಶುಭ ಇವೆಲ್ಲವುಗಳಿಂದ ಕೂಡಿದುದೇ ಸೃಷ್ಟಿ. ಇದೆಲ್ಲ ಒಳ್ಳೇ ಸೃಷ್ಟಿಯ ಲಕ್ಷಣ. ವೈವಿಧ್ಯ, ವೈಚಿತ್ರ್ಯ ಏರು ಪೇರು, ಸಾವು ನೋವು, ಒಳಿತು ಕೆಡಕುಗಳಿಂದಲೇ ಈ ಸೃಷ್ಟಿಯು ಪ್ರಶಸ್ತವಾಗುವುದು. " ಎಂದು ಹೇಳಿ, " ಇನ್ನು ಮೇಲೆ ಸೃಷ್ಟಿಸಾಕು. ಇದನ್ನು ಇಲ್ಲಿಯೇ ನಿಲ್ಲಿಸು," ಎಂದು ಹೇಳಿದರು. ಅಂದಿನಿಂದ ಮಹಾದೇವನು ಸೃಷ್ಟಿವ್ಯಾಪಾರವನ್ನು ಬಿಟ್ಟು ನಿಷ್ಕ್ರಿಯನಾಗಿ ಸ್ಥಿರವಾಗಿ ನಿಂತುಬಿಟ್ಟನು. ಆದುದರಿಂದ ಅವನಿಗೆ **'ಸ್ಥಾಣು'** ಎಂಬ ಹೆಸರು. ಬಂದಿತು. ಬುದ್ಧಿವಂತನಾದ ಸ್ವಾಯಂಭುವ ಮನು ಘೋರ ತಪಸ್ಸನ್ನುಮಾಡಿ ಆನಂತಿ ಎಂಬ ಹೆಸರಿನ ಅತ್ಯಂತ ಸುಂದರಳಾದ ಮಡದಿಯನ್ನು ಪಡೆದನು. ಆ ಆನಂತಿಯಲ್ಲಿ ಮನುರಾಜನು ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರು ಮಕ್ಕಳನ್ನು ಪಡೆದನು. ಧರ್ಮನ ಮಗಳಾದ ಸೂನೃತಾ ಎಂಬ ಅಂಗನಾಮಣಿಯು ಉತ್ತಾನಪಾದರಾಜನಿಗೆ ಮಡದಿಯಾಗಿ ಬಂದಳು. ಮಂದಗಾಮಿನಿಯೂ ಸುಂದರಮುಖಿಯೂ ಆದ ಆ ಚತುರಚಲುವೆಯು ಉತ್ತಾನಪಾದ ರಾಜನಿಂದ ಅಪಸ್ಮತಿ, ಅಪಸೇನ್, ಕೀರ್ತಿಮಾನ್ ಮತ್ತು ಧ್ರುವ ಎಂಬ ನಾಲ್ಕು ಮಂದಿ ಮಕ್ಕಳನ್ನು ಪಡೆದಳು.

ಧ್ರುವರಾಜನು ಮೂರು ಸಾವಿರ ವರ್ಷ ತಪಸ್ಸುಮಾಡಿ ಪರಬ್ರಹ್ಮನ ಪ್ರಸಾದವನ್ನು ಪಡೆದನು. ಅವನ ಪರಮಾನುಗ್ರಹದಿಂದ ದಿವ್ಯವಾದ ಅಚಲ ಸ್ಥಾನವನ್ನು ಹೊಂದಿದನು. ಸಪ್ತರ್ಷಿಗಳೆಲ್ಲರೂ ಅವನನ್ನೇ ಮುಂದು ಮಾಡಿಕೊಂಡು ಅಂತರಿಕ್ಷದಲ್ಲಿ ನೆಲೆ ನಿಂತರು. ಮನುವಿನ ಮಗಳಾದ ಧನ್ಯಾ ಎಂಬ ಕನ್ಯೆಯನ್ನು ಧ್ರುವನಿಗೆ ಕೊಟ್ಟಿತ್ತು. ಆ ಧನ್ಯೆಯಲ್ಲಿ ಧ್ರುವನಿಗೆ ಶಿಷ್ಟ ಎಂಬ ಮಗನು ಹುಟ್ಟಿದನು. ಆ ಶಿಷ್ಟನಿಗೆ ಅಗ್ನಿಯು ತನ್ನ ಸುಚ್ಛಾಯಾ ಎಂಬ ಕನ್ನಿಕೆಯನ್ನು ಧಾರೆ ಎರೆದನು. ಅವನಿಂದ ಅವಳಿಗೆ ರಿಪು, ಕೃಪ, ರಿಪುಂಜಯ, ವೃತ್ತ, ವೃಕ, ವೃಕತೇಜ ಎಂಬ ಪುತ್ರರು ಜನಿಸಿದರು. ರಿಪುಂಜಯನಿಗೆ ಬ್ರಹ್ಮನ ಮೊಮ್ಮಗಳಾದ ವೀರಿಣಿ ಎಂಬ ವನಿತೆಯಿಂದ ಚಕ್ಷು ಎಂಬ ಪುತ್ರನು ಉತ್ಪನ್ನನಾದನು. ಆ ಚಕ್ಷು ತನ್ನ ಪತ್ನಿಯಲ್ಲಿ ಚಾಕ್ಷುಷ ಎಂಬ ಮನುವನ್ನು ಮಗನನ್ನಾಗಿ ಪಡೆದನು. ಆ ಚಾಕ್ಷುಷ ಮನುವಿಗೆ ಅರಸುಗುವರಿ ನಡ್ವಲೆಯಲ್ಲಿ ಹತ್ತು ಜನ ಮಕ್ಕಳು, ಊರು, ಪೂರು, ಶತದ್ಯುಮ್ನ,

ತಪಸ್ವಿ, ಸತ್ಯವಾಕ್, ಹವಿ, ಅಗ್ನಿಷ್ಟುತ್, ಅತಿರಾತ್ರ, ಸದ್ಯುಮ್ನ, ಅಪರಾಜಿತ, ಅಭಿಮನ್ಯು ಎಂದು. ಹತ್ತೂ ಜನ ಮಕ್ಕಳು ಪ್ರಸಿದ್ಧರಾದರು. ಇವರೆಲ್ಲರೂ ಪಾಪಲೇಪವಿಲ್ಲದವರು ಮತ್ತು ಬಹು ಶೂರರು.

ಇವರಲ್ಲಿ ಊರುವಿಗೆ ಅಗ್ನಿಯು ತನ್ನ ಆಗ್ನೇಯೀ ಎಂಬ ಮಗಳನ್ನು ಕೊಟ್ಟಿದ್ದನು. ಅವಳಿಂದ ಅಗ್ನಿ, ಸುಮನಸ, ಖ್ಯಾತಿ, ಕ್ರತು, ಅಂಗಿರಸ ಮತ್ತು ಗಯ ಎಂಬ ಆರು ಜನ ಮಕ್ಕಳು ಸಂಭವಿಸಿದರು. ಅಗ್ನಿಕುಮಾರರಾದ ಅವರೆಲ್ಲರೂ ಕಳೆಕಾಂತಿಗಳಿಂದ ಕಳಕಳಿಸುತ್ತಿದ್ದರು. ಪಿತೃದೇವತೆಗಳ ಮಗಳಾದ ಸುನೀಥಾ ಎಂಬ ಮಹಿಳೆಯು ಅಂಗ ಎಂಬ ರಾಜನನ್ನು ಮದುವೆಯಾಗಿ ವೇನರಾಜನನ್ನು ಹೆತ್ತಳು. ಅನ್ಯಾಯದ ದಾರಿ ಹಿಡಿದು ದುರ್ಮಾರ್ಗಗಾಮಿಯಾದ ಆ ವೇನರಾಜನನ್ನು ತಪಸ್ವಿ ಬ್ರಾಹ್ಮಣರು ಬಂದು ತಮ್ಮ ಹುಂಕಾರದಿಂದಲೇ ಕೊಂದರು. ಅನಂತರ ಅವನ ಕೈಯನ್ನು ಕಡಿದರು. ಅದರಿಂದ ಪೃಥು ಎಂಬ ಮಹಾತೇಜಸ್ವಿಯಾದ ರಾಜಕುಮಾರನು ಉದಿಸಿ ಬಂದನು.

ಆ ಪೃಥುರಾಜನಿಗೆ ಇಬ್ಬರು ಮಕ್ಕಳು. ಅಂತರ್ಧಾನ, ಹವಿರ್ಧಾನ, ಅಂತರ್ಧಾನನಿಗೆ ಸಾಧ್ವೀಮಣಿ ಮಡದಿ ಶಿಖಂಡಿನಿ. ಹವಿರ್ಧಾನನಿಗೆ ಅಗ್ನಿಪುತ್ರಿ ಧಿಷಣೆಯಿಂದ ಪ್ರಾಚೀನಬರ್ಹಿ, ಸಾಂಗ, ಯಮ, ಶುಕ್ರ, ಬಲ ಮತ್ತು ಶುಭ ಎಂದು ಆರು ತನುಜರು. ಪ್ರಾಚೀನಬರ್ಹಿ ಒಬ್ಬ ದೊಡ್ಡ ಪ್ರಜಾಪತಿಯೆಂದು ಪೂಜಿತನಾದ. ಅವನಿಂದಲೇ ಹವಿರ್ಧಾನ ಎಂಬ ಸಂತಾನದ ಅಭಿವೃದ್ಧಿ ಆಯಿತು. ಸಮುದ್ರಕುವರಿಯಾದ ಸುವರ್ಣೆಯೇ ಪ್ರಾಚೀನಬರ್ಹಿಯ ಧರ್ಮಪತ್ನಿ. ಅವಳು ಪ್ರಾಚೇತಸ ಎಂಬ ಹತ್ತು ಜನ ಪುತ್ರರನ್ನು ಪ್ರಾಚೀನ ಬರ್ಹಿಯಿಂದ ಹೆತ್ತಳು. ಅವರೆಲ್ಲರೂ ಧನುರ್ವೇದದಲ್ಲಿ ಪಾರಂಗತರು. ಈ ಪ್ರಾಚೇತಸರ ತಪೋಬಲದಿಂದ ಪ್ರಪಂಚದಲ್ಲಿ ಎಲ್ಲಿ ನೋಡಿದಲ್ಲೆಲ್ಲ ರಾಶಿರಾಶಿಯಾಗಿ ವೃಕ್ಷಗಳು ಬೆಳೆದು ನಿಂತವು. ಅವುಗಳ ಅತಿ ಬೆಳವಣಿಗೆಯನ್ನು ಅನುಲಕ್ಷಿಸಿ ದೇವತೆಗಳ ಆದೇಶದಂತೆ ಅಗ್ನಿದೇವನು ಅವನ್ನೆಲ್ಲ ಸುಟ್ಟುಹಾಕಿದನು.

ಈ ಹತ್ತೂ ಜನ ಪ್ರಾಚೇತಸರು ಕೂಡಿ ಸೋಮನ ಮಗಳಾದ ಮಾರಿಷಾ ಎಂಬುವಳನ್ನು ಮದುವೆಯಾದರು. ಆ ಮಾರಿಷೆಗೆ ಪ್ರಾಚೇತಸರಿಂದ ದಕ್ಷ ಎಂಬ ಸರ್ವಶ್ರೇಷ್ಠನಾದ ಪುತ್ರನು ಉತ್ಪನ್ನನಾದನು. ದಕ್ಷನ ಅನಂತರ ಆ ಮಾರಿಷೆಯು ಅನೇಕಾನೇಕ ಔಷಧಿ ವನಸ್ಪತಿಗಳನ್ನೂ ಗಿಡಮೂಲಿಕೆಗಳನ್ನೂ ಉತ್ಪಾದನೆ ಮಾಡಿದಳು. ಚಂದ್ರವತೀ ಎಂಬ ನದಿಯನ್ನೂ ಪ್ರವರ್ತಿಸಿದಳು. ಚಂದ್ರಾಂಶನಾದ ಆದಕ್ಷ ಪ್ರಜಾಪತಿಯು ಎಂಭತ್ತು ಕೋಟಿ ಚೇತನಗಳನ್ನು ಸೃಷ್ಟಿ ಮಾಡಿದನು. ಅವುಗಳಲ್ಲಿ ಕೆಲವು ಎರಡು ಕಾಲಿನವು ಹಲವು ನಾಕು ಕಾಲಿನವು. ಆ ದಕ್ಷ ಸೃಷ್ಟಿಯಲ್ಲಿ ನೂರಾರು ವಾನರರೂ ಕತ್ತೆ, ಕುದುರೆ, ಹಾವು, ಕರಡಿ, ಸಿಂಹ, ನಾಯಿ, ಹಂದಿ, ಒಂಟೆ ಮುಂತಾದ ನಾನಾ ಮುಖದ ಪ್ರಾಣಿಗಳು ಸೇರಿವೆ. ಮ್ಲೇಂಛ ಮುಂತಾದ ನೀಚ ಜಾತಿಗಳೂ ಅವುಗಳಲ್ಲಿ ಉಂಟು.

ಧರ್ಮ ಪ್ರಾಣನಾದ ದಕ್ಷಪ್ರಜಾಪತಿಯು ನಿಜವಾಗಿಯೂ ಸೃಷ್ಟಿ ಕಾರ್ಯದಲ್ಲಿ ದಕ್ಷನೇ ಸರಿ. ಹೀಗೆಲ್ಲ ಮಾನಸಿಕ ಸೃಷ್ಟಿಯನ್ನು ಮಾಡಿದ ತರುವಾಯ ಅವನು ವಿಶಾಲಸೃಷ್ಟಿಯ ವಿಪುಲ ಅಭಿವೃದ್ಧಿಗಾಗಿ ಹೊಸ ಹಂಚಿಕೆಯನ್ನೇ ತೆಗೆದನು. ಏನಾದರೂ ಈ ಮಾನಸ ಸೃಷ್ಟಿ ಅಷ್ಟಕಷ್ಟೇ. ಇದರಿಂದ ಮತ್ತೆ ಮುಂದೆ ತನ್ನಷ್ಟಕ್ಕೆ ತಾನೇ ಸೃಷ್ಟಿ ಅಭಿವೃದ್ಧಿ ಆಗಲಾರದು. ಇದನ್ನೆಲ್ಲ ಆಲೋಚಿಸಿ ಅವನು ಮೈಥುನ ಸೃಷ್ಟಿಯನ್ನು ಪ್ರಾರಂಭಿಸಿದನು. ಅಂದರೆ ಮೊದಲು ಅವನು ತಾನೇ ಹೆಂಗಸರ ಸೃಷ್ಟಿಯನ್ನು ಪ್ರಾರಂಭಿಸಿದನು. ಅನೇಕ ಹೆಣ್ಣು ಮಕ್ಕಳನ್ನು ಹೆತ್ತು ಹತ್ತು ಕನ್ಯೆಯರನ್ನು ಧರ್ಮನಿಗೆ ಕೊಟ್ಟನು. ಹದಿಮೂರು ಹೆಣ್ಣುಗಳನ್ನು ಕಶ್ಯಪ ಮಹರ್ಷಿಗೂ ಇಪ್ಪತ್ತೇಳು ಜನ ಕನ್ನೆಯರನ್ನು ಚಂದ್ರನಿಗೂ ಧಾರೆಯೆರೆದು ಕೊಟ್ಟನು. ಈ ಎಲ್ಲ ದಕ್ಷಕುಮಾರಿಯರಿಂದಲೇ ದೇವ ದಾನವ ಮಾನವ ಪಶು ಪಕ್ಷಿಗಳಿಂದ ಸಂಕೀರ್ಣವಾದ ಚರಾಚರ ಪ್ರಪಂಚವೆಲ್ಲವೂ ನಿರ್ಮಾಣಗೊಂಡಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಾಲ್ಕನೆಯ ಅಧ್ಯಾಯ ಮುಗಿದುದು*



## ದೇವ, ದಾನವ, ಮಾನವರ, ಹುಟ್ಟು ಬೆಳವಣಿಗೆ | ಅಧ್ಯಾಯ - ೫

**ಋಷಿಯ ಉವಾಚಃ**

**ದೇವಾನಾಂ ದಾನವಾನಾಂ ಚ ಗಂಧರ್ವೋರಗ ಪಕ್ಷಿಣಾಂ ।**
**ಉತ್ಪತ್ತಿಂ ವಿಸ್ತರೇಣೈವ ಸೂತ ಬ್ರೂಹಿ ಯಥಾತಥಮ್ ॥**

ಶೌನಕಾದಿ ಋಷಿಗಳು ನೈಮಿಷಾರಣ್ಯದಲ್ಲಿ ಸೂತ ಪೌರಾಣಿಕನಿಗೆ " "ದೇವದಾನವರ ಮತ್ತು ಗಂಧರ್ವ, ಸರ್ಪ, ಪಶು, ಪಕ್ಷಿಗಳ ಹುಟ್ಟು ಹಬ್ಬುವಿಕೆಯ ವೃತ್ತಾಂತವನ್ನು ವಿಸ್ತತವಾಗಿ ಆದರೂ ಯಥಾಸ್ಥಿತವಾಗಿ ನಮಗೆ ತಿಳಿಸು " ಎಂದು ಕೇಳಿ ಕೊಂಡರು. ಅದಕ್ಕೆ ಸೂತಪುರಾಣಿಕರು ದಕ್ಷಪ್ರಜಾಪತಿಯು ಮೊದಲು ಮಾಡಿದ ಮಾನಸಿಕ ಸೃಷ್ಟಿಯನ್ನೂ ಅನಂತರ ಸುರುವು ಮಾಡಿದ ಮೈಥುನ ಸೃಷ್ಟಿಯನ್ನೂ ವಿಶದವಾಗಿ ನಿರೂಪಿಸಲು ಮೊದಲು ಮಾಡಿದರು.

**ಸೂತ ಉವಾಚ :**

**ಸಂಕಲ್ಪಾತ್ ದರ್ಶನಾತ್ ಸ್ಪರ್ಶಾತ್ ಪೂರ್ವೇಷಾಂ ಸೃಷ್ಟಿರುಚ್ಯತೇ**
**ದಕ್ಷಾತ್ ಪ್ರಾಚೇತಸಾದೂರ್ಧ್ವಂ ಸೃಷ್ಟಿರ್ಮೈಥುನಸಂಭವಾ**

**ಸೂತ** :- ಪೂರ್ವಕಾಲದಲ್ಲಿ ಮಹಾನುಭಾವರಾದ ಪ್ರಜಾಪತಿಗಳು ಮನಸ್ಸಿನಲ್ಲಿ ಕೇವಲ ಸಂಕಲ್ಪದಿಂದಲೇ ಮಕ್ಕಳನ್ನು ಹುಟ್ಟಿಸುತ್ತಿದ್ದರು. ಒಮ್ಮೊಮ್ಮೆ ಮುಟ್ಟಿದ ಮಾತ್ರಕ್ಕೂ ಮಕ್ಕಳನ್ನು ಕರುಣಿಸುತ್ತಿದ್ದರು. ಇವಲ್ಲದೇ ಹಲಕೆಲವು ಸಂದರ್ಭಗಳಲ್ಲಿ ಕಣ್ಣಿನಿಂದ ಬರೀ ನೋಡಿದ ಮಾತ್ರಕ್ಕೂ ಸಂತಾನವು ತಂತಾನೇ ಉದ್ಭವಿಸಿ

ಬರುತ್ತಿತ್ತು. ಇದೆಲ್ಲವೂ ದಕ್ಷನಿಗಿಂತ ಹಿಂದಿನ ಮಾತು. ಹತ್ತು ಜನ ಪ್ರಾಚೇತಸರಿಂದ ಮಾರಿಷೆಯು ದಕ್ಷನನ್ನು ಹೆತ್ತ ಬಳಿಕ ಮಾತ್ರ ಹೊಸ ಬಗೆಯ ಸೃಷ್ಟಿಗೆ ಮೊದಲಾಯಿತು. ಅದೇ ಮೈಥುನ ಸೃಷ್ಟಿ. ಮಿಥುನ ಎಂದರೆ ಸ್ತ್ರೀ ಪುರುಷರ ದಾಂಪತ್ಯದ ಜೋಡಿ. ಇವರೀರ್ವರ ಮೈಥುನ ಎಂದರೆ ಸಂಗಮದಿಂದ ಸೃಷ್ಟಿಯನ್ನು ಮೊಟ್ಟ ಮೊದಲು ಪ್ರಾರಂಭಿಸಿದವ ದಕ್ಷ ಪ್ರಜಾಪತಿ. ಮೊದಲು ಬ್ರಹ್ಮದೇವರು ಈ ದಕ್ಷನಿಗೆ ಸೃಷ್ಟಿಯನ್ನು ಮಾಡು ಎಂದು ಆದೇಶವಿತ್ತರು. ದಕ್ಷಪ್ರಜಾಪತಿಯು ಮೊದಲು ಮೊದಲು ಸೃಷ್ಟಿಯನ್ನು ಹೇಗೆ ಮಾಡಿದ ಎಂಬುದನ್ನು ತಿಳಿಸುತ್ತೇನೆ ಕೇಳಿರಿ. ಬ್ರಹ್ಮನ ಅಪ್ಪಣೆಯಂತೆ ಅವನು ಎಷ್ಟೆಷ್ಟೋ ದೇವತೆಗಳನ್ನು, ಋಷಿಗಳನ್ನು, ಹಿಂಡುಹಿಂಡಾಗಿ ಹುಟ್ಟಿಸಿದನು. ತಂಡತಂಡವಾಗಿ ನಿರ್ಮಿಸಿದನು. ಏನಾದರೂ ಪ್ರಜಾವೃದ್ಧಿಯಾಗಲಿಲ್ಲ. ಎಷ್ಟು ಸೃಷ್ಟಿ ಮಾಡಿದರೂ ಅದು ಅಷ್ಟಕ್ಕೇ ನಿಲ್ಲುತ್ತಿತ್ತು. ಮುಂದೆ ಬೆಳೆಯುತ್ತಿರಲಿಲ್ಲ. ಅದನ್ನು ಕಂಡು ದಕ್ಷನು ಮೈಥುನ ಯೋಗದಿಂದ ಪ್ರಜಾ ಪ್ರವೃತ್ತಿಯನ್ನು ಮಾಡಬೇಕೆಂದು ಸಂಕಲ್ಪಿಸಿದನು. ತನ್ನ ಮಡದಿಯಾದ ಪಾಂಚಜನಿಯೊಂದಿಗೆ ದಾಂಪತ್ಯ ಧರ್ಮದಿಂದ ಕೂಡಿದನು. ಅದರಿಂದ ಅವನಿಗೆ ಒಂದು ಸಾವಿರಜನ ಮಕ್ಕಳುಹುಟ್ಟಿದರು.

ಈ ದಕ್ಷಪುತ್ರರ ಸಾವಿರ ಸಂಖ್ಯೆಯ ಗುಂಪಿಗೆ **ಹರ್ಯಶ್ವ** ಎಂದು ಹೆಸರು. ಅವರೆಲ್ಲರೂ ತಂದೆಯ ಅಪ್ಪಣೆಯಂತೆ ಸೃಷ್ಟಿಯನ್ನು ಮಾಡಲಿಕ್ಕೆ ಹೊರಟರು. ಆಗ ಅಲ್ಲಿಗೆ ನಾರದರು ಬಂದರು. ಪ್ರಜಾವೃದ್ಧಿಯನ್ನು ಮಾಡ ಹೊರಟ ಹರ್ಯಶ್ವರನ್ನು ಕುರಿತು ಹೇಳಿದರು. ''ಶೂರ ಶ್ರೇಷ್ಠರೇ, ಮೇಲೆ ಕೆಳಗೆ ಹಾಗೂ ಉಳಿದೆಲ್ಲ ಕಡೆಗೂ ಭೂಮಿಯ ಪ್ರಮಾಣವನ್ನು ಅರಿತು ಅನಂತರ ನೀವು ವಿಶೇಷವಾಗಿ ಸೃಷ್ಟಿಯನ್ನು ಮಾಡಿರಿ.'' ನಾರದರ ಈ ಮಾತನ್ನು ಕೇಳಿ ಹರ್ಯಶ್ವರರು ಭೂಮಿಯ ಪ್ರಮಾಣವನ್ನು ಅಳೆದು ತಿಳಿದುಕೊಂಡು ಬರಬೇಕೆಂದು ಎಲ್ಲ ದಿಕ್ಕುಗಳಿಗೂ ಪ್ರಯಾಣ ಮಾಡಿದರು. ಸಮುದ್ರದಿಂದ ನದಿಗಳು ಹೊರಟು ಹೋದಂತೆ ಅಂದು ಹೋದವರು ಇಂದಿನವರೆಗೂ ಮರಳಿ ಬರಲೇ ಇಲ್ಲ. ಹೀಗೆ ಹರ್ಯಶ್ವ ಎಂಬ ಮಕ್ಕಳ ಗುಂಪು ಮನೆ ಬಿಟ್ಟು ಹೋದವರು ತಿರುಗಿಬಾರದೆ ನಷ್ಟರಾಗಿ ಹೋದದ್ದನ್ನು ನೋಡಿ ದಕ್ಷಪ್ರಜಾಪತಿಯು ವೈರಿಣಿ ಎಂಬ ಪತ್ನಿಯಲ್ಲಿ ಮತ್ತೆ ಸಾವಿರ ಜನ ಮಕ್ಕಳನ್ನು ಹುಟ್ಟಿಸಿದನು. ಈ ಹೊಸ ಪುತ್ರರ ಗುಂಪಿಗೆ **ಶಬಲರು** ಎಂದು ಹೆಸರು. ಇವರೆಲ್ಲರು ಸೃಷ್ಟಿಯನ್ನು ಬೆಳೆಸಬೇಕೆಂಬ ಉದ್ದೇಶದಿಂದ ನಾರದರ ಬಳಿಗೆ ಹೋದರು. ನಾರದರು ಇವರಿಗೂ ಮೊದಲಿನಂತೆಯೇ ಭೂಮಿಯ ಪ್ರಮಾಣವನ್ನು ತಿಳಿದು ಸೃಷ್ಟಿಕಾರ್ಯಕ್ಕೆ ಕೈಹಾಕಿರಿ ಎಂದು ಎಚ್ಚರಿಕೆ ಕೊಟ್ಟರು. ಮತ್ತು ಈ ಮೊದಲು ಸೃಷ್ಟಿಯ ಪ್ರಮಾಣವನ್ನು ತಿಳಿದುಕೊಂಡು ಬರಲು ಹೋದ ನಿಮ್ಮ ಸಹೋದರರನ್ನು ಕಂಡು ಬಂದು ಮುಂದೆ ಸೃಷ್ಟಿ ಮಾಡಿರಿ ಎಂದು ಹೇಳಿದರು. ಇದನ್ನು ಕೇಳಿ ದಕ್ಷ ಪ್ರಜಾಪತಿಯ ಈ ಶಬಲ ಕುಮಾರರೂ ಕೂಡ ತಮ್ಮ ಅಣ್ಣಂದಿರಾದ ಹರ್ಯಶ್ವರು ಹಿಡಿದ ಮಾರ್ಗವನ್ನೇ ಅನುಸರಿಸಿ ಹೊರಟು ಹೋದರು. ಇವರೂ ಅವರಂತೆ ಒಮ್ಮೆ ಹೋದವರು ಬರಲೇ ಇಲ್ಲ.

ಅಂದಿನಿಂದ ತಮ್ಮನು ಅಣ್ಣನ ಮಾರ್ಗವನ್ನು ಅನುಸರಿಸುವದಿಲ್ಲ. ಅನುಸರಿಸಿದರೆ ದುಃಖ ಹೊಂದುತ್ತಾನೆ. ಆದುದರಿಂದ ಅಣ್ಣ ಅನುಸರಿಸಿದ ಮಾರ್ಗ ಎಂದು ಅಂಧವಿಶ್ವಾಸದಿಂದ ಯಾರೂ ತಿಳಿಯದೆ ಅಣ್ಣನ ದಾರಿಯನ್ನು ಹಿಡಿಯತಕ್ಕದಲ್ಲ. ಹೀಗೆ ಎರಡು ಸಾವಿರ ಗಂಡು ಮಕ್ಕಳನ್ನು ಹಡೆದರೂ ಮನೆಯಲ್ಲಿ ಇದ್ದು ಮದುವೆ ಮಾಡಿಕೊಂಡು ವಂಶಾಭಿವೃದ್ಧಿಯನ್ನು ಮಾಡಲು ಒಬ್ಬ ಗಂಡು ಮಗನೂ ಉಪಯೋಗಕ್ಕೆ ಬರಲಿಲ್ಲ. ಇದನ್ನು ತಿಳಿದು ದಕ್ಷಪ್ರಜಾಪತಿಯು ಈ ಗಂಡು ಮಕ್ಕಳನ್ನು ನಂಬಿ ಕುಳಿತರೆ ವಂಶವೃದ್ಧಿ ಆಗಲಾರದು ಎಂದು ಅರವತ್ತು ಹೆಣ್ಣು ಮಕ್ಕಳನ್ನು ಹಡೆದ.

ಅವರಲ್ಲಿ ಹತ್ತು ಹೆಣ್ಣು ಮಕ್ಕಳನ್ನು ಧರ್ಮನಿಗೆ ಧಾರೆ ಎರೆದನು. ಹದಿಮೂರು ಕನ್ನೆಯರನ್ನು ಕಶ್ಯಪ ಮುನಿಗೆ ಕೊಡ ಮಾಡಿದನು. ಇಪ್ಪತ್ತೇಳು ಪುತ್ರಿಯರನ್ನು ಚಂದ್ರನಿಗೆ ಮದುವೆಮಾಡಿಕೊಟ್ಟನು. ನಾಲ್ಕು ತನ್ನ ತನುಜೆಯರನ್ನು ಅರಿಷ್ಟನೇಮಿಗೆ, ಇಬ್ಬರು ದುಹಿತೆಯರನ್ನು ಅಂಗಿರಸನಿಗೆ, ಮತ್ತಿಬ್ಬರನ್ನು ಭೃಗಪುತ್ರನಿಗೆ, ಒಬ್ಬಳನ್ನು ಶಂಕರನಿಗೆ ಉಳಿದ ಒಬ್ಬಳನ್ನು ಕೃಶಾಶ್ವನಿಗೆ ಕೊಟ್ಟು ಮದುವೆ ಮಾಡಿದನು. ಈ ಎಲ್ಲ ದಕ್ಷ ಪ್ರಜಾಪತಿಯ ಪುತ್ರಿಯರ ಬಳಗವು ದೇವ ಮಾತೆಯರೆಂದು ಪೂಜ್ಯರಾಗಿದ್ದಾರೆ. ಇವರೆಲ್ಲರ ಹೆಸರುಗಳನ್ನೂ ಅವರ ಮೂಲಕವಾಗಿ ಬೆಳೆದ ದಕ್ಷನ ದೌಹಿತ್ರ ಸಂತತಿಯನ್ನೂ ವಿವರಿಸುತ್ತೇನೆ. ಕೇಳಿರಿ- ''ಧರ್ಮನಿಗೆ ಧಾರೆ ಎರೆದ ಹತ್ತು ದಕ್ಷ ಕುಮಾರಿಯರ ಹೆಸರುಗಳು ಇಂತಿವೆ.''

ಮರುತ್ವತಿ, ವಸು, ಯಾಮಿ, ಲಂಬಾ, ಭಾನು, ಅರುಂಧತಿ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾ ಅಥವಾ ಭಾಮಿನಿ, ಇವರು ಧರ್ಮ ಮುನಿಯ ಧರ್ಮಪತ್ನಿಯರು. ಇವರ ಮಕ್ಕಳ ವಿವರವನ್ನು ಮುಂದೆ ಕೇಳಿರಿ. ಧರ್ಮಮುನಿಯ ಧರ್ಮಪತ್ನಿಯೂ ದಕ್ಷ ದುಹಿತೆಯೂ ಆದ ವಿಶ್ವೆಯ ಮಕ್ಕಳೇ ವಿಶ್ವೇದೇವತೆಗಳು. ಸಾಧ್ಯಾ ಎಂಬ ಸಾಧ್ವೀಮಣಿಯು 'ಸಾಧ್ಯ' ಎಂಬ ದೇವಗಣಕ್ಕೆ ಜನ್ಮಕೊಟ್ಟಳು. ಮರುತ್ವತೀ ಎಂಬ ಮಾನಿನಿಯು ಮರುತ್ವಂತ ಎಂಬ ಮಕ್ಕಳನ್ನು ಹಡೆದಳು. ವಸುದೇವಿಯ ಮಕ್ಕಳಿಂದ ವಸುಗಣವಾಯಿತು. ಭಾನು ಎಂಬ ಭಾರ್ಯೆಯಿಂದ ಭಾನುಕುಮಾರರು ಜನಿಸಿದರು. ಮುಹೂರ್ತಾನಾಮಕ ಮಡದಿಯ ಮಕ್ಕಳೇ ಮುಹೂರ್ತಕರು. ಲಂಬಾ ಎಂಬ ಲಲನೆಯಿಂದ ಗೋಲಗಳ ಉತ್ಪತ್ತಿ. ಯಾಮಿ ಎಂಬ ಭಾಮಿನಿಯ ಮಗಳಾಗಿ ನಾಗವೀಥಿಯು ಉತ್ಪನ್ನಳಾದಳು. ಇನ್ನು ಈ ಭೂಮಿಯ ಮೇಲೆ ಕಾಣುವದೆಲ್ಲವೂ ಅರುಂಧತಿಯ ಸಂತಾನ. ಸಂಕಲ್ಪಾ ಸುಂದರಿಯಿಂದ ಸಂಕಲ್ಪದ ಜನನವಾಯಿತು. ದಶದಿಕ್ಕುಗಳಲ್ಲಿ ವ್ಯಾಪಿಸಿರುವ ಜ್ಯೋತಿಷ್ಮಂತರೆಂಬ ಅಷ್ಟವಸುಗಳು ವಸು ಎಂಬ ಧರ್ಮಪತ್ನಿಯ ಸಂತಾನಭೂತ ರಾಗಿದ್ದಾರೆ. ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ತ್ಯೂಷಸ್, ಮತ್ತು ಪ್ರಭಾಸ ಎಂದು ವಸುವನಿತೆಯ ಕುಮಾರರಾದ ಅಷ್ಟವಸುಗಳ ಹೆಸರುಗಳು ಇರುತ್ತವೆ. ಇವರಲ್ಲಿ ಆಪ ಎಂಬ ವಸುವಿನ ಶಾಂತ, ದಂಡ, ಶಾಂಬ ಮತ್ತು ಮಣಿವಸ್ತ್ರ ಎಂಬ ನಾಲ್ಕು ಮಕ್ಕಳು ಯಜ್ಞಕಾಂಡದ ಸಂರಕ್ಷಕ ಅಧಿಕಾರಿಗಳಾಗಿದ್ದಾರೆ.

ಧ್ರುವ ವಸುವಿನ ಮಗ ಕಾಲ, ಸೋಮ ವಸುವಿನ ಪುತ್ರನೇ ವರ್ಚಸ್ಸು. ದ್ರವಿಣ, ಹವ್ಯವಾಹರು ಧರನಾಮಕ ವಸುವಿನ ಇಬ್ಬರು ಪುತ್ರರು. ಇವರ ತಾಯಿ ಕಲ್ಯಾಣಿನೀ. ಧರ ವಸುವಿಗೆ ಮನೋಹರಾ ಎಂಬ ಮತ್ತೊಬ್ಬ ಮಡದಿಯೂ ಇದ್ದಳು. ಅವಳು ಧರನಿಂದ ಪ್ರಾಣ, ರಮಣ, ಶಿಶಿರ ಎಂಬ ಮೂವರು ಮಕ್ಕಳನ್ನು ಪಡೆದಳು. ಅನಲ ಎಂಬ ವಸುವಿನ ಸತಿಯಾದ ಶಿವೆಯು ಮನೋಜವ, ಅವಿಜ್ಞಾತ ಗತಿ ಎಂಬ ಇಬ್ಬರು ಮಕ್ಕಳನ್ನು ಹೆತ್ತಳು. ಅನಿಲ ಎಂಬ ವಸುವಿನ ಇನ್ನೊಂದು ಹೆಸರು ಅಗ್ನಿ, ಈ ಅಗ್ನಿಯ ಪುತ್ರನಾದ ಕುಮಾರನು ಜೊಂಡಿನ ಬೊಡ್ಡೆಯಲ್ಲಿ ಜನಿಸಿದನು. ಅವನ ಅನಂತರ ಈ ಅಗ್ನಿದೇವನಿಗೆ ಶಾಖ, ವಿಶಾಖ ಮತ್ತು ನೈಗಮೇಯ ಎಂಬ ಮೂವರು ಮಕ್ಕಳು ಸಂಭೂತರಾದರು. ಅಗ್ನಿಯ ಜ್ಯೇಷ್ಠಪುತ್ರನಾದ ಈ ಕುಮಾರಸ್ವಾಮಿಯನ್ನು ಕೃತ್ತಿಕಾದೇವಿಯರು ಸಾಕಿ ಸಲಹಿದ್ದರಿಂದ ಕಾರ್ತಿಕೇಯ ಎಂಬ ಹೆಸರು ಬಂದಿತು.

ಪ್ರತ್ಯೂಷಸ್ ಎಂಬ ವಸುವಿಗೆ ಋಷಿ, ವಿಭು ಮತ್ತು ದೇವಲ ಎಂದು ಮೂವರು ಮಕ್ಕಳು. ಪ್ರಭಾಸ ಎಂಬ ಎಂಟನೆಯ ವಸುವಿಗೆ ಒಬ್ಬನೇ ಮಗ. ಶಿಲ್ಪಿ ಶ್ರೇಷ್ಠನಾದ ವಿಶ್ವಕರ್ಮನೇ ಅವನು. ಈ ವಿಶ್ವಕರ್ಮನು ದೇವಾಲಯ, ಅರಮನೆ ಆರಾಮ, ಆಭರಣ, ದೇವತಾಮೂರ್ತಿ, ಸರೋವರ, ಹೂದೋಟ, ಕೈದೋಟ, ಭಾವಿ ಮುಂತಾದವುಗಳ ನಿರ್ಮಾಣಕಾರ್ಯದಲ್ಲಿ ಸಿದ್ಧಹಸ್ತನು. ಸುರಭಿ ಎಂಬ ದಕ್ಷಕುಮಾರಿಯಿಂದ ಗಣಾಧಿಪತಿಗಳಾದ ಹನ್ನೊಂದು ಜನ ರುದ್ರರು ಉದ್ಭವಿಸಿದರು. ಅಜೈಕಪಾದ, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ, ಪಿನಾಕಿ, ಇವರೇ ಆ ಹನ್ನೊಂದು ರುದ್ರರು. ಈ ಏಕಾದಶರುದ್ರರ ಮಾನಸಪುತ್ರರು ಎಂಬತ್ನಾಲ್ಕು ಕೋಟಿ ಜನರು ಇರುತ್ತಾರೆ. ಇವರ ಮಕ್ಕಳು, ಮೊಮ್ಮಕ್ಕಳು, ಲೆಕ್ಕವಿಲ್ಲದಷ್ಟು ಜನ. ಇದೆಲ್ಲವೂ ರುದ್ರಗಣದ ಅಭಿವೃದ್ಧಿಯು ಶೈವ ಸಂಸಾರ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐದನೇ ಅಧ್ಯಾಯವು ಮುಗಿದುದು*

—o—

## ಕಶ್ಯಪರ ಸಂಸಾರ, ದೇವ ದೈತ್ಯ ಪಶು ಪಕ್ಷಿ ಪ್ರಪಂಚ ವಿಸ್ತಾರ

**ಅಧ್ಯಾಯ - ೬**

**ಸೂತ ಉವಾಚ**

**ಕಶ್ಯಪಸ್ಯ ಪ್ರವಕ್ಷ್ಯಾಮಿ ಪತ್ನೀಭ್ಯಃ ಪುತ್ರಪೌತ್ರಕಾನ್**
**ಅದಿತಿರ್ದಿತಿರ್ದನುಶ್ಚೈವ ಅರಿಷ್ಟಾ ಸುರಸಾ ತಥಾ ।**
**ಸುರಭಿರ್ವಿನತಾ ತದ್ವತ್ತಾಮ್ರಾ ಕ್ರೋಧವಶಾ ಇರಾ**
**ಕದ್ರೂರ್ವಿಶಾ ಮುನಿಸ್ತದ್ವತ್ತಾಸಾಂ ಪುತ್ರಾನ್ನಿಬೋಧತ ॥**

**ಸೂತ :-** ಕಶ್ಯಪ ಮುನಿಗಳ ಪತ್ನಿಯರನ್ನೂ ಅವರಿಂದ ಹುಟ್ಟಿದ ಪುತ್ರಪೌತ್ರಾದಿ ಸಂತತಿ ವಿಸ್ತಾರವನ್ನೂ ಹೇಳುತ್ತೇನೆ. ಕಶ್ಯಪ ಋಷಿಗೆ ದಕ್ಷ ಪ್ರಜಾಪತಿಯು ತನ್ನ ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧ ವಶಾ, ಇರಾ, ಕದ್ರೂ, ವಿಶ್ವಾ, ಮುನಿ ಎಂಬ ಹದಿಮೂರು ಕನ್ಯೆಯರನ್ನು ಕೊಟ್ಟು ಮದುವೆ ಮಾಡಿದ್ದನು. ಈ ಕಶ್ಯಪ ಕುಟುಂಬಿನಿಯರ ಸಂತಾನಾಭಿವೃದ್ಧಿಯಿಂದ ಪ್ರಪಂಚವೆಲ್ಲವೂ ತುಂಬಿ ತುಳುಕುವಂತಾಯಿತು. ಚಾಕ್ಷುಷಮನ್ವಂತರದಲ್ಲಿ ತುಷಿತರೆಂಬ ದೇವತೆಗಳ ಒಂದು ಗಣವಿದ್ದಿತು. ಅವರೇ ವೈವಸ್ವತಮನ್ವಂತರದಲ್ಲಿ ಕಶ್ಯಪಪತ್ನಿ ಅದಿತಿದೇವಿಯ ಉದರದಿಂದ ಜನಿಸಿ ಆದಿತ್ಯರೆಂದು ಪ್ರಸಿದ್ಧರಾದರು. ಇಂದ್ರ, ಧಾತಾ, ಭಗ, ತ್ವಷ್ಟಾ, ಮಿತ್ರ, ವರುಣ, ಯಮ, ವಿವಸ್ವಾನ್, ಸವಿತಾ, ಪೂಷಾ, ಅಂಶುಮಾನ್ ಮತ್ತು ವಿಷ್ಣು ಇವರೇ ಹನ್ನೆರಡು ಜನ ಅದಿತಿ ಪುತ್ರರಾದ ದ್ವಾದಶಾದಿತ್ಯರು. ಕೃಶಾಶ್ವಮುನಿಯ ಮಕ್ಕಳ ಹೆಸರು ದೇವಪ್ರಹರಣ ಎಂದಿದೆ. ಈ ಎಲ್ಲ ದೇವಗಣದ ವ್ಯಕ್ತಿಗಳು ಪ್ರತಿಯೊಂದು ಮನ್ವಂತರದಲ್ಲಿಯೂ ಜನಿಸಿ ಕಲ್ಪಾಂತಕಾಲದಲ್ಲಿ ಮತ್ತೆ ಲಯವನ್ನು ಹೊಂದುವರು.

ಕಶ್ಯಪ ಕಾಮಿನಿಯಾದ ದಿತಿದೇವಿಗೆ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂದು ಇಬ್ಬರು ಮಕ್ಕಳು. ಹಿರಣ್ಯಕಶ್ಯಪನಿಗೆ ಪ್ರಹ್ಲಾದ, ಅನುಹ್ಲಾದ, ಸಂಹ್ಲಾದ, ಹ್ಲಾದ ಎಂದು ನಾಲ್ಕು ಪುತ್ರರು. ಪ್ರಹ್ಲಾದನಿಗೂ ಆಯುಷ್ಮಾನ್, ಶಿಬಿ, ಬಾಷ್ಕಲ, ವಿರೋಚನ ಎಂದು ಪುತ್ರಚತುಷ್ಟಯ. ವಿರೋಚನನ ಮಗನೇ ಬಲಿಚಕ್ರವರ್ತಿ. ಅವನಿಗೆ ನೂರು ಪುತ್ರರು. ಅವರಲ್ಲಿ ಬಾಣಾಸುರ ಜ್ಯೇಷ್ಠ. ಉಳಿದವರಲ್ಲಿ ಧೃತರಾಷ್ಟ್ರ, ಸೂರ್ಯ, ಚಂದ್ರ, ಚಂದ್ರಾಂಶು, ತಾಪನ, ನಿಕುಂಭ, ನಾಭ, ಗುರ್ವಕ್ಷ, ಕುಕ್ಷಿಭೀಮ, ವಿಭೀಷಣ ಇವರಿಷ್ಟು ಜನರು ಗುಣಿಗಳು. ಸಾತ್ವಿಕರು. ಸಜ್ಜನರು. ಬಾಣನು ಸರ್ವವಿಧವಾದ ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಪ್ರವೀಣ. ಅವನಿಗೆ ಸಾವಿರ ತೋಳುಗಳು. ಮಹಾತಪಸ್ವಿ. ಅವನ ಉಗ್ರ ತಪಸ್ಸಿಗೆ ಮೆಚ್ಚಿ ಪರಮೇಶ್ವರನು ಅವನ ರಾಜಧಾನಿಯಲ್ಲಿ ನಿರಂತರವೂ ನೆಲೆ ನಿಂತಿದ್ದನು. ಆ ಶಿವನ ಸಂತತ ಸಮಾರಾಧನೆಯಿಂದ ಬಾಣಾಸುರನು ಶಿವಸಾರೂಪ್ಯಹೊಂದಿ ಮಹಾಕಾಲ ಎನಿಸಿದನು. ಹಿರಣ್ಯಾಕ್ಷನಿಗೆ ಉಲೂಕ, ಶಕುನಿ, ಭೂತಸಂತಾಪನ, ಮಹಾನಾಭಿ ಎಂದು ನಾಲ್ಕುಜನ ಮಕ್ಕಳು. ಇವರಿಂದ ಮುಂದೆ ಹುಟ್ಟಿದ ಮಕ್ಕಳು

ಮೊಮ್ಮಕ್ಕಳಿಗೆ ಸಂಖ್ಯೆಯೇ ಇದ್ದಂತಿಲ್ಲ. ಎಪ್ಪತ್ತೇಳು ಕೋಟಿ ಪುತ್ರ, ಪೌತ್ರರು ಆ ಹಿರಣ್ಯಾಕ್ಷ ಪುತ್ರ ಚತುಷ್ಟಯಕ್ಕೆ ಇದ್ದರು ಎಂದು ಹೇಳುತ್ತಾರೆ. ಅವರೆಲ್ಲರೂ ಧೀರರು. ಎಲ್ಲರೂ ಕ್ರೂರರೂ, ಎಲ್ಲರ ದೇಹಗಳು ಅಮಾನುಷ ಅಕರಾಳ ವಿಕರಾಳ.

ಮತ್ತೊಬ್ಬ ಕಶ್ಯಪಕಾಮಿನಿಯಾದ ದೇವಿಗೆ ಮದಾಂಧರಾದ ನೂರುಜನ ಶನಿಸಂತಾನ. ಅವರೆಲ್ಲ ಶೂರರಿದ್ದಷ್ಟೇ ಸೊಕ್ಕಿನವರು. ಅವರಲ್ಲಿ ವಿಪ್ರಚಿತ್ತಿ ಹಿರಿಯ. ಅವನ ಕೆಳಗೆ ದ್ವಿಮೂರ್ಧ, ಶಕುನಿ, ಶಂಕು, ಶಿರೋಧರ, ಅಯೋಮುಖ, ಶಂಬರ, ಕಪಿಶ, ವಾಮನ, ಮಾರೀಚ, ಮೇಘವಾನ್, ಇರಾಗರ್ಭ, ಶಿರಸ್, ವಿದ್ರಾವಣ, ಕೇತು, ಕೇತುವೀರ್ಯ, ಶತಹ್ರದ, ಇಂದ್ರಜಿತ್, ಸಪ್ತಜಿತ್, ವಜ್ರನಾಭ, ಏಕಚಕ್ರ, ಮಹಾಬಾಹು, ವಜ್ರಾಕ್ಷ, ತಾರಕ, ಅಸಿಲೋಮ, ಪುಲೋಮ, ಬಿಂದು, ಬಾಣ, ಸ್ವರ್ಭಾನು, ವೃಷಪರ್ವ ಮುಂತಾದವರು ಉತ್ಪನ್ನರಾದರು. ಸ್ವರ್ಭಾನುವಿಗೆ ಪ್ರಭಾ, ಪುಲೋಮನಿಗೆ ಶಚೀ, ಮಯನಿಗೆ ಉಪದಾನವಿ, ಮಂಡೋದರಿ, ಕುಹೂ ಎಂದು ಕನ್ಯಾಮಣಿಗಳು ಜನಿಸಿದರು. ವೃಷ ಪರ್ವನಿಗೆ ಶರ್ಮಿಷ್ಠಾ, ಸುಂದರಿ, ಚಂದ್ರಾ ಎಂದು ಮೂವರು ಹೆಣ್ಣುಮಕ್ಕಳು. ಪುಲೋಮಾ, ಕಾಲಿಕಾ, ಇವರಿಬ್ಬರೂ ಅಗ್ನಿಯ ಮಕ್ಕಳು.

ಈ ಪುಲೋಮಾ ಹಾಗೂ ಕಾಲಿಕಾ ಎಂಬ ಇಬ್ಬರೂ ಅಗ್ನಿ ತನುಜೆಯರನ್ನೂ ಕಶ್ಯಪಋಷಿಗೆ ಮದುವೆಮಾಡಿಕೊಟ್ಟಿತ್ತು. ಇವರಿಬ್ಬರೂ ಅಗ್ನಿ ಕುಮಾರಿಯರೂ ಬಲಿಷ್ಠರು. ಧೈರ್ಯವತಿಯರು ಆಗಿದ್ದರು. ಇವರೀರ್ವರಿಂದ ಕಶ್ಯಪಮುನಿಗೆ ಅರವತ್ತುಸಾವಿರಜನ ಮಹಾಬಲಿಷ್ಠರಾದ ಪುತ್ರಪಡೆ ಉತ್ಪನ್ನವಾಯಿತು. ಪುಲೋಮೆಯ ಪುತ್ರರು ಪೌಲೋಮರು, ಕಾಲಿಕೆಯ ಮಕ್ಕಳು ಕಾಲಕೇಯರೆಂದು ಹೆಸರಾದರು. ಇವರು ಬ್ರಹ್ಮದೇವರಿಂದ ಅವಧ್ಯತ್ವ ವರಪಡೆದು ಹಿರಣ್ಯಪುರದಲ್ಲಿ ವಾಸಿಸುತ್ತಿದ್ದರು. ಮುಂದೆ ಇವರನ್ನು ಅರ್ಜುನನು ಸಂಹಾರಗೈದನು. ವಿಪ್ರಚಿತ್ತಿಗೆ ಸಿಂಹಿಕೆಯಲ್ಲಿ ಸೈಂಹಿಕೇಯರು ಎಂಬ ದೈತ್ಯರು ಜನಿಸಿದರು. ಹಿರಣ್ಯಕಶಿಪುವಿಗೆ ಹದಿಮೂರು ಜನ ಸೋದರಅಳಿಯಂದಿರಿದ್ದರು. ವ್ಯಂಸ, ಕಲ್ಪ, ನಲ, ವಾತಾಪಿ, ಇಲ್ವಲ, ನಮುಚಿ, ಶ್ವಸೃಪ, ಅಜನ, ನರಕ, ಕಾಲನಾಭ, ಸರಮಾಣ, ಕಾಲವೀರ್ಯ, ವಿಖ್ಯಾತ. ಇವರೆಲ್ಲರಿಂದ ದಾನವವಂಶವು ಬಲಿಷ್ಠವಾಗಿ ಬೆಳೆಯಿತು. ಹಿರಣ್ಯಕಶಿಪು ಪುತ್ರ ಪ್ರಹ್ಲಾದನ ಸಂತಾನವಾದ ನಿವಾತಕವಚರು ಸುರಾಸುರರಿಗೆ ಅವಧ್ಯರಾಗಿದ್ದರು. ಪರಮೇಶ್ವರನ ಪರಮಾನುಗ್ರಹದ ಬಲದಿಂದ ಅರ್ಜುನನು ಅವರೆಲ್ಲರನ್ನೂ ಕೊಚ್ಚಿಹಾಕಿದನು. ತಾಮ್ರಾ ಎಂಬ ಕಶ್ಯಪಭಾರ್ಯೆಗೆ ಶುಕೀ, ಶ್ಯೆನೀ, ಭಾಸೀ, ಸುಗ್ರೀವೀ, ಗೃಧ್ರಿಕಾ, ಶುಚಿ ಎಂದು ಆರು ಕನ್ನಿಕೆಯರು. ಜಗತ್ತಿನಲ್ಲಿಯ ಪಶುಪಕ್ಷಿ ಪ್ರಪಂಚವೆಲ್ಲವೂ ಈ ಆರು ಕಶ್ಯಪ ಕುಮಾರಿಯರ ಸಂತಾನಭೂತವಾದುದೇ.

ಶುಕಿಯಿಂದ ಗಿಳಿ ಗೂಬೆಗಳು, ಶ್ಯೇನಿಯಿಂದ ಗಿಡುಗಗಳು, ಭಾಸಿಯಿಂದ ಟಿಟ್ಟಿಭಗಳು, ಗೃಧ್ರಿಯಿಂದ ಹದ್ದು, ಕಪೋತ, ಪಾರಿವಾಳಗಳು, ಶುಚಿಯಿಂದ ಪ್ಲವ, ಪತಿಯಿಂದ ಹಂಸಸಾರಸ ಕ್ರೌಂಚಗಳು, ಸುಗ್ರೀವಿಯಿಂದ ಆಡು, ಕುದುರೆ, ಕತ್ತೆ, ಒಂಟೆ, ಟಗರುಗಳು ಜನಿಸಿದವು. ಮತ್ತೊಬ್ಬ ಕಶ್ಯಪಾಂಗನೆ ವಿನತೆಯು ಗರುಡ ಅರುಣ ಎಂಬ ಪಕ್ಷಿರಾಜರಿಗೂ ಮಿಂಚುಮೈಯ ಸೌದಾಮಿನಿ ಎಂಬ ಹೆಣ್ಣುಮಗಳಿಗೂ ಜನ್ಮ ಕೊಟ್ಟಳು.

ಅರುಣನಿಗೆ ಸಂಪಾತಿ, ಜಟಾಯು ಎಂಬ ಇಬ್ಬರು ಮಕ್ಕಳು. ಸಂಪಾತಿಯ ಮಗನಾದ ಬಭ್ರುವು ವೇಗದಿಂದ ಹಾರುವುದರಲ್ಲಿ ಹೆಸರುವಾಸಿ. ಜಟಾಯುವಿನ ಮಕ್ಕಳಲ್ಲಿ ಕರ್ಣಕಾರ, ಶತಗಾಮಿ ಇಬ್ಬರು ಸುಪ್ರಸಿದ್ಧರು. ರಜ್ಜುಪಾಲಿ ಭೇರುಂಡರು ಜಟಾಯುನ ಮಕ್ಕಳೇ. ಇವರ ಮಕ್ಕಳು ಮೊಮ್ಮಕ್ಕಳು ಆದಿಯಾಗಿ ಪಕ್ಷಿಪ್ರಪಂಚವು ಬೆಳೆದಿದ್ದು ಅದಕ್ಕೆ ಅಂತಪಾರವೂ ಇಲ್ಲ. ಅಂಕಿಸಂಖ್ಯೆಯೂ ಇಲ್ಲ. ಸುರಸಾ ಎಂಬ ಇನ್ನೊಬ್ಬ ಕಶ್ಯಪ ಸತಿಯು ಸಾವಿರಾರು ಹಾವುಗಳನ್ನೇ ಹೆತ್ತಳು. ಇವಳ ತಂಗಿಯಾದ ಕದ್ರೂದೇವಿಯ ಬಸಿರು ಇನ್ನೂ ವಿಚಿತ್ರ. ಅವಳು ಸಾವಿರ ಸರ್ಪಗಳನ್ನು ಹಡೆದಳು. ಆಶ್ಚರ್ಯದ ಮಾತೆಂದರೆ ಕದ್ರೂಕುಮಾರರಾದ ಪ್ರತಿಯೊಂದು ಹಾವಿಗೂ ಸಾವಿರ ಸಾವಿರ ಹೆಡೆಗಳು. ಈ ಸಹಸ್ರ ಸಂಖ್ಯೆಯ ಸರ್ಪ ಸಂತಾನದಲ್ಲಿ ಶೇಷ, ವಾಸುಕಿ, ಕರ್ಕೋಟಕ, ಶಂಖ, ಐರಾವತ, ಕಂಬಲ, ಧನಂಜಯ, ಮಹಾನೀಲ, ಪದ್ಮ, ಅಶ್ವತರ, ತಕ್ಷಕ, ಏಲಾಪತ್ರ, ಮಹಾಪದ್ಮ, ಧೃತರಾಷ್ಟ್ರ, ಬಲಾಹಕ, ಶಂಖಪಾಲ, ಮಹಾಶಂಖ, ಪುಷ್ಪ, ದೌಂಷ್ಟ್ರ, ಶುಭಾವನ, ಶಂಕುರೋಮ, ಬಹುಲ, ವಾಮನ, ಪಾಣಿನ, ಕಪಿಲ, ದುರ್ಮುಖ ಮತ್ತು ಪತಂಜಲಿ ಮುಂತಾದ ಇಪ್ಪತ್ತಾರು ಹಾವುಗಳು ಮುಖ್ಯರಾಗಿದ್ದಾರೆ. ಇವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಮರಿಗಿಮಕ್ಕಳು ಎಂದು ಹುಟ್ಟಿ ಹರಿದು ಬೃಹದಾಕಾರವಾಗಿ ಬೆಳೆದುನಿಂತ ಸರ್ಪ ಸಂತಾನವು, ಎಣಿಸಲಿಕ್ಕೆ ಬಾರದಷ್ಟು ವಿಶ್ವವಿಸ್ತತವಾಗಿತ್ತು. ಮುಂದೆ ಪಾಂಡವವಂಶದ ಜನಮೇಜಯ ರಾಜನು ಒಂದು ಹಾವುಗಳ ಹೋಮಮಾಡಿ ಬಹುಭಾಗವನ್ನು ಕೊಂದುಹಾಕಿದನು, ಸುಟ್ಟುಹಾಕಿದನು.

ಕ್ರೋಧವಶಾ ಎಂಬ ಕಶ್ಯಪರ ಇನ್ನೊಬ್ಬ ಮಡದಿಯು ತನ್ನ ಹೆಸರಿಗೆ ಅನುರೂಪಳಾಗಿಯೇ ಇದ್ದಳು. ಅವಳಿಗೆ ಯಾವಾಗಲೂ ಸಿಟ್ಟು. ಅವಳ ಮಕ್ಕಳೂ ಎಲ್ಲರೂ ಕೋಪ ಸಂತಪ್ತರಾಗಿಯೇ ಹುಟ್ಟಿದರು. ತಮ್ಮ ಬಾಹು ಬಲದಿಂದ ಉಬ್ಬಿ ಕೊಬ್ಬಿದ ಕ್ರೋಧ, ವಶ ಎಂಬ ಈ ದೈತ್ಯರ ದೊಡ್ಡ ಗುಂಪನ್ನು ಬಲಭೀಮನು ದ್ವಾಪರಯುಗದಲ್ಲಿ ಗದಾಪ್ರಹಾರದಿಂದ ಹೊಡೆದುಹಾಕಿದನು. ಈ ಕಶ್ಯಪರ ಇನ್ನೂ ಒಬ್ಬ ಭಾರ್ಯೆಯ ಹೆಸರು ಸುರಭಿ. ಹಸುಗಳು ಚೆಲುವಿನ ಹೆಂಗಳೆಯರು. ಹಾಗೂ ರುದ್ರ ಗಣಂಗಳು ನಿಯಮನಿಷ್ಠಳಾದ ಈ ಸುರಭಿಯ ಸಂತಾನ. ಕಶ್ಯಪ ಮುನಿಗಳಿಗೆ ಮುನಿ ಎಂಬ ಹೆಸರಿನ ಮಗದೊಬ್ಬ ಮಾನಿನಿ ಇದ್ದಳು. ಮುನಿ ವೃಂದವೆಲ್ಲವೂ ಆ ಮುನಿ ಮಾನಿನಿಯ ಮಕ್ಕಳೇ. ಅಪ್ಸರೆಯರಿಗೂ ಅವಳೇ ತಾಯಿ. ಅರಿಷ್ಟಾ ಎಂಬ ಕಶ್ಯಪಾಂಗನೆಯಿಂದ ಕಿನ್ನರರು ಗಂಧರ್ವರು ಜನ್ಮಪಡೆದರು. ಹುಲ್ಲು, ಮರ, ಬಳ್ಳಿ, ಪೊದೆ ಮುಂತಾದವುಗಳೆಲ್ಲವೂ ಇರಾ ಎಂಬ ಕಶ್ಯಪ ಕುಟಂಬಿನಿಯ ಸಂತಾನ, ವಿಶ್ವಾ ಎಂಬ ಕಶ್ಯಪರ ಧರ್ಮಪತ್ನಿಯಿಂದ ಕೋಟಿಕೋಟಿ ಯಕ್ಷರಾಕ್ಷಸರು ಹುಟ್ಟಿಬಂದರು. ಇದೆಲ್ಲ ಆದ ಬಳಿಕ ದಿತಿದೇವಿಯು ಕಶ್ಯಪರಿಂದ ನಲವತ್ತೊಂಬತ್ತು ಮಂದಿ ಮರುದ್ಗಣವನ್ನು ಪುತ್ರರಾಗಿ ಪಡೆದಳು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಆರನೆಯ ಅಧ್ಯಾಯವು ಮುಗಿದುದು*

—o—

**ಋಷಿಯ ಉವಾಚಃ**

**''ದಿತೇಃ ಪುತ್ರಾ ಕಥಂ ಜಾತಾ ಮರುತೋ ದೇವವಲ್ಲಭಾಃ ॥**
**ದೇವೈರ್ಜಗ್ಮುಶ್ಚ ಸಾಪತ್ನೈಃ ಕಸ್ಮಾತ್ತೇ ಸಖ್ಯಮುತ್ತಮಮ್ ॥**

**ಋಷಿಗಳು** :- ದಿತಿಯ ಮಕ್ಕಳೆಲ್ಲರೂ ದೈತ್ಯರೇ ತಾನೇ ! ಅವರು ದೇವತೆಗಳಿಗೆ ಪ್ರಿಯರು ಹೇಗೆ ಆದರು ? ದೇವ ದೈತ್ಯರಲ್ಲಿ ಸ್ವಾಭಾವಿಕ ದ್ವೇಷವಿದ್ದು ದಿತಿ ಪುತ್ರರಿಗೆ ದೇವತೆಗಳು ವೈರಿಗಳು. ಆ ವೈರಿಗಳಾದ ದೇವತೆಗಳೊಂದಿಗೆ ದಿತಿಯ ಮಕ್ಕಳಿಗೆ ಗೆಳೆತನವು ಏರ್ಪಡಲು ಕಾರಣವೇನು ? ಇದನ್ನು ನಮಗೆ ವಿಶದಪಡಿಸಬೇಕು.

**ಸೂತ** :- ಹಿಂದೆ ದೇವ ದೈತ್ಯಸಂಗ್ರಾಮದಲ್ಲಿ ಶ್ರೀ ಹರಿಯು ದೇವಪಕ್ಷವನ್ನು ವಹಿಸಿ ದೈತ್ಯರನ್ನು ಸಂಪೂರ್ಣವಾಗಿ, ವಂಶಧ್ವಂಸವಾಗುವಂತೆ ಸಂಹರಿಸಿದನು. ಇದರಿಂದ ದಿತಿಯ ಮಕ್ಕಳೂ ಮೊಮ್ಮಕ್ಕಳೂ ಎಲ್ಲರೂ ಹತರಾದರು. ಇದರಿಂದ ಅವಳಿಗೆ ಬಹಳ ದುಃಖವಾಯಿತು. ಆಗ ಅವಳು ಕರ್ಮಾಚರಣೆಗೆ ಮುಖ್ಯ ಸಾಧನವಾದ ಕರ್ಮಭೂಮಿ ಭೂಲೋಕಕ್ಕೆ ಬಂದಳು. ಸರಸ್ವತೀನದಿಯ ತೀರದಲ್ಲಿರುವ ಸ್ಯಮಂತ ಪಂಚಕ ಕ್ಷೇತ್ರದಲ್ಲಿ ನಿಂತು ಪತಿಯನ್ನು ಪ್ರಸನ್ನೀಕರಿಸಿಕೊಳ್ಳಲಿಕ್ಕಾಗಿ ತಪಸ್ಸನ್ನು ಕೈಕೊಂಡಳು. ಮುನಿಯಂತೆ ಆ ಮಾನಿನಿಯೂ ಕಂದಮೂಲಫಲಗಳನ್ನು ಸೇವಿಸಿ ಚಾಂದ್ರಾಯಣಾದಿ ವ್ರತಗಳನ್ನು ಅನುಷ್ಠಾನ ಮಾಡಿದಳು. ಹೀಗೆ ನೂರುವರ್ಷಗಳವರೆಗೆ ಋಷಿವ್ರತದಿಂದ ಆ ರಮಣೀಮಣಿಯು ಕಠಿಣತರವಾದ ಕೃಚ್ಛ್ರಚಾಂದ್ರಾಯಣಾದಿವ್ರತಗಳನ್ನು ಮಾಡುತ್ತ ದೇಹವನ್ನು ಸವೆಸಿದಳು. ಈ ತಪೋನುಷ್ಠಾನದಲ್ಲಿಯೇ ಮುಪ್ಪು ಅವಳನ್ನು ಅಪ್ಪಿತು. ದುಃಖತಪ್ತಳಾಗಿ ಅವಳು ವಶಿಷ್ಠಾದಿ ಮಹರ್ಷಿಗಳನ್ನು ಕೇಳಿದಳು. ''ಪೂಜ್ಯರೇ, ನನ್ನ ಪುತ್ರಶೋಕವು ಕಳೆಯಬೇಕು. ಮತ್ತು ಇಹಲೋಕ ಪರಲೋಕಗಳಲ್ಲಿ ನನಗೆ ಸೌಭಾಗ್ಯ ಪ್ರಾಪ್ತಿಯಾಗಬೇಕು. ಇಂಥ ವ್ರತವನ್ನು ಹೇಳಿ''. ಆಗ ವಶಿಷ್ಠರೇ ಮೊದಲಾದ ಮುನಿಶ್ರೇಷ್ಠರು ಆ ದಿತಿ ದೇವಿಯ ಇಷ್ಟಪ್ರಾಪ್ತಿ ಮತ್ತು ಅನಿಷ್ಟ ನಿವಾರಣೆಗಾಗಿ **ಮದನದ್ವಾದಶೀವ್ರತ**ವನ್ನು ಹೇಳಿಕೊಟ್ಟರು. ಅದರ ಪ್ರಭಾವದಿಂದ ದಿತಿಯ ಪುತ್ರನಾಶದ ದುಃಖವು ಕಡಿಮೆ ಆಯಿತು.

**ಋಷಿ** :- ಸೂತರೇ, ಮದನದ್ವಾದಶೀ ವ್ರತವನ್ನು ನಮಗೆ ಕೇಳಬೇಕೆಂಬ ಇಚ್ಛೆ ಆಗಿದೆ. ಇದೇ ವ್ರತದ ಪ್ರಭಾವದಿಂದಲೇ ದಿತಿ ದೇವಿಯು ನಲವತ್ತೊಂಬತ್ತು ಜನ ಪುತ್ರರನ್ನು ಪಡೆದಳಷ್ಟೇ ?

**ಸೂತ** :- ಅಂದು ವಶಿಷ್ಠಾದಿ ಮುನಿಗಳು ಹೇಳಿದ ಆ ಮದನದ್ವಾದಶೀ ವ್ರತದ ವಿಧಿವಿಧಾನವನ್ನು ನಿಮಗೆ ನಾನು ಈಗ ನಿರೂಪಿಸುತ್ತೇನೆ ಕೇಳಿರಿ. ಚೈತ್ರ ಶುಕ್ಲ ದ್ವಾದಶೀ ದಿನದಂದು ಈ ವ್ರತವನ್ನುನಿಷ್ಠೆಯಿಂದ ಪ್ರಾರಂಭಿಸಬೇಕು. ಮೊದಲು ಬಿಳಿಅಕ್ಕಿ ತುಂಬಿದ ಕಲಶವನ್ನು ಸ್ಥಾಪನೆ ಮಾಡಬೇಕು.

ಕಬ್ಬಿನ ಜಲ್ಲೆಯ ಮಂಟಪಮಾಡಿ, ಬಗೆಬಗೆಯ ಹಣ್ಣುಕಾಯಿ ಇರಿಸಬೇಕು. ಬಿರುಕು ಬಿಡದ ಆ ಕಲಶಕ್ಕೆ ಎರಡು ಬಿಳಿ ಬಟ್ಟೆಗಳನ್ನು ಹೊದಿಸಿ ಬಿಳಿ ಗಂಧವನ್ನು ಲೇಪಿಸಬೇಕು. ಅದರ ಮೇಲೆ ಬೆಲ್ಲ ತುಂಬಿದ ತಾಮ್ರದ ಪಾತ್ರೆ. ಅದರ ಮೇಲೆ ಬಾಳೆ ಎಲೆಯಲ್ಲಿ ಕಾಮನ ಪ್ರತಿಮೆಯನ್ನು ಸ್ಥಾಪಿಸಬೇಕು. ಕಾಮನ ಎಡಗಡೆ ಸಕ್ಕರೆಯೊಡನೆ ರತಿಯನ್ನೂ ಇಡಬೇಕು. ಮುಂದೆ ನಾನಾ ಭಕ್ಷ್ಯಗಳನ್ನು ನೈವೇದ್ಯಕ್ಕೆ ಅರ್ಪಿಸಿ ದಕ್ಷಿಣೆಯನ್ನು ಇರಿಸಬೇಕು. ಅನಂತರ ಪರಿಮಳ ಧೂಪಹಾಕಿ ಗಾನವನ್ನು ಹಾಡಿಸಬೇಕು. ವಾದ್ಯವನ್ನು ಬಾರಿಸಬೇಕು. ಕಾಮನ ಕಥೆ ಹಾಗೂ ಕೃಷ್ಣನ ಮಹಿಮೆಗಳನ್ನು ಹೇಳಿಸಬೇಕು. ಕಾಮ ವಾಚಕವಾದ ಅನಿರುದ್ಧ, ಪ್ರದ್ಯುಮ್ನ ಮುಂತಾದ ಶ್ರೀ ಹರಿಯ ನಾಮಗಳನ್ನು ಉಚ್ಚರಿಸಿ ವಿಷ್ಣುವಿನ ಪೂಜೆಯನ್ನು ಆ ಕಾಮನ ಪ್ರತಿಮೆಯಲ್ಲಿಯೇ ನಡೆಸಬೇಕು. ಪರಿಮಳ ತುಂಬಿದ ನೀರಿನಿಂದ ಅಭಿಷೇಕ ಮಾಡಿ ಬಿಳಿ ಹೂವು ಅಕ್ಷತೆ ಎಳ್ಳುಗಳಿಂದ ಭಗವಂತನನ್ನು ಅರ್ಚಿಸಬೇಕು.

'ಕಾಮಾಯ ನಮಃ ಪಾದೌ ಪೂಜಯಾಮಿ ' ಎಂದು ಪಾದಗಳಿಗೆ ಹೂವುಗಳನ್ನು ಏರಿಸಬೇಕು. 'ಸೌಭಾಗ್ಯದಾಯ ನಮಃ' ಎಂದು ಮೊಣಕಾಲುಗಳನ್ನು, 'ಸ್ಮರಾಯನಮಃ ಎಂದು ತೊಡೆಗಳನ್ನು, 'ಮನ್ಮಥಾಯನಮಃ' ಎಂದು ನಡುವನ್ನು, 'ಸ್ವಚ್ಛೋದರಾಯ ನಮಃ' ಎಂದು ಹೊಟ್ಟೆಯನ್ನೂ, 'ಅನಂಗಾಯನಮಃ' ಎಂದು ಎದೆಯನ್ನೂ, 'ಪದ್ಮಮುಖಾಯನಮಃ' ಎಂದು ಮೋರೆಯನ್ನು, 'ಪಂಚಶರಾಯನಮಃ' ಎಂದು ತೋಳುಗಳನ್ನೂ, 'ಸರ್ವಾತ್ಮನೇನಮಃ' ಎಂದು ಶಿರಸ್ಸನ್ನೂ ಹೂವು ಏರಿಸಿ ಪೂಜಿಸಬೇಕು. ಇದು ಕಾಮಾಂತರ್ಗತನಾದ ಶ್ರೀಹರಿಯ ಅಥವಾ ಕಾಮರೂಪಿಕೇಶವನ ಪೂಜಾ ಪ್ರಕಾರ. ಹೀಗೆ ಮದನನಲ್ಲಿ ಅಂತರ್ಯಾಮಿಯಾಗಿ ಇದ್ದ ಮಧುಸೂದನನನ್ನು ಅರ್ಚನೆಮಾಡಿ ಮರುದಿನ ಪ್ರಾತಃಕಾಲದಲ್ಲಿ ಆ ಕಲಶವನ್ನು ಬ್ರಾಹ್ಮಣರಿಗೆ ದಾನ ಕೊಡಬೇಕು. ಭಕ್ತಿಯಿಂದ ಬ್ರಾಹ್ಮಣರ ಭೋಜನಮಾಡಿಸಿ ಯಥಾಶಕ್ತಿ ದಕ್ಷಿಣೆ ಕೊಡಬೇಕು. ಅನಂತರ ತಾನೂ ಕೂಡ ಉಪ್ಪನ್ನು ಬಿಟ್ಟು ಊಟ ಮಾಡಬೇಕು. ಅನಂತರ ಸರ್ವಾಂತರ್ಯಾಮಿಯಾದ ಕಾಮರೂಪಿ ಜನಾರ್ದನನು ಪ್ರೀತನಾಗಲಿ (ಪ್ರೀಯತಾಮತ್ರ ಭಗವಾನ್ ಕಾಮರೂಪೀ ಜನಾರ್ದನಃ) ಎಂದು ಮಂತ್ರವನ್ನು ಉಚ್ಚರಿಸಬೇಕು. ಮತ್ತು ಪ್ರಾರ್ಥಿಸಬೇಕು. ಈ ವ್ರತವನ್ನು ಇದೇ ರೀತಿಯಾಗಿ ಪ್ರತಿ ತಿಂಗಳವೂ ಮಾಡಬೇಕು. ತ್ರಯೋದಶೀದಿನ ಉಪವಾಸವಿದ್ದು ನಿರ್ವಿಕಾರನಾದ ಶ್ರೀಹರಿಯನ್ನು ಪೂಜಿಸಬೇಕು. ದ್ವಾದಶಿದಿನ ಒಂದು ಹಣ್ಣನ್ನು ಮಾತ್ರ ತಿಂದು ನೆಲದ ಮೇಲೆಯೇ ಮಲಗಬೇಕು. ಬಳಿಕ ಹದಿಮೂರನೆಯ ತಿಂಗಳಲ್ಲಿ ಘನೀಭೂತವಾದ ಹೆರೆತುಪ್ಪದಲ್ಲಿ ಆಕಳವನ್ನು ಬರೆದು ದಾನಕೊಡಬೇಕು. ಬಂಗಾರದ ಒಂದು ಮನ್ಮಥನ ಮೂರ್ತಿಯನ್ನು ಮಾಡಿಸಿ ದಿಂಬು, ಹೊದಿಕೆ, ಮೇಲ್ವಾಸು ಮುಂತಾದವುಗಳಿಂದ ಕೂಡಿದ ಶಯ್ಯೆಯನ್ನು ಕಾಮನಿಗೆ ದಾನಸಂಕಲ್ಪಮಾಡಿ ಅದನ್ನೂ ಆ ಕಾಮನ ಮೂರ್ತಿಯನ್ನೂ ಅಚ್ಚಬಿಳಿಬಣ್ಣದ ಒಂದು ಹಿಂಡುವ ಹಸುವನ್ನೂ ಬ್ರಾಹ್ಮಣ ದಂಪತಿಗಳಿಗೆ ದಾನ ಕೊಡಬೇಕು. ವಸ್ತ್ರ ಅಲಂಕಾರಗಳಿಂದ ತನ್ನ ಶಕ್ತ್ಯಾನುಸಾರ

ಗಂಧಾದಿಗಳನ್ನು ಲೇಪಿಸಿ ಪೂಜೆಮಾಡಿ ಪರಮಾತ್ಮನು ಪ್ರೀತನಾಗಲಿ ಎಂದು ಹೇಳಬೇಕು. ಆಕಳ ತುಪ್ಪದಿಂದಲೂ ಹಸುವಿನ ಹಾಲಿನಿಂದ ಮಾಡಿದ ಪಾಯಿಸದಿಂದಲೂ, ಮತ್ತು ಬಿಳಿ ಎಳ್ಳುಗಳಿಂದಲೂ ಕಾಮನ ಹೆಸರುಗಳನ್ನು ಹೇಳುತ್ತ ಹೋಮಮಾಡಬೇಕು. ಬ್ರಾಹ್ಮಣ ಭೋಜನ ಮಾಡಿಸಬೇಕು.

ಜಿಪುಣತನವನ್ನು ತೋರದೆ ನೆಲ್ಲು, ಕಬ್ಬು, ಹೂ, ಮಾಲೆ, ದಕ್ಷಿಣೆಗಳನ್ನು ಯಥಾಶಕ್ತಿ ದಾನಮಾಡಬೇಕು. ಈ ವಿಧಾನದಿಂದ ಮದನದ್ವಾದಶೀ ವ್ರತವನ್ನು ಮಾಡಿದರೆ ಸರ್ವಪಾಪ ಪರಿಹಾರವಾಗಿ ಇಹಲೋಕದಲ್ಲಿ ಒಳ್ಳೆ ಸಂತಾನ ಸೌಭಾಗ್ಯ ಫಲವನ್ನು ಹೊಂದುತ್ತಾರೆ. ಮುಂದೆ ಪರಲೋಕದಲ್ಲಿ ಶ್ರೀಹರಿಯ ಸಾಯುಜ್ಯ ಮೋಕ್ಷವನ್ನು ಪಡೆಯುತ್ತಾರೆ. ಇದನ್ನೆಲ್ಲ ಕೇಳಿ ದಿತಿಯು ಈ ಮದನದ್ವಾದಶಿ ವ್ರತವನ್ನು ಯಾವ ವಿಧಿಗೂ ಲೋಪಬಾರದಂತೆ ಸಾಂಗವಾಗಿ ಅನುಷ್ಠಾನ ಮಾಡಿದಳು. ವ್ರತದ ಮಹಿಮೆಯಿಂದ ಪತಿ ಕಶ್ಯಪರು ಅವಳಿದ್ದಲ್ಲಿಗೆ ಬಂದರು. ಕಠೋರ ವ್ರತಾನುಷ್ಠಾನದಿಂದ ಮೈಯೆಲ್ಲ ಒಣಗಿ ಹೋದ ದಿತಿ ದೇವಿಯನ್ನು ಸಂತೈಸಿ ಸಂತಸಪಡಿಸಿದನು. ಅದರಿಂದ ಮತ್ತೆ ಅವಳಲ್ಲಿ ಮೊದಲಿನ ತಾರುಣ್ಯದ ಲಲಿತಲಾವಣ್ಯ ಮರುಕಳಿಸಿ ಮಿಂಚಾಡತೊಡಗಿತು. ಹರ್ಷದುಂಬಿದ ಮಹರ್ಷಿ 'ಬೇಕಾದವರಬೇಡು' ಎಂದು ಹೇಳಿದರು. ಇದೇ ಸರಿಯಾದ ಸಮಯ ಎಂದುಕೊಂಡು ದಿತಿದೇವಿಯು ತನ್ನ ಮನಸ್ಸಿನಲ್ಲಿ ಬಹುದಿನದಿಂದ ಬಚ್ಚಿಟ್ಟ ಅಭಿಲಾಷೆಯನ್ನು ವರ ರೂಪವಾಗಿ ಕೇಳಿಕೊಂಡಳು.

''ನನಗೆ ಒಬ್ಬ ಮಗನನ್ನು ದಯಪಾಲಿಸಬೇಕು. ಅವನು ಇಂದ್ರನನ್ನು ಕೊಲ್ಲುವಷ್ಟು ಸಮರ್ಥನಾಗಿರಬೇಕು. ಸರ್ವ ದೇವತೆಗಳನ್ನೂ ನಿಗ್ರಹಿಸಿ ನಾಶ ಮಾಡುವಷ್ಟು ಪ್ರಚಂಡನಿರಬೇಕು ಅವನ ಬಲ ಪೌರುಷ. ಇಷ್ಟಾದರೂ ಅವನು ದುಷ್ಟನಾಗಿರಬಾರದು. ಮಹಾತ್ಮನಾಗಿರಬೇಕು. ಇಂಥ ಶೂರ, ಸಾತ್ವಿಕ, ಸುರಪತಿ ಸಂಹಾರಕ ಮತ್ತು ಸುರಾಂತಕನಾದ ಸಮರ್ಥ ಸಜ್ಜನ ಪುತ್ರನು ನನಗೆ ಹುಟ್ಟುವಂತೆ ವರವನ್ನು ಕೊಡಿರಿ.''

ದಿತಿ ಸತಿಯ ಈ ವಿಚಿತ್ರ, ಅಷ್ಟೇ ಕ್ರೂರವಾದ ವರದ ಯಾಚನೆಯನ್ನು ಕೇಳಿ ಕಶ್ಯಪರು ಗಂಭೀರವಾಗಿ ಹೇಳಿದರು. ''ಶುಭಾಂಗಿಯೇ, ನೀನು ಕೇಳಿದಂತೆ ನಾನು ವರವನ್ನು ಕೊಡುವೆನು. ಆದರೆ ಅದಕ್ಕಾಗಿ ಆಪಸ್ತಂಭ ಮುನಿಯು ಪುತ್ರೋತ್ಪತ್ತಿಗಾಗಿ ಯಜ್ಞವನ್ನು ಮಾಡಲಿ. ಅನಂತರ ನಾನು ಇಂದ್ರನನ್ನು ಸಂಹರಿಸಬಲ್ಲ ಗರ್ಭವನ್ನು ನಿನ್ನಲ್ಲಿ ಆಧಾನ ಮಾಡುವೆನು.'' ಎಂದು ಹೇಳಿ ದಿತಿಗಾಗಿ ಪುತ್ರೇಷ್ಟಿಯಾಗ ಮಾಡಿಸಲಿಕ್ಕೆ ಅಪಸ್ತಂಭನಿಗೆ ಆಜ್ಞೆಮಾಡಿದರು. ಅದರಂತೆ ಅಪಸ್ತಂಭ ಋಷಿಯು ಅತ್ಯಧಿಕ ದ್ರವ್ಯ ಸಾಧ್ಯವಾದ ಪುತ್ರೇಷ್ಟಿ ಎಂಬ ಯಜ್ಞವನ್ನು ಮಾಡಿಸಿದನು. ಆದರಲ್ಲಿ 'ಇಂದ್ರ ಶತ್ರು' ವಾಗು ಎಂದು ಉಚ್ಚರಿಸಿ ಯಜ್ಞಾಗ್ನಿಯಲ್ಲಿ ಆಹುತಿಯನ್ನು ಹಾಕಿದನು.

ಯಂತ್ರೋಚ್ಚಾರಣೆಯ ಕ್ರಮ ವ್ಯತ್ಯಾಸವಾದುದರಿಂದ 'ಇಂದ್ರನನ್ನು ಕೊಲ್ಲುವ' ಮಗನ ಬದಲು 'ಇಂದ್ರನಿಂದ ಕೊಲ್ಲಲ್ಪಡುವ' ಮಗನು ಆಗಲಿ

ಎಂದು ಅರ್ಥ ಹೊರಟು ದೇವತೆಗಳಿಗೆ ತಿಳಿದು ಅವರೆಲ್ಲರು ಆನಂದಪಟ್ಟರು. ದೈತ್ಯದಾನವರೂ ಈ ವೇದ ಮಂತ್ರದ ಸ್ವರ ವ್ಯತ್ಯಾಸದಿಂದ ಆದ ವಿಪರೀತ ಅರ್ಥವನ್ನು ಗಮನಿಸಿ ಮೋರೆ ತಿರುವಿ ಖಿನ್ನರಾದರು. ''ಇಂದ್ರ ಶತ್ರುರ್ವರ್ಧಸ್ವ'' ಎಂದು ಮಂತ್ರ ಇಂದ್ರನನ್ನು ಕೊಲ್ಲುವವ (ಇಂದ್ರಸ್ಯಶತ್ರು) ನಾಗಿ ಬೆಳೆ ಎಂದು ಉದ್ದಿಷ್ಟವಾದ ಅರ್ಥ. ಆದರೆ ಹೋಮ ಮಾಡುವವನು ಸ್ವರವನ್ನು ಬದಲಿಸಿ ಹೇಳಿದ್ದರಿಂದ ''ಇಂದ್ರಃ ಶತ್ರುಃ ಯಸ್ಯ'' ಇಂದ್ರನೇ ಸಂಹಾರಕನಾಗಿರುವವನಾಗಿ ಬೆಳೆ. ಅರ್ಥಾತ್ ಇಂದ್ರನು ನಿನ್ನನ್ನು ಸಂಹರಿಸಲಿ. ಆದರೂ ನೀನು ಸಾಯದೇ ಮತ್ತೆ ಬೆಳೆದು ಬದುಕು ಎಂದು ಅರ್ಥವಾಗುವಂತೆ ಮಂತ್ರೋಚ್ಚಾರಣೆಯಾಯಿತು. ಮುಂದೆ ದಿತಿಯು ಗರ್ಭದಾರಣೆ ಮಾಡಿದಳು.

ಆಗ ಕಶ್ಯಪರು ಅವಳಿಗೆ ಹೇಳಿದರು. ''ಸುಂದರಿ, ಇದೇ ತಪೋವನದಲ್ಲಿ ಒಂದು ನೂರು ವರ್ಷಗಳವರೆಗೆ ಬಹು ಪ್ರಯತ್ನದಿಂದ ಈ ನಿನ್ನ ಬಸಿರನ್ನು ರಕ್ಷಿಸು. ಗರ್ಭಿಣಿಯಾದ ನೀನು ಸಂಜೆ ಊಟ ಮಾಡಬಾರದು. ಗಿಡದೆಡೆಯಲ್ಲಿ ಓಡಾಡಬಾರದು. ಮರದ ಬುಡದಲ್ಲಿ ಕೂಡಬಾರದು. ಮೆಣಸಿನಕಾಯಿ ಸಾಸಿವೆ ಮುಂತಾದವುಗಳ ಘಾಟಬರುವಲ್ಲಿ ನಿಲ್ಲಬಾರದು. ಒನಿಕೆಯಿಂದ ಕುಟ್ಟಬಾರದು. ಒರಳಿನಲ್ಲಿ ರುಬ್ಬಬಾರದು. ನೀರಿನಲ್ಲಿ ಮುಳುಗಿ ಮೈತೊಳೆಯಬಾರದು. ಜನಶೂನ್ಯವಾದ ಮನೆಗಳಲ್ಲಿ ಪ್ರವೇಶಿಸಬಾರದು. ಹಾವಿನ ಹುತ್ತದಮೇಲೆ ನಿಲ್ಲಬಾರದು. ಒಮ್ಮೆಲೆ ಯಾವುದರಿಂದಲೂ ಗಾಬರಿಯಾಗಬಾರದು. ಉಗುರಿನಿಂದ ನೆಲ ಕೆದರಬಾರದು. ಇದ್ದಲಿ ಬೂದಿಗಳಿಂದ ಬರೆಯಬಾರದು. ಯಾವಾಗಲೂ ಸುತ್ತಿ ಸುತ್ತಿ ಮಲಗಬಾರದು. ಆಯಾಸದ ಕೆಲಸ ಮಾಡಬಾರದು. ಯಾರೊಡನೆಯೂ ಕಲಹಕ್ಕೆ ಇಳಿಯಬಾರದು. ಮೈಕೈಒಡಮುರಿಯಬಾರದು. ಕೂದಲು ಕೆದರಬಾರದು. ಎಂದೂ ಅಶುಚಿಯಾಗಿ ಉಳಿಯಬಾರದು. ಉತ್ತರಕ್ಕೂ ಪಶ್ಚಿಮಕ್ಕೂ ತಲೆಮಾಡಿ ಮಲಗಬಾರದು. ಬಟ್ಟೆ ಇಲ್ಲದೆ ಇರಬಾರದು. ತೊಳೆದು ಕೊಂಡ ಕಾಲನ್ನು ಒರೆಸಿಕೊಳ್ಳದೆ ಇರಬಾರದು. ಅಮಂಗಳ ಶಬ್ದವನ್ನು ಉಚ್ಚರಿಸಬಾರದು. ಅತಿಹಾಸ್ಯ, ಅಟ್ಟಹಾಸಗಳನ್ನು ಬಿಟ್ಟುಬಿಡಬೇಕು. ನಿತ್ಯವೂ ಶುಭಕಾರ್ಯಗಳಲ್ಲಿ ಆಸಕ್ತಳಾಗಿ ಗುರುಹಿರಿಯರನ್ನು ಸೇವಿಸಬೇಕು. ಸುಗಂಧಿಬೇರು ಹಾಕಿದ ಬಿಸಿನೀರಿನಿಂದ ಸ್ನಾನ ಮಾಡಬೇಕು.

ಒಳ್ಳೇ ವಸ್ತ್ರಾಲಂಕಾರಗಳಿಂದ ದೇಹವನ್ನು ರಕ್ಷಿಸಿಕೊಂಡು ಪ್ರಸನ್ನ ಮನಸ್ಸಿನಿಂದ ನಗುಮುಖದಿಂದ ಪತಿಗೆ ಹಿತವಾದುದನ್ನು ಮಾಡುತ್ತಲೇ ಇರಬೇಕು. ಅವನ ಪ್ರೀತಿ ಕಾರ್ಯದಲ್ಲಿ ಸರ್ವದಾ ನಿರತಳಾಗಿರಬೇಕು. ದಾನ-ಧರ್ಮದ ಕೈ ಎಂದೂ ನಿಲ್ಲಬಾರದು. ಮೂರನೆ ತಿಂಗಳಿಂದ ರಾತ್ರಿ ಪೌರ್ಣಮಾ ವ್ರತವನ್ನು ಆಚರಿಸಬೇಕು. ಎಲ್ಲ ಹೆಂಗಸರೂ ಯಾವಾಗಲೂ ಹೀಗೇ ಇರಬೇಕು. ಗರ್ಭಿಣಿಯರಾದಾಗಂತೂ ವಿಶೇಷ ದಕ್ಷತೆಯಿಂದ ಈ ನಿಯಮ ಪಾಲಿಸಬೇಕು. ಇದರಿಂದ ದೀರ್ಘಾಯುಷಿಯೂ ಸುಶೀಲನೂ ಆದ ಪುತ್ರನು ಉತ್ಪನ್ನನಾಗುವನು. ಈ ನಿಯಮಕ್ಕೆ ಗರ್ಭಿಣಿ

ಹೆಣ್ಣುಮಕ್ಕಳು ವಿಪರೀತವಾಗಿ ನಡೆದರೆ ಗರ್ಭಪಾತವು ತಪ್ಪಿದಲ್ಲ. ಆದ್ದರಿಂದ ನೀನು ಜಾಗರೂಕಳಾಗಿ ನಾನು ಹೇಳಿದಂತೆ ನಡೆದು ನಿನ್ನ ಗರ್ಭವನ್ನು ರಕ್ಷಿಸಲು ಯತ್ನಿಸು. ನಿನಗೆ ಒಳ್ಳೆಯದಾಗಲಿ. ನಾನು ಹೋಗಿ ಬರುವೆ ನಿನಗೆ ಮಂಗಳವಾಗಲಿ ''

ಅದಕ್ಕೆ ದಿತಿಯು ''ನೀವು ಹೇಳಿದಂತೆ ನಡೆಯುವೆನು'' ಎಂದು ಉತ್ತರಿಸಿದಳು. ಆಗ ಅಲ್ಲಿದ್ದ ಪ್ರಾಣಿಗಳೆಲ್ಲವೂ ನೋಡುತ್ತಿದ್ದಂತೆಯೇ ಕಶ್ಯಪರು ಅಲ್ಲಿಯೇ ಅಂತರ್ಧಾನ ಹೊಂದಿದರು. ಅನಂತರ ಆ ದೈತ್ಯ ಮಾತೆಯು ಕಶ್ಯಪರು ಹೇಳಿದ ವಿಧಿವಿಧಾನಗಳನ್ನು ಚಾಚೂ ತಪ್ಪದೇ ವ್ರತದ ಅನುಷ್ಠಾನವನ್ನು ಕೈಕೊಂಡಳು. ಅದನ್ನು ಕಂಡು ಇಂದ್ರನು ಭಯಭ್ರಾಂತನಾಗಿ ದಿತಿಯ ಸೇವೆ ಮಾಡುವ ನೆವದಿಂದ ಸ್ವರ್ಗ ತೊರೆದು ಬಂದು, ಇಲ್ಲಿಯೇ ನಿಂತುಕೊಂಡನು. ದಿತಿಯ ಆಚಾರ-ವಿಚಾರ ಹಾಗೂ ನಿಯಮಾನುಷ್ಠಾನದಲ್ಲಿ ಎಲ್ಲಿಯಾದರೂ ತಪ್ಪು ತಡೆ ಕಾಣುವದೇನೋ ? ಎಂದು ಕಣ್ಣಲ್ಲಿ ಎಣ್ಣೆಹಾಕಿಕೊಂಡು ನಿರುಕಿಸುತ್ತ ಜಪಿಸಿ ಕುಳಿತನು. ಅತ್ಯಂತ ನಮ್ರನಾದ ಸುರಪತಿಯು ಮೇಲೆಮೇಲೆನೋಡಲು ಪ್ರಶಾಂತಮುಖ ಮುದ್ರೆಯುಳ್ಳಂತೆ ಕಂಡರೂ ಒಳಗೊಳಗೆ ಚಿಂತೆಯಿಂದ ಅವನ ಹೃದಯ ಬೇಯುತ್ತಿತ್ತು. ಒಂದು ನೂರು ವರ್ಷವು ಹೀಗೆ ಅನೂಚಾನವಾಗಿ ಯಾವ ಕುಂದುಕೊರತೆಗಳೂ ಇಲ್ಲದಂತೆ ಕಳೆಯಿತು. ಇನ್ನು ಮೂರು ದಿನ ಮಾತ್ರ ಉಳಿದಿತ್ತು.

''ಇನ್ನೂ ಮೂರು ದಿನ ದಾಟಿದರೆ ಕಶ್ಯಪರು ಹೇಳಿದ ಒಂದು ವರ್ಷದ ಅವಧಿಯು ಮುಗಿದು ಹೋಗುವದು, ಈಗ ನಾನು ಗೆದ್ದಂತಾಯಿತು.''ಎಂಬ ಕೃತಕೃತ್ಯತೆ ಭಾವವು ಅವಳಲ್ಲಿ ತುಂಬಿತ್ತು. ಈ ಆನಂದದ ಭರದಲ್ಲಿ ದಿತಿಯು ಒಂದು ಬಾರಿ ತನ್ನ ಕಾಲುಗಳನ್ನು ತೊಳೆಯದೆ ಕೂದಲ ಹರಡಿಕೊಂಡು ಪಶ್ಚಿಮಕ್ಕೆ ತಲೆ ಇಟ್ಟು ಮಲಗಿದಳು. ನಿದ್ದೆಯು ಜೋರಾಗಿ ಬಂದಿದ್ದರಿಂದ ಇದಾವುದರ ಪರಿವೆಯೂ ಅವಳಿಗೆ ಇರಲಿಲ್ಲ.

ಹೀಗೆ ನಿಯಮೋಲ್ಲಂಘನ ಮಾಡಿದ್ದರಿಂದ ಶಚೀಪತಿ ಇಂದ್ರನಿಗೆ ಅವಕಾಶವಾಯಿತು. ಅವನು ಸೂಕ್ಷ್ಮರೂಪದಿಂದ ಒಮ್ಮೆಲೇ ದಿತಿಯ ಉದರದಲ್ಲಿ ಪ್ರವೇಶ ಮಾಡಿದನು. ತನ್ನ ವಜ್ರಾಯುಧದಿಂದ ಆಗರ್ಭ ಪಿಂಡವನ್ನು ಹೊಡೆದು ಬಡೆದು ಹಾಕಿದನು. ಆ ಗರ್ಭವು ಏಳು ಭಾಗವಾಯಿತು. ಅದರಿಂದ ಸೂರ್ಯನಂತೆ ಕಾಂತಿಮಂತರಾದ ಏಳು ಬಾಲಕರು ರೂಪುಗೊಂಡರು. ಅವೆಲ್ಲ ಏಳು ಹುಡುಗರು ವಜ್ರಾಯುಧದ ಹೊಡೆತ ತಿಂದು ಅಳತೊಡಗಿದವು. ಇಂದ್ರನು ಅಳಕೂಡದೆಂದು ನಿಷೇಧಮಾಡಿದನು. ಅದನ್ನು ಕೇಳದೆ ಮತ್ತೂ ತಮ್ಮ ರೋದಂತಿಯನ್ನೇ ಮುಂದುವರೆಸಿದ ಆ ಏಳು ಗರ್ಭರೂಪಿ ಬಾಲಕರನ್ನು ಮತ್ತೆ ವಜ್ರಾಯುಧದಿಂದ ಹೊಡೆದ. ಒಂದೊಂದರಲ್ಲಿಯೂ ಒಡೆದು ಮತ್ತೆ ಏಳುಏಳು ಭಾಗವಾಗುವಂತೆ ದಿತಿಯ ಗರ್ಭದಲ್ಲಿಯೇ ಸೂಕ್ಷ್ಮ ರೂಪದಿಂದ ನಿಂತು ಹೊಡೆತ ಹಾಕಿದನು. ಹೀಗೆ ಒಟ್ಟು ನಲವತ್ತೊಂಬತ್ತು ಗರ್ಭದ ಚೂರುಗಳಾಗಿ ಅವೆಲ್ಲವೂ ಶಿಶುರೂಪದಿಂದ ಅಳತೊಡಗಿದವು. ಅವುಗಳಿಗೆಲ್ಲ ಇಂದ್ರನು 'ಮಾರೋದಿಷ್ಟ, ಮಾರುದತ ಎಂದು

ಸಮಾಧಾನಪಡಿಸಿ, ಅಳಬೇಡಿರಿ ಎಂದು ಹೇಳಿ ಮತ್ತೆ ಮತ್ತೆ ವಜ್ರದಿಂದ ಏಟು ಹಾಕಿದನು. ಅವು ಜನಿಸಿ ಮುಂದೆ ತನ್ನನ್ನು ಕೊಲ್ಲಬಹುದೆಂದು, ಭೀತಿ ಆ ಸ್ವರ್ಗದೊಡೆಯನಿಗೆ. ಆದರೆ ಎಷ್ಟು ಪ್ರಹರಿಸಿದರೂ ಚೂರುಚೂರಾದರೂ ಆ ಭ್ರೂಣದ ಖಂಡ ತುಂಡಗಳು ಸಾಯದೇ ಜೀವ ತುಂಬಿದ ಶಿಶುಗಳಾಗಿ ರೋದಿಸುವುದನ್ನು ಕಂಡು ಇಂದ್ರನಿಗೆ ಅತ್ಯಾಶ್ಚರ್ಯವಾಯಿತು. ''ಈ ದಿತಿಯ ಗರ್ಭದ ಶಕಲಗಳು ವಜ್ರಾಯುಧದಿಂದ ಹೊಡೆದರೂ ಯಾರ ಪ್ರಭಾವದಿಂದ ಸಂಜೀವಿತವಾಗಿ ಅಮರವಾಗಿವೆ ?'' ಎಂದು ದಿವ್ಯ ದೃಷ್ಟಿಯಿಂದ ವಿಚಾರಿಸಿದನು. ಇದು ''ದಿತಿದೇವಿಯು ಅನುಷ್ಠಾನಮಾಡಿದ ಮದನದ್ವಾದಶೀವ್ರತದ ಪುಣ್ಯಪ್ರಭಾವ '' ಎಂದು ಅವನಿಗೆ ನಿಶ್ಚಯವಾಯಿತು. ''ಒಂದಿದ್ದ ಇವಳ ಗರ್ಭವು ಏಳಾಗಿ ಮತ್ತೆ ಹೋಳಾಗಿ, ನಲವತ್ತೊಂಬತ್ತು ತುಂಡಾಗಿ ಬದುಕಿ ಉಳಿದಿದ್ದು ಶ್ರೀ ಕೃಷ್ಣಪೂಜೆಯ ಫಲವೇ ಸರಿ. ''ಮಾರುದತ'' ಎಂದು ನಾನು ಗರ್ಭದಲ್ಲಿ ಮೊಟ್ಟಮೊದಲು ಇವರಿಗೆ ಹೇಳಿದ್ದರಿಂದ 'ಮರುತರು' ಎಂದು, ಪ್ರಸಿದ್ಧಿ ಪಡೆಯಲಿ. ಹಾಗೂ ಯಜ್ಞದಲ್ಲಿ ಹವಿರ್ಭಾಗಿಗಳಾಗಲಿ ಎಂದು ದೇವೇಂದ್ರನು ದಿತಿಯಗರ್ಭಾಣುಗಳಿಗೆ ವರವನ್ನಿತ್ತನು.

ಆ ಬಳಿಕ ಇಂದ್ರನು ಹೊರಗೆ ಬಂದು ದಿತಿದೇವಿಗೆ ನಮಿಸಿ '' ತಾಯಿ, ಕ್ಷಮಿಸು. ನಾನು ಬದುಕುವುದಕ್ಕಾಗಿ ನಿನ್ನ ಗರ್ಭವನ್ನು ಹೊಡೆದು ಕೊಲ್ಲಬೇಕೆಂದು ಪ್ರಯತ್ನಿಸಿದೆ. ಆದರೆ ನಿನ್ನ ವ್ರತಾನುಷ್ಠಾನ ಹಾಗೂ ಶ್ರೀ ಕೃಷ್ಣ ಪೂಜೆಯ ಪುಣ್ಯವು ಬಲವತ್ತರವಿದ್ದುದರಿಂದ ನಿನ್ನ ಸಂತಾನ ಒಂದಕ್ಕೆ ನಲವತ್ತೊಂಬತ್ತಾಗಿ ಅಮರಗಣವಾಗಿ ಮಾರ್ಪಟ್ಟಿದೆ. ಅವರು ದೇವತೆಗಳಾಗಿ ನನ್ನ ಸೋದರರಾಗಿ ಸ್ವರ್ಗದಲ್ಲಿಯೇ ಇರಲಿ. ನನ್ನನ್ನು ಕ್ಷಮಿಸಿ, ನೀನೂ ಸ್ವರ್ಗಕ್ಕೆ ನಡೆ'' ಎಂದು ಬೇಡಿಕೊಂಡು, ಸಂತೈಸಿ ಅವಳನ್ನೂ ಆ ಮರುದ್ಗಣದೊಂದಿಗೆ ವಿಮಾನದಲ್ಲಿ ಕೂಡಿಸಿಕೊಂಡೇ ಸ್ವರ್ಗಲೋಕಕ್ಕೆ ಕರೆದೊಯ್ದನು. ಅಂದಿನಿಂದ ಆ ಮರುತ್ತರು ದೇವತೆಗಳೊಡನೆ ಯಜ್ಞಗಳಲ್ಲಿ ಹವಿಸ್ಸನ್ನು ಪಡೆದು ಯಜ್ಞ ಭಾಗಿಗಳಾದರು. ಆದುದರಿಂದ ತಮ್ಮ ಸಹೋದರರಾದ ದೈತ್ಯರೊಡನೆ ಸ್ನೇಹ ಹೊಂದದೆ ದೇವತಾ ಗಣದಲ್ಲಿಯೇ ಸೌಹಾರ್ದ ಸಾಮರಸ್ಯಗಳನ್ನು ಹೊಂದಿ ಸುರಲೋಕದಲ್ಲಿಯೇ ವಾಸಿಸತೊಡಗಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಏಳನೆಯ ಅಧ್ಯಾಯ ಮುಗಿದುದು*

ಯಾವ ಪ್ರಾಣಿ, ದೇವ, ದೈತ್ಯ, ಯಾವ ಗಿರಿ ನದಿ ಮುಂತಾದವುಗಳಿಗೆ ಯಾರು ಯಾರು ಅಧಿಪತಿಗಳು ?

ಅಧ್ಯಾಯ - ೮

**ಋಷಿಯ ಉವಾಚಃ**

**ಆದಿಸರ್ಗಶ್ಚ ಯಃ ಸೂತ ಕಥಿತೋ ವಿಸ್ತರೇಣ ತು**
**ಪ್ರತಿಸರ್ಗಂ ಚಯೇ ಯೇಷಾಮಧಿಪಾಸ್ತಾನ್ವದಸ್ವ ನಃ ॥**

**ಋಷಿಗಳು** :- ಸೂತರೇ, ಸಾಕ್ಷಾತ್ ಬ್ರಹ್ಮದೇವರೇ ಮೊದಲು ಸ್ವಯಂಮಾಡಿದ ಆದಿಸೃಷ್ಟಿಯನ್ನು ಈವರೆಗೆ ತಾವು ನಿರೂಪಿಸಿದಿರಿ. ಮುಂದೆ ಬ್ರಹ್ಮದೇವರ ಮಾನಸಪುತ್ರರಾದ ಮರೀಚಿ ಮುಂತಾದ ಪ್ರಜಾಪತಿಗಳು ಸೃಷ್ಟಿಸಿದ ಪ್ರತಿಸೃಷ್ಟಿ ಅಥವಾ ಜೀವರಾಶಿಗಳ ಪ್ರತಿಸರ್ಗಗಳ ಬಗೆಗೆ ನಿರೂಪಣಗೈಯಬೇಕು. ಮತ್ತು ಈ ಪ್ರತಿ ಸರ್ಗಗಳಲ್ಲಿ ಯಾವ ಯಾವ ಪ್ರಾಣಿವರ್ಗಕ್ಕೆ ಯಾರು ಯಾರು ಅಧಿಪತಿಗಳಾದರು ಎನ್ನುವದನ್ನೂ ನಮಗೆ ಬಿತ್ತರಿಸಬೇಕು.

**ಸೂತ** :- ಹಿಂದೆ ಭೂಲೋಕದಲ್ಲಿ ಮೊಟ್ಟಮೊದಲಿನ ಪೃಥ್ವೀಮಂಡಲದ ಏಕಛತ್ರಾಧಿಪತಿ ಎಂದು ಪೃಥುಚಕ್ರವರ್ತಿಗೆ ಪಟ್ಟಾಭಿಷೇಕವನ್ನು ಮಾಡಿದ ಬಳಿಕ ಬ್ರಹ್ಮದೇವರು ಔಷಧಿ, ವನಸ್ಪತಿ, ಯಜ್ಞ, ಯಾಗ, ವ್ರತಾಚಾರ, ತಪೋನುಷ್ಠಾನ ಮುಂತಾದವುಗಳಿಗೆಲ್ಲ ಚಂದ್ರನನ್ನು ಅಧಿದೇವತೆಯನ್ನಾಗಿ ಮಾಡಿದರು. ಮತ್ತು ನಕ್ಷತ್ರ, ಗ್ರಹ, ಬ್ರಾಹ್ಮಣ, ಗಿಡಬಳ್ಳಿಗಳಿಗೂ ಅವನನ್ನೇ ಅಧಿಪತಿಯನ್ನಾಗಿ ಏರ್ಪಡಿಸಿದರು.

ಅನಂತರ ಆ ಪಿತಾಮಹನು ನೀರಿಗೆಲ್ಲ ವರುಣನನ್ನೂ, ಐಶ್ವರ್ಯಕ್ಕೆ ಕುಬೇರನನ್ನೂ ಅಧಿಪತಿಗಳನ್ನಾಗಿ ನಿಯಮಿಸಿದನು. ದ್ವಾದಶಆದಿತ್ಯರಿಗೆ ವಿಷ್ಣುವನ್ನೂ, ಅಷ್ಟವಸುಗಳಿಗೆಲ್ಲ ಅಗ್ನಿಯನ್ನೂ, ಪ್ರಜಾಪತಿಗಳಿಗೆ ದಕ್ಷನನ್ನೂ, ದೇವತೆಗಳಿಗೆ ಇಂದ್ರನನ್ನೂ ಅಧಿಪತಿಯನ್ನಾಗಿ ಲೋಕಾಧಿಪತಿಯಾದ ಬ್ರಹ್ಮನು ನಿಯಮಿಸಿದನು. ದೈತ್ಯ ದಾನವರಿಗೆ ಪ್ರಹ್ಲಾದನೂ, ಪಿತೃಗಳಿಗೆ ಯಮನೂ, ಯಕ್ಷ, ರಾಕ್ಷಸ, ಪಶು, ಪಿಶಾಚ, ಭೂತಪ್ರೇತಬೇತಾಳಗಳಿಗೆ ಈಶ್ವರನೂ, ಪರ್ವತಗಳಿಗೆ ಹಿಮಾಚಲವೂ, ನದಿಗಳಿಗೆ ಸಮುದ್ರವೂ, ಗಂಧರ್ವ ವಿದ್ಯಾಧರ ಕಿನ್ನರರಿಗೆ ಚಿತ್ರರಥನೂ ಅಧಿಪತಿಯೆಂದು ಬ್ರಹ್ಮದೇವರಿಂದ ನಿಯಮಿಸಲ್ಪಟ್ಟರು. ಇದರಂತೆ ಹಾವುಗಳಿಗೆ ವಾಸುಕಿಯು, ಆನೆಗಳಿಗೆ ಐರಾವತವು, ಪಕ್ಷಿಗಳಿಗೆ ಗರುಡನೂ, ಕುದುರೆಗಳಿಗೆ ಉಚ್ಚೈಃಶ್ರವವೂ, ಮೃಗಗಳಿಗೆ ಸಿಂಹವೂ, ಸಸ್ಯಲತಾದಿಗಳಿಗೆ ಮರವೂ, ಅಧಿಪತಿಗಳೆಂದು ಪಿತಾಮಹನಿಂದ ನಿಯೋಜಿಸಲ್ಪಟ್ಟವು. ಹೀಗೆ ಚತುರ್ಮುಖನು ಮೇಲೆ ಹೇಳಿದವರನ್ನು ಆ ಆ ವರ್ಗಗಳಿಗೆ ಅಧಿರಾಜರನ್ನಾಗಿ ಪಟ್ಟಾಭಿಷೇಕಮಾಡಿ ಎಲ್ಲ ದಿಕ್ಕುಗಳಿಗೂ ಒಬ್ಬೊಬ್ಬ ಪಾಲಕರನ್ನೂ ನಿಯಮಿಸಿದನು. ಪೂರ್ವ ದಿಕ್ಕಿಗೆ

ಸುಧರ್ಮ, ದಕ್ಷಿಣ ದಿಕ್ಕಿಗೆ ಶಂಖಪದ, ಪಶ್ಚಿಮ ದಿಕ್ಕಿಗೆ ಕೇತುಮಾನ್, ಉತ್ತರ ದಿಕ್ಕಿಗೆ ಹಿರಣ್ಯರೋಮನನ್ನು ದಿಕ್ಕುಪಾಲಕರನ್ನಾಗಿ ನೇಮಿಸಿದನು. ಸಕಲ ದಿಕ್ಕುಗಳಿಗೆ ಅಧೀಶ್ವರನೂ ಅಖಂಡ ಬ್ರಹ್ಮಾಂಡದ ಏಕಮಾತ್ರ ನಿಯಾಮಕನೂ ಆದ ಪಿತಾಮಹನ ಆದೇಶದಂತೆ ಈ ಎಲ್ಲ ದಿಕ್ಕುಪಾಲಕರೂ ವೈರಿಗಳನ್ನು ಹೊಡೆದುಹಾಕಿ ಈ ಭೂವಲಯವನ್ನು ರಕ್ಷಿಸುತ್ತಿರುವರು. ಈ ನಾಲ್ಕು ದಿಕ್ಕುಗಳ ಅಧಿನಾಯಕರೊಡನೆ ವೇನಪುತ್ರನಾದ ಪೃಥು ಎಂಬ ರಾಜನು ಭೂಮಂಡಲಕ್ಕೆ ಸಾರ್ವಭೌಮನೆಂದು ಪಟ್ಟಾಭಿಷಿಕ್ತನಾದನು. ಮುಂದೆ ಚಾಕ್ಷುಷ ಮನ್ವಂತರವು ಕಳೆದು ವೈವಸ್ವತ ಮನ್ವಂತರವು ಪ್ರಾರಂಭವಾಯಿತು. ಆಗ ಸೂರ್ಯ ಪುತ್ರನಾದ ವೈವಸ್ವತ ಮನು ಈ ಮನ್ವಂತರದ ಚರಾಚರ ಪ್ರಪಂಚಕ್ಕೆ ಪ್ರಜಾಧಿಪತಿಯಾಗಿ ನಿಯೋಜಿಸಲ್ಪಟ್ಟನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಟನೆಯ ಅಧ್ಯಾಯ ಮುಗಿದುದು*



## ಹದಿನಾಕು ಮನ್ವಂತರಗಳ ವೃತ್ತಾಂತ — ಅಧ್ಯಾಯ - ೯

**ಸೂತ ಉವಾಚ :**

**"ಏವಂ ಶ್ರುತ್ವಾ ಮನುಃ ಪ್ರಾಹ ಪುನರೇವ ಜನಾರ್ದನಮ್ ।**
**ಪೂರ್ವೇಷಾಂ ಚರಿತಂ ಬ್ರೂಹಿ ಮನೂನಾಂ ಮಧುಸೂದನ ॥**

**ಸೂತ** :- ಇದನ್ನೆಲ್ಲ ಕೇಳಿ ಮನುರಾಜನು ಮತ್ತೆ ಮೀನರೂಪಿ ಮಧುಸೂದನನಿಗೆ "ಸ್ವಾಮಿನ್, ಹಿಂದಿನ ಮನುಗಳ ಚರಿತ್ರವನ್ನು ಹೇಳು " ಎಂದು ಕೇಳಿಕೊಂಡನು. ಆಗ ಆ ಮಾಯಾ ಮೀನನು ಮನುಮುನಿಗೆ ಇಂತು ನುಡಿದನು.

**ಮತ್ಸ್ಯ** :- ಸೂರ್ಯ ನಂದನನಾದ ಮನುರಾಜನೆ, ನಿನ್ನ ಅಪೇಕ್ಷೆಯಂತೆ ಹಿಂದಿನ ಎಲ್ಲ ಮನ್ವಂತರ ವೃತ್ತಾಂತವನ್ನು ಮತ್ತು ಮನು ಮಹಾರಾಜರ ಚರಿತ್ರೆಯನ್ನೂ ಆ ಆಕಾಲದ ಪ್ರಮಾಣವನ್ನೂ ಹಾಗೂ ಆ ಮನ್ವಂತರದ ಸೃಷ್ಟಿ ಕ್ರಮಗಳನ್ನೂ ಸಂಕ್ಷಿಪ್ತವಾಗಿ ಹೇಳುತ್ತೇನೆ. ಏಕಾಗ್ರಚಿತ್ತದಿಂದ ಆಲಿಸು. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಯಾಮ ಎಂಬ ದೇವತಾ ಗಣವು ದಿವ್ಯಪಟ್ಟದಲ್ಲಿ ದೇವಸ್ಥಾನದಲ್ಲಿ ನಿಯೋಜಿತವಾಗಿತ್ತು. ಹಿಂದೆ ಹೇಳಿದ ಮರೀಚಿ ಮೊದಲಾದ ಮಹರ್ಷಿಗಳು ಸಪ್ತರ್ಷಿಗಳಾಗಿದ್ದರು. ಅಗ್ನೀಧ್ರ, ಅಗ್ನಿಬಾಹು, ಸಹ, ಸವನ, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಮೇಧಸ್, ಮೇಧಾತಿಥಿ ಮತ್ತು ವಸು ಎಂಬ ಹತ್ತು ಮನುಕುಮಾರರು ಸ್ವಾಯಂಭುವ ಮನುವಿನ ವಂಶವನ್ನು ಅಭಿವೃದ್ಧಿಗೊಳಿಸಿದರು. ಇವರೆಲ್ಲರೂ ಸ್ವಾಯಂಭುವಿನ ಮನ್ವಂತರದಲ್ಲಿ ಸೃಷ್ಟಿಯ, ಸರ್ಜನ, ಪಾಲನ, ನಿಯಮನ, ನಿಯೋಜನಾದಿಗಳನ್ನು ಭಗವದಾಜ್ಞೆಯಿಂದ, ಅವನ ಅನುಗ್ರಹದಿಂದ ಭಗವಂತನ ಸೇವೆಯೆಂದು ಮಾಡಿ ಮುಂದೆ ಪರಮಪದವನ್ನು ಐದಿದರು. ಎರಡನೆಯದೇ ಅದರ ಮುಂದಿನ ಸ್ವಾರೋಚಿಷ ಮನ್ವಂತರ,

ಸ್ವಾರೋಚಿಷ ಮನುವಿಗೆ ಕಾಂತಿ ಎಂಬ ಕಾಮಿನಿಯಲ್ಲಿ ನಭ, ನಭಸ್ಯ, ಪ್ರಸ್ರುತಿ, ಭಾನು ಎಂದು ನಾಲ್ವರು ಮಕ್ಕಳು. ನಾಲ್ವರೂ ಕೀರ್ತಿಶಾಲಿಗಳು ದೇವತಾ ಸದೃಶರು.

ಈ ಸ್ವಾರೋಚಿಷ ಮನ್ವಂತರದಲ್ಲಿ ದತ್ತ, ನಿಶ್ಚ್ಯವನ, ಸ್ತಂಬ, ಪ್ರಾಣ, ಕಶ್ಯಪ, ಔರ್ವ ಮತ್ತು ಬೃಹಸ್ಪತಿ ಎಂಬ ಏಳು ಬ್ರಹ್ಮರ್ಷಿಗಳು ಸಪ್ತರ್ಷಿ ಪದವಿಯಲ್ಲಿ ರಾರಾಜಿಸುತ್ತಿದ್ದರು. ದೇವತಾಪಟ್ಟದಲ್ಲಿ ತುಷಿತ ಎಂಬ ದೇವಗಣವಿದ್ದಿತು. ಹಸ್ತೀಂದ್ರ, ಸುಕೃತಿ, ಮೂರ್ತಿ, ಆಪ, ಜ್ಯೋತಿ, ಅಯ ಮತ್ತು ಸ್ಮಯ ಎಂಬ ಏಳು ಜನ ವಸಿಷ್ಠಕುಮಾರರು ಆಗ ಪ್ರಜಾಪತಿಗಳೆಂದು ಪೂಜಿತರಾಗಿದ್ದರು. ಇದು ಎರಡನೆಯ ಸ್ವಾರೋಚಿಷ ಮನ್ವಂತರದ ಕಥೆ. ಮೂರನೆಯದೇ ಉತ್ತಮ ಮನ್ವಂತರ, ಔತ್ತಮಿ ಎಂಬ ಮನು ಇದಕ್ಕೆ ಅಧಿಪತಿ. ಇಷ, ಊರ್ಜ, ತರ್ಜ, ಶುಚಿ, ಶುಕ್ರ, ಮಧು, ಮಾಧವ, ನಭಸ್ಯ, ನಭ, ಸಹ ಇವರು ಮನು ಪುತ್ರರಾಗಿ ಆಳಿದರು. ಇವರಲ್ಲಿ ಕನಿಷ್ಠನಾದ ಸಹನು ಅತ್ಯಂತ ಉದಾರ ಮತ್ತು ಕೀರ್ತಿಶಾಲಿ. ಆಗ ಭಾವನ ಎಂಬ ದೇವತಾಗಣ ದೇವಪಟ್ಟದಲ್ಲಿ. ಕಾಕುರಂಡಿ, ದಾಲ್ಭ್ಯ, ಶಂಖ, ಪ್ರವಹಣ, ಶಿವ, ಸಿತ ಮತ್ತು ಸಸ್ಮಿತ ಎಂಬ ಏಳು ಮಹರ್ಷಿಗಳೇ ಸಪ್ತರ್ಷಿಗಳು. ನಾಲ್ಕನೆಯದೇ ತಾಮಸ ಮನ್ವಂತರ. ಕವಿ, ಪೃಥು, ಅಗ್ನಿ, ಅಕವೆ, ಕಪಿ, ಜಲ್ಪ ಮತ್ತು ಧೀಮಾನ್ ಇವರು ಸಪ್ತರ್ಷಿಗಳು. ಸಾಧ್ಯ ಎಂಬ ದೇವತೆಗಳ ಗುಂಪು ಸುರಪದವಿಯಲ್ಲಿ. ಅಕಲ್ಮಷ ಧನ್ವಿ, ತಪೋಮೂಲ, ತಪೋಧನ, ತಪೋರತಿ, ತಪಸ್ಯ, ತಪೋದ್ಯುತಿ, ಪರಂತಪ, ತಪೋಭೋಗಿ ಮತ್ತು ತಪೋಯೋಗಿ ಎಂದು ಹತ್ತು ರಾಜಕುಮಾರರು ಮನುಪುತ್ರರಾಗಿದ್ದರು. ಇವರೆಲ್ಲರೂ ಧರ್ಮಾಚಾರನಿರತರಾಗಿ ವಂಶಾಭಿವೃದ್ಧಿಯನ್ನು ಸಾಧಿಸಿದರು. ಐದನೆಯ ರೈವತ ಮನ್ವಂತರದಲ್ಲಿ ದೇವಬಾಹು, ಸುಬಾಹು, ಪರ್ಜನ್ಯ, ಸೋಮಪ, ಮುನಿ, ಹಿರಣ್ಯರೋಮ, ಸಪ್ತಾಶ್ವರು ಸಪ್ತರ್ಷಿಗಳು. ಅಭೂತ ರಜಸರೆಂಬವರು ದೇವತೆಗಳು. ಅರುಣ, ತತ್ವದರ್ಶಿ, ವಿತ್ತವಾನ್, ಹವ್ಯಪ, ಕಪಿ, ಯುಕ್ತ, ನಿರುತ್ಸಕ, ಸತ್ವ, ನಿರ್ಮೋಹ, ಪ್ರಕಾಶಕ ಎಂಬ ಧಾರ್ಮಿಕರಾದ ಹತ್ತು ಮನುಕುಮಾರರು. ಇವರೆಲ್ಲರೂ ಮಹಾಬಲಿಷ್ಠರು. ಧರ್ಮನಿಷ್ಠರು.

ಆರನೆಯ ಚಾಕ್ಷುಷ ಮನ್ವಂತರದಲ್ಲಿ ಭೃಗು, ಸುದಾಮ, ವಿರಜಸ್, ಸಹಿಷ್ಣು, ನಾದ, ವಿವಸ್ವಾನ್, ಅತಿನಾಮ ಎನ್ನುವ ಮಹಾಮುನಿಗಳೇ ಸಪ್ತರ್ಷಿಗಳು. ಲೇಖ ಎಂಬುವರು ದೇವತೆಗಳು. ಈ ದೇವತಾಗಣದಲ್ಲಿ ಶುಭ, ಪರಿಶ್ರುತ, ಋಭಾದ್ಯ, ಪಾರಿಮೂಲ, ದಿವೌಕಸ ಎಂಬ ಐದು ಒಳಪಂಗಡಗಳಿದ್ದವು. ರುರು ಮುಂತಾದ ಹತ್ತು ಮಕ್ಕಳು ಈ ಚಾಕ್ಷುಷ ಮನುವಿಗೆ. ಅವರೆಲ್ಲರ ಹೆಸರುಗಳನ್ನು ನಾಲ್ಕನೆ ಅಧ್ಯಾಯದಲ್ಲಿ ಊರು, ರುರು, ಶತದ್ಯು, ತಪಸ್ವಿ, ಸತ್ಯವಾಕ್, ಹವಿ, ಅಗ್ನಿಷ್ಟುತ್, ಅತಿರಾತ್ರ, ಸುದ್ಯುಮ್ನ, ಅಪರಾಜಿತ ಮತ್ತು ಅಭಿಮನ್ಯು ಎಂದು ಮೊದಲೇ ತಿಳಿಸಲಾಗಿದೆ. ಇದೆಲ್ಲ ಹಿಂದಿನ ಚಾಕ್ಷುಷ ಮನ್ವಂತರದ ಕಥೆ. ಪ್ರಕೃತ ಈಗ ನಡೆಯುತ್ತಿರುವದೇ ಏಳನೇಯದಾದ ವೈವಸ್ವತ ಮನ್ವಂತರ. ಈ ಮನ್ವಂತರದ ವೃತ್ತಾಂತವನ್ನು ಹೇಳುತ್ತೇನೆ ಕೇಳು.

ಅತ್ರಿ, ವಶಿಷ್ಠ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ಜಮದಗ್ನಿ, ಇವರು ಏಳು ಜನ ಬ್ರಹ್ಮರ್ಷಿಗಳು ಈ ವೈವಸ್ವತ ಮನ್ವಂತರದ ಸಪ್ತರ್ಷಿ ಪೀಠದಲ್ಲಿ ಮಂಡಿಸಿದ್ದಾರೆ. ಇವರ ಮುಖ್ಯ ಕಾರ್ಯವು ಧರ್ಮವ್ಯವಸ್ಥೆ. ಒಂದು ಮನ್ವಂತರ ಕಾಲಾವಧಿಯಲ್ಲಿ ಭಗವತ್ಸೇವಾರೂಪವಾಗಿ ಧರ್ಮ ಪ್ರವರ್ತನೆಯನ್ನು ಮಾಡಿ ಕೊನೆಗೆ ಈ ಮಹರ್ಷಿಗಳೆಲ್ಲರೂ ಮೋಕ್ಷವನ್ನು ಹೊಂದುವರು. ಈ ಮನ್ವಂತರದಲ್ಲಿ ಸಾಧ್ಯ, ವಿಶ್ವ, ಮರುತ್, ರುದ್ರ, ವಸು ಮತ್ತು ಅಶ್ವಿನಿಯುಗಲ ಹಾಗೂ ಆದಿತ್ಯರು ಎಂದು ಏಳು ದೇವಗಣಗಳು ದೇವತಾ ಪೀಠದಲ್ಲಿ ಇರುತ್ತಾರೆ. ಈ ವೈವಸ್ವತ ಮನುವಿಗೆ ಇಕ್ಷ್ವಾಕು ಮುಂತಾದ ಹತ್ತು ಜನ ಮಕ್ಕಳು. ಇದರ ಮುಂದೆ ಬರುವ ಎಂಟನೆಯ ಮನ್ವಂತರವು ಸಾವರ್ಣಿ ಮನುವಿನ ಅಂತರ. ಆಗ ಅಶ್ವತ್ಥಾಮ, ಶರದ್ವಾನ್, ಕೌಶಿಕ, ಗಾಲವ, ಶತಾನಂದ, ಕಾಶ್ಯಪ ಮತ್ತು ರಾಮ. ಈ ಏಳು ಜನರು ಸಪ್ತರ್ಷಿ ಆಗಲಿರುವರು.

ಮತ್ತು ಧೃತಿ, ವರೀಯಾನ್, ಯವಸ, ಸುವರ್ಣ, ವೃಷ್ಟಿ, ಚರಿಷ್ಣು, ಈಡ್ಯಸುಮತಿ, ವಸು, ಶುಕ್ರ ಹಾಗೂ ವೀರ್ಯವಾನ್ ಎಂದು ಹತ್ತು ಜನ ಸತ್ಪುತ್ರರು ಜನಿಸುವರು. ಅನಂತರ ರುಚಿ ಎಂಬ ಪ್ರಜಾಪತಿಯ ಮಗನಾದ ಕಾಶ್ಯರಾಜನು ಭೂತಿಯ ಮಗನಾದ ಭೌತ್ಯನು, ಬ್ರಹ್ಮಪುತ್ರನಾದ ಮೇರುಸಾವರ್ಣಿ ಹಾಗೂ ದಕ್ಷಸಾವರ್ಣಿ, ಋತ, ಋತಧಾಮ, ವಿಷ್ವಕ್ಸೇನ ಮುಂತಾದವರು ಒಬ್ಬರಾದ ಬಳಿಕ ಒಬ್ಬರು ಕ್ರಮೇಣ ಮನ್ವಂತರದ ಅಧೀಶ್ವರರಾಗಿ ಧರ್ಮಚಕ್ರವನ್ನು ಪ್ರವರ್ತಿಸುವರು. ಈ ಹದಿನಾಲ್ಕು ಮನುಗಳ ಶಾಸನ ಕಾಲದ ಒಟ್ಟು ಅವಧಿಯು ಒಂಬೈನೂರಾತೊಂಬತ್ತನಾಲ್ಕು(೯೯೪) ಯುಗಗಳಷ್ಟು ದೀರ್ಘಕಾಲಿಕವಾಗುವದು. ಈ ಎಲ್ಲ ಮನುಗಳು ಪರಮಾತ್ಮನ ಆದೇಶದಂತೆ ತಮ್ಮ ತಮ್ಮ ಮನ್ವಂತರಗಳ ಕಾಲಾವಧಿಯಲ್ಲಿ ಈ ಚರಾಚರ ಪ್ರಪಂಚವನ್ನೆಲ್ಲ ಹಬ್ಬಿಸಿ, ನಿಯಂತ್ರಿಸಿ, ಕೊನೆಗೆ ಕಲ್ಪಾಂತ ಕಾಲದಲ್ಲಿ ಬ್ರಹ್ಮದೇವರ ಜೊತೆಗೆ ವಿಷ್ಣುವಿನ ಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುತ್ತಾರೆ. ಅಲ್ಲಿಯವರೆಗೆ ಇವರು ಅವಾಂತರ ಕಾಲದಲ್ಲಿ ಪ್ರಾರಬ್ಧ ಕರ್ಮಾನುಸಾರವಾಗಿ ಜನನ, ಮರಣ, ಭಗವತ್‌ಪೂಜಾ, ಕೈಂಕರ್ಯಗಳಿಂದ ಸಾಧನ ಪೂರ್ತಿ ಮಾಡಿಕೊಂಡು ವಿಶೇಷವಾದ ಭಗವತ್ ಪ್ರಸಾದವನ್ನು ಹೊಂದಲು ಪ್ರಯತ್ನಿಸುತ್ತಾರೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಒಂಬತ್ತನೆಯ ಅಧ್ಯಾಯ ಮುಗಿದುದು*

—o—

## ಭೂಮಿಯನ್ನು ಹಿಂಡಿದ ಪೃಥುರಾಜ

## ಅಧ್ಯಾಯ - ೧೦

**ಋಷಿಯ ಉವಾಚಃ**

**ಬಹುಭಿರ್ಧರಣೀ ಭುಕ್ತಾ ಭೂಪಾಲೈಃ ಶ್ರೂಯತೇ ಪುರಾ ।**
**ಪಾರ್ಥಿವಾಃ ಪೃಥಿವೀಯೋಗಾತ್ ಪೃಥವೀ ಕಸ್ಯ ಯೋಗತಃ ॥**

**ಋಷಿಗಳು :-** ಸೂತಾಚಾರ್ಯರೇ, ಸೃಷ್ಟಿಯ ಪ್ರಾರಂಭದಿಂದ ಇಂದಿನವರೆಗೆ ಈ ಭೂಮಿಯನ್ನು ಆಳಿ ಭೋಗಿಸಿದ ರಾಜಮಹಾರಾಜರು ಅನೇಕ. ಅಸಂಖ್ಯ. ಅವರೆಲ್ಲರೂ ಈ ಪೃಥಿವಿಯನ್ನು ಪತಿಗಳಾಗಿ ಆಳಿ ಅನುಭವಿಸಿದ್ದರಿಂದ ಆ ಎಲ್ಲ ರಾಜರಿಗೂ **'ಪಾರ್ಥಿವ'** ಎಂದು ಹೆಸರು ಬಂದಿತು. ಇದು ಸಮಂಜಸವೇ. ಆದರೆ ಈ ಪೃಥಿವಿಗೆ "ಪೃಥವೀ" ಅಥವಾ "ಪೃಥ್ವೀ" ಎಂದು ಹೆಸರು ಯಾರ ಮೂಲಕವಾಗಿ ಬಂದಿತು ? ಮತ್ತು ಈ ಭೂಮಿಗೆ "ಗೌಃ" ಎಂದೂ ಹೆಸರಿದೆ. ಇದಕ್ಕೇನು ಕಾರಣ? ಹಸುವಿಗೆ "ಗಚ್ಛತಿ ಇತಿ ಗೌಃ" ನಡೆಯುತ್ತದೆ ಎಂದು ಗೌ ಎಂಬ ಹೆಸರು ಬಂದಂತೆ, ಈ ಪೃಥ್ವೀ ಶಬ್ದಕ್ಕೂ ಏನಾದರೂ ವ್ಯುತ್ಪತ್ತಿ ಇದೆಯೋ ? ಅಥವಾ ಇದೊಂದು ಸಾಂಕೇತಿಕ ಶಬ್ದವೋ, ಪಾರಿಭಾಷಿಕ ಪದವೋ ? ಈ ಪೃಥಿವೀ ಶಬ್ದದ ರಹಸ್ಯವನ್ನು ತಿಳಿಸಬೇಕಾಗಿ ಬಿನ್ನಹ". ಶೌನಕಾದಿ ಋಷಿಗಳ ಈ ಪ್ರಶ್ನೆಗೆ ಉತ್ತರ ರೂಪವಾಗಿ ಸೂತರು ಹಿಂದಿನ ಇತಿಹಾಸವನ್ನು ವಿವರಿಸತೊಡಗಿದರು.

**ಸೂತ :-** ಸ್ವಾಯಂಭುವ ಮನುವಿನ ವಂಶದಲ್ಲಿ ಅಂಗ ಎಂಬ ಪ್ರಜಾಪತಿ ಆಗಿದ್ದನು. ಮೃತ್ಯುವಿನ ಮಗಳಾದ ಸುನೀಥೆಯೇ ಅವನ ಮಡದಿ. ಅವಳದು ಸಿಡುಕು ಸ್ವಭಾವ. ದುಡುಕು ಪ್ರವೃತ್ತಿ, ಕೆಡಕು ವಿಚಾರ. ಅವಳಿಗೆ ವೇನನೆಂಬ ಮಗ. ಅವನು ಪೂರ್ತಿ ತಾಯಿಯನ್ನೇ ಹೋಲುತ್ತಿದ್ದ. ಅಧರ್ಮದಲ್ಲಿಯೇ ಅವನಿಗೆ ಯಾವಾಗಲೂ ಆಸಕ್ತಿ. ಆದರೂ ಅವನು ಒಳ್ಳೆಯ ಬಲಿಷ್ಠ. ತನ್ನ ರಾಜ್ಯದಲ್ಲಿರುವ ಚೆಲುವು ಹೆಣ್ಣುಗಳನ್ನೆಲ್ಲ ಬಲಾತ್ಕಾರದಿಂದ ಅವನು ಭೋಗಿಸುತ್ತಿದ್ದ. ಅಧರ್ಮ ಕಾರ್ಯಗಳನ್ನು ಅವನು ಛಲದಿಂದ ಮೊದಲು ಮಾಡುತ್ತಿದ್ದ. ನೀತಿಭ್ರಷ್ಟನಾದ ಆ ವೇನರಾಜನ ದುಃಶ್ಯಾಸನದಿಂದ ಜಗತ್ತಿನಲ್ಲಿ ಧರ್ಮವೆಲ್ಲ ನಿರ್ಮೂಲವಾದುದನ್ನು ಕಂಡು ಲೋಕಕಲ್ಯಾಣಾಕಾಂಕ್ಷಿಗಳಾದ ಮಹಾಮಹಾಮುನಿಗಳು ಅವನ ಬಳಿಗೆ ಬಂದು ಮೃದುಮಧುರವಾದ ನುಡಿಗಳಿಂದ ಧರ್ಮನಿಷ್ಠನಾಗಿ ನಡೆಯಬೇಕೆಂದು ಉಪದೇಶಿಸಿದರು. ಹಿರಿಯರ ಮಾತುಗಳನ್ನು ಅವನು ಕಿವಿಗೇ ಹಾಕಿಕೊಳ್ಳಲಿಲ್ಲ. ಧರ್ಮ, ಆಚಾರ, ನೀತಿ, ನ್ಯಾಯಗಳ ಸ್ಥಾಪನೆಗಾಗಿ ಮಹರ್ಷಿಗಳು ಅವನಿಗೆ ಬಗೆಬಗೆಯಿಂದ ತಿಳಿಹೇಳಿದರು. ಆದರೂ ಮದಾಂಧನಾದ ವೇನರಾಜನು ಕೇಳದಂತಾಗಲು ಮುನಿಮಹರ್ಷಿಗಳಿಗೆ ಕೋಪ ಬಂದಿತು. ಅವರೆಲ್ಲರೂ ಶಾಪಕೊಟ್ಟು ಅವನನ್ನು ಕೊಂದುಹಾಕಿದರು. ಆಗ ದೇಶದಲ್ಲಿ ಅರಾಜಕತೆ ಉಂಟಾಯಾಯಿತು.

ಕಳ್ಳಕಾಕರು ಕೊಲೆ, ಸುಲಿಗೆ, ದರೋಡೆಯ ಭಯದಿಂದ ಪ್ರಜೆಗಳಿಗೆ ಉಪದ್ರವವಾಗಬಾರದೆಂದು ಆ ಬ್ರಾಹ್ಮಣರು ಸತ್ತುಹೋದ ವೇನರಾಜನ ಶರೀರವನ್ನು ಕಡೆಯತೊಡಗಿದರು.

ಬ್ರಾಹ್ಮಣರು ಆ ವೇನನ ಶರೀರವನ್ನು ಭರದಿಂದ ಕಡೆಯ ತೊಡಗಿದಾಗ ಅದರಲ್ಲಿದ್ದ ಅವನ ತಾಯಿಯ ಅಂಶದಿಂದ ಕಾಡಿಗೆಯಂತೆ ಕಪ್ಪುಬಣ್ಣದ ದಪ್ಪ ದೇಹದ ಮ್ಲೇಂಛ ಜಾತಿಯ ಜನರು ಹೊರ ಹೊರಟರು. ಅನಂತರ ಧರ್ಮಾತ್ಮನಾದ ಅವರ ತಂದೆಯ ಅಂಶದಿಂದ ಪರಮಧಾರ್ಮಿಕನಾದ ಒಬ್ಬ ದಿವ್ಯ ಪುರುಷನು ಬಲಗೈ ಕಡೆತದಿಂದ ಉದ್ಭೂತನಾದನು. ದಿವ್ಯ ಧೀದಿತಿಯಿಂದ ಮಿಂಚುತ್ತಿತ್ತು ಆ ತೇಜೋಮಯ ಪುರುಷನ ಕಾಂತಿಮಯ ಶರೀರ. ಒಂದು ಕೈಯಲ್ಲಿ ಬಿಲ್ಲುಬಾಣ, ಇನ್ನೊಂದು ಕೈಯಲ್ಲಿ ಗದೆ, ಎರಡೂ ತೋಳುಗಳಿಗೆ ಬಂಗಾರದ ಭುಜ ಕಿರೀಟ, ಮೈಮೇಲೆ ರತ್ನ ಖಚಿತ ಕವಚ.

ಇಂಥ ಈ ದಿವ್ಯ ಪುರುಷನು ಬ್ರಾಹ್ಮಣರ ಅತಿಪ್ರಯತ್ನ ಮತ್ತು ಪೃಥು ಪ್ರಯಾಸದಿಂದ ಕಡೆದು ಪಡೆದವನಾಗಿದ್ದ. ಆದುದರಿಂದಲೇ ಅವನಿಗೆ **ಪೃಥು** ಎಂದೇ ಹೆಸರು. ಅಲ್ಲಿ ನೆರೆದ ಎಲ್ಲ ಬ್ರಾಹ್ಮಣರು ಅವನನ್ನು ವಿಧಿಪೂರ್ವಕವಾಗಿ ಸಾರ್ವಭೌಮಪಟ್ಟದಲ್ಲಿ ಅಭಿಷೇಕಗೈದರು. ಇಷ್ಟಾದರೂ ಪೃಥುರಾಜನು ತನ್ನ ಸಾಮ್ರಾಜ್ಯ ಸುಖಸೌಭಾಗ್ಯಗಳ ಭೋಗದಲ್ಲಿ ನಿರತನಾಗದೆ ಘೋರತಪಸ್ಸನ್ನು ಕೈಕೊಂಡ. ವಿಷ್ಣುವನ್ನು ಮೆಚ್ಚಿಸಿದ. ತಪಃ ಪ್ರಸನ್ನನಾದ ಶ್ರೀ ಹರಿಯು ಅವನಿಗೆ ಸರ್ವಾಧಿಕಾರವನ್ನೂ ಸರ್ವಪ್ರಭುತ್ವವನ್ನೂ ದಯಪಾಲಿಸಿದ. ಹೀಗೆ ಭಗವಂತನ ಅನುಗ್ರಹದಿಂದ ಸರ್ವಉರ್ವೀತಳ ಸಾರ್ವಭೌಮನಾದ ಆ ಪೃಥುಪ್ರಭು ಭೂತಳದ ಕಡೆಗೆ ಕಣ್ಣು ಹೊರಳಿಸಿದ.

ಭೂಮಂಡಲದಲ್ಲಿ ಎಲ್ಲಿಯೂ ಅಧರ್ಮಮಯವಾದ ವೇನಶಾಸನದ ಪರಿಣಾಮದಿಂದ ಅಧ್ಯಯನ ಅಧ್ಯಾಪನ ಇಲ್ಲ. ಹೋಮಹವನ ಇಲ್ಲ. ಧರ್ಮ ಕರ್ಮಗಳು ಇಲ್ಲ. ಹೀಗೆ ಧರ್ಮ ಶೂನ್ಯವಾದ ಧರಾಮಂಡಲವನ್ನು ಕಂಡು ಅವನಿಗೆ ಕೋಪ ಬಂದಿತು. ಪುಣ್ಯ ಕಾರ್ಯವಿಲ್ಲದ ಭೂತಳವನ್ನೆಲ್ಲ ಸುಟ್ಟುಬಿಡಬೇಕೆಂದು ಆ ವೀರನು ಬಾಣ ಹಿಡಿದ. ಆಗ ಭೂದೇವಿಯು ಹಸುವಿನ ರೂಪಧರಿಸಿ ಓಡತೊಡಗಿದಳು. ಮುಂದೆ ಮುಂದೆ ಆಕಳು. ಅದರ ಹಿಂದೆ ಬಿಲ್ಲು ಬಾಣ ಹಿಡಿದ ಪೃಥುರಾಜ ಹೀಗೆ ಓಡಿ ಓಡಿ ದಣಿದು ಭೂದೇವಿಯು ಒಂದೆಡೆ ನಿಂತು ಬೆಳಗುವ ಬಿಲ್ಲು ಹಿಡಿದು ಹೊಡೆಯಲು ಕೈ ಎತ್ತಿ ನಿಂತ ಪೃಥುರಾಜನಿಗೆ 'ನಾನು ಏನು ಮಾಡಲಿ ಹೇಳು' ಎಂದು ಕೇಳಿದಳು. ಅದಕ್ಕೆ ಪೃಥುವಿನ ಉತ್ತರ ''ಭೂದೇವಿ, ಈ ಚರಾಚರ ಜಗತ್ತಿನ ಬಯಕೆಯನ್ನು ಬೇಗ ಈಡೇರಿಸು. ಬೇಡಿದ್ದನ್ನು ನೀಡು. '' 'ಹಾಗೆ ಆಗಲಿ ' ಎಂದು ಧರಣೀದೇವಿಯು ತನ್ನ ಸಮ್ಮತಿಯನ್ನು ಸೂಚಿಸಿದಳು. ಆಗ ಆ ದೊರೆಯು ಜಗತ್ತಿನ ಕಲ್ಯಾಣಕ್ಕಾಗಿ ಬೇಕಾಗುವದನ್ನೆಲ್ಲ ಹಸುರೂಪಳಾದ ಭೂದೇವಿಯಿಂದ ಹಿಂಡಿಕೊಂಡನು. ಅದರಿಂದ ಎಲ್ಲ ಪ್ರಾಣಿಗಳಿಗೂ ಅಪೇಕ್ಷಿತ ಪದಾರ್ಥಗಳು

ದೊರೆತವು. ಮೊಟ್ಟ ಮೊದಲು ಪೃಥುರಾಜನು ಭೂಮಿ ತಾಯಿಯು, ಕಾಮಧೇನು ಆಗಿ ನಿಂತುಕೊಂಡಾಗ ಸ್ವಾಯಂಭುವ ಮನುವನ್ನು ಕರುವಿನ ಸ್ಥಾನದಲ್ಲಿ ಇರಿಸಿ ತನ್ನ ಅಂಗೈಯಲ್ಲಿ ಕರೆದನು. ಅದೇ ಪರಿಶುದ್ಧವಾದ ಅನ್ನವಾಯಿತು. ಅದರಿಂದಲೇ ಎಲ್ಲ ಪ್ರಜೆಗಳೂ ಪ್ರಾಣಿಗಳೂ ಬದುಕಲಿಕ್ಕೆ ಆಧಾರ. ಬಳಿಕ ಋಷಿಗಳು ಕರೆದರು ಗೋರೂಪಿ ಭೂಮಿಯನ್ನು. ಆಗ ಚಂದ್ರನೇ ಕರು. ಕರೆದವನು ಬೃಹಸ್ಪತಿ. ಹಿಂಡುವ ಪಾತ್ರೆ ವೇದ. ಕರೆದ ರಸ ತಪಸ್ಸು.

ಬಳಿಕ ದೇವತೆಗಳ ಪಾಳಿ. ಕರೆಯುವವ ಮಿತ್ರ. ಇಂದ್ರನೇ ಕರು. ಉತ್ಸಾಹ ಜನಕವಾದ ಬಲವೇ ಹಾಲು. ಹೀಗೆ ದೇವತೆಗಳು ಚಿನ್ನದ ಪಾತ್ರೆಯಲ್ಲಿಯೂ, ಪಿತೃಗಳು ಬೆಳ್ಳಿಪಾತ್ರೆಯಲ್ಲಿಯೂ, ರತ್ನ ಗರ್ಭೆಯನ್ನು ಕರೆದರು. ಅಂದಿನಿಂದ ದೇವತೆಗಳಿಗೆ ಸುವರ್ಣವೂ, ಪಿತೃಗಳಿಗೆ ರಜತವೂ ಪ್ರೀತಿಯ ಪದಾರ್ಥಗಳಾದವು. ಮುಂದೆ ಇದರಂತೆ ಅಂತಕನೂ ಕರೆದ. ಯಮನೇ ಕರು. ಪಿತೃಗಳ ಆಹಾರವಾದ ಸ್ವಧಾ ಎಂಬದೇ ರಸ.

ಧೃತರಾಷ್ಟ್ರ ಎಂಬ ಹಾವು ಸರ್ಪಗಳಿಗಾಗಿ ಸೋರೆ ಬುರುಡೆಯಲ್ಲಿ ತಕ್ಷಕನನ್ನು ಕರುವಾಗಿಸಿ ವಿಷವನ್ನೇ ಕರೆಯಿತು. ದ್ವಿಮಾರ್ಧ ಎಂಬ ದೈತ್ಯನು ಪ್ರಹ್ಲಾದಪುತ್ರ ವಿರೋಚನನ್ನು ಕರುವಾಗಿಸಿ ಮಾಯೆ ಎಂಬ ರಸವನ್ನು ಕಬ್ಬಿಣದ ಪಾತ್ರೆಯಲ್ಲಿ ರಾಕ್ಷಸರಿಗಾಗಿ ಹಿಂಡಿಕೊಂಡನು. ಯಕ್ಷರು ಕುಬೇರ ಎಂಬ ಕರುವಿನ ಮುಖಾಂತರ ಅಂತರ್ಧಾನ ಎಂಬ ಸಿದ್ಧಿಯನ್ನು ಪಡೆದರು. ಪ್ರೇತಗಣಗಳು ಸುಮಾಲಿ ಎಂಬ ಕರುವಿನ ಮೂಲಕ ಕಾಪನಾಭನಿಂದ ರಕ್ತಧಾರೆಯನ್ನು ಕರೆಯಿಸಿಕೊಂಡವು. ಗಂಧರ್ವ ಅಪ್ಸರೆಯರು ಚೈತ್ರರಥನನ್ನು ಕರುವಾಗಿಸಿ ತಾವರೆ ಎಸಳಿನ ಪಾತ್ರೆಯಲ್ಲಿ ವರರುಚಿ ಎಂಬ ಕರೆಯುವವನ ಪ್ರಯತ್ನದಿಂದ ವಿವಿಧ ಪರಿಮಳ ದ್ರವ್ಯಗಳನ್ನು ಪಡೆದರು. ಮೇರು ಪರ್ವತ ಕರೆಯುವವ. ಹಿಮಾಲಯವೇ ಕರು. ಬೆಟ್ಟಗಳೇ ಪಾತ್ರೆ. ಗಿರಿಗಳು ನಾನಾ ರತ್ನಗಳನ್ನು ಗಿಡ ಮೂಲಕೆಗಳನ್ನು ಪಡೆದವು. ಮರಗಳಿಗಾಗೀ ಸಾಲ ವೃಕ್ಷವೂ ಕರೆಯಿತು. ಪಣೆಯಾಲದ ಮರವೇ ಕರು. ಮುತ್ತುಗದ ಎಲೆಯ ಪಾತ್ರೆ. ಕಡೆದರೂ ಮತ್ತೆ ಚಿಗಿಯುವದೇ ರಸ ಸಿದ್ಧಿ.

ಹೀಗೆ ಬೇರೆಬೇರೆಜನರು ಭೂದೇವಿಯ ರತ್ನದ ಒಡಲನ್ನು ಕಡೆದು ತಮ್ಮ ತಮ್ಮ ಇಷ್ಟಾನುಸಾರ ಬಯಸಿದ್ದನ್ನೆಲ್ಲ ಕರೆದು ಪಡೆದರು. ಭೂಮಿ ತಾಯಿಯು ಪ್ರಯತ್ನದಿಂದ ತನ್ನನ್ನು ಕರೆದವರಿಗೆಲ್ಲ ಆಯುಷ್ಯ, ಐಶ್ವರ್ಯ, ಸೌಖ್ಯ, ಸೌಭಾಗ್ಯಗಳನ್ನು ಕಾಮಧೇನುವಿನಂತೆ ಕೊಟ್ಟು ಕರುಣಿಸಿದಳು. ಪೃಥುರಾಜನು ಅಖಂಡಭೂಮಂಡಲವನ್ನೆಲ್ಲ ಆಳುತ್ತಿರುವಾಗ ಅವನ ಸಾಮ್ರಾಜ್ಯದಲ್ಲಿ ದಟ್ಟದರಿದ್ರನು ನೋಡಲಿಕ್ಕೂ ಇರಲಿಲ್ಲ, ಕಾಣಲಿಕ್ಕೂ ಒಬ್ಬ ರೋಗಿ ಇಲ್ಲ. ಔಷಧಕ್ಕೂ ಒಬ್ಬ ಪಾಪಿ ಇಲ್ಲ. ಎಲ್ಲಿಯೂ ಬರಗಾಲದ ಭೀತಿ ಇಲ್ಲ. ದುಃಖ ಶೋಕಗಳಿಗೆ ಎಲ್ಲಿಯೂ ಎಡೆ ಇಲ್ಲ. ಎಲ್ಲೆಡೆಯಲ್ಲಿಯೂ ಶಾಂತಿ, ಸಂತಸ. ಎಲ್ಲ ಜನರ ಹೃದಯದಲ್ಲಿಯೂ ಒಲವು ನಲಿವುಗಳು ತುಂಬಿ ತುಳುಕಾಡುತಿದ್ದವು.

ಲೋಕಹಿತಕ್ಕಾಗಿ ತನ್ನ ಜೀವನವನ್ನೇ ಮೀಸಲಾಗಿರಿಸಿದ ಆ ಮಹಾರಾಜನು ಪ್ರಜಾಕೋಟಿಯ ಆವಶ್ಯಕತೆಯನ್ನು ಅನುಲಕ್ಷಿಸಿ ಭೂತಳದ ಬೆನ್ನಿನ ತುಂಬ ಉಬ್ಬಿನಿಂತ ಬೆಟ್ಟಗಳನ್ನೆಲ್ಲ ತನ್ನ ಬಿಲ್ಲಿನ ತುದಿಯಿಂದ ಒತ್ತಿ ಹಿಂದೆ ಸರಿಸಿದನು. ಅದರಿಂದ ಭೂಮಿಯ ಮೇಲ್ಮೈಯಲ್ಲಿ ಗ್ರಾಮಪಟ್ಟಣಗಳನ್ನು ಕೂಡಿಸಲಿಕ್ಕೂ ಹೊಲನೆಲಗಳನ್ನು ಮಾಡಲಿಕ್ಕೂ ವಿಶಾಲವಾದ ಬಯಲುಜಾಗಗಳು ನಿರ್ಮಾಣಗೊಂಡವು.

ಧರ್ಮಧುರೀಣನಾದ ಆ ದೊರೆಯ ಆಳಿಕೆಯಲ್ಲಿ ಪ್ರಪಂಚದಲ್ಲಿಯೇ ಮೊಟ್ಟ ಮೊದಲುದಾರಿ ಪಟ್ಟಣಗಳು ಹುಟ್ಟಿಕೊಂಡವು. ಹಳ್ಳಿಗಳು ರೂಪಗೊಂಡವು. ಆದರೆ ಆ ಎಲ್ಲ ಪುರಗ್ರಾಮಗಳಿಗೆ ಕೋಟೆ ಬಾಗಿಲುಗಳು ಮಾತ್ರ ಇರಲಿಲ್ಲ. ಯಾಕೆಂದರೆ ಆಗ ಕಳ್ಳಕಾಕರೂ, ದರೋಡೆಗಾರರೂ, ಆಕ್ರಮಣಕಾರರೂ ಇರಲಿಲ್ಲ. ಅದಕ್ಕೆ ಕಾರಣ ಎಲ್ಲರಿಗೂ ಬಯಸಿದ್ದೆಲ್ಲ ಅಲ್ಪಾಯಾಸದಿಂದಲೇ ದೊರೆಯುತ್ತಿತ್ತು. ಎಲ್ಲರೂ ತೃಪ್ತರು. ಸಾಕುಸಾಕು ಎನ್ನುವಷ್ಟು ಸಂಪತ್ತು. ಬೇಕುಬೇಕಾದಷ್ಟು ಐಶ್ವರ್ಯ. ಅಂದ ಬಳಿಕ ಯಾರು ಯಾರ ಮೇಲೆ ಆಕ್ರಮಣ ಮಾಡಬೇಕು ! ಏಕೆ ಮಾಡಬೇಕು. ಕ್ಷುದ್ರ ಅಧಿಕಾರಕ್ಕಾಗಿ ಇನ್ನೊಬ್ಬರ ಮೇಲೆ ಕೈಮಾಡುವಷ್ಟು ಕೀಳುತನಕ್ಕೆ ಇಳಿದಿರಲಿಲ್ಲ ಅಂದಿನ ಜನ. ಆ ಪೃಥು ರಾಜ್ಯದಲ್ಲಿ ಧರ್ಮವಾಸನೆಯೇ ಜನರಲ್ಲಿ ಪ್ರಧಾನವಾಗಿದ್ದಿತು. ಅದರಂದ ಯಾರೂ ಅನ್ಯಾಯವಾಗಿ ಬಲಪ್ರಯೋಗ ಮಾಡುತ್ತಿದ್ದಿಲ್ಲ. ಶಸ್ತ್ರಾಸ್ತ್ರಗಳನ್ನು ಹಿಡಿಯುತ್ತಿದ್ದಿಲ್ಲ. ಎಲ್ಲರೂ ನಿತ್ಯತೃಪ್ತರು. ಎಲ್ಲರೂ ಆತ್ಮತುಷ್ಟರು. ಅದರಿಂದ ಯಾರಿಗೂ ದುಃಖವಿಲ್ಲ. ಒಟ್ಟಾರೆ ಅದೊಂದು ಆದರ್ಶ ಧರ್ಮರಾಜ್ಯ. ಎಲ್ಲರ ಕನಸಿನ ರಾಮರಾಜ್ಯ. ಈ ಪೃಥುವಿನ ಶಾಸನದ ರೀತಿಯನ್ನು ನಿಮಗೆ ನಾನು ಈಗ ತಿಳಿಸಿದೆ. ಮತ್ತು ಯಜ್ಞ ಹಾಗೂ ಶ್ರಾದ್ಧಾದಿ ವಿಧಾನ ಸಂದರ್ಭದಲ್ಲಿ ಪಾತ್ರಗಳು ಯಾವವು. ಹಾಲು ಯಾವುದು ಎಂಬುದನ್ನೂ ನಾನು ನಿಮಗೆ ತಿಳಿಸಿದ್ದೇನೆ. ಯಾರಿಗೆ ಯಾವುದು ರುಚಿಸುವದೋ ಅದನ್ನೇ ಅವರಿಗೆ ಇಂಥ ಸಂದರ್ಭಗಳಲ್ಲಿ ಜ್ಞಾನಿಯಾದವನು ದಾನಕೊಡಬೇಕು ಎಂದು ಮುಂತಾಗಿ ನಾನು ನಿಮಗೆ ನಿವೇದಿಸಿದ್ದೇನೆ. ಧರ್ಮಾತ್ಮನಾದ ಪೃಥುರಾಜನ ಸಂಬಂಧದಿಂದ ಮತ್ತು ಅವನಿಗೆ ಮಗಳಂತೆ ಪ್ರೀತಿಯಿಂದ ಬಯಸಿದ್ದನ್ನೆಲ್ಲ ನೀಡಿ ಅವನ ಪ್ರೇಮಪಾತ್ರಳಾದುದರಿಂದ ಈ ಭೂದೇವಿಗೆ **ಪೃಥಿವೀ** ಎಂದು ಹೆಸರು ಬಂದಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹತ್ತನೆಯ ಅಧ್ಯಾಯ ಮುಗಿದುದು*

—o—

ಸೂರ್ಯನ ಸಂಸಾರ. ಬಿಟ್ಟುಹೋದ ಮಡದಿಯ ಮೇಲೆ ಬಲಾತ್ಕಾರ.

ಅಧ್ಯಾಯ - ೧೧

**ಋಷಿಯ ಉವಾಚಃ**

**ಆದಿತ್ಯವಂಶಮಖಿಲಂ ವದ ಸೂತ ಯಥಾಕ್ರಮಮ್ ।**
**ಸೋಮವಂಶಂ ಚ ತತ್ವಜ್ಞ ಯಥಾವದ್ವಕ್ತುಮರ್ಹಸಿ ॥**

**ಋಷಿಗಳು :-** ಸೂತರೇ, ಸೂರ್ಯವಂಶ ಹಾಗೂ ಚಂದ್ರವಂಶಗಳ ವೃತ್ತಾಂತವನ್ನು ಯಥಾಸ್ಥಿತವಾಗಿ ತತ್ವಜ್ಞಾನಿಗಳಾದ ತಾವು ತಿಳಿಸಬೇಕು.

**ಸೂತ :-** ಕಶ್ಯಪ ಮಹರ್ಷಿಗಳಿಗೆ ಅದಿತಿದೇವಿಯಲ್ಲಿ ಸೂರ್ಯನು ಸುತನಾಗಿ ಜನಿಸಿದನು. ಅವನಿಗೆ ವಿವಸ್ವಾನ್ ಎಂದೂ ಹೆಸರು. ವಿವಸ್ವಂತನಿಗೆ ಸಂಜ್ಞಾ, ರಾಜ್ಞೀ, ಪ್ರಭಾ ಎಂದು ಮೂವರು ಸತಿಯರು. ರಾಜ್ಞಿಯು ರೈವತನ ಮಗಳು. ಸೂರ್ಯನಿಗೆ ರಾಜ್ಞಿಯಲ್ಲಿ ರೇವತ ಎಂಬ ಮಗನು ಜನಿಸಿದನು. ಪ್ರಭಾ ಎಂಬ ಪ್ರಭಾಕರನ ಪತ್ನಿಯು ಪ್ರಭಾತ ಎಂಬ ಪುತ್ರನನ್ನು ಹೆತ್ತಳು. ದೇವಬಡಿಗ ತ್ವಷ್ಟಾರನ ಪುತ್ರಿಯಾದ ಸಂಜ್ಞಾ ಎಂಬ ಸೂರ್ಯಕಾಂತೆಯು ಮನು ಎಂಬ ಮಗನನ್ನು ಹೆತ್ತಳು. ಮನುವಿನ ಬೆನ್ನ ಮೇಲೆ ಸಂಜ್ಞೆಗೆ ಯಮ, ಯಮುನೆ ಎಂಬ ಇಬ್ಬರು ಅವಳಿ ಮಕ್ಕಳಾದರು. ದಿನಕಳೆದಂತೆ ಸೂರ್ಯನ ತೇಜಸ್ಸು ಬೆಳೆಯತೊಡಗಿತು. ಅವನ ತೇಜೋಮಯವಾದ ರೂಪವು ರಮಣಿ ಸಂಜ್ಞೆಗೆ ತಾಳಲಾರದಂತಾಯಿತು. ಬೆಂಕಿಯ ಮೊಟ್ಟೆಯಂತಿರುವ ಆ ತೇಜೋನಿಧಿಯ ಸಹವಾಸದಿಂದ ಬೆಂದು ಬಸವಳಿದ ಆ ಸಂಜ್ಞಾದೇವಿಯು ತನ್ನ ಶರೀರದಿಂದಲೇ ತನ್ನಂತೆಯೇ ಇರುವ ಛಾಯಾ ಎಂಬ ಹೆಣ್ಣನ್ನು ನಿರ್ಮಿಸಿದಳು. ತನ್ನ ನೆರಳಿನಲ್ಲಿಯೇ ಜೀವತುಂಬಿದಂತೆ ಇರುವ ಆ ಛಾಯೆಯು ತನ್ನೆದುರು ನಿಂತುದನ್ನು ಕಂಡು ಹೇಳಿದಳು.

''ಛಾಯೆ, ನೀನು ಪ್ರತಿ ನನ್ನಂತೆಯೇ ಇರುವೆ. ಚೆಲುವೆಯಾದ ನೀನು ನನ್ನ ಪತಿಯೊಡನೆ ಸರಸವಾಗಿ ಬಾಳುವೆಮಾಡು. ನನ್ನ ಮಕ್ಕಳನ್ನು ಮಾತೆಯ ಮಮತೆಯಿಂದ ರಕ್ಷಿಸು.'' ತನ್ನ ಮಾತಿಗೆ ಛಾಯಾದೇವಿಯು ಒಪ್ಪಿಗೆ ಇತ್ತ ಬಳಿಕ ಪತಿವ್ರತೆಯಾದ ಸಂಜ್ಞಾದೇವಿಯು ಎತ್ತಲೋ ಹೊರಟು ಹೋದಳು. ಸೂರ್ಯನಿಗೆ ಇದಾವುದೂ ತಿಳಿಯದು. ಮನೆಯಲ್ಲಿದ್ದವಳನ್ನು ಮಡದಿಯೆಂದೇ ತಿಳಿದು ಬಿಟ್ಟ. ಅವಳಂತೆಯೇ ಇವಳ ಮೇಲೆಯೂ ಪ್ರೇಮ ಕಾಮ ಎಲ್ಲವೂ ನಡೆಯಿತು. ಒಂದು ಮಗು ಹುಟ್ಟಿಯೂ ಆಯಿತು. ಈ ಕೂಸು ಹಿರಿಯ ಮಗ ಮನುವಿನಂತೆಯೇ ಇದ್ದಿತು. ಅದೇ ಬಣ್ಣ, ಅದೇ ಕಣ್ಣು, ಅದೇ ಮೂಗು. ತದ್ರೂಪ ವೈವಸ್ವತ ಮನುವೇ. ಅವನ ವರ್ಣವೇ ಇವನಿಗೂ ಇದ್ದದ್ದರಿಂದ ಈ ಛಾಯಾಪುತ್ರನು ' ಸಾವರ್ಣಿಮನು ' ಎಂದು ಹೆಸರಾದನು.

ಛಾಯೆಯ ಮರುಚಲ ಮಗನೇ ಶನಿ. ಅನಂತರ ತಪತೀ, ವಿಷ್ಟಿ ಎಂಬ ಮತ್ತಿಬ್ಬರು ಮಕ್ಕಳು ಭಾಸ್ಕರನಿಂದ ಛಾಯಾದೇವಿಯಲ್ಲಿ ಜನಿಸಿದರು. ಇಷ್ಟು ಮಕ್ಕಳಾದರೂ ರವಿಗೆ ಛಾಯೆಯ ಮೇಲೆ ಸಂದೇಹ ಬರಲಿಲ್ಲ. ತಾನು ಕೈಹಿಡಿದ ಮಡದಿಯೇ ಇವಳು ಎಂದು ಅವನ ತಿಳಿವಳಿಕೆ. ಆದರೆ ಛಾಯೆಗೆ ಮಾತ್ರ ತನ್ನ ಹೊಟ್ಟೆಯ ಮಗನಾದ ಸಾವರ್ಣಮನುವಿನ ಮೇಲೆಯೇ ಅತ್ಯಧಿಕ ಪ್ರೀತಿ. ತನ್ನ ಅಕ್ಕನ ಮಕ್ಕಳಾದ ವೈವಸ್ವತಮನು ಹಾಗೂ ಯಮ ಯಮುನೆಯರ ಮೇಲೆ ಅವಳಿಗೆ ಪ್ರೀತಿಯೇ ಇಲ್ಲ. ಸವತಿ ಮತ್ಸರವೂ ಪ್ರಾರಂಭವಾಯಿತು. ಮಾತುಮಾತಿಗೆ ಅವರನ್ನು ಗದರಿಸಲು ಮೊದಲು ಮಾಡಿದಳು. ಇದನ್ನು ಹಿರಿಯನಾದ ಮನು ಶಾಂತನಾದುದರಿಂದ ಹೇಗೋ ತಾಳಿಕೊಂಡನು. ಆದರೆ ಯಮನಿಗೆ ಮಾತ್ರ ಛಾಯೆಯ ಈ ಮಲತಾಯಿ ಧೋರಣೆಯನ್ನು ಸೈರಿಸಲಿಕ್ಕೆ ಆಗಲಿಲ್ಲ. ಸಿಟ್ಟಿನಿಂದ ಮೈಮರೆತು ಒಮ್ಮೆ ಅವನು ತನ್ನ ಬಲಗಾಲನ್ನು ಎತ್ತಿ ಛಾಯೆಯನ್ನು ಧಿಕ್ಕರಿಸಿ ನುಡಿದನು. ಅದನ್ನು ನೋಡಿ ಛಾಯೆಗೂ ಈ ಕೋಪವು ನೆತ್ತಿಗೆ ಏರಿ. ''ನಿನ್ನ ಕಾಲಿನಲ್ಲಿ ಹುಳ ಬೀಳಲಿ. ಕೊಳೆತು ಕೀವು ರಕ್ತ ಹರಿಯಲಿ'' ಎಂದು ಶಪಿಸಿದಳು. ಅವಳ ಶಾಪದಿಂದ ಕೋಪಗೊಂಡ ಯಮನು ನೇರವಾಗಿ ತಂದೆ ಮಾರ್ತಂಡನ ಬಳಿಗೆ ಬಂದನು. ದಿವಾಕರನ ಎದುರು ದೀನನಾಗಿ ದೂರು ಕೊಟ್ಟು ದಯೆಬರುವಂತೆ ತನ್ನ ದುಃಖವನ್ನೆಲ್ಲ ತೋಡಿಕೊಂಡನು.

''ತಂದೆಯೇ, ಈ ತಾಯಿಯು ಕಾರಣವಿಲ್ಲದೆ ಕೋಪದಿಂದ ನನಗೆ ಶಾಪ ಹಾಕಿದ್ದಾಳೆ.' ಎಷ್ಟೆಂದರೂ ನಾನು ಹುಡುಗ. ಏನೋ ಪ್ರಮಾದದಿಂದ ಒಂದು ಸಲ ಕಾಲನ್ನು ಮೇಲಕ್ಕೆ ಎತ್ತಿದೆ. ಅಷ್ಟಕ್ಕೇ ತಾಯಿ ಆದವಳು ಮಗನನ್ನು ಶಾಪ ಕೊಟ್ಟು ಹಾಳು ಮಾಡುವದೇ! ಇವಳ ಶಾಪದಿಂದ ನಾನು ಈಗ ಕುಂಟನಾಗಬೇಕಾಯಿತು. ಅಪ್ಪ, ಕಾರಣವಿಲ್ಲದೆ ಮಕ್ಕಳನ್ನು ತಿಕ್ಕಿ ಮುಕ್ಕುವ ಇವಳು ನಮ್ಮ ತಾಯಿಯೇ ಆಗಿರಲಿಕ್ಕಿಲ್ಲ. ಮನು ಬೇಡವೆಂದು ಬೇಡಿಕೊಂಡರೂ ಕೇಳದೆ ಶಪಿಸಿ ನನ್ನ ಜೀವನವನ್ನೇ ಹಾಳುಗೈದಳು.'' ಆಗ ಸೂರ್ಯನು ಪುತ್ರನಾದ ಯಮನನ್ನು ಸಂತೈಸುತ್ತ ಹೇಳಿದನು, 'ಯಮನೆ, ನೀನು ಜಾಣನಲ್ಲವೇ ! ಆಗಿ ಹೋದದ್ದಕ್ಕೆ ನನಗಾದರೂ ಏನು ಮಾಡಲು ಶಕ್ಯವಿದೆ ! ಮೂರ್ಖತನದಿಂದ ಯಾರಿಗೆ ತಾನೆ ದುಃಖವಾಗುವದಿಲ್ಲ ? ಅಥವಾ ಇದು ಒಂದು ನಿನ್ನ ಪ್ರಾರಬ್ಧಕರ್ಮವೇ ಇರಬೇಕು. ಶಿವನಂಥವರಿಗೂ ಈ ಪ್ರಾರಬ್ಧ ಬಿಟ್ಟಿಲ್ಲ. ಮಿಕ್ಕವರ ಪಾಡೇನು ! ನಾನೀಗ ನಿನ್ನ ಕಾಲು ಕೊಳೆತು ಹೋಗದಂತೆ ಒಂದು ಉಪಾಯ ಮಾಡುವೆನು. ಹುಳಿತು ಕೊಳೆತು ಕೀವುಸೋರುವ ನಿನ್ನ ಕಾಲಿನಲ್ಲಿಯ ಹುಳುಕೊಳೆಗಳನ್ನೆಲ್ಲ ತಿಂದು ಹಾಕಲು ನಾನು ಒಂದು ಕೋಳಿಯನ್ನು ನಿರ್ಮಿಸುತ್ತೇನೆ.

ಅದು ಶಾಪದಿಂದ ಕೊಳೆತು ಹುಳಿತು ಹೋದ ನಿನ್ನ ಕಾಲಿನ ಕಶ್ಮಲವನ್ನೆಲ್ಲ ತಿಂದು ಸ್ವಚ್ಛಮಾಡುವದು. ಅದರಿಂದ ನಿನ್ನ ಕಾಲು ಮೊದಲಿನಂತೆ ಚಿಗಿತು ಚೆನ್ನಾಗಿ ಬಲಿಷ್ಠವಾಗುವದು.'' ತಂದೆಯ ಮಾತಿನಿಂದ ಯಮಧರ್ಮನಿಗೆ ತುಸು ಸಮಾಧಾನ

ವಾಯಿತು. ಆದರೂ ಅವನು ಅಲ್ಲಿ ನಿಲ್ಲದೇ ವಿರಕ್ತನಾಗಿ ಗೋಕರ್ಣಕ್ಷೇತ್ರಕ್ಕೆ ಹೋದನು. ಅಲ್ಲಿ ಹತ್ತುಸಾವಿರ ವರ್ಷ ಮರದ ಎಲೆ, ಹಣ್ಣು ತಿಂದು, ಗಾಳಿ ಕುಡಿದು, ಮಹಾದೇವರನ್ನು ಕುರಿತು ತಪಸ್ಸುಮಾಡಿದನು. ಯಮನ ಉಗ್ರತಪಸ್ಸಿನಿಂದ ಪರಮೇಶ್ವರನು ಪ್ರಸನ್ನನಾದನು. ಅವನಿಗೆ ಯಮನು ಮೂರು ವರಗಳನ್ನು ಕೇಳಿಕೊಂಡನು. ''ಲೋಕಪಾಲತ್ವ, ಪಿತೃಲೋಕದ ಆಧಿಪತ್ಯ,ಧರ್ಮಾ, ಧರ್ಮ ನಿರ್ಣಾಯಕತ್ವ.'' ಅದಕ್ಕೆ 'ಅಸ್ತು' ಎಂದು ಈಶ್ವರನು ವರವಿತ್ತು ಯಮನ ಮೂರು ಅಪೇಕ್ಷೆಗಳನ್ನು ಈಡೇರಿಸಿದನು. ಇತ್ತ ಸೂರ್ಯನು ತನ್ನ ಮಡದಿ ಸಂಜ್ಞೆಯೆ ಈಗಿದ್ದ ಛಾಯಾ ಎಂದೂ, ಸಂಜ್ಞೆಯೇ ಯಮನಿಗೆ ಶಾಪಕೊಟ್ಟರು ಇವಳು ಎಂದು ತಿಳಿದು ಅವಳಿಗೆ ಪುತ್ರ ಶಾಪರೂಪವಾದ ಕುಚೇಷ್ಟೆಯನ್ನು ಸಹಿಸಲಾರದೆ ಅವಳ ತಂದೆ ವಿಶ್ವಕರ್ಮನ ಬಳಿಗೆ ಹೋದನು ಮತ್ತು ಅವನ ಮುಂದೆ ಸಿಟ್ಟಿನಿಂದ ನಡೆದ ಸಂಗತಿಯನ್ನೆಲ್ಲ ತಿಳಿಸಿ ''ತಾಯಿಯಾದವಳು ಮಕ್ಕಳನ್ನು ಹೀಗೆ ಶಪಿಸಬಹುದೇ ? '' ಎಂದು ಆಕ್ಷೇಪಿಸಿ ನುಡಿದನು. ಅದನ್ನು ಕೇಳಿ ವಿಶ್ವಕರ್ಮನು ಕ್ರುದ್ಧನಾದ ದಿವಾಕರನನ್ನು ಸಂತೈಸುತ್ತ ಮಿದುವಾಗಿ ಮಾತನಾಡಿದನು.

''ಪೂಜ್ಯನೇ, ಜಗತ್ತಿನಲ್ಲಿಯ ಕತ್ತಲೆಯ ಮೊತ್ತವನ್ನೆಲ್ಲ ಕಿರಣಗಳಿಂದ ಕೊಚ್ಚಿ ಹಾಕುವ ನಿನ್ನ ತೇಜಸ್ಸು ತೀಕ್ಷ್ಣವಾಗಿದೆ. ಬೆಳಕು ಬೆಂಕಿಗಿಂತ ಬಿಸಿಯಾಗಿದೆ. ಅಗ್ನಿಪಿಂಡದಂತಿರುವ ನಿನ್ನಂಥ ತೇಜೋನಿಧಿಯ ಅಂಗಸಂಗವು ನನ್ನ ಮಗಳಿಗೆ ಅಗ್ನಿಯ ಆಲಿಂಗನದಂತೆ ಅಸಹ್ಯವಾಯಿತು. ಈ ಬೆಂಕಿಯೊಡನೆ ಸರಸಾಟವನ್ನು ತಾಳಲಾರದೆ ಅವಳು ತನ್ನ ಸ್ಥಾನದಲ್ಲಿ ಮತ್ತೊಬ್ಬ ಮಾಯಾ ಸಂಜ್ಞೆಯನ್ನು ನಿರ್ಮಿಸಿ ನಿನ್ನ ಬಳಿಯಲ್ಲಿ ಇಟ್ಟು ನನ್ನ ಮನೆಗೆ ಬಂದಳು. ಆಗ ನಾನು ''ನಿನ್ನ ಪತಿಗೆ ಹೇಳದೆ ತವರಿಗೆ ಬಂದ ನೀನು ನನ್ನ ಮನೆಯಲ್ಲಿ ಕಾಲು ಇಡಕೂಡದು'' ಎಂದು ಗದರಿಸಿ ನಿಷ್ಠುರವಾಗಿ ಹಿಂದುರುಗಿಸಿದೆ. ಆಗ ಅವಳು ಹೆತ್ತ ಮನೆ, ಕೊಟ್ಟ ಮನೆ ಎರಡಕ್ಕೂ ಎರವಾಗಿ ಎಲ್ಲಿಯೂ ಆಸರೆಯಿಲ್ಲದೆ ಅನಾಥಳಂತಾದಳು. ಕೊನೆಗೆ ಅವಳು ಹೆಣ್ಣು ಕುದುರೆಯ ರೂಪತಾಳಿ ನಾನು ನಿಷೇಧಿಸಿದ ಮರುದೇಶಕ್ಕೆ ಹೋಗಿ ಅಲ್ಲಿಯೇ ನೆಲೆಸಿರುವಳು. ಇನ್ನು ಮೇಲಾದರೂ ಆ ನನ್ನ ಮಗಳ ಮೇಲೆ ದಯೆದೋರು. ನಿಮ್ಮೀರ್ವರ ವಿರಸಕ್ಕೆ ಕಾರಣವಾದ ಈ ನಿನ್ನ ತೇಜಸ್ಸನ್ನು ಕಡಿಮೆ ಮಾಡುತ್ತೇನೆ ಬಾ. ಈ ಯಂತ್ರದಿಂದ ನಿನ್ನ ಉಕ್ಕುತ್ತಿರುವ ಹೆಚ್ಚಿನ ತೇಜಸ್ಸಿನ ಪದರುಗಳನ್ನೆಲ್ಲ ಕಡಿದು ಕತ್ತರಿಸಿ ಲೋಕಾನಂದಕರವಾದ ಸೌಮ್ಯರೂಪವು ಉಂಟಾಗುವಂತೆ ಮಾಡುವೆನು.''

ಮಾವನ ಈ ಮಾತಿಗೆ ಮಾರ್ತಾಂಡನು ಮೌನವಾಗಿ ಒಪ್ಪಿಗೆ ಕೊಟ್ಟನು. ಆಗ ಆ ದೇವ ಬಡಿಗನು ಬೆಂಕಿಯ ಬೆಟ್ಟದಂತಿರುವ ಸೂರ್ಯನ ಶರೀರವನ್ನು ಚಕ್ರಾಕಾರವಾಗಿ ತಿರುಗುವ ಗಾಡಕ್ಕೆ ಏರಿಸಿ ಸಾಣೆಹಿಡಿದನು. ಅದರಿಂದ ಪ್ರಭಾಕರನ ಜ್ವಾಲಾಮುಖಿಯಂತೆ ಉರಿಯುತ್ತಿರುವ ಮೇಲ್ಮೈ ತೇಜಸ್ಸಿನ ಪರಿಘಗಳನ್ನೆಲ್ಲ ಕತ್ತರಿಸಿಹಾಕಿದನು. ಹೀಗೆ ದಿವಾಕರನ ದೇಹವು ಯಂತ್ರಾರೂಢವಾದಾಗ ಸಿಡಿದು ಕಡಿದುಹೋದ ಆ ಅಗ್ನಿಪಿಂಡದ ತೇಜಸ್ಸಿನ ತುಂಡು ತುಣುಕುಗಳಿಂದಲೇ ವಿಶ್ವಕರ್ಮನು ಒಂದು ಸುದರ್ಶನ ಚಕ್ರವನ್ನು

ನಿರ್ಮಿಸಿ ವಿಷ್ಣುವಿಗೆ ಕೊಟ್ಟನು. ತ್ರಿಶೂಲವನ್ನು ಮಾಡಿ ರುದ್ರನಿಗೆ ಅರ್ಪಿಸಿದನು. ಆ ಸೂರ್ಯ ದೇಹದ ಶಕಲಗಳಿಂದಲೇ ವಜ್ರಾಯುಧವನ್ನು ನಿರ್ಮಿಸಿ ದೇವೇಂದ್ರನಿಗೆ ಕೊಡಮಾಡಿದನು. ಈಗ ಸೂರ್ಯನ ರೂಪವು ಅತಿ ಸುಂದರವಾಗಿ ಶಾಂತವಾಗಿ ಕಣ್ಣಿಗೆ ಆನಂದಕರವಾಗಿ ಮಾರ್ಪಟ್ಟಿತು. ಆದರೆ ಸೂರ್ಯನ ಕಾಲುಗಳನ್ನು ಮಾತ್ರ ವಿಶ್ವಕರ್ಮನಿಗೆ ಗಾಡಕ್ಕೆ ಸಾಣೆ ಹಿಡಿಯಲಿಕ್ಕಾಗದೆ ಅವು ತೇಜೋಮಯ ವಾಗಿಯೇ ಉಳಿದವು. ಅವು ಏನೂ ಮಾಡಲಾರದೆ ಉಳಿದದ್ದರಿಂದ ಸೂರ್ಯನ ಪ್ರತಿಮೆ ಮಾಡುವವರು ಕಾಲುಗಳನ್ನು ಮಾಡುವದೇ ಇಲ್ಲ. ಮಾಡಲೂಬಾರದು. ಹಾಗೆ ಮಾಡಿದರೆ ಈ ಲೋಕದಲ್ಲಿ ಕುಷ್ಠರೋಗಕ್ಕೆ ತುತ್ತಾಗಿ ಬಹಳ ಕಷ್ಟಪಡಬೇಕಾಗುವದು. ಪರತ್ರದಲ್ಲಿಯೂ ಪಾಪದಿಂದ ನರಕವಾಗುವದು. ಅತ್ತ ಸೂರ್ಯನು ಭೂಲೋಕದಲ್ಲಿಯ ಮರುದೇಶಕ್ಕೆ ಹೋಗಿ ಹೆಣ್ಣು ಕುದುರೆಯ ರೂಪದಿಂದ ಅಲೆಯುವ ಮಡದಿ ಸಂಜ್ಞೆಯನ್ನು ನೋಡಿದನು. ಕೂಡಲೇ ಅವನಿಗೆ ಕಾಮೋದ್ರೇಕವಾಯಿತು. ತಾನು ಒಂದು ಗಂಡುಗುದುರೆಯಾಗಿ ಮುಖದಲ್ಲಿಯೇ ರಮಿಸಿದನು.

ಆ ಹೆಣ್ಣು ಕುದುರೆಯೆಂದರೆ ಪರಮ ಪತಿವ್ರತೆಯಾದ ಸಂಜ್ಞಾದೇವಿಯಷ್ಟೇ! ನಾರೀ ರೂಪದಲ್ಲಿ ತನ್ನ ಚೆಲುವಿಕೆ ಕಂಡು ಯಾರಾದರೂ ಪರಪುರುಷರು ಸ್ಪರ್ಶಮಾಡಬಹುದೆಂದು ಹೆದರಿಯೇ ಅವಳು ಕುದುರೆವೇಷಧರಿಸಿದ್ದು. ಇಲ್ಲಿಯೂ ಆ ಗಂಡಾಂತರ ಬಂದಿತೆಂದು ತಿಳಿದು ಅವಳು ಭಯಭ್ರಾಂತಳಾದಳು. ಸೂರ್ಯದೇವನ ಈ ಮುಖವಿಹಾರದಿಂದ ಅವಳು ಬಹಳೇ ಅಸಹ್ಯಪಟ್ಟು ತನ್ನ ಮೂಗಿನ ಹೊರಳೆಗಳಿಂದ ಆ ವೀರ್ಯವನ್ನು ಚೆಲ್ಲಿಕೊಟ್ಟಳು. ಅದರಿಂದ ಆಗಲೇ ಅಶ್ವಿನೀಕುಮಾರ ಎಂಬ ಇಬ್ಬರು ಅವಳಿಮಕ್ಕಳು ಉತ್ಪನ್ನರಾದರು. ಅವಳಿಗಳಾದ್ದರಿಂದ ದಸ್ರರೆಂದೂ, ನಾಶಿಕಾ ಎಂದರೆ ಮೂಗಿನಿಂದ ಹೊಮ್ಮಿ ಬಂದಿದ್ದರಿಂದ ನಾಸತ್ಯರೆಂದೂ, ಹೆಣ್ಣುಕುದುರೆ (ಅಶ್ವಿನೀ)ಯಿಂದ ಹುಟ್ಟಿದ್ದರಿಂದ ಅಶ್ವಿನೀಕುಮಾರರೆಂದೂ ಅವರಿಗೆ ಹೆಸರು ಬಂದಿತು.

ಬಹಳ ಕಾಲಾನಂತರ ಆ ಸಂಜ್ಞಾದೇವಿಗೆ ಗಂಡು ಕುದುರೆಯ ರೂಪದಿಂದ ತನ್ನ ಬಳಿಗೆ ಬಂದು ಬಲಾತ್ಕಾರದಿಂದ ತನ್ನನ್ನು ಭೋಗಮಾಡಿದವ ಬೇರಾರೂ ಆಗದೇ ತನ್ನ ನೆಚ್ಚಿನ ನಲ್ಲ ಭಾಸ್ಕರನೇ ಎಂದು ತಿಳಿದುಬಂದಿತು. ಆದುದರಿಂದ ಅವಳಿಗೆ ಪರಮಾನಂದವಾಯಿತು. ಮುಂದೆ ಅವಳು ತನ್ನ ಪತಿ ಪ್ರಭಾಕರನೊಡನೆ ವಿಮಾನ ಏರಿ ಆನಂದದಿಂದ ಸ್ವರ್ಗಕ್ಕೆ ನಡೆದಳು. ಇತ್ತ ಸಾವರ್ಣಿಮನು ಮಹಾತಪಸ್ವಿಯಾಗಿ ಮೇರು ಪರ್ವತದಲ್ಲಿ ತಪಸ್ಸನ್ನು ಮಾಡುತ್ತ ಇಂದಿಗೂ ನಿಂತುಕೊಂಡಿದ್ದಾನೆ. ಅವನ ತಮ್ಮನಾದ ಶನಿಯು ತಪಸ್ಸನ್ನು ಮಾಡಿ ಆಕಾಶದಲ್ಲಿ ಗ್ರಹಗಳ ಸಾಮ್ಯವನ್ನು ಹೊಂದಿದನು. ಸೂರ್ಯನ ಹೆಣ್ಣುಮಕ್ಕಳಾದ ಯಮುನಾ, ತಪತೀ ಇಬ್ಬರೂ ಪುಣ್ಯ ನದಿಗಳಾದರು.

ವಿಷ್ಟಿಯು ಕ್ರೂರ ಸ್ವಭಾವದವಳಾದುದರಿಂದ ಶುಭಕರ್ಮಗಳಿಗೆ ವರ್ಜ್ಯವಾದ ಕಾಲರೂಪವನ್ನು ಹೊಂದಿದಳು. ವೈವಸ್ವತ ಮನುವಿಗೆ ಇಲ, ಇಕ್ಷ್ವಾಕು, ಕುಶನಾಭ, ಅರಿಷ್ಟ, ಧೃಷ್ಟ, ನರಿಷ್ಯಂತ, ಕರೂಷ, ಶರ್ಯಾತಿ, ಪೃಷಧ್ರ ಮತ್ತು ನಾಭಾಗ

ಮುಂತಾದ ದೇವ ತುಲ್ಯರಾದ ದಶಕುಮಾರರು ಇದ್ದರು. ಧಾರ್ಮಿಕನಾದ ಆ ಮನು ಮಹಾರಾಜನು ಜ್ಯೇಷ್ಠಪುತ್ರ ಇಲನಿಗೆ ಸಾಮ್ರಾಜ್ಯ ಪಟ್ಟಾಭಿಷೇಕಮಾಡಿ ತಪಸ್ಸಿಗೋಸುಗ ಮಹೇಂದ್ರ ಪರ್ವತಕ್ಕೆ ತೆರಳಿದನು. ಅನಂತರ ಇಲಮಹಾರಾಜನು ಎಲ್ಲ ದ್ವೀಪಗಳಲ್ಲಿ ಅಲೆದಾಡುತ್ತ ಬೆಟ್ಟಗಳನ್ನು ತನ್ನ ಕುದುರೆಯ ಖುರಪುಟದ ಘಟ್ಟನೆಯಿಂದ ಪುಡಿಗೈಯುತ್ತ ದಿಗ್ವಿಜಯಕ್ಕೆ ಹೊರಟನು.

## ಗಂಡು ಹೆಣ್ಣಾಯಿತು. ಹೆಣ್ಣು ಹೆಂಡತಿ ಆಯಿತು

ಆಗ ತುಸು ದೂರ ಕ್ರಮಿಸಿದ ಬಳಿಕ ಅವನ ಕುದುರೆಯು ಕಲ್ಪವೃಕ್ಷ ಹಾಗೂ ಲತೆಗಳಿಂದ ಕೂಡಿದ ಶರವಣ ಎಂಬ ಮಹಾದೇವರ ಉಪವನಕ್ಕೆ ಅವನನ್ನು ಹೊತ್ತುಕೊಂಡು ಒಯ್ದಿತು. ಅಲ್ಲಿ ಮರಿಚಂದ್ರನನ್ನು ವತಾಲಿಯಲ್ಲಿ ಧರಿಸಿ ಮಹಾದೇವನು ವಿಹಾರಗೈಯುತ್ತಾನೆ. ಹಿಂದೆ ಪಾರ್ವತಿಯು ''ಹತ್ತು ಯೋಜನ ವಿಸ್ತಾರವಾದ ಈ ಶರವಣ ಪ್ರದೇಶದಲ್ಲಿ ಯಾವುದಾದರೂ ಪುರುಷಪ್ರಾಣಿ ಪ್ರವೇಶಿಸಿದರೆ ಅದು ತಕ್ಷಣವೇ ಹೆಣ್ಣಾಗಿ ಬಿಡಲಿ '' ಎಂದು ಶಾಪರೂಪಕಟ್ಟಳೆ ಮಾಡಿದ್ದಳು. ಈ ನಿರ್ಬಂಧವನ್ನು ಅರಿಯದೇ ಇಲನು ಆ ಶರವಣದಲ್ಲಿ ಪ್ರವೇಶಮಾಡಿದನು. ಕೂಡಲೇ ಪಾರ್ವತಿಯ ಕಟ್ಟಾಜ್ಞೆಯಂತೆ ಅವನಿಗೆ ಸ್ತ್ರೀರೂಪವು ತಕ್ಷಣವೇ ಬಂದುಬಿಟ್ಟಿತು. ಅವನು ಏರಿಕೊಂಡು ಬಂದ ಗಂಡು ಕುದುರೆಯೂ ಹೆಣ್ಣುದುರೆಯಾಗಿ ಮಾರ್ಪಟ್ಟಿತು. ಮಹಾರಾಜ ಇದನ್ನು ಕಂಡು ತನ್ನ ಅಂಗಾಂಗಗಳನ್ನೆಲ್ಲ ತಾನೇ ನೋಡಿಕೊಂಡ. ಮೈಯೆಲ್ಲಾ ಹೆಣ್ಣು. ಕಠೋರವಾದ ಮೈಕೈಗಳಲ್ಲಿ ಹೆಣ್ಣಿನ ಮಾರ್ದವ. ಉಬ್ಬಿದ ಎದೆ. ಸಣ್ಣದಾದ ನಡು. ಚಂಚಲ ಕಣ್ಣು. ಕೇದಿಗೆಯ ಬಣ್ಣ. ನೋಟದಲ್ಲಿ ವಿಲಾಸ. ನಡುಗೆಯಲ್ಲಿ ಆಲಸ. ಕೂದಲು ನೀಳವಾಗಿ ಗುಂಗುರುಗಟ್ಟಿದ್ದವು. ಧ್ವನಿಯಲ್ಲಿ ಕೋಮಲತೆ. ನಡಿಗೆಯಲ್ಲಿ ಹಂಸಿಯ ವೈಯ್ಯಾರೆ. ಇದನ್ನೆಲ್ಲ ಕಂಡು ''ನಾನು ಗಂಡೋ ಹೆಣ್ಣೋ'' ಇದೇ ಅವನಿಗೆ ತಿಳಿಯದಾಯಿತು. ''ನಾನು ಹೆಣ್ಣಾಗಿದ್ದರೆ ಯಾರ ಮಗಳು? ಯಾರನ್ನು ಮದುವೆಯಾಗಿದ್ದೇನೆ ? ನನ್ನ ಗಂಡ ಯಾರು ? ನಾನು ಅತ್ತೆ ಮನೆಗೆ ಬಂದು ಎಷ್ಟು ದಿವಸವಾದವು ? '' ಹೀಗೆ ಏನೇನೋ ಯೋಚನೆಗಳು.

ಆ ವನಾಂತರದಲ್ಲಿ ಅಲೆಯುವ ಆ ಇಲರಾಜನಿಗೆ ಮನಸ್ಸಿನಲ್ಲಿ ಅಪ್ಪಟ ಹೆಣ್ಣಿನಂತೆಯೇ ವಿಚಾರ. ಹೆಣ್ಣಿನ ಭಾವನೆ, ಹೆಣ್ಣಿನ ವಿಕಾರ, ನಾಚಿಕೆ, ಕಾಮ ಪ್ರೇಮ, ವಿಲಾಸ, ಒನಪು, ವೈಯ್ಯಾರ.. ಎಲ್ಲವೂ ಅವನಲ್ಲಿ ಥೇಟಹೆಣ್ಣಿನದೇ ಬಂದಿತು. ಅಷ್ಟರಲ್ಲಿ ಚಂದ್ರನ ಮಗನಾದ ಬುಧನು ಅಲ್ಲಿ ಯಾವದೋ ಕಾರಣಕ್ಕಾಗಿ ಬಂದನು. ಹೆಣ್ಣು ರೂಪವನಾಂತು ನಿಂತ ಇಲನ ಸೌಂದರ್ಯವನ್ನು ಕಂಡು ತರುಣನಾದ ಆ ಚಂದ್ರಕುಮಾರನು ಕಾಮಪೀಡಿತನಾದನು. ಹೇಗಾದರೂ ಮಾಡಿ ಆ ಚೆಲುವೆಯನ್ನು ಪಡೆಯಬೇಕೆಂದು ಆ ಬುಧನು ಪ್ರಯತ್ನ ನಡೆಸಿದನು.

ತೇಜಃಪುಂಜನಾದ ಓರ್ವ ಬ್ರಾಹ್ಮಣನ ರೂಪಧರಿಸಿ ವೇದಘೋಷ ಮಾಡತೊಡಗಿದನು. ಒಂದು ಕೈಯಲ್ಲಿ ದಂಡಕಮಂಡಲು. ಇನ್ನೊಂದು ಕೈಯಲ್ಲಿ

ಪುಸ್ತಕ. ಬೆರಳಿನಲ್ಲಿ ದರ್ಭೆಯ ಪವಿತ್ರ. ಕಿವಿಗಳಲ್ಲಿ ಕಡಕು. ಸುತ್ತುಮುತ್ತು ಹೂವು, ಕರಿಕೆ ಪತ್ರಿ ನೀರು ಹಿಡಿದಿರುವ ಬ್ರಹ್ಮಚಾರಿಗುಂಪು. ಈ ಎಲ್ಲ ವಟುಗಳೊಡನೆ ಬ್ರಾಹ್ಮಣವೇಷದ ಬುಧನು ವನಗರ್ಭದಲ್ಲಿಯ ಮರದ ತೋಪಿನಲ್ಲಿ ಯಾರನ್ನೋ ಹುಡುಕುತ್ತ ಬಂದಂತೆ ಅಲ್ಲಿಗೆ ಐತಂದನು. ಅಲ್ಲಿ ಇಲೆಯನ್ನು ಕಂಡು ತಾವು ಹುಡುಕುವ ವ್ಯಕ್ತಿ ದೊರಕಿತು ಎಂಬಂತೆ ಸಂಭ್ರಮದಿಂದ ''ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ? ನನ್ನ ಅಗ್ನಿಹೋತ್ರದ ಸಿದ್ಧತೆಯನ್ನು ನೀನು ಮಾಡದೆ ಹೀಗೆ ಮನೆ ಬಿಟ್ಟು ಹೋಗಬೇಕೆ ?

ಈಗ ಅಗ್ನಿಹೋತ್ರದ ಸಮಯ ಮೀರಿ ವಿಹಾರದ ಉಚಿತ ಕಾಲವು ಸನ್ನಿಹಿತವಾಗಿದೆ. ಸುಂದರಿ, ಇಷ್ಟೇಕೆ ಗಾಬರಿಯಾಗಿರುವೆ ? ಈ ರಂಜಿಸುವ ಸಂಜೆಯು ನಮ್ಮ ಲೀಲಾವಿಹಾರಕ್ಕೆ ಉಚಿತವಾಗಿದೆ. ಮನೆಯನ್ನು ಸಾರಿಸಿ ಹೂವುಗಳಿಂದ ಅಲಂಕರಿಸು. ನೀನು ಶೃಂಗಾರ ಮಾಡಿಕೊ, ಎಂದು ಹೇಳಿದನು. ಆಗ ಹೆಣ್ಣು ರೂಪಹೊಂದಿ 'ನಾನು ಯಾರು, ನನ್ನ ಪತಿ ಯಾರು ?' ಎಂದು ವಿಚಾರತಂದ್ರಿಯಲ್ಲಿ ಇರುವ ಇಲನಿಗೆ ಬುಧನ ಮಾತನ್ನು ಕೇಳಿ ಹುಡುಕ ಹೊರಟ ವಸ್ತು ಕೈಗೆ ಹತ್ತಿದಂತಾಯಿತು. ಸ್ತ್ರೀ ಸಹಜ ಭಾವನೆ ಅವನಲ್ಲಿ ಬಲಗೊಂಡು ಇವನೇ ನನ್ನ ಪತಿ ಎಂದು ನಂಬುವಂತಾಯಿತು. ಆ ಮಾತನ್ನು ಗಟ್ಟಿಮಾಡಿಕೊಳ್ಳಲಿಕ್ಕಾಗಿ ಅವಳು ಮತ್ತೆ ಕೇಳಿದಳು,

''ತಪೋಧನನೆ, ನನಗೆ ಇದೆಲ್ಲವೂ ಮರೆತು ಹೋಗಿದೆ. ನಾನು ಯಾರು ? ನನ್ನ ಪತಿ ಯಾರು ? ನನ್ನ ಕುಲಯಾವುದು ? ನನಗೆ ಒಂದೂ ನೆನಪಿಲ್ಲ. ನೀನು ಯಾರು ಗೊತ್ತಿಲ್ಲ. ನೀನೇ ಎಲ್ಲವನ್ನೂ ನನಗೆ ಗುರುತು ಮಾಡಿಕೊಡು'' ಆಗ ಬುಧನು ಹೇಳಿದನು ರಮಣೀರೂಪದ ಇಲನಿಗೆ - ''ಸುಂದರಿ, ನಿನ್ನ ಹೆಸರು ಇಲಾ. ನಾನು ಎಲ್ಲ ವಿದ್ಯೆಗಳಲ್ಲಿಯೂ ಪರಿಣತನಾದ ಬುಧ, ನಾನು ನಿನ್ನನ್ನು ಕಾಮಿಸಿ ಪ್ರೇಮಿಸಿದ್ದೇನೆ. ನನ್ನ ತಂದೆಯು ಅತ್ಯಂತ ತೇಜಸ್ವಿಯಾದ ಚಂದ್ರ. ಅವನು ಬ್ರಾಹ್ಮಣರಿಗೆಲ್ಲ ಒಡೆಯ'' ಬುಧನ ಮಾತನ್ನು ಕೇಳಿ ಇಲೆಯು ಅವನ ಸುಂದರವಾದ ಮಂದಿರದಲ್ಲಿ ಪ್ರವೇಶ ಮಾಡಿದಳು.

ಬಂಗಾರದ ಗೋಡೆ, ರತ್ನದ ಕಂಬ, ವಜ್ರದ ನೆಲಗಟ್ಟಣೆ, ಮುತ್ತಿನ ತೋರಣ. ಹಿಂದೆ ಮುಂದೆ ನಂದನವನದಂತೆ ಉಪವನ, ಅದರ ಮಧ್ಯದಲ್ಲಿ ಹೊಂದಾವರೆಗಳಿಂದ ಸುಂದರವಾಗಿ ತೋರುವ ತಿಳಿನೀರು ತುಂಬಿದ ಹೊಕ್ಕರಣೆ. ಅಲ್ಲಿ ಏನಿಲ್ಲ? ಅದೊಂದು ಮಾಯಾಮಂದಿರ. ಬುಧನು ತನ್ನ ದೈವೀ ಪ್ರಭಾವದಿಂದ ಆಗಲೇ ಅದನ್ನು ನಿರ್ಮಿಸಿದ್ದನು. ಅದನ್ನು ನೋಡಿ ಇಲೆಗೆ ಪರಮಾನಂದವಾಯಿತು. ಇಂಥ ದಿವ್ಯಭವ್ಯಭವನಕ್ಕೆ ತಾನೇ ಒಡತಿ ಎಂದು ಹೆಮ್ಮೆಯೂ ಎನಿಸಿತು. ''ನನ್ನ ಪತಿ ಎಂಥ ರೂಪವಂತ ! ಅವನ ಐಶ್ವರ್ಯವೇನು ! ಕುಲವೇನು ! ಶೀಲವೇನು ! ನನ್ನ ಜನ್ಮಾಂತರದ ಪುಣ್ಯದಿಂದಲೇ ಇಂಥ ಸ್ಫುರದ್ರೂಪಿಯಾದ ಗಂಡನು ನನಗೆ ದೊರತಿದ್ದಾನೆ. ನನ್ನ ಚಲುವಿಕೆಗೂ ನನ್ನ ಪತಿಯ ತಾರುಣ್ಯ ಲಾವಣ್ಯಗಳಿಗೂ ಎಷ್ಟು

ಅನುರೂಪತೆ ಇದೆ ! ಎಂದು ಮುಂತಾಗಿ ವಿಚಾರಗಳಿಂದ ಇಲೆಯು ಹಿಗ್ಗಿ ಹೋದಳು. ಕೃತಕೃತ್ಯತೆಯ ಭಾವದಿಂದ ಹೆಂಗಸಿನ ಹೊಂಗನಸುಗಳನ್ನೆಲ್ಲ ಸಾಕಾರಗೊಳಿಸಿ ಸುಖ ವಿಲಾಸಗಳನ್ನು ಅನುಭವಿಸತೊಡಗಿದಳು. ಸ್ವರ್ಗದ ಇಂದ್ರಭವನದಂತಿರುವ ಆ ಮಾಯಾ ಮಂದಿರದಲ್ಲಿ ರಸಿಕ ಯುವಕನಾದ ಬುಧನೊಂದಿಗೆ ವಿವಿಧ ಕಾಮಕೇಳಿಯ ವಿಲಾಸವನ್ನು ಮಾಡುತ್ತ ಎಲ್ಲ ಭೋಗಗಳನ್ನು ನಾರೀ ರೂಪವನ್ನು ಧರಿಸಿದ ಇಲನು ಅನುಭವಿಸಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿದುದು*



## ಪುರಾಣದಲ್ಲಿಯ ಒಂದು ವಿಚಿತ್ರ ಲಿಂಗ ಪರಿವರ್ತನೆ | ಅಧ್ಯಾಯ - ೧೨

**ಸೂತ ಉವಾಚ**

**ಅಥಾನ್ವಿಷ್ಯಾಂತೋ ರಾಜಾನಂ ಭ್ರಾತರಸ್ತಸ್ಯ ಮಾನವಾಃ**
**ಇಕ್ಷ್ವಾಕು ಪ್ರಮುಖಾಃ ಜಗ್ಮುಃ ತದಾ ಶರವಣಾಂತಿಕಮ್ ॥**

**ಸೂತ :-** ಅನಂತರ ಇಷ್ವಾಕು ಮೊದಲಾದ ಸಹೋದರರು ತಮ್ಮ ಅಣ್ಣನಾದ ಇಲರಾಜನು ಸಾಮ್ರಾಜ್ಯ ಸಿಂಹಾಸನದಲ್ಲಿ ಪಟ್ಟಾಭಿಷಕ್ತನಾಗಿ ದಿಗ್ವಿಜಯಕ್ಕೆ ಹೋದವನು ಬಹುದಿನಗಳಾದರೂ ಬಾರದಿದ್ದುದನ್ನು ನೋಡಿ ಅವನನ್ನು ಹುಡುಕುಲು ಹೊರಟರು. ಆಚೀಚೆ ಹುಡುಕುತ್ತ ಅವರೆಲ್ಲರೂ ಶರವಣದ ಸಮೀಪಕ್ಕೆ ಬಂದರು. ಹಿರಿಯ ಅಣ್ಣ ಇಲಮಹಾರಾಜನು ಹತ್ತಿಕೊಂಡು ಬಂದ ಕುದುರೆಯು ಆ ಶರವಣದಲ್ಲಿ ನಿಂತುಕೊಂಡಿತ್ತು. ವಜ್ರದ ಹರಳುಗಳನ್ನು ಕೆತ್ತಿದ ಅದರ ಬೆನ್ನು ಮೇಲಿನ ಜೀನು ಇದು ಚಕ್ರವರ್ತಿಯ ಕುದುರೆ ಎಂದು ಸಾರುತ್ತಿತ್ತು. ಆ ರತ್ನಕಾಂತಿಯಿಂದ ಕುದುರೆಯ ದೇಹವೆಲ್ಲವೂ ಮಿಂಚುತ್ತಿತ್ತು. ಅದನ್ನು ಕಂಡಕೂಡಲೇ ಸಹೋರರೆಲ್ಲರೂ ಅದನ್ನು ಗುರುತಿಸಿ ''ಓಹೋ ! ಇದು ನಮ್ಮ ಅಣ್ಣನದೇ ಕುದುರೆ. ಚಂದ್ರಪ್ರಭ '' ಎಂದು ಉದ್ಗಾರ ತೆಗೆದರು. ಆದರೆ ಇಲ್ಲಿ ಅದು ಒಂದೇ ನಿಂತದ್ದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಮೇಲೆ ಕೆಳಗೆ ಪರಿಕಿಸಿದಾಗ ಅವರಿಗೆ ಇನ್ನೂ ಒಂದು ಆಶ್ಚರ್ಯ ಕಾದಿತ್ತು. ಮಹಾರಾಜನ ಮೆಚ್ಚಿನ ಗಂಡುಗುದುರೆ ಈ ವನದಲ್ಲಿ ಒಂದು ಹೆಣ್ಣು ಕುದುರೆ ಆಗಿ ನಿಂತಿತ್ತು. ಅದರ ಮೇಲಿನ ರತ್ನದಥಡಿ ಮತ್ತು ಅದರ ಕಣ್ಣು, ಬಣ್ಣ, ನಿಲವು, ಆಕಾರ ಪ್ರಕಾರಗಳೆಲ್ಲವೂ ಅವರೆಲ್ಲರಿಗೂ ಚಿರಪರಿಚಿತವಾಗಿದ್ದವು. ಇದು ತಮ್ಮ ಪ್ರಿಯ ಬಂಧುವಿನ ಚಂದ್ರಪ್ರಭನ ಕುದುರೆಯೇ ಎನ್ನುವುದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಅದು ಈ ಶರವಣಕ್ಕೆ ಬಂದು ಹೆಣ್ಣಾದುದೆಂತು? ಎನ್ನುವುದೇ ಅವರಿಗೆ ಬಿಡಿಸಲಾರದ ಸಮಸ್ಯೆ. ಕೊನೆಗೆ ಅವರು ಯೋಗಿವರೇಣ್ಯರಾದ ವಶಿಷ್ಠರಿಗೆ ಕೇಳಿದರು. ''ಪೂಜ್ಯರೇ, ಇದು ಏನು ಅಚ್ಚರಿ'' ವಶಿಷ್ಠರು ಒಂದುಕ್ಷಣ ಜ್ಞಾನದೃಷ್ಟಿಯಿಂದ ನೋಡಿದರು. ಅವರಿಗೆ ಎಲ್ಲವೂ ತಿಳಿಯಿತು. ಇಲನ ಸೋದರರಿಗೆ ಆ ರಹಸ್ಯವನ್ನು ಉಸುರಿದರು.

"ಶರವಣ ಎಂಬ ಹೆಸರಿನ ಈ ಉದ್ಯಾನದಲ್ಲಿ ಕಾಲಿಟ್ಟ ಗಂಡುಪ್ರಾಣಿಗಳೆಲ್ಲ ತಕ್ಷಣವೇ ಹೆಣ್ಣಾಗಬೇಕು, ಇದು ಪಾರ್ವತಿಯ ಕಟ್ಟಪ್ಪಣೆ. ನಿಮ್ಮ ಅಣ್ಣ ಇಲನು ಈ ವನದಲ್ಲಿ ಪ್ರವೇಶಿಸಿದ. ಅದಕ್ಕಾಗಿ ಅವನು ಹೆಂಗಸಾದ. ಅದರಂತೆ ಈ ಕುದುರೆ ಕೂಡ ಹೆಣ್ಣುದುರೆಯಾಗಿ ನಿಂತಿದೆ. ನಿಮ್ಮ ಅಣ್ಣ ಈಗ ಇಲರಾಜನಲ್ಲ. ಇಲಾರಾಣಿ ಅಥವಾ ಇಲಾದೇವಿ. ಅವನು ಮತ್ತೆ ಮೊದಲಿನಂತೆ ಗಂಡಸು ಆಗಬೇಕಾದರೆ ಮಹಾದೇವರನ್ನೇ ಆರಾಧಿಸಬೇಕು. ಪ್ರಯತ್ನದಿಂದ ಪರಮೇಶ್ವರನನ್ನು ಪ್ರಸನ್ನಗೊಳಿಸಿದರೆ ಸಾಕ್ಷಾತ್ ಧನಾಧಿಪತಿ ಕುಬೇರನಂತೆ ಅವನೂ ಮತ್ತೆ ಮಹಾಪುರುಷನಾಗಬಹುದು." ಗುರುಗಳ ಮಾತನ್ನು ಕೇಳಿ ಇಕ್ಷ್ವಾಕು ಮೊದಲಾದ ಮನುಕುಮಾರರೆಲ್ಲರು ಮಹಾದೇವರು ಇದ್ದಲ್ಲಿಗೆ ಹೋದರು. ಅವರ ಬಗೆಬಗೆಯ ಸ್ತೋತ್ರಗಳಿಂದ ಶಿವಸತಿಯರು ಪ್ರತ್ಯಕ್ಷರಾಗಿ ಹೇಳಿದರು.

"ನಮ್ಮ ಕಟ್ಟಾಜ್ಞೆಯನ್ನು ಯಾರೂ ಮೀರಲಾರರು. ಅದು ಯಾರಿಗೂ ತಪ್ಪಲಾರದು, ಆದರೆ ಇಲನ ಸೋದರನಾದ ಇಕ್ಷ್ವಾಕುರಾಜನು ತಾನು ಮಾಡಿದ ಅಶ್ವಮೇಧಯಾಗದ ಪುಣ್ಯವನ್ನು ನಮಗೆ ಕೊಟ್ಟರೆ ನಿಮ್ಮ ಅಣ್ಣನನ್ನು ಪುರುಷನನ್ನಾಗಿ ಮಾಡುತ್ತೇವೆ " ಪಾರ್ವತಿ ಪರಮೇಶ್ವರರ ಈ ಮಾತಿಗೆ ಮನುಕುಮಾರರು ಸಮ್ಮತಿಸಿ ಅಲ್ಲಿಂದ ಹೊರಟುಹೋದರು. ಅಶ್ವಮೇಧಯಜ್ಞದ ಪುಣ್ಯವನ್ನೆಲ್ಲ ಆ ಶಿವದಂಪತಿಗಳಿಗೆ ಸಮರ್ಪಿಸಲಾಯಿತು. ಅದರಿಂದ ಇಲನು ಕೂಡಲೇ ಕಿಂಪುರುಷ ಜಾತಿಯ ಗಂಡಸಾಗಿ ಮಾರ್ಪಟ್ಟನು. ಮರುತಿಂಗಳಲ್ಲಿ ಮತ್ತೆ ಹೆಂಗಸಾದನು. ಮುಂದಿನ ತಿಂಗಳು ಮತ್ತೆ ಗಂಡಸು. ಹೀಗೆ ಒಂದು ತಿಂಗಳು ಹೆಣ್ಣು, ಒಂದು ತಿಂಗಳು ಗಂಡು. ಇದೊಂದು ಇಲರಾಜನ ವಿಚಿತ್ರ ಬಾಳು. ಅವನು ಹೆಣ್ಣಾಗಿ ಬುಧನ ಮನೆಯಲ್ಲಿ ಇದ್ದಾಗ ಗರ್ಭಧರಿಸಿದನು. ಬುಧನಿಂದ ಇಲೆಗೆ ಸುಲಕ್ಷಣಶಾಲಿಯಾದ ಒಳ್ಳೆ ಮಗನು ಹುಟ್ಟಿದನು. ಪುತ್ರಜನನವಾದ ಬಳಿಕ ಬುಧನು ಸ್ವರ್ಗಲೋಕಕ್ಕೆ ಹೊರಟು ಹೋದನು. ಆ ಭೂಭಾಗವೆಲ್ಲವೂ ಇಲನ ಹೆಸರಿನಿಂದ ಇಲಾವೃತ ಎಂದು ಪ್ರಸಿದ್ಧಿ ಹೊಂದಿತು. ಹೀಗೆ ಸೂರ್ಯನ ಮೊಮ್ಮಗನಾಗಿ ಹುಟ್ಟಿದ ಇಲಮಹಾರಾಜನು ಸೂರ್ಯವಂಶದ ಅಭಿವೃದ್ಧಿಗೆ ಕಾರಣನಾದಂತೆ ಚಂದ್ರನ ಮಗನಾದ ಬುಧನಿಂದ ಮಗನನ್ನು ಪಡೆದು ಚಂದ್ರವಂಶದ ಅಭಿವೃದ್ಧಿಗೂ ಕಾರಣನಾದನು. ಹೀಗೆ ಸೂರ್ಯವಂಶ, ಚಂದ್ರವಂಶ ಎರಡಕ್ಕೂ ಅಭಿವೃದ್ಧಿ ಕಾರಣನಾದ ಏಕಮಾತ್ರ ವ್ಯಕ್ತಿ ಎಂದರೆ ಪುರಾಣ ಪ್ರಪಂಚದಲ್ಲಿ ಇಲನು ಮಾತ್ರ.

## ಇಲ ಹೆಣ್ಣಾದಾಗ ಒಬ್ಬ ಗಂಡುಮಗು ಪುರೂರವ. ಅವನೇ ಗಂಡಾದಾಗ ಮೂರುಗಂಡು ಮಕ್ಕಳು

ಇಲನು ಹೆಣ್ಣಾದಾಗ ಬುಧನಿಂದ ಹುಟ್ಟಿದ ದಿವ್ಯ ವ್ಯಕ್ತಿಯೇ ಪುರೂರವ. ಈ ಪುರೂರವನಿಂದ ಮುಂದೆ ಚಂದ್ರವಂಶವು ಬೆಳಗಿತು. ಬೆಳೆಯಿತು. ಇಕ್ಷ್ವಾಕು ಮಹಾರಾಜನಿಂದ ಸೂರ್ಯವಂಶ ಮುಂದೆ ವೃದ್ಧಿ ಹಾಗೂ ಪ್ರಸಿದ್ಧಿ ಪಡೆಯಿತು. ಇಲನು ಕಿಂಪುರುಷನಾದಾಗಲೂ ಅವನಿಗೆ ಉತ್ಕಲ, ಗಯ, ಹರಿತಾಶ್ವ, ಎಂಬ

ಮೂವರು ಮಕ್ಕಳಾದರು. ಉತ್ಕಲನು ಆಳಿದ ದೇಶಕ್ಕೆ ಉತ್ಕಲ ಎಂದೇ ಹೆಸರಾಯಿತು. ಅವನ ರಾಜಧಾನಿ ಉತ್ಕಲಾ. ಗಯನ ರಾಜಧಾನಿ ಗಯಾ, ಹರಿತಾಶ್ವನು ಪೂರ್ವ ದಿಕ್ಕಿನ ಅಧಿಪತಿಯಾಗಿ ಕುರುದೇಶವನ್ನು ಆಳಿದನು. ಹೀಗೆ ಇಲರಾಜನು ತನ್ನ ಗಂಡುದೇಹದಿಂದ ಜನಿಸಿದ ಮಕ್ಕಳನ್ನು ಒಂದೊಂದು ರಾಜ್ಯದ ಅಧಿಕಾರದ ಗದ್ದುಗೆಯ ಮೇಲೆ ಕೂಡಿಸಿ ಸ್ತ್ರೀ ದೇಹದ ಪುತ್ರನಾದ ಪುರೂರವನನ್ನು ಪ್ರತಿಷ್ಠಾನ ರಾಜ್ಯದ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದನು. ತಾನು ಇರುವವರೆಗೆ ಉತ್ತಮವಾದ ಫಲ, ಜಲ, ಸಸ್ಯಭರಿತವಾದ ಇಲಾವೃತ ಖಂಡವನ್ನು ಸುಖದಿಂದ ಆಳಿದನು.

ಇಲರಾಜನ ಹಿರಿಯ ತಮ್ಮನಾದ ಇಕ್ಷ್ವಾಕುವಿನ ಪಾಲಿಗೆ ಮಧ್ಯದೇಶವು ಬಂದಿತು. ಮತ್ತೊಬ್ಬ ತಮ್ಮ ನರಿಷ್ಯಂತನಿಗೆ ಶುಚ ಎಂಬ ಮಗನು ಹುಟ್ಟಿದನು. ನಾಭಾಗನಿಗೆ ಅಂಬರೀಷ, ಧೃಷ್ಟನಿಗೆ ಧೃತಕೇತು, ಚಿತ್ರನಾಥ, ರಣಧೃಷ್ಟ. ಶರ್ಯಾತಿಗೆ ಆನರ್ತ, ಸುಕನ್ಯಾ. ಆನರ್ತನಿಗೆ ರೋಚಮಾನ ಎಂಬ ಮಗನು ಹುಟ್ಟಿದನು. ಅವನ ದೇಶಕ್ಕೆ ಆನರ್ತ ಎಂದೂ ರಾಜಧಾನಿಗೆ ಕುಶಸ್ಥಲಿ ಎಂದು ಹೆಸರು. ರೋಚಮಾನನಿಗೆ ನೂರುಜನ ಮಕ್ಕಳು. ಅವರಲ್ಲಿ ರೈವತ ಅಥವಾ ಕಕುದ್ಮಿ ಹಿರಿಯ. ರೈವತನ ಮಗಳೇ ಬಲರಾಮನ ಪತ್ನಿ ರೇವತೀ. ಕರೂಷ ಎಂಬ ಮನುವಿನ ಮಕ್ಕಳು ಕಾರುಷರೆಂದು ಪ್ರಸಿದ್ಧರಾದರು. ಪೃಷಧ್ರ ಎಂಬ ಮನುವಿನ ಕಿರಿಯ ಮಗನು ಗೋಹತ್ಯೆ ಮಾಡಿದ್ದರಿಂದ ಗುರು ಶಾಪ ಕೊಟ್ಟನು. ಶಾಪದಿಂದ ಅವನು ಶೂದ್ರನಾಗ ಬೇಕಾಯಿತು. ಋಷಿಪುಂಗವರೆ, ಇನ್ನು ಮುಂದೆ ಇಕ್ಷ್ವಾಕುವಿನ ವಂಶದ ಬಳ್ಳಿಯು ಬಿತ್ತರಗೊಂಡ ಬಗೆಯನ್ನು ನಿರೂಪಿಸುವೆನು ಕೇಳಿರಿ. ಇಕ್ಷ್ವಾಕು ಮಹಾರಾಜನಿಗೆ ನೂರುಜನ ಮಕ್ಕಳು. ಅವರಲ್ಲಿ ಜ್ಯೇಷ್ಠನಾದ ವಿಕುಕ್ಷಿಯು ದೇವಾಂಶ ಸಂಭೂತನಾಗಿದ್ದನು. ವಿಕುಕ್ಷಿಗೆ ಒಂದನೂರಾಇಪ್ಪತ್ತೊಂತ್ತು ಜನ ಮಕ್ಕಳು. ಹದಿನೈದು ಜನರು ಮೇರುಪರ್ವತದ ಉತ್ತರ ಪ್ರದೇಶದ ರಾಜರಾಗಿ ಬಾಳಿದರು. ನೂರಹದಿನಾಕು ಜನರು ಮೇರುಗಿರಿಯದಕ್ಷಿಣ ದೇಶವನ್ನು ಅರಸರಾಗಿ ಆಳಿದರು. ಇವರೆಲ್ಲರಲ್ಲಿ ಕಕುಸ್ಥನು ಜ್ಯೇಷ್ಠ. ಇವನ ಮಗ ಸುಯೋಧನ. ಸುಯೋಧನನಿಗೆ ಪೃಥು. ಪೃಥುವಿನ ಮಗ ವಿಶ್ವಶ. ಅವನ ಮಗ ಇಂದು. ಇಂದುಪುತ್ರನೇ ಯುವನಾಶ್ವ. ಆ ಇಂದು ರಾಜನಿಗೆ. ಶ್ರಾವಸ್ತ ಎಂಬ ಮತ್ತೊಬ್ಬ ಮಗ ಅವನೇ ಗೌಡ ದೇಶದಲ್ಲಿ ಶ್ರಾವಸ್ತೀ ಎಂಬ ನಗರವನ್ನು ನಿರ್ಮಿಸಿದನು. ಶ್ರಾವಸ್ತನಿಗೆ ಬೃಹದಶ್ವ, ಬೃಹದಶ್ವನಿಗೆ ಕುವಲಾಶ್ವ ಎಂಬ ಮಗ ಜನಿಸಿದ. ದುಂಧು ಎಂಬ ರಾಕ್ಷಸ ಇವನಿಂದ ಹತನಾದುದರಿಂದ ಇವನಿಗೆ **ದುಂಧುಮಾರ** ಎಂಬ ಹೆಸರು ಬಂದಿತು.

ದುಂಧುಮಾರನಿಗೆ ಧೃಢಾಶ್ವ, ಕಪಿಲಾಶ್ವ, ದಂಡ ಎಂದು ಮೂರು ಮಕ್ಕಳಾದರು. ಮುಂದೆ ಧೃಢಾಶ್ವನಿಂದ ಪ್ರಮೋದ, ಹರ್ಯಶ್ವ, ನಿಕುಂಭ, ಸಂಹತಾಶ್ವ, ಅಕೃತಾಶ್ವ, ರಣಾಶ್ವ, ಯುವನಾಶ್ವ ಎಂದು ಮುಂತಾಗಿ ರಾಜ ಮಹಾರಾಜರು ಈ ವಂಶದಲ್ಲಿ ಹುಟ್ಟಿ ಬೆಳಗಿದರು. ಈ ಮಾಂಧಾತ ಮಹಾರಾಜನಿಗೆ

ಪುರುಕುತ್ಸ, ಧರ್ಮಸೇನ, ಮುಚುಕುಂದ, ಶತ್ರುಜಿತ ಎಂಬ ಪುತ್ರ ಚತುಷ್ಟಯವಿದ್ದಿತು. ಪುರುಕುತ್ಸನ ಮಗನಾದ ವಸುಧನಿಗೆ ಮಡದಿ ನರ್ಮದೆಯಲ್ಲಿ ಸಂಭೂತಿಯು ಮಗನಾಗಿದ್ದನು. ಅವನಿಗೆ ತ್ರಿಧನ್ವ, ತ್ರಿಧನ್ವನಿಗೆ ತ್ರಯ್ಯಾರುಣ, ಅವನಿಗೆ ಸತ್ಯವ್ರತ, ಅವನಿಗೆ ಸತ್ಯರಥ, ಸತ್ಯರಥನಿಗೆ ಹರಿಶ್ಚಂದ್ರ, ಅವನಿಗೆ ರೋಹಿತ, ರೋಹಿತನಿಗೆ ವೃಕ, ವೃಕನಿಗೆ ಬಾಹು, ಬಾಹುವಿಗೆ ಸಗರ ಎಂದು ಪರಂಪರೆಯಾಗಿ ಹೀಗೆ ಒಬ್ಬರಿಂದ ಒಬ್ಬರು ಕ್ರಮೇಣ ಪುತ್ರರು ಜನಿಸಿದರು.

ಕೊನೆಯವನಾದ ಸಗರ ಚಕ್ರವರ್ತಿಗೆ ಪತ್ನಿಯರು ಇಬ್ಬರು ಪ್ರಭಾ ಭಾನುಮತಿ ಅವರಿಬ್ಬರೂ ಸಂತಾನದ ಇಚ್ಛೆಯಿಂದ ಒಡವಾಗ್ನಿಯನ್ನು ಆರಾಧಿಸಿದರು, ಅದರಿಂದ ಅಗ್ನಿಯು ತುಷ್ಟನಾದ. ''ನಿಮ್ಮ ಅಪೇಕ್ಷೆಯಂತೆ ನಾನು ಇಬ್ಬರಿಗೂ ಸಂತಾನವನ್ನು ಕರುಣಿಸುತ್ತೇನೆ. ಒಬ್ಬಳಿಗೆ ಅರವತ್ತು ಸಾವಿರ ಮಕ್ಕಳನ್ನೂ ಇನ್ನೊಬ್ಬಳಿಗೆ ವಂಶವೃದ್ಧಿ ಮಾಡುವ ಒಬ್ಬನೇ ಮಗನನ್ನು ಕೊಡುತ್ತೇನೆ. ಯಾರಿಗೆ ಯಾವದು ಬೇಕು ಹೇಳಿರಿ. ಅದನ್ನು ಅವರಿಗೆ ಕೊಡುವೆನು.'' ಎಂದು ನುಡಿದನು. ಅವರಲ್ಲಿ ಪ್ರಭಾದೇವಿಯು ''ಅರವತ್ತು ಸಾವಿರ ಮಕ್ಕಳು ತನಗೆ ಇರಲಿ '' ಎಂದಳು, ಆದರೆ ಭಾನುಮತಿಯು ಮಾತ್ರ ತನಗೆ '' ಮನೆತನವನ್ನು ಮುಂದೆ ತರುವ ಒಬ್ಬನೇ ವಂಶವರ್ಧಕ ಪುತ್ರನಾದರೂ ಸಾಕು.'' ಎಂದು ಹೇಳಿದಳು. ಅಗ್ನಿದೇವನ ವರಕ್ಕೆ ಅನುಗುಣವಾಗಿ ಪ್ರಭೆಯು ಅರವತ್ತು ಸಾವಿರ ಮಕ್ಕಳನ್ನು ಹೆತ್ತಳು. ಭಾನುಮತಿಯಿಂದ ಮಾತ್ರ ಅಸಮಂಜ ಎಂಬ ಒಬ್ಬನೇ ತನುಜನು ಉತ್ಪನ್ನನಾದನು. ಹಿರಿಯ ರಾಣಿ ಪ್ರಭೆಯು ಹಡೆದ ಅರವತ್ತು ಸಾವಿರ ಸಗರಕುಮಾರರು ಸಗರರಾಜನ ಯಜ್ಞದಲ್ಲಿ ಕಳೆದು ಹೋದ ಅಶ್ವಮೇಧದ ಕುದುರೆಯನ್ನು ಹುಡುಕಲು ಹೊರಟರು. ಅದು ಭೂಮಿಯಲ್ಲಿ ಎಲ್ಲಿಯೂ ಎಷ್ಟು ಹುಡುಕಿದರೂ ಅವರಿಗೆ ಸಿಕ್ಕಲಿಲ್ಲ. ಭೂಮಿಯಲ್ಲಿ ಇದ್ದರಷ್ಟೆ ಆ ಕುದುರೆ ಅವರಿಗೆ ಸಿಗುವದು ! ನೂರುಅಶ್ವಮೇಧ ಯಾಗಗಳು ಪೂರ್ತಿಯಾಗ ಬಂದುದನ್ನು ನೋಡಿ ಮತ್ಸರದುಂಬಿದ ದೇವೇಂದ್ರನು ಕೊನೆಯ ಯಾಗದಲ್ಲಿ ಯಜ್ಞದ ಕುದುರೆಯನ್ನೇ ಕದ್ದುಬಿಟ್ಟನು.

''ಭೂಮಿಯಲ್ಲಿ ಇದನ್ನು ಎಲ್ಲಿ ಇಟ್ಟರೂ ಅರವತ್ತು ಸಾವಿರ ಸಗರ ಕುಮಾರರು ಅದನ್ನು ಗೊತ್ತು ಹಚ್ಚದೇ ಬಿಡರು.'' ಎಂದು ಬಗೆದು ಅದನ್ನು ಪಾತಾಳದಲ್ಲಿ ಕುಳಿತ ಕಪಿಲಮುನಿಯ ಹತ್ತಿರ ಒಯ್ದು ಬಿಟ್ಟು ಬಂದನು. ನೆಲದ ಮೇಲೆ ಎಲ್ಲ ಕಡೆಗೂ ಹುಡುಕಿ ಸಿಕ್ಕದಿರಲು ಸಗರಕುಮಾರರು ಭೂಮಿಯನ್ನು ಅಗಿಯುತ್ತ ಪಾತಾಳಕ್ಕೆ ಇಳಿದರು. ಅಲ್ಲಿ ಕಪಿಲಮುನಿಯ ಹತ್ತಿರ ನಿಂತ ''ತಮ್ಮ ಕುದುರೆಯನ್ನು ಕಂಡು ಇವನೇ ಕುದುರೆ ಕಳ್ಳ '' ಎಂದು ಅವನನ್ನು ಪೀಡಿಸಿದರು. ಆಗ ಕ್ರುದ್ಧನಾದ ಕಪಿಲದೇವನು ಕೋಪದಿಂದ ಕಣ್ಣು ತೆರೆಯಲು ಅರವತ್ತು ಸಾವಿರಜನ ಸಗರಕುಮಾರರು ಸುಟ್ಟು ಬೂದಿಯಾಗಿ ಬಿದ್ದರು.

ಸಗರ ರಾಜನ ಇನ್ನೊಬ್ಬ ಮಡದಿಯಾದ ಭಾನುಮತಿಗೆ ಅಗ್ನಿಯ ವರದಿಂದ ಅಸಮಂಜ ಎಂಬ ಮಗನು ಹುಟ್ಟಿದ್ದನಷ್ಟೇ ! ಅವನಿಗೆ ಅಂಶುಮಾನ, ಅಂಶಮಾನನಿಗೆ

ದಿಲೀಪ, ದಿಲೀಪನಿಗೆ ಭಗೀರಥ, ಮಕ್ಕಳಾಗಿ ಹುಟ್ಟಿದರು. ಈ ಭಗೀರಥನು ಘೋರ ತಪ್ಪಸ್ಸನ್ನುಮಾಡಿ ಹರನನ್ನೂ, ಹರಿಯನ್ನೂ ಒಲಿಸಿಕೊಂಡನು. ಹರಿಯ ಅಡಿಯಿಂದ, ಹರನಮುಡಿಯಿಂದ ಇಳಿದು ಬಂದ ದೇವಗಂಗೆಯನ್ನು ಭೂತಳಕ್ಕೆ ಇಳಿಸಿದನು. ಈತನೆ ಮುಂದೆ ಆ ದೇವನದಿಯನ್ನು ಪಾತಾಳದವರೆಗೂ ಒಯ್ದು ಕಪಿಲನಾಮಕ ವಿಷ್ಣುವಿನ ಕಣ್ಣಿನ ಕಿಡಿಯಿಂದ ಸುಟ್ಟು ಬಿದ್ದ ಸಗರ ಕುಮಾರರನ್ನೆಲ್ಲ ಈ ಭಗೀರಥನು ಉದ್ಧರಿಸಿದನು. ಭಗೀರಥನ ಹಿಂದೆ ಹರಿದು ಬಂದಿದ್ದರಿಂದ ಆ ದೇವನದಿಗೆ **ಭಾಗೀರಥಿ** ಎಂದು ಹೆಸರು. ಈ ಭಗೀರಥ ರಾಜನಿಂದ ಮುಂದೆ ಅವನ ವಂಶದಲ್ಲಿ ನಾಭಾಗ, ಅಂಬರೀಷ, ಸಿಂಧುದ್ವೀಪ, ಆಯುತಾಯು, ಶತಾಯು, ಋತುಪರ್ಣ, ಅನರಣ್ಯ, ನಿಘ್ನ, ರಘು, ದಿಲೀಪ, ಅಜರಾಜ, ದೀರ್ಘಬಾಹು, ಅಜಪಾಲ ಮುಂತಾದ ಅನೇಕಾನೇಕ ರಾಜಋಷಿಗಳು ಬೆಳಗಿದರು. ದಶರಥನಿಗೆ ಸಾಕ್ಷಾತ್ ವಿಷ್ಣುವಿನ ಅಂಶರಾದ ರಾಮ, ಲಕ್ಷ್ಮಣ, ಶತ್ರುಘ್ನ, ಭರತ ಎಂದು ನಾಕು ಮಕ್ಕಳು ಹುಟ್ಟಿದರು. ಅವರಲ್ಲಿ ಹಿರಿಯನಾದ ರಾಮನು ಸಾಕ್ಷಾತ್ ವಿಷ್ಣುವೇ. ಉಳಿದವರಲ್ಲಿಯೂ ಅವನ ಒಂದೊಂದು ಅಂಶ ಉಂಟು.

ಈ ರಾಮನು ರಾವಣನನ್ನು ಸಂಹರಿಸಿ ರಘುವಂಶಕ್ಕೆ ಕೀರ್ತಿ ತಂದನು. ಈ ರಾಮನಚರಿತ್ರೆಯನ್ನು **ರಾಮಾಯಣ** ಎಂಬ ಗ್ರಂಥರೂಪವಾಗಿ ಭೃಗುವಂಶದ ವಾಲ್ಮೀಕಿ ಮಹಾಋಷಿಯು ರಸಾಳವಾಣಿಯಲ್ಲಿ ಬರೆದು ಬಿತ್ತರಿಸಿದನು. ರಾಮನ ಮಕ್ಕಳಾದ ಲವ - ಕುಶರು ಇಂಪಾಗಿಹಾಡಿ ಆ ರಾಮಾಯಣವನ್ನು ಜನಪ್ರಿಯಗೊಳಿಸಿದರು. ಅದರಿಂದ, ಅವರು ಹಾಡಿದ, ವಾಲ್ಮೀಕಿ ಮಾಡಿದ ಗೀತ ರಾಮಾಯಣ ಮಹಾಕಾವ್ಯದಿಂದ ರಾಮನ ಕೀರ್ತಿಯು ಅಜರಾಮರವಾಗಿ ಉಳಿಯಿತು. ರಾಮಪುತ್ರನಾದ ಕುಶನಿಂದ ಮುಂದೆ ಅತಿಥಿ, ನಿಷಧ, ನಳ, ನಭಸ್, ಪುಂಡರೀಕ, ದೇವಾನೀಕ, ಅಹೀನಗು, ಸಹಸ್ರಾಶ್ವ, ಚಂದ್ರಾಲೋಕ, ತಾರಾಪೀಡ, ಚಂದ್ರಗಿರಿ, ಭಾನು, ಚಂದ್ರ, ಶ್ರುತಾಯು ಮುಂತಾದ ರಾಜರಿಂದ ಈ ಇಕ್ಷ್ವಾಕು ವಂಶವು ಬೆಳೆದು ಬೆಳಗಿತು. ಕೊನೆಯ ರಾಜನಾದ ಶ್ರುತಾಯುವು ಮಹಾಭಾರತಯುದ್ಧದಲ್ಲಿ ಮಡಿದನು. ಇವರೆಲ್ಲರೂ ವೈವಸ್ವತವಂಶದ ಇಕ್ಷ್ವಾಕುಕುಲದಲ್ಲಿ ಜನಿಸಿ ಭೂಮಿಯನ್ನು ಆಳಿದ ಉದಾರ ಸ್ವಭಾವದ ಮುಖ್ಯಮುಖ್ಯ ರಾಜ ಮಹಾರಾಜರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿದುದು*

—o—

## ಪಿತೃಗಳಿಂದ ಕೇಳಿ ಸತೀದೇವಿಯ ದೇಹದಾಹ | ಅಧ್ಯಾಯ - ೧೩

**ಮನುರುವಾಚ**

**"ಭಗವನ್ ಶ್ರೋತುಮಿಚ್ಛಾಮಿ ಪಿತೃಣಾಂ ವಂಶಮುತ್ತಮಮ್ ॥**
**ರವೇಶ್ಚ ಶ್ರಾದ್ಧದೇವತ್ವಂ ಸೋಮಸ್ಯ ಚ ವಿಶೇಷತಃ ॥**

**ಮನು** :- ಪೂಜ್ಯನಾದ ಮತ್ಸ್ಯದೇವನೇ, ಪಿತೃಗಳ ಉತ್ತಮವಾದ ವಂಶದ ವೃತ್ತಾಂತವನ್ನು ಕೇಳಬೇಕೆಂದು ನಮಗೆ ಇಚ್ಛೆಯಾಗಿದೆ. ವಿಶೇಷವಾಗಿ ಸೂರ್ಯಚಂದ್ರರು ಶ್ರಾದ್ಧದ ದೇವತೆಗಳು ಆದುದು ಎಂತು ?

**ಮತ್ಸ್ಯ** :- ಮಹಾರಾಜ, ನೀನು ಈ ವಿಚಾರ ತಿಳಿಯಬಯಸಿದ್ದು ತುಂಬ ಸಂತೋಷ. ಆನಂದದಿಂದ ಆ ಶ್ರೇಷ್ಠ ಪಿತೃವಂಶದ ಬಗೆಗೆ ಹೇಳುತ್ತೇನೆ. ಕೇಳು. ಸ್ವರ್ಗದಲ್ಲಿ ಪಿತೃಗಳ ಏಳುಗಣಗಳು ಇರುತ್ತವೆ. ಅವರಲ್ಲಿ ಮೂರು ಅಮೂರ್ತ ಗಣಗಳು. ನಾಕು ಮೂರ್ತಪಿತೃಗಳು. ಅಮೂರ್ತರು ನಿರಾಕಾರರು. ಮೂರ್ತರು ಎಂದರೆ ಸಾಕಾರರು. ಇವರು ಅತ್ಯಂತ ಬಲಿಷ್ಠರು ಮತ್ತು ಮಹಾತೇಜಸ್ವಿಗಳು. ಅಮೂರ್ತಗಣದ ಪಿತೃಗಳು ವೈರಾಜ ಪ್ರಜಾಪತಿಯಿಂದ ಉತ್ಪನ್ನರಾಗಿ ವೈರಾಜ ಎಂಬ ದೇವಗಣದಿಂದ ಪೂಜಿತರಾಗಿದ್ದಾರೆ. ಯೋಗದ ಅಭ್ಯಾಸದಲ್ಲಿ ಸಿದ್ಧಿ ಪಡೆಯದೆ ಸಾಧನಪೂರ್ತಿಯಾಗದ ಯೋಗಿಗಳು ದಿವ್ಯಲೋಕಗಳನ್ನು ಹೊಂದಿ ಅವಾಂತರ ಪ್ರಳಯದಲ್ಲಿ ನಾಶಹೊಂದುವರು. ಹೊಸ ಸೃಷ್ಟಿಯಲ್ಲಿ ಮತ್ತೆ ಬ್ರಹ್ಮಜ್ಞಾನಿಯಾಗಿ ಹುಟ್ಟಿಬರುವರು. ಹಿಂದೆ ಪೂರ್ಣ ಯೋಗದಿಂದ ಭ್ರಷ್ಟರಾದ ಆ ಜ್ಞಾನಿಗಳೇ ಪೂರ್ವಕಾಲದ ಯೋಗಾಭ್ಯಾಸದ ಬಲದಿಂದ ಹೆಚ್ಚು ಹೆಚ್ಚು ಶ್ರೀಹರಿಯ ಆರಾಧನೆ ಮಾಡಿ ತಮ್ಮ ಸಾಧನೆ ಪೂರ್ತಿಮಾಡಿಕೊಂಡು ನಿರ್ದುಷ್ಟವಾದ ಧ್ಯಾನಯೋಗದಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವರು. ಮುಂದೆ ಮೋಕ್ಷವೂ ಅವರಿಗೆ ಪ್ರಾಪ್ತವಾಗುವದು. ಅಲ್ಲಿಗೆ ಹೋದವರು ಎಂದಿಗೂ ಮರಳಿ ಬರುವದಿಲ್ಲ.

ಅಂಥ ಯೋಗಿಗಳ ವಿಶಿಷ್ಟ ಗುಂಪಿಗೆ **ಪಿತೃಗಳು** ಎಂದು ಹೆಸರು. ಅಂಥ ಮಹಾಯೋಗಿಗಳನ್ನು ಉದ್ದೇಶಮಾಡಿಕೊಂಡೇ ಶ್ರಾದ್ಧದಲ್ಲಿ ದಾನ ಭೋಜನಾದಿಗಳನ್ನು ವಿನಿಯೋಗಿಸಬೇಕು. ಈ ಪಿತೃಗಣದವರ ಮಾನಸಕನ್ಯೆಯಾದ ಮೇನೆಯನ್ನು ಹಿಮಾಲಯಪರ್ವತಕ್ಕೆ ಕೊಟ್ಟಿತ್ತು. ಅವಳಿಂದ ಮೇನಾಕ, ಕ್ರೌಂಚ ಎಂಬ ಎರಡು ಗಿರಿಮರಿಗಳು ಹುಟ್ಟಿದವು. ತುಪ್ಪದ ಸಮುದ್ರದಿಂದ ಸುತ್ತುವರಿಯಲ್ಪಟ್ಟ ನಾಕನೇಯ ದ್ವೀಪಕ್ಕೆ ಕ್ರೌಂಚದ್ವೀಪ ಎಂದು ಹೆಸರು ಬರಲು ಈ ಕ್ರೌಂಚ ಪರ್ವತವೇ ಕಾರಣ. ಈ ಮೇನಾಕದೇವಿಗೆ ಉಮಾ, ಏಕಪರ್ಣಾ, ಅಪರ್ಣಾ ಎಂದು ಮೂವರು ಹೆಣ್ಣು ಮಕ್ಕಳು. ಮೂವರೂ ಯೋಗಿನಿಯರು. ಕಠಿಣತರವಾದ ವ್ರತ, ತಪಸ್ಸು, ಅನುಷ್ಠಾನಾದಿಗಳನ್ನು ಆಚರಿಸುವಲ್ಲಿ ಮೂವರಿಗೂ

ಅತ್ಯುತ್ಕಟ ಆಸಕ್ತಿ. ಇವರಲ್ಲಿ ಉಮೆಯನ್ನು ಮಹಾದೇವನಿಗೂ, ಏಕಪರ್ಣೆಯನ್ನು ಅಸಿತನಿಗೂ, ಅಪರ್ಣೆಯನ್ನು ಜೈಗೀಷವ್ಯನಿಗೂ ಮದುವೆ ಮಾಡಿ ಕೊಟ್ಟನು. ಇವರು ಮೂವರೂ ತಪಃಪ್ರಭಾವದಲ್ಲಿ ಒಬ್ಬರಿಗಿಂತ ಒಬ್ಬರು ಮಿಗಿಲು.

**ಋಷಿಗಳು** :- ಸೂತರೆ, ಉಮೆಯು ಮೇನೆಯ ಮಗಳಾಗಿ ಮಹಾದೇವನ ಕೈಹಿಡಿದಳು ಎಂದು ಹೇಳಿದಿರಿ. ಆದರೆ ಇದಕ್ಕೂ ಮೊದಲು ಆ ಸತೀದೇವಿಯು ದಕ್ಷನ ಮಗಳಾಗಿರಲಿಲ್ಲವೇ ? ಅವಳು ಹಿಂದೆ ತನ್ನ ದೇಹವನ್ನು ತಾನೇ ಸುಟ್ಟುಕೊಂಡಳಂತೆ. ಅದು ಏಕೆ ? ಹೇಗೆ ? ಅಂದು ದಾಕ್ಷಾಯಣಿ ಆದ ಅವಳು ಮುಂದೆ ಹಿಮಾಲಯದ ಮಗಳಾಗಿ ಭೂಮಿಯಲ್ಲಿ ಹುಟ್ಟಿಬಂದಳು ಹೇಗೆ ? ದಕ್ಷ ಪ್ರಜಾಪತಿಯು ಬ್ರಹ್ಮದೇವರ ಮಗನಲ್ಲವೇ ? ಅಂಥ ಬ್ರಹ್ಮಪುತ್ರನು ಆ ಲೋಕಮಾತೆಗೆ ಏನು ಮಾತನಾಡಿದನು ? ಆ ಜಗದಂಬೆಯು ಸಿಟ್ಟಿನಿಂದ ತನ್ನನ್ನೇ ಸುಟ್ಟುಕೊಳ್ಳಬೇಕಾದರೆ ದಕ್ಷನು ಎಂಥ ಬಿರುನುಡಿಗಳನ್ನು ಆಡಿರಬಹುದು ! ಅಂಥ ಕಠೋರ ಶಬ್ದಗಳಾದರೂ ಯಾವುವು ? ಇದನ್ನೆಲ್ಲ ಬಿಡಿಸಿ ಬಿತ್ತರಿಸಿ ಹೇಳಿರಿ.

**ಸೂತ** :- ದಕ್ಷ ಪ್ರಜಾಪತಿಯ ಯಜ್ಞವು ವೈಭವದಿಂದಲೇ ನಡೆದಿತ್ತು. ಬೇಡಿದವರು ಬಯಸಿದಷ್ಟು ದಕ್ಷಿಣೆ, ಯಥೇಷ್ಟ ಅನ್ನದಾನ. ಈ ಸಂಭ್ರಮದ ಯಜ್ಞ ಸಮಾರಂಭಕ್ಕಾಗಿ ದಕ್ಷ ಪ್ರಜಾಪತಿಯು ಎಲ್ಲ ದೇವಾಧಿದೇವತೆಗಳನ್ನೂ ಬಂಧು ಬಳಗದವರನ್ನೂ ತಾನೇ ಕರೆದು ಬಂದಿದ್ದ. ಅಹೂತರಾದವರೆಲ್ಲರೂ ಆಗಮಿಸಿದ್ದರು. ಆಗ ತನ್ನ ಪತಿಯೊಬ್ಬನಿಗೇ ಆಮಂತ್ರಣವಿಲ್ಲದ್ದನ್ನು ಕಂಡು ಅವನ ಮಗಳಾದ ಸತೀದೇವಿಯು ತಂದೆಗೆ ಕೇಳಿದಳು.

''ತಂದೆಯೇ, ಈ ಯಜ್ಞಕ್ಕಾಗಿ ನನ್ನ ಪತಿಯನ್ನು ಏಕೆ ಆಮಂತ್ರಿಸಲಿಲ್ಲ'' ಎಂದು.

''ಅವನು ಶುದ್ಧ ಅಯೋಗ್ಯ. ಯಾವಾಗಲೂ ಕೈಯಲ್ಲಿ ತ್ರಿಶೂಲ ಬೇರೆ ನಿನ್ನ ಗಂಡನಿಗೆ. ಕೊಲ್ಲುವದೊಂದೇ ಅವನ ಕೆಲಸ. ಮೇಲಾಗಿ ಅವನಿಗೆ ಮೈತುಂಬ ಬೂದಿ, ಕೊರಳಲ್ಲಿ ರುಂಡ ಮಾಲೆ, ಕೈಯಲ್ಲಿ ತಲೆಬುರುಡೆ, ಮೈಮೇಲೆ ರಕ್ತ ಬಸಿಯುವ ಹುಲಿ ತೊಗಲು, ಸ್ಮಶಾನದಲ್ಲಿಯೇ ಶಾಶ್ವತ ವಾಸ. ಇನ್ನೇನು ಬೇಕು! ಅಮಂಗಳ ಎನ್ನುವದೆಲ್ಲವೂ ನಿನ್ನವನಲ್ಲಿ ಇದೆ. ಅವನು ಅಂದರೆ ನಿನ್ನ ಶಿವನು ಅಮಂಗಳ ಮೂರ್ತಿ. ಇಂಥ ಶುಭ ಸಮಾರಂಭಗಳಿಗೆ ಬರಲು ಅವನು ಸರ್ವಥಾ ಅಯೋಗ್ಯ ಅನರ್ಹ. ಅದಕ್ಕಾಗಿಯೇ ನಾನು ನಿನ್ನ ಪತಿಯನ್ನು ಆಮಂತ್ರಿಸಲಿಲ್ಲ.'' ತಂದೆಯ ಈ ನುಡಿಯನ್ನು ಆಲಿಸಿ ಭವಾನಿಗೆ ಬ್ರಹ್ಮಾಂಡ ಕೋಪ ಬಂದಿತು. ಅವಳು ಕೋಪಾಟೋಪದಿಂದ ಕಿಡಿ ಕಿಡಿಯಾಗಿ ಸಿಡಿದು ನುಡಿದಳು. '' ಸುಟ್ಟು ಹೋಗಲಿ ನೀನು ಕೊಟ್ಟ ಈ ದೇಹ. ಈಗಲೇ ಇದನ್ನು ನಿನ್ನೆದುರೇ ಬಿಟ್ಟು ಸುಟ್ಟು ಹಾಕುವೆನು. ಕ್ಷತ್ರಿಯನಾಗಿ ಹತ್ತು ತಂದೆಗಳ ಏಕ ಮಾತ್ರ ಪುತ್ರ ನೀನು. ಅಶ್ವಮೇಧಯಾಗ ಮಾಡುವಾಗ ನನ್ನ ಪತಿಯಾದ ರುದ್ರದೇವನು ಬಂದು ನಿನ್ನನ್ನು ಸಂಹರಿಸುವನು.'' ಹೀಗೆ ಹೇಳಿ ದಾಕ್ಷಾಯಣಿಯು ತನ್ನ ಯೋಗ ಶಕ್ತಿಯಿಂದ ದೇಹದಲ್ಲಿಯೇ ಉಜ್ವಲ ಅಗ್ನಿಯನ್ನು ನಿರ್ಮಿಸಿ ಎಲ್ಲರ ಎದುರೆ ಆತ್ಮದಹನವನ್ನು ಪ್ರಾರಂಭಿಸಿದಳು.

ದೇವತೆಗಳೂ ದಾನವರೂ ಯಕ್ಷಕಿನ್ನರರೂ '' ಇದೇನು ? ಇದೇನು ?'' ಎಂದು ಸಂಭ್ರಾಂತರಾಗಿ ಕೂಗತೊಡಗಿದರು. ಆಗ ದಕ್ಷ ಪ್ರಜಾಪತಿಯು ಹೆದರಿ ಹೌಹಾರಿ ಸತಿಯ ಬಳಿಗೆ ಬಂದು ಅಡ್ಡಬಿದ್ದು ನಮಸ್ಕರಿಸಿ ''ಕ್ಷಮಿಸು ತಾಯಿ'' ಎಂದು ಬಿಕ್ಕಿಬೇಡಿಕೊಳ್ಳತೊಡಗಿದನು. ''ಮಗಳೇ, ನೀನು ನಿಜವಾಗಿ ನನ್ನ ಮಗಳಲ್ಲ. ನೀನು ವಾಸ್ತವಿಕವಾಗಿ ಜಗನ್ಮಾತೆ. ನನ್ನ ಮೇಲೆ ಅನುಗ್ರಹ ಮಾಡಬೇಕೆಂದು ನನ್ನ ಹೊಟ್ಟೆಯಿಂದ ಮಗಳಾಗಿ ಹುಟ್ಟಿ ಬಂದಿದ್ದೆ. ಈ ಬ್ರಹ್ಮಾಂಡದಲ್ಲಿ ನಿನ್ನನ್ನು ಬಿಟ್ಟರೆ ಈ ಚರಾಚರವಸ್ತುಗಳಲ್ಲಿ ಯಾವದೂ ಅಲುಗಾಡಲಾರದು. ಧರ್ಮವನ್ನು ಬಲ್ಲವಳೇ ! ದಯಮಾಡಿ ನನ್ನನ್ನು ಬಿಡಬೇಡ. ನನ್ನ ಮೇಲೆ ಅನುಗ್ರಹಮಾಡು.''

ಆಗ ದೇವಿಯು ಹೇಳಿದಳು - ''ಪ್ರಾರಂಭಿಸಿದ್ದನ್ನು ನಾನು ಮುಗಿಸಲೇಬೇಕು. ಸುಡಲು ಹಾಕಿದ ಈ ದೇಹವು ಪತಿಯ ನಿಂದೆ ಕೇಳಿದ್ದರಿಂದ ಇನ್ನು ಬದುಕಲಾರದು. ಆದರೆ ನೀನು ಮಾತ್ರ ನನ್ನ ಶಾಪದಿಂದ ಮುಂದೆ ಮನುಷ್ಯನಾಗಿ ಕ್ಷತ್ರಿಯನಾಗಿ ಹುಟ್ಟುವೆ. ಆಗ ನಿನ್ನ ಅಶ್ವಮೇಧಯಾಗವನ್ನು ಶಿವನು ಧ್ವಂಸಗೊಳಿಸುವನು. ಆಗಲೂ ನೀನು ಶಿವನನ್ನು ಆರಾಧಿಸಿ ಪೂಜಿಸಿ ಪ್ರಸನ್ನಗೊಳಿಸು. ಅನಂತರ ನನ್ನ ಬಳಿಗೆ ಬಂದು ಲೋಕಸೃಷ್ಟಿಗಾಗಿ ತಪಸ್ಸನ್ನುಮಾಡು. ಆಗ ಬ್ರಹ್ಮದೇವರ ಅಂಗಗಳಿಂದ ಜನಿಸಿ ಅಂಗಜರೆಂದೆನಿಸಿಕೊಳ್ಳುವ ಹತ್ತುಜನಮಕ್ಕಳಲ್ಲಿ ನೀನೂ ಒಬ್ಬನಾಗುವೆ. ಆ ಸಮಯದಲ್ಲಿ ನಿನಗೆ ನನ್ನ ಅಂಶದಿಂದ ಒಡಗೂಡಿದ ಅರವತ್ತು ಹೆಣ್ಣುಮಕ್ಕಳು ಜನಿಸುವರು. ನನ್ನ ಸನ್ನಿಧಾನವಿದ್ದ ಸ್ಥಳದಲ್ಲಿ ನೀನು ಮುಂದೆ ತಪಸ್ಸನ್ನು ಆಚರಿಸು. ಅದರಿಂದ ನಿನಗೆ ಯೋಗಸಾಧನವಾಗಿ ನೀನು ಉತ್ತಮ ಗತಿಯನ್ನು ಹೊಂದುವೆ.'' ಮಹಾದೇವಿಯ ಈ ಆದೇಶಾಕ್ಷರಗಳನ್ನು ಕೇಳಿ ದಕ್ಷಪ್ರಜಾಪತಿಯು ಕೈ ಮುಗಿದು ಕೇಳಿದ ''ಕಲ್ಯಾಣಿ, ನಿನ್ನ ಸನ್ನಿಧಾನವಿರುವ ತೀರ್ಥಕ್ಷೇತ್ರಗಳು ಯಾವವು ? ಎಷ್ಟು ? ಎಲ್ಲಿ ಇರುತ್ತವೆ ? ಯಾವ ಯಾವ ದಿವ್ಯನಾಮಗಳಿಂದ ನಾನು ನಿನ್ನನ್ನು ಪೂಜಿಸಿ ಸ್ತುತಿಸಬೇಕು ? ಇದನ್ನೆಲ್ಲ ತಿಳಿಸಿಕೊಡು.''

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿಮೂರನೆಯ ಅಧ್ಯಾಯ ಮುಗಿದುದು*

—o—

## ಯಾವ ಕ್ಷೇತ್ರದಲ್ಲಿ ಯಾವ ದೇವಿಯ ರೂಪ ! | ಅಧ್ಯಾಯ - ೧೪

**ದೇವೀ ಉವಾಚ**

**ಸರ್ವದಾ ಸರ್ವಭೂತೇಷು ದ್ರಷ್ಟವ್ಯಾ ಸರ್ವತೋ ಭುವಿ ।**
**ಸರ್ವಲೋಕೇಷು ಯತ್ಕಿಂಚಿದ್ರಹಿತಂ ನಮಯಾ ವಿನಾ ॥**

**ದೇವಿ :-** ಎಲ್ಲ ಕಡೆಗೂ ಯಾವಾಗಲೂ ಎಲ್ಲ ಪ್ರಾಣಿಗಳಲ್ಲಿಯೂ ನನ್ನನ್ನು ಕಾಣಬಹುದು. ಈ ಚರಾಚರ ಪ್ರಪಂಚದಲ್ಲಿ ನನ್ನನ್ನು ಬಿಟ್ಟು ಯಾವ ಪದಾರ್ಥವೂ ಇಲ್ಲ. ಆದರೂ ಸಿದ್ಧಿಯನ್ನು ಪಡೆಯಬಯಸುವವರು ನನ್ನ ವಿಶೇಷ ಸನ್ನಿಧಾನವಿದ್ದ ತೀರ್ಥಕ್ಷೇತ್ರಗಳಲ್ಲಿ ಬಂದು ನನ್ನನ್ನು ನಾನು ಮುಂದೆ ಹೇಳುವ ವಿಶಿಷ್ಟನಾಮಗಳಿಂದ ಪೂಜಿಸಿದರೆ ನಾನು ಬೇಗ ಪ್ರಸನ್ನಳಾಗಿ ಫಲಕೊಡುತ್ತೇನೆ. ಅಂತಹ ನನ್ನ ವಿಶೇಷ ಸನ್ನಿಧಾನೋಪೇತವಾದ ಪುಣ್ಯ ಸ್ಥಳಗಳನ್ನೂ ಮತ್ತು ಅಲ್ಲಿರುವ ನನ್ನ ವಿವಿಧ ರೂಪಗಳನ್ನು ತದ್ವಾಚಕ ವಿವಿಧನಾಮಗಳನ್ನೂ ಹೇಳುತ್ತೇನೆ ಕೇಳು. ನಾನು ಆಆ ಸ್ಥಳಗಳಲ್ಲಿ ಆ ಆರೂಪದಿಂದ ಇರುತ್ತೇನೆ. ಕಾಶಿಯಲ್ಲಿ ನಾನು ವಿಶಾಲಾಕ್ಷೀ ಎಂಬ ರೂಪದಿಂದ ಇರುತ್ತೇನೆ. ಆದುದರಿಂದ ಕಾಶೀಕ್ಷೇತ್ರದಲ್ಲಿ ಇರುವ ಆ ನನ್ನ ಸನ್ನಿಧಾನೋಪೇತ ಪ್ರತೀಕವನ್ನು ಈ ವಿಶಾಲಾಕ್ಷೀ ಎಂಬ ಹೆಸರಿನಿಂದ ಪೂಜಿಸಿ, ಆರಾಧಿಸಿ, ಜಪಿಸಿ, ಧ್ಯಾನಮಾಡಿ ಸೇವಿಸಿದರೆ ನಾನು ಪ್ರಸನ್ನಳಾಗಿ ಫಲನೀಡುತ್ತೇನೆ.

ಇದರಂತೆ ನೈಮಿಷಾರಣ್ಯದಲ್ಲಿ ನಾನು ಲಿಂಗಧಾರಿಣೀ ರೂಪದಿಂದ ಇರುವೆನು. ಅಲ್ಲಿ ಇದೇ ಹೆಸರಿನಿಂದ ನನ್ನನ್ನು ಆರಾಧಿಸಬೇಕು. ಹೀಗೆಯೇ ಪ್ರಯಾಗದಲ್ಲಿ ಲಲಿತಾದೇವಿ, ಗಂಧಮಾದನದಲ್ಲಿ ಕಾಮಾಕ್ಷೀ, ಮಾನಸತೀರ್ಥದಲ್ಲಿ ಕುಮುದಾ, ಅಂಬರಕ್ಷೇತ್ರದಲ್ಲಿ ವಿಶ್ವಕಾಯಾ, ಗೋಮಂತದಲ್ಲಿ ಗೋಮತೀ, ಮಂದರಾಚಲದಲ್ಲಿ ಕಾಮಚಾರಿಣೀ, ಕಾನ್ಯಕುಬ್ಜದಲ್ಲಿ ಗೌರಿ, ಮಲಯಪರ್ವತದಲ್ಲಿ ರಂಭೆ, ಏಕಾಂಬರಕ್ಷೇತ್ರದಲ್ಲಿ ಕೀರ್ತಿಮತಿ ಮತ್ತು ವಿಶ್ವೇಶ್ವರದಲ್ಲಿ ವಿಶ್ವೆ ಎಂದು ನನ್ನನ್ನು ಹೇಳುವರು.

ಪುಷ್ಕರದಲ್ಲಿ ಪುರುಹೂತೆ, ಕೇದಾರದಲ್ಲಿ ಮಾರ್ಗದಾಯಿನಿ, ಹಿಮಪರ್ವತದ ಮೇಲೆ ನಂದೆ, ಗೋಕರ್ಣದಲ್ಲಿ ಭದ್ರಕರ್ಣಿಕೆ, ಸ್ಥಾನೇಶ್ವರದಲ್ಲಿ ಭವಾನಿ, ಬಿಲ್ವಲದಲ್ಲಿ ಬಿಲ್ವಪತ್ರಿಕೆ, ಶ್ರೀಶೈಲದಲ್ಲಿ ಮಾಧವಿ, ಭದ್ರೇಶ್ವರದಲ್ಲಿ ಭದ್ರೆ, ವರಾಹಶೈಲದಲ್ಲಿ ಜಯೆ, ಕಮಲಾಲಯದಲ್ಲಿ ಕಾಮಲೆ, ರುದ್ರಕೋಟಿಯಲ್ಲಿ ರುದ್ರಾಣಿ, ಕಾಲಂಜರಗಿರಿಯಲ್ಲಿ ಕಾಳಿ, ಮಹಾಲಿಂಗದಲ್ಲಿ ಕಪಿಲೆ, ಮುಕೋಟದಲ್ಲಿ ಮುಕುಟೇಶ್ವರಿ, ಶಾಲಗ್ರಾಮದಲ್ಲಿ ಮಹಾದೇವಿ, ಶಿವಲಿಂಗದಲ್ಲಿ ಜಲಪ್ರಿಯೆ, ಮಾಯಾಪುರಿಯಲ್ಲಿ ಕುಮಾರಿ, ಸಂತಾನದಲ್ಲಿ ಲಲಿತೆ, ಸಹಸ್ರಾಕ್ಷದಲ್ಲಿ ಉತ್ಪಲಾಕ್ಷಿ, ಕಮಲಾಕ್ಷದಲ್ಲಿ ಮಹೋತ್ಪಲೆ, ಗಂಗೆಯಲ್ಲಿ ಮಂಗಲೆ, ಪುರುಷೋತ್ತಮದಲ್ಲಿ

ವಿಮಲೆ, ವಿಪಾಶೆಯಲ್ಲಿ ಅಮೋಕಾಂಕ್ಷಿ, ಪಾಂಡವವರ್ಧನದಲ್ಲಿ ಪಾಟಲೆ, ಸುಪಾರ್ಶ್ವದಲ್ಲಿ ನಾರಾಯಣಿ, ವಿಕೂಬದಲ್ಲಿ ಭದ್ರಸುಂದರಿ, ವಿಪುಲಕ್ಷೇತ್ರದಲ್ಲಿ ವಿಮಲೆ, ಮಲಯಾಚಲದಲ್ಲಿ ಕಲ್ಯಾಣಿ, ಕೋಟಿತೀರ್ಥದಲ್ಲಿ ಕೋಟವಿ, ಮಾಧವವನದಲ್ಲಿ ಸುಗಂಧೆ, ಗೋದಾಶ್ರಮದಲ್ಲಿ ತ್ರಿಸಂಧ್ಯೆ, ಗಂಗಾದ್ವಾರದಲ್ಲಿ ರತಿಪ್ರಿಯೆ, ಶಿವಕುಂಡದಲ್ಲಿ ಶಿವಾನಂದೆ, ದೇವಿಕಾತಟದಲ್ಲಿ ನಂದಿನಿ, ದ್ವಾರಾವತಿಯಲ್ಲಿ ರುಕ್ಮಿಣಿ, ವೃಂದಾವನದಲ್ಲಿ ರಾಧೆ, ಮಧುರಾಕ್ಷೇತ್ರದಲ್ಲಿ ದೇವಕಿ, ಪಾತಾಲದಲ್ಲಿ ಪರಮೇಶ್ವರಿ, ಚಿತ್ರಕೂಟದಲ್ಲಿ ಸೀತೆ, ವಿಂಧ್ಯದಲ್ಲಿ ವಿಂಧ್ಯಾಧಿವಾಸಿನಿ, ಸಹ್ಯಾದ್ರಿಯಲ್ಲಿ ಏಕವೀರೆ, ಹರಿಶ್ಚಂದ್ರತೀರ್ಥದಲ್ಲಿ ಚಂದ್ರಿಕೆ, ರಾಮತೀರ್ಥದಲ್ಲಿ ರಮಣಿ, ಯಮುನೆಯಲ್ಲಿ ಮೃಗಾವತಿ, ಕರವೀರಕ್ಷೇತ್ರದಲ್ಲಿ ಮಹಾಲಕ್ಷ್ಮಿ, ವಿನಾಯಕ ತೀರ್ಥದಲ್ಲಿ ಉಮಾದೇವಿ, ವೈದ್ಯನಾಥದಲ್ಲಿ ಆರೋಗೆ, ಮಹಾಕಾಲದಲ್ಲಿ ಮಹೇಶ್ವರಿ, ಉಷ್ಣತೀರ್ಥದಲ್ಲಿ ಅಭಯೆ, ವಿಂಧ್ಯಕಂದರದಲ್ಲಿ ಅಮೃತೆ, ಮಾಂಡವ್ಯದಲ್ಲಿ ಮಾಂಡವಿ, ಮಾಹೇಶ್ವರದಲ್ಲಿ ಸ್ವಾಹಾದೇವಿ, ಛಾಗುಂಡತೀರ್ಥದಲ್ಲಿ ಪ್ರಚಂಡೆ, ಮಕರಂದಕ್ಷೇತ್ರದಲ್ಲಿ ಚಂಡಿಕೆ, ಸೋಮೇಶ್ವರದಲ್ಲಿ ವರಾರೋಹೆ, ಪ್ರಭಾಸದಲ್ಲಿ ಪುಷ್ಕರಾವತಿ, ಸರಸ್ವತಿಯಲ್ಲಿ ದೇವಮಾತೆ, ಸಮುದ್ರತಟತೀರ್ಥದಲ್ಲಿ ಮತ್ತೆ, ಮಹಾಲಯದಲ್ಲಿ ಮಹಾಭಾಗೆ, ಪಯೋಷ್ಣಿಯಲ್ಲಿ ಪಿಂಗಲೇಶ್ವರಿ, ಕೃತಶೌಚಕ್ಷೇತ್ರದಲ್ಲಿ ಸಿಂಹಿಕೆ, ಕಾರ್ತಿಕೇಯ ತೀರ್ಥದಲ್ಲಿ ಯಶಸ್ಕರಿ ಉತ್ಕಲಾವರ್ತಕದಲ್ಲಿ ಲೋಲೆ, ಶೋಣಾಸಂಗಮ ಕ್ಷೇತ್ರದಲ್ಲಿ ಸುಭದ್ರೆ, ಸಿದ್ಧಿಪುರದಲ್ಲಿ ಮಾತೆಯು ಲಕ್ಷ್ಮಿಯೆಂದೆನಿಸುವಳು, ಭರತಾಶ್ರಮದಲ್ಲಿ ಅಂಗನೆ, ಜಾಲಂಧರ ಕ್ಷೇತ್ರದಲ್ಲಿ ವಿಶ್ವಮುಖಿ, ಕಿಷ್ಕಿಂಧಪರ್ವತದಲ್ಲಿ ತಾರೆ ಎಂದೆ ಆಕೆಯ ಹೆಸರು. ದೇವದಾರುವನದಲ್ಲಿ ಪುಷ್ಟಿ, ಕಾಶ್ಮೀರಮಂಡಲದಲ್ಲಿ ಮೇಧೆ, ಹಿಮಾದ್ರಿಯಲ್ಲಿ ಭೀಮಾದೇವಿ, ವಿಶ್ವೇಶ್ವರದಲ್ಲಿ ಪುಷ್ಟಿರೂಪದಿಂದ ನಾನು ಇರುತ್ತೇನೆ.

ಮಾತೆಯು ಕಪಿಲಮೋಚನ ಕ್ಷೇತ್ರದಲ್ಲಿ ಶುದ್ಧಿಯೆಂದೂ, ಅವರೋಹಣ ತೀರ್ಥದಲ್ಲಿ ಕಾಯೆಯೆಂದೂ, ಶಂಖೋದ್ಧಾರದಲ್ಲಿ ಧ್ವನಿಯೆಂದೂ ಡಿಂಡಾಕರದಲ್ಲಿ ಧೃತಿಯೆಂದೂ ಪ್ರಸಿದ್ಧಳಾಗಿರುವಳು. ಚಂದ್ರಭಾಗಾತೀರ್ಥದಲ್ಲಿ ಕಾಲೆ, ಅಚ್ಛೋದ ತೀರ್ಥದಲ್ಲಿ ಶಿವಕಾರಿಣಿ, ವೇಣಾಕ್ಷೇತ್ರದಲ್ಲಿ ಅಮೃತೆ, ಬದರಿಯಲ್ಲಿ ಊರ್ವಶಿ, ಉತ್ತರ ಕುರುಕ್ಷೇತ್ರದಲ್ಲಿ ಔಷಧಿ, ಕುಶದ್ವೀಪದಲ್ಲಿ ಕುಶೋದಕೆ, ಹೇಮಕೂಟದಲ್ಲಿ ಮನ್ಮಥೆ, ಮುಕುಟತೀರ್ಥದಲ್ಲಿ ಸತ್ಯವಾದಿನಿ, ಅಶ್ವತತೀರ್ಥದಲ್ಲಿ ವಂದನೀಯೆ, ಕುಬೇರಮಂದಿರದಲ್ಲಿ ನಿಧಿ, ವೇದಮುಖದಲ್ಲಿ ಗಾಯತ್ರಿ, ಶಿವಸನ್ನಿಧಿಯಲ್ಲಿ ಪಾರ್ವತಿ, ದೇವಲೋಕದಲ್ಲಿ ಇಂದ್ರಾಣಿ, ಬ್ರಹ್ಮನಚತುರ್ಮುಖದಲ್ಲಿ ಸರಸ್ವತಿ, ಸೂರ್ಯಬಿಂಬದಲ್ಲಿ ಪ್ರಭೆ, ಸಪ್ತಮಾತೃಕೆಯಲ್ಲಿ ವೈಷ್ಣವಿಯೆಂದು ಪೂಜ್ಯಳಾಗಿದ್ದಾಳೆ. ಸಾಧ್ವಿಯಲ್ಲಿ ಅರುಂಧತಿ, ನಾರೀಮಣಿಯಲ್ಲಿ ತಿಲೋತ್ತಮೆ ಮನಸ್ಸಿನಲ್ಲಿ ಬ್ರಹ್ಮಕಲೆ, ಸಮಸ್ತಪ್ರಾಣಿಗಳಲ್ಲೂ ಶಕ್ತಿಯೆಂದನಿಸಿಕೊಂಡು ದೇವಿಯು ಎಲ್ಲೆಡೆಯಲ್ಲಿಯೂ ವಿರಾಜಿಸುತ್ತಿರುವಳು. ಈ ನೂರೆಂಟು ಪುಣ್ಯತೀರ್ಥಗಳ ಹೆಸರನ್ನು ದೇವಿಯ ಅಷ್ಟೋತ್ತರ ಶತನಾಮಗಳನ್ನೂ ಸಂಗ್ರಹವಾಗಿ ಹೇಳಿದೆನು.

ಹಿಂದೆ ಹೇಳಿದ ಪುಣ್ಯತೀರ್ಥಗಳನ್ನೂ, ಅಷ್ಟೋತ್ತರ ಶತನಾಮಾಗಳನ್ನೂ ಯಾರು ಸ್ಮರಿಸುವರೋ ಅಥವಾ ಕೇಳುವರೋ ಅವರು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುವರು. ಈ ತೀರ್ಥಗಳಲ್ಲಿ ಸ್ನಾನಮಾಡಿ ನನ್ನ ದರ್ಶನಮಾಡುವ ಮನುಷ್ಯನು ಸಮಸ್ತಪಾಪಗಳನ್ನೂ ನೀಗಿ ಕೈಲಾಸದಲ್ಲಿ ಕಲ್ಪಾಂತರದವರೆಗೂ ವಾಸಮಾಡುವನು. ಈ ಕ್ಷೇತ್ರದಲ್ಲಿ ನನ್ನ ಸೇವಾಸಕ್ತನಾಗಿ ಕಾಲವನ್ನು ಕಳೆಯುವ ಮನುಷ್ಯನು ಬ್ರಹ್ಮಲೋಕವನ್ನು ಭೇದಿಸಿ. ಶಿವಸಾಯುಜ್ಯವನ್ನು ಪಡೆಯುವನು.

ತೃತೀಯೆಯಲ್ಲಿ ಇಲ್ಲವೇ ಅಷ್ಟಮಿಯಲ್ಲಿ ನನ್ನ ಈ ಅಷ್ಟೋತ್ತರ ಶತನಾಮಗಳನ್ನು ಶಿವಸಾನ್ನಿಧ್ಯದಲ್ಲಿ ಜಪಿಸುವ ಮನುಜನು ಹಲವಾರು ಮಕ್ಕಳನ್ನು ಪಡೆಯುವನು. ಗೋದಾನಮಾಡುವಾಗ, ಶ್ರಾದ್ಧವನ್ನು ಆಚರಿಸುವಾಗ, ಇಲ್ಲವೇ ಪ್ರತಿದಿನವೂ ದೇವರ ಪೂಜೆಯನ್ನು ನೆರವೇರಿಸುವಾಗ, ಈ ನಾಮ ಪಾರಾಯಣವನ್ನು ಮಾಡಿದರೆ ಬ್ರಹ್ಮಸಾನ್ನಿಧ್ಯವು ಲಭಿಸುವದು.'' ಇಂತೆಂದು ಹೇಳಿ ದಾಕ್ಷಾಯಣಿಯು ತನ್ನ ಯೋಗಾಗ್ನಿಯಿಂದಲೇ ದಗ್ಧಳಾದಳು. ಬಳಿಕ ದಕ್ಷಪ್ರಜಾಪತಿಯು ಸ್ವಾಯಂಭುವ ಮನುವಿನವಂಶದಲ್ಲಿ ಪ್ರಚೇತಸನೆಂಬ ಹೆಸರಿನಿಂದ ಜನಿಸಿದನು. ದಾಕ್ಷಾಯಣಿಯು ಮೇನಾದೇವಿಯ ಗರ್ಭದಲ್ಲಿ ಹುಟ್ಟಿ ಈಶ್ವರನ ಅರ್ಧಾಂಗಿಯಾದಳು. ಅವಳು ಇಹದಲ್ಲಿ ಸುಖ ಸಂಪತ್ತನ್ನೂ, ಪರದಲ್ಲಿ ದಿವ್ಯ ಸುಖವನ್ನೂ ಕರುಣಿಸುತ್ತ ಪಾರ್ವತಿಯೆಂಬ ದಿವ್ಯನಾಮದಿಂದ ಪ್ರಖ್ಯಾತಳಾದಳು. ಮೇಲೆ ಹೇಳಿದ ದೇವಿಯ ಅಷ್ಟೋತ್ತರ ಶತನಾಮಗಳನ್ನು ಜಪಿಸಿರುವದರಿಂದ ಆರುಂಧತಿಯು ದಿವ್ಯಜ್ಞಾನವನ್ನು ಪಡೆದಳು. ರಾಜರ್ಷಿಯೆನಿಸಿದ ಪುರೂರವನು ಯಾರೂ ಜಯಿಸಲಾಗದಂತಹ ವೀರನಾದನು. ಯಯಾತಿಯು ಪುತ್ರಲಾಭವನ್ನೂ ಭಾರ್ಗವನು ಧನಲಾಭವನ್ನೂ ಪಡೆದರು. ಹೀಗೆಯೇ ಎಷ್ಟೋ ಜನ ಸುರರು, ಅಸುರರು ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ತಮ್ಮ ತಮ್ಮ ಇಷ್ಟಾರ್ಥವನ್ನು ಸಂಪಾದಿಸಿದರು. ಇದನ್ನು ದೇವಸನ್ನಿಧಿಯಲ್ಲಿರಿಸಿ ಪೂಜೆಮಾಡಿದರೆ ಆ ಪ್ರದೇಶದಲ್ಲಿ ದುಃಖ ಬಡತನ ಮುಂತಾದುವು ಎಂದೆಂದಿಗೂ ತಲೆದೋರದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಅಚ್ಛೋದ ಸರೋವರ



**ಸೂತ ಉವಾಚ**

**ಲೋಕಾಃ ಸೋಮಪಥಾ ನಾಮ ಯತ್ರ ಮಾರೀಚನಂದನಾಃ**
**ವರ್ತಂತೇ ದೇವಪಿತರೋ ದೇವಾ ಯಾನ್ ಭಾವಯಂತ್ಯಲಮ್ ॥**

**ಸೂತ** :- ಸೋಮಪಥ ಎಂಬ ಲೋಕಗಳು ಇವೆ. ಮಾರೀಚ ಮುನಿಯ ಮಕ್ಕಳಾದ ಪಿತೃದೇವತೆಗಳು ವಾಸಮಾಡುವದು ಅಲ್ಲಿಯೇ. ಸುರಲೋಕದ ದೇವತೆಗಳೂ ಅಗ್ನಿಷ್ವಾತ್ತರು ಕೂಡ ಈ ದೇವಪಿತೃಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಎಂದು ಅವರ ಪ್ರಖ್ಯಾತಿ. ಅಚ್ಛೋದಾ ಎಂಬ ಮಹಿಳೆಯು ಅವರ ಮಾನಸ ಕನ್ನೆ. ಅಚ್ಛೋದ ಎಂಬ ಸರೋವರವೂ ಆ ದೇವಪಿತೃಗಳ ಮಾನಸಸೃಷ್ಟಿಯೇ.

ಹಿಂದೆ ಅವರ ಮಾನಸಕುವರಿ ಅಚ್ಛೋದೆಯು ತಪಸ್ಸಿಗೆ ನಿಂತಳು. ಅದು ನಡೆದಿದ್ದು ಒಂದುಸಾವಿರ ವರ್ಷ. ಆ ತಪಸ್ಸಿಗೆ ಪ್ರಸನ್ನರಾದ ಪಿತೃಗಳು ಅಲ್ಲಿಗೆ ಬಂದರು. ಅವರೆಲ್ಲರ ರೂಪ ದಿವ್ಯ. ಧರಿಸಿದ ಮಾಲೆ ದಿವ್ಯ. ಮೇಲೆ ದಿವ್ಯ ಗಂಧದ ಅನುಲೇಪನ. ಇಪ್ಪತ್ತೈದರ ಹರೆಯ. ಎಲ್ಲರೂ ಬಲಿಷ್ಠರು. ಒಬ್ಬೊಬ್ಬರನ್ನು ನೋಡಿದರೂ ಕಾಮನನ್ನೇ ನೋಡಿದಂತೆ. ಅಂಥ ಚೆಲುವು ಆ ದಿವ್ಯ ದೇಹಗಳಲ್ಲಿ. ಅವರಲ್ಲಿ ಅಮಾವಸು ಎಂಬುವನು ಅತಿ ಸುಂದರ. ಅವನ ಮೋಹಕ ರೂಪ ಕಂಡು ಅಚ್ಛೋದೆಯ ಮನಸ್ಸು ಚಂಚಲವಾಯಿತು. ಅವನ ಅಂಗ ಸಂಗ ಆಗಬೇಕು. ಎಂದು ಅವಳು ಪಿತೃಗಳಿಗೆ ವರ ಬೇಡಿದಳು. ಈ ಮಾನಸಿಕ ವ್ಯಭಿಚಾರದಿಂದ ಅವಳೂ ಒಮ್ಮೆಲೆ ಯೋಗ ಭ್ರಷ್ಟಳಾದಳು. ಅದರ ಬೆನ್ನಹಿಂದೆಯೇ ಅಧಃಪಾತ. ಅಂದಿನ ವರೆಗೆ ಮಣ್ಣಿಗೆ ಮೈ ಹಚ್ಚದ ಅವಳು ಇಂದು ನೆಲಕ್ಕೆ ಬೀಳಬೇಕಾಯಿತು. ಇಷ್ಟಾದರೂ ಅಮಾವಸುವಿನ ಮನಸ್ಸು ವಿಚಲಿತವಾಗಲಿಲ್ಲ. ಅಮಾವಸುವಿನ ಜಿತೇಂದ್ರಿಯತೆ ಸ್ಥೈರ್ಯಗಳು ಆ ದಿನ ಜಗತ್ತಿನಲ್ಲಿ ಪ್ರಖ್ಯಾತವಾದವು. ಈ ಘಟನೆ ನಡೆದ ದಿನವು ಅವನ ಹೆಸರಿನಿಂದಲೇ 'ಅಮಾವಾಸ್ಯೆ' ಎಂದು ಪ್ರಸಿದ್ಧವಾಯಿತು.

ಪಿತೃಗಳಿಗೆ ಇದು ಪ್ರಿಯವಾದ ತಿಥಿ. ಅಂದು ಮಾಡುವ ಶ್ರಾದ್ಧ ತರ್ಪಣ ಮುಂತಾದ ಪಿತೃಕರ್ಮಗಳಿಗೆ ಅಕ್ಷಯಫಲ. ಅಚ್ಛೋದೆಯು ತಲೆಕೆಳಗೆ ಮಾಡಿದಳು, ಕಣ್ಣಿನಲ್ಲಿ ದೈನ್ಯ. ಮುಖದಲ್ಲಿ ಲಜ್ಜೆ. ತಪಸ್ಸೆಲ್ಲವೂ ಕ್ಷೀಣವಾಗಿತ್ತು. ಅವಳ ಮನಸ್ಸಿನಲ್ಲಿ ಮತ್ತು ಮುಖದಲ್ಲಿ ಪಶ್ಚಾತ್ತಾಪ ತುಳುಕುತ್ತಿತ್ತು. ಅವಳು ಪಿತೃಗಳನ್ನು ಪ್ರಾರ್ಥಿಸಿದಳು. ತನ್ನ ಹಿಂದಿನ ಖ್ಯಾತಿ ಅಳಿಸಬಾರದೆಂದು ಅಂಗಲಾಚಿದಳು. ಮುಂದೆ ತನಗೆ ಯಾವ ಕೆಡಕೂ ಆಗಬಾರದೆಂದು ಅತ್ತು ಗೋಗರೆದಳು. ಆಗ ಪಿತೃಗಳಿಗೂ ಅವಳ ಮೇಲೆ ಕರುಣೆ ಬಂದಿತು. ಅವಳ ಭವಿಷ್ಯವನ್ನೂ ಮುಂದೆ ಅವಳಿಂದಾಗ ಬೇಕಾದ ದೇವತಾ ಕಾರ್ಯವನ್ನು ದಿವ್ಯದೃಷ್ಟಿಯಿಂದ ನೋಡಿ ನುಡಿದರು. ಅವರ

ಮನಸ್ಸು ಅವಳ ಭವಿಷ್ಯದ ಭಾಗ್ಯ ವೈಭವ ದರ್ಶನದಿಂದ ಪ್ರಸನ್ನವಾಗಿತ್ತು. ಆ ಪ್ರಸನ್ನತೆ ಅವರು ಆಡುವನುಡಿಗೂ ಚಾಚಿತ್ತು.

''ಸುಂದರಿ, ದೇವಲೋಕದಲ್ಲಿ ದೇವತೆಗಳು ತಮ್ಮ ದಿವ್ಯ ದೇಹದಿಂದ ಮಾಡಿದ ಕರ್ಮಗಳಿಗೆ ಅದೇ ದೇಹದಲ್ಲಿ ಪ್ರತಿಫಲವು ಅನುಭವಿಸಲು ದೊರಕುತ್ತದೆ. ಆದರೆ ಮಾನವರಿಗೆ ಮಾತ್ರ ಈ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ಜನ್ಮಾಂತರದಲ್ಲಿಯೇ ಫಲಾನುಭವವಾಗುವದು. ಆದುದರಿಂದ ನೀನು ನಿನ್ನ ತಪಸ್ಸಿನ ಫಲವನ್ನು ಈ ದೇಹದಲ್ಲಿ ಪಡೆಯದೆ ಜನ್ಮಾಂತರದಲ್ಲಿ ದೇಹಾಂತರದಲ್ಲಿ ಪಡೆಯುವೆ.

ಇಪ್ಪತ್ತೆಂಟನೆ ದ್ವಾಪರಯುಗದಲ್ಲಿ ನೀನು ಪಿತೃಗಳಿಗೆ ಮಾಡಿದ ಅಪಚಾರದಿಂದ ಮೀನಯೋನಿಯಲ್ಲಿ ಹುಟ್ಟಿ ಹೀನಕುಲದಲ್ಲಿ ಬೆಳೆಯದೆ ಅನಂತರ ವಸುರಾಜನ ಮಗಳಾಗಿ ವಸುಲೋಕದ ಪುನಃ ಪ್ರಾಪ್ತಿಗೆ ಸಾಧನಮಾಡಿಕೊಳ್ಳುವೆ. ಆ ಕಾಲದಲ್ಲಿ ಪರಾಶರ ಮುನಿಯ ಸಂಗದಿಂದ ಒಬ್ಬ ಮಗನನ್ನು ಪಡೆಯುವೆ. ಬೋರೆ ಗಿಡಗಳಿಂದ ತುಂಬಿದ ನಡುಗಡ್ಡೆಯಲ್ಲಿ ಹುಟ್ಟಿದ್ದರಿಂದ ಅವನಿಗೆ **'ಬಾದರಾಯಣ'** ಎಂದು ಹೆಸರಾಗುವದು. ಸಾಕ್ಷಾತ್‌ಶ್ರೀ ವಿಷ್ಣುವೇ ನಿನ್ನ ಹೊಟ್ಟೆಯಿಂದ ಹುಟ್ಟಿ ಬಂದು ಒಂದಾಗಿದ್ದ ವೇದರಾಶಿಯನ್ನು ವಿಭಾಗಮಾಡಿ **ವೇದವ್ಯಾಸ** ಎನಿಸುವನು.

ಅನಂತರ ಪುರುವಂಶದಲ್ಲಿಯ ಸಮುದ್ರರಾಜನ ಅಂಶದಿಂದ ಹುಟ್ಟಿದ ಶಂತನು ಎಂಬ ಸಾರ್ವಭೌಮನು ನಿನ್ನನ್ನು ಮದುವೆ ಆಗುವನು. ಇವನಿಂದ ನಿನಗೆ ವಿಚಿತ್ರವೀರ್ಯ, ಚಿತ್ರಾಂಗದ ಎಂಬ ಇಬ್ಬರು ಮಕ್ಕಳು ಜನಿಸಲಿರುವರು. ಮುಂದೆ ಅವರಿಬ್ಬರೂ ಮೃತರಾದ ಬಳಿಕ ನಿನ್ನ ಹಿರಿಯ ಮಗನಾದ ವ್ಯಾಸನಿಂದ ಧೃತರಾಷ್ಟ್ರ, ಪಾಂಡು ಎಂಬ ಕ್ಷೇತ್ರಜ ಪುತ್ರರು ಹುಟ್ಟುವಂತೆ ನೀನು ಏರ್ಪಾಡುಮಾಡಿ ನೀನು ಪಿತೃಲೋಕಕ್ಕೆ ಹೋಗು. ಆ ಲೋಕದಲ್ಲಿ ಪ್ರೋಷ್ಠಪದಿ ಮತ್ತು ಅಷ್ಟಕಾರೂಪದಿಂದ ನೀನು ವಾಸಿಸುವೆ. ಭೂಲೋಕದಲ್ಲಿ ನಿನಗೆ ಸತ್ಯವತಿ ಎಂದೂ ಪಿತೃಲೋಕದಲ್ಲಿ ಅಷ್ಟಕಾ ಎಂದೂ ಪ್ರಸಿದ್ಧಿಯಾಗುವದು. ನೀನು ಜನರ ಇಷ್ಟಾರ್ಥಗಳನ್ನೆಲ್ಲ ಸಲ್ಲಿಸುತ್ತ ಆಯುಷ್ಯವರ್ಧಿನಿಯೂ ಆರೋಗ್ಯದಾಯಿನಿಯೂ ಆಗುವೆ. ಕಾಲಾಂತರದಲ್ಲಿ ನೀನು ಅಚ್ಛೋದಾ ಎಂಬ ಪುಣ್ಯ ಜಲವುಳ್ಳ ಶ್ರೇಷ್ಠ ನದಿಯಾಗಿ ಹರಿಯುವೆ.'' ಹೀಗೆ ಹೇಳಿ ಆ ಪಿತೃಗಣವು ಅಲ್ಲಿಯೇ ಅದೃಶ್ಯವಾಯಿತು. ಆ ಅಚ್ಛೋದೆಯಾದರೂ ಆ ಪಿತೃಗಳು ಹೇಳಿದಂತೆಯೇ ಎಲ್ಲ ಫಲವನ್ನು ನಿರ್ದಿಷ್ಟ ಕಾಲಾಂತರ ಜನ್ಮಾಂತರಗಳಲ್ಲಿ ಹೊಂದಿದಳು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು*

—o—

## ಅಚ್ಛೋದ ಸರೋವರ

ಅಧ್ಯಾಯ - ೧೫

**ಸೂತ ಉವಾಚ**

**ಲೋಕಾಃ ಸೋಮಪಥಾ ನಾಮ ಯತ್ರ ಮಾರೀಚನಂದನಾಃ**
**ವರ್ತಂತೇ ದೇವಪಿತರೋ ದೇವಾ ಯಾನ್ ಭಾವಯಂತ್ಯಲಮ್ ॥**

**ಸೂತ** :- ಸೋಮಪಥ ಎಂಬ ಲೋಕಗಳು ಇವೆ. ಮಾರೀಚ ಮುನಿಯ ಮಕ್ಕಳಾದ ಪಿತೃದೇವತೆಗಳು ವಾಸಮಾಡುವದು ಅಲ್ಲಿಯೇ. ಸುರಲೋಕದ ದೇವತೆಗಳೂ ಅಗ್ನಿಷ್ವಾತ್ತರು ಕೂಡ ಈ ದೇವಪಿತೃಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಎಂದು ಅವರ ಪ್ರಖ್ಯಾತಿ. ಅಚ್ಛೋದಾ ಎಂಬ ಮಹಿಳೆಯು ಅವರ ಮಾನಸ ಕನ್ಯೆ. ಅಚ್ಛೋದ ಎಂಬ ಸರೋವರವೂ ಆ ದೇವಪಿತೃಗಳ ಮಾನಸಸೃಷ್ಟಿಯೇ.

ಹಿಂದೆ ಅವರ ಮಾನಸಕುವರಿ ಅಚ್ಛೋದೆಯು ತಪಸ್ಸಿಗೆ ನಿಂತಳು. ಅದು ನಡೆದಿದ್ದು ಒಂದುಸಾವಿರ ವರ್ಷ. ಆ ತಪಸ್ಸಿಗೆ ಪ್ರಸನ್ನರಾದ ಪಿತೃಗಳು ಅಲ್ಲಿಗೆ ಬಂದರು. ಅವರೆಲ್ಲರ ರೂಪ ದಿವ್ಯ. ಧರಿಸಿದ ಮಾಲೆ ದಿವ್ಯ. ಮೇಲೆ ದಿವ್ಯ ಗಂಧದ ಅನುಲೇಪನ. ಇಪ್ಪತ್ತೈದರ ಹರೆಯ. ಎಲ್ಲರೂ ಬಲಿಷ್ಠರು. ಒಬ್ಬೊಬ್ಬರನ್ನು ನೋಡಿದರೂ ಕಾಮನನ್ನೇ ನೋಡಿದಂತೆ. ಅಂಥ ಚೆಲವು ಆ ದಿವ್ಯ ದೇಹಗಳಲ್ಲಿ. ಅವರಲ್ಲಿ ಅಮಾವಸು ಎಂಬುವನು ಅತಿ ಸುಂದರ. ಅವನ ಮೋಹಕ ರೂಪ ಕಂಡು ಅಚ್ಛೋದೆಯ ಮನಸ್ಸು ಚಂಚಲವಾಯಿತು. ಅವನ ಅಂಗ ಸಂಗ ಆಗಬೇಕು. ಎಂದು ಅವಳು ಪಿತೃಗಳಿಗೆ ವರ ಬೇಡಿದಳು. ಈ ಮಾನಸಿಕ ವ್ಯಭಿಚಾರದಿಂದ ಅವಳೂ ಒಮ್ಮೆಲೆ ಯೋಗ ಭ್ರಷ್ಟಳಾದಳು. ಅದರ ಬೆನ್ನಹಿಂದೆಯೇ ಅಧಃಪಾತ. ಅಂದಿನ ವರೆಗೆ ಮಣ್ಣಿಗೆ ಮೈ ಹಚ್ಚದ ಅವಳು ಇಂದು ನೆಲಕ್ಕೆ ಬೀಳಬೇಕಾಯಿತು. ಇಷ್ಟಾದರೂ ಅಮಾವಸುವಿನ ಮನಸ್ಸು ವಿಚಲಿತವಾಗಲಿಲ್ಲ. ಅಮಾವಸುವಿನ ಜಿತೇಂದ್ರಿಯತೆ ಸ್ಥೈರ್ಯಗಳು ಆ ದಿನ ಜಗತ್ತಿನಲ್ಲಿ ಪ್ರಖ್ಯಾತವಾದವು. ಈ ಘಟನೆ ನಡೆದ ದಿನವು ಅವನ ಹೆಸರಿನಿಂದಲೇ 'ಅಮಾವಾಸ್ಯೆ' ಎಂದು ಪ್ರಸಿದ್ಧವಾಯಿತು.

ಪಿತೃಗಳಿಗೆ ಇದು ಪ್ರಿಯವಾದ ತಿಥಿ. ಅಂದು ಮಾಡುವ ಶ್ರಾದ್ಧ ತರ್ಪಣ ಮುಂತಾದ ಪಿತೃಕರ್ಮಗಳಿಗೆ ಅಕ್ಷಯಫಲ. ಅಚ್ಛೋದೆಯು ತಲೆಕೆಳಗೆ ಮಾಡಿದಳು, ಕಣ್ಣಿನಲ್ಲಿ ದೈನ್ಯ. ಮುಖದಲ್ಲಿ ಲಜ್ಜೆ. ತಪಸ್ಸೆಲ್ಲವೂ ಕ್ಷೀಣವಾಗಿತ್ತು. ಅವಳ ಮನಸ್ಸಿನಲ್ಲಿ ಮತ್ತು ಮುಖದಲ್ಲಿ ಪಶ್ಚಾತ್ತಾಪ ತುಳುಕುತ್ತಿತ್ತು. ಅವಳು ಪಿತೃಗಳನ್ನು ಪ್ರಾರ್ಥಿಸಿದಳು. ತನ್ನ ಹಿಂದಿನ ಖ್ಯಾತಿ ಅಳಿಸಬಾರದೆಂದು ಅಂಗಲಾಚಿದಳು. ಮುಂದೆ ತನಗೆ ಯಾವ ಕೆಡಕೂ ಆಗಬಾರದೆಂದು ಅತ್ತು ಗೋಗರೆದಳು. ಆಗ ಪಿತೃಗಳಿಗೂ ಅವಳ ಮೇಲೆ ಕರುಣೆ ಬಂದಿತು. ಅವಳ ಭವಿಷ್ಯವನ್ನೂ ಮುಂದೆ ಅವಳಿಂದಾಗ ಬೇಕಾದ ದೇವತಾ ಕಾರ್ಯವನ್ನು ದಿವ್ಯದೃಷ್ಟಿಯಿಂದ ನೋಡಿ ನುಡಿದರು. ಅವರ

ಮನಸ್ಸು ಅವಳ ಭವಿಷ್ಯದ ಭಾಗ್ಯ ವೈಭವ ದರ್ಶನದಿಂದ ಪ್ರಸನ್ನವಾಗಿತ್ತು. ಆ ಪ್ರಸನ್ನತೆ ಅವರು ಆಡುವನುಡಿಗೂ ಚಾಚಿತ್ತು.

''ಸುಂದರಿ, ದೇವಲೋಕದಲ್ಲಿ ದೇವತೆಗಳು ತಮ್ಮ ದಿವ್ಯ ದೇಹದಿಂದ ಮಾಡಿದ ಕರ್ಮಗಳಿಗೆ ಅದೇ ದೇಹದಲ್ಲಿ ಪ್ರತಿಫಲವು ಅನುಭವಿಸಲು ದೊರಕುತ್ತದೆ. ಆದರೆ ಮಾನವರಿಗೆ ಮಾತ್ರ ಈ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ಜನ್ಮಾಂತರದಲ್ಲಿಯೇ ಫಲಾನುಭವವಾಗುವದು. ಆದುದರಿಂದ ನೀನು ನಿನ್ನ ತಪಸ್ಸಿನ ಫಲವನ್ನು ಈ ದೇಹದಲ್ಲಿ ಪಡೆಯದೆ ಜನ್ಮಾಂತರದಲ್ಲಿ ದೇಹಾಂತರದಲ್ಲಿ ಪಡೆಯುವೆ.

ಇಪ್ಪತ್ತೆಂಟನೆ ದ್ವಾಪರಯುಗದಲ್ಲಿ ನೀನು ಪಿತೃಗಳಿಗೆ ಮಾಡಿದ ಅಪಚಾರದಿಂದ ಮೀನಯೋನಿಯಲ್ಲಿ ಹುಟ್ಟಿ ಹೀನಕುಲದಲ್ಲಿ ಬೆಳೆಯದೆ ಅನಂತರ ವಸುರಾಜನ ಮಗಳಾಗಿ ವಸುಲೋಕದ ಪುನಃ ಪ್ರಾಪ್ತಿಗೆ ಸಾಧನಮಾಡಿಕೊಳ್ಳುವೆ. ಆ ಕಾಲದಲ್ಲಿ ಪರಾಶರ ಮುನಿಯ ಸಂಗದಿಂದ ಒಬ್ಬ ಮಗನನ್ನು ಪಡೆಯುವೆ. ಬೋರೆ ಗಿಡಗಳಿಂದ ತುಂಬಿದ ನಡುಗಡ್ಡೆಯಲ್ಲಿ ಹುಟ್ಟಿದ್ದರಿಂದ ಅವನಿಗೆ **'ಬಾದರಾಯಣ'** ಎಂದು ಹೆಸರಾಗುವದು. ಸಾಕ್ಷಾತ್‌ಶ್ರೀ ವಿಷ್ಣುವೇ ನಿನ್ನ ಹೊಟ್ಟೆಯಿಂದ ಹುಟ್ಟಿ ಬಂದು ಒಂದಾಗಿದ್ದ ವೇದರಾಶಿಯನ್ನು ವಿಭಾಗಮಾಡಿ **ವೇದವ್ಯಾಸ** ಎನಿಸುವನು.

ಅನಂತರ ಪುರುವಂಶದಲ್ಲಿಯ ಸಮುದ್ರರಾಜನ ಅಂಶದಿಂದ ಹುಟ್ಟಿದ ಶಂತನು ಎಂಬ ಸಾರ್ವಭೌಮನು ನಿನ್ನನ್ನು ಮದುವೆ ಆಗುವನು. ಇವನಿಂದ ನಿನಗೆ ವಿಚಿತ್ರವೀರ್ಯ, ಚಿತ್ರಾಂಗದ ಎಂಬ ಇಬ್ಬರು ಮಕ್ಕಳು ಜನಿಸಲಿರುವರು. ಮುಂದೆ ಅವರಿಬ್ಬರೂ ಮೃತರಾದ ಬಳಿಕ ನಿನ್ನ ಹಿರಿಯ ಮಗನಾದ ವ್ಯಾಸನಿಂದ ಧೃತರಾಷ್ಟ್ರ, ಪಾಂಡು ಎಂಬ ಕ್ಷೇತ್ರಜ ಪುತ್ರರು ಹುಟ್ಟುವಂತೆ ನೀನು ಏರ್ಪಾಡುಮಾಡಿ ನೀನು ಪಿತೃಲೋಕಕ್ಕೆ ಹೋಗು. ಆ ಲೋಕದಲ್ಲಿ ಪ್ರೋಷ್ಟಪದಿ ಮತ್ತು ಅಷ್ಟಕಾರೂಪದಿಂದ ನೀನು ವಾಸಿಸುವೆ. ಭೂಲೋಕದಲ್ಲಿ ನಿನಗೆ ಸತ್ಯವತಿ ಎಂದೂ ಪಿತೃಲೋಕದಲ್ಲಿ ಅಷ್ಟಕಾ ಎಂದೂ ಪ್ರಸಿದ್ಧಿಯಾಗುವದು. ನೀನು ಜನರ ಇಷ್ಟಾರ್ಥಗಳನ್ನೆಲ್ಲ ಸಲ್ಲಿಸುತ್ತ ಆಯುಷ್ಯವರ್ಧಿನಿಯೂ ಆರೋಗ್ಯದಾಯಿನಿಯೂ ಆಗುವೆ. ಕಾಲಾಂತರದಲ್ಲಿ ನೀನು ಅಚ್ಛೋದಾ ಎಂಬ ಪುಣ್ಯ ಜಲವುಳ್ಳ ಶ್ರೇಷ್ಠ ನದಿಯಾಗಿ ಹರಿಯುವೆ.'' ಹೀಗೆ ಹೇಳಿ ಆ ಪಿತೃಗಣವು ಅಲ್ಲಿಯೇ ಅದೃಶ್ಯವಾಯಿತು. ಆ ಅಚ್ಛೋದೆಯಾದರೂ ಆ ಪಿತೃಗಳು ಹೇಳಿದಂತೆಯೇ ಎಲ್ಲ ಫಲವನ್ನು ನಿರ್ದಿಷ್ಟ ಕಾಲಾಂತರ ಜನ್ಮಾಂತರಗಳಲ್ಲಿ ಹೊಂದಿದಳು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು*

—o—

# ಯೋಗಿ ಶುಕಾಚಾರ್ಯರಿಗೆ ಮದುವೆ ಮಡದಿ ಮಕ್ಕಳು ಮೊಮ್ಮಕ್ಕಳು

ಅಧ್ಯಾಯ - ೧೬

**ಸೂತ ಉವಾಚ**

**ವಿಭ್ರಾಜಾನಾಮ ಚಾನ್ಯೇತು ದಿವಿ ಸಂತಿ ಸುವರ್ಚಸಃ**
**ಲೋಕಾ ಬರ್ಹಿಷದೋ ಯತ್ರ ಪಿತರಃ ಸಂತ್ಯನುವ್ರತಾಃ ॥**

**ಸೂತ** :- ಸ್ವರ್ಗಲೋಕದಲ್ಲಿ ವಿಭ್ರಾಜ ಎಂಬ ಬೇರೆ ಲೋಕಗಳೂ ಇವೆ. ತೇಜೋದೀಪ್ರವಾ ಆ ಲೋಕಗಳಲ್ಲಿ ಬರ್ಹಿಷದ ಎಂಬ ವ್ರತನಿಷ್ಠರಾದ ಪಿತೃಗಳು ವಾಸಿಸುತ್ತಾರೆ. ನವಿಲುಗರಿಗಳಿಂದ ಅಲಂಕೃತವಾದ ವಿಮಾನಗಳು ಅಲ್ಲಿ ಸಾವಿರಾರು. ಧ್ಯಾನ ಮಾತ್ರದಿಂದ ಫಲನೀಡುವ ಹೋಮಾಗ್ನಿಗಳೆಲ್ಲ ಅಲ್ಲಿ ಬೆಳಗುತ್ತಿವೆ. ದೇವಾಸುರ ಗಂಧರ್ವರು, ನೂರಾರು ತಗಸ್ವಿ ಪುಲಿಸ್ತ್ಯ ಪುತ್ರರು ಈ ಬರ್ಹಿಷದರೆಂಬ ಪಿತೃಗಳನ್ನು ಅಲ್ಲಿ ಆರಾಧಿಸುವರು. ಈ ಪಿತೃಗಳ ಮಾನಸಪುತ್ರಿ ಪೀವರಿ. ಸ್ವರ್ಗದ ತುಂಬ ಇವಳ ಖ್ಯಾತಿ. 'ಯೋಗಮಾತಾ' ಎಂದೂ ಅವಳಿಗೆ ಹೆಸರು. ಶ್ರೀ ವಿಷ್ಣುವನ್ನು ಕುರಿತು ಅವಳು ಉಗ್ರವಾದ ತಪಂಗೈದಳು. ಪರಮಾತ್ಮ ಪ್ರಸನ್ನನಾದ.

''ದೇವಾ, ನೀನು ಪ್ರಸನ್ನನಾದದ್ದು ಸಂತೋಷ. ನನಗೆ ಇಂಥ ಒಬ್ಬ ಪತಿಯನ್ನು ಕರುಣಿಸು. ಅವನು ತಪಸ್ವಿಯಾಗಿರಬೇಕು. ಆದರೆ ತಪಸ್ಸಿನಿಂದ ಮೈ ಒಣಗಿರಬಾರದು. ಸುಂದರನಾಗಿಯೇ ಇರಬೇಕು. ಜಿತೇಂದ್ರಿಯನಾಗಿರಬೇಕು. ನನ್ನನ್ನು ಮಾತ್ರ ಮೋಹಿಸಿ ಪ್ರೇಮಿಸುತ್ತಲೇ ಇರಬೇಕು. ಮಿತಭಾಷಿಯಾಗಿರಬೇಕು. ನನ್ನೊಡನೆ ಸರಸಸಲ್ಲಾಪವನ್ನೂ ಮಾಡಬೇಕು.'' ಅವಳ ಈ ವಿಚಿತ್ರ ವರಕ್ಕೂ ಅಸ್ತು ಎಂದು ಹೇಳಿದ ಆ ಭಗವಂತ. ಅವಳ ಭಾವಿಪತಿಯನ್ನು ಆಗಲೇ ನಿರ್ದೇಶಿಸಿದ. ''ವೇದವ್ಯಾಸರ ಮಗನಾದ ಶುಕನು ಯೋಗಾಚಾರ್ಯ. ಅವನೇ ನೀನು ಹೇಳಿದ ಗುಣವುಳ್ಳ ನಿನಗೆ ಅನುರೂಪನಾದ ವರ. ನೀನು ಅವನ ಪತ್ನಿಯಾಗಿ ಕೃತ್ವಿ ಎಂಬ ಕನ್ಯೆಗೆ ಜನ್ಮ ಕೊಡು. ನಿನ್ನ ಮಗಳೂ ನಿನ್ನಂತೆ ಯೋಗಿನಿಯಾಗುವಳು. ಅವಳನ್ನು ಪಾಂಚಾಲದೇಶದ ಅರಸನಿಗೆ ನೀನು ಮದುವೆ ಮಾಡಿಕೊಡು. ಅವಳಿಗೆ ಬ್ರಹ್ಮದತ್ತ ಎಂಬ ಪುತ್ರನು ಜನಿಸುವನು. ಯೋಗಿನಿಯಾದ ಕೃತ್ವಿಗೆ ಗೌ ಎಂದು ಹೆಸರು.ಮತ್ತು ಕೃಷ್ಣ, ಗೌರ, ಪ್ರಭು, ಶಂಭು, ಎಂದು ಅವಳಿಗೆ ಮಹಾನುಭಾವರಾದ ನಾಲ್ಕು ಜನ ಮಕ್ಕಳು ಆಗುವರು. ಅವರೆಲ್ಲರೂ ತಮ್ಮ ಜ್ಞಾನಸಾಧನೆಯಿಂದ ದಿವ್ಯಗತಿಯನ್ನು ಹೊಂದುವರು.

''ಇಂಥ ಮಹಾನುಭಾವರ ಜನ್ಮಕ್ಕೆ ಕಾರಣಳಾಗಿ ಕೊನೆಗೆ ನೀನು ಮೋಕ್ಷವನ್ನು ಹೊಂದುವೆ.'' ಹೀಗೆ ಹೇಳಿ ಪರಮಾತ್ಮನು ಬರ್ಹಿಷದ ಎಂಬ ಪಿತೃಗಳ ಮಾನಸಪುತ್ರಿ ಪೀವರಿಯನ್ನು ಅನುಗ್ರಹಿಸಿದನು. ಮಾನಸ ಎಂಬ ಪಿತೃಗಳ ಬೇರೆ ಒಂದು ಗಣವೂ ಉಂಟು. ಇವರು ವಶಿಷ್ಟ ಮಹಾಋಷಿಯ ಮಕ್ಕಳು. ಇದು ಮೂರ್ತಗಣ.

ಇವರೆಲ್ಲರು ಸಾಕಾರರು. ಈ ಧರ್ಮಮೂರ್ತಿಗಳು ಸ್ವರ್ಗದ ಮೇಲೆ ಇರುವ ಜ್ಯೋತಿರ್ಮಯ ಲೋಕಗಳಲ್ಲಿ ವಾಸಿಸುವವರು. ಭಕ್ತಿಯಿಂದ ಪಿತೃಗಳ ಶ್ರಾದ್ಧಾದಿಗಳನ್ನು ಮಾಡಿದ ಶೂದ್ರರೂ ಕೂಡ ಈ ದಿವ್ಯಲೋಕಗಳನ್ನು ಹೊಂದಿ ಸಕಲ ಭೋಗಗಳನ್ನು ಹೊಂದುವರು. ಬ್ರಾಹ್ಮಣರ ಬಗೆಗೆ ಹೇಳುವದೇನು ? ಈ ಮಾನಸ ಎಂಬ ಪಿತೃಗಣಕ್ಕೆ ಗೋ ಎಂಬ ಮಾನಸ ಪುತ್ರಿ. ಅವಳನ್ನು ಶುಕಾಚಾರ್ಯರಿಗೆ ಕೊಟ್ಟಿತ್ತು. ಅವಳಿಂದ ಸಾಧ್ಯ ಎಂಬ ದೇವಗಣದ ಕೀರ್ತಿಯು ಬೆಳೆಯಿತು.

ಸೌರಮಂಡಲದಲ್ಲಿ ಮರೀಚಿಗರ್ಭ ಎಂಬ ಲೋಕಗಳು ಇವೆ. ಅಲ್ಲಿ ಅಂಗಿರಸ ಮುನಿಯ ಮಕ್ಕಳಾದ ಹವಿಷ್ಮಂತ ಎಂಬ ಪಿತೃಗಣದವರು ವಾಸಿಸುತ್ತಾರೆ. ಪಂಚಜನ ಮಹಾರಾಜನ ಸೊಸೆಯೂ ಅಂಶುಮಂತನ ಮಡದಿಯೂ ಆದ ಯಶೋದೆಯು ಇವರ ಮಾನಸ ಕನ್ಯೆ. ಯಶೋದೆಯ ಮಗನೇ ದಿಲೀಪ. ಮೊಮ್ಮಗನೇ ಭಗೀರಥ. ಪಿತೃಕಾರ್ಯಮಾಡುವ ಕ್ಷತ್ರಿಯರು ಈ ಪಿತೃಗಳ ಲೋಕವನ್ನು ಸೇರುವರು. ಬಯಸಿದ ಸುಖ ಭೋಗಗಳನ್ನೆಲ್ಲ ಕೊಡುವ ಕಾಮದುಘ ಎಂಬ ಲೋಕಗಳಲ್ಲಿ ಸುಸ್ವಧ ಎಂಬ ಪಿತೃಗಳು ವಾಸಿಸುತ್ತಾರೆ. ಅವರು ಪುಲಹ ಋಷಿಯ ಸಂತತಿಯವರು. ವೈಶ್ಯರು ಅವರನ್ನು ಪೂಜಿಸುತ್ತಾರೆ. ನಹುಷ ರಾಜನ ಪತ್ನಿಯೂ ಯಯಾತಿ ರಾಜನ ತಾಯಿಯೂ ಆದ ವಿರಜೆಯು ಈ ಸುಸ್ವಧ ಪಿತೃಗಳ ಮಾನಸ ಪುತ್ರಿ. ಇವಳು ಅಷ್ಟಕಾ ಎಂಬ ಹೆಸರಿನಿಂದ ಪಿತೃಲೋಕದಲ್ಲಿ ಇದ್ದು ಅನಂತರ ಬ್ರಹ್ಮಲೋಕವನ್ನು ಸೇರುವಳು.

ಬ್ರಹ್ಮಾಂಡದ ಮೇಲ್ಗಡೆ ಮಾನಸ ಎಂಬ ಕೆಲವು ಲೋಕಗಳು ಇವೆ. ಅಲ್ಲಿ ಧರ್ಮಸ್ವರೂಪರಾದ ಸೋಮಪ ಎಂಬ ಪಿತೃಗಳು ನೆಲೆಸಿದ್ದಾರೆ. ಅವರೆಲ್ಲರೂ ಸ್ವಧಾದೇವಿಯಿಂದ ಹುಟ್ಟಿ ಪ್ರಜಾಪತಿ ಸ್ಥಾನವನ್ನು ಪಡೆದು ಸೃಷ್ಟ್ಯಾದಿ ಕಾರ್ಯಗಳನ್ನೆಲ್ಲಮಾಡಿ ಈಗ ಮಾನಸಲೋಕದಲ್ಲಿ ಭಗವಚ್ಚಿಂತನಮಾಡುತ್ತ ವಾಸಿಸಿರುವವರು. ಅವರ ಮಾನಸಪುತ್ರಿಯಾದ ನರ್ಮದೆಯು ಮಹಾನದಿಯ ರೂಪದಿಂದ ಜನರನ್ನೆಲ್ಲ ಉದ್ಧರಿಸುತ್ತ ಹರಿಯುತ್ತಿದ್ದಾಳೆ. ಸೃಷ್ಟಿಯ ಆದಿ ಕಾಲಗಳಲ್ಲಿ ಉತ್ಪನ್ನರಾಗುವ ಮನುಗಳು ಮತ್ತು ಪ್ರಜೆಗಳು ಆ ಪಿತೃದೇವತೆಗಳನ್ನು ಉದ್ದೇಶಿಸಿ ಕಾಲನಿರ್ಬಂಧವಿಲ್ಲದೆ ಪ್ರತಿದಿನವೂ ಶ್ರಾದ್ಧಮಾಡಿ ಅವರ ಅನುಗ್ರಹದಿಂದ ಒಳ್ಳೇ ಮಕ್ಕಳನ್ನು ಪಡೆಯುವವರು. ಆದಿ ಸೃಷ್ಟಿಯಲ್ಲಿಯೇ ಪಿತೃಶ್ರಾದ್ಧದ ವಿಧಿ ವಿಧಾನಗಳು ರೂಪಗೊಂಡಿವೆ.

ಪಿತೃಕಾರ್ಯಗಳಲ್ಲೆಲ್ಲ ಬೆಳ್ಳಿಯ ಪಾತ್ರೆಗಳನ್ನಾಗಲಿ ಕೊನೆಗೆ ಬೆಳ್ಳಿಗೆ ತಗಲಿಸಿದ ಪಾತ್ರೆಗಳನ್ನಾಗಲಿ ಉಪಯೋಗಿಸಬೇಕು. ಶ್ರಾದ್ಧದಲ್ಲಿ ಅಗ್ನಿ, ಸೋಮ, ಯಮ ಇವರ ತೃಪ್ತಿಗಾಗಿ ಹೋಮಮಾಡಬೇಕು. ಅಗ್ನಿ ಇಲ್ಲದಿದ್ದರೆ ಬ್ರಾಹ್ಮಣರ ಅಂಗೈಯಲ್ಲಿ ಅಥವಾ ನೀರಿನಲ್ಲಿ ಅಥವಾ ಗೋಶಾಲೆಯಲ್ಲಿ ಅಥವಾ ಯಾವದಾದರೂ ತೀರದಲ್ಲಿ ಈ ಕಾರ್ಯವನ್ನು ನೆರವೇರಿಸಬೇಕು. ಪಿತೃಗಳಿಗೆ ಆಕಾಶ ಹಾಗೂ ದಕ್ಷಿಣ ದಿಕ್ಕು ಪ್ರಶಸ್ತವಾದುದು. ಅಪಸವ್ಯ, ನೀರು, ಎಳ್ಳು, ದರ್ಭೆ, ಹಸುವಿನ ಹಾಲು,

ಸಿಹಿಪದಾರ್ಥ, ತಾಮ್ರ, ಜೇನುತುಪ್ಪ, ಕುಶ, ಸಾವೆ, ಭತ್ತ, ಗೋದಿ, ಹೆಸರು, ಕಬ್ಬು, ಬಿಳಿಹೂ, ತುಪ್ಪ ಇವೆಲ್ಲವೂ ಪಿತೃಗಳಿಗೆ ಪ್ರಿಯವಾದುದರಿಂದ ಶ್ರಾದ್ಧದಲ್ಲಿ ಉಪಯೋಗಿಸಲು ಅರ್ಹವಾಗಿವೆ. ಇದರಂತೆ ಪಿತೃಗಳಿಗೆ ಬೇಡವಾದ ಪದಾರ್ಥಗಳೂ ಕೆಲವುಂಟು. ಹಾಡುಕಡಲೆ, ಅವರೆ, ಅಲಸಂದಿ, ಕುಶಿಬಿ, ಬಿಲ್ವ, ಬೇವು, ಯಕ್ಕ, ಉಮ್ಮತ್ತ, ತಾವರೆ, ಆಡಿನ ಹಾಲು, ಹಿರಿಗಡಲೆ, ಬೇಲದ ಹಣ್ಣು, ಹಿಪ್ಪೆಎಣ್ಣೆ, ಅಗಸೆಯ ಸೊಪ್ಪು, ಮತ್ತಿ ಹೂ ಇವೆಲ್ಲವೂ ಪಿತೃಗಳಿಗೆ ಬೇಡವಾದ ವಸ್ತುಗಳು. ಇವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಕೂಡದು. ಶ್ರಾದ್ಧದಿಂದ ಪಿತೃಗಳನ್ನು ತೃಪ್ತಿಗೊಳಿಸಿದರೆ ಅವರೂ ಇವರಿಗೆ ತುಷ್ಟಿಪುಷ್ಟಿಗಳನ್ನು ಕರುಣಿಸುವರು. ದೇವಕಾರ್ಯಕ್ಕಿಂತ ಪಿತೃಕಾರ್ಯ ಹೆಚ್ಚಿನದು. ಪಿತೃಗಳು ದೇವತೆಗಳಿಗಿಂತಲೂ ಬೇಗ ಪ್ರಸನ್ನರಾಗುವರು. ಭಕ್ತರಿಗೆ ಸುಖವನ್ನು ಕೊಡುವರು. ಹವಿಷ್ಮಂತ ಪಿತೃಗಳ ಆಧಿಪತ್ಯದಲ್ಲಿ ಸೂರ್ಯನು ಶ್ರಾದ್ಧಾಭಿಮಾನಿಯಾದ ದೇವತೆಯಾಗಿರುವನು. ಪುಣ್ಯಕರವಾದ ಈ ಪಿತೃವಂಶ ವರ್ಣನೆಯನ್ನು ನಿತ್ಯವೂ ಓದಿದರೆ ಮತ್ತು ಕೇಳಿದರೆ ಆಯುಷ್ಯವು ಅಭಿವೃದ್ಧಿಯಾಗುವುದು. ಪುಣ್ಯವೂ ಪ್ರಾಪ್ತವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನಾರನೆ ಅಧ್ಯಾಯ ಮುಗಿದುದು*



## ಶ್ರಾದ್ಧದ ಕಾಲ ಮತ್ತು ಪಾತ್ರ

ಅಧ್ಯಾಯ - ೧೭

**ಸೂತ ಉವಾಚ :**

**ಶ್ರುತ್ವೈತತ್ಸರ್ವಮಖಿಲಂ ಮನುಃ ಪಪ್ರಚ್ಛ ಕೇಶವಮ್**
**ಶ್ರಾದ್ಧಕಾಲಂ ಚ ವಿವಿಧಂ ಶ್ರಾದ್ಧಭೇದಂ ತಥೈವ ಚ ॥**

**ಸೂತ** :- ಇದೆಲ್ಲ ಪಿತೃವಂಶ ವಿಸ್ತಾರವನ್ನು ಮತ್ಸ್ಯರೂಪಿ ಮಧುಸೂದನನ ಮುಖದಿಂದ ಕೇಳಿದ ಮನು ಮಹಾರಾಜನು ಬೇರೆಬೇರೆ ತರಹದ ಶ್ರಾದ್ಧದ ಕಾಲ ಹಾಗೂ ಶ್ರಾದ್ಧದ ಪ್ರಭೇದಗಳ ಬಗೆಗೆ ಪ್ರಶ್ನೆಮಾಡಿದನು. ಶ್ರಾದ್ಧದಲ್ಲಿ ಯಾರಿಗೆ ಊಟಕ್ಕೆ ಹಾಕಬೇಕು ಮತ್ತು ಯಾರಿಗೆ ಹಾಕಬಾರದು ? ದಿವಸದ ಯಾವ ಭಾಗದಲ್ಲಿ ಶ್ರಾದ್ಧವನ್ನು ಆಚರಿಸಬೇಕು ? ಯಾರಿಗೆ ದಾನ ಕೊಡಬೇಕು ? ಅದರ ವಿಧಿ ಏನು ? ವಿಧಾನ ಯಾವುದು ? ಪಿತೃಗಳ ಪ್ರೀತಿಯಾಗುವ ಬಗೆ ಯಾವುದು?

**ಮತ್ಸ್ಯ** :- ಪಿತೃಗಳಿಗೆ ನಿಜವಾದ ಪ್ರೀತಿಯನ್ನು ಉಂಟುಮಾಡಬೇಕೆಂದಿದ್ದರೆ, ಪ್ರತಿದಿನವೂ ಶ್ರಾದ್ಧಮಾಡಬೇಕು. ಅದು ಅನ್ನದಿಂದಾದರೆ ಸರಿ. ಇಲ್ಲದಿದ್ದರೆ ಹಾಲು, ಗಡ್ಡೆಗೆಣಸು, ಹಣ್ಣು, ಕೊನೆಗೆ ನೀರಿನಿಂದಲಾದರೂ ಪ್ರತಿನಿತ್ಯ ಪಿತೃತರ್ಪಣ ಮಾಡಬೇಕು. ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಶ್ರಾದ್ಧ ಮೂರುಬಗೆಯಾಗಿದೆ. ಅರ್ಘ್ಯ ಆವಾಹನಗಳಿಲ್ಲದೇ ವಿಶ್ವೇದೇವತೆಗಳನ್ನು ವರಣಮಾಡದೆ ನಡೆಸುವ ಶ್ರಾದ್ಧ ನಿತ್ಯಶ್ರಾದ್ಧ ಎನಿಸುವದು. ಅಷ್ಟಮಿ, ಚತುರ್ದಶಿ, ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ

ಮಾಡುವ ಶ್ರಾದ್ಧ, ಪಾರ್ವಣ ಶ್ರಾದ್ಧ. ಈ ಪಾರ್ವಣ ಶ್ರಾದ್ಧಕ್ಕೆ ವಿಶಿಷ್ಟ ಶಿಷ್ಟಬ್ರಾಹ್ಮಣರನ್ನು ಮಾತ್ರ ನಿಮಂತ್ರಿಸಬೇಕು.

ಪಂಚಾಗ್ನಿ ಬ್ರಾಹ್ಮಣನು ಇದಕ್ಕೆ ಅರ್ಹನಾಗಿದ್ದಾನೆ. ದಕ್ಷಿಣಾ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ ಎಂಬ ಪಂಚಾಗ್ನಿಗಳಲ್ಲಿ ಹೋಮಮಾಡುವವನು ಪಂಚಾಗ್ನಿ ಬ್ರಾಹ್ಮಣ ಎನಿಸುವನು. ಇಂಥ ಬ್ರಾಹ್ಮಣನೂ, ಅಧ್ಯಯನ ಮುಗಿಸಿದ ಪ್ರೌಢ ವಿದ್ಯಾರ್ಥಿಯೂ ತ್ರಿಸುಪರ್ಣ, ಓದಿದವನೂ, ವೇದದ ಆರೂ ಅಂಗ ವಿದ್ಯೆಗಳನ್ನು ಕಲಿತವನೂ, ವೇದಾಧ್ಯಾಯಿಯೂ, ಮಂತ್ರಬಲ್ಲವನೂ, ಕುಲೀನನೂ, ಪುರಾಣತಿಳಿದವನೂ, ಧರ್ಮಶಾಸ್ತ್ರ ಅರಿತವನೂ, ಶಿವಭಕ್ತನೂ, ಪಿತೃಭಕ್ತನೂ, ಹರಿಭಕ್ತನೂ, ಶಾಂತನೂ, ಸುಶೀಲನೂ, ಬ್ರಾಹ್ಮಣ ಪ್ರೇಮಿಯೂ, ಜಿತೇಂದ್ರಿಯನೂ ಇದಕ್ಕೆ ಅರ್ಹ. ಇಂಥ ಬ್ರಾಹ್ಮಣನನ್ನೇ ಪಾರ್ವಣಶ್ರಾದ್ಧಕ್ಕೆ ನಿಮಂತ್ರಿಸಬೇಕು.

ಮಗಳಮಗ, ಗುರುಪುತ್ರ, ಗೆಳೆಯ, ಅಳಿಯ, ಗುರು, ಜ್ಞಾನಿ, ಸೋದರ ಮಾವ, ಬಂಧು, ಪುರೋಹಿತ, ಆಚಾರ್ಯ, ಸೋಮಯಾಜಿ, ಸೋಮಪಾನ ಮಾಡಿದವ ಇವರನ್ನು ಪ್ರಯತ್ನ ಪೂರ್ವಕ ಹುಡುಕಿ ತಂದು ಶ್ರಾದ್ಧಕ್ಕೆ ಕೂಡಿಸಬೇಕು. ಅದರಲ್ಲಿ ವ್ಯಾಕರಣ, ಮೀಮಾಂಸಾ, ಸಾಮವೇದ ಅಥವಾ ಉಳಿದ ಯಾವುದೇ ವೇದ ಶಾಸ್ತ್ರಪಂಡಿತರು ಶ್ರಾದ್ಧಕ್ಕೆ ಅತ್ಯಂತ ಅರ್ಹರು. ಮತ್ತೆ ಅದರಲ್ಲಿಯೂ ಬ್ರಹ್ಮಮೀಮಾಂಸಶಾಸ್ತ್ರ ಓದಿ ಬ್ರಹ್ಮಜ್ಞಾನ ಮಾಡಿಕೊಂಡ ಮನುಷ್ಯ ಸರ್ವಶ್ರೇಷ್ಠನೆನಿಸುವನು. ಶ್ರಾದ್ಧವಿಧಿಗೆ ಹೇಗಾದರೂ ಮಾಡಿ ಇಂಥವರನ್ನು ಕರೆ ತಂದು ಶ್ರಾದ್ಧದಲ್ಲಿ ಊಟಕ್ಕೆ ಹಾಕಬೇಕು. ಇನ್ನು ಶ್ರಾದ್ಧದಲ್ಲಿ ನಿಷಿದ್ಧ ಪುರುಷರು ಯಾರು ಎಂಬುದನ್ನು ಹೇಳುತ್ತೇನೆ ಕೇಳು.

ಪತಿತ, ಕಲಂಕಿತ, ನಪುಂಸಕ, ಚಾಡಿಕೋರ, ಅಂಗಹೀನ, ರೋಗಿಷ್ಠ, ವ್ಯಭಿಚಾರದಿಂದ ಹುಟ್ಟಿದವ, ಅಣ್ಣನಿಗಿಂತ ಮೊದಲು ಮದುವೆಯಾದವ, ಹುಚ್ಚ, ದಾಂಭಿಕ, ಕಪಟ, ಕೃತಘ್ನ, ನಾಸ್ತಿಕ, ಮ್ಲೇಚ್ಛ ದೇಶದಲ್ಲಿ ವಾಸಿಸುವವ, ಕ್ರೂರ, ಅನಾಚಾರಿ ಮುಂತಾದವರನ್ನು ಶ್ರಾದ್ಧಕ್ಕೆ ನಿಮಂತ್ರಿಸಕೂಡದು. ಶ್ರಾದ್ಧಕ್ಕೆ ಬ್ರಾಹ್ಮಣರನ್ನು ಮುನ್ನದಿನ ಹಾಗೂ ಶ್ರಾದ್ಧದದಿನ ಎರಡೂ ದಿನಗಳಲ್ಲಿ ನಿಮಂತ್ರಿಸಬೇಕು. ಹೇಳುವಾಗ ಅವರ ಮೊಣಕಾಲವನ್ನು ಹಿಡಿದು ''ನೀವು ನಮ್ಮಲ್ಲಿ ಶ್ರಾದ್ಧಕ್ಕೆ ದಯಮಾಡಿಸಬೇಕು. ಕೋಪರಹಿತರು ವೇದ ಪಾರಾಯಣಪರರು ಆಗಿರಬೇಕು. ನಾನು ಅದರಂತೆ ಪಾರಾಯಣ ಪರಾಯಣನಾಗುವೆನು'' ಎಂದು ಪ್ರಾರ್ಥಿಸಬೇಕು.

ಆಹಿತಾಗ್ನಿಯು ಶ್ರಾದ್ಧಮಾಡುವಾಗ ಅಮಾವಾಸ್ಯೆಯ ದಿನ ತರ್ಪಣ ರೂಪವಾದ, ಪಿತೃಯಜ್ಞವನ್ನು ಮೊದಲುಮಾಡಿ ಆನಂತರ ಅನ್ವಾಹಾರ್ಯಕ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧವನ್ನು ಹಸುಕಟ್ಟುವ ಸ್ಥಳದಲ್ಲಿ, ಇಲ್ಲವೆ ಜಲಾಶಯದ ಬಳಿಯಲ್ಲಿ ಅಥವಾ ದಕ್ಷಿಣದ ಕಡೆಗೆ ತುಸು ಇಳಕಲಾದ ಕಡೆ ಶ್ರಾದ್ಧವನ್ನು ಮಾಡಬೇಕು. ದರ್ವಿ, ಜಲಪಾತ್ರ, ಕಂಚು, ಸಮಿಧ, ದರ್ಭೆ, ಎಳ್ಳು, ಪಾತ್ರೆಗಳು, ಗಂಧ, ಧೂಪ, ವಸ್ತ್ರ ಮುಂತಾದ ಸಾಮುಗ್ರಿಗಳನ್ನು ದಕ್ಷಿಣದಲ್ಲಿ ತಂದು ಇರಿಸಿಕೊಳ್ಳಬೇಕು.

ಮನೆಯ ಮುಂದೆ ಗೋಮಯದಿಂದ ಸಾರಿಸಿದ ನೆಲದಲ್ಲಿ ಗೋಮೂತ್ರದಿಂದ ಮಂಡಲಮಾಡಿ ಬ್ರಾಹ್ಮಣರ ಪಾದಗಳನ್ನು ಆದರದಿಂದ ತೊಳೆಯಬೇಕು. ಆಚಮನಮಾಡಿ ದರ್ಭಾಸನಗಳಲ್ಲಿ ಬ್ರಾಹ್ಮಣರನ್ನು ಕೂಡಿಸಬೇಕು. ದೇವಸ್ಥಾನದಲ್ಲಿ ಇಬ್ಬರು ಪಿತೃಸ್ಥಾನದಲ್ಲಿ ಮೂವರು. ಇಲ್ಲದಿದ್ದರೆ ಎರಡೂ ಸ್ಥಾನದಲ್ಲಿ ಒಬ್ಬೊಬ್ಬ ಬ್ರಾಹ್ಮಣರನ್ನಾದರೂ ಭೋಜನಕ್ಕೆ ವರಿಸಬೇಕು. ಧನಿಕನಾಗಿದ್ದರೂ ಶ್ರಾದ್ಧದಲ್ಲಿ ಹೆಚ್ಚು ಜನರನ್ನು ಆಮಂತ್ರಿಸಬಾರದು. ''ಶ್ರಾದ್ಧೇ ಕುರ್ಯಾನ್ನ ವಿಸ್ತರಮ್'' ಶ್ರಾದ್ಧ ವಿಸ್ತಾರ ಮಾಡಬಾರದು ಎಂದು ಹೇಳಿದ್ದಾರೆ. ಯಾಕಂದರೆ ಯೋಗ್ಯ ಜನರು ಸಿಗುವದಿಲ್ಲ.

ವಿಶ್ವೇದೇವರಿಂದ ಪ್ರಾರಂಭಿಸಿ ಬ್ರಾಹ್ಮಣರ ಅಪ್ಪಣೆ ಪಡೆದು ಗೃಹ್ಯ ಸೂತ್ರದಲ್ಲಿ ಹೇಳಿದಂತೆ ಅಗ್ನಿಯಲ್ಲಿ ಹೋಮಮಾಡಬೇಕು. ಆಹಿತಾಗ್ನಿ ಬ್ರಾಹ್ಮಣನು ಅಗ್ನಿ, ಸೋಮ, ಯಮ ಇವರ ತೃಪ್ತಿಗಾಗಿ ದಕ್ಷಿಣಾಗ್ನಿಯಲ್ಲಿ ಹೋಮಮಾಡಬೇಕು. ಏಕಾಗ್ನಿಯಾಗಿದ್ದರೆ ತನ್ನ ಅಗ್ನಿಯಲ್ಲಿಯೇ ನಡೆಸಬಹುದು. ಪರಿಷೇಚನಾದಿ ಕಾರ್ಯವನ್ನು ಉಪವೀತದಿಂದಲೂ ಉಳಿದುದನ್ನೆಲ್ಲ ಪ್ರಾಚೀನಾವೀತದಿಂದಲೂ ಮಾಡಬೇಕು.

ಆ ಹವಿಶ್ಶೇಷದಿಂದ ಆರು ಪಿಂಡಗಳನ್ನು ಮಾಡಿ ಅನಂತರ ಎಡಗೈಯಿಂದ ಜಲಪಾತ್ರದಲ್ಲಿಯ ನೀರನ್ನು ಪಿತೃತೀರ್ಥದಲ್ಲಿ ಬಿಡಬೇಕು. ದಕ್ಷಿಣಕ್ಕೆ ಮುಖಮಾಡಿ ಎಡಮಂಡಿಯೂರಿ ಕೈಯಲ್ಲಿ ಧರ್ಬೆ ಇಟ್ಟು ಪಿಂಡ ದಾನದ ಸ್ಥಳದಲ್ಲಿ ಗೆರೆ ಎಳೆದು ದರ್ವಿಯಿಂದ ನೆಲದಲ್ಲಿ ಹಾಸಿದ ದರ್ಭೆಗಳ ಮೇಲೆ ಮಾರ್ಜನ ಮಾಡಬೇಕು. ಒಂದೊಂದಾಗಿ ಪಿಂಡಗಳನ್ನು ಎತ್ತಿ ಪಿತೃಗಳ ಹೆಸರನ್ನು ಗೋತ್ರವನ್ನು ಉಚ್ಚರಿಸಿ ದರ್ಭೆಗಳ ಮೇಲೆ ಕ್ರಮವಾಗಿ ಇಡಬೇಕು. ಪಿತೃಗಳನ್ನು ಅನುಸರಿಸಿ ಬರುವವರಿಗಾಗಿ ಕೈಯನ್ನು ಆ ದರ್ಭೆಗಳ ಮೇಲೆ ಜಾಡಿಸಬೇಕು. ಅವರಿಗೆ ಲೇಪಭಾಗಿಗಳು ಎಂದು ಹೆಸರು. ನಾಮಗೋತ್ರಗಳನ್ನು ಉಚ್ಚರಿಸುತ್ತಾ ಪಿಂಡಗಳ ಮೇಲೆ ನೀರನ್ನು ಪ್ರೋಕ್ಷಿಸಿ ಉದ್ದಿಷ್ಟರಾದ ಪಿತೃಗಳನ್ನು ಹೂ, ಗಂಧ, ನಿರ್ಮಾಲ್ಯ ಧೂಪ, ದೀಪಾದಿಗಳಿಂದ ಪೂಜಿಸಿ ನಮಸ್ಕಾರಮಾಡಬೇಕು. ವೇದಮಂತ್ರಗಳಿಂದ ಆವಾಹನಾದಿ ಸರ್ವೋಪಚಾರಗಳನ್ನು ಸಲ್ಲಿಸಬೇಕು. ಅಥರ್ವಣ ಶಾಖೆಯವರು ಒಂದು ಸೌಟನಿಂದ ಒಂದು ಬಾರಿ ನಿರ್ವಾಪಮಾಡಬೇಕು. ಆ ನಂತರ ಪಿತೃಪತ್ನಿಯರಿಗೆ ಪಿಂಡಗಳನ್ನು ನಡುವೆ ದರ್ಭೆಗಳ ಮೇಲೆ ಇಟ್ಟು ಮೇಲೆ ಹೇಳಿದಂತೆಯೇ ಆವಾಹನ ವಿಸರ್ಜನಾದಿಗಳನ್ನು ಮಾಡಬೇಕು.

ಅನಂತರ ಎಲ್ಲ ಪಿಂಡಗಳಿಂದ ಕ್ರಮವಾಗಿ ಸ್ವಲ್ಪ ಸ್ವಲ್ಪ ಭಾಗವನ್ನು ತೆಗೆದುಕೊಂಡು ಮೊದಲು ಒಬ್ಬ ಬ್ರಾಹ್ಮಣನಿಗೆ ತಿನ್ನಲಿಕ್ಕೆ ಕೊಡಬೇಕು. ಪಿಂಡಗಳಿಂದ ತೆಗೆದ ಅನ್ನ ಭಾಗವನ್ನು ಬ್ರಾಹ್ಮಣರು ಭುಂಜಿಸುವ ಕಾರಣ ಅಮಾವಾಸ್ಯೆಯ ದಿನ ಮಾಡುವ ಈ ಶ್ರಾದ್ಧಕ್ಕೆ ಅನ್ವಾಹಾರ್ಯ ಶ್ರಾದ್ಧ ಎಂದು ಹೆಸರು. ಬ್ರಾಹ್ಮಣರ ಹಸ್ತದಲ್ಲಿ ಪವಿತ್ರ ಸಹಿತವಾಗಿ ಎಳ್ಳು ನೀರು ಕೊಟ್ಟು ಪಿತೃಗಳಿಗೆ ಸ್ವಧಾ ಎಂದು ಉಚ್ಚರಿಸಿ ಆ ಪಿಂಡ ಭಾಗವನ್ನು ಕೊಡಬೇಕು. ಶ್ರಾದ್ಧ ಮಾಡುವವನು ಕೋಪಾದಿಗಳನ್ನು

ಮಾಡದೆ ಹರಿಸ್ಮರಣೆಮಾಡುತ್ತ ಪರಿಶುದ್ಧವೂ ಮಧುರವೂ ಆದ ಅನ್ನಾದಿ ಪದಾರ್ಥಗಳನ್ನು ನೀಡಬೇಕು. ಬ್ರಾಹ್ಮಣರು ತೃಪ್ತರಾದ ಬಳಿಕ ಸಂಸ್ಕಾರಗಳಿಲ್ಲದೆ ಮೃತರಾದ ಅನಾಥರಿಗೆ, ಸಂತತಿ ಇಲ್ಲದ ಕುಲಸ್ತ್ರೀಯರಿಗೆ ಮೊದಲಾದವರಿಗಾಗಿ ಜಲಸಹಿತವಾದ ಅನ್ನವನ್ನು ನೆಲದ ಮೇಲೆ ಇಟ್ಟು ನೀರು ಬಿಡಬೇಕು. ಭೋಜನವಾದ ಬಳಿಕ ದ್ವಿಜರು ಕೈಬಾಯಿ ತೊಳೆದು ಆಚಮನಮಾಡಿದ ಬಳಿಕ ಕರಶುದ್ಧಿಗಾಗಿ ಮತ್ತೆ ಅವರಿಗೆ ನೀರು ಕೊಟ್ಟು ತೀರ್ಥ, ನಿರ್ಮಾಲ್ಯ, ಹೂ ಅಕ್ಷತೆಗಳನ್ನು ಕೊಡಬೇಕು. ಅನಂತರ ಸ್ವಸ್ತಿವಾಚನ ಮಾಡಿಸಿ ಉಪಚಾರ ಹೇಳಿ ಪಿಂಡೋದ್ವಾಸನವನ್ನು ಮಾಡಬೇಕು. ವಿಧಿ ಪೂರ್ವಕವಾಗಿ ಮಾಡಿದ ಶ್ರಾದ್ಧಕರ್ಮವನ್ನು ಜನಾರ್ದನನಿಗೆ ಸಮರ್ಪಿಸಬೇಕು. ಇಲ್ಲದಿದ್ದರೆ ಶ್ರಾದ್ಧಘಾತವಾಗುವದು. ತರುವಾಯ ಬ್ರಾಹ್ಮಣರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನುಮಾಡಿ ಬೀಳ್ಕೊಡಬೇಕು. ಸ್ವಲ್ಪ ದಕ್ಷಿಣ ದಿಕ್ಕಿನ ಕಡೆಗೆ ಹೋಗಿ ಪಿತೃಗಳನ್ನು ಹೀಗೆ ಬೇಡಿಕೊಳ್ಳಬೇಕು.

''ನಮಗೆ ದಾನಿಗಳ ಸಂಖ್ಯೆಯು ಬೆಳೆಯಲಿ, ಜ್ಞಾನವು ಸಂತಾನವು ಅಭಿವೃದ್ಧಿಯಾಗಲಿ, ದೇವ ಬ್ರಾಹ್ಮಣರಲ್ಲಿ ನಮಗೆ ಶ್ರದ್ಧೆಯು ಹೆಚ್ಚಾಗಲಿ. ನಮ್ಮಲ್ಲಿ ಹೆಚ್ಚು ಹೆಚ್ಚು ಅನ್ನವಿರಲಿ. ಬಹಳಷ್ಟು ಅತಿಥಿಗಳು ಬರಲಿ. ಯಾಚಕರು ನಮ್ಮಲ್ಲಿ ಬಂದು ಬೇಡಲಿ, ಆದರೆ ನಾವು ಮಾತ್ರ ಯಾರನ್ನೂ ಯಾಚಿಸುವದು ಬೇಡ'' ಎಂದು ಕೇಳಿಕೊಳ್ಳಬೇಕು. ಅದಕ್ಕೆ ಆ ಬ್ರಾಹ್ಮಣರು ' ಏತದಸ್ತು ' ಅದು ಹಾಗೇ ಆಗಲಿ ಎಂದು ಉತ್ತರ ಕೊಡುವರು. ಇದೇ ಪರ್ವಕಾಲದಲ್ಲಿ ಮಾಡಬೇಕಾದ ಅನ್ವಾಹಾರ್ಯ ಎಂಬ ಶ್ರಾದ್ಧದ ವಿಧಿ. ಅಮಾವಾಸ್ಯೆಯಂತೆಯೇ ಉಳಿದ ಪರ್ವಕಾಲಗಳಲ್ಲಿಯೂ ಈ ಅನ್ವಾಹಾರ್ಯ ಶ್ರಾದ್ಧವನ್ನು ಮಾಡಬೇಕು. ಪಿಂಡಗಳನ್ನು ಆಕಳು, ಆಡು ಅಥವಾ ಬ್ರಾಹ್ಮಣರಿಗೆ ಕೊಡಬೇಕು. ಬೆಂಕಿಯಲ್ಲಾಗಲಿ ನೀರಿನಲ್ಲಾಗಲೀ ಹಾಕಬಹುದು. ಇಲ್ಲದಿದ್ದರೆ ಪಕ್ಷಿಗಳಿಗಾದರೂ ತಿನ್ನಿಸಬಹುದು. ನಡುವಿನ ಪಿಂಡವನ್ನು ಯಜಮಾನನ ಮಡದಿಯು ಭಕ್ತಿಯಿಂದ ತಿನ್ನಬೇಕು. ಅದರಿಂದ ಗರ್ಭಧಾರಣವಾಗಿ ಸಂತಾನ ಅಭಿವೃದ್ಧಿಯಾಗುವದು. ಬ್ರಾಹ್ಮಣರನ್ನು ಬೀಳ್ಕೊಡುವವರೆಗೆ ಊಟದ ಎಲೆಗಳನ್ನು ಎತ್ತಬಾರದು. ಪಿತೃಕಾರ್ಯ ಮುಗಿದ ಬಳಿಕ ವೈಶ್ವದೇವಮಾಡಿ ಬಾಂಧವರೊಡನೆ ಯಜಮಾನನು ಪಿತೃಶೇಷವನ್ನು ಊಟ ಮಾಡಬೇಕು. ಶ್ರಾದ್ಧ ಮಾಡಿದವನು ಅಂದು ಎರಡನೇ ಸಲ ಊಟ ಮಾಡಬಾರದು. ಅದರಂತೆ ಅಂದು ಪ್ರಯಾಣ, ವಾಹನ ಏರುವದು, ಹೆಚ್ಚಿನ ಶ್ರಮದ ಕೆಲಸ, ಸ್ತ್ರೀಸಂಗ, ವೇದಾಧ್ಯಯನ, ಕಲಹ, ಕೋಪ, ಹಗಲುನಿದ್ರೆ ಮುಂತಾದವುಗಳನ್ನು ಮಾಡದೆ ಇರಬೇಕು. ಕೃಷ್ಣಪಕ್ಷಗಳಲ್ಲಿಯೂ ಸೂರ್ಯನು ಕನ್ಯಾ, ಕುಂಭ ಮತ್ತು ವೃಷಭ ರಾಶಿಗಳಲ್ಲಿ ಇದ್ದಾಗಲೂ ಮತ್ತು ಶಾಸ್ತ್ರೋಕ್ತ ಸಂದರ್ಭಗಳಲ್ಲಿಯೂ ಇಲ್ಲಿ ಹೇಳಿದಂತೆ ಶ್ರಾದ್ಧವನ್ನು ಮಾಡಬೇಕು. ಸಪಿಂಡೀಕರಣಾನಂತರ ನಡೆಸಬೇಕಾದ ಶ್ರಾದ್ಧದ ವಿಧಿ ಇದು ಇರುತ್ತದೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನೇಳನೆಯ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೧೮

**ಸೂತ ಉವಾಚ :**

**ಅತಃಪರಂ ಪ್ರವಕ್ಷ್ಯಾಮಿ ವಿಷ್ಣುನಾ ಯದುದೀರಿತಮ್**
**ಶ್ರಾದ್ಧಂ ಸಾಧಾರಣಂ ನಾಮ ಭುಕ್ತಿ ಮುಕ್ತಿ ಫಲ ಪ್ರದಮ್ ॥**

**ಸೂತ :-** ಮತ್ಸ್ಯರೂಪಿಯಾದ ಶ್ರೀ ವಿಷ್ಣುವು ಮನುಮಹಾರಾಜನಿಗೆ ತಿಳಿಸಿ ಹೇಳಿದ ಸಾಧಾರಣ ಶ್ರಾದ್ಧದ ವಿಷಯವನ್ನು ನಿಮಗೆ ಹೇಳುತ್ತೇನೆ. ಯಾಕೆಂದರೆ ಅದು ಸ್ವರ್ಗಾದಿ ಸೌಖ್ಯವನ್ನು ಮೋಕ್ಷವನ್ನು ಕೊಡುತ್ತದೆ. ಶ್ರಾದ್ಧಮಾಡಲು ಪ್ರಶಸ್ತವಾದ ತಿಥಿಗಳು ಮುಂದೆ ಹೇಳಿದಂತೆ ಇರುತ್ತವೆ. ಉತ್ತರಾಯಣ, ದಕ್ಷಿಣಾಯಣ, ಪುಣ್ಯದಿನಗಳು, ಮೇಷ, ತುಲಾ, ಸಂಕ್ರಾಂತಿ, ಸಾಮಾನ್ಯ ಸಂಕ್ರಮಣ, ಅಮಾವಾಸಿ, ಕೃಷ್ಣಅಷ್ಟಮಿ, ಆರ್ದ್ರಾ, ಮಘಾ, ರೋಹಿಣೀ ನಕ್ಷತ್ರಗಳು. ಪಕ್ಷಮಾಸ, ವ್ಯತೀಪಾತ, ವೈಧೃತಿ, ವೈಶಾಖ ತದಿಗೆ, ಕಾರ್ತಿಕ ನವಮಿ, ಭಾದ್ರಪದ ತ್ರಯೋದಶಿ ದಿನಗಳಲ್ಲಿ ಮಾಡಿದ ಶ್ರಾದ್ಧವು ಅಕ್ಷಯಪುಣ್ಯಫಲವನ್ನು ಕೊಡುವದು. ಮನ್ವಾದಿ ದಿನಗಳಲ್ಲಿಯೂ ಆಸ್ತಿಕರು ಶ್ರಾದ್ಧ ಮಾಡಬೇಕು. ಆಶ್ವೀನ ಶುದ್ಧ ನವಮಿ, ಕಾರ್ತಿಕಶುದ್ಧ ದ್ವಾದಶಿ, ಚೈತ್ರ, ಭಾದ್ರ ಮಾಸಗಳ ತೃತೀಯಾ ತಿಥಿ, ಫಾಲ್ಗುಣ ಅಮಾವಾಸ್ಯೆ, ಆಷಾಢ ದಶಿಮಿ, ಮಾಘಸಪ್ತಮಿ, ಶ್ರಾವಣ ಕೃಷ್ಣ ಅಷ್ಟಮಿ, ಆಷಾಢ, ಕಾರ್ತಿಕ, ಫಾಲ್ಗುಣ, ಚೈತ್ರ, ಜ್ಯೇಷ್ಠ ಹುಣ್ಣಿಮೆಗಳಲ್ಲಿ ಮಾಡಿದ ಶ್ರಾದ್ಧ ಕಾರ್ಯವು ಅನಂತಪುಣ್ಯಫಲವನ್ನು ನೀಡುವದು.

ಮಾಘ ಶುಕ್ಲ ಸಪ್ತಮಿದಿನ ರವಿಯು ಬೇರೆ ರಥವನ್ನು ಏರುವನು. ಅದಕ್ಕೆ ರಥಸಪ್ತಮೀ ಎಂದು ಹೆಸರು, ಅದನ್ನು ಮನ್ವಾದಿ ಎಂದು ಕರೆಯುತ್ತಾರೆ. ಅಂದು ಪಿತೃಗಳಿಗೆ ಎಳ್ಳು ಸಹಿತ ನೀರಿನಿಂದ ತರ್ಪಣ ಕೊಡಬೇಕು. ಅದಕ್ಕೆ ಸಾವಿರ ವರ್ಷ ಶ್ರಾದ್ಧಮಾಡಿದ ಫಲ. ವೈಶಾಖ ಹುಣ್ಣಿಮೆ ಗ್ರಹಣ ಕಾಲ ಹಾಗೂ ಪಕ್ಷಮಾಸಗಳಲ್ಲಿ ತೀರ್ಥಸ್ಥಳ, ಗೋವುಕಟ್ಟುವಕೊಟ್ಟಿಗೆ, ಮನೆ, ಉದ್ಯಾನಗಳಲ್ಲಿ ನೆಲವನ್ನು ಗೋಮಯದಿಂದ ಸಾರಿಸಿ ಶ್ರಾದ್ಧಮಾಡಬೇಕು. ವಿಶ್ವೇದೇವತೆಗಳಿಗೆ ಆಸನಕೊಟ್ಟು, ಗಂಧ ಹೂವುಗಳಿಂದ ಹಾಗೂ ಅಕ್ಷತೆಗಳಿಂದ ಪೂಜಿಸಿ, ಪಾತ್ರೆಗಳಲ್ಲಿ ದರ್ಭೆಹಾಕಿ, 'ಶನ್ನೋದೇವೀ' ಮಂತ್ರದಿಂದ ನೀರನ್ನು ಹಾಕಬೇಕು. ''ಯವೋऽಸಿ'' ಎಂಬ ಮಂತ್ರದಿಂದ ಅಕ್ಕೀಕಾಳು ಹಾಕಬೇಕು. 'ವಿಶ್ವೇದೇವಾಸ ' ಎಂಬ ಎರಡು ಮಂತ್ರ ಹೇಳಿ ಬ್ರಾಹ್ಮಣರಲ್ಲಿ ಆವಾಹನೆಮಾಡಿ ಯವಾಕ್ಷತೆಗಳನ್ನು ಎರಚಬೇಕು. ಅನಂತರ ಗಂಧಹೂವುಗಳಿಂದ ಅಲಂಕರಿಸಿ 'ಯಾದಿವ್ಯಾ' ಎಂಬ ಮಂತ್ರದಿಂದ ಅರ್ಘ್ಯ ಕೊಡಬೇಕು. ಅನಂತರ ಅವರ ಅಪ್ಪಣೆಯಿಂದ ಪಿತೃಕಾರ್ಯವನ್ನು ಶುರುಮಾಡಬೇಕು.

ಮೊದಲು ದರ್ಭಾಸನಹಾಕಿ ಅದರ ಮೇಲೆ ಮೂರು ಪಾತ್ರೆಗಳನ್ನು ಇಟ್ಟು 'ಶನ್ನೋದೇವಿ' ಎಂಬ ಮಂತ್ರದಿಂದ ನೀರು ತುಂಬಬೇಕು. ' ತಿಲೋಸಿ ' ಮಂತ್ರದಿಂದ ಎಳ್ಳುಹಾಕಿ ಹೂವು ತುಳಸಿ ಗಂಧಾದಿಗಳನ್ನು ಅರ್ಘ್ಯಪಾತ್ರೆಯಲ್ಲಿ ಹಾಕಬೇಕು. ಅರ್ಘ್ಯಪಾತ್ರೆಯು ಕಟ್ಟಿಗೆ, ಎಲೆ, ಶಂಖ, ಚಿಪ್ಪು, ಶಂಖವಟಿ, ಬೆಳ್ಳಿ ಅಥವಾ ಬಂಗಾರ ಇವುಗಳಲ್ಲಿ ಯಾವದಾದರೂ ಒಂದರಿಂದ ನಿರ್ಮಿತವಾದದ್ದಿರಬೇಕು. ಬೆಳ್ಳಿಯು ಪಿತೃಗಳಿಗೆ ಪ್ರಿಯ ವಸ್ತು. ಬೆಳ್ಳಿಯ ಪಾತ್ರೆಯಿಂದ ಪಿತೃತರ್ಪಣ ಮಾಡಿದರೆ ಅಕ್ಷಯ, ಫಲ, ಅರ್ಘ್ಯ, ಪಿಂಡ, ಭೋಜನ ಮುಂತಾದ ಪಿತೃಕಾರ್ಯಗಳಿಗೆ ಬೆಳ್ಳಿಯ ಪಾತ್ರೆಯೇ ಶ್ರೇಷ್ಠ.

**''ಶಿವನೇತ್ರೋದ್ಭವಂ ಯಸ್ಮಾತ್ತಸ್ಮಾತ್ತತ್ ಪಿತೃವಲ್ಲಭಮ್ ।**
**ಅಮಂಗಲಂ ತದ್ಯತ್ನೇನ ದೇವ ಕಾರ್ಯೇಷು ವರ್ಜಯೇತ್ ॥**

ಶಿವನ ಕಣ್ಣಿನಿಂದ ಬೆಳ್ಳಿ ಹುಟ್ಟಿದೆ. ಆದುದರಿಂದ ಅದು ಅಮಂಗಳ. ಪಿತೃಗಳಿಗೆ ಅತ್ಯಂತ ಪ್ರೀತ್ಯಾಸ್ಪದ. ಆದರೆ ಅದನ್ನು ದೇವತಾ ಕಾರ್ಯಗಳಲ್ಲಿ ಉಪಯೋಗಿಸಬಾರದು. ಶ್ರಾದ್ಧ ತರ್ಪಣಾದಿ ಪಿತೃಕಾರ್ಯಗಳಲ್ಲಿ ಉಪಯೋಗಿಸದೇ ಇರಬಾರದು. ಹೀಗೆ ಯೋಗ್ಯತಾನುಗುಣವಾಗಿ ಪಾತ್ರೆಗಳನ್ನು ಸಿದ್ಧಗೊಳಿಸಿ, ಪವಿತ್ರ ಇಟ್ಟುಕೊಂಡು, ಪಿತೃಗಳ ಗೋತ್ರ, ನಾಮಗಳನ್ನು ಹೇಳಿ, ದರ್ಭೆಗಳನ್ನು ಹಾಸಬೇಕು. ಪಿತೃಗಳ ಆವಾಹನ ಮಾಡುತ್ತೇನೆಂದು ಹೇಳಿ ' ಕುರು ' ಮಾಡು ಎಂದು ಆಜ್ಞೆ ಪಡೆದು 'ಉಶಂತಸ್ತ್ವಾ ಆಯಿತು' ಮಂತ್ರಗಳಿಂದ ಆವಾಹನ ಮಾಡಬೇಕು. 'ಯಾದಿವ್ಯಾ ಆಪ;' ಮಂತ್ರಗಳಿಂದ ಅರ್ಘ್ಯಕೊಟ್ಟು ಗಂಧ ಏರಿಸಬೇಕು. ದ್ವಿಜರ ಹಸ್ತದಿಂದ ಕೆಳಗೆ ಸುರಿದ ಅರ್ಘ್ಯದ ನೀರನ್ನು ಪಿತೃ ಪಾತ್ರಗೆ ಹಾಕಿ, ಉಳಿದ ಎರಡು ಪಾತ್ರೆಗಳನ್ನು ಅದರ ಮೇಲೆ ಬೋರಲಾಗಿ ಇರಿಸಿ, ಅಗ್ನಿಯ ಉತ್ತರಕ್ಕೆ 'ಪಿತೃಭ್ಯಃಸ್ಥಾನಮಸಿ' ಎಂಬ ಮಂತ್ರದಿಂದ ಇಟ್ಟು, ಅಗ್ನಿಗೆ ಪರಿಷೇಚನ ಮಾಡಿ ಇಲ್ಲಿಯೂ ಹಿಂದೆ ಹೇಳಿದಂತೆ ಅಗ್ನಿಕಾರ್ಯ ಮಾಡಬೇಕು. ಬ್ರಾಹ್ಮಣರಿಗೆ ಊಟವನ್ನು ಪ್ರಸನ್ನ ಮನಸ್ಸಿನಿಂದ ದರ್ಭೆ ಇಟ್ಟುಕೊಂಡು ಎರಡೂ ಕೈಗಳಿಂದ ಬಡಿಸಬೇಕು. ಶ್ರಾದ್ಧಕ್ಕೆ ಬಗೆಬಗೆಯ ಪಕ್ವಾನ್ನಗಳನ್ನು ಕಾಯಿಪಲ್ಲೆಗಳನ್ನೂ ತೊವ್ವೆ ವ್ಯಂಜನ ಪದಾರ್ಥ, ಭಕ್ಷ್ಯ, ಭೋಜ್ಯಗಳನ್ನೂ ಮಾಡಿಸಬೇಕು. ಹಾಲು, ಮೊಸರು, ಹಸುವಿನ ತುಪ್ಪ ಮುಂತಾದವುಗಳಲ್ಲಿ ಸಕ್ಕರೆ ಕೂಡಿಸಿ ಬ್ರಾಹ್ಮಣರಿಗೆ ನೀಡಬೇಕು. ಪಕ್ವಾನ್ನ ಮತ್ತು ಮಾಷಗಳಿಂದ ಪಿತೃಗಳ ತೃಪ್ತಿಯಾಗುವದೆಂದು ಕೇಶವನ ಅಭಿಪ್ರಾಯ.

ಬ್ರಾಹ್ಮಣರು ಊಟಮಾಡುವಾಗ ಪಿತೃಸೂಕ್ತ, ವಿಷ್ಣುಸೂಕ್ತ, ಸೂರ್ಯ ರುದ್ರ, ಇಂದ್ರ, ಅಗ್ನಿ, ಸೋಮ, ಬ್ರಹ್ಮ ಮುಂತಾದವರ ಸ್ತೋತ್ರ ಪರವಾದ ವೈದಿಕ ಸೂಕ್ತಗಳನ್ನೂ ಬೃಹತ್ಸಾಮ ರಥಂತರಸಾಮ, ಜ್ಯೇಷ್ಠಸಾಮ, ಶಾಂತಿಕಾಧ್ಯಾಯ, ಮಧು ಬ್ರಾಹ್ಮಣ ಮುಂತಾದ ವೇದ ಮಂತ್ರಗಳನ್ನೂ ಪಾರಾಯಣ ಮಾಡಬೇಕು. ಈ ಎಲ್ಲ ಮಂತ್ರಗಳನ್ನು ಮಂಡಲ, ಖಂಡ, ಅಧ್ಯಾಯ ಮೊದಲಾದ ವಿಭಾಗಕ್ಕೆ ಅನುಗುಣವಾಗಿ ಪಠಿಸಬೇಕು. ವಿಪ್ರರ ಊಟವಾದ ಬಳಿಕ ಆ ಸ್ಥಳದ ಬಳಿಯಲ್ಲಿ

ನೀರಿನಿಂದ ಸ್ವಚ್ಛಮಾಡಿ **ಅಗತಿಕ** ಅನಾಥ ಬಂಧುಗಳಿಗಾಗಿ ಅನ್ನವನ್ನು ನೆಲದ ಮೇಲೆ ಇಟ್ಟು ಈ ಮಂತ್ರ ಹೇಳಿ ನೀರು ಬಿಡಬೇಕು.

**"ಅಗ್ನಿದಗ್ಧಾಸ್ತು ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ**
**ಭೂಮೌ ದತ್ತೇನ ತೃಪ್ಯಂತು ಪ್ರಯಾಂತು ಪರಮಾಂ ಗತಿಮ್**
**ಯೇಷಾಂ ನ ಮಾತಾ ನ ಪಿತಾ ನ ಬಂಧುಃನ ಗೋತ್ರಶುದ್ಧಿರ್ನ ತಥಾನ್ನಮಸ್ತಿ**
**ತತ್ತೃಪ್ತಯೇಽನ್ನಂ ಭುವಿ ದತ್ತಮೇತತ್ ಪ್ರಯಾಂತು ಲೋಕೇಷು**
**ಸುಖಾಯ ತದ್ವತ್ ॥**

**ಅಸಂಸ್ಕೃತ ಪ್ರಮೀತಾನಾಂ ತ್ಯಕ್ತಾನಾಂ ಕುಲಯೋಷಿತಾಂ ।**
**ಉಚ್ಛಿಷ್ಟ ಭಾಗದೇಯಃ ಸ್ಯಾದ್ದರ್ಭೇ ವಿಕಿರಯೋಶ್ಚ ಯಃ ॥**

"ನಮ್ಮ ಕುಲದಲ್ಲಿ ಹುಟ್ಟಿ ಮಂತ್ರಾಗ್ನಿ ಸಂಸ್ಕಾರವನ್ನು ಪಡೆದ ಅಥವಾ ಪಡೆಯದ ಜೀವರೆಲ್ಲರು ನಾನು ಭೂಮಿಯಲ್ಲಿ ಇಟ್ಟ ಈ ಅನ್ನದಿಂದ ತೃಪ್ತರಾಗಲಿ ಮತ್ತು ಸದ್ಗತಿಯನ್ನು ಹೊಂದಲಿ. ತಾಯಿ, ತಂದೆ, ಬಂಧುಬಳಗ ಇಲ್ಲದವರೂ ಕುಲದಲ್ಲಿ ಶುದ್ಧಿ ಇಲ್ಲದವರೂ, ಶ್ರಾದ್ಧಮಾಡಲು ಗತಿ ಇಲ್ಲದವರೂ, ಪಿಂಡವನ್ನು ಕಾಣದವರೂ, ತೃಪ್ತಿ ಹೊಂದಲಿ ಎಂಬ ಉದ್ದೇಶದಿಂದ ಈ ಅನ್ನವನ್ನು ಹಾಕಿದ್ದೇನೆ. ಇದನ್ನು ಉಂಡು ತಿಂದು ಒಳ್ಳೇ ಲೋಕವನ್ನು ಹೊಂದಲಿ ಮತ್ತು ಸಂತೋಷ ಪಡಲಿ. ಸಂಸ್ಕಾರವಿಲ್ಲದೆ ಮರಣ ಹೊಂದಿದ, ಪತಿಪುತ್ರಾದಿಗಳಿಂದ ಬಿಡಲ್ಪಟ್ಟ ಹೆಣ್ಣು ಮಕ್ಕಳಿಗೆ ಈ ಉಚ್ಛಿಷ್ಟ ಭಾಗವು ಸಲ್ಲಲಿ. ಈ ಎರಡೂ ಕಡೆ ದರ್ಭೆಗಳ ಮೇಲೆ ಚೆಲ್ಲಿದ ಅನ್ನವನ್ನೂ ಅವರು ಸ್ವೀಕರಿಸಲಿ " ಎಂದು ಹಾರೈಸಬೇಕು. ಬ್ರಾಹ್ಮಣರು ತೃಪ್ತರಾದದ್ದನ್ನು ತಿಳಿದು ಅವರ ಕೈಯಲ್ಲಿ ಒಂದು ಸೌಟು (ಉದ್ಧರಣೆ) ನೀರನ್ನು ಹಾಕಬೇಕು. ಗೋಮಯ ಗೋಮೂತ್ರ ಮತ್ತು ನೀರಿನಿಂದ ನೆಲವನ್ನು ಸಾರಿಸಿ ಅದರ ಮೇಲೆ ದಕ್ಷಿಣಾಗ್ರವಾಗಿ ದರ್ಭೆಗಳನ್ನು ಹಾಸಬೇಕು. ಅವುಗಳ ಮೇಲೆ ನೀರು ಸಿಂಪಡಿಸಿ ಪಿತೃಗಳ ಹೆಸರು ಹಾಗೂ ಗೋತ್ರಗಳನ್ನು ಉಚ್ಚರಿಸಿ ಪಿತೃಯಜ್ಞ ದಂತೆಯೇ ಪಿಂಡಗಳನ್ನು ಇಡಬೇಕು. ಮತ್ತೆ ನೀರಿನಿಂದ ಮಾರ್ಜನ ಮಾಡಿ ಗಂಧ ಪುಷ್ಪಾದಿಗಳನ್ನು ಸಮರ್ಪಿಸಬೇಕು.

ಎಡಮಂಡಿಯನ್ನು ನೆಲದ ಮೇಲೆ ಊರಿ ದರ್ಭೆ ಪವಿತ್ರ ಸಹಿತವಾದ ಕೈಯಿಂದ ಪಿತೃಪಿಂಡವನ್ನು ಎತ್ತಿ ದರ್ಭೆಯ ಮೇಲೆ ಇಡಬೇಕು. ದೀಪಹಚ್ಚಿ ಹೂಗಳಿಂದ ಅರ್ಚನೆ ಮಾಡಬೇಕು. ಬ್ರಾಹ್ಮಣರು ಕೈತೊಳೆದುಕೊಂಡು ಆಚಮನ ಮಾಡಿದ ಬಳಿಕ ಒಬ್ಬೊಬ್ಬರ ಕೈಗೂ ಮತ್ತೆ ಒಂದೊಂದು ಸಲ ನೀರು ಕೊಡಬೇಕು.

ಅನಂತರ ಅವರಿಗೆ ಹೂವು ಅಕ್ಕಿಕಾಳುಗಳನ್ನು ಕೊಟ್ಟು ನಾಮಗೋತ್ರಗಳನ್ನು ಉಚ್ಚರಿಸಿ 'ಅಕ್ಷಯವಾಗಲಿ' ಎಂದು ಹೇಳುತ್ತ ಅವರ ಕೈಯಲ್ಲಿ ತಿಲೋದಕ (ಎಳ್ಳು ನೀರು) ಬಿಡಬೇಕು. ಯಥಾಶಕ್ತಿ ದಕ್ಷಿಣೆ ಕೊಡಬೇಕು. ಹಸು, ಹೊಲ, ಹಾಸಿಗೆ,

ಬಂಗಾರ, ಬಟ್ಟೆ ಮುಂತಾದವುಗಳನ್ನು ಯಥಾಶಕ್ತಿ ಬ್ರಾಹ್ಮಣರಿಗೆ ದಾನಕೊಡಬೇಕು. ಇವಲ್ಲದೆ ಅವರಿಗೆ ಬೇಕಾದ, ಉಪಯೋಗ ಬೀಳುವ ಮತ್ತು ತನಗೂ ತನ್ನ ತಂದೆಗೂ ಇಷ್ಟವಾದ ಇತರ ವಸ್ತುಗಳನ್ನೂ ದಾನ ಕೊಡಬೇಕು. ಶ್ರಾದ್ಧದಲ್ಲಿ ಪಿತೃಕಾರ್ಯಕ್ಕೆ ದಾನ - ಧರ್ಮ ಮಾಡುವದರಲ್ಲಿಯೂ ಭೋಜನಾದಿ ಪ್ರಬಂಧದಲ್ಲಿಯೂ ಜಿಪುಣತನ ಮಾಡಬಾರದು. ಅನಂತರ ಸ್ವಧಾವಾಚನ ಮಾಡಿಸಿ ವಿಶ್ವೇದೇವತೆಗಳ ಕೈಯಲ್ಲಿ ನೀರುಹಾಕಿ ಪೂರ್ವಕ್ಕೆ ಮುಖಮಾಡಿ ನಿಂತು ಎಲ್ಲರಿಂದಲೂ ಆಶೀರ್ವಾದ ಪಡೆಯಬೇಕು. 'ಯಜಮಾನನ ಪ್ರಾರ್ಥನೆಗೆಲ್ಲ ಬ್ರಾಹ್ಮಣರು ತಥಾಸ್ತು' ಎಂದು ಕೇಳಬೇಕು.

**ಯಜಮಾನ** :- ''ಅಘೋರಾಃ ಪಿತರಃ ಸಂತು'' ಪಿತೃಗಳು ನಮ್ಮ ಬಗ್ಗೆ ಕ್ರೂರರಾಗದೆ ಶಾಂತರಾಗಿರಲಿ.

**ಬ್ರಾಹ್ಮಣ** :- ''ಸಂತು ಪಿತರಃ '' ಸೌಮ್ಯರಾಗಿರಲಿ ಪಿತೃಗಳು.

**ಯಜಮಾನ** :- ''ಗೋತ್ರಂ ನಃ ವರ್ಧತಾಂ'' ನಮ್ಮ ವಂಶ ಬೆಳೆಯಲಿ.

**ಬ್ರಾಹ್ಮಣ** :- ''ತಥಾಸ್ತು'' ಹಾಗೇ ಆಗಲಿ.

**ಯಜಮಾನ** :- 'ದಾತಾರೋ ನೋಽಭಿವರ್ಧಂತಾಮ್' ನಮಗೆ ಸುಖಸಂಪದ ಕೊಡುವವರು ಅಭಿವೃದ್ಧಿ ಹೊಂದಲಿ.

**ಬ್ರಾಹ್ಮಣ** :- ''ತಥಾಸ್ತು.''

**ಯಜಮಾನ**:-''ಏತಾಃ ಸತ್ಯಾ ಆಶಿಷಃ ಸಂತು'' ಈ ಎಲ್ಲ ಆಶೀರ್ವಾದಗಳು ಸತ್ಯವಾಗಲಿ.

**ಬ್ರಾಹ್ಮಣ** - ''ಸಂತು '' ನಿಜವಾಗಲಿ.

ಹೀಗೆ ಯಜಮಾನನ ಪ್ರಾರ್ಥನೆಗೆ ಬ್ರಾಹ್ಮಣರು 'ಅಸ್ತು' ಎಂದು ಉತ್ತರವಿತ್ತು ಪುನಃ ಪುನಃ ಆಶೀರ್ವದಿಸಿದ ಬಳಿಕ ಭಕ್ತಿಯಿಂದ ಪಿಂಡಗಳನ್ನು ಉದ್ವಾಸನ ಮಾಡಬೇಕು. ಬ್ರಾಹ್ಮಣರನ್ನು ಬೀಳ್ಕೊಡುವವರೆಗೆ ಊಟದ ಸ್ಥಳವನ್ನು ಗೋಮಯದಿಂದ ಶುದ್ಧಮಾಡಬಾರದು. ಅನಂತರ ವೈಶ್ವದೇವ ಮಾಡಬೇಕು. ಬ್ರಾಹ್ಮಣರನ್ನು ಬೀಳ್ಕೊಡಲಿಕ್ಕೂ ಒಂದು ವಿಧಾನವಿದೆ. ಯಜಮಾನನು ಕೈಯಲ್ಲಿ ಜಲಪಾತ್ರ ಹಿಡಿದು ಬ್ರಾಹ್ಮಣರ ಮುಂದೆ ನಿಂತು ''ವಾಜೇವಾಜೇ '' ಎಂಬ ಮಂತ್ರ ಹೇಳಿ ದರ್ಭದ ತುದಿಯನ್ನು ಅವರಿಗೆ ಮುಟ್ಟಿಸಿ ಬೀಳ್ಕೊಡಬೇಕು. ಮನೆಯ ಹೊರಗೆ ಬಂದ ಬಳಿಕವೂ ಅವರಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ ಹೆಂಡಿರು ಮಕ್ಕಳೊಡನೆ ಅವರನ್ನು ಹಿಂಬಾಲಿಸಿ ಎಂಟು ಹೆಜ್ಜೆ ಹೋಗಿ ಕಳಿಸಿಬರಬೇಕು. ತಿರುಗಿ ಒಂದು ಅಗ್ನಿಕಾರ್ಯ, ವೈಶ್ವದೇವ, ನಿತ್ಯಬಲಿ ವಿಧಾನಗಳನ್ನೆಲ್ಲ ಮುಗಿಸಿ ಇಷ್ಟ ಬಂಧುಗಳೊಂದಿಗೆ ಪಿತೃಶೇಷವನ್ನೂ, ಅತಿಥಿಗಳೊಂದಿಗೆ ಊಟವನ್ನೂ ಮಾಡಬೇಕು. ಮುಂಜಿ ಆಗದವರೂ ಕೂಡ ಸಾಧಾರಣ ಶ್ರಾದ್ಧವನ್ನು ಎಲ್ಲ ಪರ್ವಕಾಲಗಳಲ್ಲಿ ಮಾಡಬೇಕು. ವಿಧುರನೂ ಪರಸ್ಥಳ ಪ್ರಯಾಣದಲ್ಲಿರುವವರೂ ಶೂದ್ರರೂ ಕೂಡ

ಈ ಸಾಧಾರಣ ಪದ್ಧತಿಯಿಂದ ಇದ್ದಲ್ಲಿ ಕಾಲೋಚಿತ ಶ್ರಾದ್ಧ ಮಾಡಬೇಕು. ಉತ್ಸವ, ಯಜ್ಞ, ವಿವಾಹಾದಿಮಂಗಲ ಕಾಲದಲ್ಲಿ ಆಚರಿಸುವ ಶ್ರಾದ್ಧಕ್ಕೆ **ಅಭ್ಯುದಯ ಶ್ರಾದ್ಧ, ನಾಂದೀ ಶ್ರಾದ್ಧ** ಅಥವಾ **ವೃದ್ಧಿ ಶ್ರಾದ್ಧ** ಎಂದು ಕರೆಯುವರು. ಇದರಲ್ಲಿ ಮೊದಲು ಮಾತೃಗಳನ್ನೂ ನಂತರ ಪಿತೃಗಳನ್ನೂ ಅನಂತರ ಮಾತಾಮಹ ಎಂದರೆ ತಾಯಿಯ ಪಿತೃಗಳನ್ನೂ ಪೂಜಿಸಬೇಕು. ಅನಂತರ ವಿಶ್ವೇದೇವತೆಗಳನ್ನು ಅರ್ಚಿಸಬೇಕು. ಪ್ರದಕ್ಷಿಣೆ ನಮಸ್ಕಾರಮಾಡಿ ಮೊಸರು, ಅಕ್ಕೀಕಾಳು, ಹಣ್ಣು ನೀರು ಇವುಗಳಿಂದ ಪೂಜಿಸಿ ಪೂರ್ವಾಭಿಮುಖವಾಗಿ ದರ್ಭೆಗಳ ಮೇಲೆ ಪಿಂಡಗಳನ್ನು ಇಡಬೇಕು. ಅಭ್ಯುದಯ ಶ್ರಾದ್ಧದಲ್ಲಿ **"ಸಂಪನ್ನಂಸಂಪನ್ನಂ"** ಹೇಳುತ್ತ ಇಬ್ಬರಿಗೆ ಅರ್ಘ್ಯವನ್ನು ಕೊಡಬೇಕು. ಎರಡು ನಾಕು ಆರು ಹೀಗೆ ಸಮ ಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ಬಟ್ಟೆ ಬಂಗಾರ ದ್ರವ್ಯಗಳನ್ನು ಕೊಟ್ಟು ಪೂಜಿಸಬೇಕು. 'ನಾಂದೀ ಮುಖಾಭ್ಯುದಯ' ಎಂದು ಹೇಳಿ ಮಂಗಳಸೂತ್ರಗಳನ್ನೂ ಆಶೀರ್ವಾದ ಮಂತ್ರಗಳನ್ನೂ ಒಳ್ಳೇ ಬ್ರಾಹ್ಮಣರಿಂದ ಹೇಳಿಸಬೇಕು. ಇದರಂತೆ ಶೂದ್ರರೂ ಕೂಡ ವೃದ್ಧಿಶ್ರಾದ್ಧವನ್ನು ನಮಸ್ಕಾರ ಮಂತ್ರದಿಂದ ಆಮಾನ್ನದಿಂದ ಮಾಡಬೇಕು. ಶೂದ್ರನ ಕರ್ಮಗಳಲ್ಲಿ ದಾನವೇ ಪ್ರಧಾನ. ಶೂದ್ರನಿಗೆ ದಾನದಿಂದಲೇ ಸರ್ವಾರ್ಥಸಿದ್ಧಿ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹದಿನೆಂಟನೆಯ ಅಧ್ಯಾಯ ಮುಗಿದುದು*



## ಏಕೋದ್ದಿಷ್ಟ ಶ್ರಾದ್ಧದ ವಿಧಿ ವಿಧಾನ — ಅಧ್ಯಾಯ - ೧೯

**ಸೂತ ಉವಾಚ**

**ಏಕೋದ್ದಿಷ್ಟಮತೋವಕ್ಷ್ಯೇ ಯದುಕ್ತಂ ಚಕ್ರಪಾಣಿನಾ ।**
**ಮೃತೇ ಪುತ್ರೈರ್ಯಥಾ ಕಾರ್ಯಮ್ ಶೌಚಂ ಚ ಪಿತರ್ಯಪಿ ॥**

**ಸೂತ** :- ಇನ್ನು ಮೇಲೆ ಶ್ರೀಹರಿಯು ಹೇಳಿದ ಏಕೋದ್ದಿಷ್ಟಶ್ರಾದ್ಧದ ವಿಧಿಯನ್ನೂ ತಂದೆಯು ಮೃತನಾದಾಗ ಮಕ್ಕಳು ಆಚರಿಸಬೇಕಾದ ಅಶೌಚ ವಿಧಾನವನ್ನೂ ನಿರೂಪಿಸುತ್ತೇನೆ ಕೇಳಿರಿ. ಮರಣ ಮೂಲಕವಾದ ಅಶೌಚವು ಜ್ಞಾತಿಗಳಿಗೆ ಬ್ರಾಹ್ಮಣರಿದ್ದರೆ ಹತ್ತುದಿನ, ಕ್ಷತ್ರಿಯರಿಗೆ ಹನ್ನೆರಡು ದಿನ, ವೈಶ್ಯರಿಗೆ ಹದಿನೈದು ದಿನ, ಶೂದ್ರರಿಗೆ ಒಂದು ತಿಂಗಳವರೆಗೆ ಇರುತ್ತದೆ. ಇದಕ್ಕೆ ಮರಣ ಸೂತಕ ಅಥವಾ ಮೃತಾಶೌಚ ಎನ್ನುವರು. ಇದರಂತೆ ಹುಟ್ಟಿದಾಗಲೂ ಜ್ಞಾತಿಗಳಿಗೆ ಜನನಾಶೌಚವಿರುವದು. ಅಸ್ಥಿ ಸಂಚಯನವಾದ ಬಳಿಕ ಜ್ಞಾತಿಗಳು ತಮ್ಮತಮ್ಮಲ್ಲಿ ಪರಸ್ಪರ ಮುಟ್ಟಬಹುದು. ಹನ್ನೆರಡು ದಿನ ಪ್ರೇತಕ್ಕೆ ಪಿಂಡದಾನ ಮಾಡಬೇಕು. ಆ ಕಾಲದ ಪಿಂಡದಾನವೇ ಪ್ರೇತಕ್ಕೆ ಪ್ರಿಯವಾದ ಪ್ರಯಾಣದ ಬುತ್ತಿ.

ಪ್ರೇತವು ಹನ್ನೆರಡು ದಿನಗಳವರೆಗೆ ಮನೆಬಿಟ್ಟು ಹೋಗದೆ ತನ್ನ ಹೆಂಡತಿ ಮಕ್ಕಳನ್ನು ಮೋಹವಾಸನೆಯಿಂದ ನೋಡುತ್ತಿರುತ್ತದೆ. ಆದುದರಿಂದ ಅದರ ದಾಹ ಶಮನವಾಗಿ ಪ್ರಯಾಣದ ದಣಿವನ್ನು ಪರಿಹಾರ ಮಾಡಲಿಕ್ಕಾಗಿ ಹತ್ತು ದಿನ ಅಂತರಾಳದಲ್ಲಿ ನೀರನ್ನು

ಇಡಬೇಕು. ಹನ್ನೊಂದನೆಯ ದಿನ ಹನ್ನೊಂದು ಬ್ರಾಹ್ಮಣರಿಗೆ ಮಾತ್ರ ಭೋಜನ ಮಾಡಿಸಬೇಕು. ಕ್ಷತ್ರಿಯರು ವೈಶ್ಯರು ಸೂತಕ ಕಳೆದ ಬಳಿಕ ವಿಷಮ ಸಂಖ್ಯೆಯಲ್ಲಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಮಾರನೆಯ ದಿನ ಪ್ರೇತವನ್ನು ಮಾತ್ರವೇ ಉದ್ದೇಶಿಸಿ ಏಕೋದ್ದಿಷ್ಟ ಶ್ರಾದ್ಧಮಾಡಬೇಕು. ಆವಾಹನ ಅಗ್ನಿಕಾರ್ಯ, ಇವುಗಳನ್ನು ಯಥಾವಿಧಿ ನಡೆಸಬೇಕು. ಈ ಏಕೋದ್ದಿಷ್ಟಶ್ರಾದ್ಧದಲ್ಲಿ ವಿಶ್ವೇದೇವರಿಗೆ ಆವಾಹನವಿಲ್ಲ. ಅರ್ಘ್ಯಪಾತ್ರೆ, ಪಿಂಡ ಪವಿತ್ರ ಮುಂತಾದವುಗಳು ಒಂದೊಂದೇ ಇರುವವು. ಪಿಂಡ ಹಾಕುವಾಗ ''ಉಪತಿಷ್ಠತಾಮ್'' ಎಂದು ಹೇಳಿ ಕೊನೆಗೆ ತಿಲೋದಕ ಬಿಡಬೇಕು. ವಿಕಿರದ ಸ್ಥಾನದಲ್ಲಿ 'ಸ್ವದಿತ' ಎಂದು ಉಚ್ಚರಿಸಬೇಕು. 'ಅಭಿರಮ್ಯತಾಂ' ಎಂದು ಹೇಳಿ ಬ್ರಾಹ್ಮಣರನ್ನು ಬೀಳ್ಕೊಡಬೇಕು. ಉಳಿದದ್ದೆಲ್ಲ ಹಿಂದಿನಂತೆಯೇ ಇಲ್ಲಿಯೂ ಮಾಡಬೇಕು. ಇದು ವೈದಿಕರು ಮಾಡಬೇಕಾದ ಏಕೋದ್ದಿಷ್ಟಶ್ರಾದ್ಧದ ವಿಧಾನ. ಈ ವಿಧಿಯನ್ನು ಅನುಸರಿಸಿ ಪ್ರತಿ ತಿಂಗಳವೂ ಶ್ರಾದ್ಧಮಾಡಬೇಕು. ಸೂತಕ ಕಳೆದ ಮರುದಿನ ಬ್ರಾಹ್ಮಣ ದಂಪತಿಗಳನ್ನು ಬಗೆಬಗೆಯ ವಸ್ತ್ರಾಲಂಕಾರಗಳಿಂದ ಪೂಜಿಸಿ ಬಂಗಾರದ ಮೂರ್ತಿ ವಸ್ತ್ರ ಫಲಸಹಿತವಾಗಿ ಒಳ್ಳೆ ಹಾಸಿಗೆಯನ್ನು ಅವರಿಗೆ ದಾನಕೊಡಬೇಕು. ಮೃತನ ಹೆಸರಿನಿಂದ ಹೋರಿ ಬಿಟ್ಟು ಕಪಿಲೆ ಎಂದರೆ ಕಪ್ಪು ಹಸುವನ್ನು ದಾನ ಮಾಡಬೇಕು. ಬ್ರಾಹ್ಮಣರಿಗೆ ಪಕ್ವಾನ್ನ ಭೋಜನ ಮಾಡಿಸಿ ಪೂರ್ಣಕುಂಭವನ್ನು ದಾನ ಮಾಡಬೇಕು. ಹೀಗೆ ವರ್ಷಪೂರ್ತಿಯಾಗುವವರೆಗೆ ಮಾಡಿ ವರ್ಷಮುಗಿದ ಬಳಿಕ ಸಪಿಂಡೀಕರಣವನ್ನು ಮಾಡಬೇಕು. ಅನಂತರ ಪ್ರೇತಕ್ಕೆ ಪಾರ್ವಣ ಶ್ರಾದ್ಧದಲ್ಲಿ ಭಾಗ ದೊರೆಯುವದು.

ಸಪಿಂಡೀಕರಣದಲ್ಲಿ ವಿಶ್ವೇದೇವಪೂರ್ವಕವಾಗಿ ವರಣ ಮಾಡಬೇಕು. ಪಿತೃಗಳಿಗೂ ಪ್ರೇತಕ್ಕೂ ಬೇರೆ ಬೇರೆ ಆಸನ ಹಾಕಿ ಆವಾಹಿಸಬೇಕು. ಗಂಧೋದಕ ತಿಲಗಳಿಂದ ಕೂಡಿದ ನಾಕು ಅರ್ಘ್ಯಪಾತ್ರಗಳನ್ನು ಏರ್ಪಡಿಸಬೇಕು. ಅರ್ಘ್ಯಕ್ಕಾಗಿ ಪಿತೃಪಾತ್ರಗಳಲ್ಲಿ ಪ್ರೇತಪಾತ್ರದಲ್ಲಿಯ ನೀರನ್ನು ಕೂಡಿಸಬೇಕು. ಇದರಂತೆ ಪಿಂಡಪ್ರದಾನ ಸಂಕಲ್ಪಮಾಡಿ ನಾಕು ಪಿಂಡಗಳನ್ನು ಇಡಬೇಕು. ನಾಕನೇ ಪಿಂಡವನ್ನು ನಾಕು ಭಾಗ ಮಾಡಿ ''ಯೇ ಸಮಾನಾ'' ಎಂಬ ಎರಡು ಮಂತ್ರಗಳಿಂದ ಅವುಗಳನ್ನು ಮೊದಲಿನ ಮೂರು ಪಿಂಡಗಳೊಡನೆ ಸೇರಿಸಬೇಕು. ಅಲ್ಲಿಂದ ಮುಂದೆ ನಾಲ್ಕನೆ ಪಿಂಡವನ್ನು ಇಡುವ ಅವಶ್ಯಕತೆ ಎಂದಿಗೂ ಇಲ್ಲ. ಯಾಕಂದರೆ ಅಂದಿನಿಂದ ಪ್ರೇತವು ಪಿತೃತ್ವವನ್ನು ಹೊಂದಿ ಅತ್ಯಂತ ಆನಂದವನ್ನು ಪಡೆದಿರುತ್ತದೆ. ಆ ಪ್ರೇತವು ಅಗ್ನಿಷ್ವಾತ್ತಾದಿ ಪಿತೃದೇವತೆಗಳ ವರ್ಗದಲ್ಲಿ ಸೇರ್ಪಡೆಯಾಗಿ ದಿವ್ಯಗತಿಯನ್ನು ಹೊಂದಿರುತ್ತದೆ. ಆದುದರಿಂದ ಸಪಿಂಡೀ ಕರ್ಮವನ್ನು ಮಾಡಿದ ಬಳಿಕ ಪ್ರೇತವನ್ನು ಉದ್ದೇಶಿಸಿ ಪಿಂಡವನ್ನಾಗಲಿ ಎಳ್ಳುನೀರನ್ನಾಗಲಿ ಕೊಡುವುದಿಲ್ಲ. ತಿಲೋದಕಾದಿ ಗಳನ್ನು ಕೊಡಬೇಕಾದರೆ ಪಿತೃಗಣದಲ್ಲಿ ಸೇರಿಸಿಯೇ ಕೊಡಬೇಕು. ಯಾಕಂದರೆ ಇವನ ಪಿಂಡವು ಪಿತೃಪಿಂಡದೊಡನೆ ಕೂಡಿಹೋಗಿದೆ.

ಇವನೂ, ಅರ್ಥಾತ್ ಮೃತನು ಪಿತೃಗಣದಲ್ಲಿ ಅಂತರ್ಭೂತನಾಗಿದ್ದಾನೆ. ತ್ರಿಪಿಂಡೀಕರಣಾನಂತರದಲ್ಲಿ ಸಂಕ್ರಮಣ ಗ್ರಹಣ ಮುಂತಾದ ಪರ್ವಕಾಲದಲ್ಲಿ ತ್ರಿಪಿಂಡೀಶ್ರಾದ್ಧವನ್ನು ಮಾಡಬೇಕು. ಮೃತ ತಿಥಿಯಂದು ಮಾತ್ರ ಏಕೋದ್ದಿಷ್ಟ

ಶ್ರಾದ್ಧವನ್ನೇ ಮಾಡಬೇಕು. ಅಂದು ಪಾರ್ವಣಶ್ರಾದ್ಧ ಮಾಡಿದರೆ ಪಿತೃಹಿಂಸಾಪಾಪವು ಬರುವುದು. ಆದುದರಿಂದ ಪ್ರತಿವರ್ಷ ಮೃತನ ಮರಣ ತಿಥಿಯಲ್ಲಿ ಏಕೋದ್ದಿಷ್ಟಶ್ರಾದ್ಧವನ್ನೇ ನಡೆಸಬೇಕು. ವಿಧಿಪೂರ್ವಕವಾಗಿ ಶ್ರಾದ್ಧತಂತ್ರವನ್ನು ಅರಿತು ಆಮಶ್ರಾದ್ಧವನ್ನು ಮಾಡುವಾಗ ಆಮರೂಪ ಅನ್ನದಿಂದಲೇ ಅಗ್ನಿಕಾರ್ಯ ಹಾಗೂ ಪಿಂಡ ಪ್ರದಾನಾದಿಗಳನ್ನು ಮಾಡಬೇಕು. ಸಪಿಂಡೀಕರಣದಲ್ಲಿ ಮೃತನಾದ ಪಿತನು ಅಜ್ಜ, ತಾತ, ಮುತ್ತಾತ ಎಂಬ ಪಿತೃಗಣದಲ್ಲಿ ಸೇರಿದ ಬಳಿಕ ತಂದೆಯ ಮುತ್ತಾತನು ಪಿತೃಗಳ ಈ ತ್ರಿವರ್ಗದಿಂದ ಬೇರೆಯಾಗುವನು. ಅರ್ಥಾತ್ ಶ್ರಾದ್ಧ ಮಾಡುವವನ ತಂದೆ, ತಾತ, ಮುತ್ತಾತ ಮೂವರು ಮಾತ್ರ ಉಳಿಯುವರು.

ಶ್ರಾದ್ಧಮಾಡುವವನ ವೃದ್ಧ ಪ್ರಪಿತಾಮಹ ಅರ್ಥಾತ್ ತಂದೆಯ ಮುತ್ತಾತನು ಈ ತ್ರಿವರ್ಗದಿಂದ ಮುಕ್ತನಾಗಿದ್ದರೂ ಪಿಂಡಪ್ರದಾನ ಮಾಡುವ ಕಾಲದಲ್ಲಿ ದರ್ಭೆಯ ಮೇಲೆ ಮಾರ್ಜನ ಮಾಡುವಾಗ ಬೀಳುವ ಅನ್ನದ ಅಗಳಿನಲ್ಲಿ ಭಾಗವನ್ನು ಪಡೆಯುವನು ಅರ್ಥಾತ್ ಲೇಪಭಾಗಿಯಾಗುವನು. ವೃದ್ಧ ಪ್ರಪಿತಾಮಹನನ್ನು ಹಿಡಿದು ಮೇಲಿನ ಮೂರು ತಲೆಮಾರಿನವರು ಲೇಪಭಾಗಿಗಳು. ತಂದೆಯನ್ನು ಹಿಡಿದು ಮೇಲಿನ ಮೂರು ತಲೆಮಾರಿನವರು ಪಿಂಡಭಾಗಿಗಳು. ಪಿಂಡವನ್ನು ಕೊಡುವ ಶ್ರಾದ್ಧಕರ್ತನು ಏಳನೆಯವನು. ಹೀಗೆ ಶ್ರಾದ್ಧಕರ್ತನನ್ನು ಹಿಡಿದು ಏಳು ತಲೆಮಾರಿನವರೆಗೆ ಇರುವ ಪಿತೃಗಳೆಲ್ಲರೂ ಸಪಿಂಡರು ಎಂದು ಎನಿಸಿಕೊಳ್ಳುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ಇಲ್ಲಿ ಶ್ರಾದ್ಧ, ಪಿತೃಗಳು ಎಲ್ಲಿಯೋ ಏನೋ ! ಇದು ಅವರಿಗೆ ಮುಟ್ಟುವದು ಹೇಗೆ ?

ಅಧ್ಯಾಯ - ೨೦

**ಋಷಿಯ ಉವಾಚಃ**

**ಕಥಂ ಕವ್ಯಾನಿ ದೇಯಾನಿ ಹವ್ಯಾನಿ ಚ ಜನೈರಿಹ**
**ಗಚ್ಛಂತಿ ಪಿತೃಲೋಕಸ್ಥಾನ್ ಪ್ರಾಪಕಃ ಕೋऽತ್ರ ಗದ್ಯತೇ ॥**

**ಋಷಿ** :- ದೇವತೆಗಳನ್ನು ಉದ್ದೇಶಿಸಿ ಜನರು ಹೋಮಮಾಡಿ ಹವ್ಯವನ್ನು ಕೊಡುವ ಬಗೆ ಯಾವುದು ? ಅದರಂತೆ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮುಖಾಂತರ ಕವ್ಯವನ್ನು ನೀಡುವ ಬಗೆ ಎಂತು ? ಮತ್ತು ಇಲ್ಲಿ ಪಿತೃಗಳಿಗಾಗಿ ಕೊಟ್ಟ ಪಿಂಡಗಳು ಪಿತೃಲೋಕದಲ್ಲಿ ಇರುವ ಪಿತೃಗಳಿಗೆ ಹೇಗೆ ತಲುಪುತ್ತವೆ ? ಅವುಗಳನ್ನು ಅಲ್ಲಿಯವರೆಗೆ ಒಯ್ದು ಮುಟ್ಟಿಸುವವರು ಯಾರು ? ಇಲ್ಲಿ ಭೂಮಿಯ ಮೇಲೆ ಅಗ್ನಿಕುಂಡದಲ್ಲಿ ಆಹುತಿಗಳನ್ನು ಹಾಕಿದ ಮಾತ್ರಕ್ಕೆ ಅವುಗಳನ್ನು ದೇವತೆಗಳು ಪರಿಗ್ರಹಿಸುವರೇ ! ಸತ್ತವನ ಹೆಸರಿನಿಂದ ಇದ್ದವರು ಭೂಮಿಯಲ್ಲಿ ಬ್ರಾಹ್ಮಣರಿಗೆ ಊಟಹಾಕಿದರೆ ಮರಣಹೊಂದಿದ ಪಿತೃಗಳು ಅದರಿಂದ ತುಷ್ಟರಾಗುವದು ಹೇಗೆ ?

**ಸೂತ :-** ಪಿತೃಗಳನ್ನು **ವಸು** ಎಂದೂ, ಪಿತಾಮಹರನ್ನು **ರುದ್ರ** ಎಂದೂ, ಪ್ರಪಿತಾಮಹರನ್ನು ಆದಿತ್ಯರು ಎಂದೂ ಕರೆಯಬೇಕು. ಇವರನ್ನು ಹೀಗೇ ಉಚ್ಚರಿಸಬೇಕು ಎಂದು ವೇದದ ಆದೇಶವಿದೆ. ಪಿತೃದೇವತೆಗಳ ಉದ್ದೇಶದಿಂದ ಅವರವರ ಗೋತ್ರ ಹೆಸರುಗಳ ಉಚ್ಚಾರ ಪೂರ್ವಕವಾಗಿ ನೀಡಿದ ಹವ್ಯಕವ್ಯಗಳನ್ನು ಯಜಮಾನನ ಶ್ರದ್ಧೆ ಹಾಗೂ ಅವನು ಹೇಳುವ ಮಂತ್ರ ಶಕ್ತಿಗಳೇ ಅವರವರಿಗೆ ಮುಟ್ಟಿಸುವವು. ಆದುದರಿಂದ ಶ್ರಾದ್ಧದಲ್ಲಿ ಶ್ರದ್ಧೆ ಹಾಗೂ ಮಂತ್ರ ಮತ್ತು ನಾಮಗೋತ್ರಗಳ ಉಚ್ಚಾರಣೆ ಇವು ಮೂರು ಮುಖ್ಯವಾಗಿರುತ್ತವೆ. ಆದ್ದರಿಂದ ಶ್ರಾದ್ಧದಲ್ಲಿ ಮಂತ್ರಗಳನ್ನು ಭಕ್ತಿಯಿಂದ ಹೇಳಿ ನಾಮಗೋತ್ರಾದಿಗಳನ್ನು ಶ್ರದ್ಧೆಯಿಂದ ಉಚ್ಚರಿಸಬೇಕು. ಅಗ್ನಿಷ್ವಾತ್ತ ಮೊದಲಾದ ಪಿತೃಗಳು ಈ ಶ್ರಾದ್ಧ ಕಲ್ಪದ ವ್ಯವಸ್ಥೆಯನ್ನುಮಾಡುವ ಅಧಿಪತಿಗಳು ಎನಿಸುತ್ತಾರೆ. ಹೆಸರು, ಗೋತ್ರ, ದೇಶ, ಕಾಲಗಳನ್ನು ಉಚ್ಚಾರಮಾಡಿ ಹವ್ಯಕವ್ಯಗಳನ್ನು ದಾನಮಾಡಿದರೆ ಅದು ಅವರವರಿಗೆ ಸರಿಯಾಗಿ ಮುಟ್ಟುವ ಏರ್ಪಾಡನ್ನು ಈ ಪಿತೃಗಣದ ಅಧಿಪತಿಗಳೂ ಮಾಡುತ್ತಾರೆ.

ಬೇರೆಬೇರೆಜನ್ಮ ಜಾತಿಗಳಲ್ಲಿ ಹುಟ್ಟಿದ ಪಿತೃಗಳು ಗೋತ್ರ ನಾಮಾದಿ ನಿರ್ದೇಶಪೂರ್ವಕವಾಗಿ ನೀಡಿದ ಹವ್ಯಕವ್ಯಾದಿಗಳನ್ನು ಸಕಾಲದಲ್ಲಿ ಪಡೆದು ತೃಪ್ತಿಯನ್ನೂ ತುಷ್ಟಿಯನ್ನೂ ಹೊಂದುತ್ತಾರೆ. ಶ್ರಾದ್ಧದಲ್ಲಿ ನೀಡಿದ ತಿಲೋದಕ ಹಾಗೂ ಅನ್ನಪಿಂಡಾದಿಗಳನ್ನು ಪ್ರಕೃತ ಪಿತೃಗಳು ಹುಟ್ಟಿದ ಜಾತಿ ಜನ್ಮದ ಆಹಾರವನ್ನಾಗಿ ಮಾರ್ಪಡಿಸಿಕೊಡುವ ಮಹಾಕಾರ್ಯವನ್ನು ಕೂಡ ಈ ಪಿತೃಗಣದ ಅಧಿಪತಿಗಳೇ ಮಾಡುತ್ತಾರೆ. ಸತ್ತವನ ತಂದೆಯು ಸುದೈವದಿಂದಲೂ ಅತಿಶಯವಾದ ಭಗವಂತನ ಅನುಗ್ರಹದಿಂದಲೂ ದೇವತೆಗಳ ಗಣದಲ್ಲಿ ಸೇರಿಕೊಂಡಿದ್ದರೆ, ಮಗನು ನೀಡಿದ ಎಳ್ಳುನೀರು ಪಿಂಡಾನ್ನ ಮೊದಲಾದವುಗಳು ದೇವತೆಗಳ ಆಹಾರವಾದ ಅಮೃತರೂಪವಾಗಿ ಪರಿಣಮಿಸಿ ಅವನ ಊಟಕ್ಕಾಗಿ ಒದಗಿ ಬರುತ್ತದೆ. ಮೃತನ ತಂದೆಯು ದುಷ್ಕರ್ಮದಿಂದ ದೈತ್ಯಜಾತಿಯಲ್ಲಿ ಜನಿಸಿದ್ದರೆ ಮಗನು ನೀಡಿದ ಶ್ರಾದ್ಧಾನ್ನವು ಆ ಜಾತಿಗೆ ಉಚಿತವಾದ ಇಂದ್ರಿಯ ಸುಖರೂಪವಾಗಿ ಒದಗಿ ಬರುವದು. ಅವನು ಪಶುವಾಗಿದ್ದರೆ ಮಗನ ಶ್ರಾದ್ಧಾನ್ನವು ಹಸಿರುಹುಲ್ಲಾಗಿ ಆ ಪಶುವಿನ ಹಸಿವನ್ನು ತಣಿಸುವದು. ಆ ಪಿತನು ಹಾವು ಆಗಿದ್ದರೆ ಪುತ್ರನು ಕೊಟ್ಟ ಶ್ರಾದ್ಧಾನ್ನವು ಗಾಳಿಯಾಗಿ, ಯಕ್ಷನಾಗಿದ್ದರೆ ಮದ್ಯವಾಗಿ, ರಾಕ್ಷಸನಾಗಿದ್ದರೆ ಮಾಂಸವಾಗಿ, ದಾನವನಾಗಿದ್ದರೆ ಮಾಯೆಯಾಗಿ, ಪಿಶಾಚನಾಗಿದ್ದರೆ ರಕ್ತವಾಗಿ, ಮನುಷ್ಯನಾಗಿದ್ದರೆ ವಿವಿಧ ಭಕ್ಷ್ಯಭೋಜ್ಯಗಳಿಂದ ಒಡಗೂಡಿದ ಮೃಷ್ಟಾನ್ನಪಕ್ವಾನ್ನ ಹಾಗೂ ರುಚಿಕರ ಪಾನೀಯ ರೂಪವಾಗಿ ಒದಗಿ ಬಂದು ಅವರಿಗೆ ತೃಪ್ತಿಯನ್ನೂ ಸಂತೋಷವನ್ನೂ ಉಂಟುಮಾಡುತ್ತದೆ. ಶ್ರಾದ್ಧದಲ್ಲಿ ಸ್ತ್ರೀಯರನ್ನು ಉದ್ದೇಶಿಸಿ ನೀಡಿದ ಅನ್ನವು, ಅವರಿಗೆ ತಮ್ಮ ಜಾತಿ ಜನ್ಮಕ್ಕೆ ಅನುಗುಣವಾದ ಆಹಾರವಾಗಿ ತಲುಪಿ ತೃಪ್ತಿಯನ್ನು ಉಂಟು ಮಾಡುವದು.

ಹೀಗೆ ಶ್ರಾದ್ಧದಲ್ಲಿ ನೀಡಿದ ಅನ್ನಾದಿಗಳು ಪಿತೃಗಳಿಗೆ ಇದ್ದಲ್ಲಿ ಅನುರೂಪ ಆಹಾರವಾಗಿ ದೊರಕಿ ಆನಂದವನ್ನು ಉಂಟುಮಾಡುವದರಿಂದ ಸಾರ್ಥಕವೂ ಸಫಲವೂ ಆಗಿದೆ. ಇದರಿಂದ ಪಿತೃಗಳಿಗೆ ಪರಮಾನಂದವಾದಂತೆ ಶ್ರಾದ್ಧ

ಮಾಡಿದವನಿಗೂ ವಿಶೇಷ ಪಾರತ್ರಿಕಫಲ ಮತ್ತು ಐಹಿಕಲಾಭಗಳು ಉಂಟು. ಭಕ್ತಿಯಿಂದ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡುವ ಮನುಷ್ಯರಿಗೆ ಅತ್ಯಂತ ರೂಪವತಿಯಾದ ಹೆಂಡತಿ ದೊರಕುವಳು. ಅಂಥ ಚೆಲುವಿನ ನಿಧಿಯಂತಿರುವ ಹೆಣ್ಣಿನೊಡನೆ ಸಮರ್ಥ ರೀತಿಯಿಂದ ವಿಹಾರಮಾಡುವ ಶಕ್ತಿಯೂ ದೊರಕುವದು. ಊಟಮಾಡಲು ಬೇಕಾದಷ್ಟು ಮೃಷ್ಟಾನ್ನವು ಅದನ್ನು ತಿಂದು ಜೀರ್ಣಿಸಿಕೊಳ್ಳುವ ಆರೋಗ್ಯವು ಲಭ್ಯವಾಗುವವು. ಇಂಥ ಭೋಗ, ಐಶ್ವರ್ಯ ಮತ್ತು ಅದನ್ನು ಸತ್ಪಾತ್ರದಲ್ಲಿ ದಾನಮಾಡುವ ಬುದ್ಧಿ ಎರಡೂ ಲಭ್ಯವಾಗುವವು. ಇಂಥ ಭೋಗ, ಐಶ್ವರ್ಯ, ಅಧಿಕಾರ ಮುಂತಾದವುಗಳನ್ನೆಲ್ಲ ಯಥೇಷ್ಟವಾಗಿ ಅನುಭವಿಸಲು ಆವಶ್ಯಕವಾದ ಆಯುಷ್ಯ, ಆರೋಗ್ಯ, ಸೌಂದರ್ಯ ಮುಂತಾದವುಗಳು ವಿಧಿಪೂರ್ವಕವಾಗಿ ಮಾಡಿದ ಶ್ರಾದ್ಧಕರ್ಮದಿಂದ ಪ್ರಾಪ್ತವಾಗುವವು. ಈ ಎಲ್ಲ ಆಯುಷ್ಯ, ಸಂತಾನ, ಸಂಪತ್ತು, ಪಾಂಡಿತ್ಯ, ಸ್ವರ್ಗಾದಿ ಲೋಕ ಮುಂತಾದವುಗಳು ಶ್ರಾದ್ಧಕರ್ಮದ ಅವಾಂತರ ಫಲಗಳು. ಇದರ ಮುಖ್ಯ ಫಲವು ಪರಬ್ರಹ್ಮಪ್ರಾಪ್ತಿ ಅಥವಾ ಮೋಕ್ಷವೇ ಆಗಿದೆ. ಪಿತೃಗಳು ಪ್ರೀತರಾದರೆ ರಾಜ್ಯೈಶ್ವರ್ಯಾದಿಗಳನ್ನು ಮಾತ್ರ ಕೊಡುವುದಲ್ಲದೇ ಮೋಕ್ಷ ಸುಖಕ್ಕೂ ಕೂಡ ದಾರಿ ಮಾಡಿಕೊಡಬಲ್ಲರು. ಪೂರ್ವ ಕಾಲದಲ್ಲಿ ಕೌಶಿಕ ಮುನಿಯು ಏಳು ಜನ ಮಕ್ಕಳು ಐದು ಜನ್ಮಗಳನ್ನು ಕಳೆದು ಕೊನೆಗೆ ಮೋಕ್ಷವನ್ನು ಪಡೆದು ಶ್ರೀ ವಿಷ್ಣುವಿನ ಸನ್ನಿಧಾನವನ್ನು ಐದಿದರು. ಅದೆಲ್ಲವೂ ಈ ಶ್ರಾದ್ಧದ ಪ್ರಭಾವದಿಂದಲೇ ಎಂದು ಕೇಳಿದ್ದೇವೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿದುದು*

—○—

## ಅಧ್ಯಾಯ - ೨೧

ಹಸಿದ ಹಾರುವರು ಹಸು ಕೊಂದರು,
ಮಾಂಸ ತಿಂದರು, ಐದು ಜನ್ಮ ದುಃಖದಲ್ಲಿ ಬೆಂದರು

**ಋಷಿಯ ಉವಾಚಃ**

**ಕಥಂ ಕೌಶಿಕದಾಯಾದಾಃ ಪ್ರಾಪ್ತಾಸ್ತೇ ಯೋಗಮುತ್ತಮಮ್ ॥**
**ಪಂಚಭಿರ್ಜನ್ಮಸಂಬಂಧೈಃ ಕಥಂ ಕರ್ಮಕ್ಷಯೋಽ ಭವತ್ ॥**

**ಋಷಿಗಳು** :- ಕೌಶಿಕಕುಮಾರರು ದಿವ್ಯವಾದ ಯೋಗಸಾಧನೆಯಿಂದ ಉತ್ತಮ ಪದವಾದ ಮೋಕ್ಷವನ್ನು ಪಡೆದುದೆಂತು ? ಐದು ಜನ್ಮಗಳಿಗೆ ಸಂಬಂಧಿಸಿದ ಅವರ ಕರ್ಮರಾಶಿಯೆಲ್ಲ ಸವೆದುದಾದರೂ ಹೇಗೆ ?

**ಸೂತ** :- ಕುರುಕ್ಷೇತ್ರದಲ್ಲಿ ಒಬ್ಬ ಮಹರ್ಷಿ, ಅವನ ಹೆಸರು ಕೌಶಿಕ, ಅವನಿಗೆ ಏಳು ಜನ ಮಕ್ಕಳು ಅವರ ಗುಣಗಳೂ ಹೆಸರಿಗೆ ತಕ್ಕಂತೆ. ಸ್ವಸೃಪ, ಕ್ರೋಧನ, ಹಿಂಸ್ರ, ಪಿಶುನ, ಕವಿ, ವಾಗ್ದುಷ್ಟ, ಪಿತೃವರ್ತಿ ಹೀಗೆ ಅವರ ಹೆಸರುಗಳು ಇದ್ದವು. ಹೆಸರಿಗೆ ತಕ್ಕಂತೆ ಹಿರಿಯನಾದ ಸ್ವಸೃಪನು ಸ್ವಂತ ಇಚ್ಛೆ ಬಂದಂತೆ ಮನಸ್ವಿಯಾಗಿ ಸಂಚರಿಸುವವ. ಎರಡನೇಯವ ಕೋಪಿಷ್ಟ. ಮೂರನೇಯವ ಹಿಂಸಾಪ್ರಿಯ,

ನಾಲ್ಕನೇಯವ ಚಾಡಿಕೋರ, ಐದನೇಯವ ಕವಿಯ ಸ್ವಭಾವದವ, ಆರನೇಯವ ಬಾಯಲ್ಲಿ ಬಿರುಸು, ಏಳನೇಯವ ತಂದೆಯ ಇಚ್ಛೆಯಂತೆ ನಡೆಯುವವ. ಇವರು ಏಳೂ ಜನರು ಗರ್ಗಮುನಿಯ ಶಿಷ್ಯತ್ವವನ್ನು ಅಂಗೀಕರಿಸಿದರು. ಮುಂದೆ ಕೆಲ ಕಾಲವು ಕಳೆದ ಬಳಿಕ ಅವರ ತಂದೆ ಕೌಶಿಕಮುನಿ ಮರಣಹೊಂದಿದ. ಆಗ ದೇಶದಲ್ಲಿ ಭಯಂಕರ ಕ್ಷಾಮ. ಮಳೆ ಇಲ್ಲದೆ ಜಗತ್ತಿನ ತುಂಬ ಹಾಹಾಕಾರ. ಎಲ್ಲಿ ನೋಡಿದಲ್ಲೆಲ್ಲ ಭೀಕರ ಬರ.

ಗುರು ಗರ್ಗರ ಆದೇಶದಂತೆ ಈ ಏಳು ಜನ ಕೌಶಿಕಪುತ್ರರು ಕಾಡಿನಲ್ಲಿ ಹಸುವನ್ನು ಕಾಯುತ್ತಿದ್ದರು. ಬರಗಾಲದ ಝಳ ಅವರಿಗೂ ತಾಕಿತ್ತು. ಕಾಡಿನ ಅಲೆದಾಟ, ಹಸಿವೆಯ ಕಸವಿಸಿ, ಬಹುಕಾಲದಿಂದ ಅನ್ನದ ಅಭಾವ. ಇವು ಮೂರು ಸೇರಿ ಆ ಬೆಂಗಾಡಿನಲ್ಲಿ ಆ ಬ್ರಾಹ್ಮಣ ಕುಮಾರರ ಬುದ್ಧಿ ಕೆಡಿಸಿದವು. ಹಸಿವೆಯಿಂದ ಕಂಗಾಲಾದ ಅವರ ಕಣ್ಣಿಗೆ ಯಾವ ಆಹಾರ ಪದಾರ್ಥವೂ ದೊರಕದಿದ್ದಾಗ ಅವರ ಮನಸ್ಸಿನಲ್ಲಿ ಒಂದು ಕ್ರೂರ ವಿಚಾರವು ಬಂದಿತು. ತಾವು ಕಾಯುತ್ತಿರುವ ಈ ಹಸುವನ್ನೇ ಕೊಂದು ತಿಂದು ಬಿಡಬೇಕು ಎಂದರು. ಹೀಗೆ ಕ್ಷುಧೆಯಿಂದ ಧರ್ಮಭ್ರಷ್ಟರಾದ ಅವರ ದುಷ್ಟವಿಚಾರವು ಕನಿಷ್ಠ ಸೋದರರವಾದ ಪಿತೃವರ್ತಿಗೆ ಮಾತ್ರ ಸರಿಬರಲಿಲ್ಲ. ಆದರೆ ಕ್ಷುಧಾತುರರಾದ ಅವರು ತನ್ನ ಮಾತನ್ನು ಕೇಳುವದಿಲ್ಲ ಎಂದು ತಿಳಿದು ಅವರೆಲ್ಲರಿಗೆ ಆ ಕಿರಿಯ ತಮ್ಮನು ವಿನಯದಿಂದ ಒಂದು ಸೂಚನೆಯನ್ನು ಮಾಡಿದನು. ''ಓ ! ಸೋದರರೆ, ಇದು ಎಂಥ ಘೋರ ಪಾಪ ! ಈ ಗೋಹತ್ಯೆಯು ಮಹಾಪಾತಕ. ಹಸಿವೆಯಿಂದ ಕಂಗೆಟ್ಟ ನೀವು ಬೇಡವೆಂದರೂ ಕೇಳುವದಿಲ್ಲ. ಹಸುವನ್ನು ಹಸಿವೆಗಾಗಿ ಕೊಲ್ಲುವದೇ ಆದರೆ ನಿಮಗೆ ನನ್ನದೊಂದು ಸಲಹೆ. ''ಇಷ್ಟಂಧರ್ಮೇಣ ಯೋಜಯೇತ್'' ನಮಗೆ ಇಷ್ಟವಾದುದನ್ನು ಧರ್ಮಕ್ಕೆ ಹೊಂದಿಸಿ ಮಾಡಬೇಕು. ಪಿತೃಗಳ ಶ್ರಾದ್ಧವು ಒಳ್ಳೇ ಧರ್ಮ ಕಾರ್ಯ.

ಆ ಪಿತೃಕಾರ್ಯದ ಉದ್ದೇಶದಿಂದ ಶ್ರಾದ್ಧರೂಪವಾಗಿ ಈ ಹಸು ಹಿಂಸೆಯನ್ನು ಮಾಡಿರಿ. ಒಳ್ಳೇ ಉದ್ದೇಶದಿಂದ ಮಾಡಿದರೆ ಈ ದುಷ್ಕಾರ್ಯ ನಿಮಿತ್ತವಾದ ನಿಮ್ಮ ಪಾಪವು ಎಷ್ಟೋ ಕಡಿಮೆಯಾಗುವದು ಮತ್ತು ಸದುದ್ದೇಶದಿಂದ ಮಾಡಿದ ಈ ಸತ್ಕಾರ್ಯವು ನಿಮ್ಮನ್ನು ಕೈಹಿಡಿದು ಕಾಪಾಡುವದು. '' ಕೊನೆಯ ತಮ್ಮನ ಈ ಸಲಹೆಯು ಎಲ್ಲರಿಗೂ ಒಪ್ಪಿಗೆಯಾಯಿತು. ಎಲ್ಲರ ಅನುಮತಿಯಿಂದ ಆ ಕನಿಷ್ಠ ಬಂಧು ಪಿತೃವರ್ತಿಯು ಹಸುವನ್ನು ಉಪಯೋಗಿಸಿ ಸೋದರರೊಡನೆ ಶ್ರಾದ್ಧ ಮಾಡಿದನು. ಕಿರಿಯನೇ ಯಜಮಾನ. ಇಬ್ಬರು ಅಣ್ಣಂದಿರು ವಿಶ್ವೇದೇವಸ್ಥಾನದಲ್ಲಿ. ಮೂವರು ಪಿತೃಸ್ಥಾನದಲ್ಲಿ ಬ್ರಾಹ್ಮಣರಾಗಿ ಕುಳಿತರು. ಒಬ್ಬನು ಅತಿಥಿಯಾಗಿ ಬಂದ. ಹೀಗೆ ತಮ್ಮ ತಮ್ಮಲ್ಲಿ ಏರ್ಪಾಡು ಮಾಡಿಕೊಂಡು ವಿಧಿಪೂರ್ವಕವಾಗಿ ಮಂತ್ರೋಚ್ಚಾರಣೆಮಾಡುತ್ತ ಭಕ್ತಿಯಿಂದ ಪಿತೃಗಳ ನಾಮಸ್ಮರಣೆ ಮಾಡುತ್ತ ಶ್ರಾದ್ಧಕಾರ್ಯವನ್ನು ಯಥಾಸಾಂಗನೆರವೇರಿಸಿದರು. ಮನೆಗೆ ಬಂದ ಬಳಿಕ ಗುರುವಿನ ಪ್ರಶ್ನೆ '' ಹಸು ಎಲ್ಲಿ ?'' ಶಿಷ್ಯನ ಉತ್ತರ ಸಿದ್ಧವಿತ್ತು. ''ಕಾಡಿನಲ್ಲಿ ಹುಲಿ ಎರಗಿ

ಹಸುವನ್ನು ಕೊಂದಿತು. ಇಗೋ ಈ ಕರು ಒಂದು ಉಳಿದಿದೆ '' ಎಂದು ಹೇಳಿ ಅನಾಥವಾದ ಆ ಆಕಳ ಕರುವನ್ನು ಗರ್ಗ ಗುರುವಿಗೆ ಒಪ್ಪಿಸಿದರು. ಹೀಗೆ ಹಸಿವು ಆ ಏಳು ತಪೋಧನರನ್ನು ಕ್ರೂರ ಕಟುಕರನ್ನಾಗಿ ಮಾಡಿತ್ತು. ಆ ಏಳು ಜನ ಹಸುವಿನ ಹಂತಕರು ಇಂಥ ಘೋರ ಕೃತ್ಯವನ್ನು ಮಾಡಿದ್ದರೂ ನಿರ್ಭಯವಾಗಿದ್ದರು. ತಾವು ಮಾಡಿದ್ದು ವೇದೋಕ್ತವಾದ ವಿಧಿ, ಪುಣ್ಯಕರ್ಮ ಎಂದೇ ಅವರ ಬಲವಾದ ನಂಬಿಕೆ. ಆದರೆ ಗೋಹತ್ಯೆಯ ಪಾಪ ಅವರಿಗೆ ತಾಕದೇ ಬಿಡಲಿಲ್ಲ. ಪವಿತ್ರವಾದ ಬ್ರಹ್ಮರ್ಷಿಗಳ ಕುಲದಲ್ಲಿ ತಪೋಧನರಾಗಿ ಹುಟ್ಟಿದ ಅವರು ಹಸುವಿನ ಹಿಂಸೆ ಮಾಡಿದ್ದರಿಂದ ಜನ್ಮಜನ್ಮಾಂತರ ನೀಚಯೋನಿಗಳಲ್ಲಿ ತೊಳಲಿ ಬಳಲಬೇಕಾಯಿತು. ಆ ಬ್ರಾಹ್ಮಣ ಜನ್ಮದಲ್ಲಿ ಮರಣ ಹೊಂದಿ ಅವರು ಮುಂದಿನ ಜನ್ಮದಲ್ಲಿ ದಾಶಪುರ ಎಂಬ ನಗರದಲ್ಲಿ ಬೇಡರಾಗಿ ಹುಟ್ಟಿದರು. ಆದರೆ ಹಿಂದಿನ ಜನ್ಮದಲ್ಲಿ ಅವರು ಮಾಡಿದ ಪಿತೃಸೇವೆ ಹಾಗೂ ಪಿತೃಭಕ್ತಿಯ ಪರಿಣಾಮವಾಗಿ ತಮ್ಮ ಜನ್ಮಾಂತರದ ನೆನಪು ಮಾತ್ರ ಅಚ್ಚಳಿಯದೇ ಉಳಿದಿತ್ತು.

''ಹಿಂದೆ ನಾವೆಲ್ಲರೂ ಕೌಶಿಕ ಕುಮಾರರಾಗಿ ಬ್ರಾಹ್ಮಣ ಜನ್ಮದಲ್ಲಿದ್ದಾಗ ಹಸಿವಿನ ಬಾಧೆ ತಾಳದೆ ಹಸುವನ್ನು ಕೊಂದದ್ದು ಮಹಾಪರಾಧ. ಘೋರಪಾಪ. ಆ ತಪ್ಪಿಗಾಗಿಯೇ ನಾವು ಈಗ ಕೊಲೆ, ಸುಲಿಗೆ ಮುಂತಾದ ಕ್ರೂರ ಕೆಲಸ ಮಾಡುವ ಬೇಡರ ಮನೆತನದಲ್ಲಿ ಜನಿಸಬೇಕಾಗಿ ಬಂದಿತು. ಈ ಜನ್ಮದಲ್ಲಿ ಜಪತಪಅಧ್ಯಯನ ಅಧ್ಯಾಪನಾದಿ ಯಾವ ಪುಣ್ಯ ಕಾರ್ಯಗಳಿಗೂ ನಮಗೆ ಅವಕಾಶವಿಲ್ಲ. ಈ ಹೀನ ಜಾತಿಯಿಂದ ನಾವು ಬೇಗ ಪಾರಾಗಬೇಕು.'' ಎಂದು ಅವರು ಆಲೋಚಿಸಿದರು. ಎಳೆವಯಸ್ಸಿನಲ್ಲಿಯೇ ಆ ಏಳೂ ಬೇಡರ ಮಕ್ಕಳಿಗೆ ನಿಖರ ವೈರಾಗ್ಯ. ಅನ್ನ ನೀರುಗಳನ್ನು ಅವರು ತೊರೆದುಬಿಟ್ಟರು. ಹಗಲಿರುಳೂ ಭಗವನ್ನಾಮ ಸಂಕೀರ್ತನೆ, ನಿರುತಧ್ಯಾನ, ನಿರಂತರಗಾನ, ನಿಶ್ಚಲಮನಸ್ಸಿನಿಂದ ಹರಿಯಆರಾಧನ. ಹೀಗೆ ನಿಶ್ಚಕ್ರ ಉಪೋಷಣೆಯಿಂದ ಮಾಡಿದ ನಾರಾಯಣನ ನಿತ್ಯೋಪಾಸನೆಯಲ್ಲಿ ಅವರ ದೇಹವು ಸೊರಗಿತು. ಕಾಯವು ಕರಗಿತು. ಕೆಲವೇ ದಿನಗಳಲ್ಲಿ ಅವರ ದೇಹವೆಲ್ಲವೂ ಜೀರ್ಣವಾಗಿ ಮರಣ ಬಂದಿತು. ವ್ಯಾಧ ಜನ್ಮದಿಂದ ಅವರಿಗೆ ಮುಕ್ತಿಯಾಯಿತು. ಮುಂದಿನ ಜನ್ಮದಲ್ಲಿ ಆ ಏಳೂ ಸಹೋದರರು ಕಾಲಿಂಜರ ಬೆಟ್ಟದಲ್ಲಿ ಜಿಗರೆಗಳಾಗಿ ಹುಟ್ಟಿದರು. ಹಿಂದೆ ಮಾಡಿದ ಪಿತೃಕಾರ್ಯದ ಪ್ರಭಾವದಿಂದ ಈಗಲೂ ಅವರಿಗೆ ಮೊದಲಿನಂತೆ ಜಾತಿಸ್ಮರಣೆ ಇದ್ದಿತು. ಹಸುಹತ್ಯೆಯ ಪಶ್ಚಾತ್ತಾಪದ ಉರಿಯಲ್ಲಿ ಅವರ ಎದೆ ಬೇಯುತ್ತಲೇ ಇತ್ತು. ಆದುದರಿಂದ ಈ ಜಿಂಕೆ ಜನ್ಮದಲ್ಲಿಯೂ ಅವರು ಹಸಿವೆ, ತೃಷೆ, ನಿದ್ದೆ, ಮೈಥುನಗಳ ಮೋಹಕ್ಕೆ ಒಳಗಾಗದೆ ವಿರಕ್ತರಾಗಿಯೇ ಉಳಿದರು. ಆಟ-ಊಟ-ನೋಟ-ಬೇಟ-ಕೂಟಗಳಿಗೆ ಒಮ್ಮೆಯೂ ಎಳೆಸದೇ ಉಪವಾಸದಿಂದಲೇ ದೇವರಧ್ಯಾನದಲ್ಲಿ ದೇಹ ಸವೆಸಿದರು. ಕಾಲಂಜರಗಿರಿಯಲ್ಲಿ ಇರುವ ಮಹಾದೇವರ ಮೂರ್ತಿ ಎದುರು ಧ್ಯಾನಮಾಡುತ್ತ ನಿಂತುಬಿಟ್ಟರು. ಮನಸ್ಸಿನಲ್ಲಿ ಯಾವಾಗಲೂ ಭಗವಂತನದೇ ನೆನಹು. ಪಿತೃಗಳ

ನೆನಪು. ಸಂತತ ಶಿವಚಿಂತನ. ಹೀಗೆ ಆ ಚಿಗರೆಗಳಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳ ಅಪೂರ್ವ ಮೇಳನವಾಗಿದ್ದು ಕಂಡುಬರುತ್ತಿತ್ತು.

ಆ ಕಾಲಂಜರ ಬೆಟ್ಟದಲ್ಲಿ ಈ ಏಳು ಚಿಗರೆಗಳು ಅಲ್ಲಿಯ ಚಂದ್ರಮೌಳಿಯ ದೇವಸ್ಥಾನದ ಎದುರು ಕೈಕೊಂಡ ಘೋರ ತಪ, ವ್ರತ, ಉಪವಾಸ, ಅನುಷ್ಠಾನಗಳನ್ನು ಕಂಡು ಜನರಿಗೆಲ್ಲ ಅತ್ಯಂತ ಆಶ್ಚರ್ಯವಾಗುತ್ತಿತ್ತು. ಹೀಗೆ ಆಹಾರ ತೊರೆದು ಧ್ಯಾನಾಸಕ್ತವಾದ ಆ ಏಳೂ ಚಿಗರೆಗಳು ಆ ಪುಣ್ಯತೀರ್ಥದ ಪರಿಸರದಲ್ಲಿಯೇ ಪ್ರಾಣ ಪರಿತ್ಯಾಗ ಮಾಡಿದವು. ಈ ಹರಿಣಜನ್ಮದಲ್ಲಿ ಮಾಡಿದ ವ್ರತೋಪವಾಸಗಳ ಪ್ರಭಾವದಿಂದ ಅವು ಮುಂದೆ ಶರದ್ವೀಪದಿಂದ ಆ ಪಕ್ಷಿಗಳ ಜನ್ಮನೀಗಿ ಮಾನಸಸರೋವರದಲ್ಲಿ ಹಂಸಗಳಾಗಿ ಹುಟ್ಟಿದವು. ಚಕ್ರವಾಕಪಕ್ಷಿಗಳಾಗಿ ಜನ್ಮ ತಳೆದವು.

ಜನ್ಮಾಂತರದಲ್ಲಿ ಮಾಡಿದ ಪಿತೃಗಳ ಆರಾಧನೆಯು ಇಲ್ಲಿಯೂ ಅವರ ನೆರವಿಗಾಗಿ ಒದಗಿ ಬಂದಿತ್ತು. ಜಾತಿಸ್ಮರಣೆ, ಹರಿಭಕ್ತಿ, ವೈರಾಗ್ಯಗಳು ಈಗಲೂ ಯಥಾಸ್ಥಿತವಾಗಿ ಅವರಲ್ಲಿ ನೆಲೆಸಿದ್ದವು. ಮೇಲಾಗಿ ಯೋಗಶಾಸ್ತ್ರದಲ್ಲಿ ಅವರಿಗೆ ದಿವ್ಯಜ್ಞಾನೋದಯವಾಗಿ ಬಿಟ್ಟಿತ್ತು. ಮಾನಸಸರೋವರದಲ್ಲಿ ನೆಲಸಿದ ಆ ಏಳೂ ಹಂಸಪಕ್ಷಿಗಳ ಹೆಸರುಗಳು ಇಂತಿದ್ದವು. ಸಮನಸ, ಕುಮುದ, ಶುದ್ಧ, ಛಿದ್ರದರ್ಶಿ, ಸುನೇತ್ರಕ, ಸುನೇತ್ರ, ಅಂಶುಮಂತ. ಹಂಸಯೋನಿಯಲ್ಲಿ ಜನಿಸಿದ ಆ ಏಳು ಜನರಲ್ಲಿ ನಾಲ್ವರು ಯೋಗಶಾಸ್ತ್ರದಲ್ಲಿ ಪಾರಂಗತರಾಗಿದ್ದರು. ಅವರ ಮನಸ್ಸು ಧೃಢವಾಗಿ ದೇವರಲ್ಲಿ ನೆಟ್ಟಿದ್ದರಿಂದ ಯಾವದೇ ತರಹದ ಚಿತ್ತ ವಿಕ್ಷೇಪಕ್ಕೆ ಅವರಲ್ಲಿ ಅವಕಾಶವೇ ಇರಲಿಲ್ಲ. ಆದರೆ ಉಳಿದ ಮೂವರಲ್ಲಿ ಮಾತ್ರ ವೈರಾಗ್ಯವು ಅಷ್ಟು ಹುರಿಗೊಂಡಿರಲಿಲ್ಲ. ಆದುದರಿಂದ ಈ ಮೂವರಿಗೆ ಯೋಗಭ್ರಷ್ಟರಾಗುವ ಒಂದು ಸಂದರ್ಭವು ಬಂದಿತು. ಏಕಾಂತ ಸುಂದರ ಮಾನಸಸರೋವರ. ನಿತಾಂತ ಮನೋಹರ ನಿಸರ್ಗಸೌಂದರ್ಯ. ಮಾನಸಸರೋವರದ ವಿಮಲತರಂಗ ಪೀಠದಲ್ಲಿ ಏಳೂ ಹಂಸ ಪಕ್ಷಿಗಳು. ಏಳೂ ಹಕ್ಕಿಗಳು ಜಲಸಮಾಧಿಯಲ್ಲಿ. ಈ ಸಪ್ತ ಪಕ್ಷಿಗಳ ತೋಯಾಸನದಲ್ಲಿಯ ತಪೋನುಷ್ಠಾನವನ್ನು ಕಾಣಲು ದೂರ ದೂರ ದೇಶಗಳಿಂದ ತಂಡೋಪತಂಡವಾಗಿ ಜನರ ಸಾಲು.

ಆಕಸ್ಮಿಕವಾಗಿ ಅಲ್ಲಿಗೆ ಪಾಂಚಾಲದೇಶದ ದೊರೆ ವಿಭ್ರಾಜನ ಆಗಮನ. ಅರಸನ ಜೊತೆಗೆ ಅನೇಕ ಅರಸಿಯರು. ಅಮರಾವತಿಯ ಅಪ್ಸರೆಯರು ನಾಚಬೇಕು ಅವರ ಚೆಲುವಿಕೆಯನ್ನು ಕಂಡು. ದಂಡೆಯ ಮೇಲಿನ ಬಳ್ಳಿವಾಡಗಳಲ್ಲಿಯೂ ಕುಂಜ ನಿಕುಂಜಗಳಲ್ಲಿಯೂ ರಾಜರಾಣಿಯರ ಸ್ವೈರ ವಿಹಾರ, ಸ್ವಚ್ಛಂದ ಸಂಚಾರ. ವಿವಿಧ ವಿನೋದ. ಬಗೆಬಗೆಯ ವಿಲಾಸ, ಆಟ, ಬೇಟ, ಕೂಟ, ಹಾವಭಾವ, ಬೆಡಗು ಬಿನ್ನಾಣ. ಈ ಎಲ್ಲ ವೈಭವ ವಿಲಾಸಗಳನ್ನು ಕಂಡು ಚಂಚಲ ಚಿತ್ತದ ಮೂರು ಚಕ್ರ ವಾಕಗಳಲ್ಲಿ ಒಂದಕ್ಕೆ ಮನಸ್ಸು ಹರಿಯಿತು. ''ಈ ರಾಜನಂತೆ ತಾನೂ ಒಂದು ದೊರೆಯಾಗಿ ಜನಿಸಬೇಕು. ಇವನಂತೆಯೇ ಇಂಥ ಚೆಲುವಿನ ಹೆಂಗಳೆಯರೊಂದಿಗೆ ವಿವಿಧ ವಿಹಾರ ವಿಲಾಸ ವೈಭವಗಳನ್ನು ಅನುಭವಿಸಬೇಕು '' ಎಂದು ಆಶೆ

ಅಂಕುರಿಸಿತು. ಹೀಗೆ ಆಶೆಪಟ್ಟ ಹಕ್ಕಿಯೇ ಹಿಂದೆ ಪಿತೃಗಳ ಮೇಲಿನ ಭಕ್ತಿಯಿಂದ ಬ್ರಾಹ್ಮಣ ಜನ್ಮದಲ್ಲಿ ಶ್ರಾದ್ಧಮಾಡಿದ ಕನಿಷ್ಠಕುಮಾರನಾಗಿದ್ದಿತು. ಆಗ ಅದರ ಹೆಸರು ಪಿತೃವರ್ತಿ ಎಂದು ಇದ್ದಿತು.

ಆ ಅರಸನ ಎಡಬಲದಲ್ಲಿ ಇಬ್ಬರು ಮಂತ್ರಿಗಳು. ಪ್ರಭೂತ, ಬಲವಾಹನ ಎಂದು ಅವರ ಹೆಸರು. ಈ ಮಂತ್ರಿದ್ವಯರ ಅಧಿಕಾರ, ಐಶ್ವರ್ಯ, ಐಷ ಆರಾಮಗಳನ್ನು ಕಂಡು ಇನ್ನೆರಡು ಹಕ್ಕಿಗಳ ಬಾಯಿಯಲ್ಲಿಯೂ ಆಶೆ ನೀರೊಡೆಯಿತು. ತಾವೂ ಅವರಂತೆ ಮಂತ್ರಿಗಳಾಗಬೇಕು. ಮನುಷ್ಯ ಜನ್ಮ ಪಡೆಯಬೇಕು. ಮರಳಿ ಮತ್ತೆ ಭೂಲೋಕದಲ್ಲಿ ಹುಟ್ಟಬೇಕು.'' ಎಂಬ ಹೆಬ್ಬಯಕೆ ಹಂಬಲವಾಗಿ ಅವುಗಳ ಹೃದಯದಲ್ಲಿ ಹೆಡೆ ಎತ್ತಿತು.

ಹಿಂದಿನ ಜನ್ಮಗಳಲ್ಲಿ ಇವರು ಮಾಡಿದ ಹರಿಯ ಆರಾಧನೆಯ ಪುಣ್ಯವು ರಾಶಿ ರಾಶಿಯಾಗಿ ತೇರ್ಗೈಸಿ ನಿಂತಿತು. ಅವರ ಬಯಕೆ ಮೂರ್ತ ಸ್ವರೂಪವನ್ನು ತಾಳಲು ತಡವಾಗಲಿಲ್ಲ. ಅರಸೊತ್ತಿಗೆಯನ್ನು ಅಪೇಕ್ಷಿಸಿದ ಹಂಸಪಕ್ಷಿಯು ಆ ಮಾನಸ ಸರೋವರಕ್ಕೆ ವಿಹಾರಕ್ಕೆ ಬಂದ ವಿಭ್ರಾಜ ದೊರೆಯ ಪುತ್ರನಾಗಿ ಜನಿಸಿದನು. ಬ್ರಹ್ಮದತ್ತ ಎಂದು ಅವನಿಗೆ ನಾಮಕರಣವಾಯಿತು. ಮಂತ್ರಿಪದವಿಯನ್ನು ಬಯಸಿದ ಮಿಕ್ಕ ಎರಡುಗೆಣೆವಕ್ಕಿಗಳು ಅದೇ ಅರಸನ ಮಂತ್ರಿಗಳ ಮಕ್ಕಳಾಗಿ ಹುಟ್ಟಿದರು. ಒಬ್ಬನ ಹೆಸರು ಕಂಡೀರಕ, ಮತ್ತೊಬ್ಬನದು ಸುಬಾಲಕ. ದೊಡ್ಡವನಾದ ಬಳಿಕ ಬ್ರಹ್ಮದತ್ತನಿಗೆ ಪಾಂಚಾಲರಾಜ್ಯದಲ್ಲಿ ಪುರೋಹಿತರಿಂದ ಪಟ್ಟಾಭಿಷೇಕ. ಎಲ್ಲ ಶಾಸ್ತ್ರಗಳಲ್ಲಿಯೂ ಅವನಿಗೆ ಪಾರಂಗತಿ. ತಲಸ್ಪರ್ಶಿ ಜ್ಞಾನ. ಅಗಾಧಪಾಂಡಿತ್ಯ, ಅಸಾಮಾನ್ಯ ಪರಾಕ್ರಮ, ಯೋಗಶಾಸ್ತ್ರದಲ್ಲಿಯೂ ಪರಿಣತಿ, ಮೇಲಾಗಿ ಎಲ್ಲ ಪ್ರಾಣಿಗಳ ಭಾಷೆಗಳದೂ ಸಂಪೂರ್ಣ ಅರಿವು ಅವನಿಗೆ. ಈ ಪ್ರಾಣಿಭಾಷಾ ಪ್ರಾವೀಣ್ಯವು ಬ್ರಹ್ಮದತ್ತನ ಅಸಾಧಾರಣ ಗುಣ.

ದೇವಲನ ಮಗಳು ಸನ್ನತಿ ಈ ಬ್ರಹ್ಮದತ್ತ ಮಹಾರಾಜನ ಮಡದಿ. ಅವಳು ಒಳ್ಳೇ ಗುಣವತಿ, ಮೇಲೆ ರೂಪವತಿ, ವಿದ್ಯಾವತಿಯೂ ಕೂಡ .ಈ ಸನ್ನತಿಯು ಬೇರೆ ಯಾರೂ ಅಲ್ಲ. ಬ್ರಾಹ್ಮಣ ಜನ್ಮದಲ್ಲಿ ಈ ಏಳೂ ಜನ ವಿಪ್ರಕುಮಾರರು ಕೂಡಿ ಕೊಂದು ತಿಂದ ಹಸು ಕಪಿಲೆಯೇ ಈ ಸನ್ನತಿ ಎಂಬ ಮಹಾರಾಣಿಯಾಗಿ ಹುಟ್ಟಿ ಬಂದಿತ್ತು. ಪಿತೃಕಾರ್ಯದಲ್ಲಿ ಶ್ರಾದ್ಧಕ್ಕಾಗಿ ವಿನಿಯೋಗಿಸಲ್ಪಟ್ಟದ್ದರಿಂದ ಅದು ಬ್ರಹ್ಮವಾದಿನಿಯಾದ ಮಹಾರಾಣಿಯಾಗಿ ಅವತರಿಸಿ ಬಂದಿತ್ತು. ಇಂಥ ರೂಪರಾಶಿ, ಗುಣಗಳ ಖಣಿ ಆದ ಮಡದಿಯೊಡನೆ ಮಹಾರಾಜ ಬ್ರಹ್ಮದತ್ತನು ಪಾಂಚಾಲ ಸಾಮ್ರಾಜ್ಯವನ್ನು ಸುಖದಿಂದ ಆಳತೊಡಗಿದನು. ಕಂಡೀರ, ಸುಬಾಲಕ ಎಂಬ ಮಂತ್ರಿಗಳು ಸರ್ವಕಾರ್ಯಗಳಲ್ಲಿಯೂ ಅವನಿಗೆ ಸಹಾಯಕರಾಗಿದ್ದರು.

ಈ ಮೂವರೂ ಯೋಗಭ್ರಷ್ಟರಾಗಿ ಚಿತ್ತ ಚಂಚಲಿಸಿರ ಆ ಮೂರು ಚಪಲ ಹಂಸಪಕ್ಷಿಗಳೇ. ಇನ್ನು ಉಳಿದ ನಾಲ್ಕು ಹಂಸ ಪಕ್ಷಿಗಳು ಮಾತ್ರ ಯಾವ ಲೌಕಿಕ ಆಸೆ ಆಮಿಷಗಳಿಗೆ ಒಳಗಾಗದೆ ನಿರಂತರ ಹರಿಧ್ಯಾನದಲ್ಲಿ ವೈರಾಗ್ಯ ನಿಶ್ಚಲಮನಸ್ಸಿನಿಂದ ನಿರತವಾಗಿದ್ದವು. ಆದರೆ ತಮ್ಮ ಸೋದರರಾದ ಮೂವರು

ಹಕ್ಕಿಗಳು ಮತ್ತೆ ಮರ್ತ್ಯ ಸುಖದ ಆಶೆಯ ಎಳತಕ್ಕೆ ಸಿಕ್ಕು ಭೂಲೋಕದಲ್ಲಿ ಮರಳಿ ಜನಿಸಿದ್ದನ್ನು ನೋಡಿ ತಾವೂ ಅವರನ್ನು ಸಕಾಲದಲ್ಲಿ ಎಚ್ಚರಿಸಲು ಅದೇ ನಗರದಲ್ಲಿ ಶುಚಿರ್ಭೂತರಾಗಿ ಬ್ರಾಹ್ಮಣ ಕುಮಾರರಾಗಿ ಜನಿಸಿದರು. ಒಂದಾನೊಂದು ದಿನ ಬ್ರಹ್ಮದತ್ತ ಮಹಾರಾಜನು ಪಟ್ಟದರಸಿ ಸನ್ನತಿಯೊಂದಿಗೆ ವನವಿಹಾರಕ್ಕೆ ತೆರಳಿದನು. ವಿಪಿನಗರ್ಭದಲ್ಲಿ ಒಂದು ರಮಣೀಯ ಉಪವನ. ತರತರದ ಗಿಡ ಬಳ್ಳಿಗಳು, ನೋಡಿದಲ್ಲೆಲ್ಲ ಹೂವಿನ ಸುಗ್ಗಿ. ಹಸುರಿನ ರಾಜ್ಯ. ಪಚ್ಚೆಪಯರು. ಹಸಿರುಕುಸಿರು. ಇಂಥ ನಿಸರ್ಗದ ನೆಲವೀಡಿನಲ್ಲಿ ಅರಸಅರಸಿಯರ ಸರಸ. ಸೊಲ್ಲು ಸಲ್ಲಾಪ. ಸ್ವಚ್ಛಂದ ಅಲೆದಾಟ, ಸಾನಂದ ಒಲಿದಾಟ.

ಆ ಕಾಡಿನಲ್ಲಿ ಮತ್ತೊಂದು ಕೌತುಕದ ದೃಶ್ಯ. ಅಲ್ಲಿ ಒಂದು ಇರುವೆಯ ಸಂಸಾರ. ಗಂಡ ಹೆಂಡರ ಬಡೆದಾಟ. ಹೆಣ್ಣು ಇರುವೆಯ ಸಿಟ್ಟು. ಗಂಡು ಇರುವೆಯ ಅನುನಯ. ಅನುಸರಣ, ಮತ್ತೆ ಹೆಣ್ಣು ಇರುವೆಯ ಏರಾಟ. ಗಂಡಿನ ಅಲೆದಾಟ. ಓಡಾಟ, ಹೆಣ್ಣು ಇರುವೆ ಭಾರಿ ಬಿಗುವು. ಗಂಡಿಗೊ ಹೆಣ್ಣಿನ ಹುಚ್ಚು. ಅಚ್ಚುಮೆಚ್ಚು, ಕಾಮನ ಬಾಣದ ಚುಚ್ಚು, ಹುಚ್ಚಾಗಿ ಪ್ರೇಯಸಿಯ ಪ್ರದಕ್ಷಿಣೆ ಪ್ರಾರ್ಥನೆ, ದೀನ ಯಾಚನೆಗಳನ್ನು ಬಿದ್ದುಬಾಗಿ ಮಾಡುತ್ತಲೇ ಇತ್ತು. ಅದನ್ನೆಲ್ಲ ಒದ್ದು ಹೆಣ್ಣು ಬೀಗಿ ನಿಲ್ಲುತ್ತಿತ್ತು.

''ಪ್ರಿಯೆ, ಈ ಜಗತ್ತಿನಲ್ಲಿ ನಿನ್ನಂಥ ಹೆಣ್ಣಿಲ್ಲ. ನಿನ್ನ ಚೆಲುವಿಕೆ ಯಾವ ಇರುವೆಗೆ ಇದೆ ? ನಿನ್ನ ಬಣ್ಣವಂತೂ ಬಂಗಾರ, ಮೈಯೆಲ್ಲ ಶೃಂಗಾರ. ನಿನ್ನನ್ನು ನೋಡಿದರೇ ಸಾಕು. ಕಂಗಳಿಂದ ರಸ ಒಸರುವದು. ಬೆಲ್ಲ ಸಕ್ಕರೆ ತಿಂದು ನಿನ್ನ ಮೈಯೆಲ್ಲವೂ ಸಿಹಿ. ನಿನ್ನ ನಡಿಗೆಯ ಥಾಟು, ನಿಲುವು, ಚೆಲುವು ಎಲ್ಲವೂ ಮೋಹಕವಾಗಿವೆ. ನೀನು ನಕ್ಕರಂತೂ ತಿಂಗಳಿನ ಚೆಲುವನ್ನು ಮುಕ್ಕುಳಿಸಿದಂತೆ. ನಿನ್ನ ಈ ಎಲ್ಲ ಚೆಲುವಿಕೆಗಿಂತ ನಿನ್ನ ಸದ್ಗುಣಗಳಿಗೇ ನಾನು ಹೆಚ್ಚು ಮುಗ್ಧವಾದದ್ದು. ನಾನು ಉಣ್ಣದೇ ನೀನು ಉಂಡಿಲ್ಲ. ತಿನ್ನದಿರುವಾಗ ತಿಂದಿಲ್ಲ. ನಾನು ಮೈತೊಳೆಯುವವರೆಗೆ ನೀನು ಸ್ನಾನ ಕೂಡ ಮಾಡಿಲ್ಲ. ನಾನು ಹೊರಗೆ ಹೋದಾಗಂತೂ ನೀನು ಕಂಗಾಲಾಗಿಯೇ ಕುಳಿತುಬಿಡುವೆ. ನಾನು ಸಿಟ್ಟಿಗೆದ್ದರೂ ನೀನು ಶಾಂತಳೇ. ನನ್ನ ಮೇಲೆ ನಿನಗೆ ಯಾವಾಗಲೂ ಭಯಭಕ್ತಿ. ಸರ್ವದಾ ಆಸಕ್ತಿ. ಅನುಗಾಲವೂ ಅನುರಕ್ತಿ. ''ಪ್ರಿಯೆ, ಇಷ್ಟೆಲ್ಲ ಇದ್ದರೂ ಇಂದು ಮಾತ್ರ ನೀನು ನನ್ನ ಮೇಲೆ ಯಾಕೆ ಸಿಟ್ಟಾಗಿರುವೆ ? ನಿನ್ನ ಮುಖದಲ್ಲಿ ಕ್ರೋಧವು ಉಕ್ಕೇರುತ್ತಿದೆ. ಇದಕ್ಕೆ ಕಾರಣವೇನು ಹೇಳು.'' ಗಂಡು ಇರುವೆ ಹೀಗೆ ದೀನವಾಗಿ ಬೇಡಿಕೊಳ್ಳುತ್ತಿರುವಾಗ ಹೆಣ್ಣು ಇರುವೆಗೆ ಕೋಪವು ಏರುತ್ತಲೇ ಇತ್ತು. ಇದು ಬಾಗಿದಷ್ಟು ಅದು ಬೀಗಿ ನಿಲ್ಲುತ್ತಿತ್ತು. ಕೋಪದಿಂದ ಕಿಡಿಕಿಡಿಯಾಗಿ ಅದು ಗಂಡನನ್ನು ಧಿಕ್ಕರಿಸಿ ನುಡಿಯಿತು. ''ದುಷ್ಟನೇ, ನಾನು ನಿನ್ನೊಡನೆ ಮಾತನಾಡಲಾರೆ. ನನ್ನನ್ನು ನೀನು ಏಕೆ ಮಾತನಾಡಿಸುವೆ ? ನಿನ್ನೆ ನೀನು ಒಂದು ಮಿಠಾಯಿಯ ತುಣುಕನ್ನು, ನನ್ನನ್ನು ಬಿಟ್ಟು ಬೇರೆಯವಳಿಗೆ ಕೊಟ್ಟು ಬರಲಿಲ್ಲವೇ ? ನಿನ್ನ ಈ ಕಾಮಚೇಷ್ಟೆ ಎಲ್ಲವೂ ನನಗೆ ತಿಳಿದಿದೆ.'' ಹೆಣ್ಣು ಪಿಪೀಲಿಕೆಯ ಈ ದರ್ಪದ ನುಡಿಯನ್ನು ಕೇಳಿ ಗಂಡು ಮತ್ತೂ ಮೆತ್ತಗಾಗಿ ಮೆಲ್ಲನೆ ನುಡಿಯಿತು.

"ಓ ಚೆಲುವಿನ ಹೆಣ್ಣೆ, ನಾನು ಮಿಠಾಯಿಯನ್ನು ಬೇರೆಯವಳಿಗೆ ಕೊಟ್ಟಿದ್ದೇನೋ ನಿಜ. ಆದರೆ ನೀನೇ ಅವಳು ಎಂದು ನಾನು ಭ್ರಮಿಸಿದ್ದೆ. ನಿನ್ನದೇ ಹೋಲಿಕೆ ಅವಳಲ್ಲಿ ಇಲ್ಲವೇ ? ಅಪ್ಪಟ ನಿನ್ನ ರೂಪವನ್ನೇ ಹೋಲುವ ಅವಳನ್ನು ನೀನೇ ಎಂದು ಬಗೆದು ಪ್ರೀತಿಯಿಂದಲೇ ನನ್ನ ಮುಖದಲ್ಲಿಯ ಮಿಠಾಯಿಯನ್ನು ಅವಳಿಗೆ ನಾನು ಕೊಟ್ಟದ್ದು. ಅವಳನ್ನು ನೀನು ಎಂದು ಭ್ರಮಿಸಿದ್ದು ನನ್ನ ತಪ್ಪು, ಇದೊಂದು ಬಾರಿ ನನ್ನ ಅಪರಾಧವನ್ನು ಕ್ಷಮಿಸಿ ಬಿಡು. ಮುಂದೆ ಎಂದೂ ಇಂಥ ತಪ್ಪನ್ನು ಮಾಡುವದಿಲ್ಲ. ನಿನ್ನ ಕಾಲುಹಿಡಿದುಹೇಳುತ್ತೇನೆ. ಆಣೆಮಾಡಿ ಹೇಳುತ್ತೇನೆ. ನಿನ್ನ ಪಾದದ ಮೇಲೆ ಬಿದ್ದ ನನ್ನ ಮೇಲೆ ಪ್ರಸನ್ನಳಾಗು." ಹೀಗೆ ಪ್ರಿಯಕರನ ತಪ್ಪು ಒಪ್ಪಿಗೆಯ ಪಶ್ಚಾತ್ತಾಪದ ನುಡಿಯನ್ನು ಆಲಿಸಿ ಪಿಪೀಲಿಕೆ (ಹೆಣ್ಣು ಇರುವೆ)ಗೆ ಮನಸ್ಸು ಪ್ರಸನ್ನವಾಯಿತು. ಅದು ತನ್ನ ನಸುಗೋಪವನ್ನು ನಟಿಸಿ, ಮೆಲುನಗೆ ಸೂಸಿ, ವೈಯ್ಯಾರದಿಂದ ಇನಿಯನಿಗೆ ತನ್ನ ತನುವನ್ನು ಅರ್ಪಿಸಿತು. ಬ್ರಹ್ಮದತ್ತ ಈ ಇರುವೆ ದಂಪತಿಗಳ ಪ್ರೇಮ ಕಲಹದ ಸಂಭಾಷಣೆಯನ್ನುಕೇಳಿ, ಕಂಡು ಆಶ್ಚರ್ಯ ಚಕಿತನಾದನು. ಶ್ರೀಹರಿಯ ಅನುಗ್ರಹದಿಂದ ಅವನಿಗೆ ಎಲ್ಲ ಪ್ರಾಣಿಗಳ ಭಾಷೆಗಳೂ ತಿಳಿಯುತ್ತಿದ್ದವು. ಈ ಸರ್ವಪ್ರಾಣಿಭಾಷಾ ಪಾಂಡಿತ್ಯದಿಂದ ಆ ಪಿಪೀಲಿಕಾ ದಂಪತಿಗಳ ಸಿಟ್ಟು, ಸಂವಾದ, ವಿರೋಧ, ವೈರಸ್ಯ, ಪ್ರಾರ್ಥನೆ, ಸರಸಸಲ್ಲಾಪ, ಸಾಮರಸ್ಯ ಮುಂತಾದವುಗಳೆಲ್ಲ ಅವನಿಗೆ ಕುಳಿತಲ್ಲಿಯೇ ತಿಳಿದು ಬಂದವು. ಅದರಿಂದ ಅವನಿಗೆ ಪ್ರಾಣಿಜಗತ್ತಿನ ಪ್ರಣಯ ಜೀವನದ ಒಂದು ಹೊಸ ಪರಿಯನ್ನು ಪರಿಚಯ ಮಾಡಿಕೊಂಡಂತಾಗಿ ಒಳ್ಳೇ ಕೌತುಕವೆನಿಸಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು*



## ಮಾನಸ ಸರೋವರದಲ್ಲಿ ಪಕ್ಷಿಗಳ ತಪಸ್ಸು — ಅಧ್ಯಾಯ - ೨೨

**ಋಷಿಯ ಉವಾಚಃ**

**ಕಥಂ ಸತ್ವರುತಜ್ಞೋಽಭೂದ್ ಬ್ರಹ್ಮದತ್ತೋ ಧರಾತಲೇ**
**ತಚ್ಚಾಽಭವತ್ಕಸ್ಯಕುಲೇ ಚಕ್ರವಾಕಚತುಷ್ಟಯಮ್ ॥**

**ಋಷಿಗಳು** :- ಬ್ರಹ್ಮದತ್ತನು ಈ ಭೂಮಂಡಲದಲ್ಲಿ ಪಶುಪಕ್ಷಿ ಮುಂತಾದ ಪ್ರಾಣಿಗಳ ಭಾಷೆಯನ್ನು ಅರಿತದ್ದು ಹೇಗೆ ? ಹಾಗೂ ಮಾನಸ ಸರೋವರದಲ್ಲಿ ತಪಸ್ಸಿಗೆ ಕುಳಿತ ಏಳು ಚಕ್ರವಾಕಗಳಲ್ಲಿ ಮೂರು ಯೋಗ ಭ್ರಷ್ಟವಾದ ಬಳಿಕ, ಯೋಗಸಿದ್ಧರಾದ ಉಳಿದ ನಾಲ್ವರು ಯಾವ ಕುಲದಲ್ಲಿ ಹುಟ್ಟಿದರು.

**ಸೂತ** :- ಯೋಗ ಪಾರಂಗತರಾದ ಉಳಿದ ನಾಲ್ಕು ಹಕ್ಕಿಗಳು ಕೂಡ ಬ್ರಹ್ಮದತ್ತನ ರಾಜಧಾನಿಯಲ್ಲಿಯೇ ಓರ್ವ ವೃದ್ಧ ಬ್ರಾಹ್ಮಣನ ಮಕ್ಕಳಾಗಿ ಜನಿಸಿದರು. ಜನ್ಮಾಂತರದ ಸ್ಮರಣೆಯು ಎಂದಿನಂತೆ ಅವರ ಮನಸ್ಸಿನಲ್ಲಿ ಅಚ್ಚಳಿಯದೇ ಈಗಲೂ ಉಳಿದಿತ್ತು.

ಧೃತಿಮಾನ್, ತತ್ವದರ್ಶಿ, ವಿದ್ಯಾಚಂಡ, ತಪೋತ್ಸುಕ ಎಂದು ಅವರಿಗೆ ಹೆಸರು ಇಡಲಾಗಿತ್ತು. ಹೆಸರಿಗೆ ತಕ್ಕಂತೆ ಇದ್ದವು ಅವರ ಗುಣಗಳು. ಅವರ ತಂದೆ ಮಾತ್ರ ಸುದಾಮನ ಒಕ್ಕಲು. ಮನೆಯಲ್ಲಿ ದಟ್ಟದಾರಿದ್ರ್ಯ. ಮೊದಲೇ ವಿರಕ್ತರಾದ ಈ ನಾಲ್ಕೂ ಬ್ರಾಹ್ಮಣಕುಮಾರರಿಗೆ ಮನೆಯ ದಾರಿದ್ರ್ಯವು ವೈರಾಗ್ಯಕ್ಕೆ ಅನುಕೂಲವೆ ಆಗಿತ್ತು. ತಪಸ್ಸು ಮಾಡಿ ಸಿದ್ಧಿಪಡೆಯಬೇಕೆಂದು ಅವರಿಗೆ ಬುದ್ಧಿ ಹುಟ್ಟಿತು. ಅದರಂತೆ ನಿರ್ಧರಿಸಿ ಅವರು ತಪೋನುಷ್ಠಾನಕ್ಕಾಗಿ ತಂದೆಯ ಅನುಮತಿ ಕೇಳಿದರು. ಇದನ್ನು ಕೇಳಿ ತಂದೆಗೆ ಆಘಾತ, ಆಶ್ಚರ್ಯ. ಎಳೆವಯಸ್ಸಿನ ಕೋಮಲಕುಮಾರರ ಘೋರ ತಪೋನುಷ್ಠಾನದ ಅಚಲ ನಿರ್ಧಾರವು ಅವನನ್ನು ಕಂಗೆಡಿಸಿತು. ದೀನದನಿಯಲ್ಲಿ ಕಾತರಗೊಂಡು ಕೇಳಿದ, ಇನ್ನೂ ಕೂಸಿನಂತಿರುವ ತನ್ನ ಕುಮಾರರನ್ನು ''ಮಕ್ಕಳೇ, ಇದೇನು ನಿಮಗೆ ಅಕಾಲದಲ್ಲಿ ತಪಸ್ಸಿನ ಹುಚ್ಚು ! ಇದು ಶುದ್ಧ ಅಧರ್ಮ. ಮುಪ್ಪಿನ ತಂದೆಯನ್ನು ಮನೆಯಲ್ಲಿ ಬಿಟ್ಟು ಎಳೆವರೆಯದ ಮಕ್ಕಳು ತಪಸ್ಸಿಗೆ ತೆರಳುವದು ಯಾವ ಧರ್ಮ ! ಮುದುಕ ಮಾತಾಪಿತರ ಸೇವೆಯೇ ಪುತ್ರರ ಮುಖ್ಯಧರ್ಮ. ಪ್ರಧಾನವಾದ ಈ ಪುತ್ರಧರ್ಮವನ್ನು ಪರಿತ್ಯಾಗಮಾಡಿ ನೀವು ಕಾಡಿಗೆ ಓಡಿದರೆ ನಿಮಗೆ ಸದ್ಗತಿ ಹೇಗಾಗುವದು ! ನೀವು ಬಿಟ್ಟುಹೋದರೆ ಈ ಮುದಿ ವಯಸ್ಸಿನಲ್ಲಿ ನಮ್ಮ ಗತಿ ಏನು ?'' ಎಂದು ಕೇಳಿದರು ತಾವು ಬಿಟ್ಟುಹೋದ ಬಳಿಕ ತಮ್ಮ ತಂದೆಗೆ ವಾರ್ಧಕ್ಯದಲ್ಲಿ ಉಪಜೀವನಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವದು ಪುತ್ರರಾದ ತಮ್ಮ ಕರ್ತವ್ಯವೆಂಬುದನ್ನು ಅವರು ನಾಲ್ವರೂ ಅರಿತಿದ್ದರು. ಮತ್ತು ಇದೇ ತಮ್ಮ ತಂದೆಯ ಚಿಂತೆಯ ಮುಖ್ಯ ಕಾರಣವೆಂದೂ ಅವರು ತಿಳಿದಿದ್ದರು. ಆದುದರಿಂದ ಅವರು ತಂದೆಗೆ ವಿನಯದಿಂದ ವಂದಿಸಿ ವಿಜ್ಞಾಪಿಸಿಕೊಂಡರು.

''ಅಪ್ಪ, ನಾವು ಹೋದರೂ ನಿನಗೆ ಮುಂದಿನ ಉಪಜೀವನದ ಉತ್ತಮ ವ್ಯವಸ್ಥೆಯನ್ನು ಮಾಡಿದ್ದೇವೆ. ನೀನು ಪ್ರಾತಃಕಾಲದಲ್ಲಿ ಎದ್ದು ಈ ದೇಶದ ರಾಜನಾದ ಬ್ರಹ್ಮದತ್ತನ ಎದುರು ಹೋಗಿ ನಾವು ಹೇಳಿಕೊಡುವ ಈ ಒಂದು ಪದ್ಯವನ್ನು ಪಠಿಸು. ಈ ಶ್ಲೋಕವನ್ನು ಕೇಳಿದ ಕೂಡಲೇ ನಿನಗೆ ಆ ಮಹಾರಾಜನು ಬೇಕಾಗುವಷ್ಟು ಹಣವನ್ನೂ ಸಾಕಾಗುವಷ್ಟು ಐಶ್ವರ್ಯವನ್ನೂ ಕೊಡುವನು. ಸಾವಿರಾರು ಗ್ರಾಮಗಳನ್ನು ನಿನಗೆ ದತ್ತಿರೂಪವಾಗಿ ದಾನಮಾಡುವನು. ಅದರಿಂದ ನಿನ್ನ ಈ ಜನ್ಮದ ದಾರಿದ್ರ್ಯವೇ ಕಳೆದುಹೋಗುವದು. ಮುಪ್ಪಿನ ಕಾಲದಲ್ಲಿ ನೀವು ಈ ಶ್ಲೋಕದ ಪ್ರಭಾವದಿಂದ ರಾಜಮಹಾರಾಜರಂತೆ ಐಶ್ವರ್ಯವಂತರಾಗಿ ಬಾಳಬಹುದು. ಭಾಗ್ಯವಂತರಾಗಿ ಬದುಕಬಹುದು. ಹೀಗೆ ಹೇಳಿ ಅವರು ತಂದೆಗೆ ಈ ಒಂದು ಪದ್ಯವನ್ನು ಹೇಳಿಕೊಟ್ಟರು.

**ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು**
**ದಾಶಾಸ್ತಥಾ ದಾಶಪುರೇ ಮೃಗಾಶ್ಚ ॥**
**ಕಾಲಂಜರೇ ಸಪ್ತ ಚ ಚಕ್ರವಾಕಾಃ**
**ಯೇ ಮಾನಸೇ ತೇ ವಯಮತ್ರಸಿದ್ಧಾಃ ॥**

ತಮ್ಮ ತಂದೆಗೆ ಈ ಪದ್ಯವನ್ನು ಪಾಠಮಾಡಿಸಿ ಧೃತಿಮಾನ್, ತತ್ವದರ್ಶಿ, ವಿದ್ಯಾಚಂಡ ಮತ್ತು ತಪೋತ್ಸುಕ ಎಂಬ ನಾಕೂ ಆ ಬ್ರಾಹ್ಮಣನ ಮಕ್ಕಳು ತಪಸ್ಸಿಗೆ ತೆರಳಿದರು. ಉಪಾಯವಿಲ್ಲದೆ ತಂದೆಯು ಕಾಡಿಗೆ ಹೋಗಲು ಅವರಿಗೆ ಸಮ್ಮತಿಯನ್ನು ನೀಡಿದನು. ಅವರು ಅತ್ತ ಅಡವಿಗೆ ಹೋದ ಬಳಿಕ ಅವರ ಅಪ್ಪನು ಅರಮನೆಯನ್ನು ಹುಡುಕಿ ಹೊರಟನು. ಹಿಂದೆ ಪಾಂಚಾಲದೇಶದಲ್ಲಿ ವಿಭ್ರಾಜ ಎಂಬ ಅರಸ. ಅವನಿಗೆ ಅನಘ ಎಂಬ ಒಬ್ಬ ಮಗ. ಅವನು ಹರಿಭಕ್ತ. ಒಳ್ಳೇ ಮಕ್ಕಳನ್ನು ಪಡೆಯಬೇಕೆಂದು ಹಂಬಲ ಹೊತ್ತು ಹಲವಾರು ವರ್ಷಗಳ ಕಾಲ ಹರಿಯನ್ನು ಕುರಿತು ಅವನು ತಪಂಗೈದ. ನಾರಾಯಣನು ಅವನ ನೇಮ ನಿಷ್ಠೆ, ವ್ರತ ಉಪವಾಸಗಳಿಂದ ಪ್ರಸನ್ನನಾದ. ಪ್ರತ್ಯಕ್ಷನಾದ. ''ವರಕೇಳು '' ಎಂದು ಹೇಳಿದ. ''ಬಯಸಿದ್ದನ್ನು ಕೊಡುವೆ '' ಎಂದು ಆಶ್ವಾಸನೆ ಇತ್ತ. ಆಗ ಆ ಭಕ್ತ ಭಗವಂತನಲ್ಲಿ ಕೇಳಿಕೊಂಡ.

''ಓ ದೇವ, ನನಗೆ ಓರ್ವ ಯೋಗಿ ಶ್ರೇಷ್ಠನಾದ ಪುತ್ರನನ್ನು ಕರುಣಿಸು. ಅವನಿಗೆ ಶಸ್ತ್ರವಿದ್ಯೆಯಲ್ಲಿ ನೈಪುಣ್ಯವಿರಲಿ. ಶಾಸ್ತ್ರವಿದ್ಯೆಯಲ್ಲಿ ಪ್ರಾವೀಣ್ಯ ಬರಲಿ. ಧರ್ಮದಲ್ಲಿ ಬುದ್ಧಿ ಇರಲಿ. ಮಾತಿನಲ್ಲಿ ಸಿದ್ಧಿ ಇರಲಿ. ಮೇಲಾಗಿ ಆ ನನ್ನ ಭಾವಿ ಕುಮಾರನಿಗೆ ಎಲ್ಲ ಜೀವ ಜಂತುಗಳ ಭಾಷೆಗಳೂ ಚನ್ನಾಗಿ ತಿಳಿದಿರಲಿ.'' ರಾಜನ ಈ ಬೇಡಿಕೆಗೆ '' ತಥಾಸ್ತು '' ಎಂದ ಆ ಮುಕುಂದ. ಅಲ್ಲಿಯೇ ಅದೃಶ್ಯನಾದ ಆ ಪರಮಾತ್ಮ. ಭಗವಂತನ ಆ ವರದ ಬಲದಿಂದ ಆ ಅನಘ ಮಹಾರಾಜನಿಗೆ ಬ್ರಹ್ಮದತ್ತನು ಮಗನಾಗಿ ಜನಿಸಿದ. ಹುಸಿಯಾದೀತೇ ಹರಿಯ ಹೇಳಿಕೆ ! ಅವನ ವರದಂತೆ ಬ್ರಹ್ಮದತ್ತ ಶೂರನಾಗಿದ್ದ, ದಯಾಳುವೂ ಆಗಿದ್ದ. ಎಲ್ಲ ಪ್ರಾಣಿಗಳ ಭಾಷೆಗಳನ್ನೂ ಅವನು ಚೆನ್ನಾಗಿ ಬಲ್ಲ. ಆದುದರಿಂದಲೇ ಅವನು ಮಡದಿಯೊಡನೆ ವನವಿಹಾರಕ್ಕೆ ಬಂದಾಗ ಇರುವೆ ದಂಪತಿಗಳ ಪ್ರಣಯ ಕಲಹದ ಸಂಭಾಷಣೆಯನ್ನು ಕೇಳಿ ನಕ್ಕುಬಿಟ್ಟ. ಗಂಡು ಇರುವೆಯ ದೈನ್ಯ, ಹೆಣ್ಣು ಇರುವೆಯ ಸಿಟ್ಟು ಸೆಡವುಗಳು ಅವನಿಗೆ ಕೌತುಕವೆನಿಸಿ ನಗೆಯನ್ನು ತರಿಸಿದವು.

ಇದನ್ನು ನೋಡಿ ಮಹಾರಾಣಿ ಸನ್ನತಿಗೆ ಅತ್ಯಾಶ್ಚರ್ಯವಾಯಿತು. ಬಳಿಯಲ್ಲಿ ಯಾರೂ ಇಲ್ಲ. ತಾನೇ ತಾನು, ರಾಜನೇ ರಾಜ. ತಾವಿಬ್ಬರೇ ಇದ್ದಾಗ ಈ ವಿಜನ ವನದ ಏಕಾಂತದಲ್ಲಿ ನಗು- ವಂತಹದು ಏನಿದೆ? ಅವಳಿಗೆ ಏನೋ ಸಂಶಯ. ಕೇಳಿಬಿಟ್ಟಳು ಪತಿಯನ್ನು- ''ಅಕಸ್ಮಾತ್ತಾಗಿ ಅರಸರು ಹೀಗೆ ಬಿದ್ದು ಬಿದ್ದು ನಗಲು ಕಾರಣವೇನು ? ನನಗಂತೂ ನಿಮ್ಮ ಹಾಸ್ಯಕ್ಕೆ ಕಾರಣವೇ ಕಾಣಲೊಲ್ಲದು. ನಿಮ್ಮ ಈ ಅಕಾಲ ಅಟ್ಟಹಾಸದ ಮೂಲವೇನು ?'' ಮಡದಿಯ ಪ್ರಶ್ನೆಯನ್ನು ಕೇಳಿ ಮಹಾರಾಜನು ಆ ಇರುವೆ ದಂಪತಿಗಳ ಸಂಭಾಷಣೆಯನ್ನೆಲ್ಲ ವಿವರಿಸಿ ಹೇಳಿದನು.

''ಆ ಪಿಪೀಲಕ ಪಿಪೀಲಿಕೆಯರ ಪ್ರಣಯ ಕಲಹದ ಬಿರುನುಡಿಗಳನ್ನು ಆಲಿಸಿ ನನಗೆ ನಗೆ ತಡೆಯುವದಾಗಲಿಲ್ಲ, ನಕ್ಕೆ. ಇದಕ್ಕೆ ಬೇರಾವ ಕಾರಣವೂ ಇಲ್ಲ.'' ಇದಕ್ಕೆ ಆ ರಾಣಿಯು ''ಇದು ಶುದ್ಧ ಸುಳ್ಳು. ಹಸಿ ಹಸಿ ಹುಸಿ. ನೀವು ನನ್ನನ್ನು ನೋಡೇ ಹಾಗೆ ನಕ್ಕದ್ದು. ಇರುವೆಗಳ ಮಾತು ಮಾನವರಿಗೆ ತಿಳಿಯಲಿಕ್ಕುಂಟೇ ?

ಅದು ಅಶಕ್ಯ. ನೀವು ನನ್ನನ್ನು ನೋಡೇ ಹಾಗೆ ಹಾಸ್ಯಮಾಡಿದ್ದು. ನನ್ನನ್ನು ಉಪಹಾಸ ದೃಷ್ಟಿಯಿಂದ ನೋಡುವದು ನಿಮ್ಮ ಸ್ವಭಾವವೇ ಆಗಿದೆ. ಹೀಗೆ ನಿಮ್ಮಿಂದ ನಗೆಗೀಡಾಗಿ ಬದುಕುವದೇ ನನಗೆ ಅಸಹ್ಯವೆನಿಸಿದೆ. ನಾನು ಇನ್ನು ಕಾರಣವಿಲ್ಲದೆ ನನ್ನನ್ನು ಉಪಹಾಸಮಾಡುವ ನಿಮ್ಮೊಡನೆ ಬಾಳಲಾರೆ'' ಎಂದು ನುಡಿದಳು. ಕೋಪೋದ್ದೀಪಿತವಾದ ಅವಳ ಕಿಡಿನುಡಿಗಳನ್ನು ಕೇಳಿ ರಾಜನು ಸಂಭ್ರಮದಿಂದ ಮುಂದೆ ಸರಿದು ಸಂತೈಸಿದನು. ರಂಬಿಸಿ, ಚುಂಬಿಸಿ, ನಿಜಸ್ಥಿತಿಯನ್ನು ಅವಳಿಗೆ ಮನಗಾಣಿಸಲು ಪ್ರಯತ್ನಿಸಿದನು. ಏನಾದರೂ ರಾಣಿಯ ಕೋಪ ಇಳಿಯಲಿಲ್ಲ. ತಾಪ ಕಳೆಯಲಿಲ್ಲ. ಮೌನ ಮುರಿಯಲಿಲ್ಲ. ಮನೆಯಲ್ಲೆಲ್ಲ ಗಂಭೀರ ವಾತಾವರಣ. ಮೌನದ ಸಾಮ್ರಾಜ್ಯ. ರಾಜನೂ ರಾಣಿಯನ್ನು ಸಮಜಾಯಿಸಿ ಸಂತೈಸಲು ಅನೇಕ ಬಾರಿ ಪ್ರಯತ್ನಪಟ್ಟು ಕೊನೆಗೆ ನಿರಾಶನಾದನು. ''ಇಂಥ ಮೊಂಡ ಹೆಂಡತಿಯನ್ನು ಒಲಿಸುವದಕ್ಕಿಂತ ಆ ಪರಮಾತ್ಮನನ್ನು ಆರಾಧಿಸುವದೇ ಲೇಸು'' ಎಂದು ಬಗೆದು ರಾಣಿಯ ಉಸಾಬರಿಯನ್ನು ಬಿಟ್ಟು ಹರಿಧ್ಯಾನವನ್ನು ಕೈಕೊಂಡನು. ಏಳುಹಗಲು, ಏಳುರಾತ್ರಿ ಸಾಗಿತು ಬ್ರಹ್ಮದತ್ತನ ಆ ಭಗವದ್ಧ್ಯಾನ. ಏಳನೆ ದಿನ ಆ ರಾಜನ ಕನಸಿನಲ್ಲಿ ನಾರಾಯಣ ಕಾಣಿಸಿಕೊಂಡು ಹೇಳಿದ -

''ಇಂದು ಪ್ರಾತಃಕಾಲದಲ್ಲಿ ಒಬ್ಬ ಮುದುಕ ಬ್ರಾಹ್ಮಣನು ಈ ನಗರವನ್ನು ಸುತ್ತಾಡುತ್ತ ಬರುವನು. ಅವನ ವಾಕ್ಯದಿಂದ ನಿನಗೆ ಎಲ್ಲವೂ ತಿಳಿಯುವದು.'' ಶ್ರೀಹರಿಯ ಈ ಸ್ವಪ್ನ ಸಂದೇಶವನ್ನು ಕೇಳಿ ದೊರೆ ಬ್ರಹ್ಮದತ್ತನು ಪ್ರಭಾತ ಕಾಲದಲ್ಲಿ ನಗರದ ಹೊರಗೆ ಹೊರಟನು. ಮಂತ್ರಿ ಹಾಗೂ ಮಹಾರಾಣಿಯರೊಂದಿಗೆ ಮಹಾರಾಜನು ನಗರದಿಂದ ನಿರ್ಗಮಿಸುವಾಗ ಎದುರು ವೃದ್ಧಬ್ರಾಹ್ಮಣನು ಬಂದನು. ಅವನು ಬಾಯಿಂದ ಯಾವದೋ ಒಂದು ಪದ್ಯವನ್ನು ಪುಟಪುಟಿಸುತ್ತಲಿದ್ದನು. ಅವನು ಹತ್ತಿರ ಬಂದಂತೆ ಈ ಶ್ಲೋಕಾಕ್ಷರಗಳು ರಾಜನ ಕಿವಿಗೆ ಸ್ಪಷ್ಟವಾಗಿ ಕೇಳಿಬಂದವು.

**ಯೇ ವಿಪ್ರಮುಖ್ಯಾಃ ಕುರುಜಾಂಗಲೇಷು**
**ದಾಶಾಸ್ತಥಾ ದಾಶಪುರೇ ಮೃಗಾಶ್ಚ**
**ಕಾಲಂಜರೇ ಸಪ್ತ ಚ ಚಕ್ರವಾಕಾಃ**
**ಯೇ ಮಾನಸೇ ತೇ ವಯಮತ್ರ ಸಿದ್ಧಾಃ ॥**

''ಕುರುಕ್ಷೇತ್ರದಲ್ಲಿ ಶ್ರೇಷ್ಠ ಬ್ರಾಹ್ಮಣರಾದ ನಾವು ನಮ್ಮ ದುಷ್ಕರ್ಮದಿಂದ ದಾಶಪುರದಲ್ಲಿ ಬೇಡರಾಗಿ ಜನಿಸಿದೆವು. ಅನಂತರ ಕಾಲಂಜರದಲ್ಲಿ ಚಿಗರೆಗಳಾಗಿ ಹುಟ್ಟಿದೆವು. ಆ ಬಳಿಕ ಮಾನಸಸರೋವರದಲ್ಲಿ ಚಕ್ರವಾಕಹಕ್ಕಿಗಳಾಗಿ ಉದಿಸಿದ್ದೆವು. ಈಗ ಮಾನವರಾಗಿದ್ದೇವೆ. ಇನ್ನು ಮುಂದಿನ ಮಾರ್ಗಕ್ಕೆ ನಾವಂತೂ ಸಿದ್ಧರಾಗಿ ಹೊರಟಿದ್ದೇವೆ.'' ಈ ಪದ್ಯವನ್ನು ಕೇಳಿದ ಕೂಡಲೇ ಮಹಾರಾಜನು ರಥದಲ್ಲಿ ಕುಳಿತಲ್ಲಿಯೇ ಕುಸಿದು ಬಿದ್ದನು. ಅವನ ಅಕ್ಕಪಕ್ಕದಲ್ಲಿರುವ ಇಬ್ಬರೂ ಮಂತ್ರಿಗಳೂ ಮೂರ್ಛೆ ಹೋದರು. ಅವರಲ್ಲಿ ಸುಬಾಲಕ ಎಂಬ ಮಂತ್ರಿಯು ಕಾಮಶಾಸ್ತ್ರವನ್ನು

ರಚಿಸಿ ದಾಭ್ರವ್ಯ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಪಾಂಚಾಲದೇಶದಲ್ಲಿ ' ಸರ್ವಜ್ಞ ' ಎಂದೇ ಜನರು ಅವನನ್ನು ಕರೆಯುತ್ತಿದ್ದರು. ಇನ್ನೊಬ್ಬ ಸಚಿವನಾದ ಕಂಡರೀಕನೂ ಕೂಡ ವೇದಶಾಸ್ತ್ರ ಪ್ರವರ್ತಕನಾದ ಮಹಾಧರ್ಮಾತ್ಮಕನೆನಿಸಿದ್ದ. ಈ ಮೂವರೂ ಆ ಮುದುಕ ಬ್ರಾಹ್ಮಣ ಹೇಳಿದ ಈ ಒಂದು ಪದ್ಯವನ್ನು ಕೇಳಿ ದುಃಖದೀನರಾಗಿ ಆ ಬ್ರಾಹ್ಮಣನ ಎದುರೇ ಬಿದ್ದುಬಿಟ್ಟರು.

''ಅಯ್ಯೋ! ನಾವು ಯೋಗಮಾರ್ಗದಿಂದ ಭ್ರಷ್ಟರಾಗಿ ಸಂಸಾರಚಕ್ರದಲ್ಲಿ ಉರುಳಿದೆವಲ್ಲ! ನಮ್ಮ ಸಹೋದರರು ಮೋಕ್ಷಮಾರ್ಗದಲ್ಲಿ ಮುನ್ನಡೆಯುತ್ತಿದ್ದಾರೆ. ನಾವೋ ಇಲ್ಲಿ ವಿಷಯ ಸುಖದ ವಿಷವರ್ತುಲದಲ್ಲಿ ಹೊರಳಾಡುತ್ತಿದ್ದೇವೆ. ರಮಣೀ, ರಾಜ್ಯ, ಸುಖ, ಸಂಪದಗಳ ಆಶೆಯಿಂದ ಮತ್ತೆ ನಾವು ಕರ್ಮಬದ್ಧರಾಗಿ ಯೋಗಚ್ಯುತರಾಗಿ ಇಲ್ಲಿಯೇ ಉರುಳಾಡುತ್ತಿದ್ದೇವೆ. ಈಗಾದರೂ ನಮಗೆ ಇದರ ಅರಿವು ಮೂಡಿದ್ದು ನಾವು ಐದು ಜನ್ಮಗಳ ಹಿಂದೆ ಮಾಡಿದ ಶ್ರಾದ್ಧದ ಪುಣ್ಯವೇ ಸರಿ. ಶ್ರಾದ್ಧದ ಮಹಿಮೆಯು ನಿಜವಾಗಿಯೂ ಅಗಾಧವಾಗಿದೆ '' ಎಂದಂದು ಅವರು ಅಲ್ಲಿಂದ ಎದ್ದು ಅರಮನೆಗೆ ಬಂದರು. ಆ ಪದ್ಯವನ್ನು ಹೇಳಿದ ಬ್ರಾಹ್ಮಣನೇ ತಮ್ಮ ನಾಲ್ಕು ಸಹೋದರರಿಗೆ ಬ್ರಾಹ್ಮಣ ಜನ್ಮವಿತ್ತ ತಂದೆಯೆಂದು ತಿಳಿದು ಅವನಿಗೆ ಅನೇಕ ಊರುಗಳನ್ನು ದತ್ತಿ ಹಾಕಿಕೊಟ್ಟು ಬೇಕಾದಷ್ಟು ರಾಶಿರಾಶಿಯಾಗಿ ದುಡ್ಡನ್ನು ಐಶ್ವರ್ಯಗಳನ್ನು ಕೊಟ್ಟು ಕಳಿಸಿದರು. ದಟ್ಟ ದರಿದ್ರನಾದ ಆ ಬ್ರಾಹ್ಮಣನಿಗೆ ಒಮ್ಮೆಲೆ ಇಷ್ಟು ಐಶ್ವರ್ಯ ಬಂದದ್ದರಿಂದ ಪರಮಾನಂದವಾಗಿ ಮನೆಗೆ ಹಿಂದಿರುಗಿದ.

ಇತ್ತ ಮಹಾರಾಜ ಬ್ರಹ್ಮದತ್ತನು ತನ್ನ ಮಗ ವಿಷ್ವಕ್‌ಸೇನನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದನು. ಅವನಿಗೆ ರಾಜ್ಯದ ಅಧಿಕಾರವನ್ನೆಲ್ಲ ವಹಿಸಿಕೊಟ್ಟು ತಾನು ತನ್ನ ಇಬ್ಬರು ಮಂತ್ರಿಗಳೊಡನೆ ಮಾನಸಸರೋವರಕ್ಕೆ ನಡೆದನು. ಅಲ್ಲಿ ಇದಕ್ಕೂ ಮೊದಲೇ ವೃದ್ಧ ಬ್ರಾಹ್ಮಣನ ಮನೆಯಿಂದ ಹೊರಟು ಬಂದ ಧೃತಿಮಾನ್, ತತ್ವದರ್ಶಿ, ವಿದ್ಯಾಚಂಡ, ತಪೋತ್ಸುಕ ನಾಲ್ವರೂ ಇವರ ದಾರಿ ನೋಡುತ್ತ ಕುಳಿತಿದ್ದರು. ಮಾನಸಸರೋವರದ ದಂಡೆಯ ಮೇಲೆ ಹಿಂದೆ ಚಕ್ರವಾಕಪಕ್ಷಿಗಳಾಗಿ ತಪಸ್ಸು ಮಾಡುತ್ತಿದ್ದ ಏಳು ಯೋಗಿಗಳೂ ಮತ್ತೆ ಮಿಲಿತರಾದರು. ಬ್ರಹ್ಮದತ್ತನೇ ಮೊದಲಾದವರು ಅಲ್ಲಿಗೆ ಬಂದುದನ್ನು ನೋಡಿ ಮಹಾರಾಣಿ ಸನ್ನತಿಯೂ ಅಲ್ಲಿಗೆ ಐತಂದಳು. ಅವಳು ಬ್ರಹ್ಮದತ್ತನ ಬಳಿಗೆ ಬಂದು ಪಶ್ಚಾತ್ತಾಪದಿಂದ ''ಕ್ಷಮಿಸಿರಿ . ನಿಮ್ಮ ರಾಜ್ಯತ್ಯಾಗಕ್ಕೇ ನಾನೇ ಕಾರಣಳಾದೆ. ಜನರೆಲ್ಲ ಬೇಡಿ ಬಯಸುವ ರಾಜ್ಯೈಶ್ವರ್ಯ ಸುಖವನ್ನು ಪತಿಯಿಂದ ಕಸಿದು ಅವನನ್ನು ಕಾಡಿಗೆ ಕಳಿಸಿದ ಭ್ರಷ್ಟಳು ನಾನು. ನನ್ನ ಅಪರಾಧವನ್ನು ಮನ್ನಿಸಬೇಕು '' ಎಂದು ಬೇಡಿಕೊಂಡಳು ?

''ಅದೇನೋ ನಿಜ.'' ಮಹಾರಾಜ ಉತ್ತರಿಸಿದ. ''ಆದರೆ ನನಗೆ ನಿಜವಾದ ಆತ್ಮದ ಅರಿವುಂಟಾದದ್ದು ನಿನ್ನದೇ ಪ್ರಸಾದ. ನೀನು ಅಂದು ಸಿಟ್ಟಿನಿಂದ ಮಾತು ಬಿಡದಿದ್ದರೆ ನಾನು ನಿನ್ನಲ್ಲಿ ಲಂಪಟನಾಗಿ ಆ ಸಂಸಾರದಲ್ಲಿಯೇ ಕೊನೆಯವರೆಗೂ ಕೊಳೆಯುತ್ತಿದ್ದೆ.

ನೀನು ಸುಮ್ಮನೆ ಸಿಟೆದು ನನ್ನೊಡನೆ ಮಾತು ಬಿಟ್ಟು ಮನೆಯಲ್ಲಿ ವಿರಸ ವಾತಾವರಣವನ್ನು ನಿರ್ಮಿಸಿದ್ದರಿಂದಲೇ ನನಗೆ ವೈರಾಗ್ಯ ಹುಟ್ಟಿತು. ಶ್ರೀ ಹರಿಯಕಡೆಗೆ ಮನಸ್ಸು ಹರಿಯಿತು. ಮುಂದೆ ಅದರಿಂದಲೇ ಕರ್ಮಪಾಶ ಹರಿಯಿತು. ಕತ್ತಲೆ ಹರಿದು ಮತ್ತೆ ಬೆಳಕಾಯಿತು. ಜ್ಞಾನೋದಯವಾಗಿ ಮತ್ತೆ ನಾವು ಯೋಗಸಿದ್ಧರಾದ ನನ್ನ ಸಹೋದರರೊಡನೆ ಕೂಡುವಂತಾಯಿತು. ಇದೆಲ್ಲವೂ ನಿನ್ನ ಕೃತಕ ಕೋಪದ ಪ್ರಭಾವ ಪರಿಣಾಮ '' ಎಂದು ಹೇಳಿ ಅವಳನ್ನು ಅಭಿನಂದಿಸಿದನು. ಮುಂದೆ ಅವರು ಏಳೂ ಜನ ಯೋಗಿ ಸಹೋದರರು ಅದೇ ಕಾಡಿನಲ್ಲಿ ಕುಳಿತು ಶ್ರೀ ಹರಿಯನ್ನು ಕುರಿತು ಉಗ್ರವಾದ ತಪಸ್ಸನ್ನು ಕೈಕೊಂಡರು. ಅತ್ಯುಗ್ರವಾದ ನಿರಂತರ ತಪಸ್ಸಮಾಧಿಯೋಗದಿಂದ ಏಳೂ ಜನ ಸಹೋದರರ ದೇಹ ಜೀರ್ಣವಾಗಿ ಕೊನೆಗೆ ಬ್ರಹ್ಮರಂಧ್ರದಿಂದ ಅವರ ಪ್ರಾಣೋತ್ಕ್ರಮಣವಾಯಿತು. ಅನಂತರ ಅವರಿಗೆ ಮೋಕ್ಷಪ್ರಾಪ್ತಿಯಾಯಿತು. ಹೀಗೆ ಪಿತೃದೇವತೆಗಳು ಯಥಾವಿಧಿಯಾಗಿ ಶ್ರಾದ್ಧಕರ್ಮವನ್ನು ಶ್ರದ್ಧೆಯಿಂದ ಮಾಡುವವರಿಗೆ ಅತ್ಯಂತ ಪ್ರಸನ್ನರಾಗಿ ಆಯುರಾರೋಗ್ಯ ಸಂತಾನ-ಸಂಪತ್ತು, ರಾಜ್ಯ-ಐಶ್ವರ್ಯ ಮುಂತಾದ ಬೇಕಾದ ಬಯಸಿದ ಫಲಗಳನ್ನೆಲ್ಲ ಕೊಡುವರು. ಕೊನೆಗೆ ಮೋಕ್ಷವನ್ನೂ ಕೂಡ ಹೊಂದಲು ಅನುಕೂಲ ಮಾಡಿಕೊಡುವರು. ಈ ಪಿತೃಮಾಹಾತ್ಮ್ಯವನ್ನೂ ಬ್ರಹ್ಮದತ್ತನ ಚರಿತ್ರವನ್ನೂ ಪಠಿಸಿದ ಹಾಗೂ ಕೇಳಿದವರಿಗೆ ಬ್ರಹ್ಮಲೋಕದಲ್ಲಿ ನಿರಂತರ ಸ್ಥಾನ ಕಟ್ಟಿಟ್ಟದ್ದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು*



## ಶ್ರಾದ್ಧಕ್ಕೆ ಯೋಗ್ಯಕಾಲ ಮತ್ತು ಸ್ಥಾನ — ಅಧ್ಯಾಯ - ೨೩

**ಋಷಿಯ ಉವಾಚಃ**

**ಕಸ್ಮಿನ್ ಕಾಲೇಚ ತಚ್ಛ್ರಾದ್ಧಮನಂತಫಲದಂ ಭವೇತ್ ।**
**ಕಸ್ಮಿನ್ ವಾಸರಭಾಗೇತು ಶ್ರಾದ್ಧಕೃತ್ ಶ್ರಾದ್ಧಮಾಚರೇತ್**
**ತೀರ್ಥೇಷು ಚ ಕೇಷು ಕೃತಂ ಶ್ರಾದ್ಧಂ ಬಹುಫಲಂ ಭವೇತ್ ॥**

**ಋಷಿಗಳು** :-ಯಾವ ಕಾಲದಲ್ಲಿ ಮಾಡಿದ ಶ್ರಾದ್ಧವು ಅನಂತ ಫಲವನ್ನು ಕೊಡುವದು? ಮತ್ತು ದಿನದ ಯಾವ ಹೊತ್ತಿನಲ್ಲಿ ಶ್ರಾದ್ಧವನ್ನು ಮಾಡಬೇಕು ಯಾವ ಯಾವ ತೀರ್ಥಗಳಲ್ಲಿ ಶ್ರಾದ್ಧ ಮಾಡಿದರೆ ವಿಶೇಷ ಪುಣ್ಯವುಂಟು ? ಇದನ್ನೆಲ್ಲ ತಿಳಿಸಬೇಕು.

**ಸೂತ** :-ಹಗಲು ಅಪರಾಹ್ಣ ಕಾಲದಲ್ಲಿ ಅಭಿಜಿತ್ ಮತ್ತು ರೌಹಿಣ ಎಂಬ ಎರಡು ಮುಹೂರ್ತಗಳಲ್ಲಿ ಪಿತೃಗಳ ಉದ್ದೇಶವಾಗಿ ಯಾವ ದಾನಮಾಡಿದರೂ ಅದು ಅಕ್ಷಯವಾಗುತ್ತದೆ. ವಿಪ್ರಶ್ರೇಷ್ಠರೇ, ಪಿತೃಗಳಿಗೆ ಪ್ರೀತ್ಯಾಸ್ಪದವಾದ ತೀರ್ಥಕ್ಷೇತ್ರಗಳ ಹೆಸರುಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳಿರಿ- ಗಯಾ ಕ್ಷೇತ್ರವು ಎಲ್ಲ ತೀರ್ಥಗಳಲ್ಲಿ ~~ಅತ್ಯಂತ~~ ಶ್ರೇಷ್ಠವಾದ ತೀರ್ಥ ಎನಿಸಿದೆ.

ಸರ್ವದೇವೋತ್ತಮವಾದ ಬ್ರಹ್ಮದೇವರು ಸ್ವಯಂ ನೆಲೆಸಿದ ಅದು ಉತ್ತಮವಾದ ಪಿತೃತೀರ್ಥ ಎನಿಸುತ್ತದೆ. '' ಬಹುಜನ ಮಕ್ಕಳಾಗಲಿ ಎಂದು ಬಯಸಬೇಕು. ಅನೇಕ ಮಕ್ಕಳಲ್ಲಿ ಒಬ್ಬನಾದರೂ ಗಯಾ ಕ್ಷೇತ್ರಕ್ಕೆ ಹೋಗಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಬಹುದು '' ಎಂದು ಪಿತೃಗಳ ಹಾರೈಕೆಯ ಪದ್ಯವು ಪ್ರಸಿದ್ಧವೇ ಇದೆ.

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್
ತತ್ರೈಷಾ ಪಿತೃಭಿರ್ಗೀತಾ ಗಾಥಾಭಾಗ ಮಭೀಪ್ಸುಬಿಃ ॥
ತಥಾ ವಾರಾಣಸೀ ಪುಣ್ಯಾ ಪಿತೃಣಾಂ ವಲ್ಲಭಾ ಸದಾ
ಯತ್ರಾವಿಮುಕ್ತಸಾನ್ನಿಧ್ಯಂ ಭುಕ್ತಿ ಮುಕ್ತಿ ಫಲಪ್ರದಮ್ ॥

ಇದರಂತೆ ಕಾಶೀಕ್ಷೇತ್ರವೂ ಪಿತೃಗಳ ಅತ್ಯಂತ ಪ್ರೀತಿಯ ಕ್ಷೇತ್ರವಾಗಿದೆ. ಅಲ್ಲಿ ಇಹದಲ್ಲಿ ಭೋಗೈಶ್ವರ್ಯವನ್ನೂ ಪರತ್ರ ಮೋಕ್ಷವನ್ನೂ ಕರುಣಿಸುವ ಅವಿಮುಕ್ತೇಶ್ವರನು ಸ್ವಯಂ ಸನ್ನಿಹಿತನಾಗಿದ್ದಾನೆ. ಇದೇ ರೀತಿ ವಿಮಲೇಶ್ವರ ಎಂಬ ಕ್ಷೇತ್ರವೂ, ಸರ್ವಾಭೀಷ್ಟಪ್ರದವಾದ ಪ್ರಯಾಗ ತೀರ್ಥವೂ ಪಿತೃಗಳಿಗೆ ಅತ್ಯಂತ ಇಷ್ಟವಾದ ಪುಣ್ಯಕ್ಷೇತ್ರಗಳು ಎನಿಸಿವೆ. ಒಟೇಶ್ವರನು ಮಾಧವನೊಡನೆ ಒಡಗೂಡಿ ನೆಲಿಸಿರುವ ಅಕ್ಷಯ ಒಟವು ಪವಿತ್ರವಾದ ಪಿತೃ ತೀರ್ಥವಾಗಿದೆ. ಇದರಂತೆ ದಶಾಶ್ವಮೇಧ, ಗಂಗಾದ್ವಾರ ನಂದಾತೀರ್ಥ, ಲಲಿತಾತೀರ್ಥ, ಹೃಷೀಕೇಶ, ಮಿತ್ರಪದ, ಗಂಗಾಸಾಗರ, ಬ್ರಹ್ಮಸರ, ನೈಮಿಷ , ಗೋಮತೀ ನದಿಯ ಗಂಗೋದ್ಭೇದ ಮುಂತಾದವುಗಳು ಸಕಲ ತೀರ್ಥಯಾತ್ರಾ ಫಲವನ್ನು ಕೊಡುವ ಶ್ರೇಷ್ಠ ತೀರ್ಥಗಳು ಆಗಿವೆ.

ಹದಿನೆಂಟುಭುಜದ ಶಿವನು ನೆಲಸಿರುವ ಕಾಂಚನದ್ವಾರವು, ನಾವು ಈಗ ವಾಸಿಸಿದ ನೈಮಿಷಾರಣ್ಯವು, ನರಸಿಂಹದೇವರಸನ್ನಿಧಾನ ಉಳ್ಳ ಕೃತಶೌಚವೂ ಮಹಾ ಪುಣ್ಯತೀರ್ಥಗಳಾಗಿವೆ. ಇಕ್ಷುಮತಿ, ಗಂಗಾಸಂಗಮ, ಸರಯು, ಇರಾವತಿ, ಯಮುನಾ, ದೇವಿಕಾ, ಕಾಲಿ, ಚಂದ್ರಭಾಗಾ, ದೃಷದ್ವತಿ, ವೇಣುಮತಿ, ವೇತ್ರವತಿ ಮುಂತಾದ ನದಿಗಳು ಪಿತೃಗಳಿಗೆ ಇಷ್ಟ ತೀರ್ಥಗಳಾಗಿವೆ. ಇಲ್ಲಿ ಮಾಡಿದ ಶ್ರಾದ್ಧಗಳಿಗೆ ಕೋಟಿಪಾಲು ಪುಣ್ಯ ಹೆಚ್ಚು. ಇದರಂತೆ ನೀಲಕುಂಡ, ರುದ್ರಸರ, ಮಾನಸ, ಮಂದಾಕಿನಿ, ಅಚ್ಛೋದಾ, ವಿಪಾಶಾ, ಸರಸ್ವತೀ, ಕ್ಷಿಪ್ರಾ, ಮುಂತಾದ ನದಿಗಳೂ ಪೂರ್ವಮಿತ್ರ, ವೈದ್ಯನಾಥ ಮಹಾಕಾಲ, ಕಾಲಂಜರ, ವಂಶೋದ್ಭೇದ, ಹರೋದ್ಭೇದ, ಭದ್ರೇಶ್ವರ, ವಿಷ್ಣುಪದ, ನರ್ಮದಾದ್ವಾರ ಮುಂತಾದ ಕ್ಷೇತ್ರಗಳು ಪುಣ್ಯತೀರ್ಥಗಳೆಂದು ಪ್ರಸಿದ್ಧವಾಗಿವೆ, ಇಲ್ಲಿ ಶ್ರಾದ್ಧಮಾಡಿ ಪಿತೃಗಳಿಗೆ ಪಿಂಡವನ್ನು ಕೊಟ್ಟರೆ ಗಯಾಕ್ಷೇತ್ರದಲ್ಲಿ ಶ್ರಾದ್ಧಮಾಡಿದ ಪುಣ್ಯವು ಬರುತ್ತದೆ.

ಈ ಪಿತೃತೀರ್ಥಗಳನ್ನು ಸ್ಮರಣಮಾಡಿದರೂ ಸಾಕು ಪಾಪ ಪರಿಹಾರವಾಗುವದು. ಇದರಂತೆ ಓಂಕಾರತೀರ್ಥ, ಕಾವೇರಿ, ಕಪಿಲಾ, ಚಂಡವೇಗಾ, ಸಂಗಮ, ಅಮರಕಂಟಕ, ಸುಖತೀರ್ಥ, ಸೋಮೇಶ್ವರತೀರ್ಥ, ಕಾಯಾವರೋಹಣ, ಚರ್ಮಣ್ವತೀ, ಗೋಮತಿ. ವರ್ಣ, ಔಂಶೀನಸ, ಭೈರವ, ಭೃಗುತುಂಗ, ಗೌರೀತೀರ್ಥ, ವೈನಾಯಕ, ಭದ್ರೇಶ್ವರ, ಪಾಪಹರ, ತಪತೀ, ಮೂಲತಾಪಿ, ಪಯೋಷ್ಣೀ, ಪಾಟಲಾ, ಆವಂತಿಕಾ, ವೇಣಾ,

ಮಹಾಶಾಲಿ, ಮಹಾರುದ್ರ, ಮಹಾಲಿಂಗ, ದಶಾರ್ಣಾ, ಶತರುದ್ರಾ, ವಿಶ್ವಪದ, ಅಂಗಾರವಾಹಿಕಾ, ಶೋಣಾ, ಘರ್ಷಕಾಲಿಕಾ, ವಿತಸ್ಥಾ ಮುಂತಾದ ನದನದೀತೀರ್ಥಗಳು ಪ್ರಶಸ್ತವಾಗಿದ್ದು ಅತ್ಯಂತ ಪುಣ್ಯಕರವಾಗಿವೆ. ಇಲ್ಲಿ ಶ್ರಾದ್ಧಮಾಡಿದರೆ ಅನಂತ ಪುಣ್ಯಫಲ ಪ್ರಾಪ್ತಿಯಾಗುತ್ತದೆ. ದ್ರೋಣೀ, ಧಾರಾ, ಕ್ಷೀರನದೀ, ಗೋಕರ್ಣ, ಗಜಕರ್ಣ, ಪುರುಷೋತ್ತಮ, ದ್ವಾರಕಾ, ಕೃಷ್ಣತೀರ್ಥ, ಅರ್ಬುದಸರಸ್ವತಿ, ಮಣಿಮತೀ, ಗಿರಿಕರ್ಣಿಕಾ, ಧೂತಪಾಪ, ದಕ್ಷಿಣಸಮುದ್ರ ಮುಂತಾದ ತೀರ್ಥ ತೀರ್ಥಕ್ಷೇತ್ರಗಳು ಪಿತೃಗಳಿಗೆ ಪ್ರೀತ್ಯಾಸ್ಪದವಾಗಿವೆ. ಇಲ್ಲಿ ಮಾಡಿದ ಶ್ರಾದ್ಧ ಕ್ರಮಗಳಿಗೆ ಅಕ್ಷಯ ಫಲ.

ಇವಲ್ಲದೇ ಇನ್ನೂ ಹಲವಾರು ಪುಣ್ಯಕ್ಷೇತ್ರ ತೀರ್ಥಗಳು ಉಂಟು. ಅವುಗಳ ಹೆಸರನ್ನು ಹೇಳುತ್ತೇನೆ ಕೇಳಿರಿ. ಶಾಂರ್ಙ್ಗ ಎಂಬ ಬಿಲ್ಲನ್ನು ಧರಿಸಿದ ಶ್ರೀ ವಿಷ್ಣು ಸಂಚರಿಸುವ ಮೇಘುಕರಕ್ಷೇತ್ರವೂ, ಮತ್ತು ಮಂಡೋದರೀ, ಚಂಪಾನದೀ, ಅಮಲನಾಥಕ್ಷೇತ್ರ, ಮಹಾಶಾಲ, ಚಕ್ರವಾಕ, ಚರ್ಮಕೋಟಿ, ಜನ್ಮೇಶ್ವರ, ತ್ರಿಪುರ, ಸಿದ್ಧೇಶ್ವರ, ಶ್ರೀ ಶೈಲ, ಶಾಂಕರ, ನರಸಿಂಹ, ಮಹೇಂದ್ರ, ಶ್ರೀರಂಗ, ತುಂಗಭದ್ರಾ, ಭೀಮರಥೀ, ಭೀಮೇಶ್ವರ, ಕಾವೇರಿ, ಗೋದಾವರಿ, ಕುಟ್ಮಲಾ, ತ್ರಿಸಂಧ್ಯಾ, ತ್ರ್ಯಂಬಕ, ಶ್ರೀ ಪರ್ಣೀ, ತಾಮ್ರಪರ್ಣೀ, ಜಯಾ, ಶಿವಧಾರಾ, ಭದ್ರಾ, ಪಂಪಾ, ರಾಮೇಶ್ವರ, ಏಲಾಪುರ, ಅಲಂಪುರ, ಆಮರ್ದಕ, ಅಲಂಭುಷ, ಏಕಾಂಭಕ, ಗೋವರ್ಧನ, ಹರಿಶ್ಚಂದ್ರ, ಪೃಥೂದಕ, ಕದಲೀ, ರಾಮಾಧಿವಾಸ, ಸೌಮಿತ್ರೀ ಸಂಗಮ, ಇಂದ್ರಕೀಲ, ಮಹಾನಾದ, ಬಾಹುದಾ, ಸಿದ್ಧವನ, ಪಾಶುಪತ, ಪ್ರಿಯಮೇಲಕ ಮುಂತಾದ ನದೀ ತೀರ್ಥಗಳು ಅಕ್ಷಯ ಫಲಪ್ರದಗಳಾಗಿದ್ದು ಇಲ್ಲಿ ಮಾಡಿದ ಶ್ರಾದ್ಧಾದಿಪುಣ್ಯಕಾರ್ಯಗಳಿಗೆ ಅನಂತಫಲಉಂಟು.

ಗೋದಾವರೀ ತೀರದ ಜಾಮದಗ್ನ್ಯ ತೀರ್ಥದಲ್ಲಿ ಸಾವಿರಲಿಂಗಗಳಿದ್ದು ಎಲ್ಲ ತೀರ್ಥಗಳೂ ಇಲ್ಲಿ ಅಂತರ್ಗಾಮಿಯಾಗಿ ಹರಿದು ಬಂದು ಸೇರುತ್ತವೆ. ಪ್ರತೀಕ ರಾಜನ ಭಯದಿಂದ ಹಿಂದೊಮ್ಮೆ ಗೋದಾವರಿಯು ದಂಡೆ ಒಡೆದು ಹರಿಯಿತು. ಆ ಸ್ಥಳದಲ್ಲಿ **ಅಪ್ಸರೋಯುಗ** ಎಂಬ ತೀರ್ಥವಿದೆ. ಅಲ್ಲಿ ಶ್ರಾದ್ಧ, ಅಗ್ನಿಕಾರ್ಯ ಪಿಂಡದಾನಾದಿಗಳನ್ನು ಮಾಡಿದರೆ ಅತಿಶಯಿತ ಫಲವುಂಟು. ದೇವೇಂದ್ರನ ನಮುಚಿ ವಧದ ಪಾಪವನ್ನು ಪರಿಹರಿಸಿದ ಇಂದ್ರಫೇನಾ ನದಿಯೂ, ಸಹಸ್ರಲಿಂಗ, ರಾಘವೇಶ್ವರ, ಪುಷ್ಕರ, ಸಾಲಿಗ್ರಾಮ, ಸೋಮಪಾನ, ಸಾರಸ್ವತ ಮತ್ತು ಸ್ವಾಮಿತೀರ್ಥಗಳು ಪುಣ್ಯ ತೀರ್ಥಗಳಾಗಿವೆ ಮತ್ತು ಮಲಂಧರಾ, ಕೌಶಿಕೀ, ಚಂದ್ರಿಕಾ, ವೈದರ್ಭಾ, ಪಯೋಷ್ಣೀ, ಕಾವೇರೀ ಮುಂತಾದ ನದಿಗಳು ಪುಣ್ಯಪಯಸ್ವಿನೀ ಎಂದು ಪ್ರಖ್ಯಾತ ಪಡೆದಿವೆ. ಇಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಪ್ರೀತಿ. ಯಜಮಾನನಿಗೆ ಪುಣ್ಯ.

ಇದರಂತೆ ಲೋಹದಂಡ, ಚಿತ್ರಕೂಟ, ವಿಂಧ್ಯಯೋಗ, ಗಂಗಾನಂದಾದಿನದೀ ತಟಾಕ, ಕುಬ್ಜಾಮ್ರ, ಉರ್ವಶಿ, ಪುಲಿನ, ಸಂಸಾರಮೋಚನ, ಗೌತಮೇಶ್ವರ, ವಸಿಷ್ಠ, ಹಾರೀತ, ಬ್ರಹ್ಮಾವರ್ತ, ಕುಶಾವರ್ತ, ಘಂಟೇಶ್ವರ, ರಾಮತೀರ್ಥ, ಅಶ್ವತೀರ್ಥ, ವೇದಶಿರ, ವಸುಪ್ರದ, ಭಾಗಲಾಂಡ, ಓಘವತೀ, ಪಿಂಡಾರಕ, ಹಯತೀರ್ಥ,

ಶಂಖೋದ್ಧಾರ, ನೀಲಪರ್ವತ, ಧರಣೀತೀರ್ಥ, ಬದರೀತೀರ್ಥ, ಗಣತೀರ್ಥ, ಜಯಂತ, ವಿಜಯ, ಶಕ್ರ, ಶ್ರೀ ಪತಿ, ರೈವತಿಕ, ಶಾರದಾ, ಭದ್ರಕಾಲೇಶ್ವರ, ವೈಕುಂಠ,ಭೀಮೇಶ್ವರ, ಮಾತೃಗೃಹ, ಕರವೀರ, ಕುಶೇಶಯ, ಗೌರೀ ಶಿಖರ, ನಕುಲೇಶ, ಕರ್ದಮೂಲ, ದಿಂಡಿ, ಪುಂಡರೀಕಪುರ, ಸಪ್ತಗೋದಾವರೀ ಮುಂತಾದ ಪುಣ್ಯ ನದೀತೀರ್ಥಗಳಲ್ಲಿ ಸ್ನಾನಮಾಡಿ ದಂಡೆಯಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿದರೆ ಕೋಟಿ ಶ್ರಾದ್ಧಮಾಡಿದ ಪುಣ್ಯವು ಬರುತ್ತದೆ. ಮತ್ತು ಪಿತೃದೇವತೆಗಳಿಗೆ ಅಕ್ಷಯ ತೃಪ್ತಿಯು ಉಂಟಾಗುತ್ತದೆ. ಈ ತೀರ್ಥಕ್ಷೇತ್ರಗಳ ಮಹಿಮೆಯನ್ನು ವಿಸ್ತಾರವಾಗಿ ಹೇಳಲಿಕ್ಕೆ ಬೃಹಸ್ಪತಿಗೂ ಕೂಡ ಸಾಧ್ಯವಿಲ್ಲ. ನಮ್ಮಂಥ ಪಾಮರರ ಪಾಡೇನು ! ಆದರೂ ನಾನಿಲ್ಲಿ ನಿಮಗಾಗಿ ಸಂಕ್ಷೇಪದಿಂದ ನಿರೂಪಿಸಿದ್ದೇನೆ. ವಾಸ್ತವಿಕವಾಗಿ ವಿಚಾರಿಸಿದರೆ ಸತ್ಯವೇ ಒಂದು ತೀರ್ಥ. ದಯಾಗುಣವು ಇನ್ನೊಂದು ತೀರ್ಥ ಇಂದ್ರಿಯ ನಿಗ್ರಹವು ಮತ್ತೊಂದು ತೀರ್ಥ. ಸ್ವೋಚಿತವಾದ ವರ್ಣಾಶ್ರಮ ಧರ್ಮಗಳನ್ನು ಪರಿಪಾಲಿಸುವ ಮನೆಯೇ ಒಂದು ತೀರ್ಥ.

**''ಸತ್ಯಂ ತೀರ್ಥಂ ದಯಾತೀರ್ಥಂ ತೀರ್ಥಮಿಂದ್ರಿಯನಿಗ್ರಹಃ**
**ವರ್ಣಾಶ್ರಮಾಣಾಂ ಗೇಹೋಽ ಪಿ ತೀರ್ಥಂತು ಸಮುದಾಹೃತಮ್॥**

ಈ ಎಲ್ಲಾ ಪುಣ್ಯ ಕ್ಷೇತ್ರಗಳಲ್ಲಿ ಮಾಡಿದ ಶ್ರಾದ್ಧಕರ್ಮಗಳಿಗೆ ಅನಂತಪಟ್ಟು ಹೆಚ್ಚಿನ ಪುಣ್ಯವುಂಟು. ಆದುದರಿಂದ ಪ್ರಯತ್ನಮಾಡಿ ಪುಣ್ಯತೀರ್ಥಗಳಲ್ಲಿಯೇ ಶ್ರಾದ್ಧಮಾಡಬೇಕು. ದಿನದ ಒಂದು ಹಗಲು ಹೊತ್ತಿನ ಸಮಯವನ್ನು ಹದಿನೈದು ಭಾಗಮಾಡಿ ಒಂದೊಂದಕ್ಕೆ ಮುಹೂರ್ತ ಎನ್ನುವರು. ಒಂದು ಮುಹೂರ್ತ ಎಂದರೆ ನಲವತ್ತೆಂಟು ನಿಮಿಷ. ಈ ಹದಿನೈದು ನಿಮಿಷಗಳನ್ನು ಜ್ಯೋತಿಷ ಶಾಸ್ತ್ರದಲ್ಲಿ ರೌದ್ರ, ಶ್ವೇತ, ಮೈತ್ರ, ಶಾರಭಟ, ಸಾವಿತ್ರ ವಿಜಯ, ಗಾಂಧರ್ವ, ಕುತುಪ, ರೌಹಿಣ, ವಿರಿಂಚ, ಸೋಮು, ನಿರ್ಯತಿ, ಮಾಹೇಂದ್ರ, ವರುಣ, ಭಟ ಎಂದು ಹೆಸರಿಸಿದ್ದಾರೆ. ಇಂಥ ಮೂರು ಮೂಹೂರ್ತಗಳು ಕೂಡಿ ಒಂದು ಕಾಲ ಎನಿಸುವುದು. ಮೊದಲಿನ ಮೂರು ಮೂಹೂರ್ತಗಳು ಸೇರಿ ಪ್ರಾತಃಕಾಲವಾಗುವದು. ಮುಂದೆ ಇದರಂತೆ **ಸಂಗವ,** ಮಧ್ಯಾಹ್ನ, ಅಪರಾಹ್ನ, ಸಾಯಾಹ್ನ ಎಂಬ ಕಾಲಗಳು ಕ್ರಮೇಣ ಪ್ರಾಪ್ತವಾಗುವವು.

ಕೊನೆಯದಾದ ಸಾಯಾಹ್ನವು ರಾಕ್ಷಸರ ಕಾಲವಾದುದರಿಂದ ಶ್ರಾದ್ಧಕ್ಕೆ ನಿಷಿದ್ಧವಾಗಿದೆ. ಆ ಕಾಲದಲ್ಲಿ ಪಿತೃಕಾರ್ಯ ಮುಂತಾದ ಯಾವ ಪುಣ್ಯ ಕರ್ಮವನ್ನು ಮಾಡಬಾರದು. ಶ್ರಾದ್ಧಕ್ಕೆ ಮಧ್ಯಾಹ್ನ ಕಾಲವು ವಿಹಿತವಾಗಿದೆ. ಹಗಲಿನ ಹದಿನೈದು ಮಹೂರ್ತಗಳಲ್ಲಿಯ ಎಂಟನೆಯ ಮುಹೂರ್ತವು ಕುತುಪಕಾಲ ಎನಿಸುತ್ತದೆ. ಈ ಕುತುಪಕಾಲದಲ್ಲಿ ಮಾಡಿದ ಶ್ರಾದ್ಧಕ್ಕೆ ಅನಂತಫಲ ಎಂದು ಹೇಳಿದ್ದಾರೆ. ಕುಚ್ಛಿತ ವಾದ ಪಾಪವೆಲ್ಲ ಸುಟ್ಟು ನಾಶವಾಗಿ ಹೋಗುವದರಿಂದ ಇದಕ್ಕೆ ಕುತುಪಕಾಲ ಎಂದು ಹೆಸರು ಬಂದಿದೆ. ಈ ಕಾಲದಲ್ಲಿ ಮಾಡುವ ಶ್ರಾದ್ಧಕಾರ್ಯದಲ್ಲಿ ಅವಶ್ಯವಾಗಿ ಇರಲೇಬೇಕಾದ ಮುಂದಿನ ಎಂಟು ವಸ್ತುಗಳಿಗೂ ' ಕುತುಪ ' ಎಂದೇ ಹೆಸರು.

ಮಧ್ಯಾಹ್ನ, ಖಡ್ಗಮೃಗದ ಕೊಂಬಿನಿಂದ ಮಾಡಿದ ಪಾತ್ರೆ, ನೇಪಾಲದೇಶದ ಕಂಬಳಿ, ಬೆಳ್ಳಿ, ದರ್ಭೆ, ಎಳ್ಳು, ಹಸು, ಮಗಳಮಗ ಇವು ಎಂಟು ಶ್ರಾದ್ಧಕ್ಕೆ ಅತ್ಯಾವಶ್ಯಕವಾಗಿವೆ.

ಈ ಕುತುಪ ಮಹೂರ್ತ ಮೊದಲುಮಾಡಿ ಮುಂದಿನ ನಾಲ್ಕೈದು ಮುಹೂರ್ತಗಳವರೆಗಿನ ಕಾಲದಲ್ಲಿ ಪಿತೃಗಳು ಇಲ್ಲಿಯೇ ತಂಗಿರುತ್ತಾರೆ. ಆದುದರಿಂದ ಈ ಕಾಲವನ್ನು **"ಸ್ವಧಾಭವನ ಕಾಲ"** ಎಂದು ಕರೆಯುತ್ತಾರೆ. ದರ್ಭೆ ಹಾಗೂ ಎಳ್ಳುಗಳು ಶ್ರೀ ವಿಷ್ಣುವಿನ ದೇಹದಿಂದ ಜನಿಸಿವೆ. ಇವು ಶ್ರಾದ್ಧರಕ್ಷಕ ಎಂದು ದೇವತೆಗಳ ಹೇಳಿಕೆ. ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ದಂಡೆಯಲ್ಲಿ ನಿಂತು ಬೊಗಸೆಯಿಂದ ಪಿತೃಗಳಿಗೆ ಎಳ್ಳು ನೀರನ್ನು ಬಿಡಬೇಕು. ಶ್ರಾದ್ಧ ಮಾಡುವ ಕಾಲದಲ್ಲಿ ದರ್ಭೆ ಪವಿತ್ರವಿಟ್ಟು ಒಂದು ಕೈಯಿಂದ ತಿಲೋದಕವನ್ನು ಬಿಡಬೇಕು. ತರ್ಪಣವನ್ನು ಮಾತ್ರ ಎರಡೂಕೈಗಳಿಂದ ಕೊಡಬೇಕು. ಈ ತೀರ್ಥಶ್ರಾದ್ಧ ಮಹಿಮೆಯನ್ನು ಮತ್ಸ್ಯರೂಪಿ ಭಗವಂತನು ಮನುರಾಜನಿಗೆ ನಿರೂಪಿಸಿದನು. ಇದನ್ನು ಶ್ರವಣಪಠನ ಮಾಡಿದರೆ ವಿಶೇಷ ಪುಣ್ಯ ಮತ್ತು ಸಂಪತ್ ಪ್ರಾಪ್ತಿ. ಶ್ರಾದ್ಧಕಾಲದಲ್ಲಿ ಇದನ್ನು ಪಠಿಸಿದರೆ ಪಾಪನಾಶ, ದಾರಿದ್ರ್ಯನಾಶ ಎರಡೂ ಆಗುತ್ತದೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು*



## ಗುರುಪತ್ನಿಯೊಡನೆ ಚಂದ್ರನ ಚಕ್ಕಂದ ತಾರೆಗಾಗಿ ಘೋರ ಸಂಗ್ರಾಮ

ಅಧ್ಯಾಯ - ೨೪

**ಋಷಿಯ ಉವಾಚಃ**

**ಸೋಮಃ ಪಿತೃಣಾಮಧಿಪಃ ಕಥಂ ಶಾಸ್ತ್ರವಿಶಾರದ ।**
**ತದ್ವಂಶ್ಯಾ ಯೇ ಚ ರಾಜಾನಃ ಬಭೂವುಃ ಕೀರ್ತಿ ವರ್ಧನಾಃ ॥**

**ಋಷಿಗಳು** :- ಸರ್ವಶಾಸ್ತ್ರಗಳಲ್ಲಿ ಪಾರಂಗತರಾದ ಸೂತರೇ, ಚಂದ್ರನು ಪಿತೃಗಣಕ್ಕೆ ಅಧಿಪತಿಯಾಗಿದ್ದಾನೆ. ಅದು ಹೇಗೆ ? ಆ ಚಂದ್ರನ ವಂಶದಲ್ಲಿ ಮುಂದೆ ಕೀರ್ತಿಶಾಲಿಗಳಾಗಿ ಬಾಳಿ ಬೆಳಗಿದ ರಾಜರು ಯಾರು ? ಎಷ್ಟು ?

**ಸೂತ** :- ಸೃಷ್ಟಿಯ ಆದಿಕಾಲ, ಬ್ರಹ್ಮರ್ಷಿ ಅತ್ರಿಮುನಿಗೆ ಪ್ರಜೆಗಳನ್ನು ಸೃಷ್ಟಿ ಮಾಡಲು ಬ್ರಹ್ಮನ ಆದೇಶ. ಅದಕ್ಕಾಗಿ ಅತ್ರಿ ಋಷಿಯ ಉಗ್ರತಪಸ್ಸು. ಅದಕ್ಕೂ ಉತ್ತಮ ತಪಸ್ಸೇ ಇಲ್ಲ. ಆದುದರಿಂದಲೇ ಆ ತಪೋವಿಧಿಗೆ ಅನುತ್ತಮತಪ ಎಂದು ಹೆಸರು. ಈ ತಪಸ್ಸಿನ ಫಲ ಬ್ರಹ್ಮಾನಂದ, ಜಗತ್ತಿನ ಕ್ಲೇಶ ಪರಿಹಾರ, ವಿಶ್ವಶಾಂತಿ, ಚಿತ್ತಪ್ರಸಾದ, ಬ್ರಹ್ಮ-ವಿಷ್ಣು-ಮಹೇಶ್ವರ ತ್ರಿಮೂರ್ತಿಗಳೂ ಇದರಿಂದ ಸುಪ್ರಸನ್ನ. ಅವರಲ್ಲಿ ಪಾರ್ವತೀ ಪರಮೇಶ್ವರರು ಪ್ರತ್ಯಕ್ಷ ಆ ಅತ್ರಿಮುನಿಗೆ. ಅದರಿಂದ ಮಹರ್ಷಿಗೆ ಪರಮಾನಂದ. ಕಂಗಳಲ್ಲಿ ಆನಂದಬಾಷ್ಪ. ಋಷಿಯ

ಆ ಹರ್ಷಾಶ್ರುಗಳಿಂದ ಆಗಲೇ ಒಂದು ದಿವ್ಯ ಜ್ಯೋತಿಯ ಜನನ. ಅದೇ ದಿವ್ಯಜ್ಯೋತಿ ಚಂದ್ರ. ಅತ್ರಿ ಮಹರ್ಷಿಯ ತಪಸ್ತೇಜದ ಎಂಟನೆಯ ಒಂದು ಅಂಶ. ಚರಾಚರಾತ್ಮಕ ಪ್ರಪಂಚವನ್ನೆಲ್ಲ ಬೆಳಗುವ ಕಾಂತಶಾಂತವಾದ ಆ ಬೆಳಕಿನ ಪಿಂಡವನ್ನು ಕಂಡು ದಿಕ್ಕುಗಳಿಗೆಲ್ಲ ಆಶೆಯಾಯಿತು. ಇದನ್ನು ಮಗನನ್ನಾಗಿ ಮಾಡಿ ಕೊಳ್ಳಬೇಕು ಎಂದು.

ದಿಕ್ಕುಗಳು ಹೆಣ್ಣಿನ ರೂಪ ಧರಿಸಿ ಆ ದಿವ್ಯಜ್ಯೋತಿಯನ್ನು ತಮ್ಮ ಗರ್ಭದಲ್ಲಿ ಧರಿಸಿದವು. ಮುನ್ನೂರು ವರ್ಷ ದಿಗ್ಗರ್ಭದಲ್ಲಿಯೇ ಆ ಜ್ಯೋತಿ ಪಿಂಡದ ಬೆಳವಣಿಗೆ. ಮುಂದೆ ಮಾತ್ರ ಅದನ್ನು ಬಸಿರಿನಲ್ಲಿ ಧರಿಸಲಿಕ್ಕಾಗಲಿಲ್ಲ ಆ ದೆಸೆವೆಣ್ಣುಗಳಿಗೆ. ಅದನ್ನು ಅವರು ಬಿಟ್ಟ ಬಳಿಕ ನೂರ್ಮಡಿ ಕಾಂತಿ ಆ ತೇಜಃ ಪಿಂಡಕ್ಕೆ. ಹತ್ತು ದಿಗಂಗನೆಯರು ಬಸಿರಲ್ಲಿ ಹೊತ್ತು ಹೊರಗೆ ಬಿಟ್ಟ ಆ ಜೋತಿಷ್ಪುಂಜವನ್ನು ಬ್ರಹ್ಮದೇವರು ಬಂದು ಒಂದೆಡೆ ಸೇರಿಸಿದರು. ಓರ್ವತೇಜಸ್ವಿ ತರುಣ ತಳತಳಿಸತೊಡಗಿದ. ಅವನ ಕೈಯಲ್ಲಿ ಎಲ್ಲ ಆಯುಧಗಳು. ವೇದಮಯವಾದ ತೇರು. ಅವನಿಗೆ ಏರಲು ಸಾವಿರ ಕುದುರೆಗಳನ್ನು ಹೂಡಿದೆ. ರಥಾರೂಢನಾದ ಆ ತೇಜಃಪುರುಷನನ್ನು ಬ್ರಹ್ಮದೇವರು ಸತ್ಯಲೋಕಕ್ಕೆ ಕರೆದೊಯ್ದರು. ''ಇವನು ನಮಗೆ ಅಧಿರಾಜನಾಗಿರಲಿ'' ಎಂದರು ಬ್ರಹ್ಮರ್ಷಿಗಳು. ''ನಮ್ಮ ಒಡೆಯನಾಗಲಿ'' ಪಿತೃಗಳ ಪ್ರಾರ್ಥನೆ. ''ನಮ್ಮ ಅಧಿಪತಿಯಾಗಲಿ'' ಔಷಧಿ ವನಸ್ಪತಿಗಳ ಬೇಡಿಕೆ. ಬ್ರಹ್ಮಾದಿದೇವತೆಗಳ ಸ್ತೋತ್ರ ಸೋಮದೇವತಾಕವಾದ ಸೂಕ್ತಮಂತ್ರಗಳಿಂದ.

ಹಿರಿಯ ದೇವರ್ಷಿಗಳ ಸ್ತುತಿಮಂತ್ರಗಳ ಬಲದಿಂದ ಅವನ ಕಾಂತಿಯಲ್ಲಿ ಇನ್ನೂ ಹೆಚ್ಚಳ. ಅದರಿಂದ ಅತ್ಯುಪಯುಕ್ತವಾದ ಅತಿಶ್ರೇಷ್ಠತರ ಅನೇಕಾನೇಕ ಗಿಡ ಮೂಲಿಕೆ ಹಾಗೂ ವನಸ್ಪತಿಗಳ ಉತ್ಪತ್ತಿ. ಅವುಗಳಿಗೆಲ್ಲ ರಾತ್ರಿಯಲ್ಲಿ ಪ್ರಕಾಶವೃದ್ಧಿ. ಅದಕ್ಕಾಗಿ ಚಂದ್ರ ಔಷಧಿಗಳ ಒಡೆಯ. ಬ್ರಾಹ್ಮಣರಿಗೆ ಅಧಿರಾಜ. ಮಹರ್ಷಿಗಳಿಗೂ ಅಧಿಪತಿ. ಈ ಚಂದ್ರನ ಮಂಡಲ ವೇದಮಯ. ದಿವ್ಯರಸದಿಂದಲೇ ಪರಿಪೂರ್ಣ. ಅದಕ್ಕೆ ಕೃಷ್ಣಪಕ್ಷದಲ್ಲಿ ಹ್ರಾಸ. ಶುಕ್ಲಪಕ್ಷದಲ್ಲಿ ವಿಕಾಸ. ದಕ್ಷಪ್ರಜಾಪತಿಗೆ ಚಂದ್ರನ ಈ ಚೆಲವು ಮಿಂಚು ಕಂಡು ಎಲ್ಲಿಲ್ಲದ ಮೋಹ. ಮಮತೆ, ತನ್ನ ಇಪ್ಪತ್ತೇಳು ಕನ್ನೆಯರನ್ನೂ ಅವನಿಗೆ ಧಾರೆಯೆರೆದು ಕೊಟ್ಟ. ಎಲ್ಲ ಮಕ್ಕಳು ತೇಜಸ್ವಿನಿ ತಾರೆಯರೇ. ಆನಂತರ ಸಾವಿರ ಕೋಟಿ ವರ್ಷಕಾಲ ಚಂದ್ರನ ಉಗ್ರತಪಸ್ಸು ಶ್ರೀಹರಿಯನ್ನು ಕುರಿತು. ನಿರಂತರ ವಿಷ್ಣು ಧ್ಯಾನ, ವಿಷ್ಣು ಚಿಂತನ.

ಶ್ರೀಹರಿಪ್ರಸನ್ನ. ಚಂದ್ರನಿಗೆ ಅಭಯದಾನ ''ಬೇಕಾದ ವರಬೇಡು. ಕರುಣಿಸುವೆ.'' ಅದಕ್ಕೆ ಸಂತುಷ್ಟನಾದ ಸೋಮನ ಬೇಡಿಕೆ. ''ಸ್ವಾಮಿ, ನನಗೆ ಬೇಕಾದದ್ದು ಇಂದ್ರಲೋಕದ ಗೆಲವು ಮತ್ತು ರಾಜಸೂಯ ಯಾಗ. ಆ ಯಾಗದಲ್ಲಿ ಬ್ರಹ್ಮಾದಿ ದೇವತೆಗಳು ಸ್ವಯಂ ಬಂದು ಭಾಗವಹಿಸಿ ಭೋಜನಮಾಡಬೇಕು. ಶಂಕರ ತ್ರಿಶೂಲ ಹಿಡಿದು ನಿಂತು ಅದರ ರಕ್ಷಣೆ ಮಾಡಬೇಕು.'' ''ತಥಾಸ್ತು, ಹಾಗೆ ಆಗಲಿ'' ವಿಷ್ಣುವಿನ ಅಭಯವಾಣಿ. ಪ್ರಾರಂಭವಾಯಿತು ಚಂದ್ರನ ರಾಜಸೂಯ

ಯಜ್ಞ. ಅದರಲ್ಲಿ ಅತ್ರಿಮುನಿಹೋತಾ. ಭೃಗುಋಷಿಅಧ್ವರ್ಯು. ಬ್ರಹ್ಮದೇವನೇ ಉದ್ಗಾತಾ. ಸಾಕ್ಷಾದ್ ವಿಷ್ಣು ಸ್ವಯಂ ಬಂದು ಬ್ರಹ್ಮಾ ಆಗಿ ನಿಂತ. ಬಳಿಕ ಕರ್ಮ ಸಾಂಗತೆಯ ಪ್ರಶ್ನೆಯೇ ಇಲ್ಲವಷ್ಟೇ! ಸನಕಾದಿ ನೈಷ್ಠಿಕ ಬ್ರಹ್ಮಚಾರಿಗಳೇ ಸದಸ್ಯರು. ವಿಶ್ವೇದೇವತೆಗಳಿಗೆ ಚಮಸಾಧ್ವರ್ಯುತ್ವ.

ಈ ಮಹಾಯಜ್ಞದಲ್ಲಿ ಚಂದ್ರನು ನೀಡಿದ ದಾನವೂ ಅಷ್ಟೇ ವಿಲಕ್ಷಣ. ಮೂರು ಲೋಕಗಳನ್ನೆಲ್ಲ ಋತ್ವಿಜರಿಗೆ ದಾನವಾಗಿ ಇತ್ತ. ಅಂತೂ ಆ ಮಹಾ ಯಜ್ಞ ಸಾಂಗವಾಗಿ ಸಂಪೂರ್ಣ. ಇದರಿಂದ ಚಾರುಚಂದ್ರನ ಚೆಲುವು ಸಾವಿರಪಟ್ಟು ಹೆಚ್ಚಾಗಿತ್ತು. ಕಂಡವರಿಗೆಲ್ಲ ಮೋಹವಾಗುವಷ್ಟು ಮಿಕ್ಕಿ ಉಕ್ಕುತ್ತಿತ್ತು ಅವನ ಅಂಗಾಂಗಗಳಲ್ಲಿ ಲೋಭನೀಯ ಲಾವಣ್ಯ. ದೇವಾಂಗನೆಯರೆಲ್ಲ ತಮ್ಮ ತಮ್ಮ ಪತಿಗಳನ್ನು ತೊರೆದು ಆ ಚೆಲುವಿನ ಚಂದ್ರಮನನ್ನು ಓಲೈಸುವದಕ್ಕೆ ಸಿದ್ಧರಾಗಿ ನಿಂತರು.

ನಾರಾಯಣನ ಮಡದಿ ಲಕ್ಷ್ಮಿಯು ಚಂದ್ರನ ದೇಹದ ತುಂಬ ಕಾಂತಿಯಾಗಿ ಸೂಸಿ ಶೋಭಿಸಿದಳು. ಇದರಂತೆ ಕಾಮಾರ್ತರಾದ ಕರ್ದಮ ಕಾಮಿನಿ ಸಿನೀವಾಲಿ, ಅಗ್ನಿಕಾಂತೆ, ದ್ಯುತಿ, ಧಾತೃಭಾರ್ಯೆ ತುಷ್ಟಿ, ಸೂರ್ಯಸತಿ ಪ್ರತಿಭೆ, ಹವಿಷ್ಮಂತನ ಹೆಂಡತಿ ಕುಹೂ, ಜಯಂತ ಕುಟುಂಬಿನಿ ಕೀರ್ತಿ, ಕಶ್ಯಪವನಿತೆ ವಸು, ನಂದಿಯ ನಾರಿ ಧೃತಿ ಮುಂತಾದ ಸುದತಿಯರೆಲ್ಲರೂ ತಮ್ಮ ತಮ್ಮ ಪತಿಗಳನ್ನು ತೊರೆದು ಚಂದ್ರನನ್ನು ಸೇವಿಸಿದರು. ಚಂದ್ರನೂ ಕೂಡ ಆ ಚೆಲುವೆಯರನ್ನೆಲ್ಲ ಕೈಹಿಡಿದ ಮಡದಿಯರಂತೆ ಕಾಮಿಸಿ ಪ್ರೇಮಿಸಿದ. ಹೀಗೆ ಹೆಂಡಂದಿರು ಚಂದ್ರನ ಮೇಲಿನ ವ್ಯಾಮೋಹದಿಂದ ತಮ್ಮನ್ನು ತ್ಯಾಗಮಾಡಿ ವ್ಯಭಿಚಾರಮಾಡಿದ್ದನ್ನು ಕಂಡರೂ ಗಂಡಂದರಿಗೆ ಅವರನ್ನು ತಡೆಯಲಿಕ್ಕೆ ಆಗಲಿಲ್ಲ. ತ್ಯಾಗ ಮಾಡಲಿಕ್ಕೂ ಆಗಲಿಲ್ಲ, ಶಾಪಹಾಕಲಿಕ್ಕೂ ಶಕ್ತಿಬರಲಿಲ್ಲ. ತಮ್ಮ ಮಡದಿಯರನ್ನು ಅಡ್ಡದಾರಿಗೆ ಎಳೆದ ಚಂದ್ರನ ಮೇಲೆ ಏನಾದರೂ ಕ್ರಮ ತೆಗೆದುಕೊಂಡು ದಂಡಿಸಲು ಅವರಿಗೆ ಶಕ್ಯವಾಗಲಿಲ್ಲ. ಶಾಪ, ಕೋಪ, ಶಸ್ತ್ರ, ವಿಷ, ಅಗ್ನಿ ಮುಂತಾದ ಯಾವ ಮಾರಕ ವಸ್ತುಗಳದೂ ಆಟ ಅವನ ಮೇಲೆ ನಡೆಯಲಿಲ್ಲ. ತಪಸ್ಸಿನ ಬಲದಿಂದ ಅವನು ದೇವದುರ್ಲಭವಾದ ಐಶ್ವರ್ಯವನ್ನು ಪಡೆದು ಸಪ್ತಲೋಕಗಳಿಗೆಲ್ಲ ಸಾರ್ವಭೌಮ ಎನಿಸಿದನು. ದಶದಿಕ್ಕುಗಳೂ ಅವನ ದಿವ್ಯದೇಹ ಪ್ರಭೆಯಿಂದ ಉದ್ದೀಪಿತವಾಗಿ ಬೆಳಗ ತೊಡಗಿದವು. ಒಂದು ರಂಜಿಸುವ ಸಂಜೆ. ತೀಡುವ ತಂಗಾಳಿ. ಸುಂದರ ಉಪವನ. ಬಿರಿದ ಮೊಗ್ಗುಗಳು. ತುಂಬಗಳ ಝೇಂಕಾರ. ಕಾಮನ ಧನುಷ್ಟಾಂಕಾರ. ಅಲ್ಲಿ ಚಿಗರಿಗಂಗಳ ಚೆಲುವೆಯೊಬ್ಬಳು ಹೂಹರಿಯುತ್ತಿದ್ದಾಳೆ. ಅವಳ ಮೈತುಂಬ ಹೂವಿನವೇ ಆಭರಣಗಳು. ಹೂಗಳ ನಡುವೆ ಅವಳೊಂದು ಸುಂದರ ಹೂ. ಅವಳ ಬಳುಕುವ ಬಳ್ಳಿ ಮೈಗೆ ಎದೆ ಮತ್ತು ಹಿಂಬದಿ ಮಾತ್ರ ತುಸು ಭಾರ. ಅದರಿಂದ ನಡೆ ಕೊಂಚ ನಿಧಾನ. ಚಂದ್ರನ ಕಣ್ಣು ಚೆಲುವೆಯ ಮೇಲೆ. ಚೆಲುವೆಯ ಕಣ್ಣೂ ಚಂದ್ರಮನ ಮೇಲೆ. ಇಬ್ಬರ ಮೈಯಲ್ಲೂ ಮಿಂಚಿನ ಹರಿದಾಟ. ಕಡೆನೋಟ. ಕುಡಿನೋಟಗಳ ಎಸೆದಾಟ. ಕೊರಳಿನ ಕೊಂಕು, ಹುಬ್ಬಿನ ಡೊಂಕು, ನಗೆಯ

ಮುಗುಳು, ಬಗೆಯ ಬೆಡಗು, ನಡೆಯ ಒನಪುಗಳು ಕಾಮಗೆ ಆಮಂತ್ರಣ. ಹಾವಭಾವಗಳು ಪರಸ್ಪರ ಹೃದಯದ ಸಂದೇಶವನ್ನು ತಲುಪಿಸಿದವು.

ಚಂದ್ರ ನಿರುಕಿಸಿದ. ಅವಳು ಗುರು ಪತ್ನಿ. ತಾರೆ. ಚಿಕ್ಕೆಯ ಚೆಲುವೆ ಚೈತನ್ಯ ಪಡೆದಂತೆ, ಗುರುಸತಿ ಎಂದು ಗುರುತಾಗಿಯೂ ಚಂದ್ರ ಚಿತ್ತವನ್ನು ನಿಯಂತ್ರಿಸದಾದ. ಅವಳ ಮಾದಕರೂಪ ಸಂಯಮದ ಸಳಾಕೆಯನ್ನು ಮುರಿದು ಹಾಕಿತ್ತು. ಚಂದ್ರ ಅವಳಿದ್ದಲ್ಲಿ ಧಾವಿಸಿದ. ಸುತ್ತಲೂ ಕಣ್ಣು ಹಾಯಿಸಿದ. ಯಾರೂ ಇಲ್ಲ. ವಿಜನವನಾಂತ. ಮೌನಏಕಾಂತ, ಒಬ್ಬಳೇ ತರುಣಿ, ರೂಪರಾಶಿ. ಮೇಲೆ ತನ್ನಂತೆ ಅವಳೂ ಕಾಮನ ಬಾಣದಿಂದ ಹಣ್ಣುಗಾಯಿ ನೀರುಗಾಯಿ. ಇದೆಲ್ಲ ತಿಳಿದ ಚಂದ್ರನ ಮುನ್ನಡೆ. ಕಾಮಾಂಧನಾಗಿ ಆ ಕಾಮಿನಿಯ ಕಪ್ಪು ಕೂದಲನ್ನು ಹಿಡಿದ. ತಾರೆ ವಿರೋಧಿಸಲಿಲ್ಲ. ಹಿಡಿತ ಹಿತವೆನಿಸಿತ್ತು ಅವಳಿಗೆ. ಇಬ್ಬರೂ ನಲುಮೆಯಿಂದ ಒಂದು ಗೂಡಿದರು. ಸ್ವಚ್ಛಂದವಾಗಿ ವಿಹರಿಸಿದರು. ಕೊನೆಗೆ ಚಂದ್ರ ಅವಳನ್ನು ಬಿಟ್ಟಿರಲಾರದೆ ತನ್ನ ಮನೆಗೇ ಕರೆದುಕೊಂಡು ನಡೆದ. ಒಲವಿನಿಂದ ಕಲೆತವರ ಕೇಳೀವಿಲಾಸಕ್ಕೆ ಕೊನೆಯೆಲ್ಲಿ ? ರಮಿಸಿದಷ್ಟೂ ರತಿಯ ಆಶೆ ಕೆರಳುತ್ತಲೇ ಇತ್ತು. ಕ್ರೀಡಿಸಿದಷ್ಟೂ ಕಾಮದ ಅಭಿವೃದ್ಧಿ. ಇತ್ತ ಗುರು ಬ್ರಹಸ್ಪತಿ ಮನೆಯಲ್ಲಿ ಮಡದಿ ಇಲ್ಲದೆ ರಣರಣ, ಭಣಭಣ. ತಾರೆ ಇಲ್ಲದ ಬಾಳೇ ಅವನಿಗೆ ಬರಡೆನಿಸಿತು. ಹಗಲುತಾರೆಯದೇ ನೆನಹು. ಇರುಳು ತಾರೆಯದೇ ಧ್ಯಾಸ. ತನ್ನ ಸತಿಯನ್ನು ತಿರುಗಿ ತನ್ನ ಮನೆಗೆ ಕಳಿಸಿಕೊಡಬೇಕೆಂದು ಹೇಳುವದೂ ಕೇಳುವದೂ ಕೋಪಿಸುವದೂ ಶಾಪಿಸುವದೂ ಎಲ್ಲವೂ ಮುಗಿಯಿತು. ಏನಾದರೂ ತಾರೆಯ ಚೆಲುವನುಂಡ ಚಂದ್ರ ಅವಳನ್ನು ಮರಳಿಸಲು ಒಪ್ಪಲಿಲ್ಲ. ಪೂರ್ಣಚಂದ್ರನ ಗಂಡುಗಾಡಿಯನ್ನು ಮೆಚ್ಚಿದ ಅವಳೂ ಅವನನ್ನು ಬಿಟ್ಟು ಹೋಗಲು ಹಂಬಲಿಸಲಿಲ್ಲ. ಗುರುವಿನ ಯಾವ ವಿದ್ಯೆಯೂ ಅವನ ಮೇಲೆ ನಡೆಯಲಿಲ್ಲ. ಮಂತ್ರ ಸಾಗಲಿಲ್ಲ. ಶಾಪ ಫಲಿಸಲಿಲ್ಲ. ಬೆಂಕಿ ಸುಡಲಿಲ್ಲ. ವಿಷ ಭೇದಿಸಲಿಲ್ಲ. ಶಸ್ತ್ರ ಸೀಳಲಿಲ್ಲ. ಮಾಯಮಾಟ ಮುಂತಾದವುಗಳೂ ಕೂಡ ಚಂದ್ರನ ಕೂದಲೆಳೆಯನ್ನೂ ಕೊಂಕಿಸಲಿಲ್ಲ.

ಕೊನೆಗೆ ಮಹಾದೇವರು ಬಂದು ಗುರುಪತ್ನಿಯನ್ನು ಬಿಟ್ಟುಬಿಡು ಎಂದು ಬೋಧಿಸಿದರು. ಕಾಮೋನ್ಮತ್ತನಾದ ಸುಧಾಕರನಿಗೆ ಬ್ರಹ್ಮದೇವರೂ ಬಹುಪರಿಯಾಗಿ ಬಿಡಹೇಳಿದರು. ದೇವತೆಗಳು ಲೋಕಪಾಲರಲ್ಲಿಯೂ ಚಂದ್ರನಿಗೆ ಬುದ್ಧಿ ಹೇಳದವರು ಒಬ್ಬರೂ ಉಳಿಯಲಿಲ್ಲ. ಇಷ್ಟಾದರೂ ಕಾಮಿಯಾದ ಅವನು ತಾರೆಯನ್ನು ತಿರುಗಿಸಲು ಒಪ್ಪಲಿಲ್ಲ. ಆಗ ನಿರುಪಾಯನಾದ ಬೃಹಸ್ಪತಿಯು ಮಹಾದೇವರಿಗೆ ಮೊರೆಹೊಕ್ಕನು. ಈ ಅನ್ಯಾಯವನ್ನು ಕಂಡು ಕೈಲಾಸಪತಿಯು ಕ್ರೋಧ ತುಂಬಿ ಸಿಡಿದೆದ್ದ. ಬೃಹಸ್ಪತಿಗೂ ಭವಾನೀಪತಿಗೂ ಎಂದಿನಿಂದಲೂ ಸ್ನೇಹ. **ಅಜಗವ** ಎಂಬ ಬಿಲ್ಲನ್ನು ಹಿಡಿದು ಆ ಪಿನಾಕಿಯು ತನ್ನ ಭೂತ ಪರಿವಾರದೊಂದಿಗೆ ಚಂದ್ರನ ಮೇಲೆ ದಂಡೆತ್ತಿ ನಡೆದ. ಅವನ ಮೂರನೇ ಕಣ್ಣು ಹೊಗೆಯಾಡಿ ಮುಖವು ಉಗ್ರಮುದ್ರೆ ತಳೆಯಿತು. ಕೋಟಿಕೋಟಿ ಕುಬೇರ ಕಿಂಕರರು ಪ್ರಮಥ ಗಣಾಧಿಪತಿಗಳೂ ಶಿವನನ್ನು ಬೆಂಬಲಿಸಿದರು.

ಈ ಸಮರ ಸನ್ನಾಹ ಕಂಡು ಚಂದ್ರನಿಗೂ ಬಹಳ ಸಿಟ್ಟು ಬಂದಿತು. ಕೋಟಿ ಸಂಖ್ಯೆ ಬೇತಾಲಯಕ್ಷಸರ್ಪಕಿನ್ನರರೊಡನೆ ಒಡಗೂಡಿ ಸಂಗ್ರಾಮರಂಗಕ್ಕೆ ಇಳಿದನು. ದೈತ್ಯರು, ನಕ್ಷತ್ರಗಳೂ, ಶನಿ, ಭೌಮ ಮುಂತಾದವರೆಲ್ಲ ಆ ಚಂದಿರನ ಬೆಂಬಲಕ್ಕೆ. ಎರಡೂ ಸೇನೆಗಳ ನಡುವೆ ಭಯಂಕರವಾದ ಕಾಳಗವು ಮಸಗಿತು. ಅತ್ಯಂತ ಉಗ್ರವಾದ ಆಯುಧಗಳ ಎಸೆದಾಟ, ಮಸೆದಾಟ, ಎರಡು ಬದಿಯಲ್ಲಿಯೂ ಘೋರ ಆಯುಧಗಳು ಹೊತ್ತಿಸಿದ ಕಿಚ್ಚು. ಭಯಂಕರ ಪ್ರಾಣಹಾನಿ. ಅತಿ ಕ್ರುದ್ಧನಾದ ಮಹಾದೇವನ ಬ್ರಹ್ಮಾಸ್ತ್ರ, ಅದಕ್ಕೆ ಪ್ರತಿಯಾಗಿ ಚಂದ್ರನ ಸೋಮಾಸ್ತ್ರ. ಅಂತರಿಕ್ಷದಲ್ಲಿ ಇವೆರಡೂ ಘೋರಾಯುಧಗಳ ಘರ್ಷಣೆ. ಭೂಮ್ಯಾಕಾಶಗಳ ದುರಂತ ಜ್ವಲನ. ಬ್ರಹ್ಮಾಂಡವೆಲ್ಲ ಬೆಂಕಿಯ ಬಣಿವೆಯಾಗಿ ಧಗಧಗಿಸುವ ಪ್ರಸಂಗ. ಈ ಸರ್ವನಾಶದ ಪ್ರಸಂಗವನ್ನು ಕಂಡು ಬ್ರಹ್ಮದೇವರು ಧಾವಿಸಿ ಬಂದರು. ಚಂದ್ರನನ್ನು ತಡೆದು ಗದರಿಸಿದರು-

''ನಿರ್ಲಜ್ಜನಾದ ನಿಶಾಕರನೇ, ನೀನಂತೂ ಈಗ ನಿನ್ನ ಮಹಾಪಾಪಕರ್ಮದಿಂದ ಹಾಳಾಗಿರುವೆ. ಈಗ ಜಗತ್ತನ್ನೂ ಹಾಳುಗೈಯಲು ಹೊರಟೆಯಾ ! ಹೆರವರ ಹೆಂಡತಿಯನ್ನು ಹೊತ್ತು ಕೊಂಡೊಯ್ದು ಮೇಲೆ ಇಷ್ಟು ಹಗರಣವೇ ? ಇಂಥಅನ್ಯಾಯದ ಕಾರ್ಯ ಮಾಡಿದ್ದಕ್ಕಾಗಿ ಇನ್ನು ಮೇಲೆ ನೀನು ಪಾಪಗ್ರಹವಾಗುವೆ. ಶುಕ್ಲಪಕ್ಷವಾದನಂತರ ನೀನು ಕ್ರಮೇಣ ಕ್ಷಯಿಸುತ್ತ ಹೋಗುವೆ. ಇನ್ನು ಮೇಲಾದರೂ ಬೃಹಸ್ಪತಿಯ ಭಾರ್ಯೆಯನ್ನು ತಿರುಗಿ ತಂದು ಗುರುವಿಗೆ ಒಪ್ಪಿಸು.'' ಆಗ ನಿಶಾಕರನು ನಿರ್ವಾಹವಿಲ್ಲದೆ ಬ್ರಹ್ಮದೇವರ ಹೇಳಿಕೆಗೆ ಹೂಗುಟ್ಟಿದನು. ಶಾಂತರೀತಿಯಿಂದಲೆ ಯುದ್ಧದಿಂದ ಹಿಂದೆ ಸರಿದು ತಾರೆಯನ್ನು ಬ್ರಹಸ್ಪತಿಯ ಬಳಿಗೆ ತಂದು ಬಿಟ್ಟನು. ಮಡದಿಯು ಮರಳಿ ಮನೆಗೆ ಬಂದದನ್ನು ಕಂಡು ಗುರುವಿಗೆ ಪರಮ ಹರುಷವಾಯಿತು. ಅವನು ಶಿವಸೇನೆಯನ್ನು ಹಿಂದೆ ಕರೆಯಿಸಿಕೊಂಡು ತಾರೆಯೊಡನೆ ತನ್ನ ಮನೆಗೆ ತೆರಳಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಸ್ವರ್ಗದಲ್ಲಿ ನಾಟಕ. ನೆಲಕ್ಕೆ ಇಳಿದ ಅಪ್ಸರೆ | ಅಧ್ಯಾಯ - ೨೫

**ಸೂತ ಉವಾಚ**

**ತತಸಂವತ್ಸರಸ್ಯಾಂತೇ ದ್ವಾದಶಾದಿತ್ಯ ಸನ್ನಿಭಃ**
**ದಿವ್ಯಪಿತಾಂಬರಧರೋ ದಿವ್ಯಾಭರಣ ಭೂಷಿತಃ ॥**

**ತಾರೋದರಾದ್ವಿನಿಷ್ಕ್ರಾಂತಃ ಕುಮಾರಶ್ಚಂದ್ರ ಸನ್ನಿಭಃ**
**ಸರ್ವಾರ್ಥ ಶಾಸ್ತ್ರ ವಿದ್ಧೀಮಾನ್ ಹಸ್ತಿ ಶಾಸ್ತ್ರ ಪ್ರವರ್ತಕಃ ॥**

**ಸೂತ** - ತಾರೆಯು ತನ್ನ ಪತಿಯ ಮನೆಗೆ ಬಂದಳು. ಒಂದು ವರ್ಷ ಕಳೆಯಿತು. ಅವಳಿಗೆ ಆಗ ಒಂದು ಮಗು. ಹನ್ನೆರಡು ಸೂರ್ಯರ ಕಾಂತಿ ಆ ಕೂಸಿನ ಮುಖದಲ್ಲಿ, ಅವನು ಹುಟ್ಟಿನೊಂದಿಗೇ ಉಟ್ಟುಕೊಂಡಿದ್ದು ದಿವ್ಯ ಪೀತಾಂಬರ. ಮೈತುಂಬ ದಿವ್ಯ ಆಭರಣಗಳು, ಅವನೊಬ್ಬ ಪ್ರತಿಚಂದ್ರ. ಅದೇ ಕಣ್ಣು, ಅದೇ ಬಣ್ಣ, ಅದೇ ಕಳೆ, ಅದೇ ಕಾಂತಿ. ಮೇಲಾಗಿ ಸಕಲ ಶಾಸ್ತ್ರಗಳಲ್ಲಿಯೂ ನಿಸ್ಸೀಮ ಪ್ರಾವೀಣ್ಯತೆ ಅವನಿಗೆ. ಗಜಶಾಸ್ತ್ರಕ್ಕಂತೂ ಅವನೇ ಪ್ರಥಮ ಪ್ರವರ್ತಕ. ಮೂಲ ಮಹರ್ಷಿ. ಚಂದ್ರನಿಗೆ **ರಾಜ** ಎಂದು ಹೆಸರು. ಇವನು ಅದರಿಂದ ರಾಜಪುತ್ರ. ಅದಕ್ಕಾಗಿಯೇ ಆನೆಯ ಆರೋಗ್ಯಶಾಸ್ತ್ರಕ್ಕೆ ಸಂಸ್ಕೃತದಲ್ಲಿ ರಾಜಪುತ್ರೀಯ ಎನ್ನುವರು. ರಾಜನಾದ ಚಂದ್ರನ ಮಗನು ಮಾಡಿದ್ದರಿಂದ ಗಜವೈದ್ಯಶಾಸ್ತ್ರವು ರಾಜಪುತ್ರೀಯ ಎಂದು ಪ್ರಸಿದ್ಧವಾಗಿದೆ. ತಾರೆಯ ಮಗು ಹುಟ್ಟಿದ ಕೂಡಲೇ ಪ್ರಪಂಚದಲ್ಲಿಯ ತೇಜಃಪದಾರ್ಥಗಳೆಲ್ಲವೂ ಕಂದಿಕುಂದಿಕಳೆಗೆಟ್ಟಂತಾದವು. ಅಂಥ ದಿವ್ಯತೇಜದ ತಾಂಡವ ಆ ತಾರೆಯ ಮಗುವಿನ ಮೈತುಂಬ.

ಅಂದು ಗುರುವಿನ ಗೃಹದಲ್ಲಿ ತಾರಾಪುತ್ರನ ಜಾತಕರ್ಮ ಸಮಾರಂಭ. ಬ್ರಹ್ಮಾದಿ ದೇವತೆಗಳ ಹಾಗೂ ಋಷಿ ಮುನಿಗಳ ಆಗಮನ. ಕೂಸಿನ ಅಂಗಾಂಗಳಿಂದ ಉಕ್ಕುವ ಕಾಂತಿಪೂರವನ್ನು ಕಂಡು ಬಂದವರಿಗೆಲ್ಲ ಕೌತುಕ. ಕೇಳಿಯೇ ಬಿಟ್ಟರು ಅವರು ತಾರೆಯನ್ನು ''ಇವನು ಯಾರ ಮಗು'' ಎಂದು. ತಾರೆ ಏನೆಂದು ಉತ್ತರ ಕೊಡಬೇಕು? ವಸ್ತು ಸ್ಥಿತಿಯನ್ನು ಸುರರಿಗೆ ಉಸುರುವದೆಂತು! ನಾಚಿಕೆಯಿಂದ ನೀರೆನೀರಾದಳು. ಸುರರು ಬಿಡಲಿಲ್ಲ. ಅವಳ ಬಾಯಿಂದಲೇ ಹೇಳಿಸಬೇಕೆಂದು ಅವರಿಗೆ ಆಗ್ರಹ. ಮತ್ತೆ ಮತ್ತೆ ಪ್ರಶ್ನೆ.

''ಇದು ಯಾರ ಮಗು ?''

''ನನ್ನ ಮಗು''

''ನಿನ್ನದೆಂದರೆ ಯಾರಿಂದ...?

... ... ... ... ... ...''

ದೇವತೆಗಳು ಪುನಃ ಬಲವಂತದಿಂದ ಕೇಳಲು ತಾರೆ ಕೊನೆಗೆ ಬಾಯಿ ಬಿಟ್ಟಳು. ''ಇದು ಚಂದ್ರನ ಮಗು'' ಕೂಡಲೇ ಚಂದ್ರ, ಬಂದು ಇದು ತನ್ನ

ಮಗು ಎಂದು ಆ ಕೂಸನ್ನು ಎತ್ತಿಕೊಂಡು ಅವನಿಗೆ 'ಬುಧ' ಎಂದು ಹೆಸರಿಟ್ಟ. ಅವನಿಗೆ ಭೂಲೋಕದ ಆಧಿಪತ್ಯವನ್ನು ಕೊಟ್ಟು ಪಟ್ಟಾಭಿಷೇಕಮಾಡಿದ. ಬ್ರಹ್ಮದೇವರು ಆ ಚಂದ್ರ ಕುಮಾರನಿಗೆ ಗ್ರಹಮಂಡಲದಲ್ಲಿ ಒಂದು ಸ್ಥಾನ ಇತ್ತು ಆಶೀರ್ವದಿಸಿ ಅಲ್ಲಿಯೇ ಅದೃಶ್ಯರಾದರು.

ಆ ಬುಧನಿಗೆ ಇಳೆಯ ಹೊಟ್ಟೆಯಲ್ಲಿ ಧರ್ಮಾತ್ಮನಾದ ಒಬ್ಬ ಮಗ ಜನಿಸಿದನು. ಅವನು ಪುರೂರವ ಎಂಬ ಹೆಸರಿನಿಂದ ಪ್ರಸಿದ್ಧನಾದನು. ನೂರು ಅಶ್ವಮೇಧ ಯಾಗಗಳನ್ನು ಮಾಡಿ ತನ್ನ ತೇಜೋಬಲ ಹಾಗೂ ಧರ್ಮ ಬುದ್ಧಿಯಿಂದ ಎಲ್ಲ ಜನರಿಂದಲೂ ವಂದಿತನಾದನು. ರಮಣೀಯವಾದ ಹಿಮಾಚಲದ ಉತ್ತುಂಗ ಶೃಂಗಾಂಗಣದಲ್ಲಿ ಶ್ರೀ ಹರಿಯನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ಪರಮಾತ್ಮನ ಅನುಗ್ರಹದಿಂದ ಪುರೂರವನಿಗೆ ಜಂಬೂ, ಪ್ಲಕ್ಷ, ಕುಶ ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ ಎಂಬ ಏಳು ದ್ವೀಪಗಳ ಆಧಿಪತ್ಯವು ಪ್ರಾಪ್ತವಾಯಿತು. ಕೇಶಿಯೇ ಮೊದಲಾದ ಕೋಟ್ಯಾವಧಿ ದುಷ್ಟ ದೈತ್ಯರನ್ನು ನಿಗ್ರಹಿಸಿದನು. ಅವನ ದಿವ್ಯರೂಪ ಕಂಡು ಅಮರಾವತಿಯ ಅಪ್ಸರೆ ಊರ್ವಶಿಯು ಮೋಹಿಸಿ ಬಂದು ಅವನ ಮಡದಿಯಾದಳು. ಸಪ್ತದ್ವೀಪಗಳ ಏಕಛತ್ರಾಧಿಪತ್ಯ, ಮೂರುಲೋಕಗಳ ಐಶ್ವರ್ಯ, ಕೈಯಲ್ಲಿ ದಿಗಂತವಿಶ್ರಾಂತಕೀರ್ತಿಕನ್ಯೆ ಅವನಿಗೆ ಚಾಮರ ಬೀಸುತ್ತಿದ್ದಳು.

ಶ್ರೀಹರಿಯ ಅನುಗ್ರಹವಾದ ಬಳಿಕ ಕೇಳುವದೇನು! ಸ್ವಯಂ ಇಂದ್ರನು ಪುರೂರವನನ್ನು ಕರೆದು ತನ್ನ ಅರ್ಧಾಸನದ ಮೇಲೆ ಕೂಡಿಸಿಕೊಂಡ. ಇನ್ನೇನು ಬೇಕು!

ಧರ್ಮ, ಅರ್ಥ, ಕಾಮ ಎಂಬ ಮೂರು ಪುರುಷಾರ್ಥಗಳನ್ನು ಒಂದಕ್ಕೊಂದು ವಿರೋಧವಿಲ್ಲದಂತೆ ಅವನು ಪಾಲಿಸಿದ. ಇದು ಆ ಪುರುಷಾರ್ಥಗಳಿಗೇ ಅತ್ಯಾಶ್ಚರ್ಯ. ಇದರ ರಹಸ್ಯವನ್ನು ಅರಿಯಬೇಕೆಂದು ಅವರ ಆ ಮೂರು ಪುರುಷಾರ್ಥಗಳ ಅಧಿದೇವತೆಗಳು ಪ್ರತ್ಯಕ್ಷವಾಗಿ ಅವನ ಬಳಿ ಬಂದವು. ಆಗ ರಾಜನು ಭಕ್ತಿಯಿಂದ ಆ ಪುರುಷಾರ್ಥ ದೇವತೆಗಳಿಗೆ ನಮಸ್ಕರಿಸಿದ. ಅರ್ಘ್ಯಪಾದ್ಯಾದಿಗಳನ್ನು ನೀಡಿದ. ಬಂಗಾರದ ಮೂರು ಆಸನಗಳನ್ನು ಹಾಕಿ ಕೂಡಿಸಿದ. ಅನಂತರ ಮೂವರನ್ನು ಪೂಜಿಸಿದ. ಆದರೆ ಅದರಲ್ಲಿ ಧರ್ಮಾಭಿಮಾನಿದೇವತೆಯ ಪೂಜೆಯನ್ನು ತುಸು ಪರಿಷ್ಕರಿಸಿ ಮಾಡಿದನು. ಇದರಿಂದ ಅರ್ಥ, ಕಾಮಗಳ ಅಭಿಮಾನಿ ದೇವತೆಗಳಿಗೆ ಕೋಪ ಬಂದಿತು.

ಅರ್ಥವು ''ದುರಾಶೆಯಿಂದ ನೀನು ವಿನಾಶವನ್ನು ಹೊಂದುವಿ''ಎಂದು ಶಾಪವಿತ್ತಿತು. ಇದರಂತೆ ಕಾಮವೂ ಕೂಡ ''ಊರ್ವಸಿಯ ವಿರಹದಿಂದ ಗಂಧಮಾದನ ಪರ್ವತದ ಕುಮಾರವನದಲ್ಲಿ ಸಂಚರಿಸುವಾಗ ನಿನಗೆ ಹುಚ್ಚು ಹಿಡಿಯಲಿ''ಎಂದು ಶಪಿಸಿತು. ಆದರೆ ಧರ್ಮ ಮಾತ್ರ ಆನಂದದಿಂದ ಅವನಿಗೆ ಆಶೀರ್ವದಿಸಿತು.

''ರಾಜಶ್ರೇಷ್ಠನೆ, ನೀನು ದೀರ್ಘಾಯುಷಿಆಗು. ಧಾರ್ಮಿಕ ಪ್ರಜ್ಞೆ ನಿನ್ನಲ್ಲಿ ಯಾವಾಗಲೂ ಜಾಗರೂಕವಾಗಿರಲಿ. ನಿನ್ನ ಸಂತತಿಯು ಚಂದ್ರಚಿಕ್ಕೆಗಳು ಬಾನಿನಲ್ಲಿ ಬೆಳಗುವವರೆಗೆ ಭೂಮಿಯಲ್ಲಿ ಬೆಳೆಯುತ್ತಲೇ ಇರಲಿ ನೂರ್ಮಡಿಯಾಗಿ.'' ಹೀಗೆ ಹೇಳಿ ದೇವತಾರೂಪದಿಂದ ಬಂದ ಧರ್ಮ, ಅರ್ಥ, ಕಾಮ ಮೂರು

ಪುರುಷಾರ್ಥಗಳು ಅಂತರ್ಧಾನವನ್ನು ಹೊಂದಿದರು. ಇತ್ತ ಪುರೂರವನು ಸಂತಸದಿಂದ ಸಾಮ್ರಾಜ್ಯವನ್ನು ಆಳುತ್ತಿದ್ದ. ದಿನದಿನವೂ ಅವನು ಅಮರಾವತಿಯವರೆಗೆ ಏರುತ್ತಿದ್ದ. ಸ್ವರ್ಗದಲ್ಲಿ ಶಚೀಪತಿಯೊಡನೆ ಸ್ನೇಹ ಸಂಭಾಷಣೆಮಾಡಿ ಭೂಮಿಗೆ ಮರಳುತ್ತಿದ್ದ.

ಒಂದು ದಿನ ಅವನು ಮುಗಿಲಿನಲ್ಲಿ ಪಯಣಿಸಲಿಲ್ಲ. ಒಂದು ತೇರಿನಲ್ಲಿ ಕುಳಿತು ದಕ್ಷಿಣದಿಕ್ಕಿಗೆ ಸಂಚಾರಕ್ಕೆ ಹೊರಟಿದ್ದನು. ಆಗ ಸೂರ್ಯೋದಯದ ಸಮಯ. ಕೇಶಿ ಎಂಬ ದೈತ್ಯನು ಊರ್ವಸಿ ಮತ್ತು ಚಿತ್ರಲೇಖೆಯರನ್ನು ಸೆಳೆದೊಯ್ಯುತ್ತಿದ್ದುದು ಅವನ ಕಣ್ಣಿಗೆ ಬಿತ್ತು. ಕೂಡಲೇ ಅವನು ಆ ದುಷ್ಟ ದೈತ್ಯನೊಡನೆ ಹೋರಾಡಿ ಗೆದ್ದು ಆ ಇಬ್ಬರೂ ಅಪ್ಸರೆಯರನ್ನು ವಾಯವ್ಯಾಸ್ತ್ರದಿಂದ ಬಿಡುಗಡೆ ಮಾಡಿದನು. ಇದರಿಂದ ಇಂದ್ರನಿಗೂ ಬಹಳ ಆನಂದ. ಅವನಿಗೂ ಆ ಕೇಶಿಯನ್ನು ನಿಗ್ರಹಿಸಲು ಆಗಿರಲಿಲ್ಲ. ಇಂಥ ದರ್ಪಿಷ್ಠ ದುರುಳ ದಾನವನನ್ನು ದಂಡಿಸಿ ಸ್ವರ್ಗದ ಬೆಲೆವೆಣ್ಣುಗಳನ್ನು ಬಿಡಿಸಿದ್ದಕ್ಕಾಗಿ ಅವನು ಕೃತಜ್ಞನಾಗಿದ್ದನು. ಇಂದ್ರ, ಪುರೂರವರಲ್ಲಿ ಈ ಮೂಲಕ ಮಧುರ ಮೈತ್ರಿ ಬೆಳೆಯಿತು. ಸ್ವರ್ಗಾಧಿಪತಿಯು ತನ್ನ ಸ್ನೇಹಿತನಾದ ಪುರೂರವನಿಗೆ ಬೇಕುಬೇಕಾದ ಅಧಿಕಾರ, ಸುಖ, ಐಶ್ವರ್ಯ, ಕೀರ್ತಿ ಭೋಗ ಭಾಗ್ಯಗಳನ್ನೆಲ್ಲ ಕೊಟ್ಟು ಕರುಣಿಸಿದನು. ಭರತಮುನಿಯ ಕಡೆಯಿಂದ ಪುರೂರವನ ಕೀರ್ತಿಯನ್ನು ಕಾವ್ಯರೂಪವಾಗಿ ಹಾಡಿಸಿದನು. ಊರ್ವಶಿಯೂ ಅವನ ಚರಿತ್ರೆಯನ್ನು ಹೊಗಳಿ ಹಾಡಿದಳು. ಒಮ್ಮೆ ಸ್ವರ್ಗದಲ್ಲಿ ಭರತಮುನಿಯು ಲಕ್ಷ್ಮೀಸ್ವಯಂವರ ಎಂಬ ನಾಟಕವನ್ನು ರಚಿಸಿದನು. ಆ ನೃತ್ಯನಾಟಕದಲ್ಲಿ ಊರ್ವಸಿ, ರಂಭಾ, ಮೇನಕಾ ಮುಂತಾದ ಕುಣಿತದ ಹೆಣ್ಣುಗಳಿಗೆಲ್ಲ ಒಂದೊಂದು ಪಾತ್ರವನ್ನು ಕೊಟ್ಟು ಈ ನೃತ್ಯನಾಟಕವನ್ನು ಯಶಸ್ವಿಯಾಗಿ ಅಭಿನಯಿಸಬೇಕೆಂದು ಆದೇಶವಿತ್ತನು. ಅಮರಾವತಿಯಲ್ಲಿ ಲಕ್ಷ್ಮೀ ಸ್ವಯಂವರ ನಾಟಕದ ಯಶಸ್ವಿ ಪ್ರಯೋಗ. ಎಲ್ಲ ಲೋಕಗಳಿಂದಲೂ ಪ್ರೇಕ್ಷಕರು ಬಂದಿದ್ದರು.

ರಂಗಮಂಟಪದ ಮೇಲೆ ಲಕ್ಷ್ಮಿಯ ಪ್ರವೇಶ. ಲಕ್ಷ್ಮಿಯ ಪಾತ್ರದಲ್ಲಿ ಊರ್ವಶಿ. ನೃತ್ಯನಾಟಕವಾದುದರಿಂದ ಕುಣಿತ ಮಣಿತಗಳಿಗೆ ಅಲ್ಲಿ ಪ್ರಾಧಾನ್ಯ. ಲಕ್ಷ್ಮಿಯ ಲೀಲಾಲಾಸ್ಯ, ನವಿಲಿನ ನಾಟ್ಯದಂತೆ ಎಲ್ಲರ ಕಣ್ಮನಗಳನ್ನು ಸೆಳೆದಿತ್ತು. ಸಮುದ್ರ ತೀರದ ಸ್ವಯಂವರ ದೃಶ್ಯ. ವಿಷ್ಣುವಿನ ಮುಂದೆ ಸ್ವಯಂವರದ ಮಾಲೆ ಹಿಡಿದ ಲಕ್ಷ್ಮಿಯ ಅಭಿನಯವನ್ನು ಊರ್ವಸಿ ಮಾಡತೊಡಗಿದಳು. ಭರತ ಮುನಿಯು ಹೇಳಿಕೊಟ್ಟಂತೆ ಲಕ್ಷ್ಮಿಭೂಮಿಕೆಯಲ್ಲಿ ಅವಳ ನೃತ್ಯವೇನೋ ನಡೆದಿದ್ದಿತು. ಆದರೆ ಮನಸ್ಸು ಮಾತ್ರ ಅವಳ ಪ್ರಿಯಕರನಾದ ಪುರೂರವನಲ್ಲಿ ನೆಟ್ಟು ಹೋಗಿತ್ತು. ಇದರಿಂದ ಎತ್ತೋ ಚಿತ್ತ, ಹೇಗೋ ನೃತ್ಯ, ಪಕ್ಕ ವಾದ್ಯದವರ ತಾಳ ಲಯಗಳ ತೂಕದಲ್ಲಿ ಅವಳ ಹೆಜ್ಜೆಗಳೇ ಬೀಳದಂತಾದವು. ಅವಳ ಮನಸ್ಸೇ ಅಲ್ಲಿ ಇಲ್ಲದ್ದರಿಂದ ಭರತಮುನಿ ಹೇಳಿಕೊಟ್ಟದ್ದೆಲ್ಲವೂ ಮರೆತು ಹೋಗಿತ್ತು. ತಪ್ಪು ತಪ್ಪಾಗಿ ಕುಣಿದದ್ದರಿಂದ ಅಂದಿನ ನಾಟಕವೇ ಆಭಾಸವಾಗಿದ್ದಿತು. ಭರತಮುನಿಗೆ ಇನ್ನಿಲ್ಲದ

ಕೋಪ. ಅದರ ಹಿಂದೇ ಬಂದಿತು ಪ್ರಚಂಡವಾದ ಶಾಪ. ''ಭೂಲೋಕದಲ್ಲಿ ನಿನಗೂ ನಿನ್ನ ಪ್ರಿಯಕರ ಪುರೂರವರಿಗೂ ವಿಯೋಗವುಂಟಾಗಲಿ. ಐವತ್ತೈದು ವರ್ಷಗಳ ಕಾಲ ನೀನು ಅವನಿಂದ ಅಗಲಿ ಒಂದು ಸೂಕ್ಷ್ಮ ಬಳ್ಳಿಯಾಗಿ ಇರು. ನಿನ್ನ ನೆಚ್ಚಿನ ನಲ್ಲನು ಅಲ್ಲಿಯೇ ಪಿಶಾಚಿಯಾಗಿ ಅತ್ತಿತ್ತ ಅಲೆದಾಡಲಿ.

ಹೀಗೆ ಭರತ ಮುನಿಯಿಂದ ಶಪಿತಳಾದ ಊರ್ವಸಿಯು ಸ್ವರ್ಗವನ್ನು ತೊರೆದು ಭೂಮಿಗೆ ಬಂದಳು. ಇಲ್ಲಿ ಪುರೂರವನನ್ನು ಪತಿಯನ್ನಾಗಿ ವರಿಸಿದಳು. ಅವಳು ಅವನೊಂದಿಗೆ ಬಹು ದೀರ್ಘ ಕಾಲದವರೆಗೆ ಸಂತಸದಿಂದ ಸಂಸಾರ ಮಾಡಿಕೊಂಡು ನೆಲದಲ್ಲಿಯೇ ನೆಲೆಸಿದಳು. ಶಾಪದಿಂದ ಕೆಲವು ವರ್ಷ ವಿಯೋಗವಾಗಿ ಕೊನೆಗೆ ಪುನರ್ಮಿಲನವೂ ಆಯಿತು. ಪುರೂರವನಿಂದ ಊರ್ವಶಿಗೆ ಎಂಟು ಜನ ಮಕ್ಕಳು ಹುಟ್ಟಿದರು. ಆಯು, ದೃಢಾಯು, ಅಶ್ವಾಯು, ಧನಾಯು, ದೃತಿಮಾನ್, ವಸು, ಶುಚಿ, ,ಸುವಿದ್ಯ, ಶತಾಯು ಎಂಬ ಎಂಟು ಜನ ಊರ್ವಶಿಯ ಮಕ್ಕಳೆಲ್ಲರೂ ದೈವಿಕ ತೇಜಸ್ಸಿನಿಂದ ತಳತಳಿಸುತ್ತಿದ್ದರು. ಊರ್ವಶೀ ಕುಮಾರ ಆಯುವಿಗೆ ನಹುಷ, ವೃದ್ಧಶರ್ಮ, ರಜ, ಡಂಭ, ವಿಪಾಪ್ಮ ಎಂದು ಐವರು ಮಕ್ಕಳು. ರಜಿರಾಜನಿಗೆ ನೂರುಮಂದಿ. ಅವರು ರಾಜೇಯರು ಎಂದು ಪ್ರಸಿದ್ಧಿ.

ರಜಿರಾಜನು ಪರಮ ಭಗವದ್ ಭಕ್ತ. ಹರಿಯ ಹರಕೆ ಹೊತ್ತು ಬಾಳಿದವ. ಅವನ ತಪಸ್ಸಿನಿಂದ ತುಷ್ಟನಾದ ನಾರಾಯಣನು ವಿಶ್ವವಿಜಯಿಯಾಗು ಎಂದು ವರವನ್ನು ಕೊಟ್ಟಿದ್ದನು. ಮುಂದೆ ಕೆಲ ದಿನಗಳ ಮೇಲೆ ದೇವದಾನವರಲ್ಲಿ ದೀರ್ಘ ಸಂಗ್ರಾಮ, ಜಯಲಕ್ಷ್ಮೀ ಒಮ್ಮೆ ಇತ್ತ ಬಾಗಿದರೆ ಮತ್ತೊಮ್ಮೆ ಅತ್ತ ವಾಲುತ್ತಿದ್ದಳು. ಹೀಗೆ ಜಯಪರಾಜಯಗಳ ನಿರ್ಣಯವಾಗದೆ ಮುನ್ನೂರು ವರ್ಷ ಸಾಗಿತು ಆ ಮಹಾಯುದ್ಧ. ದೇವತೆಗಳ ಸೇನಾಪತಿ ಇಂದ್ರ. ದೈತ್ಯರಿಗೆ ಪ್ರಹ್ಲಾದ. ಇಬ್ಬರೂ ಬಲಿಷ್ಠರು. ಇಬ್ಬರೂ ಮಾನಿಷ್ಠರು ಸೋಲೂ ಇಲ್ಲ, ಗೆಲವೂ ಇಲ್ಲ. ಯುದ್ಧ ಮಾತ್ರ ನಿಲ್ಲಲಿಲ್ಲ. ಕೊನೆಗೆ ದೇವಾಸುರರಿಬ್ಬರೂ ಬೇಸತ್ತು ಬ್ರಹ್ಮನ ಬಳಿಗೆ ಹೋಗಿ ಕೇಳಿದರು. ''ಈ ಯುದ್ಧದಲ್ಲಿ ಜಯವು ಯಾರಿಗೆ ?'' ''ರಜಿರಾಜನು ಯಾವ ಪಕ್ಷದಲ್ಲಿ ಇರುವನೋ ಅವರಿಗೇ ಜಯ '' ಬ್ರಹ್ಮದೇವರ ಉತ್ತರ. ಇದನ್ನು ಕೇಳಿ ದೈತ್ಯರು ಧಾವಿಸಿ ಬಂದರು. ರಜಿಯ ಬಳಿ ನಮಗೆ ಸಹಾಯ ಮಾಡಬೇಕು ಎಂದು ಕೇಳಿಕೊಂಡರು. ಅದಕ್ಕೆ ರಜಿಯು ''ನೀವು ಗೆದ್ದ ಮೇಲೆ ನನ್ನನ್ನೇ ಅಧಿರಾಜ ಎಂದು ಒಪ್ಪುವದಾದರೆ ನಾನು ನಿಮಗೆ ಯುದ್ಧದಲ್ಲಿ ಸಹಾಯ ಮಾಡಿ ಗೆಲುವನ್ನು ತಂದುಕೊಡುವೆನು'' ಎಂದು ಹೇಳಿದನು. ರಜಿಯ ಈ ಕರಾರಿಗೆ ದೈತ್ಯರು ಸಮ್ಮತಿಸಲಿಲ್ಲ. ಆದರೆ ದೇವತೆಗಳು ಮಾತ್ರ ವಿಜಯದ ನಂತರ ರಜಿಯನ್ನು ತಮ್ಮ ರಾಜನನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಂಡರು.

''ನಮಗೆ ನೀನೆ ಒಡೆಯನಾಗು. ಯುದ್ಧದಲ್ಲಿ ನಮ್ಮ ವೈರಿಯನ್ನು ಗೆದ್ದು ವಿಜಯಶ್ರೀ ನಮಗೆ ಒಲಿಯುವಂತೆ ನೀನು ಮಾಡು'' ಎಂದು ಬೇಡಿಕೊಂಡರು. ಆಗ ಉತ್ಸಾಹಿತನಾದ ರಜಿರಾಜನು ದೇವೇಂದ್ರನಿಗೂ ಕೂಡ ಗೆಲ್ಲಲು ಅಶಕ್ಯರಾಗಿ ಮಲೆತು

ನಿಂತ ದಾನವರನ್ನು ಸದೆಬಡಿದು ದೇವತೆಗಳಿಗೆ ಗೆಲುವನ್ನು ತಂದು ಕೊಟ್ಟನು. ಅನಂತರ ರಜಿ ಮಹಾರಾಜನ ಈ ಸಾಹಸಶೌರ್ಯಗಳಿಂದ ಸಂತುಷ್ಟನಾದ ಶಚೀಪತಿಯು ನೆಲದ ನೃಪತಿಯಾದ ಆ ರಾಜನನ್ನು ಗೌರವದಿಂದ "ತಂದೆಯೇ, ನೀನು ಅಧಿಪತಿಯಾಗಿ ಅಮರಾವತಿಯ ಅರಸೊತ್ತಿಗೆಯನ್ನು ಅನುಭವಿಸು. ನೀನು ನನಗೆ ತಂದೆ ಇದ್ದಂತೆ" ಎಂದು ನುಡಿದು ಸಂತಸ ದುಂಬಿದ ಸತ್ಕಾರವನ್ನು ಮಾಡಿದನು. ಇದರಿಂದ ರಜಿಗೆ ಪರಮಾನಂದವಾದರೂ ಸ್ವರ್ಗ ಸಾಮ್ರಾಜ್ಯದ ಮೇಲೆ ಅವನಿಗೆ ಆಶೆ ಇರಲಿಲ್ಲ. ಯಾವಾಗಲೂ ಅವನದು ವೈರಾಗ್ಯ ಪ್ರವೃತ್ತಿ. ಇಂದ್ರನು ತನ್ನನ್ನು ತಂದೆಯೆಂದು ಕರೆದು ಗೌರವಿದ್ದೇ ನೆಲದ ಜೀವಿಯಾದ ತನಗೆ ಪರ್ಯಾಪ್ತ ಪುರಸ್ಕಾರ ಮಾಡಿದಂತಾಯಿತು, ಎಂದೇ ಅವನ ಭಾವನೆ. ಆದುದರಿಂದ ನಿಸ್ಪೃಹನಾದ ಅವನು ತನಗೆ ಸುರಸಂಘದವರೆಲ್ಲ ಕರಾರಿನಂತೆ ಒಪ್ಪಿಸಿ ಕೊಟ್ಟ ಸುರಲೋಕ ಸಾಮ್ರಾಜ್ಯವನ್ನು ಮಹೇಂದ್ರನಿಗೇ ಮರಳಿ ಒಪ್ಪಿಸಿಕೊಟ್ಟು ತಾನು ತಪಸ್ಸಿಗೇ ನಡೆದು ಬಿಟ್ಟ.

ರಜಿಯ ಅನಂತರ ಅವನ ಮಕ್ಕಳು ಭೂವಲಯದಲ್ಲಿ ರಾಜ್ಯಾರೂಢರಾದರು. ತಮ್ಮ ತಂದೆ ತಾನಾಗಿ ದೊರೆತ ಸ್ವರ್ಗಾಧಿಪತ್ಯವನ್ನು ವಿನಯ ಹಾಗೂ ವೈರಾಗ್ಯಗಳಿಂದ ತಿರುಗಿ ಕೊಟ್ಟದ್ದು ಅವರಿಗೆ ಮನಸ್ಸಿಗೆ ಹಿಡಿಸಿರಲಿಲ್ಲ. ದೇವೇಂದ್ರನು ಸ್ವರ್ಗ ಲೋಕದಲ್ಲಿ ದೊಡ್ಡ ಸಭೆಯಲ್ಲಿಯೇ ತಮ್ಮ ತಂದೆ ರಜಿಯನ್ನು ಸತ್ಕರಿಸಿ " ನೀನು ನಮ್ಮ ತಂದೆ. ನಾನು ನಿನ್ನ ಮಗ" ಎಂದು ಹೇಳಿದ ಮಾತನ್ನೇ ಗಟ್ಟಿಯಾಗಿ ಹಿಡಿದು ಸ್ವರ್ಗದ ಸಾಮ್ರಾಜ್ಯವನ್ನು ಕೊಡಲು ದೇವೇಂದ್ರನಿಗೆ ಕೇಳಿದರು. "ನೀನೇ ಒಪ್ಪಿಕೊಂಡಂತೆ ನೀನು ನಮ್ಮ ತಂದೆ ರಜಿರಾಜನ ಮಗ. ನಾವು ಅವನ ಮಕ್ಕಳು. ನಾವಿಬ್ಬರೂ ಸೋದರರಾದ ಬಳಿಕ ಸ್ವರ್ಗದ ಸಾಮ್ರಾಜ್ಯದ ಮೇಲೆ ನಮಗೂ ಅಧಿಕಾರವಿದೆ. ಇಷ್ಟು ದಿನ ಈ ದೇವರಾಜ್ಯವನ್ನು ನೀನು ಆಳಿ, ಅನುಭವಿಸಿ, ಅಧಿಪತಿಯಾಗಿ, ಐಶ್ವರ್ಯ ಅಧಿಕಾರಗಳನ್ನು ಬಹುಕಾಲ ಭೋಗಿಸಿರುವೆ. ಇನ್ನು ಮೇಲೆ ನಮ್ಮ ಪಾಳಿ' ಎಂದು ಹೇಳಿ ಸ್ವರ್ಗವನ್ನು ಬಲಾತ್ಕಾರದಿಂದ ಆಕ್ರಮಿಸಿದರು. ಬಲಿಷ್ಠರಾದ ಅವರು ತಮ್ಮಲ್ಲಿ ಆನುವಂಶಿಕವಾಗಿ ಇಳಿದು ಬಂದ ತಪೋಬಲದಿಂದ ಮತ್ತು ಸಂಖ್ಯಾಬಲದಿಂದ ಇಂದ್ರನನ್ನೂ ಅವನ ಸುರಸೇನೆಯನ್ನೂ ಹೊಡೆದೋಡಿಸಿ ದೇವಭೂಮಿಯನ್ನೆಲ್ಲ ಪಾದಾಕ್ರಾಂತ ಮಾಡಿಕೊಂಡರು. ದೇವತೆಗಳ ಪಾಲಿನ ಯಜ್ಞದ ಆಹುತಿಗಳನ್ನೆಲ್ಲ ತಾವೇ ಕಸಿದುಕೊಂಡು ಭುಂಜಿಸಿದರು. ಸುರರ ಸಿಂಹಾಸನದ ಮೇಲೆ ಕುಳಿತು ಸ್ವರ್ಗದಸುಖ, ಸಂಪತ್ತು, ಸೌಭಾಗ್ಯಗಳನ್ನೆಲ್ಲ ಸೂರೆಗೊಂಡರು. ಇದರಿಂದ ಇಂದ್ರನು ರಾಜ್ಯಭ್ರಷ್ಟನಾಗಿ ಬವಣೆ ಪಡುವಂತಾಯಿತು. ರಜಿಕುಮಾರರ ಕ್ರೂರವರ್ತನೆ, ದುಷ್ಪವರ್ತನೆಗಳಿಂದ ಅವನಿಗೆ ಬಹಳ ಪೀಡೆಯಾಯಿತು. ಅದರಿಂದ ಉದ್ವಿಗ್ನನಾದ ಅವನು ಸುರಾಚಾರ್ಯ ಬೃಹಸ್ಪತಿಯ ಬಳಿಗೆ ಬಂದು ದೀನನಾಗಿ ನುಡಿದ 'ಗುರುದೇವ, ರಜಿಪುತ್ರರ ಉಪಟಳ ಸಹಿಸಲಸದಳ, ನನ್ನ ರಾಜ್ಯವನ್ನು ಕಿತ್ತುಕೊಂಡು ಯಜ್ಞಾಹುತಿಗಳನ್ನೂ ಕಸಿದಿದ್ದಾರೆ. ಒಂದರ ಮೇಲೊಂದು ಸೋಲಿನ ಮಾಲೆಗಳು ನನ್ನ ಕೊರಳಿಗೆ ಉರುಲಾಗಿವೆ. ಹೇಗಾದರೂ ಮಾಡಿ ನನ್ನ ಸ್ವರ್ಗದ ರಾಜ್ಯ ನನಗೆ ದೊರಕುವಂತೆ ಮಾಡಿರಿ.'

ಸುರಸಮ್ರಾಟನ ಈ ಕಂಗಾಲ ಅವಸ್ಥೆ ಕಂಡು ದೇವ ಗುರುವಿಗೆ ತುಂಬ ಮರುಕ. ಅವನನ್ನು ಕಾಡಿ ಪೀಡಿಸಿ ತಿಕ್ಕಿಮುಕ್ಕುವ ಗ್ರಹಗಳಿಗೆಲ್ಲ ಶಾಂತಿಯನ್ನು ಮಾಡಿಸಿ ದುಃಖ ಪರಿಹಾರಕವಾದ ಬೇರೆ ಉಪಾಯಗಳನ್ನೂ ಮಾಡಿಸಿದರು. ಅದರಿಂದ ಇಂದ್ರನ ದೈನ್ಯ ದೂರಾಗಿ ಅವನು ಬಲಿಷ್ಠನಾದನು. ಇತ್ತ ವೇದ ಕೋವಿದನಾದ ಬೃಹಸ್ಪತಿಯು ಜಿನ ಧರ್ಮವನ್ನು ಅವಲಂಬಿಸಿ ವೇದ ವಿರುದ್ಧವಾದ ತತ್ವಗಳನ್ನು ಬೋಧಿಸಿದನು. ರಜಿಪುತ್ರರಿಗೆ ವೇದ ವಿರುದ್ಧವಾದ ಆ ಹೊಸ ಮತ ಒಮ್ಮೆಲೇ ಹಿಡಿಸಿತು. ವೇದಶಾಸ್ತ್ರಗಳಲ್ಲಿ ಅವರಿಗೆ ನಂಬಿಗೆಯೇ ಇಲ್ಲದಾಯಿತು. ವೇದೋಕ್ತ ಆಚಾರ ವಿಧಿವಿಧಾನಗಳನ್ನೆಲ್ಲ ಅವರು ಬಹಿಷ್ಕರಿಸಿದರು. ಹೇತುವಾದ, ಭೌತವಾದಗಳನ್ನು ನಂಬಿ ವೇದಬಾಹಿರವಾದ ಅವರ ಧರ್ಮಕರ್ಮ, ಕ್ರಿಯಾಕಲಾಪಗಳೆಲ್ಲವೂ ಲೋಪವಾದವು. ವೇದ ವಿದ್ವೇಷಕರಾದ ಅವರ ಬಲವೂ ಕೂಡ ಕುಗ್ಗಿ ಹೋಯಿತು.

ಇದನ್ನು ತಿಳಿದು ದೇವೇಂದ್ರನು ಬಂದು ಧರ್ಮದ್ರೋಹಿಗಳಾದ ಆ ರಜಿಪುತ್ರರನ್ನೆಲ್ಲ ತನ್ನ ವಜ್ರಾಯುಧದಿಂದ ಹೊಡೆದು ಬಡೆದು ಸೋಲಿಸಿ ಸಾಯಿಸಿದನು. ಮತ್ತು ತನ್ನ ಸ್ವರ್ಗಸಿಂಹಾಸನವನ್ನು ಪುನಃ ಸಂಭ್ರಮದಿಂದ ಆರೋಹಣ ಮಾಡಿದನು. ಊರ್ವಶಿಯ ಮೊಮ್ಮಗನಾದ ನಹುಷನಿಗೆ ಏಳು ಜನ ಧರ್ಮಶೀಲರಾದ ಸತ್ಪುತ್ರರು. ಯತಿ, ಯಯಾತಿ, ಸಂಯಾತಿ, ಉದ್ಭವ, ಪಾಚಿ, ಶರ್ಯಾತಿ, ಮತ್ತು ಮೇಘಜಾತಿ ಎಂದು ಈ ಸಪ್ತಪುತ್ರರಿಂದ ಅವನ ವಂಶವು ಅಭಿವೃದ್ಧಿಯನ್ನು ಹೊಂದಿತು. ನಹುಷರಾಜನ ಜ್ಯೇಷ್ಠಪುತ್ರ ಯತಿ, ಎಳಮೆಯಲ್ಲಿಯೇ ವಿರಕ್ತನಾಗಿ ನೈಷ್ಠಿಕ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತ ಕಾಡಿಗೆ ಹೋಗಿ ತಪಸ್ಸನ್ನು ಕೈಕೊಂಡ. ಎರಡನೆಯವನಾದ ಯಯಾತಿಯೂ ಧರ್ಮನಿಷ್ಠನೇ. ಅಣ್ಣನು ಅಡವಿಗೆ ಹೋದ ಬಳಿಕ ಅವನೇ ತಂದೆಯ ಗದ್ದುಗೆ ಏರಿ ಸಾಮ್ರಾಜ್ಯದ ಅಧಿಕಾರ ಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡ. ಧರ್ಮಶಾಸ್ತ್ರಕ್ಕೆ ಅನುಗುಣ ವಾಗಿಯೇ ನಡೆದಿತ್ತು ಅವನಶಾಸನಶಕಟ. ಅವನಿಗೆ ಇಬ್ಬರು ಮಡದಿಯರು ಶುಕ್ರಾಚಾರ್ಯರ ಮಗಳು ದೇವಯಾನೀ, ವೃಷಪರ್ವರಾಜನ ಕುವರಿ ಶರ್ಮಿಷ್ಠಾ.

ಯಯಾತಿಗೆ ದೇವಯಾನಿಯಲ್ಲಿ ಯದು ತುರ್ವಸು ಎಂಬ ಇಬ್ಬರು ಪುತ್ರರು. ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು, ಪುರು ಎಂದು ಮೂವರು. ಇವರಲ್ಲಿ ಯದು ಮತ್ತು ಪುರು ಇಬ್ಬರಿಂದ ಎರಡು ದೊಡ್ಡ ವಂಶಗಳು ಜಗತ್ತಿನಲ್ಲಿ ವೃದ್ಧಿಗೊಂಡವು. ನಹುಷಸುತ ಯಯಾತಿಯು ನಿಜವಾಗಿಯೂ ಮಹಾಪರಾಕ್ರಮಿ. ಸತ್ಯಸಂಧ, ಪಿತೃಭಕ್ತ, ದೇವತಾರಾಧಕ. ಅವನು ಅನೇಕ ಯಜ್ಞಯಾಗಾದಿಗಳನ್ನು ನೆರವೇರಿಸಿದನು. ಧರ್ಮದಿಂದ ರಾಜ್ಯವಾಳಿದನು. ಶೌರ್ಯದಿಂದ ಭೂಮಂಡಲ ವನ್ನೆಲ್ಲ ಗೆದ್ದನು. ಹೀಗೆ ಬಹುಕಾಲ ರಾಜ್ಯವಾಳಿ ಅವನು ಮುದುಕನಾದನು. ಮುಪ್ಪು ಅವನ ಮೈಯನ್ನು ಅಪ್ಪಿದಾಗ ಕಾಯಕೃಶವಾಗಿ ಕಳೆಗುಂದಿತು. ಕುರೂಪಿಯಾದ ದೇಹದಲ್ಲಿ ಅಶಕ್ತಿ ಅನಾರೋಗ್ಯಗಳು ತಲೆದೋರಿದವು. ಆಗ ಅವನು ತನ್ನ ಐದೂ ಮಕ್ಕಳನ್ನು ಕರೆದು ''ಪುತ್ರರೇ, ನಾನು ನನ್ನ ಮುದಿತನವನ್ನು ಯಾರಿಗಾದರೂ

ಕೊಟ್ಟು ಮತ್ತೆ ಹರೆಯದ ಹುಡುಗನಾಗಬೇಕೆಂದಿದ್ದೇನೆ. ತರುಣ ವಯಸ್ಸಿನ ಚೆಲುವೆಯರೊಡನೆ ನಾನೂ ನವತರುಣನಾಗಿ ಸ್ವಚ್ಛಂದವಾಗಿ ಆನಂದದಿಂದ ವಿಹಾರ ವಿಲಾಸ ಮಾಡಬೇಕೆಂದು ನನಗೆ ಬಲವತ್ತರ ಬಯಕೆ. ಈ ವಿಷಯದಲ್ಲಿ ನೀವು ನನಗೆ ಸಹಾಯಮಾಡಬೇಕು'' ಎಂದು ಕೇಳಿದನು.

ಆಗ ದೇವಯಾನಿಯ ಮಕ್ಕಳಲ್ಲಿ ಹಿರಿಯನಾದ ಯದು ಮುಂದೆ ಬಂದು, ''ಅಪ್ಪ, ನಿನಗೆ ಸಹಾಯ ಮಾಡುವದು ಮಕ್ಕಳಾದ ನಮ್ಮ ಕರ್ತವ್ಯವೇ ಆಗಿದೆ. ಆದರೆ ಯೌವ್ವನ ನಮ್ಮಲ್ಲಿದೆ. ಸುಖ ನಿನಗೆ ಹೇಗೆ ಆದೀತು ?''ಎಂದು ಕೇಳಿದನು. ಅದಕ್ಕೆ ಯಯಾತಿ ತಿಳಿಸಿ ಹೇಳಿದ- ''ಚಿರಂಜೀವರೇ, ನೀವು ಒಪ್ಪಿದರೆ ನಾನು ನನ್ನ ಮುದಿತನವನ್ನು ನಿಮಗೆ ಕೊಡುತ್ತೇನೆ. ನಿಮ್ಮ ತಾರುಣ್ಯವನ್ನು ನೀವು ನನಗೆ ಕೊಡಿರಿ. ಆದರಿಂದ ನಾನು ಮತ್ತೆ ಹೊಸ ಹರೆಯದ ಹುರುಪಿನ ಯುವಕನಾಗಿ ಕಾಮಿನಿಯರೊಂದಿಗೆ ಕ್ರೀಡಿಸುತ್ತೇನೆ. ತಾರುಣ್ಯದ ಸುಖ ಸಂಭೋಗಗಳನ್ನು ಅನುಭವಿಸುತ್ತೇನೆ. ನಾನು ದೀರ್ಘಸತ್ರ ಎಂಬ ದೊಡ್ಡ ಯಜ್ಞವನ್ನು ಬಹುಕಾಲ ಮಾಡಿದ್ದರಿಂದ ನನ್ನ ಯೌವನವೆಲ್ಲ ಮೊದಲೇ ಕ್ಷೀಣವಾಗಿತ್ತು. ಅದರ ಮೇಲೆ ನನ್ನ ಮೊದಲಿನ ಮಾವ ಶುಕ್ರಾಚಾರ್ಯರು ಶರ್ಮಿಷ್ಠೆಯೊಡನೆ ಸಹವಾಸ ಮಾಡಿದ್ದಕ್ಕಾಗಿ ಮುದುಕನಾಗು ಎಂದು ಶಾಪವಿತ್ತರು. ಆದರಿಂದ ನನಗೆ ಯೌವನದ ಸುಖಾನುಭವವೇ ತಪ್ಪಿಹೋದಂತಾಗಿದೆ. ವಿಷಯ ಸುಖದ ವಾಸನೆ ನನಗೆ ಹಿಂಗಿಲ್ಲ, ಕಾಮ ಕಡಿಮೆಯಾಗಿಲ್ಲ, ಇಂದ್ರಿಯಲೋಲುಪತೆ ಇನ್ನೂ ತಗ್ಗಿಲ್ಲ. ಆದ್ದರಿಂದ ಈಗ ನೀವು ನನ್ನ ಮೈಗೆ ಹತ್ತಿದ ಮುದಿತನವನ್ನು ತೆಗೆದುಕೊಳ್ಳಿರಿ. ನಿಮ್ಮ ನವತಾರುಣ್ಯವನ್ನು ನಾನು ಪಡೆದು ಸುಖಿಸುತ್ತೇನೆ ''

ಅವನ ಈ ಮಾತಿಗೆ ಯದು ಮೊದಲಾದ ನಾಲ್ಕು ಮಕ್ಕಳೂ ಸಮ್ಮತಿಸಲಿಲ್ಲ. ಆದರೆ ಕೊನೆಯವನಾದ ಶರ್ಮಿಷ್ಠಾಕುಮಾರ ಪುರು ಪಿತೃಭಕ್ತನಾದುದುರಿಂದ ಮುಪ್ಪನ್ನು ಕೂಡ ಅಪ್ಪಿಕೊಳ್ಳಲು ಒಪ್ಪಿಗೆಯಿತ್ತ. ''ಇದೋ ಈಗಲೇ ತೆಗೆದುಕೊಳ್ಳಿರಿ ನನ್ನ ತಾರುಣ್ಯವನ್ನು. ಎಲ್ಲಿ ಕೊಡಿ ನಿಮ್ಮ ಮುಪ್ಪನ್ನು. ನನ್ನ ಯೌವನ ಪಡೆದು ನೀವು ಬೇಕಾದ ಸುಖಭೋಗ ಪಡೆಯಿರಿ. ನಾನು ನಿಮ್ಮ ಆಜ್ಞೆಯಂತೆ ಮುಪ್ಪನ್ನು ಹೊತ್ತು ರಾಜ್ಯದಲ್ಲಿ ಇರುತ್ತೇನೆ '' ಎಂದು ಹೇಳಿದನು. ಇದನ್ನು ಕೇಳಿ ಯಯಾತಿಗೆ ಪರಮಾನಂದವಾಯಿತು. ಅವನು ತನ್ನಲ್ಲಿದ್ದ ವಿಲಕ್ಷಣವಾದ ತಪೋಬಲದಿಂದ ತನ್ನ ದೇಹದಲ್ಲಿ ನಖಶಿಖಾಂತವಾಗಿ ವ್ಯಾಪಿಸಿದ ಮುದಿತನವನ್ನೆಲ್ಲ ಕಿತ್ತು ಎತ್ತಿ ಎಳೆಯವರೆಯದ ಪುರುಪಿನ ಕೋಮಲ ಕೃಶಕಾಯದಲ್ಲಿ ಇರಿಸಿದ. ಅವನ ಮೈತುಂಬ ಉಕ್ಕು ಮಿಕ್ಕುತ್ತಿದ್ದ ಹೊಸರಕ್ತದ ಹರೆಯ ಸಿರಿಯನ್ನೆಲ್ಲ ಆಕರ್ಷಣಮಾಡಿ ತನ್ನ ಶರೀರದಲ್ಲಿ ತುಂಬಿಕೊಂಡ.

ಯಯಾತಿಯು ಯುವಕನಾದ. ಪುರು ಮುದುಕನಾದ. ಕೆಲವೇ ಸಮಯದಲ್ಲಿ ಈ ಅವಸ್ಥಾಪಲ್ಲಟವು ನಡೆದುಹೋಯಿತು. ಹೊಸಹರೆಯದ ಹುರುಪು ಹುಮ್ಮಸ ಹುಡುಗಾಟಗಳಿಂದ ಹೊಗರೇರಿ ಯಯಾತಿ ವಿಷಯಸುಖವನ್ನು ಅರಸಿಹೊರಟ.

ಮುಪ್ಪಿನ ಮುದುಕನಾಗಿ ಪುರುವು ರಾಜ್ಯಭಾರವನ್ನು ಹೊತ್ತು ಸಾಮ್ರಾಜ್ಯ ಶಾಸನವನ್ನು ಮಾಡತೊಡಗಿದ. ಸಾವಿರ ವರ್ಷ ಉರುಳಿತು. ಕಾಲಚಕ್ರ ಹೊರಳಿತು. ನವತಾರುಣ್ಯದ ಯಯಾತಿಯ ಸುಖೋಪಭೋಗ ಸಂಭ್ರಮ ಸಾಗಿಯೇ ಇತ್ತು. ಹೊಸಹೆಣ್ಣು, ಹೊಸಭೋಗ, ಹೊಸಹೊಸ ಅನುಭವ, ವಿವಿಧವಿಹಾರ, ತೆರಪಿಲ್ಲದೆ ಸಂಭೋಗ, ಕೊನೆಯಿಲ್ಲದ ಕಾಮಕ್ರೀಡೆ. ಎಷ್ಟು ಉಂಡರೂ ಅತೃಪ್ತಿ. ಎಷ್ಟು ಭೋಗಿಸಿದರೂ ಸಾಕಿಲ್ಲ.

ಇನ್ನೂ ಬೇಕು. ಮತ್ತಷ್ಟೂ ಬೇಕು. ಮತ್ತೆ ವಿಹಾರ. ಮತ್ತೆ ವಿಲಾಸ ! ಛೀ ಧಿಕ್ಕಾರವಿರಲಿ ಈ ವಿಷಯ ಲಂಪಟತನಕ್ಕೆ ! ಭೋಗಿಸಿದಷ್ಟೂ ಆಸೆ ಕೆರಳುತ್ತಲೇ ಹೋಗುತ್ತದೆ. ಕಾಮಿಸಿದಂತೆ ಕಾಮವೃದ್ಧಿ. ಭೋಗಮಾಡುತ್ತ ಹೋದವನಿಗೆ ತೃಪ್ತಿಯೆಂಬುದೇ ಇಲ್ಲ. ಇದಕ್ಕೆ ವೈರಾಗ್ಯವೇ ಮದ್ದು. ವಿಷಯ ಸುಖದ ಆಶೆಯನ್ನು ಬಿಟ್ಟು ಬಿಡುವದೇ ಸಂತೃಪ್ತಿಯ ಮುಖ್ಯ ಉಪಾಯ ಎಂದು ಬಗೆದು ವೈರಾಗ್ಯ ತಳೆದನು. ರಾಗ ಹೋಗಿ ವಿರಾಗ ಮೂಡಿತು. ಆಸಕ್ತಿಯ ಬದಲು ಭಕ್ತಿ ಬೆಳೆಯಿತು. ಅವನು ತನ್ನ ನೆಚ್ಚಿನ ಮಗನಾದ ಪುರುವನ್ನು ಕರೆದು ''ನೀನೇ ನನ್ನ ನಿಜವಾದ ಪುತ್ರ. ನಿನ್ನಿಂದಲೇ ನನ್ನ ವಂಶವು ಮುಂದೆ ಬರುವದು.. ಇನ್ನು ಮೇಲೆ ಇದಕ್ಕೆ ಪುರುವಂಶ ಎಂದು ಪ್ರಖ್ಯಾತಿಯಾಗುವದು.'' ಎಂದು ಹೇಳಿ ತನ್ನ ತರುವಾಯ ಪುರುವಿಗೇ ಸಾಮ್ರಾಜ್ಯ ಪಟ್ಟಾಭಿಷೇಕಮಾಡಿದನು. ಕೆಲಕಾಲ ಕಳೆದ ಬಳಿಕ ಕಾಲಧರ್ಮದಿಂದ ಯಯಾತಿ ಸಾರ್ವಭೌಮನು ಮರಣ ಹೊಂದಿದನು. ಅವನ ಮಗ ಪುರುವಿನಿಂದ ಮುಂದೆ ಪ್ರವರ್ತಿತವಾದ ಪುರುವಂಶದಲ್ಲಿಯೇ ಭಾರತದ ಪ್ರಸಿದ್ಧ ರಾಜರಾದ ಕೌರವ ಪಾಂಡವ ಮೊದಲಾದ ರಾಜರ್ಷಿಗಳು ಬೆಳಗಿ ಬಾಳಿದರು. ಪುರುವಂಶ ಮುಂದೆ ಭರತವಂಶವಾಗಿ ಬೆಳೆದು ಬೆಳಗಿದ ಬಗೆಯನ್ನು ಬಿತ್ತರಿಸುತ್ತೇನೆ ಆಲಿಸು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು*

—o—

## ತಾನು ಸತ್ತು ಗುರುವನ್ನು ಬದುಕಿಸಿದ ಶಿಷ್ಯ

ಅಧ್ಯಾಯ - ೨೬

**ಋಷಿಯ ಉವಾಚಃ**

**ಕಿಮರ್ಥಂ ಪೌರವೋ ವಂಶಃ ಶ್ರೇಷ್ಠತ್ವಂ ಪ್ರಾಪ ಭೂತಲೇ**
**ಜ್ಯೇಷ್ಠಸ್ಯಾಪಿ ಯದೋರ್ವಂಶಃ ಕಿಮರ್ಥಂ ಹೀಯತೇ ಶ್ರಿಯಾ ॥**

**ಋಷಿಗಳು** :- ಪುರುವಂಶವು ಈ ಭೂಮಂಡಲದಲ್ಲಿ ಸರ್ವಶ್ರೇಷ್ಠ ಎಂದು ಪ್ರಸಿದ್ಧಿ ಹೊಂದಲು ಕಾರಣವೇನು ? ಪುರೂವಿಗಿಂತ ಅವನ ಅಣ್ಣಾ ಯದುರಾಜನು ಜ್ಯೇಷ್ಠ ತಾನೆ! ಆದರೂ ಅವನ ವಂಶದವರಿಗೆ ರಾಜ್ಯಸಂಪದವು ಏಕೆ ದೊರಕಲಿಲ್ಲ ?

**ಸೂತ** :- ಇದೇ ಯಯಾತಿ ಚರಿತ್ರದ ಬಗೆಗೆ ಹಿಂದೆ ಶತಾನೀಕನು ಶೌನಕರನ್ನು ಪ್ರಶ್ನಿಸಿದ್ದನು. ಪವಿತ್ರವಾದ ಆ ಕಥೆಯನ್ನು ನಿನಗೆ ಹೇಳುತ್ತೇನೆ ಕೇಳು-

**ಶತಾನೀಕ** :- ನಮ್ಮ ಮನೆತನದ ಪೂರ್ವಜನಾದ ಯಯಾತಿಯು ಬ್ರಹ್ಮದೇವರಿಂದ ಹತ್ತನೆಯ ತಲೆಯವನು. ಅವನು ಜಾತಿಯಿಂದ ಕ್ಷತ್ರಿಯ. ಕ್ಷತ್ರಿಯರಿಗೆ ಬ್ರಾಹ್ಮಣರ ಹೆಣ್ಣು ಸಿಗುವದು ದುರ್ಲಭ. ಆದರೂ ಯಯಾತಿಯು ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನು ಪಡೆದದ್ದು ಹೇಗೆ ? ಮತ್ತು ಈ ಪುರುವಂಶದಲ್ಲಿ ಮುಂದೆ ಪ್ರಸಿದ್ಧರಾದ ಯಾವ ಯಾವ ರಾಜನು ಆಳಿ ಬಾಳಿ ಬೆಳಗಿದರು. ಇದನ್ನೆಲ್ಲ ವಿವರವಾಗಿ ವಿಸ್ತರಿಸಿ ನಮಗೆ ನಿರೂಪಿಸಿರಿ.

**ಶೌನಕ** :- ಯಯಾತಿ ಒಬ್ಬ ರಾಜಋಷಿ. ದೇವೇಂದ್ರನಿಗೆ ಸಮಾನವಾಗಿದ್ದಿತು ಅವನ ಕಾಂತಿ ತೇಜಸ್ಸು. ಶುಕ್ರಾಚಾರ್ಯ ಮತ್ತು ವೃಷಪರ್ವ ಇಬ್ಬರಿಗೂ ಅವನು ಆರಿಸಿ ಮಾಡಿಕೊಂಡ ಅಳಿಯ. ಆ ಕಥೆಯನ್ನೇ ನಾನೀಗ ಹೇಳ ಹೊರಟಿರುವೆನು.

**ದೇವ** :- ದೈತ್ಯರ ಯುದ್ಧ ಎಂದಿನಿಂದಲೂ ನಡೆದೆ ಇದೆ. ಅಧಿಕಾರ ಐಶ್ವರ್ಯ ಗಳಿಗಾಗಿ ಸೆಣಸಾಟವು ಯಾವಾಗಲೂ ಇದ್ದದ್ದೆ, ಒಬ್ಬರನ್ನೊಬ್ಬರು ಗೆಲ್ಲುವ ಲವಲವಿಕೆ ಇಬ್ಬರಲ್ಲಿಯೂ. ಅದಕ್ಕಾಗಿ ಒಬ್ಬ ಸಮರ್ಥನಾದ ಗುರು ಬೇಕೆಂದು ದೇವತೆಗಳು ಬ್ರಹಸ್ಪತ್ಯಾಚಾರ್ಯರನ್ನು ಪುರೋಹಿತರನ್ನಾಗಿ ಮಾಡಿಕೊಂಡರು. ದೈತ್ಯರು ಶುಕ್ರಾಚಾರ್ಯರನ್ನು ತಮ್ಮ ಕುಲಪುರೋಹಿತರೆಂದು ಮನ್ನಿಸಿದರು. ಯಜಮಾನರ ಮೂಲಕ ಪುರೋಹಿತರಲ್ಲಿಯೂ ಸ್ಪರ್ಧೆ ಪ್ರಾರಂಭ. ಗುರುಗಳಿಬ್ಬರೂ ತಮ್ಮ ಶಕ್ತಿಯನ್ನೇ ಶಿಷ್ಯರಿಗಾಗಿ ಒರೆಗಲ್ಲಿಗೆ ಹಚ್ಚಿದರು. ದೇವದಾನವ ಯುದ್ಧದಲ್ಲಿ ದೇವತೆಗಳು ತಮ್ಮ ಪರಾಕ್ರಮದಿಂದ ದೈತ್ಯರನ್ನು ಕೊಲ್ಲುತ್ತಿದ್ದರು. ಆದರೆ ದೈತ್ಯ ಗುರು ಶುಕ್ರಾಚಾರ್ಯರು ಯುದ್ಧದಲ್ಲಿ ಸತ್ತು ಬಿದ್ದವರನ್ನೆಲ್ಲ ತಮ್ಮ ವಿದ್ಯೆಯ ಬಲದಿಂದ ಪುನಃ ಬದುಕಿಸುತ್ತಿದ್ದರು. ಮೃತರಾದವರೆಲ್ಲರೂ ಶುಕ್ರರ ಸಂಜೀವಿನಿ ವಿದ್ಯೆಯ ಬಲದಿಂದ ಎದ್ದು ಕುಳಿತು ಯುದ್ಧಕ್ಕೆ ಸಿದ್ಧರಾಗಿ ಬರುತ್ತಿದ್ದರು. ಆದರೆ ದೈತ್ಯರು ಕೊಂದ ದೇವತೆಗಳನ್ನು ಮಾತ್ರ ಬದುಕಿಸಲು ಬ್ರಹಸ್ಪತ್ಯಾಚಾರ್ಯರು ಸಮರ್ಥರಾಗಲಿಲ್ಲ. ಇದರಿಂದ ದೇವತೆಗಳಿಗೆ ಬಹಳ ದುಃಖವಾಯಿತು. ದೈತ್ಯ ಗುರುವಿಗೆ ಗೊತ್ತಿದ್ದ ಮೃತಸಂಜೀವಿನಿವಿದ್ಯೆಯು ದೇವರ ಗುರುವಿಗೆ

ಗುರುತಿಲ್ಲದಿರುವದು ದೊಡ್ಡ ಕೊರತೆ ಎಂದೆನಿಸಿತು. ಸುರಾಸುರಯುದ್ಧದಲ್ಲಿ ತಾವು ಸಾಯುತ್ತ ಹೋಗುವದು. ಅವರು ಬದುಕುತ್ತ ಹೋಗುವದು ಎಂದಾದರೆ ಸ್ವಲ್ಪೇ ಸಮಯದಲ್ಲಿ ತಮ್ಮ ಸರ್ವನಾಶ ನಿಶ್ಚಿತ ಎಂದು ಅವರೆಲ್ಲರೂ ಹೆದರಿ ಹೌಹಾರಿ ಹೋದರು. ಸುದೀರ್ಘ ವಿಚಾರಮಾಡಿ ಕೊನೆಗೆ ಅವರು ಬ್ರಹಸ್ಪತಿಯ ಹಿರಿಯ ಮಗ ಕಚನ ಬಳಿ ಬಂದರು ಮತ್ತು ಹೀಗೆ ಎಂದರು.

''ಗುರುಪುತ್ರ, ನಾವು ನಿಮ್ಮ ಮನೆತನದ ಶಿಷ್ಯರು. ನಮಗೆ ಸಹಾಯ ಮಾಡು. ದೈತ್ಯಗುರು ಶುಕ್ರ ಮಹಾ ತೇಜಸ್ವಿ ಬ್ರಾಹ್ಮಣ. ಅವನಲ್ಲಿ ಸಂಜೀವಿನಿ ವಿದ್ಯೆ ಇದೆ. ಅದನ್ನು ನೀನು ಕಲಿತುಬರಬೇಕು. ಸ್ವರ್ಗಕ್ಕೆ ತರಬೇಕು. ಅನಂತರವೇ ನಮ್ಮ ಭಾಗ್ಯದ ಬಾಗಿಲು ತೆರೆಯುವದು, ಆ ದೈತ್ಯರ ಆಚಾರ್ಯನು ಈ ದೈತ್ಯದೊರೆ ವೃಷಪರ್ವನ ಬಳಿ ಇರುವನು. ಅವನನ್ನು ಒಲಿಸುವದು ಬಹಳ ಕಷ್ಟ. ಇದು ನಿನ್ನ ಹೊರತು ಶಕ್ಯವಿಲ್ಲ. ದಾನವರ ಹೊರತು ಬೇರಾರನ್ನೂ ಆ ಶುಕ್ರ ಹಚ್ಚಿಕೊಳ್ಳುವದಿಲ್ಲ. ಶುಕ್ರಾಚಾರ್ಯನ ಪಂಚಪ್ರಾಣ ಎಂದರೆ ಮಗಳು ದೇವಯಾನಿ. ಅವಳು ಹೇಳಿದರೆ ಏನೂ ಮಾಡಲಿಕ್ಕೂ ಸಿದ್ಧನೇ ಆ ಆಚಾರ್ಯ. ಆದರೆ ದೇವಯಾನಿಯನ್ನು ಒಲಿಸುವದು ಮತ್ತೂ ಕಷ್ಟದ ಕೆಲಸ. ಅದೊಂದು ದುರಾರಾಧ್ಯ ಹೆಣ್ಣು. ನೀನು ಒಳ್ಳೇ ನಡೆ, ಮಧುರ ನುಡಿ, ಸರಳ ಸ್ವಭಾವ, ಸದಾಚಾರ, ಇಂದ್ರಿಯಗಳ ಬಿಗುವು, ಹೀಗೆ ಯಾವದೇ ಗುಣದಿಂದ ಒಮ್ಮೆ ಅವಳನ್ನು ಒಲಿಸಿಬಿಟ್ಟೆಯೊ ಗೆದ್ದುಹೋದಂತೆ. ನಿನ್ನ ಪದರಲ್ಲಿ ಆ ವಿದ್ಯೆ ಬಿದ್ದುಹೋದಂತೆ. ಏನೇ ಆಗಲಿ ನೀನು ಆ ವಿದ್ಯೆಯನ್ನು ಕಲಿತುಬರಬೇಕು.''

ಹೀಗೆ ಹೇಳಿ ದೇವತೆಗಳು ಕಚನನ್ನು ಹುರುದುಂಬಿಸಿ ವೃಷಪರ್ವರಾಜನ ಬಳಿಗೆ ಕಳುಹಿಸಿಕೊಟ್ಟರು. ದೇವತೆಗಳ ಬಿನ್ನಹವನ್ನು ಮನ್ನಿಸಿ, ಅವರ ಮನ್ನಣೆ ಪಡೆದು ಗುರುಪುತ್ರ ಕಚನು ನೇರವಾಗಿ ರಾಕ್ಷಸರ ರಾಜಧಾನಿಗೆ ಬಂದು ಶುಕ್ರಾಚಾರ್ಯರಿಗೆ ನಮಸ್ಕರಿಸಿದನು. ''ಗುರುಗಳೇ, ನಾನು ಅಂಗಿರಸ ಮುನಿಯ ಮೊಮ್ಮಗ. ಬ್ರಹ್ಮಸ್ಪತ್ಯಾಚಾರ್ಯರ ಮಗ, ನನ್ನ ಹೆಸರು ಕಚ. ನನ್ನನ್ನು ತಾವು ಶಿಷ್ಯನನ್ನಾಗಿ ಪರಿಗ್ರಹಿಸಬೇಕು. ಬ್ರಹ್ಮಚರ್ಯದಿಂದ ಇದ್ದು ಸಾವಿರವರ್ಷ ತಮ್ಮ ಸೇವೆ ಮಾಡುತ್ತೇನೆ. ಅನುಮತಿ ನೀಡಬೇಕು. ಅನುಗ್ರಹಮಾಡಬೇಕು'' ಎಂದು ಬಾಗಿ ಬಿನ್ನವಿಸಿಕೊಂಡ. ಅದಕ್ಕೆ ಶುಕ್ರರು ಆನಂದದಿಂದ ''ಕಚನೇ, ಸುಸ್ವಾಗತ. ನಿನ್ನ ಪ್ರಾರ್ಥನೆಯಂತೆ ಶಿಷ್ಯನೆಂದು ನಿನ್ನನ್ನು ಅಂಗೀಕರಿಸಿದ್ದೇನೆ. ಬ್ರಹಸ್ಪತಿಯ ಮಗನಾದ ನೀನು ನನ್ನ ಶಿಷ್ಯತ್ವ ವಹಿಸುವದು ಶ್ಲಾಘನೀಯವೇ ಸರಿ. ಅದಕ್ಕಾಗಿ ನಿನ್ನನ್ನೂ ಅಭಿನಂದಿಸುವೆ. ನಿನ್ನ ತಂದೆ ಬ್ರಹಸ್ಪತ್ಯಾಚಾರ್ಯರನ್ನೂ ಅಭಿನಂದಿಸುವೆ '' ಎಂದು ಹೇಳಿದರು. ಕಚನು ಶುಕ್ರಶಿಷ್ಯನಾಗಿ ಅವರು ಹೇಳಿದ ವ್ರತವನ್ನು ಅಂಗೀಕರಿಸಿದನು. ಮತ್ತು ಗುರುಗಳು ಹೇಳಿದಂತೆ ಆ ವ್ರತವನ್ನು ಹೇಳಿದ ಕಾಲದಲ್ಲಿಯೇ ಹೇಳಿದ ರೀತಿಯಲ್ಲಿಯೇ ಆಚರಿಸುತ್ತಿದ್ದನು. ಅದರ ಜೊತೆಗೇ ಹಗಲಿರುಳು ಗುರುಗಳ ಸೇವೆಯನ್ನು ಶ್ರದ್ಧೆಯಿಂದ ಮಾಡುತ್ತಿದ್ದನು. ಅದರಂತೆ ಗುರುಪುತ್ರಿ ದೇವಯಾನಿಯ ಸೇವೆ ಆರಾಧನೆಯನ್ನೂ ಕರ್ತವ್ಯಬುದ್ಧಿಯಿಂದ ಮಾಡುತ್ತಿದ್ದನು.

ಕಚನು ತರುಣ. ದೇವಯಾನಿಯು ತರುಣಿ. ಆದರೂ ಕಚನು ಜಾಗರೂಕನಾಗಿ ನಿರ್ವಿಕಾರಭಾವದಿಂದ ಅವಳನ್ನು ಆರಾಧಿಸುತ್ತಿದ್ದನು. ಹಾಡುಹೇಳುವದು, ಕುಣಿತಕಲಿಸುವದು, ವಾದ್ಯಬಾರಿಸುವದು, ಹಗಲಿರುಳೂ ಓಲೈಸುವದು, ಹಣ್ಣುಗಳನ್ನು ತಂದುಕೊಡುವದು, ಹೂವುಗಳನ್ನು ಹರಿದು ತಂದು ಮುಂದಿಡುವದು, ಹೇಳಿದ ಕೆಲಸಮಾಡುವದು. ಒಂದೇ ಎರಡೇ ! ಎಲ್ಲ ವಿಧದಿಂದಲೂ ಅವಳ ಮನಸ್ಸು ಪ್ರೀತಪ್ರಸನ್ನವಾಗುವಂತೆ ಬೇಸರವಿಲ್ಲದೇ ಅವಳ ಸೇವೆಮಾಡುತ್ತಿದ್ದನು. ದೇವಯಾನಿಯು ಹರೆಯದ ಹೆಣ್ಣಾಗಿದ್ದರೂ ಕಚನು ನಿಯಮನಿಷ್ಠನೆಂದು ತಿಳಿದು ಸಂಕೋಚವಿಲ್ಲದೇ ಕಚನೊಡನೆ ಸಲುಗೆ ಬೆಳೆಸಿದಳು. ಏಕಾಂತದಲ್ಲಿ ಗಂಟೆಗಟ್ಟಲೆ ಮಾತನಾಡುತ್ತ ಅವನೊಡನೆ ಕೂಡುತ್ತಿದ್ದಳು. ಅವನು ಹಾಡತೊಡಗಲು ತಾನೂ ಅವನ ಹಿಂದಿನಿಂದ ಗುಂಗುಣಿಸುತ್ತ 'ಸಾಥಿ' ಯಾಗಿ ಹಿಂಬದಿಯ ಗಾಯಕಿಯಾಗುತ್ತಿದ್ದಳು. ಕುಣಿಯುವಾಗ ಕುಣಿದು, ಮಣಿಯುವಾಗ ಮಣಿದು, ತಣಿಯುವಾಗ ತಣಿದು, ಓದುವಾಗ ಓದಿ ಅವನನ್ನು ಸಂತೋಷಪಡಿಸುತ್ತಿದ್ದಳು. ಹೀಗೆ ಗುರುಶಿಷ್ಯೆಯರಾಗಿ, ಗೆಳೆಯ ಗೆಳತಿಯರಾಗಿ, ಸಹಚರಸಹಚರಿಯರಾಗಿ ಸಮಯವನ್ನು ಕಳೆದುಕೊಳ್ಳದೇ ಅವರಿಬ್ಬರೂ ಪರಸ್ಪರ ಉಪಚರಿಸುತ್ತ ಬಹುಕಾಲ ಕಳೆದರು. ಐದು ನೂರು ವರ್ಷಗಳು ಉರುಳಿದವು.

ಗುರುಗಳ ಬಳಿಯಲ್ಲಿ ವ್ರತನಿಷ್ಠನಾಗಿ ಓದಲು ಬಂದವ ವೈರಿಪಕ್ಷದ ಗುರುಪುತ್ರ ಎಂಬುದು ದೈತ್ಯರಿಗೆಲ್ಲ ಬಹುಕಾಲದ ಮೇಲೆ ತಿಳಿದುಬಂದಿತು. ಅವನನ್ನು ಹೇಗಾದರೂ ಮಾಡಿ ಕೊಂದುಹಾಕಬೇಕೆಂದು ಅವರ ಹಂಚಿಕೆ ಪ್ರಾರಂಭವಾಯಿತು.

ಒಂದು ದಿನ ಕಚ ಕಾಡಿನಲ್ಲಿ ಹಸುವನ್ನು ಮೇಯಿಸುತ್ತಿದ್ದ. ರಾಕ್ಷಸರು ಅವನನ್ನು ಕಂಡಕೂಡಲೇ ಕೋಪದಿಂದ ಅವನ ಮೇಲೆ ಎರಗಿ ಹೊಡೆದು ಕೊಂದು ಕಡಿದು ಹಾಕಿದರು. ಅವನ ದೇಹವನ್ನು ಚೂರುಚೂರಾಗಿ ಕತ್ತರಿಸಿ ತೋಳಗಳಿಗೆ ತಿನಿಸಿಬಿಟ್ಟರು. ಹಸುಗಳು ಪಾಲಕನಿಲ್ಲದೇ ತಾವೇ ಹಟ್ಟಿಗೆ ಮರಳಿಬಂದವು. ಕಚನಿಲ್ಲದೇ ಮನೆಗೆ ಮರಳಿದ ಆಕಳುಗಳನ್ನು ಕಂಡು ದೇವಯಾನಿಗೆ ಕಳವಳವಾಯಿತು. ಅವಳು ಧಾವಿಸಿ ತಂದೆಯ ಬಳಿಗೆ ಬಂದು ದೈನ್ಯದಿಂದ ದೂರಿತ್ತಳು.

''ಅಪ್ಪ, ನಿನ್ನ ಹೋಮವಾಯಿತು. ಸಂಧ್ಯಾವಂದನೆ ಮುಗಿಯಿತು. ಸೂರ್ಯ ಅಸ್ತಹೊಂದಿದ. ಹಸುಗಳೂ ತಮ್ಮ ತಾಣಕ್ಕೆ ಮರಳಿವೆ. ಆದರೆ ದನಕಾಯಲು ಹೋದ ಕಚನು ಈವರೆಗೂ ತಿರುಗಿ ಬರಲಿಲ್ಲ. ಅವನನ್ನು ಯಾರಾದರೂ ಹಂತಕರು ಕೊಂದಿರಬೇಕು. ಇಲ್ಲವೇ ಎಲ್ಲಿಯಾದರೂ ಹೊತ್ತುಕೊಂಡು ವೈಯ್ದಿರಬೇಕು. ತಂದೆಯೇ, ಕಚನಿಲ್ಲದೇ ನಾನು ಬದುಕಲಾರೆ. ನಿಜವಾಗಿಯೂ ನಾನು ಇರಲಾರೆ.'' ಮಗಳ ಈ ಕಾತರವನ್ನು ಕಂಡು ಶುಕ್ರಾಚಾರ್ಯರು ಮಗಳನ್ನು ಸಂತೈಸುತ್ತ ಹೇಳಿದರು.

''ವತ್ಸೇ, ಗಾಬರಿಯಾಗಬೇಡ. ಕಚನನ್ನು ಕೊಂದರೂ ಚಿಂತೇಯೇಕೆ ? ನನ್ನಲ್ಲಿ ಸಂಜೀವಿನಿ ವಿದ್ಯೆ ಇದೆ. ನಾನು ಮಂತ್ರಹೇಳಿ 'ಬಾ ಬಾ' ಎಂದು ಕರೆದರೆ ಸಾಕು ಇದ್ದಲ್ಲಿಂದ ಎದ್ದುಬರುವ. ಸತ್ತಲ್ಲಿಂದ ಧಾವಿಸಿಬರುವ.'' ಹೀಗೆ ಅವಳನ್ನು

ಸಮಾಧಾನಪಡಿಸಿ ಅವರು ''ಏಹಿ ಕಚ ಏಹಿ ಕಚ '' ಕಚನೇ ಬಾ ಬಾ ಎಂದು ಕೂಗಿ ಕರೆದರು. ವಿದ್ಯೆಯ ಪ್ರಭಾವದಿಂದ ತೋಳುಗಳ ಹೊಟ್ಟೆ ಹರಿದು ಕಚನು ಕೂಡಲೇ ಬದುಕಿ ಓಡಿ ಬಂದು ಗುರುಗಳಿಗೆ ನಮಸ್ಕಾರಮಾಡಿದನು ಮತ್ತು ಕಾಡಿನಲ್ಲಿ ರಕ್ಕಸರು ತನ್ನನ್ನು ಕಡಿದು ಕೊಂದುಹಾಕಿದ ಸಮಾಚಾರವನ್ನೂ ತಿಳಿಸಿದನು. ಮುಂದೆ ಶುಕ್ರರು ಆದಷ್ಟು ಕಚನನ್ನು ಹೊರಗೆ ಬಿಡದೇ ರಕ್ಷಿಸುತ್ತಿದ್ದರು. ಒಂದು ದಿನ ದೇವಯಾನಿಗೆ ಹಾರಮಾಡಲು ಹೂವುಗಳು ಬೇಕಾದವು. ಮರೆತು ಅವಳು ಕಚನಿಗೆ ಹೂವುಗಳನ್ನು ಆಯ್ದು ತರಲು ಹೇಳಿದಳು. ತಕ್ಷಣವೇ ಕಚ ಕಾಡಿಗೆ ಓಡಿದ. ಬನದಲ್ಲಿ ಹೂವಿನ ಸುಗ್ಗಿ, ಒಂದೊಂದಾಗಿ ಹೂವುಗಳನ್ನು ಹರಿಯ ತೊಡಗಿದ. ದಾನವರಿಗೆ ಅವನನ್ನು ಕಂಡು ಬ್ರಹ್ಮಾಂಡ ಸಿಟ್ಟು. ಕೊಂದು ಹಾಕಿದರೂ ಮತ್ತೆ ಬದುಕಿ ಬಂದನಲ್ಲ ಎಂದು. ಈಗ ಅವನನ್ನು ಕೋಪಾಟೋಪದಿಂದ ಹಿಡಿದರು. ಎಲ್ಲರೂ ಕೂಡಿ ಹೊಡೆದರು. ಸಾಯುವವರೆಗೆ ಬಡಿದರು ಚೂರುಚೂರಾಗಿ ಕಡಿದರು. ಕಚನ ಭಿನ್ನವಿಭಿನ್ನವಾಗಿ ಮಾಡಿದ ದೇಹದ ತುಂಡು ತುಣುಕಗಳನ್ನೆಲ್ಲ ಒಂದೆಡೆ ಒಟ್ಟಿ ಕೊಳ್ಳಿಕೊಟ್ಟು ಸುಟ್ಟುಹಾಕಿದರು. ಸುಟ್ಟ ಬಳಿಕ ಆ ಜಾಗದಲ್ಲಿ ಉಳಿದ ಕಚನ ಎಲಬುಗಳನ್ನು ಕೂಡ ಸಣ್ಣಾಗಿ ಕುಟ್ಟಿ ಪುಡಿಮಾಡಿದರು. ಆ ಪುಡಿಯನ್ನು ಶುಕ್ರಾಚಾರ್ಯರು ಕುಡಿಯುವ ಮದ್ಯದಲ್ಲಿ ಬೆರೆಸಿ ಅವರಿಗೇ ಕುಡಿಯಲಿಕ್ಕೆ ಕೊಟ್ಟರು. ಗುರುಶುಕ್ರರು ತಮ್ಮ ಶಿಷ್ಯನನ್ನು ಸೆರೆಯಲ್ಲಿ ಕರಗಿಸಿ ಕುಡಿದು ತೇಗಿದ ಬಳಿಕ ದೈತ್ಯರು ಹಾಯ್ ಎಂದು ನಿಟ್ಟಿಸುರುಬಿಟ್ಟರು. ಕಚನು ಇಂದು ಪೂರಾ ಸತ್ತಂತಾಯಿತು. ಎಂದು ನಿಶ್ಚಿಂತೆಯಿಂದ ನಡೆದರು.

ಇತ್ತ ಯಥಾ ಪ್ರಕಾರ ದೇವಯಾನಿಯ ಕಚನ ನಿರೀಕ್ಷೆ, ಹಸುಗಳು ಹಿಂದಿರುಗುವವರೆಗೆ ಅವನದೇ ಪ್ರತೀಕ್ಷೆ, ರಾತ್ರಿಯಾದರೂ ಅವನು ಬಾರದಿದ್ದಾಗ ಮನಸ್ಸಿನಲ್ಲಿ ಕಳವಳ, ಎದೆಯಲ್ಲಿ ತಳಮಳ, ಕಣ್ಣಿನಲ್ಲಿ ಕಾತರ, ರಾಕ್ಷಸರ ಮೇಲೆ ಸಂಶಯ. ತಂದೆಯ ಬಳಿಗೆ ಬಿರುಗಾಳಿಯಂತೆ ಆಗಮನ, ಕರುಳು ಕಿತ್ತುಬರುವಂತೆ ಕಿರುಚಾಟ. ''ಅಪ್ಪ ಘಾತವಾಯಿತು. ಹೂವು ತರಲಿಕ್ಕೆ ಹೋದ ಹುಡುಗ ಇಷ್ಟು ಹೊತ್ತಾದರೂ ಹಿಂದುರುಗಿ ಬರಲೇ ಇಲ್ಲ. ಕಾಡಿನಲ್ಲಿ ಕಚನನ್ನು ಮತ್ತೆ ಯಾರೋ ಕೊಂದಿರಬೇಕು. ಅಥವಾ ಅವನೇ ಸತ್ತಿರಬೇಕು ಅವನಿಲ್ಲದೆ ನಾನಿಲ್ಲ. ಕಚ ಸತ್ತರೆ ದೇವಯಾನಿಯು ಬದುಕಲಾರಳು ನಿಜ ನಿಜ ! ಅದು ಹಾಗೇ ಸರಿ.'' ಮಗಳ ದೈನ್ಯ ಹಾಗೂ ದುಃಖಗಳನ್ನು ಕಂಡು ಶುಕ್ರರು ನುಡಿದರು- ''ಮಗಳೇ, ಏನು ಮಾಡಲಿ ? ನಾನು ಬದುಕಿಸಿದರೂ ಅವನು ಮತ್ತೆ ಮರಣಹೊಂದಿದ. ಇನ್ನು ಮುಂದಾದರೂ ನನ್ನ ಸಂಜೀವಿನಿ ವಿದ್ಯೆಯಿಂದ ನಾನು ಅವನನ್ನು ಪುನರುಜ್ಜೀವನಗೊಳಿಸಿದರೂ ದೈತ್ಯರು ಅವನನ್ನು ಕೊಂದು ಬಿಡುವರು. ಅದಕ್ಕೆ ಮಾಡುವದೇನು ? ದೇವಯಾನಿ ನೀನು ಅವನಿಗಾಗಿ ಶೋಕ ಮಾಡಬೇಡ. ನಿನಗೆ ಏನು ಕಡಿಮೆ ಆಗಿದೆ? ನನ್ನ ತಪಸ್ಸಿನ ಪ್ರಭಾವದಿಂದ ಇಂದ್ರಾದಿ ದೇವತೆಗಳೂ ಅಷ್ಟವಸುಗಳೂ ನಿನ್ನ ಸೇವೆಗೆ ಸಿದ್ಧರಿದ್ದಾರೆ. ನಿನಗೆ ಯಾರು ಬೇಕು ಹೇಳು, ಬ್ರಹ್ಮದೇವರವರೆಗೆ ಎಲ್ಲ ಬ್ರಾಹ್ಮಣರೂ ನೀನು ಹೇಳಿದ್ದನ್ನು ಮಾಡಲು ಹಾಗೂ ನಿನಗೆ ಹಿತವನ್ನುಂಟು

ಮಾಡಲು ಇರುವಾಗ ನೀನು ಯಃಕಶ್ಚಿತ್ ಕಚನಂಥ ಹುಲು ಮಾನವನಿಗಾಗಿ ಹಂಬಲಿಸುವದೇ ? ಇನ್ನು ಆ ಕಚನ ಆಶೆಯನ್ನು ಬಿಟ್ಟುಬಿಡು ನಾನು ಬದುಕಿಸಿದರೂ ಅವನು ಬದುಕಲಾರ. ಅವನು ಸಾಯುವವನೇ '' ತಂದೆಯ ಈ ಮಾತುಗಳನ್ನು ಕೇಳಿ ದೇವಯಾನಿಯು ದುಃಖ ತುಂಬಿ ನುಡಿದಳು.

''ತಾತ, ಕಚನೇನು ಸಾಮಾನ್ಯನೇ ! ಅಂಗಿರಸಮುನಿಯ ಮೊಮ್ಮಗ, ಬೃಹಸ್ಪತಿಯ ಮಗ, ಸ್ವಯಂ ತಪೋನಿಧಿ, ಬ್ರಹ್ಮಚಾರಿ, ಕಾರ್ಯದಕ್ಷ. ಇಂಥ ಋಷಿ ಪುತ್ರನ ಬಗೆಗೆ ಶೋಕಮಾಡದೆ ಬೇರಾರ ಸಲುವಾಗಿ ಮಾಡಲಿ ? ಅವನು ಬದುಕಿ ಎದ್ದು ಬಾರದಿದ್ದರೆ ನಾನೂ ಅವನು ಹೋದ ಹಾದಿಯನ್ನೇ ಹಿಡಿಯುತ್ತೇನೆ. ನಾನು ಇನ್ನು ಅನ್ನನೀರುಮುಟ್ಟಲಾರೆ, ಸುಂದರನಾದ ಅವನು ನನಗೆ ಅತ್ಯಂತ ಪ್ರಿಯನಾಗಿದ್ದಾನೆ.'' ದೇವಮಾನಿಯ ಈ ನುಡಿಯ ನಿರ್ಧಾರ ಕೇಳಿ ಶುಕ್ರರು ಗಡಿಬಿಡಿಗೊಂಡು ನುಡಿದರು.

''ಈ ದೈತ್ಯರಿಗೆಲ್ಲ ನನ್ನ ಮೇಲೆಯೇ ದ್ವೇಷ ಹುಟ್ಟಿದೆ. ಓದಲಿಕ್ಕೆ ಬಂದ ಶಿಷ್ಯರನ್ನೆಲ್ಲ ಕೊಂದುಹಾಕುತ್ತಾರೆ. ಒಟ್ಟು ಈ ಭೂತಲದಲ್ಲಿ ಬ್ರಾಹ್ಮಣರೇ ಇರದಂತೆ ಮಾಡಬೇಕೆಂದು ಅವರಿಗೆ ಇಚ್ಛೆ ಇದೆ. ಇಂಥವರ ಸಹವಾಸ ಮಾಡುವದು ವ್ಯರ್ಥವೇ ಸರಿ. ಇಂಥ ಬ್ರಹ್ಮಹತ್ಯೆಯಿಂದಲೇ ಈ ದಾನವರ ಸರ್ವನಾಶವಾಗುವದು ಖಂಡಿತ. ಬ್ರಹ್ಮದ್ರೋಹ ಯಾರನ್ನು ಬಿಟ್ಟೀತು ! ಸುರೇಂದ್ರನನ್ನು ಕೂಡ ಸುಟ್ಟು ಹಾಕುವದು. ಆಗಲಿ ಮಗಳೇ, ನಿನಗಾಗಿ ಕಚನನ್ನು ಇನ್ನೂ ಒಮ್ಮೆ ಬದುಕಿಸುತ್ತೇನೆ.'' ಹೀಗೆ ಹೇಳಿ ಆ ದೈತ್ಯಗುರು ಶುಕ್ರರು ತಮ್ಮ ಸಂಜೀವಿನೀ ವಿದ್ಯೆಯಿಂದ ಕಚನನ್ನು ''ಏಹಿ ಕಚ ಏಹಿ ಕಚ '' ಎಂದು ಕೂಗಿ ಕರೆದರು.

ದಾನವರು ಕಚನನ್ನು ಮದ್ಯದ ಮುಖಾಂತರ ಶುಕ್ರಾಚಾರ್ಯರ ಹೊಟ್ಟೆಯಲ್ಲಿಯೇ ಹಾಕಿದ್ದರು. ಗುರುಗಳು ಕರೆದ ಕೂಡಲೇ ಕುಕ್ಷಿಯಲ್ಲಿದ್ದ ಕಚನು ಮೆಲ್ಲನೆ ಮಾತನಾಡಿ ''ಗುರುಗಳೇ, ನಾನು ನಿಮ್ಮ ಉದರದಲ್ಲಿಯೇ ಇರುವೆನು '', ಎಂದು ತಿಳಿಸಿದನು. ''ನಿನ್ನನ್ನು ನನ್ನ ಹೊಟ್ಟೆಯಲ್ಲಿ ಇಳಿಯುವಂತೆ ಮಾಡಿದವರಾರು ?'' ಶುಕ್ರರು ಉದರಗತ ಶಿಷ್ಯನನ್ನು ಕೇಳಿದರು. '' ಸ್ವಾಮಿ,'' ಕಚ ಹೊಟ್ಟೆಯಲ್ಲಿ ಕುಳಿತೇ ನುಡಿದ. '' ದಾನವರು ನನ್ನನ್ನು ಕೊಂದು ನೀವು ಕುಡಿಯುವ ಮದ್ಯದಲ್ಲಿ ನನ್ನ ಅಸ್ಥಿಗಳನ್ನು ಪುಡಿಮಾಡಿ ಬೆರಸಿಕೊಟ್ಟಿದ್ದಾರೆ. ನನ್ನನ್ನು ಕಾಡಿನಲ್ಲಿ ಬಂದು ಅವರೆಲ್ಲ ಕೂಡಿ ಹೊಡೆದು ಕೊಂದದ್ದೂ ಸುಟ್ಟದ್ದೂ ಎಲುಬನ್ನು ಕುಟ್ಟಿ ಪುಡಿಗೈದು ತಮ್ಮ ಪೇಯದಲ್ಲಿ ಕೂಡಿಸಿ ಕುಡಿಯಲಿಕ್ಕೆ ಕೊಟ್ಟದ್ದೂ ಎಲ್ಲವೂ ಚೆನ್ನಾಗಿ ನೆನಪಿದೆ. ಇದರಿಂದ ನನಗೆ ಯಾವ ಪಾಪವೂ ತಟ್ಟದಂತೆ ಮಾಡಿದರೆ ಸಾಕು '' ಎಂದನು.

ಅದನ್ನು ಕೇಳಿ ಶುಕ್ರರು ದೇವಯಾನಿಗೆ ಹೇಳಿದರು. '' ವತ್ಸೆ, ಈಗ ಏನು ಮಾಡಲಿ ? ಕಚನು ನನ್ನ ಹೊಟ್ಟೆಯಲ್ಲಿ ಅಡಗಿದ್ದಾನೆ. ನನ್ನ ಬಸಿರು ಬಗೆದೇ ಅವನು ಹೊರಬರಬೇಕು. ಅಂದರೆ ನಾನು ಸಾಯಬೇಕು. ನಾನು ಬದುಕಿ ಉಳಿಯಬೇಕೆಂದಿದ್ದರೆ ಕಚ ಹೊರಬರಲಾರ.

ಕಚ ನನ್ನ ಹೊಟ್ಟೆ ಹರಿದು ಬಂದರೆ ನಾನು ಬದುಕಲಾರೆ. ಈಗ ಏನು ಮಾಡಬೇಕು ? ಹೇಳು. ನಿನಗೆ ನಾನು ಬೇಕೋ? ಕಚ ಬೇಕೋ!'' ತಂದೆಯ ಮಾತು ಕೇಳಿ ದೇವಯಾನಿಗೆ ತಡೆದುಕೊಳ್ಳಲಿಕ್ಕೆ ಆಗದಷ್ಟು ದುಃಖವಾಯಿತು. ಅವಳು ಸಂತಾಪದಿಂದ ಹೇಳಿದಳು - '' ಅಪ್ಪ, ಅಯ್ಯೋ ಎಂಥ ಸಂಕಟ! ನಾನೀಗ ಏನು ಮಾಡಲಿ! ಎರಡೂ ಬೆಂಕಿಯೇ. ಕಚ ಸತ್ತು ನೀನು ಉಳಿವುದು. ನೀನು ಸತ್ತು ಕಚ ಉಳಿವುದು. ಎರಡೂ ನನ್ನ ಪಾಲಿಗೆ ಅಗ್ನಿಕಲ್ಪ. ಕಚನು ಮರಣವಾದರೆ ನನಗೆ ಸುಖವಿಲ್ಲ. ನೀನು ನಾಶ ಹೊಂದಿದರೆ ನಾನು ಬದುಕುವದೇ ಇಲ್ಲ.''

ಮಗಳ ಈ ಉಭಯ ಸಂಕಟವನ್ನು ಕಂಡು ಶುಕ್ರಾಚಾರ್ಯರು ಒಂದು ನಿರ್ಧಾರಕ್ಕೆ ಬಂದು ನುಡಿದರು. ''ಬೃಹಸ್ಪತಿಕುಮಾರ ನಿನ್ನ ಇಷ್ಟಸಿದ್ಧಿಯಾಗುವ ಕಾಲ ಬಂದಿದೆ. ದೇವಯಾನಿಯು ಭಕ್ತನಾದ ನಿನ್ನ ಮೇಲೆ ಇಷ್ಟು ಅಂತಃಕರಣವನ್ನು ಮಾಡಿದ ಬಳಿಕ ನಿನ್ನನ್ನು ಬದುಕಿಸದೇ ಗತ್ಯಂತರವಿಲ್ಲ. ನೀನು ಸಾಕ್ಷಾತ್ ದೇವೇಂದ್ರನೂ ಅಲ್ಲ. ಇದು ನಿಜವಾದರೆ ಈಗಲೇ ನಿನಗೆ ಸಂಜೀವಿನಿ ವಿದ್ಯೆಯನ್ನು ಉಪದೇಶಿಸುತ್ತೇನೆ. ಬಳಿಕ ನೀನು ನನ್ನ ಹೊಟ್ಟೆಯನ್ನು ಬಗೆದು ಹೊರಗೆ ಬಾ. ನನ್ನ ಹೊಟ್ಟೆಯಿಂದ ಹೊರಬರುವ ನೀನು ನನ್ನ ಮಗನೇ ಸರಿ. ನೀನು ಹೊಟ್ಟೆ ಹರಿದು ಹೊರಬಂದ ಬಳಿಕ ನಾನು ಸತ್ತು ಬೀಳುತ್ತೇನೆ. ಆಗ ನನ್ನ ಶಿಷ್ಯನೂ ಮಗನೂ ಆದ ನೀನು, ನಾನು ಈಗ ನಿನಗೆ ಕಲಿಸುವ ಸಂಜೀವಿನೀ ವಿದ್ಯೆಯ ಪ್ರಭಾವದಿಂದ ನನ್ನನ್ನು ಮತ್ತೆ ಬದುಕಿಸು.'' ಎಂದು ಹೇಳಿ ಹೊಟ್ಟೆಯಲ್ಲಿ ಕುಳಿತ ಕಚನಿಗೆ ತಮ್ಮ ಸಂಜೀವಿನೀ ವಿದ್ಯೆಯನ್ನೆಲ್ಲ ಸರಿಯಾಗಿ ಶುಕ್ರಾಚಾರ್ಯರು ಕಲಿಸಿಕೊಟ್ಟರು. ಹೀಗೆ ಗುರುವಿನ ಉದರದಲ್ಲಿಯೇ ಸಂಜೀವಿನಿಯ ವಿದ್ಯೆಯನ್ನು ಉಪದೇಶ ಪಡೆದು ಕಲಿತು ಕಚನು ಶುಕ್ರರ ಹೊಟ್ಟೆಯನ್ನು ಹರಿದು ಹೊರಬಿದ್ದು ಬಂದನು. ಉದಯಗಿರಿಯ ಶ್ವೇತಶೃಂಗವನ್ನು ಭೇದಿಸಿ ಪೂರ್ಣ ಚಂದ್ರನು ಉದಿಸಿದಂತೆ, ಗುರೂದರದಿಂದ ಕಚನು ಎದ್ದು ಬಂದನು.

ಗುರು ಶುಕ್ರರು ಹೊಟ್ಟೆ ಹರಿದು ಸತ್ತು ಬಿದ್ದಿದ್ದರು. ವೇದರಾಶಿಯೇ ಹರಿದು ಮುರಿದು ಬಿದ್ದಂತಾಗಿತ್ತು. ಕೂಡಲೇ ಕಚನು ತಾನು ಕಲಿತ ಸಂಜೀವಿನೀ ವಿದ್ಯೆಯ ಬಲದಿಂದ ಶುಕ್ರಾಚಾರ್ಯರನ್ನು ಬದುಕಿಸಿದನು. ತಾವು ಕಲಿಸಿದ ವಿದ್ಯೆ ಕಚನಿಗೆ ಚೆನ್ನಾಗಿ ಸಿದ್ಧಿಸಿದೆಯೆಂಬುದಕ್ಕೆ ಸ್ವಯಂ ಶುಕ್ರಾಚಾರ್ಯರು ತಾವೇ ಸಾಕ್ಷಿಯಾದರು. ಎದ್ದು ಕುಳಿತ ಅವರಿಗೆ ಕಚನು ವಿನಯದಿಂದ ವಂದಿಸಿ ನುಡಿದ - '' ಸ್ವಾಮಿ, ತಾವು ನಿಧಿಗಳಿಗೆಲ್ಲ ನಿಧಿ. ನನ್ನ ಪಾಲಿನ ಮಹಾನಿಧಿ. ನಿಮ್ಮ ಶಿಷ್ಯತ್ವವೇ ನನಗೊಂದು ದೊಡ್ಡ ವರ. ಇದು ಸಾಮಾನ್ಯರಿಗೆ ದೊರಕುವಂಥದಲ್ಲ. ಇಂಥ ಮಹಾವರದಂತಿದ್ದ ತಮ್ಮಂಥ ಗುರುಗಳನ್ನು ಆರಾಧಿಸದವರಿಗೆ ಕೀರ್ತಿ ಇಲ್ಲ. ಗತಿಯಿಲ್ಲ. ದುರ್ಗತಿಯೇ ಆಗುವದು. ಉದಯಗಿರಿಯ ಮೇಲೆ ಬೆಳಗುವ ತೇಜೋರಾಶಿಯಂತೆ ದೇದೀಪ್ಯಮಾನರಾದ ತಮ್ಮನ್ನು ಅರ್ಚಿಸದವರು ನರಕಕ್ಕೆ ಹೋಗುವರು.'' ಮರಣಾವಸ್ಥೆಯಿಂದ ಮರಳಿ ಜನ್ಮಕ್ಕೆ ಬಂದ ಶುಕ್ರಾಚಾರ್ಯರಿಗೆ ಶಿಷ್ಯನ ಪುಣ್ಯದಿಂದ ಪುನರ್ಜನ್ಮ ಪಡೆದಿದ್ದರೂ ಬಹಳ ಕೆಡುಕೆನಿಸಿತು. ತಮಗೆ ಅಂಟಿದ ಶೆರೆಯ ವ್ಯಸನವು ಎಷ್ಟು ಅನರ್ಥ ಮಾಡಿತಲ್ಲ ಎಂದು ಅವರು ಯೋಚಿಸಿದರು. ಸುರಾಪಾನದಿಂದ

ತಮಗೆ ಮತ್ತುಏರಿ ಎಚ್ಚರತಪ್ಪಿ ಕಚನಂಥ ಪ್ರಿಯ ಶಿಷ್ಯನನ್ನೇ ನುಂಗಿ ನಾಶಮಾಡಿದೆ ಎಂದು ಅವರಿಗೆ ಬಹಳ ಪಶ್ಚಾತ್ತಾಪವಾಯಿತು. ನಾನು ಶೆರೆ ಕುಡಿಯುವ ಚಟಕ್ಕೆ ಬಲಿ ಬಿದ್ದುದರಿಂದಲೇ ರಾಕ್ಷಸರಿಗೆ ನನ್ನನ್ನು ವಂಚಿಸಲಿಕ್ಕೆ ಸುಲಭವಾಯಿತು. ಅದರ ನಿಶೆಯಲ್ಲಿ ನನ್ನ ಬುದ್ಧಿಭ್ರಂಶವನ್ನುಂಟುಮಾಡಿ ನನ್ನ ಪ್ರೀತಿಯ ಶಿಷ್ಯನನ್ನೇ ಕೊಂದು ನನಗೆ ಕುಡಿಸಿಬಿಟ್ಟರು ಪಾಪಿಗಳು ಎಂದು ದೈತ್ಯರ ಮೇಲೆ ಕೋಪ ಬಂದಿತು. ತಾವು ಮಾಡುವ ಸುರಾಪಾನಕ್ಕಾಗಿ ಪಶ್ಚಾತ್ತಾಪವಾಯಿತು. ಮುಂದೆ ಈ ಸುರಾಪಾನದ ದುರ್ವ್ಯಸನದಿಂದ ಬ್ರಾಹ್ಮಣ ಜಾತಿಯಲ್ಲಿ ಏನೇನು ಅನರ್ಥವಾಗುವದೋ ಎಂದು ಸಂದೇಹ ಬಂದು ಅವರಿಗೆ ಹೆದರಿಕೆಯಾಯಿತು. ಆಗಲೇ ಅವರು ಬ್ರಾಹ್ಮಣರಿಗೆಲ್ಲ ಶಾಸ್ತ್ರಸಮ್ಮತವಾದ ಒಂದು ಕಟ್ಟಪ್ಪಣೆಯನ್ನು ಅನುಶಾಸನಮಾಡಿದರು.

**''ಯೋ ಬ್ರಾಹ್ಮಣೋಽದ್ಯಪ್ರಭೃತೀಹ ಕಶ್ಚಿತ್**
**ಮೋಹಾತ್ಸುರಾಂ ಪಾಸ್ಯತಿ ಮಂದಬುದ್ಧಿಃ ॥**
**ಅಪೇತಧರ್ಮಾ ಬ್ರಹ್ಮಹಾ ಚೈವ ಸ ಸ್ಯಾತ್**
**ಅಸ್ಮಿಂಲ್ಲೋಕೇ ಗರ್ಹಿತಃ ಸ್ಯಾತ್ಪರೇ ಚ ॥**

ಇಂದಿನಿಂದ ಯಾವನಾದರೂ ಬ್ರಾಹ್ಮಣನು ಮೋಹದಿಂದ ಶೆರೆಯನ್ನು ಕುಡಿದರೆ ಅವನು ಧರ್ಮಭ್ರಷ್ಟನಾಗುವನು. ಆ ಮೂರ್ಖನಿಗೆ ಬ್ರಹ್ಮಹತ್ಯಾಪಾಪತಟ್ಟುತ್ತದೆ. ಇಹದಲ್ಲಿಯೂ ಪರದಲ್ಲಿಯೂ ಧಿಕ್ಕಾರ, ದುರವಸ್ಥೆ, ದುಃಖ, ದುರಿತಗಳು ಅವನಿಗೆ ಪ್ರಾಪ್ತವಾಗುವವು. ಬ್ರಾಹ್ಮಣಧರ್ಮಕ್ಕೆ ನಾನು ನನ್ನ ಸ್ವಂತ ಅನುಭವದಿಂದ ಪಾಠ ಕಲಿತು ವಿಧಿಸಿದ ಈ ಕಟ್ಟು ಪಾಡು ಬ್ರಾಹ್ಮಣರಿಗೆ ಮಾತ್ರ ವಿಧಿಸಿದ ನಿರ್ಬಂಧವಲ್ಲ. ದೇವ ದೈತ್ಯ ಮಾನವ ಜಾತಿಯಲ್ಲಿಯ ಸಾಧು ಸಜ್ಜನರೆಲ್ಲರೂ ಇದನ್ನು ಕೇಳಿ ಈ ದುರ್ವ್ಯಸನವನ್ನುಬಿಟ್ಟು ಪರಿಶುದ್ಧರಾಗಿ ಇರಲಿ.'' ಹೀಗೆ ಒಂದು ಮಾನವಜಾತಿಗೆ ಅನುಶಾಸನವನ್ನು ಮಾಡಿ ಅಂದಿನಿಂದ ಶುಕ್ರಾಚಾರ್ಯರು ಸುರಾಪಾನವನ್ನು ನಿಷೇಧ ಮಾಡಿದರು. ಮಹಾಪ್ರಭಾವಶಾಲಿಗಳಾದ ಅವರು ದೈತ್ಯರನ್ನೆಲ್ಲ ಕರೆದು ಹೇಳಿದರು -

''ಮೂರ್ಖರೇ, ನೀವು ಕೊಲ್ಲಬಯಸಿದ ಕಚ ಸಂಜೀವಿನಿ ವಿದ್ಯೆಯಲ್ಲಿ ಸಿದ್ಧಿ ಪಡೆದು ನನ್ನಷ್ಟೇ ಪ್ರಭಾವಶಾಲಿಯಾಗಿದ್ದಾನೆ. ಬ್ರಹ್ಮಜ್ಞಾನವೂ ಅವನಿಗೆ ಆಗಲೇ ಉಂಟಾಗಿ ಹೋಗಿದೆ. ಇಂಥ ದಿವ್ಯಜ್ಞಾನನಿಧಿಯಾದ ಕಚನು ನನ್ನ ಶಿಷ್ಯನಾಗಿ ನನ್ನ ಬಳಿಯಲ್ಲಿಯೇ ಇರುತ್ತಾನೆ. ಅವನನ್ನು ಕೊಲ್ಲುವ ನಿಮ್ಮ ಪ್ರಯತ್ನವೆಲ್ಲವೂ ವ್ಯರ್ಥ.'' ಹೀಗೆ ಕಚ ಸಾವಿರವರ್ಷಕಾಲ ಶುಕ್ರಾಚಾರ್ಯರ ಬಳಿ ಶಿಷ್ಯನಾಗಿದ್ದ. ಸಂಜೀವಿನಿ ವಿದ್ಯೆ ಪಡೆದು ಸಿದ್ಧನಾದ. ಅವನು ಅಮರಾವತಿಯನ್ನು ಬಿಟ್ಟು ಬಂದ ಮಹಾಕಾರ್ಯ ಪೂರ್ತಿಯಾಯಿತು. ಆದರಿಂದ ಅವನು ಗುರು ಶುಕ್ರಾಚಾರ್ಯರ ಅಪ್ಪಣೆ ಪಡೆದು ಮರಳಿ ಸ್ವರ್ಗಲೋಕಕ್ಕೆ ಹೊರಡಬೇಕೆಂದು ಸಂಕಲ್ಪಮಾಡಿದ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿದುದು*

—o—

ದೇವಯಾನಿಯ ಪ್ರಣಯ ಭಂಗ, ಪರಸ್ಪರ ಶಾಪ ಪ್ರಸಂಗ | ಅಧ್ಯಾಯ - ೨೭

**ಶೌನಕ ಉವಾಚ :**

**ಸಮಾಪಿತವ್ರತಂ ತಂತು ವಿಸೃಷ್ಟಂ ಗುರುಣಾ ತದಾ ।**
**ಪ್ರಸ್ಥಿತಂ ತ್ರಿದಶಾವಾಸಂ ದೇವಯಾನೀದಮಬ್ರವೀತ್ ॥**

**ಶೌನಕ :-** ಗುರುಕುಲದಲ್ಲಿ ಕಚನು ತನ್ನ ಅಧ್ಯಯನ ವ್ರತವನ್ನು ಮುಗಿಸಿದ್ದ. ಗುರು ಶುಕ್ರಾಚಾರ್ಯರು ಅವನಿಗೆ ಮನೆಗೆ ಹೋಗಲು ಅಪ್ಪಣೆ ಕೊಟ್ಟಿದ್ದರು. ಅವನು ಸ್ವರ್ಗಲೋಕಕ್ಕೆ ಹೊರಟು ನಿಂತಿದ್ದ. ಈ ಸಮಯದಲ್ಲಿ ದೇವಯಾನಿಯು ಅವನನ್ನು ಕುರಿತು ಮಾತನಾಡಿದಳು.

**ದೇವಯಾನಿ :-** ಅಂಗಿರಸ ಮುನಿಯ ಮೊಮ್ಮಗನಾದ ಕಚನೆ, ನೀನು ದೊಡ್ಡ ಕುಲದಲ್ಲಿ ಜನಿಸಿರುವೆ. ಅದಕ್ಕೆ ತಕ್ಕ ಒಳ್ಳೆ ನಡತೆ ನಿನ್ನಲ್ಲಿದೆ. ದಿವ್ಯವಾದ ವಿದ್ಯೆಯಲ್ಲಿ ನಿನಗೆ ಸಿದ್ಧಿ ಇದೆ. ತಪೋಬಲದಿಂದ ನೀನು ಶೋಭಿಸುವಿ. ಇಂದ್ರಿಯ ನಿಗ್ರಹಕ್ಕೆ ಹೆಸರಾಗಿರುವಿ. ನಿನ್ನ ಅಜ್ಜ ಅಂಗಿರಸ ಮುನಿಯು ನನ್ನ ತಂದೆಗೆ ಪರಮಮಾನ್ಯರು. ನಿನ್ನ ತಂದೆ ಬೃಹಸ್ಪತ್ಯಾಚಾರ್ಯರು ನನಗೆ ಪೂಜ್ಯರೂ, ಮಾನ್ಯರೂ ಆಗಿದ್ದಾರೆ. ಇದೆಲ್ಲವನ್ನು ತಿಳಿದು ನಾನು ಹೇಳುವ ಮಾತನ್ನು ಕೇಳು. ನೀನು ಇಷ್ಟು ದಿನ ಅಧ್ಯಯನ ವ್ರತದ ಕಟ್ಟುಪಾಡಿನಲ್ಲಿ ಇದ್ದೆ. ಆದುದರಿಂದ ನಾನು ಇಷ್ಟು ದಿನ ನನ್ನ ಭಾವವನ್ನು ತಿಳಿಸಿರಲಿಲ್ಲ. ಇಂದು ನೀನು ಆ ವ್ರತವನ್ನು ಪೂರ್ಣಗೊಳಿಸಿರುವಿ. ವಿದ್ಯಾಧ್ಯಯನವೆಲ್ಲವೂ ಮುಗಿದಿದೆ. ನನಗೆ ನಿನ್ನ ಮೇಲೆ ಪ್ರೇಮವುಂಟು. ನಾನೊಬ್ಬ ನಿನ್ನ ಭಕ್ತಳೇ ಸರಿ. ಒಲಿದು ಬಂದ ನನ್ನನ್ನು ನೀನು ಕೈಬಿಡಬೇಡ. ವಿಧಿಪೂರ್ವಕವಾಗಿ ನನ್ನ ಕೈಹಿಡಿದು ನೀನು ನನ್ನನ್ನು ಮದುವೆಯಾಗು.''

**ಕಚ :-** ದೇವಯಾನಿ, ನನ್ನ ತಂದೆಯು ನಿನಗೆ ಪೂಜ್ಯನೆಂದು ಹೇಳಿದೆಯಷ್ಟೆ ! ಅದರಂತೆ ನೀನು ನನಗೆ ಪೂಜ್ಯಳಾಗಿರುವಿ. ಶುಕ್ರಾಚಾರ್ಯರು ನನಗೆ ಗುರುಗಳು. ಅವರ ಮಗಳಾದ ನೀನು ನನಗೆ ಅಷ್ಟೇ ಪೂಜ್ಯಳಾಗಿರುವೆ. ಪೂಜ್ಯಪೂಜಕ ಭಾವವಿದ್ದಲ್ಲಿ ಪ್ರೇಮಕ್ಕೆ ಅವಕಾಶವಿಲ್ಲ. ಶುಭಾಂಗಿಯೇ, ಧರ್ಮದೃಷ್ಟಿಯಿಂದ ನೀನು ನನಗೆ ಗುರುಪುತ್ರಿ. ಧರ್ಮಪತ್ನಿ ಹೇಗಾಗಬಲ್ಲಿ? ಶುಕ್ರಾಚಾರ್ಯರು ನನಗೆ ಗುರುಗಳು ಮಾತ್ರವಲ್ಲ. ಹಡೆದ ತಂದೆಯಂತೆಯೇ. ನಾನು ಅವರನ್ನು ಪೂಜಿಸುತ್ತೇನೆ. ಅವರ ಮಗಳಾದ ನೀನು ನನಗೆ ಸೋದರಿ. ಸತಿಯಾಗಲಾರೆ.

**ದೇವಯಾನಿ** :- ಕಚ, ನೀನು ನನ್ನ ತಂದೆಯ ಗುರುವಾದ ಅಂಗಿರಸ ಮುನಿಯ ಮಗನಮಗ. ನನ್ನ ತಂದೆಯ ಮಗನಲ್ಲ. ಅಂದ ಬಳಿಕ ನನ್ನ ಕೈಹಿಡಿಯಲು ಅಭ್ಯಂತರವೇನು ? ಅಸುರರು ನಿನ್ನನ್ನು ಮೇಲಿಂದ ಮೇಲೆ ಕಡಿದು ಕೊಂದು ಹಾಕಿದಾಗ ಯಾವ ಪ್ರೇಮದಿಂದ ನಾನು ನಿನ್ನನ್ನು ಬದುಕಿಸಿದೆ ಎಂಬುದನ್ನು ಮರೆತೆಯಾ ? ಇಷ್ಟು

ದಿನ ನೀನು ನಮ್ಮ ಮನೆಯಲ್ಲಿ ಇದ್ದಾಗ ನಾನು ನಿನ್ನ ಮೇಲೆ ತೋರಿದ ಅನುರಾಗ, ಮಾಡಿದ ಪ್ರೀತಿ ಯಾವ ಮಟ್ಟದ್ದು ಎಂಬುದನ್ನು ಸ್ಮರಣೆಗೆ ತಂದುಕೋ. ನಿನ್ನನ್ನು ಭಕ್ತಿಯಿಂದ ಬದುಕಿಸಿದ್ದು, ನಿನ್ನ ಮೇಲೆ ಪ್ರೇಮಮಾಡಿದ್ದು ನನ್ನ ಅಪರಾಧವೆ ! ದಯಮಾಡಿ ನಿನ್ನ ಈ ಭಕ್ತಳನ್ನು ಕೈಬಿಡಬೇಡ. ಒಲಿದುಬಂದ ನನ್ನನ್ನು ವರಿಸಿ ಕಾಪಾಡು. ನಾನು ನಿಜವಾಗಿಯೂ ನಿರಪರಾಧಿನಿ ಮತ್ತು ನಿನ್ನ ಭಕ್ತಳು.

**ಕಚ** :- ಸುಂದರಿ, ಕ್ಷಮಿಸು ನೀನು ಗುರು ಶುಕ್ರಾಚಾರ್ಯರಿಗಿಂತ ನನಗೆ ಪೂಜ್ಯಳಾಗಿರುವೆ. ಧರ್ಮ ವಿರುದ್ಧ ಕಾರ್ಯ ಮಾಡಲು ನನ್ನನ್ನು ಬಲವಂತಪಡಿಸಬೇಡ. ಯಾವ ಶುಕ್ರಾಚಾರ್ಯರ ಹೊಟ್ಟೆಯಿಂದ ನೀನು ಹುಟ್ಟಿರುವಿಯೋ ಅದೇ ಹೊಟ್ಟೆಯಲ್ಲಿ ನಾನೂ ಕೆಲಕಾಲ ಇದ್ದು ಹುಟ್ಟಿಬಂದವ ನಾಗಿದ್ದೇನೆ. ಆದುದರಿಂದ ದೇವಯಾನಿ, ನೀನು ನನಗೆ ಧರ್ಮದೃಷ್ಟಿಯಿಂದ ಸಾಕ್ಷಾತ್ ಸಹೋದರಿ. ನಾನು ನಿನಗೆ ಸೋದರ. ಅಣ್ಣತಂಗಿಯರಾದ ನಮ್ಮಲ್ಲಿ ವಿವಾಹವು ಅಶಕ್ಯ. ನಿಷಿದ್ಧ.ಇನ್ನೊಮ್ಮೆ ಇಂತಹ ಮಾತನ್ನು ಮಾತ್ರ ಆಡಬೇಡ. ನಿಮ್ಮ ಮನೆಯಲ್ಲಿ ಇರುವಷ್ಟು ದಿನ ನಿನ್ನಿಂದಾಗಿ ನಾನು ಸುಖವಾಗಿಯೇ ಇದ್ದೆನು. ಮಧ್ಯದಲ್ಲಿಯ ದೈತ್ಯರ ಕ್ಷುದ್ರೋಪದ್ರವಗಳನ್ನು ನಾನು ಮನಸ್ಸಿನಲ್ಲಿ ಹಿಡಿದೇ ಇಲ್ಲ. ಸಂತೋಷದಿಂದ ಹೊರಟಿದ್ದೇನೆ. ಅದಕ್ಕಾಗಿ ನಿನ್ನ ನಿರೂಪ ತೆಗೆದುಕೊಳ್ಳಲು ಬಂದಿದ್ದೇನೆ. ಸಂತೋಷದಿಂದ ಬೀಳ್ಕೊಡು. ನನ್ನ ಪ್ರಯಾಣವು ಸುರಕ್ಷಿತವಾಗಿ ಆಗಲಿ ಎಂದು ಮಂಗಲಾಶಂಸನೆಯನ್ನು ಮಾಡು. ನನ್ನನ್ನು ಆಗಾಗ ನೆನೆಯುತ್ತಿರು. ಆದರೆ ಆ ನೆನಿಕೆ ಧರ್ಮಕ್ಕೆ ಅವಿರುದ್ಧವಾಗಿರಲಿ. ಕಾಮಮೂಲಕ ನೆನೆಸುವದು ಬೇಡ. ನಿಮ್ಮ ತಂದೆಯ ಶಿಷ್ಯನೆಂದೂ, ನಿನ್ನ ನಿರ್ವ್ಯಾಜ ಸ್ನೇಹಿತನೆಂದೂ, ನನ್ನನ್ನು ಸಹಜ ಮಾತಿನ ಸಂದರ್ಭದಲ್ಲಿ ಸ್ಮರಿಸು. ದೇವಯಾನಿ, ಇನ್ನೊಂದು ಮಾತು. ನಾನು ಹೋದ ಬಳಿಕ ಗುರುಗಳ ಸೇವೆಯ ಭಾರವೆಲ್ಲವೂ ನಿನ್ನ ಮೇಲೆಯೇ. ಈ ವಿಷಯದಲ್ಲಿ ಬಹು ಜಾಗರೂಕಳಾಗಿ ಗುರುಗಳ ಸೇವೆಮಾಡು. ನಾನು ಬರುವೆ.

**ದೇವಯಾನಿ** - ಕಚ, ನಿನ್ನನ್ನು ದೈತ್ಯರು ಕೊಂದುಹಾಕಿದಾಗ ನನ್ನ ' ಪತಿ ' ಎಂಬ ಭಾವದಿಂದಲೇ ನಾನು ನಿನ್ನನ್ನು ರಕ್ಷಿಸಿದೆ. ನಿನ್ನನ್ನು ಪ್ರೀತಿಸಿದೆ. ಎಲ್ಲ ಬಗೆಯಿಂದಲೂ ಉಪಚರಿಸಿದೆ. ನಾನು ನಿನಗೆ ಮಾಡಿದ ಈ ಉಪಚಾರದಲ್ಲಿ ಧರ್ಮದೃಷ್ಟಿಯ ಜೊತೆಗೆ ಕಾಮದೃಷ್ಟಿಯೂ ಇದ್ದಿತು ಎಂಬುದನ್ನು ಮರೆಯಬೇಡ. ನಿನಗೆ ಜೀವದಾನ ಮಾಡಿದ ನನ್ನನ್ನು ಧರ್ಮಪತ್ನಿ ಎಂದು ಪರಿಗ್ರಹಿಸಿದರೆ ಧರ್ಮ, ಕಾಮ, ಅರ್ಥ ಎಂಬ ಮೂರೂ ಪುರುಷಾರ್ಥಗಳೂ ನಿನಗೆ ಸಂಪನ್ನವಾಗುವವು. ಧರ್ಮದಿಂದ ಪುಣ್ಯವೃದ್ಧಿ. ಕಾಮದಿಂದ ಭೋಗ ಸಂತೋಷ. ಅರ್ಥದಿಂದ ಎಲ್ಲ ಪ್ರಯೋಜನಗಳ ಸಿದ್ಧಿ. ಇಷ್ಟೆಲ್ಲ ವಿಶೇಷ ಕಾರಣವಿದ್ದರೂ ನನ್ನನ್ನು ಧಿಕ್ಕರಿಸಿ ಹೊರಟಿರುವಿ. ಇದು ನಿನ್ನ ಧರ್ಮವಲ್ಲ. ಇಷ್ಟೂ ಮೀರಿ ನೀನು ನನ್ನನ್ನು ದೂರ ಮಾಡಿ ಹೊರಟರೆ ಇಷ್ಟು ದಿನಗಳವರೆಗೆ ನೀನು ನನ್ನ ತಂದೆಯಲ್ಲಿ ಕಲಿತ ಸಂಜೀವಿನಿವಿದ್ಯೆಯು ಸಿದ್ಧಿಸದೇ ಹೋಗಲಿ.

**ಕಚ** :- ದೇವಯಾನಿ, ನೀನು 'ಗುರುಪುತ್ರಿ' ಎಂಬ ಒಂದೇ ಕಾರಣಕ್ಕಾಗಿ ನಾನು ನಿನ್ನನ್ನು ತಿರಸ್ಕರಿಸಿದ್ದೇನೆ. ಮತ್ತಾವ ದೋಷವನ್ನೂ ನಿನ್ನ ಮೇಲೆ ನಾನು ಆರೋಪಿಸಿಲ್ಲ. ಋಷಿಗಳ ಪರಂಪರೆಯಿಂದ ಬಂದ ಸನಾತನ ಧರ್ಮವನ್ನೇ ನಾನು ನಿನಗೆ ಹೇಳಿದ್ದೇನೆ. ವೈದಿಕ ನೀತಿಯನ್ನು ತಿಳಿಸಿದ್ದೇನೆ. ಇದರಲ್ಲಿ ನನ್ನ ತಪ್ಪು ಏನೂ ಇಲ್ಲ. ಧರ್ಮನಿಷ್ಠನಾದ ನನಗೆ ಶಾಪಕೊಡಲು ಕಾರಣವೇ ಇಲ್ಲ. ಆದರೂ ನೀನು ನನ್ನನ್ನು ಶಪಿಸುತ್ತಿರುವೆ. ಬೇಕಾದಷ್ಟು ಶಪಿಸು. ನನ್ನ ಗುರು ಪ್ರೀತಿಪೂರ್ವಕವಾಗಿ ನನ್ನನ್ನು ಅನುಗ್ರಹಿಸಿದ್ದರಿಂದ ನನಗೆ ಭಯವೇ ಇಲ್ಲ. ಆದರೆ ನಿನ್ನನ್ನು ಮಾತ್ರ ಯಾವ ಋಷಿಪುತ್ರನೂ ಮದುವೆಯಾಗಲಾರ. ನಿನ್ನ ಶಾಪದಿಂದ ನನಗೆ ವಿದ್ಯೆ ಫಲಿಸದಿದ್ದರೂ ಚಿಂತೆ ಇಲ್ಲ. ನಾನು ಕಲಿಸಿಕೊಟ್ಟ ಶಿಷ್ಯರಿಗೆ ಅದು ಫಲಿಸಿದರೆ ಸಾಕು. ಅವರಿಂದಲೇ ನಮ್ಮ ಕಾರ್ಯ ಮಾಡಿಸುತ್ತೇನೆ '' ಎಂದು ಕಚನು ದೇವಯಾನಿಗೆ ಹೇಳಿ ಸ್ವರ್ಗಕ್ಕೆ ನಡೆದನು. ಕಚನ ಆಗಮನದಿಂದ ಅಮರಾವತಿಯಲ್ಲಿ ಭಾರೀ ಸಂಭ್ರಮ. ಇಂದ್ರ ಮೊದಲಾದ ದೇವತೆಗಳಿಗೆಲ್ಲ ಇನ್ನಿಲ್ಲದ ಹಿಗ್ಗು. ಬಂದವರೆಲ್ಲರೂ ಅವನನ್ನು ಬಿಗಿದಪ್ಪಿ ಅಭಿನಂದಿಸುವವರೇ. ಇಂಥ ಮಗನನ್ನು ಹೆತ್ತು ಸುರಸಮಾಜಕ್ಕೆ ಕೊಟ್ಟದ್ದಕ್ಕಾಗಿ ಬೃಹಸ್ಪತ್ಯಾಚಾರ್ಯರಿಗೂ ಒಳ್ಳೆ ಗೌರವ, ಪ್ರಶಂಸೆ ಅಂದು. ''ಕಚ, ನೀನು ಮಾಡಿದ ಕೆಲಸ ಅದ್ಭುತ. ಸ್ವರ್ಗಕ್ಕೆ ಹಿತ. ನಿನ್ನ ಕೀರ್ತಿ ಅಖಂಡವಾಗಿರಲಿ. ಎಲ್ಲ ಭೋಗ ಭಾಗ್ಯಗಳೂ ನಿನ್ನ ಪಾಲಿಗಿರಲಿ'' ಎಂದು ಸಂತಸದುಂಬಿ ಹರಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು*



## ಸೀರೆಯ ಕಾರಣಕ್ಕಾಗಿ, ನಾರಿ ಹೆಮ್ಮಾರಿ ಆದಳು | ಅಧ್ಯಾಯ - ೨೮

**ಕೃತವಿದ್ಯೇ ಕಚೇ ಪ್ರಾಪ್ತೇ ಹೃಷ್ಟರೂಪಾ ದಿವೌಕಸಃ ॥**
**ಕಚಾದವೇತ್ಯ ತಾಂ ವಿದ್ಯಾಂ ಕೃತಾರ್ಥಾ ಭರತರ್ಷಭ ॥**

ಕಚನು ಸಂಜೀವಿನಿ ವಿದ್ಯೆಯನ್ನು ಪಡೆದು ಸ್ವರ್ಗಲೋಕಕ್ಕೆ ಬಂದ ಬಳಿಕ ದೇವತೆಗಳಿಗೆಲ್ಲ ಮಹದಾನಂದವಾಯಿತು. ಎಲ್ಲದೇವತೆಗಳು ಕಚನಿಂದ ಆ ವಿದ್ಯೆಯನ್ನು ಕಲಿತುಕೊಂಡು ಕೃತ ಕೃತ್ಯರಾದರು. ಒಂದು ದಿನ ದೇವತೆಗಳೆಲ್ಲರು ಇಂದ್ರನ ಬಳಿಗೆ ಬಂದು ''ಪುರಂದರನೇ, ನಮ್ಮ ಬಲವನ್ನು ತೋರುವ ಕಾಲವು ಈಗ ಬಂದಿದೆ. ನಮ್ಮ ವೈರಿಗಳಾದ ದೈತ್ಯರನ್ನು ಗೆಲ್ಲುವ ಉದ್ಯೋಗವನ್ನು ನೀವು ಇನ್ನು ಕೈಕೊಳ್ಳಬೇಕು'' ಎಂದು ಸಲಹೆಮಾಡಿದರು. ''ಹಾಗೇ ಆಗಲಿ '' ಎಂದು ದೇವೇಂದ್ರನು ಅವರೆಲ್ಲರಿಗೂ ಆಶ್ವಾಸನೆಯನ್ನು ನೀಡಿದ.

ಒಂದು ದಟ್ಟಡವಿ. ನಿಬಿಡವಾದ ಗಿಡಬಳ್ಳಿಗಳು. ಆ ಕಾಡಿನ ಎದೆಗೂಡಿನಲ್ಲಿ ಒಂದು ತಿಳಿನೀರಿನ ಹೊಕ್ಕರಣೆ. ಅಲ್ಲಿಯ ನೀರು ಸ್ಫಟಿಕದಂತೆ. ಕುಬೇರನ ಕ್ರೀಡೆಯ

ಉಪವನವೋ ಎನ್ನುವಷ್ಟು ಸೊಗಸು ಆ ಉದ್ಯಾನ. ಅಮೃತದಂತಿರುವ ಆ ಕೊಳದ ತಿಳಿನೀರಿನಲ್ಲಿ ಕೆಲವು ಕನ್ಯಾಮಣಿಗಳ ಜಲವಿಹಾರ. ಈ ಚೆಲುವೆಯರು ತಮ್ಮ ಚಿಗರು ಬೆರಳಿನಿಂದ ಒಬ್ಬರಿಗೊಬ್ಬರು ನೀರನ್ನು ಚಿಮುಕಿಸುತ್ತಿದ್ದರು. ಅವರ ಚೆಲ್ಲಾಟ ನೀರಾಟಗಳು ಸಾವಿರ ಕಣ್ಣಿನ ಇಂದ್ರನ ಕಣ್ಣಿಗೆ ಬಿದ್ದವು. ಕೂಡಲೇ ಆ ಶಚೀಪತಿಯು ಗಾಳಿಯರೂಪ ತಾಳಿದ. ಆ ಬಾಲೆಯರ ಬಟ್ಟೆಗಳೆಲ್ಲವೂ ದಂಡೆಯ ಮೇಲೆ. ಇಂದ್ರನು ಗಾಳಿರೂಪದಿಂದ ಬಂದು ಆ ವಸ್ತ್ರರಾಶಿಯನ್ನೇ ಒಂದರಲ್ಲಿ ಒಂದನ್ನು ಸೇರಿಸಿಬಿಟ್ಟ. ಮುಗಿಯಿತು ಆ ಜಲಜಾಕ್ಷಿಯರ ಜಲವಿಹಾರ. ನೀರು ಬಿಟ್ಟು ತೀರಕ್ಕೆ ಬಂದರು. ದಡದಡಿಯಲ್ಲಿ ಮೈತೊಳೆಯುವ ಮುನ್ನ ಮಡಚಿ ಇಟ್ಟು ತಮ್ಮ ಮಡಿ ಬಟ್ಟೆಗಳನ್ನು ತಾವಿಟ್ಟ ತಾಣಕ್ಕೆ ಬಂದು ತೊಟ್ಟುಕೊಂಡರು. ಗಾಳಿಯ ಗಡಿಬಿಡಿಯಿಂದ ಆ ಬಟ್ಟೆಗಳು ಒಂದರಲ್ಲೊಂದು ಸೇರಿಕೊಂಡಿದ್ದವು. ದೊರೆ ವೃಷಪರ್ವನ ಮಗಳು ಶರ್ಮಿಷ್ಠೆಯು ತಿಳಿಯದೆ ದೇವಯಾನಿಯ ಬಟ್ಟೆಯನ್ನು ಉಟ್ಟುಕೊಂಡಳು. ಪಾಪ, ಅವಳಿಗೇನು ಗೊತ್ತು. ಈ ಮಂದಮಾರುತದಿಂದ ಬಂದು ಬೀಸಿದ ಇಂದ್ರದೇವನ ಅವಾಂತರ ! ಅರಸು ಕುವರಿ ತನ್ನ ಬಟ್ಟೆಯನ್ನೇ ಆರಿಸಿ ತೊಟ್ಟುಕೊಂಡಿದ್ದಾಳೆಂದು ಬಗೆದು ಆಚಾರ್ಯ ಪುತ್ರಿ ದೇವಯಾನಿಯು ಕಿಡಿಕಿಡಿಯಾದಳು. ಈ ವಸ್ತ್ರದ ಮೂಲಕ ಗೆಳತಿಯರಿಬ್ಬರಲ್ಲಿ ಕಲಹ ಪ್ರಾರಂಭ.

**ದೇವಯಾನಿ :-** ನನ್ನ ಬಟ್ಟೆಯನ್ನು ಏಕೆ ತೆಗೆದುಕೊಂಡೆಯೇ ರಕ್ಕಸಿ ! ನೀನು ನನ್ನ ಶಿಷ್ಯಳು ಗೊತ್ತಿದೆ ತಾನೇ ! ನೀನು ಮುಟ್ಟಿದ ಬಟ್ಟೆಯನ್ನು ಅದರಲ್ಲಿಯೂ ತೊಟ್ಟಬಟ್ಟೆಯನ್ನು ನಾನೆಂದೂ ಮುಟ್ಟಲಾರೆ. ಬ್ರಾಹ್ಮಣರ ಈ ಆಚಾರವು ನಿನಗೆ ತಿಳಿದಿಲ್ಲವೇ ? ತಿಳಿದಿದ್ದರೆ ನನ್ನ ಬಟ್ಟೆಯನ್ನು ಏಕೆ ಉಟ್ಟುಕೊಂಡೆ ? ಇದರಿಂದ ನಿನಗೆ ಒಳ್ಳೆಯದಾಗುವುದಿಲ್ಲ.

**ಶರ್ಮಿಷ್ಠೆ :-** ಬಿಕ್ಕೆ ಬೇಡುವ ಬಡಬ್ರಾಹ್ಮಣನ ಮಗಳಿಗೆ ಇಷ್ಟು ಸೊಕ್ಕು ಬಂದಿತೇ ! ನಮ್ಮ ತಂದೆ ಕುಳಿತಾಗ, ನಿಂತಾಗಲೆಲ್ಲ ನಿಮ್ಮ ತಂದೆ ಕೆಳಗೆ ನಿಂತುಕೊಂಡು ವಿನಯದಿಂದ ಹಗಲಿರುಳು ಓಲೈಸುವದನ್ನು ನೀನು ನೋಡಿಲ್ಲವೇ? ಎಚ್ಚರಿದ್ದಾಗಲೂ ಮಲಗಿದಾಗಲೂ ನಮ್ಮಪ್ಪನನ್ನು ನಿಮ್ಮಪ್ಪ ಹೊಗಳುಭಟ್ಟನಾಗಿ ಹಾಡಿ ಹರಸುತ್ತಲೇ ಇರುತ್ತಾನೆ. ದೇವಯಾನಿ, ಇನ್ನೊಂದು ಮಾತು ಲಕ್ಷ್ಯದಲ್ಲಿರಲಿ. ನೀನು ಬೇಡುವವನ ಮಗಳು. ನಾನು ನೀಡುವವನ ಮಗಳು. ನೀನು ಹೊಗಳು ಭಟ್ಟಂಗಿಯ ಮಗಳು. ನಾನು ಹೊಗಳಿಸಿಕೊಳ್ಳುವವನ ಮಗಳು. ನೀನು ಭಿಕ್ಷುಕನ ಮಗಳೆಂಬುದನ್ನು ಮರೆತಂತೆ ತೋರುತ್ತದೆ. ಭೂಪಾಲಪುತ್ರಿಯ ಮೇಲೆ ಕೋಪಿಸಿ ಕೊಂಡರೆ ಪರಿಣಾಮವು ಏನಾಗಬಹುದೆಂಬುದನ್ನು ಯೋಚಿಸಿರುವೆಯಾ! ಮೇಲಾಗಿ ನೀನು ಬರಿಗೈಬಾಲೆ. ನನ್ನಲ್ಲಿ ಬೇಕಾದ ಆಯುಧವಿದೆ. ಬಡಿದಾಡಲು ಬಂದರೆ ಹೋರಾಟಕ್ಕೂ ನಾನು ಸಿದ್ಧಳೇ. ನಿನ್ನನ್ನು ಲೆಕ್ಕಿಸುವದೇ ಇಲ್ಲ. ಗರ್ವಿಷ್ಠಳಾದ ಶರ್ಮಿಷ್ಠೆಯ ಮಾತು ಕೇಳಿ ದೇವಯಾನಿಗೆ, ಕೋಪ, ಕೌತುಕ ಕಾತರಗಳು ಕೂಡಿಬಂದವು. ಅವಳು ಸಿಟ್ಟಿನಿಂದ ಶರ್ಮಿಷ್ಠೆಯು ಉಟ್ಟುಕೊಂಡ ತನ್ನ ಬಟ್ಟೆಯನ್ನು ಕಸಿದುಕೊಳ್ಳಬೇಕೆಂದು ಸೆರಗನ್ನು ಹಿಡಿದು ಜಗ್ಗಿದಳು.

ಆಗ ಶರ್ಮಿಷ್ಠೆಯು ಕೋಪಾಟೋಪದಿಂದ ದೇವಯಾನಿಯನ್ನು ಹಿಡಿದು ಪಕ್ಕದಲ್ಲಿಯೇ ಇರುವ ಹಾಳುಬಾವಿಯಲ್ಲಿ ನೂಕಿ ಬಿಟ್ಟಳು. ಆ ಹಾಳುಬಾವಿಯು ಬಹಳ ಆಳವಿದ್ದುದರಿಂದ ಅದರಲ್ಲಿ ದೇವಯಾನಿಯು ಸತ್ತೇಹೋದಳು ಎಂದು ಭಾವಿಸಿ ಮನೆಗೆ ನಡೆದಳು. ದುಷ್ಟಬುದ್ಧಿಯ ಆ ದೈತ್ಯ ಕುವರಿಯು ದೇವಯಾನಿಯನ್ನು ಪಾತಾಳಕೂಪಕ್ಕೆ ತಳ್ಳಿದ ಬಳಿಕ ಅತ್ತ ಕಣ್ಣೆತ್ತಿ ಕೂಡ ನೋಡದೆ ಕ್ರೋಧದಿಂದ ಕಾಲನ್ನು ಅಪ್ಪಳಿಸುತ್ತ ಅರಮನೆಗೆ ಬಂದಳು. ಯೋಗಾಯೋಗ ಅಂದರೆ ಹೀಗೆ ಇರುತ್ತದೆ. ದೇವಯಾನಿಯು ಯಾವ ಕಾಡಿನಲ್ಲಿ ಬಿದ್ದಿದ್ದಳೋ ಅದೇ ಕಾಡಿನ ಗೂಡಿಗೆ ಬೇಟೆಯಾಡಲು ಬಂದ ಯಯಾತಿ. ನಹುಷರಾಜನ ಮಗನಾದ ಅವನು ಜಿಂಕೆಯನ್ನು ಬೆನ್ನಟ್ಟಿ ಓಡಿಓಡಿ ದಣಿದಿದ್ದ. ಅವನ ರಥದ ಕುದುರೆಗಳು ಬಳಲಿದ್ದವು. ಬಳಲಿ ಬೆಂಡಾದ ಅವನಿಗೆ ಭಾರೀ ಬಾಯಾರಿಕೆ. ನೀರಿಗಾಗಿ ಅತ್ತಿತ್ತ ಹುಡುಕುತ್ತ ಈ ಹಾಳು ಬಾವಿಯಲ್ಲಿ ನೀರು ಇಲ್ಲ. ನೀರೆ ಮಾತ್ರ ಬಿದ್ದಿದ್ದಾಳೆ. ಅದೊಂದು ಅಗ್ನಿಯ ಕುಡಿ. ಸೌಂದರ್ಯಲತೆಯ ಮಿಡಿ. ಅವಳ ಮೈಕಾಂತಿಯಿಂದ ಆ ಹಾಳುಬಾವಿಯ ಆಳ ಅಗಲಗಳಲ್ಲಿ ಕಾಂತಿ ಚೆಲ್ಲಿದಂತಾಗಿದೆ. ಸ್ವರ್ಗದಿಂದ ಕೆಳಗೆ ಉರುಳಿಬಿದ್ದಂತೆ ತೋರುವ ಆ ಕನ್ಯಾಮಣಿಯನ್ನು ನೋಡಿ ಸಂತೈಸಿ ಯಯಾತಿ ಮಹಾರಾಜನು ಕೇಳಿದನು.

''ಚಂದ್ರಮುಖಿ ನೀನು ಯಾರು? ವಯಸ್ಸಿನಿಂದ ನವತರುಣಿಯಂತೆ ತೋರುವಿ. ಕಿವಿಯಲ್ಲಿ ಲೋಲಾಡುವ ರತ್ನದ ಕುಂಡಲಗಳು ಸಿರಿವಂತರ ಮಗಳು ಎಂದು ಸಾರುವವು. ಕಲ್ಲುಹುಲ್ಲುಮೆದೆಗಳಿಂದ ತುಂಬಿದ ಈ ಹಾಳುಬಾವಿಯಲ್ಲಿ ನೀನು ಹೇಗೆ ಬಿದ್ದೆ ? ನೀನೇನೋ ದೀರ್ಘವಾಗಿ ಚಿಂತಿಸುತ್ತಿದ್ದೀ ಎಂದು ನಿನ್ನ ನಿಟ್ಟುಸಿರು ಹೇಳುತ್ತದೆ. ನೀನು ಯಾರ ಮಗಳು ? ಎಲ್ಲವನ್ನೂ ನನಗೆ ಹೇಳು.

**ದೇವಯಾನಿ :-**ಮಹಾರಾಜ, ನನ್ನ ಪರಿಚಯ ಬೇಕೇ! ಹೇಳುತ್ತೇನೆ ಕೇಳು. ದೇವತೆಗಳು ಕೊಂದುಹಾಕಿದ ದೈತ್ಯರನ್ನು ತನ್ನ ಸಂಜೀವಿನಿ ವಿದ್ಯೆಯಿಂದ ಮತ್ತೆ ಬದುಕಿಸುವ ಶುಕ್ರಾಚಾರ್ಯರನ್ನು ನೀನು ಬಲ್ಲೆಯಷ್ಟೆ ? ಅವರ ಹೊಟ್ಟೆಯ ಮಗಳೇ ನಾನು. ಈಗಾದರೂ ನಾನು ಯಾರು ತಿಳಿಯಿತೇ ! ನೀನೊಬ್ಬ ದೊಡ್ಡ ಕುಲದ ಶೂರ ಧೀರದೊರೆ ಎಂದು ಮಾತ್ರ ನಾನು ನಿನ್ನನ್ನು ಬಲ್ಲೆ. ಇದೊ, ಹೊಂಬಣ್ಣದ ಕೆಂಬೆರಳಿನ ಈ ನನ್ನ ಕೈಯನ್ನು ಮುಂದೆ ಮಾಡಿದ್ದೇನೆ. ಈ ಕೈ ಹಿಡಿದು ನನ್ನನ್ನು ಮೇಲಕ್ಕೆ ಎತ್ತು. ಕುಲೀನನಾದ ನೀನು ನನ್ನ ಕೈ ಹಿಡಿದು ಕಾಪಾಡಲು ಯೋಗ್ಯನೇ ಆಗಿರುವೆ. ಕಾರಣ ಕೂಡಲೇ ಕೂಪದಿಂದ ನನ್ನನ್ನು ಮೇಲಕ್ಕೆ ಎತ್ತಿಕೊ.''

**ಶೌನಕ :-** ನಹುಷ ಕುಮಾರನಾದ ಯಯಾತಿ ರಾಜನಿಗೆ ಸ್ಪಷ್ಟವಾಗಿ ತಿಳಿದು ಬಂದಿತು. ಬಾವಿ ಬಿದ್ದ ಬಾಲೆ ಬ್ರಾಹ್ಮಣ ಸ್ತ್ರೀ ಎಂದು. ಕೂಡಲೆ ಅವನು ತನ್ನ ಬಲಗೈ ಚಾಚಿ ಬಾವಿಯಿಂದ ಮೇಲಕ್ಕೆ ಎತ್ತಿಕೊಂಡನು. ಅವಳನ್ನು ಮೇಲಕ್ಕೆ ತಂದು ನಿಲ್ಲಿಸಿ ಅಡಿಯಿಂದ ಮುಡಿಯವರೆಗೆ ನೋಡಿದನು. ಒಳ್ಳೇ ಚೆಲುವೆ ಎನಿಸಿತು ಆ ಮಹಾರಾಜನಿಗೆ. ಅವಳನ್ನು ಸಂತೈಸಿ ಹೋಗಿಬರುತ್ತೇನೆ ಎಂದು ಹೇಳಿ ಅವಳ ನಿರೂಪ ತೆಗೆದುಕೊಂಡು ತನ್ನ ಪಟ್ಟಣಕ್ಕೆ ತೆರಳಿದನು. ಮಹಾರಾಜನು ಅತ್ತ ಹೋದ

**ಬಳಿಕ** ದೇವಯಾನಿಯು ನಡೆದ ಘಟನೆಯನ್ನೆಲ್ಲ ಮತ್ತೊಮ್ಮೆ ನೆನೆದುಕೊಂಡಳು. ಅವಳಿಗೆ ಭಾರೀ ಕೋಪ. ತಾಳಲಾರದಷ್ಟು ಸಂತಾಪ. ಅದರಿಂದ ಮೈತುಂಬ ಉರಿ. ಅಷ್ಟರಲ್ಲಿ ಅವಳ ಗೆಳತಿ ಪೂರ್ಣಿಕೆ ಅಲ್ಲಿಗೆ ಆಗಮಿಸಿದಳು.

**ದೇವಯಾನಿ** :- ಸಖಿ, ಈಗಲೇ ನೀನು ನನ್ನ ತಂದೆಯ ಬಳಿಗೆ ಹೋಗು. ನಡೆದ ಸಂಗತಿಯನ್ನೆಲ್ಲ ಅವನಿಗೆ ತಿಳಿಸು. ನಾನಂತೂ ವೃಷಪರ್ವ ರಾಜನ ನಗರದಲ್ಲಿ ಇನ್ನು ಮೇಲೆ ಪ್ರವೇಶವನ್ನೇ ಮಾಡುವುದಿಲ್ಲ.

**ಶೌನಕ** :- ಪೂರ್ಣಿಕೆಯು ದೇವಯಾನಿಯ ಆದೇಶದಂತೆ ಮನೆಗೆ ಹೋಗಿ ಮೊದಲು ಶುಕ್ರಾಚಾರ್ಯರನ್ನು ಕಂಡಳು. ಅವಳ ಮೈಯೆಲ್ಲ ಕಾತರಗೊಂಡು ಕಂಪಿಸುತ್ತಿತ್ತು. ದೀನದನಿಯಲ್ಲಿ ಉಸುರಿದಳು. "ಗುರುಗಳೇ, ಘಾತವಾಯಿತು. ದಾನವ ದೊರೆಯಾದ ವೃಷಪರ್ವನ ಮಗಳು ಶರ್ಮಿಷ್ಠೆಯು ದೇವಯಾನಿಯನ್ನು ಕಾಡಿನಲ್ಲಿ ಹೊಡೆದು ಹಾಕಿದ್ದಾಳೆ." ಮಗಳ ದುರ್ಗತಿಯನ್ನು ಕೇಳಿ ಶುಕ್ರಾಚಾರ್ಯರಿಗೆ ದುಃಖ ಉಕ್ಕಿತು. ಕೂಡಲೇ ಕಾಡಿಗೆ ಓಡಿದರು. ಕಂಗೆಟ್ಟು ಹುಡುಕಿದರು. ಒಂದು ತಪೋವನದಲ್ಲಿ ದುಃಖದಿಂದ ಬಿಕ್ಕುತ್ತ ದೇವಯಾನಿಯು ಕುಳಿತಿದ್ದಳು. ಧಾವಿಸಿ ಹೋಗಿ ಬಾಹುಗಳಿಂದ ಭರದಿಂದ ಬಿಗಿದಪ್ಪಿ ನುಡಿದರು. "ಮಗಳೆ, ಮಾನವರಿಗೆ ಸುಖದುಃಖಗಳು ಜನ್ಮಾಂತರದ ಕರ್ಮಫಲವಾಗಿ ಬರುತ್ತವೆ. ನಿನ್ನ ಯಾವದೋ ಹಿಂದಿನ ದುಷ್ಕರ್ಮದ ಫಲವಾಗಿ ಇಂಥ ದುರವಸ್ಥೆ ನಿನಗೆ ಬಂದಿದೆ. ಇದು ಹಿಂದಿನ ಪಾಪದ ಪ್ರಾಯಶ್ಚಿತ್ತ ಎಂದು ತಿಳಿದುಕೊ."

**ದೇವಯಾನಿ** :- ಅದು ಪ್ರಾಯಶ್ಚಿತ್ತವೇ ಆಗಲಿ. ಮತ್ತೇನೇ ಆಗಲಿ. ಅರಸನ ಮಗಳಾದ ಶರ್ಮಿಷ್ಠೆಯು ಕಣ್ಣು ಕೆಂಪಗೆಮಾಡಿ ನನಗೆ ಆಡಿದ ನುಡಿಯನ್ನು ಆಲಿಸು.

"ನಾವು ದೈತ್ಯರನ್ನು ಹೊಗಳುವ ಭಟ್ಟಂಗಿಗಳಂತೆ. ನಾವು ಹಾಡುವವರು, ಅವರು ಹಾಡಿಸಿಕೊಳ್ಳುವವರು. ಅವಳು ಕೊಡುವವನ ಮಗಳು. ನಾನು ಕೊಳ್ಳುವವನ ಮಗಳು. ಅವರದು ಮೇಲುಗೈ. ನಮ್ಮದು ಕೇಳುವ ಕೆಳಗಿನ ಕೈ." ಹೀಗೆಲ್ಲ ಸೊಕ್ಕಿನ ನುಡಿಗಳನ್ನು ಶರ್ಮಿಷ್ಠೆಯು ಗರ್ವಿಷ್ಠಳಾಗಿ ನುಡಿದಿದ್ದಾಳೆ. ತಾತ, ಇದು ನಿಜವೇ ! ಇದು ವಾಸ್ತವ ಸಂಗತಿಯಾಗಿದ್ದರೆ ಅವಳು ಏನೇ ಮಾಡಲಿ ಅವಳ ಕಾಲು ಹಿಡಿದು, ಕೈ ಮುಗಿದು, ನಾನು ಅವಳನ್ನು ಓಲೈಸಿ ಒಲಿಸಿಕೊಳ್ಳುತ್ತೇನೆ. ನಿಜ ನುಡಿಯಿರಿ."

**ಶುಕ್ರ** :- ದೇವಯಾನಿ, ನೀನು ಬಣ್ಣಿಸುವ ಭಟ್ಟಂಗಿ ಮಗಳೂ ಅಲ್ಲ. ಭಿಕ್ಷೆ ಬೇಡುವ ಬಡವನ ಮಗಳೂ ಅಲ್ಲ. ಎಲ್ಲ ದೈತ್ಯ ದಾನವರಿಂದಲೂ ಹೊಗಳಿಸಿ ಕೊಳ್ಳಲ್ಪಡುವ ನನ್ನ ಮಗಳಿರುವಿ. ನಿನ್ನ ಹಡೆದವನ ಯೋಗ್ಯತೆ ಏನೆಂಬುದನ್ನು ಈ ಭೂಮಿಯಲ್ಲಿ ಇಬ್ಬರು ಮಾತ್ರ ಬಲ್ಲರು. ದೈತ್ಯ ದೊರೆ ವೃಷಪರ್ವ. ಮಾನವರ ದೊರೆ ಯಯಾತಿ. ಇವರಿಬ್ಬರಿಗೂ ನನ್ನ ಅಸದಳವಾದ ಅಸಾಧಾರಣ ಬಲದ ಅರಿವು ಇದೆ. ದಿವ್ಯವಾದ ಬ್ರಹ್ಮತೇಜಸ್ಸೇ ನನ್ನ ಆ ಅನುಪಮ ಬಲ.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

—o—

ಶುಕ್ರ ಉವಾಚ

ಯಃ ಪರೇಷಾಂ ನರೋ ನಿತ್ಯಮತಿವಾಂದಾಸ್ತಿತಿಕ್ಷತಿ
ದೇವಯಾನಿ ವಿಜಾನೀಹಿ ತೇನ ಸರ್ವಮಿದಂಜಿತಂ ॥

ದೇವಯಾನಿ, ಹೆರವರು ನುಡಿದ ನಿಂದೆಯ ನುಡಿಗಳನ್ನು ಸ್ಥೈರಣೆಯಿಂದ ಕೇಳಿ ಸಹಿಸುವವನೇ ಈ ಪ್ರಪಂಚದಲ್ಲಿ ವಿಜಯಶಾಲಿಯಾಗುವನು.

ಯಃ ಸಮುತ್ಪತಿತಂ ಕ್ರೋಧಂ ನಿಗೃಹ್ಣಾತಿ ಹಯಂ ಯಥಾ ।
ಸ ಯಂತೇತ್ಯುಚ್ಯತೇ ಸದ್ಭಿರ್ನಯೋ ರಶ್ಮಿಷು ಲಂಬತೇ ॥

ಉಕ್ಕುವ ಕೋಪವನ್ನು ನಿಯಂತ್ರಿಸುವವನೇ ಧೀರ ಎನಿಸುವನು. ತುಂಟತೇಜಿಯನ್ನು ಚತುರತೆಯಿಂದ ಹತೋಟಿಯಲ್ಲಿ ಇರಿಸುವವನೇ ಚಾಣಾಕ್ಷ ಸಾರಥಿ. ಬರಿಚಾವಟಿ ಬೀಸಾಡುವವನಲ್ಲ.

ಯಃ ಸಮುತ್ಪತಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ
ಯಥೋರಗಸ್ತ್ವಚಂ ಜೀರ್ಣಾಂ ಸ ವೈ ಪುರುಷ ಉಚ್ಯತೇ ॥

ಮನದಲ್ಲಿ ಉಮ್ಮಳಿಸುವ ಕೋಪವನ್ನು ಯಾವನು ಶಾಂತಿಪೂರ್ಣವಾದ ಕ್ಷಮಾಗುಣದಿಂದ ಶಮನಗೊಳಿಸಿ ಹಾವು ಪೊರೆ ಬಿಟ್ಟಂತೆ ದೂರಮಾಡುವನೋ ಅವನು ನಿಜವಾದ ಮಹಾಪುರುಷ.

ಯಸ್ತು ಭಾವಯತೇ ಧರ್ಮಂಯೋಽತಿಮಾತ್ರಂ ತಿತಿಕ್ಷತಿ
ಯಶ್ಚ ತಪ್ತೋ ನ ತಪತಿ ಭೃಶಂ ಸೋಽರ್ಥಸ್ಯ ಭಾಜನಮ್ ॥

ಎಲ್ಲವನ್ನೂ ಧರ್ಮದೃಷ್ಟಿಯಿಂದಲೇ ನೋಡಬೇಕು. ಏನೇ ದುಃಖ ದುಮ್ಮಾನ ಬಂದರೂ ಸಹಿಸಬೇಕು. ಹೆರವರು ಎಷ್ಟೇ ದುಃಖ ಕೊಟ್ಟರೂ ಸ್ಥೈರಣೆಯನ್ನು ಕಳೆದುಕೊಳ್ಳಬಾರದು. ಇಂಥವರಿಗೆ ಎಲ್ಲ ಫಲಪ್ರಯೋಜನಗಳೂ ಸಿದ್ಧಿಸುವವು.

ಯೋ ಯಜೇದಶ್ವಮೇಧೇನ ಮಾಸಿ ಮಾಸಿ ಶತಂ ಸಮಾಃ
ಯಸ್ತು ಕುಪ್ಯೇನ್ನ ಸರ್ವಸ್ಯ ತಯೋರಕ್ರೋಧನೋ ವರಃ ॥

ತಿಂಗಳಗೊಂದರಂತೆ ಅಶ್ವಮೇಧಯಾಗಗಳನ್ನು ನೂರು ವರ್ಷ ಮಾಡಿದ ಪುಣ್ಯಾತ್ಮ ಒಂದು ಕಡೆ. ಎಂದೂ ಯಾರಿಗೂ ಸಿಟ್ಟು ಮಾಡದ, ಕೋಪ ಎಂಬ ವಸ್ತುವಿನ ಪರಿಚಯವೇ ಇಲ್ಲದ ಶಾಂತಪುರುಷ, ಕ್ಷಮಾಮೂರ್ತಿ ಇನ್ನೊಂದು ಕಡೆ.

ಇವರಿಬ್ಬರಲ್ಲಿ ಯಾರು ಶ್ರೇಷ್ಠರು ಎಂದರೆ, ಆ ನೂರು ಯಾಗ ಮಾಡಿದವನಿಗಿಂತ ಈ ಶಾಂತಪುರುಷನೇ, ಅರ್ಥಾತ್ ಕ್ಷಮಾಶೀಲನೇ ಸಾವಿರಪಾಲು ಮೇಲು.

**ಯೇ ಕುಮಾರಾಃ ಕುಮಾರ್ಯಶ್ಚ ವೈರಂ ಕುರ್ಯುರಚೇತಸಃ**
**ನೈತತ್ ಪ್ರಾಜ್ಞಸ್ತು ಕುರ್ವೀತ ವಿದುಸ್ತೇ ನ ಬಲಾಬಲಮ್ ॥**

ಬುದ್ಧಿ ಇಲ್ಲದ ಬಾಲಕ, ಬಾಲಕಿಯರು ಬಡಿದಾಡುತ್ತಾರೆ. ದ್ವೇಷವನ್ನೂ ಮಾಡುತ್ತಾರೆ. ಅದಕ್ಕೆ ಕಾರಣ ಅವರಿಗಿರುವ ಬಲಾಬಲಗಳ ಅಜ್ಞಾನ. ಅದನ್ನು ಅರಿತ ಪಂಡಿತರು ಎಂದೂ ಜಗಳವಾಡಲಾರರು. ದೇವಯಾನಿ, ಎಷ್ಟೆಂದರೂ ಶರ್ಮಿಷ್ಠೆ ಹುಡುಗಿ. ಅವಳಿಗೆ ನಿನ್ನ ಮತ್ತು ನನ್ನ ಬಲದ ಪರಿಜ್ಞಾನವಿಲ್ಲ. ಆದುದರಿಂದಲೇ ನಿನಗೆ ಅಪಚಾರ ಮಾಡಿದ್ದಾಳೆ.

**ದೇವಯಾನಿ** :- ಅಪ್ಪ ನಾನು ಹುಡುಗಿಯಾದರೂ ಕರ್ಮಾನುಸಾರವಾಗಿ ಸುಖ ದುಃಖಗಳು ಬರುವವೆಂಬುದನ್ನು ಬಲ್ಲೆ. ಅದರಂತೆ ಹೆರವರು ನಮ್ಮ ಮೇಲೆ ಕ್ರುದ್ಧರಾದಾಗ ಸಿಕ್ಕಾಪಟ್ಟೆ ಬೈದು ಜರಿದು ನುಡಿದಾಗ ಏನು ಮಾಡಬೇಕೆಂಬುದೂ ನನಗೆ ತಿಳಿದಿದೆ.

**ಶಿಷ್ಯಾಸ್ಯಾಽಶಿಷ್ಯವೃತ್ತಂ ಹಿ ನಕ್ಷಂತವ್ಯಂ ಬುಭೂಷಣಾ**
**ಅತಃ ಸಂಕೀರ್ಣವೃತ್ತೇಷು ವಾಸೋ ಮಮ ನ ರೋಚತೇ ॥**

ಶಿಷ್ಯ ಶಿಷ್ಯನಂತೆ ವಿನೀತನಾಗಿ ಗುರುವಿಗೆ ವಿಧೇಯನಾಗಿ ಇರಬೇಕು. ಅದನ್ನು ಬಿಟ್ಟು ಗುರುವಿಗೇ ತಿರುಮಂತ್ರಹೇಳುವ ಶಿಷ್ಯನ ಉನ್ಮತ್ತ ನಡತೆಯನ್ನು ಗೌರವದ ಜೀವನ ಸಾಗಿಸಬಯಸುವವರು ಎಂದೂ ಕ್ಷಮಿಸಬಾರದು. ಕೀಳು ನಡತೆಯ ಈ ದೈತ್ಯರ ಮನೆಯಲ್ಲಿ ವಾಸಿಸುವದು ನನಗಂತೂ ಇಷ್ಟವಿಲ್ಲ. ಸತ್ಪುರುಷರ ಶೀಲ ಸದಾಚಾರಗಳನ್ನು ಸತ್ಕುಲ ಸಜ್ಜನಿಕೆಗಳನ್ನು ಗುರುತಿಸಿ ಗೌರವ ತೋರದ ಪಾಪಿಗಳ ಆಶ್ರಯದಲ್ಲಿ ಎಂದೂ ನೆಲಸಬಾರದು. ಕುಲಶೀಲ ಗೊತ್ತಿಲ್ಲದಿದ್ದರೂ ಚಿಂತೆಯಿಲ್ಲ. ಸಜ್ಜನರನ್ನು ಆದರಿಸುವ ವಿನೀತ ಪುರುಷರ ನೆರೆಯಲ್ಲಿ ವಾಸಿಸಬೇಕು.

ಶರ್ಮಿಷ್ಠೆ ನುಡಿದನುಡಿ ನನ್ನ ಎದೆ ಸುಡುತ್ತದೆ. ಅವಳ ಒಂದೊಂದು ಮಾತೂ ನನ್ನ ಹೃದಯದಲ್ಲಿ ಕಿಚ್ಚನ್ನು ಹೊತ್ತಿಸಿಟ್ಟಿವೆ. ಅಪ್ಪ, ಸಿರಿಯ ಮದದಿಂದ ಮೆರೆಯುವ ವೈರಿಗಳನ್ನು ಒಲೈಸಿಗೊಂಡಿರುವದಕ್ಕಿಂತ ಹೀನಕೆಲಸ ಈಲೋಕದಲ್ಲಿ ಬೇರಾವುದೂ ಇಲ್ಲ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಶುಕ್ರಾಚಾರ್ಯರ ವಕ್ರೋಕ್ತಿ

ಅಧ್ಯಾಯ - ೩೦

**ಶೌನಕ ಉವಾಚ :**

**ತತಃ ಕಾವ್ಯೋ ಭೃಗುಶ್ರೇಷ್ಠಃ ಸಮನ್ಯುರುಪಗಮ್ಯಹ**
**ವೃಷಪರ್ವಾಣಮಾಸೀನಮಿತ್ಯುವಾಚಾऽವಿಚಾರಯನ್ ॥**

ಮಗಳ ಮಾತು ಕೇಳಿ ಶುಕ್ರಾಚಾರ್ಯರಿಗೂ ಕೋಪ ಬಂದಿತು. ಅವರು ವೃಷಪರ್ವರಾಜನ ಬಳಿಗೆ ಬಂದು ವಿಚಾರಕ್ಕೆ ಅವಕಾಶವಾಗದಂತೆ ನುಡಿದರು.

**ಶುಕ್ರ ಉವಾಚ :**

**ನಾऽಧರ್ಮಶ್ಚರಿತೋ ರಾಜನ್ ಸಧ್ಯಃ ಫಲತಿಗೌರಿವ**
**ಶನೈರಾವರ್ತ್ಯಮಾನಸ್ತು ಮೂಲಾನ್ಯಪಿ ನಿಕೃಂತತಿ ॥**

ರಾಜನೇ, ಹಸುವಿಗೆ ಹುಲ್ಲುಹಾಕಿದ ಕೂಡಲೇ ಹಾಲು ಕರೆಯುವುದಿಲ್ಲ. ಭೂಮಿಯಲ್ಲಿ ಬೀಜಬಿತ್ತಿದ ಕೂಡಲೇ ಪಯರು ಬರುವದಿಲ್ಲ. ಅದರಂತೆ ಅಧರ್ಮವನ್ನು ಮಾಡಿದ ಕೂಡಲೇ ಅದರ ಫಲವಾಗಿ ದುಃಖವು ಬರುವದಿಲ್ಲ. ಆದರೆ ಆ ಅಧರ್ಮದ ಪಾಪವು ಕ್ರಮೇಣ ವ್ಯಾಪಿಸಿ ಮಾಡಿದವನನ್ನು ಸಮೂಲವಾಗಿ ನಾಶಮಾಡುತ್ತದೆ.

**ಯದಿನಾತ್ಮನಿ ಪುತ್ರೇಷು ನಚೇತ್ ಪಶ್ಯತಿ ನಪ್ತೃಷು**
**ಪಾಪಮಾಚರಿತಂ ಕರ್ಮ ತ್ರಿವರ್ಗಮತಿವರ್ತತೇ ॥**

ಮನುಷ್ಯನು ತಾನು ಮಾತ್ರ ಪಾಪಮಾಡದಿದ್ದರಾಯಿತು ಎಂದು ಉದಾಸೀನನಾಗಿ ಇರಕೂಡದು. ತನ್ನ ಮಕ್ಕಳು ಮೊಮ್ಮಕ್ಕಳು ಏನೇನು ಪಾಪ, ದುಷ್ಕೃತ್ಯಗಳನ್ನು ಎಸಗುತ್ತಿದ್ದಾರೆ ಎಂಬುದನ್ನೂ ಲಕ್ಷ್ಯವಿಟ್ಟು ನೋಡಬೇಕು. ಅದನ್ನು ಕೂಡಲೇ ಅಲ್ಲಿಯೇ ತಡೆಯಬೇಕು. ಇಲ್ಲದಿದ್ದರೆ ಧರ್ಮ, ಅರ್ಥ, ಕಾಮ ಎಂಬ ಮೂರು ಪುರುಷಾರ್ಥಗಳಿಗೂ ಪರಿವಾರದ ದುಷ್ಕೃತ್ಯ ಯಜಮಾನನ ಉದಾಸೀನತೆಗಳು ಮಾರಕವಾಗುವವು.

**"ಫಲತ್ಯೇವಂ ಧ್ರುವಂ ಪಾಪಂ ಗುರುಭುಕ್ತಮಿವೋದರೇ ॥"**

ಪಾಪದ ಕೆಟ್ಟಕೆಲಸಮಾಡುವದೆಂದರೆ ಜೀರ್ಣವಾಗದ ಆಹಾರವನ್ನು ಅಳತೆಗೆಟ್ಟು ತಿಂದಂತೆ. ಅದು ಆಗ ಏನೂ ಅನಿಸದಿದ್ದರೂ ಮುಂದೆ ಕೆಲ ಸಮಯದ ನಂತರ ಹೊಟ್ಟೆಯಲ್ಲಿ ಅಪಾಯವನ್ನು ಉಂಟುಮಾಡುವಂತೆ ದುಷ್ಕೃತ್ಯಗಳೂ ಕೂಡ ಕ್ರಮೇಣ ಕಾಲಾಂತರದಲ್ಲಿ ನಮ್ಮಲ್ಲಿ ದುಷ್ಪರಿಣಾಮ ಬೀರಿ ಕಟುಫಲಕೊಡದೆ ಹೋಗುವದೇ ಇಲ್ಲ. ಇದು ಖಂಡಿತ.

ಯಾವ ಅಪರಾಧವೂ ಇಲ್ಲದೆ ನನ್ನ ಮನೆಯಲ್ಲಿ ನನ್ನ ಸೇವೆಮಾಡುತ್ತ ಶಿಷ್ಯನಾಗಿ ಇದ್ದ ಕಚನನ್ನು ನೀನು ದೈತ್ಯರಿಂದ ಕೊಲ್ಲಿಸಿದೆ. ಈಗ ನನ್ನ ಮಗಳ ಪಾಳಿ ಬಂದಿದೆ. ನಿನ್ನ ಮದೋನ್ಮತ್ತ ಮಗಳಾದ ಶರ್ಮಿಷ್ಠೆಯು ನನ್ನ ತನುಜೆ ದೇವಯಾನಿಯನ್ನು ಕೊಲ್ಲಬೇಕೆಂದು ಹೊಡೆದು ಹಾಳುಬಾವಿಯಲ್ಲಿ ದೂಡಿ ಬಂದಿದ್ದಾಳೆ. ಆದುದರಿಂದ ನಾನು ನಿನ್ನನ್ನು ನಿನ್ನ ದಾನವ ಬಂಧುಗಳನ್ನೂ ಬಿಟ್ಟು ಹೊರಟಿದ್ದೇನೆ. ಇನ್ನು ಮೇಲೆ ನನಗೆ ನಿನ್ನ ರಾಜ್ಯದಲ್ಲಿ ನಿನ್ನೊಡನೆ ಕೂಡಿ ಇರುವದು ಶಕ್ಯವಿಲ್ಲ. ನನ್ನ ಮಗಳನ್ನು ಸಾವಿಗೀಡಾಗುವಂತೆ ಮಾಡಿದ ನಿನ್ನ ಗರ್ವಾಂಧ ಮಗಳನ್ನು ಶಿಕ್ಷಿಸದೆ ಏಕೆ ಕುಳಿತಿರುವೆ !

**ವೃಷಪರ್ವ :-** ಭೃಗುವಂಶಭೂಷಣರಾದ ಗುರುಗಳೇ, ಇಂದಿನವರೆಗೆ ನಾನು ನೀವು ತಪ್ಪುಮಾಡಿದ್ದನ್ನು ನೋಡಿಲ್ಲ. ಸುಳ್ಳು ಮಾತಾಡಿದ್ದನ್ನು ಕೇಳಿಲ್ಲ. ಈ ಪ್ರಪಂಚದಲ್ಲಿ ಸತ್ಯವು ಎಲ್ಲಿಯಾದರೂ ಬದುಕಿ ಉಳಿದಿದ್ದರೆ ಅದು ಶುಕ್ರಾಚಾರ್ಯರಲ್ಲಿ ಮಾತ್ರ. ಮೂರ್ತಿಮಂತ ಧರ್ಮವೆಂದರೆ ನೀವು. ದಯಮಾಡಿ ನನ್ನ ಮೇಲೆ ತಾವು ಪ್ರಸನ್ನರಾಗಬೇಕು. ತಾವು ಇಲ್ಲಿಂದ ಹೊರಟು ಹೋದರೆ ನಾನು ಸಮುದ್ರಕ್ಕೆ ಹಾರಿಕೊಳ್ಳುವೆ. ನನಗೆ ಬೇರೆ ಗತಿಯೇ ಇಲ್ಲ.

**ಶುಕ್ರಾಚಾರ್ಯ :-** ದೈತ್ಯರೆ, ಸಮುದ್ರದಲ್ಲಿಯಾದರೂ ಮುಳುಗಿರಿ, ದಿಕ್ಕು ತೋರಿದತ್ತ ಓಡಿಯಾದರೂ ಹೋಗಿರಿ. ನನಗೇನು ಅದರ ಗೊಡವೆ ! ಏನಾದರೂ ನಾನು ನನ್ನ ಪುತ್ರಿಗಾದ ಅಪಚಾರವನ್ನು ತಾಳಲಾರೆ. ನನಗೆ ಈ ಪ್ರಪಂಚದಲ್ಲಿ ಅವಳಷ್ಟು ಪ್ರಿಯವಾದ ವಸ್ತು ಬೇರೊಂದಿಲ್ಲ. ನನ್ನ ಪಂಚಪ್ರಾಣವೇ ಅವಳು. ನಾನು ಬೇಕಾಗಿದ್ದರೆ ಮೊದಲು ಅವಳನ್ನು ಒಲಿಸಿರಿ. ಪ್ರಸನ್ನಗೊಳಿಸಿರಿ. ದೇವಯಾನಿ ಸಂತುಷ್ಟಳಾಗಿದ್ದರೆ ಬೃಹಸ್ಪತಿಯು ಇಂದ್ರನನ್ನು ಕಾಪಾಡಿದಂತೆ ನಾನೂ ನಿನ್ನನ್ನು ಕಾಯುತ್ತೇನೆ.

**ವೃಷಪರ್ವ :-** ಆಚಾರ್ಯರೇ, ದೈತ್ಯದಾನವ ಧುರೀಣರ ಬಳಿಯಲ್ಲಿ ಆನೆ, ಕುದುರೆ, ರಥ, ರಾಜ್ಯ, ಐಶ್ವರ್ಯ ಏನೇ ಇದ್ದರೂ ಅದೆಲ್ಲವೂ ಇಂದಿನಿಂದ ತಮ್ಮದು. ನಾನೂ ನಿಮ್ಮ ದಾಸ. ನೀವೇ ಎಲ್ಲದ್ದಕ್ಕೂ ಪ್ರಭುಗಳು.

**ಶುಕ್ರ:-**ಹಾಗಿದ್ದರೆ ದೇವಯಾನಿಯನ್ನು ಸಂತೈಸಿರಿ. ಅವಳು ಪ್ರಸನ್ನಳಾದರೆ ನಾನೂ ಪ್ರಸನ್ನ, ಅನಂತರ ಶುಕ್ರಾಚಾರ್ಯರು ವೃಷಪರ್ವ ರಾಜನೊಂದಿಗೆ ಮಗಳಿದ್ದಲ್ಲಿಗೆ ಬಂದು ''ಮಗಳೇ, ವೃಷಪರ್ವ ನನಗೆ ಸರ್ವಸ್ವವನ್ನೂ ಒಪ್ಪಿಸಿದ್ದಾನೆ. ಅವನ ಸೊತ್ತಿಗೆಲ್ಲ ನಾನೇ ಅರ್ಥಾತ್ ನೀನೇ ಒಡತಿ. ನೀನು ಹೇಳಿದಂತೆ ಕೇಳಲು ಅವನೀಗ ಸಿದ್ಧ.''

**ದೇವಯಾನಿ :-** ತಾತ, ಈ ಮಾತನ್ನು ನೀನು ಹೇಳಿದರೆ ನನಗೆ ನಂಬಿಗೆ ಯಾಗುವದಿಲ್ಲ. ಅವನ ಬಾಯಿಂದಲೇ ಬರಲಿ.

**ವೃಷಪರ್ವ :-** ಗುರುಪುತ್ರಿ, ನೀನು ಬೇಕಾದುದನ್ನು ಬೇಡು. ಕೇಳಿದ್ದನ್ನು ಕೊಡುತ್ತೇನೆ. ಅದು ಎಷ್ಟೇ ದುರ್ಲಭವಾಗಿದ್ದರೂ ಹೇಗಾದರೂ ಮಾಡಿ ತಂದುಕೊಡುತ್ತೇನೆ.

**ದೇವಯಾನಿ :-** ಸಾವಿರ ದಾಸಿಯರೊಡನೆ ಶರ್ಮಿಷ್ಠೆ ನನ್ನ ದಾಸಿಯಾಗಿ ಬರಲಿ. ತಂದೆ ನನ್ನನ್ನು ಕೊಟ್ಟಲ್ಲಿ ನನ್ನನ್ನು ಹಿಂಬಾಲಿಸಲಿ, ಗುರುಪುತ್ರಿಯ ಈ ಅಪೇಕ್ಷೆಯನ್ನು ತಿಳಿದ ವೃಷಪರ್ವನು ಶರ್ಮಿಷ್ಠೆಯನ್ನು ಕರೆತರಲು ಓರ್ವ ದಾಸಿಯನ್ನು ಕಳಿಸಿಕೊಟ್ಟನು. ಅವಳು ಹೋಗಿ ಆ ಅರಸು ಮಗಳಿಗೆ ಹೇಳಿದಳು. ''ರಾಜಕುಮಾರಿ, ಅಸುರರಾಜ್ಯಕ್ಕೆ ನಿನ್ನಿಂದಾಗಿ ಭಾರೀ ಗಂಡಾಂತರ ಒದಗಿದೆ. ನೀನು ಅವಮಾನಗೊಳಿಸಿದ ದೇವಯಾನಿ ಹಟಹಿಡಿದಿದ್ದಾಳೆ. ಅವರ ತಂದೆ ಈಗ ದೈತ್ಯವರ್ಗವನ್ನು ತೊರೆದೇ ಹೊರಟಿದ್ದಾರೆ. ಈಗ ನಿಮ್ಮ ದಾನವ ವಂಶವು ಉಳಿಯಬೇಕಾದರೆ ನೀನು ದೊಡ್ಡ ತ್ಯಾಗಮಾಡಬೇಕು. ದೇವಯಾನಿಯ ದಾಸಿಯಾಗಿ ಅವಳು ಹೇಳಿದಂತೆ ನಡೆಯಬೇಕು.'' ತಮ್ಮ ಕುಲದ ಕಲ್ಯಾಣಾಕಾಂಕ್ಷಿಣಿಯಾದ ಶರ್ಮಿಷ್ಠೆಯು ತಕ್ಷಣ ದೇವಯಾನಿ ಇದ್ದಲ್ಲಿಗೆ ಬಂದು ಕೈಮುಗಿದು ವಿನಯದಿಂದ ಬಾಗಿ ಹೇಳಿದಳು. ''ದೇವಯಾನಿ, ನಾನು ನಿನ್ನ ಅಪೇಕ್ಷೆಯಂತೆ ಸಾವಿರ ಜನ ದಾಸಿಯರೊಡನೆ ನಿನ್ನ ಊಳಿಗಕ್ಕೆ ನಿಲ್ಲುತ್ತೇನೆ. ನೀನು ಹೋದಲ್ಲಿ-ನಿಮ್ಮ ತಂದೆ ಕೊಟ್ಟಲ್ಲಿ-ಬಂದು ನಿನ್ನ ಸೇವೆಯನ್ನು ಈ ಸಾವಿರ ತೊತ್ತುಗಳೊಂದಿಗೆ ಮಾಡುತ್ತೇನೆ. ನಿನ್ನ ಅಪ್ಪಣೆಯಂತೆ ನಡೆಯುತ್ತೇನೆ.''

**ದೇವಯಾನಿ :-** ಶರ್ಮಿಷ್ಠೆ, ನಾನು ಬಣ್ಣಿಸುವ ಭಟ್ಟರ ಮಗಳು. ನೀನು ಬಣ್ಣಿಸಲ್ಪಡುವ ಭೂಪನ ಮಗಳು. ನಾನು ಭಿಕ್ಷೆ ಬೇಡುವ ಬ್ರಾಹ್ಮಣನ ಪುತ್ರಿ. ನೀನೋ ದಾನ ನೀಡುವ ದೊರೆಗಳ ಪುತ್ರಿ. ಅಂದಬಳಿಕ ನನ್ನ ದಾಸಿ ನೀನು ಹೇಗೆ ಆಗುವಿ?

**ಶರ್ಮಿಷ್ಠಾ :-** ದೇವಯಾನಿ, ಹೇಗಾದರೂ ಇರಲಿ. ಜ್ಞಾತಿಬಾಂಧವರಿಗೆ ಕಲ್ಯಾಣವನ್ನು ಉಂಟುಮಾಡುವದು ನನ್ನ ಕರ್ತವ್ಯವಾಗಿದೆ. ಸ್ವಜನರ ಹಿತಕ್ಕಾಗಿ ನಾನು ನಿನ್ನ ದಾಸಿಯಾಗಿ ಎಂಥ ಸೇವೆಯನ್ನಾದರೂ ಮಾಡಲು ಸಿದ್ಧಳಾಗಿದ್ದೇನೆ. ಇಂದಿನಿಂದ ನೀನು ಒಡತಿ. ನಾನು ನಿನ್ನ ಸೇವಕಿ. ನೀನು ಇಲ್ಲಿದ್ದರೆ ಇಲ್ಲಿ, ಎಲ್ಲಿರುವೆಯೋ ಅಲ್ಲಿ, ಸದಾ ನಿನ್ನ ಸೇವೆಗಾಗಿ ಅಣಿಯಾಗಿದ್ದೇನೆ.

ಇದನ್ನು ಕೇಳಿ ದೇವಯಾನಿಗೆ ಸಂತೋಷವಾಯಿತು. ಅವಳು ತನ್ನ ತಂದೆಗೆ ''ಅಪ್ಪ, ಇನ್ನು ದೈತ್ಯರ ಊರಲ್ಲಿ ನಾನು ಸಂತೋಷದಿಂದ ಮೊದಲಿನಂತೆ ಇರುತ್ತೇನೆ. ನಿನ್ನ ಜ್ಞಾನ, ಬಲಪ್ರಭಾವ ಎಲ್ಲವೂ ಅದ್ಭುತ. ಅಸಾಧಾರಣ. ಇಂದು ನಿನ್ನ ಮಹಿಮೆಯನ್ನು ಮನಗಂಡ ನನಗೆ ಹೆಮ್ಮೆಯಾಗಿದೆ'' ಎಂದು ಹೇಳಿ ಇಬ್ಬರೂ ಪುರ ಪ್ರವೇಶ ಮಾಡಿದರು. ದಾನವರೆಲ್ಲರೂ ಗುರುಗಳನ್ನು ಸಂತಸದಿಂದ ಪೂಜಿಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತನೆಯ ಅಧ್ಯಾಯ ಮುಗಿದುದು*

—o—

## ಬಾವಿಯಲ್ಲಿ ಬಿದ್ದಳು, ಕೈಹಿಡಿದಾಗ ಎದ್ದಳು, ಪತ್ನಿಯಾಗಿ ಗೆದ್ದಳು

ಅಧ್ಯಾಯ - ೩೧

**ಶೌನಕ ಉವಾಚ -**

**ಅಥದೀರ್ಘೇಣ ಕಾಲೇನ ದೇವಯಾನೀ ನೃಪೋತ್ತಮ**
**ವನಂತದೇವ ನಿರ್ಯಾತಾ ಕ್ರೀಡಾರ್ಥಂ ವರವರ್ಣಿನೀ ॥**

ಮುಂದೆ ಎಷ್ಟೋ ಕಾಲ ಉರುಳಿತು. ಒಂದು ದಿನ ದೇವಯಾನಿಯು ಗೆಳತಿಯರೊಂದಿಗೆ ಹಿಂದೆ ತಾನು ಬಾವಿಗೆಬಿದ್ದಿದ್ದ ವನಸ್ಥಲಕ್ಕೆ ಆಟವಾಡಲು ಬಂದಳು. ಅವಳನ್ನು ಹಿಂಬಾಲಿಸಿ ಕರಾರಿನಂತೆ ಶರ್ಮಿಷ್ಠೆಯೂ ಸಾವಿರ ದಾಸಿಯರೊಡನೆ ಅಲ್ಲಿಗೆ ಐತಂದಿದ್ದಳು. ನಿಬಿಡಕಾನನದ ರಮ್ಯಸೊಬಗನ್ನು ಕಂಡು ಗೆಳತಿಯರಿಗೆಲ್ಲ ಹಿಡಿಸಲಾರದಷ್ಟು ಹಿಗ್ಗು, ಬಿರಿದಮೊಗ್ಗು, ತೆರೆದತಾವರೆ, ಮೊರೆವತುಂಬಿ, ತೀಡುವತಂಗಾಳಿ, ತೊನೆವಬಳ್ಳಿ, ಬೀಸುವಕಂಪು, ಸೂಸುವಸೊಂಪು. ಎಲ್ಲವೂ ಅವರಿಗೆ ಸಂತಸದಸುಗ್ಗಿ. ಅಂತರಂಗಕ್ಕೆ ಆಪ್ಯಾಯನ. ಆ ಏಕಾಂತ ವನಾಂತದಲ್ಲಿ ಅವರದೇ ಹಾರಾಟ ಚೀರಾಟ. ಹಾಡು ಪಾಡು, ಕುಣಿತ ಮಣಿತ, ಹಾಡಿ ಕುಣಿದು ದಣಿದರು. ಕುಡಿದು ತಿಂದು ತಣಿದರು. ಮನದಣಿಯ ಜೇನನ್ನು ಈಂಟಿದರು. ತನಿವಣ್ಣುಗಳನ್ನು ಯಥೇಚ್ಛ ತಿಂದರು. ಆಗ ಅಲ್ಲಿಗೆ ಅದೇ ರಾಜನು ಬಂದ. ಕಾಡಿನ ಕೂಪದಲ್ಲಿ ಪತಿತಳಾದ ದೇವಯಾನಿಯನ್ನು ಕೈಕೊಟ್ಟು ಮೇಲೆ ತಂದ ಯಯಾತಿ ರಾಜನು ಬೇಟೆಗಾಗಿ ಅದೇ ವನಕ್ಕೆ ಬಂದಿದ್ದ. ಅಂದಿನಂತೆಯೇ ಬೇಟೆಯ ಭರದಲ್ಲಿ ಜಿಂಕೆಯ ಹಿಂದೆ ಓಟ. ಅಡವಿ ಅಡವಿ ಅಲೆದಾಟ. ಬೇಟೆ ಸಿಗದೆ ಮಿಡುಕಾಟ. ವ್ಯರ್ಥ ಬಳಲಿಕೆ. ಬಾಯಾರಿಕೆ. ನೀರನ್ನು ಅರಸುತ್ತ ನೀರೆಯರು ಇದ್ದಲ್ಲಿಗೆ ಯಯಾತಿಯ ಆಗಮನ.

ಕಾಡಿನ ಮಧ್ಯದಲ್ಲಿ ಕಾಮಿನಿಯರು. ಎಲ್ಲರ ಮೈ ಕೈಗಳಲ್ಲಿ ಬಂಗಾರದ ಆಭರಣಗಳು. ಎಲ್ಲರ ಕೈಗಳಲ್ಲಿಯೂ ಜೇನು ತುಂಬಿದ ಬಟ್ಟಲು. ಆ ಬಟ್ಟಲು ಗಣ್ಣನ ಬಾಲೆಯರ ನಡುವೆ ದೇವಯಾನಿ. ಅವಳ ತುಟಿ ಅಂಚಿನಲ್ಲಿ ತುಂಟ ನಗೆ. ಅಷ್ಟು ಹೆಣ್ಣುಗಳಲ್ಲಿ ಎದ್ದು ಕಾಣುವ ಚೆಲುವು ಅವಳದು. ಕಣ್ಣು ಕೋರೆಸುವ ಬಣ್ಣ. ಕಮನೀಯವಾದ ಕಾಂತಿ. ನಟ್ಟ ನಡುವೆ ಕುಳಿತ ಅವಳ ಪಾದಗಳನ್ನು ಮಿದುವಾಗಿ ನೀವುತ್ತಿದ್ದಾಳೆ ಶರ್ಮಿಷ್ಠೆ. ಇದನ್ನು ಕಂಡು ಯಯಾತಿಯು ಕೌತುಕಗೊಂಡು ಕೇಳಿದನು. ''ಇಲ್ಲಿ ಇಬ್ಬರು ಕನ್ಯೆಯರು. ಇಬ್ಬರಿಗೂ ಒಂದೊಂದು ಸಾವಿರ ಓಲೈಸುವ ದಾಸಿಯರು. ಇಂಥ ವೈಭವವುಳ್ಳ ನೀವಿಬ್ಬರು ನಾರಿಯರು ಯಾರು ? ನಿಮ್ಮ ಹೆಸರು ಏನು ? ಯಾವ ಕುಲದವರು ನೀವು ? ನನಗೆ ತಿಳಿದುಕೊಳ್ಳಲು ತವಕ. ತಿಳಿಸಬೇಕು ?'' ಆಗ ದೇವಯಾನಿಯು ತಾನೇ ಮುಂದೆ ಬಂದು ಉತ್ತರ ಕೊಟ್ಟಳು -

"ಓ ರಾಜನೇ, ನಾನೇ ಹೇಳುತ್ತೇನೆ ಕೇಳು. ದೈತ್ಯರ ಗುರು ಶುಕ್ರಾಚಾರ್ಯರ ಹೆಸರನ್ನು ಕೇಳಿರುವಿಯಷ್ಟೇ ? ನಾನು ಅವರ ಮಗಳು. ಸಾವಿರ ದಾಸಿಯರಿಂದ ಕೂಡಿದ ಇವಳು ದೈತ್ಯ ರಾಜನ ಮಗಳು ಶರ್ಮಿಷ್ಠೆ. ಹಿಂದೆ ನನ್ನ ಗೆಳತಿ. ಇಂದು ನನ್ನ ತೊತ್ತು. ನಾನು ಹೋದಲ್ಲಿ ಬಂದು ಸೇವೆ ಮಾಡುವ ಊಳಿಗದ ಆಳು."

**ಯಯಾತಿ :-** ದೈತ್ಯ ಸಾರ್ವಭೌಮನ ಮಗಳು ನಿನ್ನ ಊಳಿಗದ ಆಳೇ ? ಹಾಗಾದರೆ ಭಾರೀ ಕೌತುಕದ ಸಂಗತಿ ಇರಬೇಕು. ಅವಳು ಇವಳಾದ ಬಗೆಯಂತು ? ಇದನ್ನು ಕೇಳಲು ನನಗೆ ಬಹಳೇ ಕುತೂಹಲ.

**ದೇವಯಾನಿ :-** ಮಹಾರಾಜ, ಎಲ್ಲವೂ ವಿಧಿವಿಲಾಸ. ದೈವದ ಚಿತ್ತಕ್ಕೆ ಬಂದಂತೆ ನಡೆಯುವದು. ಇದರಲ್ಲಿ ಅಚ್ಚರಿ ಪಡುವದೇನೂ ಇಲ್ಲ. ಅದಿರಲಿ. ನೀನು ಯಾರು ? ನಿನ್ನ ಹೆಸರೇನು ? ನಿನ್ನ ತಂದೆ ಯಾರು ? ನಿನ್ನ ರೂಪವು ರಾಜರಂತೆ. ವೇಷಭೂಷಣಗಳು ಆ ರಾಜಠೀವಿಗೆ ಒಪ್ಪುವಂತೆ ಇವೆ. ಆದರೆ ನಿನ್ನ ಮಾತು ಮಾತ್ರ ಬ್ರಹ್ಮಜ್ಞಾನಿಯಂತೆ. ಅಂಥ ದಿವ್ಯಜ್ಞಾನವಿಲ್ಲದೆ ಇಂಥ ಮಾತು ಹೊರಬರಲಾರದು. ಅದಕ್ಕಾಗಿಯೇ ನನಗೆ ಕುತೂಹಲ ನೀನು ಯಾರು ಎಂಬುದನ್ನು ತಿಳಿಯಲು.

**ಯಯಾತಿ :-** ಸುಂದರಿ, ನೀನು ಅಂದದ್ದು ನಿಜ. ನಾನು ಬಹುಕಾಲ ಬ್ರಹ್ಮಚರ್ಯದಿಂದ ಸಮಗ್ರ ವೇದರಾಶಿಯನ್ನೆಲ್ಲ ಅಧ್ಯಯನಮಾಡಿದೆ. ಆದರೆ ಜಾತಿಯಿಂದ ಮಾತ್ರ ನಾನು ಕ್ಷತ್ರಿಯ. ಹಿಂದೆ ರಾಜಕುಮಾರನಾಗಿದ್ದೆ. ಈಗ ಸ್ವಯಂ ನಾನೇ ರಾಜನಾಗಿದ್ದೇನೆ. ಯಯಾತಿ ಎಂದು ನನ್ನ ಹೆಸರು.

**ದೇವಯಾನಿ :-** ತಾವು ಈ ಕಾಡಿಗೆ ದಯಮಾಡಿಸಿದ ಕಾರಣ ? ಬೇಟೆಯ ನಾದವೊ ? ಅಥವಾ ಬಾಯಾರಿಕೆಯೋ ?

**ಯಯಾತಿ :-** ಈ ವನಕ್ಕೆ ಬಂದದ್ದು ಬೇಟೆಗಾಗಿ, ನೀವಿದ್ದ ಬನಕ್ಕೆ ಬಂದದ್ದು ನೀರಿಗಾಗಿ. ನಿನ್ನ ಪ್ರಶ್ನೆಗಳೇ ಬಹಳಾದವು. ಇನ್ನು ಕೇಳುವದು ಸಾಕು. ಹೇಳುವದೇನಾದರೂ ಇದ್ದರೆ ಹೇಳು. ನಿನ್ನ ಮಾತನ್ನು ನಾನು ನಡೆಸಿಕೊಡುತ್ತೇನೆ.

**ದೇವಯಾನಿ :-** ಇವರು ಎರಡು ಸಾವಿರ ಕನ್ಯೆಯರು. ಅವರ ಒಡತಿ ಶರ್ಮಿಷ್ಠೆ. ಅವಳು ನನ್ನ ಅಧೀನಳು. ನನ್ನ ದಾಸಿ. ಅವರೆಲ್ಲರೂ ಸಹಿತವಾಗಿ ನಾನು ಇಂದಿನಿಂದ ನಿನ್ನ ದಾಸಿ. ನಿನಗೆ ಒಳ್ಳೆಯದಾಗುವದು. ನನ್ನನ್ನು ವರಿಸಿ ಪತಿಯಾಗು.

**ಯಯಾತಿ :-** ಗುರುಪುತ್ರಿ ನಿನಗೆ ಕಲ್ಯಾಣವಾಗಲಿ. ನಾನು ನಿನಗೆ ತಕ್ಕವರನಲ್ಲ. ನಿಮ್ಮ ತಂದೆಯು ಕ್ಷತ್ರಿಯನಾದ ನನಗೆ ನಿನ್ನನ್ನು ಕೊಟ್ಟು ಮದುವೆ ಮಾಡಲಾರ.

**ದೇವಯಾನಿ :-** ಮಹರಾಜ, ಬ್ರಾಹ್ಮಣ ಹಾಗೂ ಕ್ಷತ್ರಿಯರಲ್ಲಿ ಹಿಂದೆ ಎಷ್ಟೋ ಶರೀರ ಸಂಬಂಧಗಳು ನಡೆದು ಹೋಗಿವೆ. ಮೇಲಾಗಿ ನೀನು ರಾಜನಾದರೂ ಋಷಿಯಂತೆಯೇ ಇರುವೆ. ನಿಮ್ಮ ತಂದೆಯು ರಾಜಋಷಿ ಎನಿಸಿದ್ದ. ಆದುದರಿಂದ ನೀನೊಬ್ಬ ಋಷಿಪುತ್ರ. ನಾನೊಬ್ಬ ಋಷಿಯ ಪುತ್ರಿ. ಸಂಬಂಧಕ್ಕೆ ಏನೂ ಆತಂಕವಿಲ್ಲ.

**ಯಯಾತಿ** :- ರೂಪಸಿಯೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನೂ ಭಗವಂತನು ಬೇರೆ ಬೇರೆಯಾಗಿಯೇ ಸೃಷ್ಟಿಸಿದ್ದಾನೆ. ಅವರ ಆಚಾರ ವಿಚಾರ ವ್ಯವಹಾರಗಳೆಲ್ಲವೂ ಭಿನ್ನಭಿನ್ನವಾಗಿಯೇ ಇವೆ. ಆ ನಾಕು ವರ್ಣದವರಲ್ಲಿ ಬ್ರಾಹ್ಮಣನೇ ಸರ್ವ ಶ್ರೇಷ್ಠ ಅಂದ ಬಳಿಕ ......

**ದೇವಯಾನಿ** :- ನಹುಷ ಕುಮಾರನೇ, ನಿಜ ಹೇಳಬೇಕೆಂದರೆ ಮೊದಲು ನನ್ನ ಕೈ ಹಿಡಿದವನು ನೀನೇ. ನೀರಿಲ್ಲದ ಬಾವಿಯಿಂದ ನೀನು ನನ್ನನ್ನು ಕೈ ನೀಡಿ ಎತ್ತಿದ್ದನ್ನು ನೆನೆದುಕೋ. ನಿನ್ನ ಹೊರತು ಇಂದಿನವರೆಗೆ ಬೇರೆ ಯಾವ ಗಂಡಸೂ ಈ ನನ್ನ ಕೈಯನ್ನು ಮುಟ್ಟಿಲ್ಲ. ಒಮ್ಮೆ ನೀನು ನನ್ನ ಕೈ ಹಿಡಿದ ಬಳಿಕ ಅದನ್ನು ನಾನು ಬೇರೆಯವರಿಗೆ ಹೇಗೆ ಕೊಡಲಿ? ನೀನು ಋಷಿಯೇ ಇರಲಿ. ರಾಜನೇ ಇರಲಿ. ನಿನ್ನನ್ನೇ ವರಿಸಿದ್ದೇನೆ. ನೀನೇ ನನ್ನ ಪತಿ.

**ಯಯಾತಿ** :- ಪೂತ್ಕರಿಸುವ ಹಾವು, ಕಿಚ್ಚಾಡುವ ಬೆಂಕಿ ಇವುಗಳನ್ನು ಎದುರಿಸಬಹುದು. ಆದರೆ ವಿವೇಕಿ ಮನುಷ್ಯನು ಬ್ರಾಹ್ಮಣರನ್ನು ಮಾತ್ರ ವಿರೋಧಿಸಿ ಬಾಳಲಾರನು. ಹೆಡೆಎತ್ತಿದ ಹಾವು ಕಚ್ಚಿದರೆ ಒಬ್ಬನು ಸಾಯಬಹುದು. ಶಸ್ತ್ರಾಸ್ತ್ರಗಳಿಂದಲೂ ಅಷ್ಟೇ! ಆದರೆ ಬ್ರಾಹ್ಮಣನು ಕ್ಷೋಭೆಗೊಂಡರೆ ರಾಷ್ಟ್ರವೆಲ್ಲವೂ ವಿನಾಶ ಹೊಂದುವದು. ಆದುದರಿಂದ ನಿನ್ನ ತಂದೆ ಬಂದು ಮದುವೆಮಾಡಿ ಕೊಡುವವರೆಗೆ ನಾನು ನಿನ್ನನ್ನು ವರಿಸಲಾರೆ.

**ದೇವಯಾನಿ** :- ಮಹಾರಾಜ, ನಾನಂತೂ ನಿನ್ನನ್ನು ವರಿಸಿದ್ದೇನೆ. ನೀನಾಗಿ ನನ್ನ ತಂದೆಯನ್ನು ಕೇಳಬೇಡ. ಅವನು ತಾನಾಗಿ ಧಾರೆ ಎರೆದುಕೊಟ್ಟರೆ ನನ್ನನ್ನು ಮದುವೆಯಾಗಲು ಭಯವಿಲ್ಲವಷ್ಟೇ ?

**ಶೌನಕ** :- ಹೀಗೆ ಹೇಳಿ ದೇವಯಾನಿಯು ತನ್ನ ದೂತಿಯನ್ನು ತಂದೆಯ ಬಳಿಗೆ ಓಡಿಸಿದಳು. ವನಾಂತರಾಳದಲ್ಲಿ ನಡೆದ ಆ ಅವಾಂತರವನ್ನು ಕೇಳಿ ಆಚಾರ್ಯರು ಅಲ್ಲಿಗೇ ದಯಮಾಡಿಸಿದರು. ಯಯಾತಿ ದೀರ್ಘದಂಡಹಾಕಿದ, ಕೈಜೋಡಿಸಿದ. ತಲೆತಗ್ಗಿಸಿ ಬಳಿಯಲ್ಲಿ ನಿಂತುಕೊಂಡ. ಶುಕ್ರಾಚಾರ್ಯರು ಲೋಕಾಭಿರಾಮವಾಗಿ ಅವನನ್ನು ಮಾತನಾಡಿಸಿದರು. ಆಗ ದೇವಯಾನಿಯು ತುಸು ಮುಂದೆ ಬಂದು ತಂದೆಗೆ ಹೇಳಿದರು. ''ಅಪ್ಪ, ನಹುಷ ರಾಜನ ಮಗ ಯಯಾತಿ ಈ ದೊರೆ. ಕಟ್ಟಡವಿಯಲ್ಲಿಯ ಕಾಳಕೂಪದಿಂದ ನನ್ನನ್ನು ಮೇಲೆತ್ತಿ ಬದುಕಿಸಿದ ಪುಣ್ಯಾತ್ಮನು ಇವನೇ. ಒಮ್ಮೆ ನನ್ನ ಕೈಹಿಡಿದು ಕಾಪಾಡಿದ ಇವನಿಗೇ ನನ್ನನ್ನು ಕೊಟ್ಟು ಮದುವೆ ಮಾಡಿಬಿಡು. ತಂದೆಯೇ ನಾನು ನಿನಗೆ ನಮಸ್ಕಾರ ಮಾಡುತ್ತೇನೆ. ಇವನ ಹೊರತು ಬೇರಾರನ್ನೂ ನಾನು ಮದುವೆ ಆಗಲಾರೆ.

**ಶುಕ್ರ** :- ವೀರನಾದ ಯಯಾತಿಯೇ, ನನ್ನ ಮಗಳಾದ ಈ ದೇವಯಾನಿಯು ನಿನ್ನನ್ನು ಒಲಿದು ವರಿಸಿದ್ದಾಳೆ. ನಾನು ಪ್ರೀತಿಯಿಂದ ಧಾರೆ ಎರೆದು ಕೊಡುವೆ. ಸ್ವೀಕರಿಸು. ನಿನ್ನ ಪಟ್ಟದರಸಿಯನ್ನಾಗಿ ಮಾಡಿಕೋ.

**ಯಯಾತಿ** :- ಬ್ರಹ್ಮರ್ಷಿಗಳೇ, ತಮ್ಮ ಅಪ್ಪಣೆ ನನಗೆ ಶಿರಸಾಮಾನ್ಯ. ಆದರೆ ಇದು ವರ್ಣಸಂಕರವಾಗುತ್ತದೆ. ಆ ಪಾಪವು ನನಗೂ ತಟ್ಟದಂತೆ ಇವಳನ್ನೂ ಮುಟ್ಟದಂತೆ ನೋಡಿಕೊಳ್ಳುವ ಭಾರ ನಿಮ್ಮದು.

**ಶುಕ್ರಾಚಾರ್ಯ** :- ನಿಮ್ಮಿಬ್ಬರಿಗೂ ಪಾಪಲೇಪವಾಗದಂತೆ ಮಾಡುತ್ತೇನೆ. ಮೆಲುನಗೆಯನ್ನು ಸೂಸುವ ಈ ದೇವಯಾನಿಯನ್ನು ಧರ್ಮಪತ್ನಿ ಎಂದು ಅಂಗೀಕರಿಸು. ಇವಳೊಡನೆ ಒಲವಿನಿಂದ ಇದ್ದು ನೇಹನಲುವುಗಳನ್ನು ಪಡೆದು ಸುಖಿಯಾಗಿ ಬಾಳು. ಆದರೆ ಇವಳೊಡನೆ ಇವಳ ಸೇವೆಗಾಗಿ ನಿನ್ನ ಮನೆಗೆ ಬರಲಿರುವ ಶರ್ಮಿಷ್ಠೆಯನ್ನೂ ನೀನು ಚೆನ್ನಾಗಿ ನೋಡಿಕೋ. ಆದರೆ ಎಂದೂ ಅವಳನ್ನು ಹಾಸಿಗೆಗೆ ಮಾತ್ರ ಕರೆಯಬೇಡ.

**ಶೌನಕ** :- ಶುಕ್ರಾಚಾರ್ಯರ ಆದೇಶವನ್ನು ತಲೆಯಮೇಲೆಹೊತ್ತು, ದೇವಯಾನಿಯನ್ನು ವಿವಾಹವಾಗಿ, ಶುಕ್ರಾಚಾರ್ಯರಿಗೆ ನಮಸ್ಕರಿಸಿ, ಆನಂದದಿಂದ ತನ್ನ ರಾಜಧಾನಿಗೆ ಯಯಾತಿಯು ತೆರಳಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿದುದು*



## ಬಟ್ಟೆಕಸಿದ ಶರ್ಮಿಷ್ಠೆಯ ಬದುಕೇ ಮಾರಾಬಟ್ಟೆ. ಮತ್ತೆ ಬದುಕು ಬಂಗಾರವಾಯಿತು

**ಅಧ್ಯಾಯ - ೩೨**

**ಶೌನಕ ಉವಾಚ**

**ಯಯಾತಿಃ ಸ್ವಪುರಂ ಪ್ರಾಪ್ಯ ಮಹೇಂದ್ರಪುರಸನ್ನಿಭಂ !**
**ಪ್ರವಿಶ್ಯಾಂತಃಪುರಂ ತತ್ರ ದೇವಯಾನೀಂ ನ್ಯವೇಶಯತ್ ॥**

ಯಯಾತಿ ಊರಿಗೆ ಬಂದ. ಅವನ ರಾಜಧಾನಿ ಅಮರಾವತಿಗೆ ಹೆಗಲೆಣೆ. ದೇವಯಾನಿಯನ್ನು ತನ್ನ ಅರಮನೆಯ ಅಂತಃಪುರದಲ್ಲಿ ತಂದಿರಿಸಿದ. ಅವಳ ಅಪ್ಪಣೆಯ ಮೇರೆಗೆ ಶರ್ಮಿಷ್ಠೆಯನ್ನು ಅರಮನೆಯ ಅಶೋಕ ಉದ್ಯಾನದ ಬಳಿ ಒಂದು ಮನೆಮಾಡಿ ಇಟ್ಟ. ಅವಳಿಗೂ ಬೇಕು ಬೇಕಾದ ಬಟ್ಟೆ ಬಂಗಾರ ಕೊಟ್ಟ. ಉಣಿಸು, ತಿನಿಸು, ಇರವು, ನೆರವು, ಯಾವುದಕ್ಕೂ ಏನೂ ಕೊರತೆಯಾಗದಂತೆ ಏರ್ಪಾಟುಮಾಡಿದ. ದೇವಯಾನಿಯ ಜೊತೆಗೆ ತಾನು ಬಹುವರ್ಷಗಳ ಕಾಲ ದಾಂಪತ್ಯ ಜೀವನದ ಸುಖವನ್ನು ಅನುಭವಿಸಿದ. ಋತುಕಾಲವು ಬಂದಾಗ ದೇವಯಾನಿಯು ಗರ್ಭಿಣಿಯಾಗಿ ಚೊಚ್ಚಿಲು ಗಂಡುಮಗುವನ್ನು ಹೆತ್ತಳು. ವರ್ಷಗಳು ಉರುಳಿದವು. ಶರ್ಮಿಷ್ಠೆಗೂ ಒಳ್ಳೇ ಪ್ರಾಯ. ಅವಳು ವಾಸಿಸಿದ ವನದ ತುಂಬೆಲ್ಲ ಚೈತ್ರ ಚುಂಬನ. ವನರೋಮಾಂಚನ. ಎಲ್ಲಕಡೆಗೂ ಹೂವಿನ ಸುಗ್ಗಿ. ಒಲವಿನ ಬುಗ್ಗಿ.

ಶರ್ಮಿಷ್ಠೆಯ ಅಂತರಂಗದಲಿ ಚಿಂತೆಯ ಕೊರೆತ. ''ವಸಂತ ಮಾಸವು ಬಂದಿದೆ. ನನಗೆ ಯೌವನವೂ ಬಂದಿದೆ. ಆದರೆ ಮಾಡುವದೇನು ! ನಾನು ಆಜನ್ಮದಾಸಿ. ನನ್ನ

ಆಯುಷ್ಯದಲ್ಲಿ ಪತಿಯ ಸುಖವೇ ಇಲ್ಲವೇ ! ಅಯ್ಯೋ ಇದೆಂಥ ಬಾಳು ! ನನ್ನ ಜೀವನವೇ ಹಾಳು. ನನ್ನ ಗೆಳತಿ ದೇವಯಾನಿಯು ಗಂಡು ಹೆತ್ತಳು. ಆದರೆ ನನ್ನ ಗತಿ ? ದೇವರು ನನಗೆ ಯೌವನವನ್ನಾದರೂ ಏಕೆ ಕೊಟ್ಟನೋ ! ನನ್ನ ಈ ತಾರುಣ್ಯ ಲಾವಣ್ಯ ಎಲ್ಲವೂ ವ್ಯರ್ಥ. ಏನು ಮಾಡಲಿ ! ದೇವಯಾನಿ ವರಿಸಿದಂತೆ ನಾನೂ ಆ ಯಯಾತಿಯನ್ನೇ ವರಿಸಿ ಬಿಡಲೇ ! ದಾಸಿಯಾಗಿ ಮನೆಗೆ ಕರೆತಂದ ಅವನು ನನಗೆ ಪುತ್ರದಾನ ಮಾಡುವದೂ ಕರ್ತವ್ಯವೇ ಆಗಿದೆ. ಕೇಳಿದರೆ ಅವನು ನಿರಾಕರಿಸಲಿಕ್ಕಿಲ್ಲ. ಆದರೆ ದೇವಯಾನಿಯ ಕಣ್ಣು ತಪ್ಪಿಸಿ ಕೇಳುವದೆಂತು ? ಹೇಳುವದೆಂತು ?

ಶರ್ಮಿಷ್ಠೆಯು ಹೀಗೆ ಚಿಂತಿಸುತ್ತಿರುವಾಗ ಯಯಾತಿ ಮಹಾರಾಜನು ಅಕಸ್ಮಾತ್ತಾಗಿ ಆಗಮಿಸಿದ. ಪುಣ್ಯಕ್ಕೆ ಅವನ ಜೊತೆಗೆ ಯಾರೂಯಾರೂ ಇಲ್ಲ. ವನಾಂತರ, ಏಕಾಂತ, ಒಬ್ಬಂಟಿಗನಾದ ಅರಸು. ಶರ್ಮಿಷ್ಠೆಯ ತುಟಿಯ ತುದಿಯಲ್ಲಿ ನಸುನಗೆ, ಕಣ್ಣನಲ್ಲಿ ಕೃತಜ್ಞತೆ, ಅಡಿಗಡಿಗೆ ಸಂಭ್ರಮ. ಆದರೂ ಕೈಜೋಡಿಸಿ ನಾಚುತ್ತ ನುಡಿದಳು. "ಮಹಾಪ್ರಭು, ನಿನ್ನ ಮನೆಯಲ್ಲಿ ಇದ್ದ ನಾರಿಯನ್ನು ಇಂದ್ರ ಚಂದ್ರರೂ ನೋಡಲಾರರು. ವಾಯು ವರುಣರೂ ಮುಟ್ಟಲಾರರು. ಮಿಕ್ಕವರ ಪಾಡೇನು ! ನಿನ್ನ ಬಂಧಿಯಾಗಿ ಬಂದು ಇಲ್ಲಿ ಇರುವ ನನ್ನ ವ್ಯಥೆ, ಕಥೆ, ಸ್ಥಿತಿ ಗತಿ, ಎಲ್ಲವೂ ನಿಮಗೆ ತಿಳಿದಿದೆ. ನನ್ನ ಒಲವು ಚೆಲುವು, ಕುಲಶೀಲಗಳನ್ನು ನೀವು ಚೆನ್ನಾಗಿ ಬಲ್ಲಿರಿ. ಆದುದರಿಂದ ನಾನು ತಮ್ಮಲ್ಲಿ ಸೆರೆಗೊಡ್ಡಿ ಬೇಡಿಕೊಳ್ಳುತ್ತೇನೆ. ದಯದೋರಿರಿ. ಕೃಪಾದೃಷ್ಟಿಯನ್ನು ಬೀರಿರಿ. ಪ್ರಣಯಭಿಕ್ಷೆಯನ್ನು ನೀಡಿರಿ."

**ಯಯಾತಿ :-** ರಾಜಪುತ್ರಿ, ನಿನ್ನ ಶೀಲ ಸಂಪದಗಳನ್ನು ನಾನು ಅರಿಯನೇ! ನಿನ್ನ ರೂಪವಂತೂ ಅಪರೂಪ. ಕುರೂಪಕ್ಕೆ ನಿನ್ನಲ್ಲಿ ಅವಕಾಶವೇ ಇಲ್ಲ. ಅದರೆ ಏನು ಮಾಡಲಿ! ದೇವಯಾನಿಯನ್ನು ಕೊಡುವ ಕಾಲದಲ್ಲಿ ಶುಕ್ರಾಚಾರ್ಯರು ನನಗೆ ಕಟ್ಟಪ್ಪಣೆ ಮಾಡಿದ್ದಾರೆ. ಇವಳನ್ನು ಶಯನ ಸಖಿಯನ್ನಾಗಿ ಮಾಡಿಕೊಳ್ಳಬೇಡಾ ಎಂದು.

**ಶರ್ಮಿಷ್ಠೆ :-** ಮಹಾರಾಜ, ನೀನು ಶುಕ್ರಾಚಾರ್ಯರಿಗೆ ನನ್ನನ್ನು ಮುಟ್ಟುವದಿಲ್ಲ ಎಂದು ಮಾತು ಕೊಟ್ಟಿದೇನೋ ನಿಜ. ಆದರೆ ಈಗ ಅದನ್ನು ಮೀರಿದರೂ ಅಧರ್ಮವಾಗುವದಿಲ್ಲ. ಸುಳ್ಳು ಮಾತನಾಡಿದಂತಾಗುವದಿಲ್ಲ. ಶಾಸ್ತ್ರಕಾರರು ಕೆಲವು ಸುಳ್ಳುಗಳಿಗೆ ರಿಯಾಯತಿ ಕೊಟ್ಟಿದ್ದಾರೆ. ವಿಹಾರ ಕಾಲದಲ್ಲಿಯೂ, ವಿವಾಹಕಾಲದಲ್ಲಿಯೂ, ವನಿತೆಯರೊಡನೆ ಒಡನಾಟದಲ್ಲಿಯೂ, ಪ್ರಾಣಾಂತಕಪ್ರಸಂಗದಲ್ಲಿಯೂ, ಸಂಪತ್ತೆಲ್ಲ ಕಳೆದುಹೋಗುವ ಸಂದರ್ಭದಲ್ಲಿಯೂ ಸುಳ್ಳುಆಡಿದರೆ ಅಡ್ಡಿಇಲ್ಲ. ಈ ಐದು ಸಂದರ್ಭಗಳಲ್ಲಿ ಯಾವದಾದರೂ ಒಂದಿದ್ದರೂ ಸುಳ್ಳು ಆಡಬಹುದಂತೆ. ಈಗ ಐದೂ ಕಾರಣವುಂಟು. ಇಲ್ಲಿ ಇದು ನನ್ನ ವಿವಾಹಕಾಲವೂ ಅಹುದು. ವಿಹಾರಕಾಲವೂ ಸರಿ, ನಾನು ಸ್ತ್ರೀ. ಬಿಟ್ಟರೆ ನನ್ನ ಪ್ರಾಣ ಹೋಗುವದು. ನನ್ನ ಸುಖಸಂಪದ ಬದುಕು ಭಾಗ್ಯ ಎಲ್ಲವೂ ಸತ್ಯಾನಾಶವಾಗುವದು. ಮಹಾರಾಜ, ಸುಳ್ಳು ಎಲ್ಲಿ ಅಧರ್ಮವೆಂದರೆ, ಕಂಡದ್ದನ್ನು ಬಿಟ್ಟು ಕಾಣದ್ದನ್ನು ಹೇಳಿ ಒಬ್ಬರನ್ನು

ಮುಳುಗಿಸಿದರೆ ಅದು ಅಧರ್ಮ ಮಹಾಪಾಪ. ಸ್ವಾರ್ಥಸಾಧನೆಗಾಗಿ ಸುಳ್ಳಾಡಿದರೂ ಪಾಪ. ಆದರೆ ಓರ್ವ ಅನಾಥಹೆಣ್ಣಿನ ಕಣ್ಣೀರನ್ನು ಒರಿಸಿ ದುಃಖವನ್ನು ದೂರಮಾಡಲಿಕ್ಕಾಗಿ ಸುಳ್ಳಾಡಿದರೆ ಪಾಪ ಬರುವದಿಲ್ಲ.

**ಯಯಾತಿ** :- ಜನರಿಗೆಲ್ಲ ರಾಜನೇ ಪ್ರಮಾಣ. ಅವನು ಸುಳ್ಳಾಡಿದರೆ ಮಹಾ ಅನರ್ಥ. ಆದುದರಿಂದ ಎಷ್ಟು ಕಷ್ಟವಾದರೂ ಹುಸಿ ನುಡಿಯಲಾರೆ.

**ಶರ್ಮಿಷ್ಠಾ** :- ತನ್ನ ಪತಿ, ಗೆಳತಿಯ ಪತಿ ಇಬ್ಬರೂ ಸಮ. ಗೆಳತಿಯ ಗಂಡ ನನಗೂ ಗಂಡನಿದ್ದಂತೆಯೇ.

**ಯಯಾತಿ** :- ಆಗಲಿ. ಮುಂದೇನು? ನಿನಗೆ ಏನು ಬೇಕು ಬೇಡು. ಕೊಡಲು ನಾನು ಸಿದ್ಧ.

**ಶರ್ಮಿಷ್ಠೆ** :- ರಾಜನ್, ನನಗೆ ಧರ್ಮಬೇಕು. ಧರ್ಮಕ್ಕಾಗಿ ಮಗಬೇಕು. ಮಗನಿಗಾಗಿ ನೀನು ಬೇಕು. ನಿನ್ನ ಧರ್ಮಪತ್ನಿಯಾಗಿ ಮಗನನ್ನು ಪಡೆದು ಧರ್ಮವನ್ನು ಸಂಪಾದಿಸುವೆ. ಹೆಂಡತಿಯ ಸೊತ್ತು ತನ್ನ ಸೊತ್ತು ಎಂದು ಹಿರಿಯರು ಹೇಳುವರು. ನಾನು ದೇವಯಾನಿಯ ಸೊತ್ತು ತೊತ್ತು. ಅಂದ ಬಳಿಕ ನಿನ್ನ ಸೊತ್ತೂ ಆದಂತಾಯಿತು. ಆದುದರಿಂದ ಅವಳ ದಾಸಿಯಾದ ನನ್ನನ್ನು ನಿಮ್ಮ ದಾಸಿಯನ್ನೂ ಮಾಡಿಕೊಂಡು ಉದ್ಧರಿಸಿರಿ.

**ಶೌನಕ** :- ಶರ್ಮಿಷ್ಠೆಯ ಮಾತು ಯಯಾತಿಗೆ ನ್ಯಾಯವಾಗಿ ಕಂಡಿತು. ಇದರಲ್ಲಿ ಅಧರ್ಮವೇನೂ ಇಲ್ಲ, ಎಂದು ಅವನಿಗೆ ಎನಿಸಿತು. ಆದುದರಿಂದ ಅವನು ಅವಳ ಮಾತಿಗೆ ಸಮ್ಮತಿಸಿದ. ನಲುಮೆದುಂಬಿ ಅವಳ ಪ್ರಣಯ ಪ್ರಾರ್ಥನೆಯನ್ನು ಪೂರೈಯಿಸಿದ. ಅದರಿಂದ ಕೆಲವೇ ದಿನಗಳಲ್ಲಿ ಶರ್ಮಿಷ್ಠೆಯೂ ಗರ್ಭಿಣಿಯಾಗಿ ಚೊಚ್ಚಿಲು ಗಂಡು ಮಗುವನ್ನು ಹೆತ್ತಳು. ಮರಿಸೂರ್ಯನಂತೆ ತೇಜಃಪುಂಜವಾಗಿತ್ತು ಆ ಮಗು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿದುದು*

—○—

## ಮಗಳ ಕೋಪ, ತಂದೆಯ ಶಾಪ. ಮುದುಕನಾದ ಅಳಿಯ ಪಾಪ.

**ಅಧ್ಯಾಯ - ೩೩**

**ಶೌನಕ ಉವಾಚ**

**ಶ್ರುತ್ವಾಕುಮಾರಂ ಜಾತಂಸಾದೇವಯಾನೀ ಶುಚಿಸ್ಮಿತಾ**
**ಚಿಂತಯಾವಿಚಷ್ಟ ದುಃಖಾರ್ತಾ ಶರ್ಮಿಷ್ಠಾಂಪ್ರತಿಭಾರತ ॥**

ಶರ್ಮಿಷ್ಠೆಗೆ ಮಗು ಹುಟ್ಟಿದ್ದನ್ನು ಕೇಳಿ ದೇವಯಾನಿಗೆ ಭಾರೀ ಚಿಂತೆ, ಬಹಳ ದುಃಖ, ಮೇಲೆ ಸಂದೇಹ. ಎಲ್ಲ ಒಗ್ಗೂಡಿ ಶರ್ಮಿಷ್ಠೆಯ ಬಳಿಗೇ ನುಗ್ಗಿ ಕೇಳಿದಳು. ''ಗೆಳತಿ, ಇಂಥ ಪಾಪದ ಕೆಲಸವನ್ನು ಏಕೆ ಮಾಡಿದೆ ! ಕಾಮಲೋಲುಪತೆಯಿಂದ ನೀನು ಕೀಳುಮಾರ್ಗಕ್ಕೆ ಇಳಿದೆಯಾ !''

**ಶರ್ಮಿಷ್ಠೆ :-** ನಗುಮುಖದ ನಾರಿಯೇ, ನನ್ನ ಮನೆಗೆ ವೇದ ಪಾರಂಗತನಾದ ಒಬ್ಬ ಋಷಿಯು ಬಂದಿದ್ದನು. ಧರ್ಮನಿಷ್ಠನಾದ ಆ ಮಹರ್ಷಿಗೆ ನಾನು ಪುತ್ರವರವನ್ನು ಕೇಳಿ ಕೊಂಡೆನು. ಧರ್ಮಕ್ಕೆ ಲೋಪಬಾರದಂತೆ ಅವನು ನನಗೆ ಈ ಸಂತಾನವನ್ನು ಕರುಣಿಸಿದ್ದಾನೆ. ಧರ್ಮ ಬಿಟ್ಟು ವಾಮಮಾರ್ಗ ಹಿಡಿದು ಕಾಮಕೇಳಿಯಾಡುವ ಕೀಳು ಹೆಣ್ಣು ನಾನಲ್ಲ.

**ದೇವಯಾನಿ :-** ಹಾಗಿದ್ದರೆ ನನಗೆ ನಿನ್ನ ಮೇಲೆ ಸಿಟ್ಟಿಲ್ಲ. ಇಂಥ ಸರ್ವಶ್ರೇಷ್ಠನಾದ ಹಿರಿಯ ಬ್ರಾಹ್ಮಣನಿಂದಲೇ ನೀನು ಮಗನನ್ನು ಪಡೆದಿದ್ದರೆ ಬಹಳ ಸಂತೋಷ. ಆದರೆ ಆ ಬ್ರಾಹ್ಮಣನ ಹೆಸರೇನು ? ಗೋತ್ರವಾವುದು ?

**ಶರ್ಮಿಷ್ಠೆ :-** ಒಡತಿಯೇ ! ಆ ಋಷಿಯು ರವಿಯಂತೆಯೇ ತೇಜಸ್ವಿ. ಅವನ ಕಾಂತಿಪುಂಜವನ್ನು ಕಂಡು ನಿಬ್ಬೆರಗಾಗಿ ನಿಂತುಕೊಂಡ ನನಗೆ ಅವನ ಹೆಸರು ದೆಶೆಗಳನ್ನು ಕೇಳಲಿಕ್ಕೆ ಶಕ್ತಿಯೇ ಉಳಿಯಲಿಲ್ಲ. ಪುರಸತ್ತೂ ಆಗಲಿಲ್ಲ.

**ಶೌನಕ :-** ಹೀಗೆ ಮಾತನಾಡಿಕೊಂಡು ಅವರಿಬ್ಬರೂ ನಕ್ಕುಬಿಟ್ಟರು. ಶರ್ಮಿಷ್ಠೆ ಹೇಳಿದ ಮಾತೆಲ್ಲ ನಿಜವೆಂದು ನಂಬಿ ದೇವಯಾನಿಯು ಮನೆಗೆ ನಡೆದಳು. ಯಯಾತಿ ದೇವಯಾನಿಯಲ್ಲಿ ಯದು, ತುರ್ವಸು ಎಂಬ ಇಬ್ಬರು ಮಕ್ಕಳನ್ನು ಪಡೆದನು. ಶರ್ಮಿಷ್ಠೆಯಲ್ಲಿ ಅವನಿಗೆ ದ್ರುಹ್ಯು, ಅನು, ಪುರು ಎಂದು ಮೂವರು ಮಕ್ಕಳಾದರು.

ಒಂದು ದಿನ ದೇವಯಾನಿಯು ಯಯಾತಿಯೊಡನೆ ಒಂದು ಅರಣ್ಯದಲ್ಲಿ ವನವಿಹಾರಕ್ಕೆ ಹೋಗಿದ್ದಳು. ಬನದ ಬಸಿರಿನಲ್ಲಿ ಆ ಹಚ್ಚು ಹಸಿರಿನಲ್ಲಿ ಮೂರು ಮಕ್ಕಳು ಆಟ ಆಡುತ್ತಿದ್ದರು. ನೋಡಲಿಕ್ಕೆ ಮೂವರೂ ದೇವತಾ ಕುಮಾರರಂತೆ ಕಾಣುತ್ತಿದ್ದರು. ಆದರೆ ಅವರ ಶ್ರೀ ಮುಖದಲ್ಲಿ ತನ್ನ ಪತಿ ಯಯಾತಿಯದೇ ಪ್ರತಿಬಿಂಬ. ಅದೇ ರೂಪ. ಅದೇ ಕಳೆ, ಹಾಗೇ ಕಾಂತಿ, ಸಂಶಯ ಬಂದಿತು ದೇವಯಾನಿಗೆ. ಪತಿಯನ್ನು ಕೇಳಿಯೇ ಬಿಟ್ಟಳು. ''ಇವು ಯಾರ ಮಕ್ಕಳು? ಕಾಡಿನ

ಕೂಸುಗಳ ಮುಖದ ಮೇಲೆ ಇಂಥ ದಿವ್ಯಕಾಂತಿ ಎಂತು ಬಂತು? ಇವರೂ ಮೂವರು ನಿನ್ನ ಅಚ್ಚೊತ್ತಿದ ಪಡಿಯಚ್ಚುಗಳಂತಿರುವರಲ್ಲ ! ಈ ನಿನ್ನ ಸಾದೃಶ್ಯಕ್ಕೆ ಕಾರಣವೇನು ? '' ಅವಳ ಈ ಪ್ರಶ್ನೆಗೆ ರಾಜನು ತಡವರಿಸ ತೊಡಗಲು ಅವಳು ಆ ಹುಡುಗರನ್ನೇ ಕರೆದು ಕೇಳಿದಳು. ''ಮಕ್ಕಳೇ, ನಿಮ್ಮ ಹೇಸರೇನು ? ನಿಮ್ಮ ಕುಲವಾವುದು ? ನೀವು ಮೂವರು ಯಾವ ಬ್ರಾಹ್ಮಣನ ಮಕ್ಕಳು ? ನಿಮ್ಮ ತಾಯಿ ಯಾರು ? '' ಆಗ ಆ ದಿಟ್ಟ ಹುಡುಗರು ಬೆರಳಿನಿಂದ ಯಯಾತಿರಾಜನನ್ನು ತೋರಿಸಿ 'ಇವನೇ ನಮ್ಮ ತಂದೆ. ಶರ್ಮಿಷ್ಠೆಯು ನಮ್ಮ ತಾಯಿ' ಎಂದು ಹೇಳಿದರು. ಹೀಗೆ ಹೇಳಿ ಆ ಮೂವರು ಮುದ್ದು ಮಕ್ಕಳು 'ತಂದೇ ' ಎಂಬ ಸಲಿಗೆಯಿಂದ ರಾಜನ ಬಳಿಗೆ ಬಂದರು. ದೇವಯಾನಿಯ ಭಯದಿಂದ ರಾಜನು ಅವರನ್ನು ಸಮೀಪಕ್ಕೆ ಬರಗೊಡಲಿಲ್ಲ. ಆಗ ಮಕ್ಕಳು ಅಳುತ್ತ ಶರ್ಮಿಷ್ಠೆಯ ಬಳಿಗೆ ಹೋದವು. ಇದನ್ನೆಲ್ಲ ನೋಡಿ ದೇವಯಾನಿಗೆ ನಿಜಸಂಗತಿಯು ನಿಚ್ಚಳವಾಗಿ ತಿಳಿದು ಹೋಯಿತು. ಆಗ ಅವಳು ಕುಪಿತಳಾಗಿ ಶರ್ಮಿಷ್ಠೆಗೆ ಕೇಳಿದಳು - ''ನನ್ನ ದಾಸಿಯಾಗಿ ಕೊನೆಗೂ ನನಗೆ ಮೋಸ ಮಾಡಿದಿಯಾ ! ಕೊನೆಗೂ ನೀನು ನಿನ್ನ ರಾಕ್ಷಸ ಸ್ವಭಾವವನ್ನು ಬಿಡಲಿಲ್ಲ. ಇಂಥ ಪಾಪಕಾರ್ಯಕ್ಕೆ ನಿನಗೆ ಹೆದರಿಕೆಯಾಗಲಿಲ್ಲವೇ ! ಒಬ್ಬ ಋಷಿಯು ಪುತ್ರನನ್ನು ಕರುಣಿಸಿದನೆಂದು ನನ್ನ ಮುಂದೆ ಏಕೆ ಸುಳ್ಳು ಹೇಳಿದೆ ?''

**ಶರ್ಮಿಷ್ಠೆ :-** ಒಡತಿ, ನಾನು ಸುಳ್ಳು ಮಾತನಾಡಿಲ್ಲ. ''ಒಬ್ಬ ಋಷಿಯಿಂದ ಸಂತಾನ ಪಡೆದೆ '' ಎಂದು ನಿನ್ನ ಮುಂದೆ ಹೇಳಿದ್ದು ನಿಜವೇ. ಸುಳ್ಳಲ್ಲ. ಯಾಕಂದರೆ ''ಯಯಾತಿಯು ರಾಜನಾದರೂ ಋಷಿಯು ಸುಳ್ಳೆ ! ರಾಜರ್ಷಿ ಎಂದು ಅವರಿಗೆ ಹೆಸರಿಲ್ಲವೆ ! ಇದರಲ್ಲಿ ಸುಳ್ಳು ಎಲ್ಲಿ ಬಂತು ? ಗೆಳತಿಯ ಗಂಡ ತನ್ನ ಗಂಡನಿದ್ದಂತೆ '' ಎಂದು ಶಾಸ್ತ್ರವಿದೆ. ಅದಕ್ಕೆ ಅನುಸಾರವಾಗಿ ನೀನು ಯಯಾತಿಯನ್ನು ವರಿಸುವಾಗ ನಾನೂ ಅವನನ್ನು ಪತಿ ಎಂದು ಮನಸ್ಸಿನಿಂದಲೇ ವರಿಸಿಬಿಟ್ಟಿದ್ದೆ. ನೀನು ನನ್ನ ಒಡತಿ. ನಿನ್ನ ಸೇವೆಯನ್ನು ಮಾಡುವದು ನನ್ನ ಕರ್ತವ್ಯವೇ ಸರಿ. ನೀನು ನನಗೆ ಪೂಜ್ಯಳೂ ಮಾನ್ಯಳೂ ಆಗಿರುವಿ. ಆದರೆ ನಿನಗಿಂತ ಮಹಾರಾಜರು ಪೂಜ್ಯರೂ ಮಾನ್ಯರೂ ಸರಿಯಷ್ಟೆ ! ಅದಕ್ಕೆ ತಕ್ಕ ಪೂಜೆಯನ್ನು ಮಾಡಿ ನಾನು ಅವರಿಗೆ ಮಾನ ಮನ್ನಣೆಗಳನ್ನು ಸಲ್ಲಿಸಿದ್ದೇನೆ.

ಶರ್ಮಿಷ್ಠೆಯ ಸ್ಪಷ್ಟ ಮಾತುಗಳನ್ನು ಕೇಳಿ ದೇವಯಾನಿಯು ಸಿಟ್ಟಿನಿಂದ ಸಿಡಿದು ನುಡಿದಳು. ''ರಾಜನ್, ನಾನು ಇನ್ನು ಮೇಲೆ ಈ ಮನೆಯಲ್ಲಿ ಇರಲಾರೆ. ನನಗೆ ನೀನು ಕೇಡನ್ನು ಬಗೆದು ಬೇಡವಾದುದನ್ನು ಮಾಡಿದಿ '' ಎಂದು ಹೇಳಿ ಒಮ್ಮೆಲೆ ಅಲ್ಲಿಂದ ಅಳುತ್ತ ಹೊರಟುಬಿಟ್ಟಳು. ತಂದೆಯ ಕಡೆಗೆ ಹೊರಟ ಅವಳನ್ನು ಹಿಂಬಾಲಿಸಿ ಮಹಾರಾಜನು ಬೆನ್ನುಹತ್ತಿದನು. ಹಾದಿಗುಂಟ ಅವಳನ್ನು ಸಂತೈಸಲು ಪ್ರಯತ್ನಿಸಿದನು. ಆದರೂ ಅವಳ ಕೋಪ ಇಳಿಯಲಿಲ್ಲ. ಮನೆಗೆ ಮರಳಲಿಲ್ಲ. ತಂದೆಯ ಮನೆಯ ಕಡೆಗೇ ಭರದಿಂದ ಹೆಜ್ಜೆ ಹಾಕಿದಳು. ರಾಜನು ಕಣ್ಣೀರು ಕರೆಯುತ್ತ ಅವಳನ್ನು ಬೆಂಬತ್ತಿಯೇ ನಡೆದಿದ್ದ. ತಂದೆಯ ಮನೆಗೆ ಬಂದು

ಆಕ್ರೋಶಗೈದು ನುಡಿದಳು- "ಅಪ್ಪಾ, ಘಾತವಾಯಿತು. ಅಧರ್ಮವು ಗೆದ್ದಿತು. ಧರ್ಮವು ಬಿದ್ದಿತು. ಎಲ್ಲವೂ ತಿರುವು ಮುರುವು. ರಕ್ಕಸಿ ಶರ್ಮಿಷ್ಠೆ ದಾರಿಬಿಟ್ಟಳು. ಮಾರಿಯಾದಳು. ಈ ರಾಜನಿಂದಲೇ ಅವಳಿಗೆ ಮೂರು ಮಕ್ಕಳು ಜನಿಸಿದರು. ಈ ದುರ್ದೈವಿ ಧರ್ಮಪತ್ನಿಗೆ ಮಾತ್ರ ಇಬ್ಬರೇ. 'ಧರ್ಮಜ್ಞ' ಎಂದು ಆ ಮಹಾರಾಜನಿಗೆ ಪ್ರಸಿದ್ಧಿ. ಆದರೆ ಇವನು ಮಾಡುವ ಕೆಲಸ ಇಂಥ ಘೋರ. ನನಗೆ ಅಪಚಾರ. ತಂದೆಯೇ, ಇದಕ್ಕೆ ಮುಂದೇನು ಗತಿ ?"

**ಶುಕ್ರಾಚಾರ್ಯ:-**ಮಹಾರಾಜನೇ, ನೀನು ಧರ್ಮವನ್ನು ಬಲ್ಲವ, ತಿಳಿದೂ ತಳಿದೂ ನೀನು ಅಧರ್ಮಕ್ಕೆ ಇಳಿದೆ. ಈ ತಪ್ಪಿಗಾಗಿ ಮುಪ್ಪು ನಿನ್ನನ್ನು ಅಪ್ಪಿಬಿಡಲಿ.

**ಯಯಾತಿ :-** ಗುರುಗಳೇ ' ಋತುಕಾಲದಲ್ಲಿ ಹೆಣ್ಣು ಬಂದು ಸಂತಾನವನ್ನು ಕೊಡು ಎಂದು ಕೇಳಿದಾಗ ಕೊಡದಿದ್ದರೆ ಭ್ರೂಣ ಹತ್ಯಾಪಾಪವು ಬರುತ್ತದೆ' ಎಂದು ವೇದ ಓದಿದವರು ಹೇಳುತ್ತಾರೆ 'ಋತುಕಾಲದಲ್ಲಿ ಕಾಮಾತುರಳಾದ ತನಗೆ ಯೋಗ್ಯಳಾದ ಸ್ತ್ರೀಯು ಏಕಾಂತದಲ್ಲಿ ಬಂದು ಪ್ರೇಮಯಾಚನೆ ಮಾಡಿದಾಗ ಕೊಡದೇ ಇದ್ದರೆ ಬ್ರಹ್ಮ ಹತ್ಯಾಪಾಪವು ಬರುವದು ' ಎಂದು ವಿದ್ವಾಂಸರ ಹೇಳಿಕೆ. ಇವೆಲ್ಲವುಗಳನ್ನು ಕೇಳಿ ತಿಳಿದ ನಾನು ಪಾಪ ಬಂದೀತೆಂಬ ಭಯದಿಂದ ಶರ್ಮಿಷ್ಠೆಯ ಸಮಾಗಮವನ್ನು ಮಾಡಿದೆನು.

**ಶುಕ್ರಾಚಾರ್ಯ :-** ರಾಜನೇ, ಧರ್ಮದ ಹೆಸರಿನಲ್ಲಿ ಅಸತ್ಯವನ್ನು ನುಡಿದು ಪಾಪಮಾಡಿ ಕಳ್ಳತನವನ್ನು ನೀನು ಎಸಗಿರುವೆ. ನನಗೆ ಮುಖ ತೋರಿಸಬೇಡಾ. ಹೋಗು " ಎಂದು ನುಡಿದರು. ಶುಕ್ರಾಚಾರ್ಯರ ಶಾಪವು ಮಹಾರಾಜನಿಗೆ ಕೂಡಲೇ ತಗಲಿತು. ಮೈಯಲ್ಲಿ ಮುಪ್ಪು ಅಡರಿತು.

**ಯಯಾತಿ :-** ಗುರುಗಳೇ, ಇದನ್ನೇನು ಮಾಡಿದಿರಿ ? ಹರೆಯದ ಸುಖವು ನನಗೂ ದೇವಯಾನಿಗೂ ಇನ್ನೂ ಸಾಕಾಗಿಲ್ಲ. ಭೋಗಾನುರಾಗಗಳ ಈ ಅತೃಪ್ತ ಅವಸ್ಥೆಯಲ್ಲಿಯೇ ನನ್ನನ್ನು ಶಪಿಸಿ ಮುದುಕನನ್ನಾಗಿ ಮಾಡಿಬಿಟ್ಟಿರಲ್ಲ ! ಮುಂದೇನು ಗತಿ ! ದಯಮಾಡಿ ಪ್ರಸನ್ನರಾಗಿರಿ. ಮುಪ್ಪು ನನ್ನಲ್ಲಿ ಪ್ರವೇಶಿಸದಂತೆ ಮಾಡಿರಿ

**ಶುಕ್ರಾಚಾರ್ಯ :-** ರಾಜನೇ, ನಾನು ಸುಳ್ಳಾಡಲಾರೆ. ನಾನು ಕೊಟ್ಟ ಶಾಪವು ಬಿಟ್ಟಿದ್ದಲ್ಲ. ನಿನಗೆ ಬೇಕಾದರೆ ನಿನ್ನ ವಾರ್ಧಕ್ಯವನ್ನು ಯಾರದಾದರೂ ಹರೆಯದೊಂದಿಗೆ ಅದಲು ಬದಲು ಮಾಡಿಕೊಳ್ಳಬಹುದು. ನಿನಗೆ ಪ್ರಾಯವನ್ನು ಕೊಟ್ಟು ನಿನ್ನ ಮುಪ್ಪನ್ನು ಒಪ್ಪಿಕೊಂಡ ಮನುಷ್ಯನು ಕೀರ್ತಿವಂತನೂ ಪುಣ್ಯವಂತನೂ ಆಗಿ ಬಾಳುವನು. ನಿನಗೆ ತಾರುಣ್ಯವನ್ನು ಕೊಟ್ಟ ಮಗನು ಮುಂದೆ ಮಹಾರಾಜನಾಗಿ ಮೆರೆಯುವನು. ಅವನ ವಂಶವು ಬಹು ವಿಸ್ತಾರಹೊಂದುವದು. ಅವನಿಗೆ ಪೂರ್ಣಾಯುಷ್ಯವು ಪ್ರಾಪ್ತವಾಗಿ ಅತ್ಯಂತ ಕೀರ್ತಿವಂತನಾಗಿ ಬಾಳುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತಮೂರನೆಯ ಅಧ್ಯಾಯ ಮುಗಿದುದು*

—o—

ಮುಪ್ಪನ್ನು ಕೊಟ್ಟು, ತಾರುಣ್ಯವನ್ನು ತೊಟ್ಟು, ಕೊನೆಗೆ ಪಶ್ಚಾತ್ತಾಪಪಟ್ಟ.



**ಶೌನಕ ಉವಾಚ**

**ಜರಾಂ ಪ್ರಾಪ್ಯ ಯಯಾತಿಸ್ತು ಸ್ವಪುರಂ ಪ್ರಾಪ್ಯಚೈವ ಹಿ**
**ಪುತ್ರಂ ಜ್ಯೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ವಚಃ ॥**

ಯಯಾತಿಯು ಮುಪ್ಪಿನ ಮುದುಕನಾಗಿ ತನ್ನ ಊರಿಗೆ ಹಿಂದಿರುಗಿದನು. ತನ್ನ ಹಿರಿಯ ಮಗನನ್ನು ಕರೆದು ಹೀಗೆ ಹೇಳಿದನು. ''ಕುಮಾರ, ಶುಕ್ರಾಚಾರ್ಯರ ಶಾಪದಿಂದ ನನ್ನ ಮೈಗೆ ಮುಪ್ಪು ಅಡರಿದೆ. ಯೌವನ ಭೋಗದಲ್ಲಿ ನನಗೆ ಇನ್ನೂ ತೃಪ್ತಿ ಇಲ್ಲ. ಆದ್ದರಿಂದ ನನ್ನ ಮುದಿತನವನ್ನು ನೀನು ಸ್ವೀಕರಿಸಿ ನಿನ್ನ ಪ್ರಾಯವನ್ನು ನನಗೆ ಕೊಡು. ಅದರಿಂದ ಒಂದು ಸಾವಿರ ವರ್ಷ ವಿಷಯ ಭೋಗಮಾಡಿ ಮತ್ತೆ ನಿನ್ನ ತಾರುಣ್ಯವನ್ನು ನಿನಗೇ ಕೊಟ್ಟುಬಿಡುತ್ತೇನೆ.

**ಯದು :-** ಅಪ್ಪ, ಮುಪ್ಪು ಬಹಳ ಕಷ್ಟ. ಬಿಳುಪೊಡೆದ ಮೀಸೆ, ನಡುಗುವ ತಲೆ, ಬಾಗಿದಬೆನ್ನು, ಮಡಿಕೆಯಾಗಿ ಜೋತುಬಿದ್ದ ತೊಗಲು, ಯಾವ ಕಾರ್ಯವನ್ನೂ ಮಾಡಲಾರದಂತೆ ಅಶಕ್ತತೆ, ಬಚ್ಚಬಾಯಿ, ಹುಚ್ಚಮುಖ.... ಅಬ್ಬ ! ಬೇಡಪ್ಪಾ. ಆ ಮುದಿತನ. ನಿನಗೆ ನನಗಿಂತ ಹೆಚ್ಚು ಪ್ರೀತಿಯ ಮಕ್ಕಳಿದ್ದಾರೆ. ಅವರನ್ನು ಬೇರೆ ಬೇಕಾದರೆ ಕೇಳು.

**ಯಯಾತಿ :-** ''ನೀನು ನನ್ನ ಮಗನಾಗಿ ನನ್ನ ಮಾತನ್ನು ಕೇಳಲಿಲ್ಲ. ಆದುದರಿಂದ ಸೋದರ ಮಾವನ ಸಂಬಂಧದಿಂದ ನಿನ್ನ ಸಂತತಿಯು ದೂಷಿತವಾಗುವದು ! '' ಎಂದು ಶಪಿಸಿ ತುರ್ವಸು ಮತ್ತೊಬ್ಬ ಮಗನನ್ನು ಕೇಳಿದನು. ಅವನೂ ಇವನ ಮಾತಿಗೆ ಸಮ್ಮತಿಸಲಿಲ್ಲ. ಆಗ ಯಯಾತಿಯು ಕೋಪದಿಂದ '' ನಿನ್ನ ಸಂತಾನವೇ ವಿಭಿನ್ನವಾಗಲಿ ಮತ್ತು ಕಳ್ಳರು ಮಾಂಸಾಹಾರಿಗಳು ಸಂಕರಜಾತಿಯವರೂ ಪಂಚಮಹಾಪಾತಕಿಗಳೂ ಮ್ಲೇಚ್ಛರೂ ಇವರೆಲ್ಲ ನಿನ್ನ ಪ್ರಜೆಗಳಾಗಲಿ'' ಎಂದು ಶಾಪಹಾಕಿದನು. ಇದರಂತೆ ಶರ್ಮಿಷ್ಠೆಯ ಹಿರಿಯ ಮಗನಾದ ದ್ರುಹ್ಯು ಎಂಬುವವನು ತನ್ನ ತಾರುಣ್ಯವನ್ನು ಇವನಿಗೆ ಒಪ್ಪಿಸಲು ಒಪ್ಪಿಗೆಯನ್ನು ಕೊಡದಿದ್ದರಿಂದ ಯಯಾತಿಯು ಅವನಿಗೂ ಶಾಪ ಹಾಕಿದನು.

''ನೀವು ರಾಜ್ಯಾಧಿಕಾರಕ್ಕೆ ಅನರ್ಹರಾಗಿರಿ. ವಿಷಯಸುಖವು ನಿನಗೆ ದೊರಕದಂತಾಗಲಿ. ನಿನ್ನ ದೇಶವೆಲ್ಲ ಜಲಮಯವಾಗಿ ನೌಕೆ ತೆಪ್ಪಗಳಿಲ್ಲದೆ ಪಾದಸಂಚಾರಕ್ಕೆ ಅಯೋಗ್ಯವಾಗಲಿ.'' ಇದರಂತೆ ಶರ್ಮಿಷ್ಠೆಯ ಎರಡನೇ ಮಗನಿಗೂ ತನ್ನ ಮಾತನ್ನು ಕೇಳದ್ದಕ್ಕಾಗಿ ಯಯಾತಿಯು ಶಾಪಕೊಟ್ಟನು.

"ಅನುಕುಮಾರ, ನೀನು ಯೌವನ ಸುಖದ ಆಶೆಯಿಂದ ನನಗೆ ನಿನ್ನ ತಾರುಣ್ಯವನ್ನು ಕೊಡಲು ಒಪ್ಪಲಿಲ್ಲ. ಆದರೆ ನಿನಗೆ ಈ ನವತಾರುಣ್ಯದಲ್ಲಿಯೇ ಮುಪ್ಪಿನ ಎಲ್ಲ ದೋಷಗಳು ಬರಲಿ. ನಿನ್ನ ಸಂತತಿಯವರು ತಾರುಣ್ಯದಲ್ಲಿಯೇ ಮರಣಹೊಂದಲಿ. ನೀನು ಕೂಡ ಯೌವನದಲ್ಲಿಯೇ ಮರಣಹೊಂದು."

ಕೊನೆಗೆ ಶರ್ಮಿಷ್ಠೆಯ ಕನಿಷ್ಠ ಮಗನಾದ ಪುರೂವಿನ ಬಳಿಗೆ ಬಂದು ತನ್ನ ಮುಪ್ಪನ್ನು ತೆಗೆದುಕೊಂಡು ನಿನ್ನ ತಾರುಣ್ಯವನ್ನು ನನಗೆ ಕೊಡು ಎಂದು ಕೇಳಿದನು. ಪಿತೃಭಕ್ತನಾದ ಪುರುವು ತಂದೆಯ ಮಾತಿಗೆ ಒಪ್ಪಿ ಅವನ ಮುದಿತನವನ್ನು ಅಂಗೀಕರಿಸಿ ತನ್ನ ಯೌವನವನ್ನು ಅವನಿಗೆ ಕೊಡಲು ಆನಂದದಿಂದ ಮುಂದೆ ಬಂದನು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು



## ಯಯಾತಿಯ ವಿಚಾರ

**ಅಧ್ಯಾಯ - ೩೫**

**ಶೌನಕ ಉವಾಚ**

**ಏವಮುಕ್ತಸರಾಜರ್ಷಿಃ ಕಾವ್ಯಂ ಸ್ಮೃತ್ವಾಮಹಾವ್ರತಂ ।**
**ಸಂಕ್ರಾಮಯಾಮಾಸಜರಾಂ ತದಾ ಪುತ್ರೇ ಮಹಾತ್ಮನಿ ॥**

ಪುರು ಸಮ್ಮತಿಸಿದ ಬಳಿಕ ಯಯಾತಿ ರಾಜರ್ಷಿಯು ವ್ರತನಿಷ್ಠರಾದ ಶುಕ್ರಾಚಾರ್ಯರನ್ನು ಸ್ಮರಿಸಿದನು. ಮಹಾನುಭಾವನಾದ ಮಗನಲ್ಲಿ ತನ್ನ ಮುಪ್ಪನ್ನು ಹೊರಿಸಿ, ಅವನ ಯೌವನವನ್ನು ತಾನು ಪಡೆದುಕೊಂಡನು. ಧರ್ಮಕ್ಕೆ ವಿರುದ್ಧವಾಗದ ಕಾಮಭೋಗಗಳನ್ನು ವಿವಿಧ ಕೇಳೀವಿಲಾಸವಿಹಾರಗಳಿಂದ ಅನುಭವಿಸಿದನು. ದೇವತೆಗಳನ್ನು ಯಜ್ಞದಿಂದ, ಪಿತೃಗಳನ್ನು ಶ್ರಾದ್ಧದಿಂದ, ದೀನರನ್ನು ದಾನದಿಂದ, ಬ್ರಾಹ್ಮಣರನ್ನು ಬಯಸಿದ್ದನ್ನು ಕೊಡುವದರಿಂದ, ಅತಿಥಿಗಳನ್ನು ಅನ್ನಪಾನಗಳಿಂದ, ಸರ್ವವಿಧವಾದ ವೈಶ್ಯ ಹಾಗೂ ಇತರ ಪ್ರಜೆಗಳನ್ನು ಸಂರಕ್ಷಣೆಯಿಂದ, ಶೂದ್ರರನ್ನು ದಾಕ್ಷಿಣ್ಯದಿಂದ, ಕಳ್ಳರನ್ನೂ ನಿಗ್ರಹದಿಂದ, ಉಳಿದೆಲ್ಲರನ್ನು ಧರ್ಮಶಾಸನದಿಂದ ಯಥಾಯೋಗ್ಯವಾಗಿ ಪ್ರಸನ್ನಗೊಳಿಸಿದನು. ಹೀಗೆ ಸಾವಿರವರ್ಷ ನವಯುವಕನಾಗಿ ಧರ್ಮಕ್ಕೆ ವಿರುದ್ಧವಾಗದಂತೆ ಎಲ್ಲ ಕಾಮಗಳನ್ನು ಅನುಭವಿಸಿ ಮಹಾರಾಜನು ಸಂತೃಪ್ತನಾದನು.

ಅವನು ಮತ್ತೊಮ್ಮೆ ವಿಚಾರಿಸಿದಾಗ ಬಹಳ ಖೇದವೂ ಆಯಿತು. ಮಗನ ಯೌವನ ಪಡೆದು ಮತ್ತೆ ತಾನು ಭೋಗಭೂಮಿಗೆ ಇಳಿದು ಲಂಪಟಜೀವನ ಬಾಳಲು ಮೊದಲು ಮಾಡಿ ಎಷ್ಟು ದಿನವಾಯಿತು ? ಎಂದು ಕ್ಷಣ ದಿನಗಳನ್ನೆಲ್ಲ ಎಣಿಸಿದನು. ತಿಂಗಳುವರ್ಷಗಳನ್ನೆಲ್ಲ ಗುಣಿಸಿದನು. ರಾಜಭೋಗಗಳಲ್ಲಿ ಸಾವಿರ ವರ್ಷ

ಸವೆದಿದ್ದವು. ಇಷ್ಟು ವರ್ಷ ವಿಷಯ ವ್ಯಾಮೋಹದಿಂದ ವ್ಯರ್ಥವಾಗಿ ಕಳೆದು ಹೋದದ್ದರಿಂದ ಅವನಿಗೆ ಬಹಳ ದುಃಖವಾಯಿತು. ಈ ವೃಥಾ ಆಯುಷ್ಯ ಕ್ಷಯವನ್ನು ಯೋಚಿಸಿ ವೈರಾಗ್ಯವೂ ಹುಟ್ಟಿತು. ಮಗನನ್ನು ಕರೆದು ನಿರ್ವಿಣ್ಣನಾಗಿ ನುಡಿದನು.

**''ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥**

ಕಾಮನೆಗಳನ್ನು ಭೋಗಿಸುವದರಿಂದ ಕಾಮದ ಆಶೆಯು ಎಂದೂ ಶಾಂತವಾಗುವದಿಲ್ಲ. ತುಪ್ಪ ಹಾಕಿದ ಬೆಂಕಿಯಂತೆ ಮತ್ತಿಷ್ಟೂ ಹೆಚ್ಚೇ ಆಗುತ್ತದೆ.

**''ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂಪಶವಃಸ್ತ್ರಿಯಃ**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾಶಮಂವ್ರಜೇತ್**

ಪ್ರಪಂಚದಲ್ಲಿರುವ ಎಲ್ಲ ಕಾಳು ಕಡ್ಡಿ, ಚಿನ್ನ, ಚೆಲುವೆಯರು, ಪಶುಗಳು ಮುಂತಾದವುಗಳನ್ನೆಲ್ಲ ಒಬ್ಬನಿಗೇ ಕೊಟ್ಟರೂ ಸಾಕು ಎನಿಸುವದಿಲ್ಲ. ತೃಪ್ತಿಯು ಆಗುವದಿಲ್ಲ. ಇದನ್ನು ತಿಳಿದು, ಮನುಷ್ಯನು ಆಶೆಯನ್ನು ತೊರೆದು, ವೈರಾಗ್ಯವನ್ನು ಹೊಂದಬೇಕು. ಆದುದರಿಂದ ಪುರು, ನಿನ್ನ ಯೌವನದಿಂದ ಬೇಕಾದಷ್ಟು ರಾಗಭೋಗಗಳನ್ನು ನಾನು ಅನುಭವಿಸಿಯಾಯಿತು. ಇನ್ನು ನೀನು ನಿನ್ನ ಯೌವನವನ್ನು ಮರಳಿ ಸ್ವೀಕರಿಸು '', ಎಂದು ಹೇಳಿ ಯಯಾತಿಯು ತನ್ನ ಕನಿಷ್ಠಪುತ್ರನನ್ನು ಕರೆದು, ಅವನ ತಾರುಣ್ಯವನ್ನು ಅವನಿಗೆ ಕೊಟ್ಟು, ತನ್ನ ಮುದಿತನವನ್ನು ತಾನು ಅಂಗೀಕರಿಸಿದನು. ತನ್ನ ಮಾತು ನಡೆಸಿದ ಮಗನ ಮೇಲೆ ರಾಜನಿಗೆ ಮೋಹ-ಮಮತೆಗಳು ಮಡುಗಟ್ಟಿದ್ದವು. ಅವನನ್ನೇ ತನ್ನ ನಂತರ ರಾಜ್ಯದ ಗದ್ದುಗೆಯಮೇಲೆ ಕೂಡಿಸಿ ಪಟ್ಟಾಭಿಷೇಕಮಾಡಿದನು. ಹಿರಿಯಮಗನಾದ ಯದುವನ್ನು ಬಿಟ್ಟು ಚಿಕ್ಕ ಮಗನಿಗೆ ಹೇಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಎಂದು ಬ್ರಾಹ್ಮಣರು ದೊರೆಯನ್ನು ಪ್ರಶ್ನಿಸಿದರು.

ಅದಕ್ಕೆ ಯಯಾತಿಯು ತಾಯಿ ತಂದೆಗಳ ಮಾತನ್ನು ಕೇಳದೇ ಅವಿಧೇಯರಾಗಿದ್ದುದರಿಂದ ಯದು, ದ್ರುಹ್ಯು, ಆನು, ತುರ್ವಸು ಮುಂತಾದ ನನ್ನ ಹಿರಿಯ ಮಕ್ಕಳನ್ನೆಲ್ಲ ಬಿಟ್ಟು ನನ್ನ ಆಜ್ಞೆಯವನ್ನು ಪಾಲಿಸಿದ, ಪುರುವಿಗೆ ನನ್ನ ಉತ್ತರಾಧಿಕಾರವನ್ನು ಒಪ್ಪಿಸಿದ್ದೇನೆ. ಗುರು ಶುಕ್ರರೂ ಹೀಗೆ ಮಾಡಲು ಆಣತಿಯನ್ನು ಇತ್ತಿದ್ದರು. ನನ್ನ ವಾರ್ಧಕ್ಯವನ್ನು ಕೊಂಡು ಯೌವನ ದಾನಮಾಡುವ ಪುರುವಿಗೆ ರಾಜ್ಯಾಧಿಕಾರವನ್ನು ಒಪ್ಪಿಸಲು ಹೇಳಿದ್ದರು. ಅದರಂತೆ ತಾವೆಲ್ಲರೂ ಈ ಪುರುವಿನ ಪಟ್ಟಾಭಿಷೇಕ ಮಹೋತ್ಸವದಲ್ಲಿ ಸಹಕಾರವನ್ನು ನೀಡಬೇಕು. ಎಂದು ತಿಳಿಸಿ ಹೇಳಿದನು. ಇದರಿಂದ ಬ್ರಾಹ್ಮಣರಿಗೂ ಪ್ರಜರಿಗೂ ಅತ್ಯಂತ ಆನಂದ ಆಯಿತು. ಅವರೆಲ್ಲರೂ ಸಂತೋಷಪೂರ್ವಕವಾಗಿ ರಾಜ್ಯಾಭಿಷೇಕಕ್ಕೆ ತಮ್ಮ ಸಮ್ಮತಿಯನ್ನು ಕೊಟ್ಟರು. ಹೀಗೆ ಎಲ್ಲ ಪ್ರಜಾಪೌರ ಪರಿವಾರ ವರ್ಗದವರ ಸಹಕಾರದಿಂದ ಬಲ

ಬಂದಂತಾಗಿ ಯಯಾತಿರಾಜನು ಪುರುವಿಗೆ ತನ್ನ ಸಾಮ್ರಾಜ್ಯ ಸಿಂಹಾಸನದ ಮೇಲೆ ಪಟ್ಟಾಭಿಷೇಕಗೈದು, ತಾನು ಅಡವಿಗೆ ನಡೆದನು. ತಪೋದೀಕ್ಷಿತನಾದ ಅವನನ್ನು ಬೆಂಬಲಿಸಿ ಅನೇಕಜನ ತಪಸ್ವಿಗಳೂ ಬ್ರಾಹ್ಮಣರೂ ಅಡವಿಗೆ ಬಂದು ತಪೋನುಷ್ಠಾನವನ್ನು ಕೈಕೊಂಡರು. ಮುಂದೆ ಯದುವಿನಿಂದ ಯಾದವವಂಶ ಬೆಳೆಯಿತು. ತುರ್ವಸುವಿನಿಂದ ಯವನಜಾತಿಯು ಅಭಿವೃದ್ಧಿಯನ್ನು ಹೊಂದಿತು. ದ್ರುಹ್ಯುವಿನಿಂದ ಭೋಜವಂಶವು ಬೆಳಕಿಗೆ ಬಂದಿತು. ಅನುವಿನಿಂದ ಮ್ಲೇಚ್ಛ ಜಾತಿಯು ಉದಯವಾಯಿತು. ಪುರುವಿನ ವಂಶವು ಪೌರವಕುಲ ಎಂದು ಪ್ರಸಿದ್ಧವಾಗಿದೆ. ನೀನು ಇದೇ ಪುರುವಂಶದಲ್ಲಿ ಹುಟ್ಟಿ ಬೆಳೆದಿರುವೆ. ಸಾವಿರಾರು ವರ್ಷಗಳಿಂದ ಈ ದೇಶವನ್ನು ನಿಮ್ಮ ಕುರುಕುಲವೇ ಆಳುತ್ತಿದೆ.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿದುದು



## ಜಪತಪೋಮಾರ್ಗ. ಯಯಾತಿಗೆ ಸ್ವರ್ಗ — ಅಧ್ಯಾಯ - ೩೬

**ಶೌನಕ ಉವಾಚ**

**ಏವಂಸನಾಹುಷೋ ರಾಜಾ ಯಯಾತಿಃ ಪುತ್ರಮೀಪ್ಸಿತಂ**
**ರಾಜ್ಯೇಽಭಿಷಿಚ್ಯ ಮುದಿತೋ ವಾನಪ್ರಸ್ಥೋಽಭವನ್ಮುನಿಃ ॥**

ಹೀಗೆ ಯಯಾತಿಯು ತನ್ನ ನೆಚ್ಚಿನ ಕಡೇ ಹುಟ್ಟು ಮಗನನ್ನು ರಾಜ್ಯದ ಅಧಿಕಾರ ಗದ್ದುಗೆಯಲ್ಲಿ ಕೂಡಿಸಿ ಸಂತೋಷದಿಂದ ವಾನಪ್ರಸ್ಥಾಶ್ರಮವನ್ನು ಅಂಗೀಕರಿಸಿದನು. ಅರಣ್ಯದಲ್ಲಿ ಅನೇಕ ಬ್ರಾಹ್ಮಣರ ಜೊತೆಗೆ ನಿಯಮನಿಷ್ಠನಾಗಿ ಗಡ್ಡೆಗೆಣಸುತಿಂದು ಭಗವಂತನನ್ನು ಆರಾಧಿಸಿ ಮರಣ ಹೊಂದಿದನು. ಮರಣ ನಂತರ ದಿವ್ಯವಾದ ಸ್ವರ್ಗಸುಖವು ಅವನಿಗಾಗಿ ಕಾದಿತ್ತು. ಅಲ್ಲಿಯೂ ಕೆಲವೇ ದಿನ ಸುಖ ಸಮಾಧಾನ ದಿಂದ ಇದ್ದು ದಿವ್ಯ ಭೋಗಗಳನ್ನು ಅನುಭವಿಸಿದನು. ಹೀಗೆ ಕೆಲಕಾಲವು ಕಳೆದ ಬಳಿಕ ದೇವೇಂದ್ರನು ಅವನನ್ನು ಸ್ವರ್ಗದಿಂದ ಹೊರಗೆ ಹಾಕಿಸಿದನು. ದೇವದೂತರು ಬಂದು ಅಲ್ಲಿಂದ ಅವನನ್ನು ಕೆಳಗೆ ತಳ್ಳಿಬಿಟ್ಟರು. ಅವನು ನೆಲಕ್ಕೆ ಬಾರದೆ ಅಂತರಿಕ್ಷದಲ್ಲಿಯೇ ನಿಂತುಕೊಂಡನು. ಅಲ್ಲಿಂದ ಅಷ್ಟಕ ವಸುಮಂತ ಪ್ರತರ್ದನ ಎಂಬ ರಾಜರ್ಷಿಗಳ ಜೊತೆಗೆ ಅವನು ಮತ್ತೆ ಸ್ವರ್ಗಲೋಕವನ್ನು ಸೇರಿದನು.

**ಶತಾನೀಕ** :- ದೇವೇಂದ್ರನು ಸ್ವರ್ಗದಿಂದ ಒಮ್ಮೆ ಹೊರದೂಡಿದ ಬಳಿಕ ಯಯಾತಿ ರಾಜನಿಗೆ ಸುರಲೋಕದಲ್ಲಿ ಪುನಃ ಪ್ರವೇಶವು ಹೇಗೆ ದೊರೆಯಿತು. ಪುರುವಂಶದ ಮೂಲಪುರುಷನಾದ ಯಯಾತಿಯು ಇಂದ್ರನಂತೆ ಒಳ್ಳೇ ಪ್ರಭಾವಶಾಲಿ. ಪುಣ್ಯಕೀರ್ತಿ. ಆ ಮಹಾರಾಜನು ಈ ಭೂಲೋಕದಲ್ಲಿ ನಿರ್ಮಿಸಿದ ಇತಿಹಾಸವನ್ನು ತಾವು ನನಗೆ ತಿಳಿಸಿದಿರಿ. ಸ್ವರ್ಗಲೋಕಕ್ಕೆ ಹೋದ ಬಳಿಕ ಅವನ ಬದುಕು ರೂಪಗೊಂಡ ಬಗೆಯನ್ನು ಬಿತ್ತರಿಸಬೇಕು.

**ಶೌನಕ** :- ಓಹ ! ಆ ಕಥೆಯೇ ! ಬಹಳ ಸಂತೋಷ. ದಿವ್ಯಕಥೆ ಆ ಯಯಾತಿ ಮಹಾರಾಜನದು. ಇಹಲೋಕ ಪರಲೋಕ ಎರಡು ಕಡೆಗಳಲ್ಲಿಯೂ ಚರಿತ್ರ ಪುರುಷನಾಗಿ ಮೆರೆದ. ಆ ಮಹಾನುಭಾವನ ಪುಣ್ಯ ವೃತ್ತಾಂತವನ್ನು ಹೇಳುತ್ತೇನೆ ಕೇಳಿರಿ. ಈ ಭೂಲೋಕದಲ್ಲಿ ಮಗನಿಗೆ ಸರ್ವಸ್ವವನ್ನು ಒಪ್ಪಿಸಿ ಕಾಡಿಗೆ ಹೋಗಿ ಕೆಲವು ದಿನ ವಾನಪ್ರಸ್ಥಾಶ್ರಮದಲ್ಲಿ ಇದ್ದು ಕೊನೆಗೆ ಘೋರ ತಪವನ್ನು ಕೈಕೊಂಡನು. ಮೂರು ವರ್ಷ ಮಾತು ಬಿಟ್ಟು ಮೌನಿಯಾಗಿ ಧ್ಯಾನಿಯಾಗಿ ತಪಂಗೈದ. ಆನಂತರ ನೀರಿಲ್ಲದೆ ಒಂದು ವರ್ಷ ತಪಸ್ಸು. ಅನಂತರ ಬರಿ ಗಾಳಿ ಕುಡಿದು ಮತ್ತೊಂದು ವರ್ಷ, ಮೂರದಿನೊ ವರ್ಷ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ನಡೆಯಿತು ಉಗ್ರ ತಪಸ್ಸು. ಮುಂದೆ ಆರು ತಿಂಗಳ ಕಾಲ ಒಂಟಿ ಕಾಲಿನ ಮೇಲೆ ಬರಿ ಉಸಿರಾಡಿಸುತ್ತ ನಿಂತು ತಪೋನುಷ್ಠಾನವನ್ನು ಮಾಡಿದನು. ಇಂಥ ಅತಿ ಘೋರವಾದ ತಪಶ್ಚರ್ಯೆಯಲ್ಲಿಯೇ ಕೊನೆಯ ಉಸಿರನ್ನು ಎಳೆದನು. ನೇರವಾಗಿ ಸ್ವರ್ಗಲೋಕಕ್ಕೆ ಬಂದು ಇಳಿದನು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿದುದು*



## ಯಯಾತಿಯ ಅನುಭವದ ವಚನಗಳು | ಅಧ್ಯಾಯ - ೩೭

**ಶೌನಕ ಉವಾಚ**

**ಸ್ವರ್ಗತಸ್ತು ಸ ರಾಜೇಂದ್ರೋನ್ಯವಸದ್ದೇವ ಸದ್ಮನಿ**
**ಪೂಜಿತಸ್ತ್ರಿದಶೈಸ್ಸಾಧ್ಯೈರ್ಮರುದ್ಭಿಃ ವಸುಭಿಸ್ತಥಾಃ ॥**

ಸ್ವರ್ಗಲೋಕಕ್ಕೆ ಬಂದಿಳಿದ ಯಯಾತಿ ರಾಜನನ್ನು ಆ ದೇವಮಂದಿರದಲ್ಲಿ ಎಲ್ಲರೂ ಆರಾಧಿಸುವವರೇ. ಸಾಧ್ಯ, ಮರುತ್, ವಸು, ಆದಿತ್ಯ ಎಂಬ ಸ್ವರ್ಗದ ದೇವತೆಗಳೂ ಅವನಿಗೆ ಆದರೋಪಚಾರಗಳನ್ನು ಸಲ್ಲಿಸಿದರು. ದೇವಲೋಕದಲ್ಲಿದ್ದಾಗ ಯಯಾತಿಯು ತನ್ನ ಪುಣ್ಯದ ಪ್ರಭಾವದಿಂದ ಆಗಾಗ ಸತ್ಯಲೋಕಕ್ಕೂ ಹೋಗಿಬರುತ್ತಿದ್ದನು. ಹೀಗೆ ಬಹುಕಾಲ ಅವನು ಅಲ್ಲಿ ವಾಸಮಾಡಿದ ಬಳಿಕ ಒಂದು ದಿನ ಇಂದ್ರನ ಬಳಿಗೆ ಬಂದಾಗ ಅವನು ಒಂದು ಪ್ರಶ್ನೆ ಹಾಕಿದನು.

**ಇಂದ್ರ** :- ರಾಜನೇ, ನಿನ್ನ ಕೊನೆಯ ಮಗನಾದ ಪುರುವು ನಿನ್ನ ಮುಪ್ಪನ್ನು ತೆಗೆದುಕೊಂಡು ಮುದುಕನಾಗಿ ಲೋಕದಲ್ಲಿ ಸಂಚರಿಸುವಾಗ ಅವನಿಗೆ ರಾಜ್ಯದ ಅಧಿಕಾರವನ್ನು ಕೊಟ್ಟು ಏನು ಹೇಳಿದೆ ? ಅದನ್ನು ಈಗ ನನ್ನ ಮುಂದೆ ಮತ್ತೊಮ್ಮೆ ಹೇಳು.

**ಯಯಾತಿ** :- ಗಂಗಾ ಯಮುನಾ ನದಿಗಳ ನಡುವಿರುವ ಈ ದೇಶವೆಲ್ಲವೂ ನಿನ್ನ ಒಡೆತನಕ್ಕೆ ಸೇರಿದೆ. ಇದರ ಮೇರೆಗೆ ಹೊಂದಿದ ಕಾಡುನಾಡುಗಳನ್ನು ನಿನ್ನ ಸೋದರರು ಅಧಿಪತಿಗಳಾಗಿ ಆಳಲಿ. ಪುತ್ರನೇ ನಾನು ನಿನಗೆ ಕೆಲವು ನೀತಿಯ ಮಾತುಗಳನ್ನು

ಹೇಳುತ್ತೇನೆ ಕೇಳು - ''ಕೋಪಿಷ್ಠ ಪ್ರಾಣಿಗಳಿಗಿಂತ ಕೋಪ ಬಿಟ್ಟವನು ಲೇಸು.ಸಹನೆ ಇಲ್ಲದವರಿಗಿಂತ ಸೈರಣೆ ಉಳ್ಳ ಪ್ರಾಣಿ ಶ್ರೇಷ್ಠ. ಪಶುಗಳಿಗೆ ಕೋಪವನ್ನು ಹತ್ತಿಕ್ಕಲಿಕ್ಕೆ ಬರುವದಿಲ್ಲ. ಸಹನೆ ಗುಣವು ಇರುವದಿಲ್ಲ. ಈವೆರಡೂ ಗುಣಗಳನ್ನು ಬೆಳೆಸಿಕೊಳ್ಳುವ ಪ್ರಾಣಿ ಎಂದರೆ ಮಾನವನು ಮಾತ್ರ. ಆದುದರಿಂದ ಪ್ರಾಣಿವರ್ಗದಲ್ಲಿ ಮನುಷ್ಯನು ಶ್ರೇಷ್ಠ. ಅವರಲ್ಲಿ ಓದುಬರಹಬಾರದದಡ್ಡರಿಗಿಂತ ಪಂಡಿತರು ಶ್ರೇಷ್ಠ. ಪ್ರಾಣಿವರ್ಗದಿಂದ ಮೇಲೆ ಎದ್ದುಬಂದ ಮಾನವನು ಕೆಲವು ವಿಶಿಷ್ಟ ಗುಣಗಳನ್ನು ಬೆಳೆಸಿಕೊಳ್ಳುವದು ಅತ್ಯವಶ್ಯ. ಯಾರಾದರೂ ರೇಗಿಸಬೇಕೆಂದು ಬಂದರೆ ರೇಗಬಾರದು. ನಿಂದಿಸಬೇಕೆಂದು ಬಂದವರನ್ನು ಪ್ರತಿಯಾಗಿ ನಿಂದಿಸಬಾರದು. ಇದರಿಂದ ಅವರ ಪಾಪವೇ ಅವರನ್ನು ಸುಡುತ್ತದೆ. ಒಬ್ಬರ ಮರ್ಮಕ್ಕೆ ಪೆಟ್ಟು ತಗಲುವಂತೆ ಮಾತನಾಡಬಾರದು. ಬಿರುನುಡಿಗಳನ್ನು ಆಡಬಾರದು. ಕೀಳು ಜನರಿಂದ ಏನನ್ನೂ ಅಪೇಕ್ಷಿಸಬಾರದು. ಹೆರವರ ಹೃದಯವನ್ನು ಇರಿಯುವ ಕ್ರೂರನುಡಿಗಳನ್ನು ನುಡಿಯಬಾರದು. ಹಾಗೆ ನುಡಿದವರನ್ನು ದಾರಿದ್ರ್ಯವು ಬೆನ್ನು ಹತ್ತುವದು. ಸ್ವಯಂ ಸಜ್ಜನನಾಗಿ ಒಳ್ಳೇ ಜನರ ಸಹವಾಸವನ್ನೇ ಮಾಡಬೇಕು.

''ನಾಸ್ತೀದೃಶಂ ಸಂವನನಂ ತ್ರಿಷು ಲೋಕೇಷು ಕಿಂಚನ
ಯಥಾ ಮೈತ್ರೀ ಚ ಲೋಕೇಷು ದಾನಂ ಚ ಮಧುರಾ ಚ ವಾಕ್ ॥''

ಮಧುರಸ್ನೇಹ, ಉದಾರದಾನ, ಸವಿಯಾದಮಾತು ಈ ಮೂರಕ್ಕೆ ಸಮಾನವಾದ ವಶೀಕರಣ ಉಪಾಯವು ಈ ಮೂರು ಲೋಕದಲ್ಲೇ ಇರುವದಿಲ್ಲ.

ತಸ್ಮಾತ್ ಶಾಂತಂ ಸದಾ ವಾಚ್ಯಂ ನ ವಾಚ್ಯಂ ಪರುಷಂ ಕ್ವಚಿತ್
ಪೂಜ್ಯಾನ್ ಸಂಪೂಜಯೇದ್ದದ್ಯಾನ್ನಾಭಿಶಾಪಂ ಕದಾಚನ ॥

ಆದುದರಿಂದ ಯಾವಾಗಲೂ ಮಿದುವಾಗಿ ಸಮಾಧಾನದ ನುಡಿಗಳನ್ನೇ ಆಡಬೇಕು. ಕಠೋರವಾದ ವಚನಗಳನ್ನು ಎಂದೂ ಉಚ್ಚರಿಸಬಾರದು. ಪೂಜ್ಯರಾದವರನ್ನು ಪೂಜಿಸಬೇಕು. ಎಂದೂ ಯಾರನ್ನೂ ಶಪಿಸಿ ಹೀಗಳೆಯಬಾರದು.''

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು

—o—

ಇಂದ್ರ ಉವಾಚ

**ಸರ್ವಾಣಿ ಕಾರ್ಯಾಣಿ ಸಮಾಪ್ಯ ರಾಜನ್**
**ಗೃಹಾನ್ ಪರಿತ್ಯಜ್ಯ ವನಂಗತೋऽಸಿ ॥**
**ತತ್ತ್ವಾಂ ಪೃಚ್ಛಾಮಿ ನಹುಷಸ್ಯ ಪುತ್ರ**
**ಕೇನಾಪಿ ತುಲ್ಯಸ್ತಪಸಾ ಯಯಾತೇ ॥**

**ಇಂದ್ರ** :- ರಾಜನೇ, ನೀನು ನಿನ್ನ ಕರ್ತವ್ಯವನ್ನೆಲ್ಲ ನಿರ್ವಹಿಸಿ ಮನೆಮಾರು ತೊರೆದು ತಪೋನುಷ್ಠಾನಕ್ಕಾಗಿ ನೀನು ವನದಲ್ಲಿ ಬಂದು ನಿಂತೆ. ಆದುದರಿಂದ ನಹುಷಕುಮಾರನೆ, ನಿನ್ನನ್ನು ಒಂದು ಮಾತು ಕೇಳಬೇಕೆಂದು ಇಚ್ಛಿಸುತ್ತೇನೆ. ಯಯಾತಿ ರಾಜನೇ, ತಪಸ್ಸಿನಲ್ಲಿ ನಿನಗೆ ಸರಿಸಮಾನಾದವನು ಯಾವನಾದರೂ ಇರುವನೇ ?

**ಯಯಾತಿ** :- ದೇವೇಂದ್ರ, ದೇವತೆಗಳಲ್ಲಿ ಆಗಲಿ, ಮಾನವರಲ್ಲಿ ಆಗಲಿ, ಗಂಧರ್ವರುಗಳಲ್ಲಿ ಆಗಲಿ, ಋಷಿಗಳಲ್ಲಿ ಆಗಲಿ ನನಗೆ ಸಮಾನವಾದ ತಪಸ್ಸು ಉಳ್ಳವರು ಯಾರೂ ಇಲ್ಲ ಎಂದು ನಾನು ತಿಳಿದಿದ್ದೇನೆ.

**ಇಂದ್ರ** :- ರಾಜನೇ, ನಿನಗೆ ಗರ್ವವು ಬಹಳ ಬಂದಿದೆ. ನಿನಗೆ ಸಮಾನರು ತಪೋ ಮಹಿಮೆಯಲ್ಲಿ ನಿನಗಿಂತ ಮಿಗಿಲಾದವರು ಬೇಕಾದಷ್ಟು ಜನರು ಇರುವರು. ಅವರ ಪುಣ್ಯ ಪ್ರಭಾವವನ್ನು ಅರಿಯದೆ ಅವರನ್ನು ನಿನಗಿಂತ ಕೀಳೆಂದು ಬಗೆದೆ. ಇದೇ ಅವರಿಗೆ ದೊಡ್ಡ ಅವಮಾನ. ದೊಡ್ಡವರಿಗೆ ಅವಮಾನಮಾಡಿ ಹೀನರೆಂದು ಕರೆದು ಜರೆದು ನುಡಿದದ್ದಕ್ಕಾಗಿ ನಿನ್ನ ಪುಣ್ಯವೆಲ್ಲವೂ ಹಾಳಾಯಿತು. ನಿನ್ನ ಈ ದಿವ್ಯಲೋಕ ನಿವಾಸಕ್ಕೂ ಇಂದೇ ಮುಕ್ತಾಯ. ನಿನ್ನ ಪುಣ್ಯವೆಲ್ಲ ಕ್ಷೀಣವಾಗಿ ನೀನು ಇಂದೇ ಈಗಲೇ ಇಲ್ಲಿಂದ ಉರುಳಿಬೀಳು.

**ಯಯಾತಿ** :- ಸುರಮುನಿ ಗಂಧರ್ವ ಮಾನವರ ಅವಮಾನದಿಂದ ನನ್ನನ್ನು ಸ್ವರ್ಗಲೋಕದಲ್ಲಿ ಮೆರೆಯಿಸುವ ಪುಣ್ಯವೆಲ್ಲವೂ ಕ್ಷೀಣವಾಗಿ ಹೋಯಿತೇ ? ಅಯ್ಯೋ ನನ್ನ ದುರ್ದೈವ. ಆಗಲಿ ದೇವರಾಜ. ಇದೊಂದಾದರೂ ನನ್ನ ಮೇಲೆ ಅನುಗ್ರಹಮಾಡು. ಸ್ವರ್ಗದಿಂದ ನಾನು ಉರುಳಿ ಬೀಳುವಾಗ ಸಜ್ಜನರ ಮಧ್ಯದಲ್ಲಿಯೇ ನಾನು ಬೀಳಬೇಕು.

**ಇಂದ್ರ** :- ತಥಾಸ್ತು ! ಹಾಗೇ ಆಗಲಿ ಮಹಾರಾಜ. ಸಜ್ಜನರ ಸಂಪರ್ಕದಿಂದ ನೀನು ಮೇಲೆದ್ದು ಬರುವಿ. ಇದನ್ನು ತಿಳಿದಾದರೂ ಇನ್ನು ಮುಂದೆ ದೊಡ್ಡವರನ್ನು ಅವಮಾನಿಸಬೇಡ, ಸಮಾನರನ್ನು ಹೀನವಾಗಿ ಕಾಣಬೇಡ.

**ಶೌನಕ** :- ಇಂದ್ರನ ಮಾತು ಮುಗಿಯುವದೊಂದೇ ತಡ. ಯಯಾತಿಯು ಸ್ವರ್ಗಲೋಕದಿಂದ ಕೆಳಗೆ ಉರುಳತೊಡಗಿದ. ಅವನ ಈ ಅಧಃಪಾತವನ್ನು ಕಂಡು ಧರ್ಮರಕ್ಷಕನಾದ ಅಷ್ಟಕ ಎಂಬ ರಾಜರ್ಷಿಯು ನೋಡಿ ನುಡಿದ.

**ಅಷ್ಟಕ** :- ನೀನು ಯಾರು ? ನಿನ್ನ ರೂಪ ಇಂದ್ರನಂತೆ, ತೇಜ ಅಗ್ನಿಯಂತೆ, ಇಷ್ಟಾದರೂ ತುಂಬಿದ ಮೋಡವು ತಿರುಗಿ ಇಳಿದಂತೆ, ನಕ್ಷತ್ರನಾಥನು ನೆಲದೆಡೆ ಹೊರಟಂತೆ ಕೆಳಗೆ ಉರುಳುತ್ತಲಿರುವಿ. ಶುಕ್ರ, ಸೂರ್ಯ, ಶ್ರೀಹರಿಗಳಂತೆ ಪ್ರಭಾವಶಾಲಿಯಾದ ನೀನು ದೇವಲೋಕದಿಂದ ಹೀಗೆ ಒಮ್ಮೆಲೆ ಉರುಳಲು ಕಾರಣವೇನು ? ಇದನ್ನು ತಿಳಿಯಬೇಕೆಂದು ನಮಗೆ ಭಾರೀ ಕುತೂಹಲ. ಆದರೆ ಮುಂದೆ ಬಂದು ನಿನ್ನನ್ನು ಕೇಳುವ ಧೈರ್ಯ ನಮಗೆ ಇಲ್ಲ. ನೀನೂ ನಮ್ಮನ್ನು ಯಾರು ಏನು ಎಂದು ವಿಚಾರಿಸಲಿಲ್ಲ. ಆದುದರಿಂದ ಈಗ ನಾವಾಗಿ ಕೇಳುತ್ತಿದ್ದೇವೆ. ನೀನು ಯಾರು ? ಯಾರ ಮಗ ? ಯಾವ ಕಾರಣದಿಂದ ಮೇಲೆ ಹೋಗಿದ್ದಿ ? ಯಾವ ಕಾರಣದಿಂದ ಕೆಳಗೆ ಬೀಳುತ್ತೀ ? ಇಲ್ಲಿ ನಿನಗೆ ಯಾವ ಭಯವೂ ಬೇಡ. ದುಃಖ ಮೋಹಗಳನ್ನಂತೂ ದೂರದೂಡಿಬಿಡು. ನೀನು ಸಜ್ಜನರ ಗುಂಪಿನಲ್ಲಿ ಇರುವೆ. ದೇವೇಂದ್ರನೂ ಕೂಡ ಇಲ್ಲಿ ಬಂದು ನಿನ್ನನ್ನು ದಂಡಿಸಲಾರ. ಆದುದರಿಂದ ಸಜ್ಜನ ಸಂಘದ ಸಂಗ ಸಹವಾಸವನ್ನು ಹೊಂದಿದ ನೀನು ನಿಶ್ಚಿಂತನಾಗಿ ಇರು. ನಿರ್ಭಯವಾಗಿ ನುಡಿ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು*



## ಯಯಾತಿ ಅಷ್ಟಕರ ಸಂವಾದ

ಅಧ್ಯಾಯ - ೩೯

**ಯಯಾತಿಃ ಉವಾಚ**

**ಅಹಂ ಯಯಾತಿರ್ನಹುಷಸ್ಯ ಪುತ್ರಃ**
**ಪುರೋಃ ಪಿತಾ ಸರ್ವಭೂತಾವಮಾನಾತ್ ॥**
**ಪ್ರಭ್ರಂಶಿತೋಽಹಂ ಸುರಸಿದ್ಧ ಲೋಕಾತ್**
**ಪರಿಚ್ಯುತಃ ಪ್ರಪತಾಮ್ಯಲ್ಪಪುಣ್ಯಃ ॥**

ನಾನು ನಹುಷರಾಜನ ಮಗನಾದ ಯಯಾತಿ. ಪುರುವಿನ ತಂದೆ. ಸರ್ವ ಪ್ರಾಣಿಗಳನ್ನೂ ಮಹಾತ್ಮರನ್ನೂ ಅವಮಾನಿಸಿದ್ದರಿಂದ ನಾನು ಗಳಿಸಿದ ಪುಣ್ಯವೆಲ್ಲ ಕ್ಷಯವಾಗಿ ದೇವಲೋಕದಿಂದ ಭ್ರಷ್ಟನಾಗಿ ಕೆಳಗೆ ಉರುಳುತ್ತಿದ್ದೇನೆ. ನಾನು ನಿಮಗಿಂತ ವಯಸ್ಸಿನಲ್ಲಿ ಕಿರಿಯ. ಆದುದರಿಂದ ನಿಮ್ಮ ನಮಸ್ಕಾರಕ್ಕೆ ನಾನು ಯೋಗ್ಯನಲ್ಲ. ವಿದ್ಯೆ, ವಯಸ್ಸು, ತಪಸ್ಸು ಇವುಗಳಿಂದ ಜ್ಯೇಷ್ಠನೂ ಶ್ರೇಷ್ಠನೂ ಆಗಿದ್ದರೆ ಮಾತ್ರ ಪ್ರಣಾಮಕ್ಕೆ ಯೋಗ್ಯನಾಗುತ್ತಾನೆ.

**ಅಷ್ಟಕ** :- ವಯಸ್ಸಿನಲ್ಲಿ ನೀನು ಕಿರಿಯ ನಾನು ಹಿರಿಯ ಎಂದು ಹೇಳಿದೆ. ಅದು ಹೇಗಾದರೂ ಇರಲಿ. ವಯಸ್ಸು ಅಪ್ರಯೋಜಕ. ವಿದ್ಯೆಯಲ್ಲಿ ತಪಸ್ಸಿನಲ್ಲಿ ಹಿರಿಯನಾದವನೇ ಜ್ಞಾನವೃದ್ಧ ತಪೋವೃದ್ಧ ಎನಿಸುವನು. ಅಂಥವನು ದ್ವಿಜರೆಲ್ಲರಿಗೂ ಪೂಜ್ಯನೂ ಎನಿಸುತ್ತಾನೆ.

**ಯಯಾತಿ** :- ವಿಹಿತಕರ್ಮಗಳಿಗೆ ವಿರುದ್ಧವಾದುದೆಲ್ಲ ಪಾಪ. ಅದಕ್ಕೆ ಅನುಕೂಲವಾದದ್ದು ಪುಣ್ಯ. ಸಾಧುಗಳು ದುರ್ಜನರನ್ನು ಎಂದೂ

ಅನುಸರಿಸುವದಿಲ್ಲ. ಯಾಕಂದರೆ ದುರುಳರು ಯಾವಾಗಲೂ ಪುಣ್ಯಕಾರ್ಯಕ್ಕೆ ವಿರೋಧಿಗಳೇ. ಸುಖದುಃಖಗಳು ಪ್ರಾಣಿಗಳಿಗೆ ದೈವದಿಂದಲೇ ಬರುತ್ತವೆ. ದುಃಖದಿಂದ ಕುಗ್ಗದೇ ಸುಖದಿಂದ ಹಿಗ್ಗದೆ ದೈವಚಿತ್ತ ಎಂದರಿತು ತನಗೆ ಯೋಗ್ಯ ಸತ್ಕರ್ಮಗಳನ್ನು ಮಾಡುತ್ತಲಿರಬೇಕು. ಸುಖ - ದುಃಖಗಳು ಸ್ಥಿರವಲ್ಲವೆಂದು ನಾನು ತಿಳಿದಿದ್ದೇನೆ. ಆದುದರಿಂದ ದುಃಖ ಬಂದಾಗ ನಾನು ಕೊರಗುವುದಿಲ್ಲ.'' ಯಯಾತಿಯ ಮಾತುಗಳನ್ನು ಕೇಳಿ ಅಷ್ಟಕನಿಗೆ ಅವನ ಬಗ್ಗೆ ಇನ್ನೂ ಗೌರವಭಾವ ಮೂಡಿತು. ಅವನು ಬೇರಾರೂ ಆಗದೇ ತನ್ನ ತಾಯಿಯ ತಂದೆಯೇ ಆಗಿದ್ದ. ಆದುದರಿಂದ ಸಂಕೋಚವಿಲ್ಲದೆ ಅವನ ಸ್ವರ್ಗವಾಸದ ವೃತ್ತಾಂತವನ್ನು ತಿಳಿದುಕೊಳ್ಳಬೇಕೆಂದು ಕುತೂಹಲದಿಂದ ಕೇಳಿದ.

**ಅಷ್ಟಕ** - ಮಹಾರಾಜ, ನೀನು ಯಾವಯಾವ ದಿವ್ಯ ಲೋಕಗಳಲ್ಲಿ ಇದ್ದು ಸುಖವನ್ನು ಅನುಭವಿಸಿದೆ ? ಅಲ್ಲಿ ಎಷ್ಟು ಕಾಲ ಇದ್ದೆ ? ಹೇಗೆ ಇದ್ದೆ ? ಇದೆಲ್ಲವನ್ನೂ ದಿವ್ಯ ಅಧಿಷ್ಠಾನಗಳ ಜ್ಞಾನವುಳ್ಳ ನೀನು ದಯವಿಟ್ಟು ತಿಳಿಸು.

**ಯಯಾತಿ** :- ಬಹುಕಾಲದ ವರೆಗೆ ಭೂಲೋಕದ ಸಾರ್ವಭೌಮನಾಗಿ ಇಲ್ಲಿಯೇ ಇದ್ದೆನು. ಅನಂತರ ಸಾವಿರವರ್ಷ ಸ್ವರ್ಗಲೋಕದಲ್ಲಿ. ಅದರ ಮುಂದಿನ ಲೋಕದಲ್ಲಿ ಸಾವಿರವರ್ಷ. ಕೊನೆಗೆ ಬ್ರಹ್ಮದೇವರ ಸತ್ಯಲೋಕದಲ್ಲಿಯೂ ಸಾವಿರವರ್ಷವಿದ್ದು ಬಂದೆ. ಆ ಕಾಲದಲ್ಲಿ ಪುಣ್ಯ ವಿಶೇಷದಿಂದ ಮೇಲೆ ಮೇಲಿನ ಲೋಕಗಳೆಲ್ಲ ನನ್ನ ಸ್ವಾಧೀನವಾದಾಗ ಅನೇಕ ದೇವತೆಗಳೂ ಲೋಕಪಾಲಕರೂ ನನ್ನನ್ನು ಬಹು ವರ್ಷ ತಮ್ಮತಮ್ಮ ಮನೆಗಳಲ್ಲಿ ಇಟ್ಟುಕೊಂಡು ಸತ್ಕರಿಸಿದರು. ಆಗ ದೇವತೆಗಳಂತೆಯೇ ದಿವ್ಯಕಾಂತಿ ಬಂದಿತ್ತು ನನ್ನ ದೇಹಕ್ಕೂ ಕೂಡ. ಅಂಥ ದಿವ್ಯಕಾಂತಿಯನಾಂತು. ದೇವೇಂದ್ರನ ನಂದನವನದಲ್ಲಿ ಮನಬಂದ ರೂಪ ಧರಿಸಿ ಅಪ್ಸರೆಯರೊಡನೆ ವಿಹರಿಸಿದೆ. ಮಂದಾನಿಲ ಬೀಸಿದ ಮಂದಾರಕುಸುಮದ ಸೌಗಂಧವನ್ನು ಮೂಸಿ ಸುರಸುಂದರಿಯರ ವಿಲಾಸದಲ್ಲಿ ಮೈಮರೆತೆ. ಹೀಗೆ ದೈವಿಕ ಭೋಗಾನುಭವಗಳನ್ನು ಬಹುಕಾಲ ಸೇವಿಸಿದ ಬಳಿಕ ಒಂದು ದಿನ ದೇವದೂತನು ಉಗ್ರ ರೂಪದಿಂದ ನನ್ನ ಬಳಿಗೆ ಬಂದು '' ಕೆಳಗೆಬೀಳು '' ಎಂದು ಮೂರಾವರ್ತಿ ಕೂಗಿ ಹೇಳಿದ. ಇದಿಷ್ಟೇ ನನಗೆ ನೆನಪು. ಆಗಲೇ ಶುರುವಾಯಿತು ನನ್ನ ಅಧಃಪಾತ. ದೇವತೆಗಳ ಸಹಾನುಭೂತಿಯ ಕೆಲವು ಶಬ್ದಗಳು ನನ್ನ ಕಿವಿಗೆ ಬಿದ್ದವು. ಸಜ್ಜನರ ಮಧ್ಯದಲ್ಲಿ ಬೀಳಬೇಕೆಂದು ನನ್ನ ಹಾರೈಕೆ. ಆ ದೇವತೆಗಳೇ ನನಗೆ ನೀವು ಯಜ್ಞ ಮಾಡುವ ಈ ಸ್ಥಳವನ್ನು ಹೇಳಿಕೊಟ್ಟರು ನನ್ನ ಪಾತಕ್ಕೆ ಯೋಗ್ಯ ತಾಣವೆಂದು. ಇಲ್ಲಿ ಹಾಯುವ ಹೊಗೆ, ಹರಡುವ ಹವಿಸ್ಸುಗಳ ಸುಗಂಧವನ್ನು ನೋಡಿ ದೇವತೆಗಳು ಹೇಳಿದ ಪವಿತ್ರ ಸ್ಥಳ, ಸಜ್ಜನರ ತಾಣ, ಇದೇ ಇರಬಹುದೆಂದು ಬಗೆದು ಇಲ್ಲಿಗೆ ಬಂದು ಬಿದ್ದೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು*

—o—

ಸ್ವರ್ಗಕ್ಕೆ ದಾರಿ ಏಳು. ಅಹಂಕಾರದಿಂದ ಆ ಏಳು ಮಾರ್ಗ ಹಾಳು

ಅಧ್ಯಾಯ - ೪೦

**ಅಷ್ಟಕ ಉವಾಚ**

**ಯದಾ ವಸನ್ನಂದನೇ ಕಾಮರೂಪೇ**
**ಸಂವತ್ಸರಾಣಾಮಯುತಂ ಶತಾನಾಮ್ ॥**
**ಕಿಂ ಕಾರಣಂ ಕಾರ್ತಯುಗಪ್ರಧಾನ**
**ಹಿತ್ವಾ ತದ್ವೈ ವಸುಧಾಮನ್ವಪದ್ಯಃ ॥**

ಕೃತಯುಗದಲ್ಲಿ ಕಥಾನಾಯಕನಾಗಿದ್ದ ಯಯಾತಿಯೇ, ನಂದನವನದಲ್ಲಿ ಕಾಮರೂಪಿಯಾಗಿ ಸುಖದಿಂದ ಸಾವಿರಾರುವರುಷ ವಾಸಮಾಡಿದ ನೀನು ಈಗ ಅದನ್ನು ತೊರೆದು ಭೂಮಿಯ ಕಡೆಗೆ ಬರಲು ಕಾರಣವೇನು ?

**ಯಯಾತಿ** :- ಹತ್ತಿರವಿದ್ದ ಹಣವೆಲ್ಲವೂ ಕ್ಷೀಣವಾದ ಬಳಿಕ ಬಂಧು ಬಾಂಧವರು ಇಷ್ಟಮಿತ್ರರು ಬಿಟ್ಟು ಹೋಗುವದಿಲ್ಲವೇ ? ಸ್ವರ್ಗದಲ್ಲಿಯೂ ಹಾಗೆಯೇ ಮನುಷ್ಯ ಸಂಪಾದಿಸಿದ ಪುಣ್ಯವು ಕ್ಷೀಣವಾಯಿತೆಂದರೆ.

**ಅಷ್ಟಕ** :- ಕ್ಷೀಣಪುಣ್ಯರು ಆಗುತ್ತಾರೆ ಎಂದರೆ ಏನು ಅರ್ಥ ? ಇದು ನನಗೆ ಸರಿಯಾಗಿ ತಿಳಿಯಲೊಲ್ಲದು. ಕ್ಷೀಣಪುಣ್ಯರಾದ ಬಳಿಕ ಅವರ ಸ್ಥಿತಿಗತಿ ಏನು ? ಅವರ ಗುಣರೂಪಗಳು ಹೇಗಿರುತ್ತವೆ. ಮುಂದೆ ಅವರು ಯಾರ ಮನೆಗೆ ಹೋಗುತ್ತಾರೆ ?

**ಯಯಾತಿ** :- ಮಾನವರು ಮಾಡಿದ ಪುಣ್ಯಕರ್ಮಗಳು ಪರಿಮಿತವಾಗಿರುತ್ತವೆ. ಹಾಗೂ ಕಾಮ್ಯಕರ್ಮಗಳಿಂದ ಲಭ್ಯವಾದ ಆ ಸ್ವರ್ಗಸುಖವು ಅಲ್ಪಕಾಲದ್ದೇ ಆಗಿರುತ್ತದೆ. ಆ ಪುಣ್ಯವು ಇರುವವರೆಗೆ ಮಾತ್ರ ಸ್ವರ್ಗಲೋಕದಲ್ಲಿ ಆ ಪುಣ್ಯಮಾಡಿದ ಚೇತನಗಳಿಗೆ ಅವಕಾಶ. ಅಲ್ಲಿಯವರೆಗೆ ಅವರಿಗೆ ಆ ಪುಣ್ಯ ಚೇತನಗಳಿಗೆ ಅಲ್ಲಿ ತಕ್ಕಸ್ಥಾನವೂ ಉಂಟು. ಉಚಿತಮಾನವೂ ಉಂಟು. ಆ ಪುಣ್ಯದ ಭಾಂಡವಲು ಕರಗಿದ ಕೂಡಲೇ ಸ್ವರ್ಗಲೋಕದಿಂದ ಹೊರಗೆ ಹಾಕುವರು. ಸ್ವರ್ಗದಿಂದ ಕೆಳಗೆ ದೂಡಲ್ಪಟ್ಟ ಆ ಪುಣ್ಯ ಭ್ರಷ್ಟ ಪ್ರಾಣಿಗಳು ಈ ನೆಲದ ಮೇಲೆ ನರಕ ದುಃಖವನ್ನು ಅನುಭವಿಸಲು ಬರುತ್ತಾರೆ. ಹದ್ದು ನರಿ ನಾಯಿ ರಾಕ್ಷಸ ಬೆಂಕಿಗಳ ಬಾಯಿಗೆ ಬೀಳಲಿಕ್ಕಾಗಿ ಬಗೆಬಗೆಯ ದೇಹಗಳನ್ನು ಧರಿಸಿ ಹುಟ್ಟುತ್ತಾರೆ. ಆದುದರಿಂದ ಮಾನವರು ಭೂಲೋಕದಲ್ಲಿ ಅಸ್ಥಿರವೂ ಅಲ್ಪವೂ ಆದ ಸ್ವರ್ಗಸುಖದ ಆಸೆಯಿಂದ ಕಾಮ್ಯ-ಕರ್ಮಗಳನ್ನು ಮಾಡದೇ ಶಾಶ್ವತ ಸುಖರೂಪವಾದ ಮೋಕ್ಷವನ್ನು ಹೊಂದುವ ಉದ್ದೇಶದಿಂದ ನಿಷ್ಕಾಮಕರ್ಮಗಳನ್ನೇ ಮಾಡಬೇಕು. ಅದರಿಂದಲೇ ಶಾಶ್ವತಸುಖ.

**ಅಷ್ಟಕ** :- ನರಿ ಹದ್ದುಗಳು ಮಾನವರನ್ನು ಹೇಗೆ ಹಿಂಸಿಸುತ್ತವೆ ? ಆಗ ಅವರ ಗತಿ ಏನು ? ಭೂಲೋಕದಲ್ಲಿ ಇರುವ ಆ ನರಕಗಳ ವಿಚಾರವೇನು ? ತಿಳಿಸಿರಿ.

**ಯಯಾತಿ** :- ಜೀವರು ಮರ, ಬಳ್ಳಿ, ನೀರು, ಗಾಳಿ, ನೆಲ, ಮುಗಿಲು ಅಥವಾ ಎರಡುಕಾಲಿನ ಇಲ್ಲವೇ ನಾಕುಕಾಲಿನ ಪ್ರಾಣಿಗಳ ಮುಖಾಂತರ ಗರ್ಭದಲ್ಲಿ ಪ್ರವೇಶ ಪಡೆಯುವರು. ಹೂವಿನ ರಸದಿಂದ ಒಡಗೂಡಿದ ರೇತಸ್ಸನ್ನು ಗಾಳಿಯು ಋತುಕಾಲದಲ್ಲಿ ಹೆಣ್ಣಿನ ಯೋನಿಗೆ ತಂದು ಸಾಗಿಸುವದು. ಗರ್ಭಿಣಿಯಾಗುವವಳ ರಜೋರೂಪವಾಗಿ ಅವಳಲ್ಲಿ ಪ್ರವೇಶಪಡೆಯುವದು. ಸ್ತ್ರೀಪುರುಷ ಸಂಪರ್ಕ ದಿಂದ ಶುಕ್ಲಶೋಣಿತ ಸಂಯೋಗವಾಗಿ ಗರ್ಭವು ಬೆಳೆಯುವದು. ಮುಂದೆ ಅದಕ್ಕೆ ಕಣ್ಣು, ಕಿವಿ ಮುಂತಾದ ಅವಯವಗಳು ಉಂಟಾಗಿ ರೂಪ ರಸ ಗಂಧ ಶಬ್ದ ಸ್ಪರ್ಶಗಳ ಜ್ಞಾನವು ಬರತೊಡಗುವದು. ಅದೇ ಗರ್ಭವೇ ನೆಲಕ್ಕೆ ಬಿದ್ದು ನರನಾಗಿ ಮತ್ತೆ ಸದಸತ್ ಕರ್ಮಗಳ ಅನುಷ್ಠಾನಕ್ಕೆ ಅಣಿಯಾಗುವನು. ಸಾಯುವತನಕ ಕರ್ಮ ಮಾಡುತ್ತಲೇ ಇರುವನು.

**ಅಷ್ಟಕ** :- ಸತ್ತ ಬಳಿಕ ಮನುಷ್ಯನನ್ನು ಮಣ್ಣಲ್ಲಿ ಹೂಳುವದು ಬೆಂಕಿಯಲ್ಲಿ ಸುಡುವದು. ಇಷ್ಟೆಲ್ಲ ಪೂರ್ಣನಾಶವಾಗಿ ಹೋದ ಬಳಿಕ ಆ ಜೀವನು ಮುಂದೆ ಮತ್ತೆ ಹುಟ್ಟಿ ಬರುವದು ಹೇಗೆ ?

**ಯಯಾತಿ** :- ಅಷ್ಟಕ, ಮರಣವು ಒಂದು ನಿದ್ದೆಯಿದ್ದಂತೆ. ಜೀವ ಹೋದ ಬಳಿಕ ಜೀವಿಯು ತಾನು ಮಾಡಿದ ಪುಣ್ಯಪಾಪಕಾರ್ಯಗಳಿಗೆ ಅನುಸಾರವಾಗಿ ಹಳೆದೇಹ ಬಿಟ್ಟು ಹೊಸ, ಜನ್ಮವನ್ನು ಪಡೆಯುತ್ತಾನೆ. ಪುಣ್ಯ ಮಾಡಿದವರು ಉತ್ತಮಜನ್ಮ ಉತ್ತಮದೇಹಗಳನ್ನು ಹೊಂದುತ್ತಾರೆ. ಪಾಪಮಾಡಿದವರು ಹುಳ, ಹುಪ್ಪಡಿ, ಕ್ರಿಮಿಕೀಟ, ಪಶು, ಪಕ್ಷಿ, ನೀಚ ನರರೂ ಕೂಡ ಆಗಿ ಹುಟ್ಟುವದುಂಟು.

**ಅಷ್ಟಕ** :- ಮಾನವರನ್ನು ದಿವ್ಯಲೋಕಗಳಿಗೆ ಕರೆದೊಯ್ಯುವ ಸದ್ಬುದ್ಧಿಯು ಏತರಿಂದ ಹುಟ್ಟುವದು ? ವಿದ್ಯೆಯಿಂದಲೋ ತಪಸ್ಸಿನಿಂದಲೋ ?

**ಯಯಾತಿ** :- ಸ್ವರ್ಗಾದಿ ದಿವ್ಯ ಲೋಕಗಳಿಗೆ ಹೋಗಲಿಕ್ಕೆ ಏಳುದಾರಿ ಎಂದು ಹಿರಿಯರ ಹೇಳಿಕೆ. ತಪಸ್ಸು, ದಾನ, ಇಂದ್ರಿಯ ನಿಗ್ರಹ, ದೇವರಲ್ಲಿ ಭಕ್ತಿ, ಅಕಾರ್ಯದಲ್ಲಿ ಲಜ್ಜೆ, ದಾಕ್ಷಿಣ್ಯ, ಭೂತದಯೆ ಇವೇ ಆ ಸಪ್ತ ಸ್ವರ್ಗದ್ವಾರಗಳು. ಅಹಂಕಾರವು ಈ ಏಳೂ ಗುಣಗಳನ್ನು ಹಾಳುಮಾಡಿ ಮನುಷ್ಯನ ಅಜ್ಞಾನವನ್ನು ಬೆಳಿಸಿ ಅವನನ್ನು ಅಧೋಗತಿಗೆ ಕರೆದೊಯ್ಯುವದು. ವೇದಶಾಸ್ತ್ರ ಓದಿ ಪಂಡಿತನಾಗಿಯೂ ದುರಭಿಮಾನಬಿಡದಿದ್ದರೆ ಇಲ್ಲಿ ಕೀರ್ತಿ ಇಲ್ಲ. ಮುಂದೆ ಸದ್ಗತಿಯಿಲ್ಲ. ವೇದಾಧ್ಯಯನದ ಪುಣ್ಯಫಲವನ್ನೆಲ್ಲ ಅಹಂಕಾರವು ನಾಶಮಾಡಿ ಬಿಡುತ್ತದೆ. ದಾನಮಾಡುವವರಿಗೂ ಯಜ್ಞಯಾಗ ಆಚರಿಸುವವರಿಗೂ ಅಹಂಕಾರ ಆವರಿಸುತ್ತದೆ. ಆದುದರಿಂದ ಶಾಸ್ತ್ರದಲ್ಲಿ ಹೇಳಿದಂತೆ ''ದೇವರು ಮಾಡಿಸುವವ, ಅವನು ಮಾಡಿಸಿದಂತೆ ನಾನು ಮಾಡುವವ. ಇದರ ಪುಣ್ಯ ಫಲವೂ ಅವನ ಪಾದಗಳಿಗೇ ಅರ್ಪಣ'' ಎಂದು ನಿಷ್ಕಾಮ ಭಾವನೆಯಿಂದ ಕರ್ಮಮಾಡಿ ಅದನ್ನು

ಭಗವಂತನಲ್ಲಿ ಸಮರ್ಪಿಸಬೇಕು. ಹೀಗೆ ಮಾಡಿದರೆ ಯಜ್ಞಾದಿ ಕರ್ಮಮಾಡಿದ ಅಭಿಮಾನ ಸೋಂಕುವದಿಲ್ಲ. ದಾನಮಾಡಿದ ಅಹಂಕಾರ ಮೂಡುವದಿಲ್ಲ. "ನಾನು ಮಹಾಜ್ಞಾನಿ" ಎಂಬ ಆತ್ಮ ಪ್ರತಿಷ್ಠೆಗೂ ಅವಕಾಶವಾಗುವದಿಲ್ಲ. ಆದುದರಿಂದ ವೇದದಲ್ಲಿ ನಿರ್ದೇಶಿಸಿದಂತೆಯೇ ದಾನ ಹೋಮ ಅಧ್ಯಯನಾದಿಗಳನ್ನು ಮಾಡಬೇಕು. ಅವನ ಆಜ್ಞಾರೂಪವಾದ ವೇದೋಕ್ತ ಕರ್ಮಾನುಷ್ಠಾನವೇ ಅವನ ಪೂಜೆ ಎಂದು ಮಾಡಿ ಎಲ್ಲರ ಹೃದಯವಾಸಿಯಾದ ಪರಮೇಶ್ವರನನ್ನು ಅರ್ಚಿಸಬೇಕು. ಇದರಿಂದ ಅವನ ಸನ್ನಿಧಾನವನ್ನು ಹೊಂದಿ ಮಾನವನು ಪರಮಶಾಂತಿಯನ್ನು ಹೊಂದುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು*



## ನಾಕು ಆಶ್ರಮ. ಆಗ ಅನುಸರಿಸುವ ಕ್ರಮ | ಅಧ್ಯಾಯ - ೪೧

**ಅಷ್ಟಕ ಉವಾಚ**

**ಚರನ್ ಗೃಹಸ್ಥ: ಕಥಮೇತಿ ದೇವಾನ್ ಕಥಂ ಭಿಕ್ಷು: ಕಥಮಾಚಾರ್ಯ ಕರ್ಮಾ ||**
**ವಾನಪ್ರಸ್ಥ: ಸತ್ಪಥೇ ಸನ್ನಿವಿಷ್ಟೋ ಬಹೂನ್ಯಸ್ಮಿನ್ ಸಂಪ್ರತಿ ವೇದಯಂತಿ||**

**ಅಷ್ಟಕ** :- ಮನುಷ್ಯರಿಗೆ ದೇವತಾ ಸನ್ನಿಧಾನ ಪ್ರಾಪ್ತಿಯಾಗಬೇಕಾದರೆ ಉಪಾಯವೇನು? ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಇವರ ಆಚಾರಗಳಾವವು? ಸನ್ಮಾರ್ಗದಲ್ಲಿದ್ದ ಅವರು ಇಲ್ಲಿ ಅನುಸರಿಸಬೇಕಾದ ಧರ್ಮಗಳು ಯಾವವು?

**ಯಯಾತಿ** :- ಬ್ರಹ್ಮಚಾರಿಯು ಗುರು ಕರೆದು ಹೇಳಿದಾಗ ಶಾಸ್ತ್ರವನ್ನು ಅಧ್ಯಯನಮಾಡಬೇಕು. ಅವರ ಸೇವೆಗೆ ಸದಾ ಸಿದ್ಧನಿರಬೇಕು. ಅವರಿಗಿಂತ ಮೊದಲು ಎದ್ದು ಅವರು ಮಲಗಿದ ಬಳಿಕ ಮಲಗಬೇಕು. ಸೌಮ್ಯನಾಗಿರಬೇಕು. ಇಂದ್ರಿಯಗಳನ್ನು ವಶದಲ್ಲಿ ಇರಿಸಬೇಕು. ಅಧ್ಯಯನವು ಅವನ ಸ್ವಭಾವವೇ ಆಗಬೇಕು. ಬ್ರಹ್ಮಚರ್ಯ ವ್ರತದಿಂದ ಧೀರನಾಗಿ ಇದ್ದು ಸದಾಚಾರದಲ್ಲಿ ಯಾವಾಗಲೂ ಜಾಗರೂಕನಾಗಿಯೇ ಇರಬೇಕು. ಗೃಹಸ್ಥಾಶ್ರಮಿಯು ನ್ಯಾಯ ಮಾರ್ಗದಿಂದ ಹಣವನ್ನು ಸಂಪಾದಿಸಿ ಅದರಿಂದ ಯಜ್ಞಯಾಗ ದಾನಧರ್ಮ ಅತಿಥಿ ಭೋಜನ ಮುಂತಾದವುಗಳನ್ನು ಮಾಡಬೇಕು. ಇದು ಗೃಹಸ್ಥರ ಮುಖ್ಯ ಧರ್ಮವಾಗಿವೆ. ಹೆರವರ ಪದಾರ್ಥಗಳನ್ನು ಅವರು ಕೊಡದೇ ಇರುವಾಗ ಬಲಾತ್ಕಾರ ಮಾಡಿ ತೆಗೆದುಕೊಳ್ಳಬಾರದು. ಯಾರಿಗೂ ಉಪದ್ರವವನ್ನು ಕೊಡದೆ, ಯಾವ ಪಾಪಕಾರ್ಯಗಳನ್ನೂ ಮಾಡದೆ, ಸ್ವಾವಲಂಬನದಿಂದ ಜೀವಿಸಿ, ದಾನಧರ್ಮಗಳನ್ನು ಮಾಡುತ್ತ, ಅರಣ್ಯದಲ್ಲಿ ಇದ್ದು, ಆಹಾರದಲ್ಲಿಯೂ ನಿತ್ಯಕೃತ್ಯಗಳಲ್ಲಿಯೂ ನೇಮವನ್ನು ತಾಳಿ, ದೇವತಾರಾಧನೆ ಮಾಡುವದು ವಾನಪ್ರಸ್ಥಾಶ್ರಮದ ಮುಖ್ಯ ಧರ್ಮವಾಗಿರುತ್ತದೆ. ಇದರಿಂದಲೆ ಅವನಿಗೆ ಸಿದ್ಧಿ.

ಸನ್ಯಾಸಿಯಾದವನು ಯಾವದೇ ಕಲೆ ಅಥವಾ ವಿದ್ಯೆಯನ್ನು ತನ್ನ ಉಪಜೀವನಕ್ಕಾಗಿ ಉಪಯೋಗಿಸಬಾರದು. ಸ್ವಂತಮನೆಮಾಡಿಕೊಂಡು ವಾಸಿಸಬಾರದು. ಯಾವದನ್ನೂ ಹಚ್ಚಿಕೊಳ್ಳಬಾರದು. ಮನೆ ಮಾರು ಮಡದಿ ಮಕ್ಕಳ ಮಾಯಾಪಾಶದಿಂದ ಮುಕ್ತನಾಗಿ ಸರ್ವಸಂಗ ಪರಿತ್ಯಾಗಮಾಡಬೇಕು. ಗಿಡದಡಿಯಲ್ಲಿ ಮಲಗಬೇಕು. ಬದುಕಲಿಕ್ಕೆ ಬೇಕಾದುದಷ್ಟನ್ನೇ ಬಳಿಯಲ್ಲಿ ಇಟ್ಟುಕೊಳ್ಳಬೇಕು. ಒಂದೆಡೆಯಲ್ಲಿ ನೆಲೆ ನಿಲ್ಲಬಾರದು. ಒಂದೇ ಬಟ್ಟೆಯನ್ನು ಉಟ್ಟುಕೊಂಡು ದೇಶಾಟನಮಾಡುತ್ತ ಭಗವಂತನ ಚಿಂತನೆಯನ್ನು ನಿರಂತರವೂ ಮಾಡುತ್ತಲೇ ಇರಬೇಕು. ಇದು ಸನ್ಯಾಸಿಯ ಲಕ್ಷಣ.

ಕಾಮಾತುರರಾಗಿ ಇಂದ್ರಿಯ ಲೋಲುಪತೆಯಿಂದ ಯಾವರಾತ್ರಿಯನ್ನು ಸಾಮಾನ್ಯ ಜನರು ವಿಹಾರ ವಿಲಾಸಗಳಲ್ಲಿ ಕಳೆಯುವರೋ ಅದೇ ರಾತ್ರಿಯನ್ನು ಜ್ಞಾನಿಯಾದವನು ಇಂದ್ರಿಯಗಳನ್ನೂ ಮನಸ್ಸನ್ನೂ ಗೆಲ್ಲುವದಕ್ಕೆ ಅರಣ್ಯದಲ್ಲಿ ಕಳೆಯಬೇಕು. ಹೀಗೆ ಜಿತೇಂದ್ರಿಯನಾಗಿ ಜಿತಮನಸ್ಕನಾಗಿ ವನದಲ್ಲಿ ಇದ್ದುಕೊಂಡು ನಿರಂತರ ಭಗವದ್‌ಚಿಂತನ ಮಾಡುತ್ತಲೇ ದೇಹಯಾತ್ರೆಮಾಡಿದ ಮನುಷ್ಯನು ತನ್ನ ಹಿಂದುಮುಂದಿನ ಹತ್ತುತಲೆಮಾರಿನ ಪಿತೃಗಳನ್ನೂ, ಜ್ಞಾತಿಗಳನ್ನೂ ಉದ್ಧಾರಮಾಡುತ್ತಾನೆ.

**ಅಷ್ಟಕ** :- ಮುನಿಗಳಲ್ಲಿ ಎಷ್ಟು ವಿಧವಿರುತ್ತಾರೆ ಹಾಗೂ ಆ ಮುನಿ ವೃತ್ತಿಯು ಎಷ್ಟು ಬಗೆಯಾಗಿರುತ್ತದೆ ? ಅದನ್ನೆಲ್ಲ ನನಗೆ ಕೇಳಬೇಕೆಂದು ಅಪೇಕ್ಷೆ ಇದೆ.

**ಯಯಾತಿ** :-ಗ್ರಾಮಗಳಿಂದ ವಿಮುಖನಾಗಿ ಅರಣ್ಯದಲ್ಲಿ ವಾಸಮಾಡುವವನೂ ಅರಣ್ಯದಿಂದ ವಿಮುಖನಾಗಿ ಗ್ರಾಮದಲ್ಲಿ ವಾಸಿಸುವವನೂ ಮುನಿ ಎನಿಸುವನು.

**ಅಷ್ಟಕ** :- ಮೊದಲನೆಯದೇನೋ ಸರಿ. ಆದರೆ ಎರಡನೆಯ ಮುನಿ ವೃತ್ತಿ ನನಗೆ ತಿಳಿಯಲಿಲ್ಲ. ವನದಿಂದ ವಿಮುಖನಾಗಿ ಗ್ರಾಮದಲ್ಲಿ ಇರುವವನು ಮುನಿಯಂತಾಗುವನು ?

**ಯಯಾತಿ** :- ಅರಣ್ಯದಲ್ಲಿ ವಾಸಮಾಡಿ ಮುನಿವೃತ್ತಿಯನ್ನು ಅಂಗೀಕರಿಸಿದವನು ಗ್ರಾಮದಲ್ಲಿ ಹುಟ್ಟಿದ ಪದಾರ್ಥವನ್ನು ತನ್ನ ಸುಖ ಸೌಕರ್ಯಕ್ಕಾಗಿ ಉಪಯೋಗಿಸತಕ್ಕದ್ದಲ್ಲ. ಇದಕ್ಕೆ ಗ್ರಾಮದಿಂದ ವಿಮುಖನಾಗುವದು ಎಂದರ್ಥ. ಇದರಂತೆ ಊರಿನಲ್ಲಿ ಇದ್ದರೂ ಮನೆಯಲ್ಲಿ ವಾಸಮಾಡದೆ ಯಾರನ್ನೂ ಹಚ್ಚಿಕೊಳ್ಳದೆ ಲಂಗೋಟಿಮಾತ್ರ ಬಟ್ಟೆಯನ್ನು ಧರಿಸಿ ಬದುಕಲು ಬೇಕಾಗುವಷ್ಟೇ ಆಹಾರವನ್ನು ಸ್ವೀಕರಿಸಿ ಜ್ಞಾನಭಕ್ತಿವೈರಾಗ್ಯಗಳಿಂದ ದೇವರಧ್ಯಾನಮಾಡುತ್ತ ಇರುವವನು ಅರಣ್ಯದಿಂದ ವಿಮುಖನಾದ ಮಹಾಮುನಿ ಎನಿಸುವನು. ಮುಖ್ಯವಾಗಿ ವಿಷಯ ವಾಸನೆಯನ್ನು ಬಿಟ್ಟು, ಇಂದ್ರಿಯಗಳನ್ನೆಲ್ಲ ಗೆದ್ದು, ಕಾಮ್ಯಕರ್ಮಗಳನ್ನು ತೊರೆದು, ಕಾಮಕ್ರೋಧಗಳನ್ನು ಪರಿತ್ಯಾಗಮಾಡಿ, ಸರ್ವಸಂಗವಿರಹಿತನಾಗಿ ದೇವರ ಸಂತತ ಧ್ಯಾನದಲ್ಲಿಯೇ ದೇಹವನ್ನು, ಸವೆಯಿಸುವದು ಮುನಿವೃತ್ತಿ ಎಂದು ಹೇಳಲ್ಪಡುತ್ತದೆ. ಇಂಥ ಮುನಿಯು ಬೇಗನೇ ಸಿದ್ಧಿಯನ್ನು ಪಡೆಯುತ್ತಾನೆ. ತಪಸ್ಸಿನಿಂದ ಮಾಂಸ ಕರಗಿ, ಮೈ ಒಣಗಿ ಎಲವು, ಚರ್ಮ ಮಾತ್ರ ದೇಹದಲ್ಲಿ ಉಳಿದು ಅಸಂಪ್ರಜ್ಞಾತ ಸಮಾಧಿಯಲ್ಲಿ ನಿಂತು

ಇಹ-ಲೋಕಗಳನ್ನು ಗೆದ್ದು ಧ್ಯಾನಕ್ಕೆ ಲೀನನಾದ ಮಹಾಮುನಿಯು ಪರಮಾತ್ಮನ ಪ್ರಸಾದದಿಂದ ಮೋಕ್ಷ ಸುಖವನ್ನು ಪಡೆಯುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೊಂದನೆಯ ಅಧ್ಯಾಯವು ಮುಗಿದುದು*



## ಅತ್ಯಂತ ಶ್ಲಾಘ್ಯ ಯಯಾತಿಯ ವೈರಾಗ್ಯ

**ಅಧ್ಯಾಯ - ೪೨**

**ಅಷ್ಟಕ ಉವಾಚ**

**ಕತರಸ್ತ್ವೇತಯೋಃ ಪೂರ್ವಂ ದೇವಾನಾಮೇತಿ ಸಾಮ್ಯತಾಂ ।**
**ಉಭಯೋರ್ಧಾವತೋ ರಾಜನ್ ಸೂರ್ಯಾಚಂದ್ರಮಸೋರಿವ ॥**

**ಅಷ್ಟಕ** :- ಮಹಾರಾಜರೇ, ಅರಣ್ಯದಲ್ಲಿ ಇದ್ದು ಗ್ರಾಮವಿಮುಖರಾದ ಮುನಿ, ಗ್ರಾಮದಲ್ಲಿ ಇದ್ದು ಅರಣ್ಯವಿಮುಖರಾದ ಮುನಿ, ಹೀಗೆ ಎರಡು ಬಗೆಯ ಮುನಿಗಳ ವಿಷಯವನ್ನು ತಾವು ಹೇಳಿದಿರಿ. ಸೂರ್ಯಚಂದ್ರರಂತೆ ಪ್ರಕಾಶಮಾನರಾದ ಇವರಿಬ್ಬರು ಮೋಕ್ಷದ ದಾರಿಯೆಡೆಗೆ ಪರಮಾರ್ಥಪಥದಲ್ಲಿ ಓಡುವವರೇ. ಆದರೆ ಇವರಲ್ಲಿ ಮೊದಲು ದೇವತಾ ಸಾಮ್ಯವನ್ನು ಯಾರು ಹೊಂದುತ್ತಾರೆ ?

**ಯಯಾತಿ** :- ಊರಲ್ಲಿದ್ದು ಮನೆಯಲ್ಲಿ ಇರದಿರುವ, ಕಾಮಿಗಳ ನಡುವೆ ಇದ್ದು, ಕಾಮಗಳನ್ನು ತೊರೆದು, ವಿಷಯ ಸುಖದ ಮಧ್ಯದಲ್ಲೇ ಇದ್ದು, ದೇವರನ್ನು ಧ್ಯಾನಿಸುತ್ತ ಜಿತೇಂದ್ರಿಯನಾಗಿ ಗ್ರಾಮಗಳಲ್ಲಿ ಸಂಚರಿಸುವ ಮುನಿ ಮೊಟ್ಟ ಮೊದಲು ದೇವತಾ ಸಾಮ್ಯವನ್ನು ಹೊಂದುತ್ತಾನೆ. ಅನಂತರ ಗ್ರಾಮವಿಮುಖನಾಗಿ ವನದಲ್ಲಿ ವಾಸಿಸುವ ಮುನಿ ಸಿದ್ಧಿ ಪಡೆಯುತ್ತಾನೆ.

**ಅಷ್ಟಕ** :- ರಾಜನೇ, ನೀನು ಇನ್ನೂ ಯುವಕನಾಗಿರುವಿ. ಹಾರಗಳನ್ನು ಧರಿಸಿ ಒಳ್ಳೇ ತೇಜಸ್ವಿ ಪುರುಷನಾಗಿ ತೋರುವಿ. ನಿನ್ನನ್ನು ಇಲ್ಲಿಗೆ ಯಾರು ಕಳಿಸಿದರು ? ಎಲ್ಲಿಂದ ಬಂದೆ ಎಲ್ಲಿಗೆ ಹೋಗುವಿ ? ನಿನ್ನ ಸ್ಥಾನಮಾನವೇನು ?

**ಯಯಾತಿ** :- ಪುಣ್ಯವೆಲ್ಲ ತೀರಿದ ಬಳಿಕ ನನ್ನ ಸ್ವರ್ಗವಾಸವು ಮುಗಿಯಿತು. ಇನ್ನು ಭೂಲೋಕದ ನರಕವನ್ನು ಪ್ರವೇಶಿಸುವದರ ಸಲುವಾಗಿ ಮುಗಿಲಿನೆತ್ತರದಿಂದ ನನ್ನನ್ನು ನೆಲಕ್ಕೆ ನೂಕಿದ್ದಾರೆ. ಆದರೆ ನಾನು ಬರುವಾಗ ''ಸಜ್ಜನರ ಮಧ್ಯದಲ್ಲಿಯೇ ಬೀಳಬೇಕು,'' ಎಂದು ದೇವೇಂದ್ರನಿಂದ ವರಪಡೆದುಕೊಂಡು ಬಂದಿದ್ದೇನೆ. ಅವನ ವರದಿಂದ ನಿಮ್ಮಂಥ ಮಹಾತ್ಮರ ಸಹವಾಸವು ನನಗೆ ದೊರೆತಿದೆ. ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಟ್ಟು ನಾನು ಮತ್ತೆ ಕೆಳಗೆ ಬೀಳುತ್ತೇನೆ. ಆದುದರಿಂದ ಲೋಕರಕ್ಷಕರಾದ ಬ್ರಾಹ್ಮಣರು ನನ್ನ ಮಾತನ್ನು ಕೇಳಲು ತ್ವರೆಮಾಡಲಿ.

**ಅಷ್ಟಕ** :- ಭೂಮಿಗೆ ಬೀಳುತ್ತಿರುವ ಯಯಾತಿ ರಾಜನೇ, ನನ್ನದು ಇನ್ನೊಂದು ಪ್ರಶ್ನೆ. ನಾನು ಮಾಡಿದ ಅನೇಕ ಪುಣ್ಯಕರ್ಮಗಳ ಪ್ರಭಾವದಿಂದ ಅಂತರಿಕ್ಷ ಇಲ್ಲವೆ ಸ್ವರ್ಗಾದಿ ಸ್ಥಾನಗಳಲ್ಲಿ ಶುಭಲೋಕಗಳು ಏನಾದರೂ ಪ್ರಾಪ್ತವಾಗುವವೇ ?

**ಯಯಾತಿ** :- ರಾಜಶ್ರೇಷ್ಠನೇ, ಭೂಲೋಕದಲ್ಲಿ ಪಶುಪಕ್ಷಿ ಹಸು - ಕುದುರೆಗಳು ಎಷ್ಟಿವೆಯೋ ಅಷ್ಟು ಲೋಕಗಳು ನಿನಗೆ ಸ್ವರ್ಗದಲ್ಲಿ ಸಿದ್ಧವಾಗಿವೆ.

**ಅಷ್ಟಕ** :- ಹಾಗಾದರೆ ಆ ನನ್ನ ಶುಭಲೋಕಗಳನ್ನೆಲ್ಲ ನಿನಗೆ ಕೊಟ್ಟು ಬಿಡುತ್ತೇನೆ. ನೀನು ಇನ್ನು ಕೆಳಗೆ ಬೀಳಬೇಡ. ಅಂತರಿಕ್ಷ ಸ್ವರ್ಗ ಮತ್ತು ಉಳಿದ ಕಡೆಗಳಲ್ಲಿನನ್ನ ಪುಣ್ಯ ಪ್ರಭಾವದಿಂದ ಲಭ್ಯವಾಗುವ ಶುಭಲೋಕಗಳನ್ನೆಲ್ಲ ನೀನೇ ಆಕ್ರಮಿಸು, ಇನ್ನು ನಿನ್ನ ಈಗ ಅಧಃಪಾತವು ಸಾಕು, ಮೇಲೆ ನಡೆ.

**ಯಯಾತಿ** :- ನಾನು ಬ್ರಾಹ್ಮಣನಲ್ಲ. ಬ್ರಹ್ಮನನ್ನು ಯಥಾಶಕ್ತಿ ತಿಳಿದಿದ್ದೇನೆ. ಬ್ರಾಹ್ಮಣರಿಗೆ ಹಿಂದೆ ದಾನಕೊಟ್ಟಿದ್ದೇನೆ. ಈಗಲೂ ದಾನಕೊಡುವದೇ ನನ್ನ ಕರ್ತವ್ಯ. ಅಂದ ಬಳಿಕ ನೀನು ದಾನಮಾಡುವ ಶುಭಲೋಕಗಳನ್ನು ನಾನು ಹೇಗೆ ಪರಿಗ್ರಹಿಸಲಿ ? ನನ್ನ ಹೆಂಡತಿಯೇನೋ ಬ್ರಾಹ್ಮಣನ ಮಗಳೇ. ಆದರೂ ಕ್ಷತ್ರಿಯನಾದವನು ಇನ್ನೊಬ್ಬರಿಂದ ದಾನ ಪಡೆದು ದೀನನಾಗಿ ಬಾಳಬಾರದು.

**ಪ್ರತರ್ದನ** :- ಮಹಾರಾಜನೇ, ಮೇಲಿನ ಲೋಕಗಳಲ್ಲಿ ನನಗೇನಾದರೂ ಸ್ಥಾನಮಾನಗಳು ಉಂಟೇ ?

**ಯಯಾತಿ :-** ರಾಜನೇ, ನಿನಗೂ ಮೇಲೆ ಅನೇಕಾನೇಕ ಶುಭಲೋಕಗಳು ಕಾದಿವೆ. ಒಂದೊಂದು ಲೋಕಗಳಲ್ಲಿ ದೇವಮಾನದ ಏಳುನೂರು ದಿನಗಳವರೆಗೆ ವಾಸಮಾಡಬಹುದು. ಅಲ್ಲಿ ಜೇನುತುಪ್ಪ ಮುಂತಾದ ಭೋಗ್ಯ ವಸ್ತುಗಳೆಲ್ಲವೂ ಸಮೃದ್ಧವಾಗಿವೆ. ಅಲ್ಲಿ ದುಃಖವೆಂಬುದೇ ಇಲ್ಲ. ಇಂಥ ದಿವ್ಯಲೋಕಗಳು ನಿನ್ನನ್ನು ಎದುರು ನೋಡುತ್ತಿವೆ.

**ಪ್ರತರ್ದನ** :- ಮಹಾರಾಜನೇ ಅಲ್ಲಿ ಮೇಲೆ ನನಗಾಗಿ ಕಾದಿರುವ ಶುಭ ಲೋಕಗಳೆಲ್ಲವೂ ಇಂದಿನಿಂದ ನಿನ್ನದಾಗಲಿ. ನೀ ಇನ್ನು ಕೆಳಗೆ ಬೀಳಬೇಕಾಗಿಲ್ಲ. ನನಗೆ ದೊರಕಬೇಕಾದ ಲೋಕಗಳನ್ನೆಲ್ಲ ನಿನಗೆ ಕೊಟ್ಟು ಬಿಟ್ಟಿದ್ದರಿಂದ ಅವೆಲ್ಲವುಗಳೂ ನಿನ್ನವಾಗಿವೆ. ನೀನು ಕೆಳಗೆ ಬೀಳುವುದನ್ನು ಬಿಟ್ಟು ಮೇಲಿನ ಆ ಲೋಕಗಳಲ್ಲಿ ವಾಸಿಸು.

**ಯಯಾತಿ** :- ನಾನೂ ನಿಮ್ಮಂತೆ ತೇಜಸ್ವಿಯಾದ ರಾಜನಾಗಿದ್ದೆ. ನನ್ನ ದುರ್ದೈವದಿಂದ ಇಂದು ಇಂಥ ಆಪತ್ತು ನನಗೆ ಒದಗಿ ಬಂದಿದೆ. ಧರ್ಮಮಾರ್ಗದ ತಿಳುವಳಿಕೆಯುಳ್ಳ ನಾನು ಬೇರೆ ರಾಜರು ಕಷ್ಟಪಟ್ಟು ಸಂಪಾದಿಸಿದ ಪುಣ್ಯಲೋಕಗಳನ್ನು ದೀನನಾಗಿ ಪಡೆದುಕೊಳ್ಳಲಾರೆ. ತಿಳುವಳಿಕೆಯುಳ್ಳ ರಾಜರು ದೈವವಶಾತ್ ದುಃಖ ಒದಗಿದಾಗ ಧರ್ಮಬಿಟ್ಟು ದೀನರಾಗಿ ಹೆರವರು ದಾನಮಾಡಿದ್ದನ್ನು ತೆಗೆದು ಕೊಳ್ಳಬಾರದು. ಈ ಕಾಲದಲ್ಲಿಯೂ ನಾನು ಯುಕ್ತಾಯುಕ್ತ ಪರಿಶೀಲನೆಯನ್ನುಮಾಡಿ ಈವರೆಗೆ ಯಾರೂ ಮಾಡದಿರುವ ಅಪೂರ್ವ ಕಾರ್ಯವನ್ನು ಮಾಡುವೆನು.'' ಯಯಾತಿಯ ಈ ಮಾತನ್ನು ಕೇಳಿ ವಸುಮಾನ್ ರಾಜಶ್ರೇಷ್ಠನು ನುಡಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು*

—o—

## ಅಧ್ಯಾಯ - ೪೩

**ವಸುಮಾನ್ ಉವಾಚ**

**ಪೃಚ್ಛಾಮ್ಯಹಂ ವಸುಮಾನೌಷದಶ್ವಿ**
**ರ್ಯದ್ಯಸ್ತಿ ಲೋಕೋ ದಿವಿ ಮಹ್ಯಂ ನರೇಂದ್ರ ॥**

**ಸ್ವರ್ಗೇಽಂತರಿಕ್ಷೇ ಪ್ರಥಿತೋ ಮಹಾತ್ಮನ್**
**ಕ್ಷೇತ್ರಜ್ಞಂ ತ್ವಾಂ ತಸ್ಯ ಧರ್ಮಸ್ಯ ಮನ್ಯೇ ॥**

**ವಸುಮಾನ್** - ಮಹಾರಾಜ, ನಾನು ಔಷದಶ್ವರಾಜನ ಮಗ, ವಸುಮಾನ್ ಎಂದು ನನ್ನ ಹೆಸರು. ಸ್ವರ್ಗಾಂತರಿಕ್ಷಾದಿಗಳಲ್ಲಿ ನನಗಾಗಿ ಏನಾದರೂ ಶುಭಲೋಕ ಪ್ರಾಪ್ತಿ ಉಂಟೆ? ಯಾವ ಯಾವ ಕ್ಷೇತ್ರಗಳಲ್ಲಿ ಯಾರ ಯಾರ ಪಾಲು ಸ್ಥಾನಮಾನ ಎಷ್ಟು, ಏನು ಎಂಬುದನ್ನೆಲ್ಲ ಮಹಾತ್ಮನಾದ ನೀನು ಬಲ್ಲೆ. ಅದಕ್ಕಾಗಿ ನಿನ್ನನ್ನು ನಾನು ಕೇಳುತ್ತಲಿದ್ದೇನೆ.

**ಯಯಾತಿ** :- ಸೂರ್ಯನ ಬೆಳಕಿನಿಂದ ಎಷ್ಟು ದೇಶಗಳು ಬೆಳಗುತ್ತಿವೆಯೋ ಅಷ್ಟು ವಿಶಾಲವಾದ ಲೋಕಗಳು ನಿನ್ನ ಭೋಗಕ್ಕಾಗಿ ಮೇಲೆ ಕಾದಿವೆ.

**ವಸುಮಾನ್** :- ಮಹಾರಾಜನೇ, ನೀನು ಇನ್ನು ಕೆಳಗೆ ಬೀಳುವ ಕಾರಣವಿಲ್ಲ. ನನ್ನ ಶುಭ ಲೋಕಗಳನ್ನೆಲ್ಲ ನಾನು ನಿನಗೆ ಧಾರೆಎರೆದುಕೊಟ್ಟುಬಿಡುತ್ತೇನೆ. ಕ್ಷತ್ರಿಯನಾದ ನಿನಗೆ ದಾನ ತೆಗೆದುಕೊಳ್ಳಲು ಸಂಕೋಚವೆನಿಸುತ್ತಿದ್ದರೆ ನನ್ನ ಶುಭ ಲೋಕಗಳನ್ನು ಕ್ರಯಕ್ಕೆ ತೆಗೆದು ಕೊಂಡು ಬಿಡು. ಕ್ಷತ್ರಿಯರು ಕೊಂಡುಕೊಂಡರೆ ಅಧರ್ಮವಲ್ಲವಷ್ಟೇ ? ಈಗ ನಿನ್ನಲ್ಲಿ ಹಣವಿಲ್ಲದಿದ್ದರೂ ಚಿಂತೆ ಇಲ್ಲ. ಹಿಡಿ ಹುಲ್ಲನ್ನು ನನಗೆ ಕೊಟ್ಟು ಆ ಶುಭಲೋಕಗಳನ್ನು ಖರೀದಿಮಾಡು.

**ಯಯಾತಿ** :- ಇಂಥ ಸುಳ್ಳು ವ್ಯಾಪಾರವನ್ನು ನಾನು ಸಣ್ಣವನಿದ್ದಾಗ ಹುಡುಗಾಟದಲ್ಲಿಯೂ ಮಾಡಲಿಲ್ಲ. ಈಗ ಹೇಗೆ ಮಾಡಲಿ ? ಹಿಡಿಹುಲ್ಲಿಗೆ ದಿವ್ಯಲೋಕಗಳನ್ನು ಕೊಂಡುಕೊಳ್ಳುವಂಥ ಮೋಸದ ವ್ಯಾಪಾರವನ್ನು ನಾನು ಮಾಡಲಾರೆ.

**ವಸುಮಾನ್** :- ಮಹಾರಾಜನೇ, ನೀನು ಬೇಕಾದರೆ ಹೋಗು ಸಾಕಾದರೆ ಬಿಡು. ನಾನು ನನ್ನ ಶುಭಲೋಕಗಳನ್ನು ನಿನಗೆ ಕೊಟ್ಟುಬಿಟ್ಟಿದ್ದೇನೆ. ಅವು ಇಂದಿನಿಂದ ನಿನ್ನವಾಗಿವೆ. ನಾನು ಇನ್ನು ಆ ಲೋಕಗಳಿಗೆ ಹೋಗಲಾರೆ. ಇದರಂತೆ ಶಿಬಿ ಚಕ್ರವರ್ತಿಯ ಸಲುವಾಗಿ ಅಸಂಖ್ಯ ದಿವ್ಯಲೋಕಗಳು ಮೇಲೆ ಸಿದ್ಧವಾಗಿದ್ದವು. ಅವನೂ ಕೂಡ ತನ್ನ ಪುಣ್ಯದಿಂದ ಪ್ರಾಪ್ತವಾದ ಆ ಎಲ್ಲ ದಿವ್ಯಲೋಕಗಳನ್ನು ಯಯಾತಿ ಮಹಾರಾಜನಿಗೆ ಕೊಡಲು ಮುಂದೆ ಬಂದನು. ಯಯಾತಿಯು ಅವನನ್ನು

ನಿರಾಕರಿಸಲು ಶಿಬಿಚಕ್ರವರ್ತಿಯು ತಾನೂ ಆ ಲೋಕಗಳಿಗೆ ಪ್ರವೇಶಿಸುವದಿಲ್ಲ ಎಂದು ಹೇಳಿದನು. ಏನಾದರೂ ಯಯಾತಿರಾಜನು ಒಪ್ಪಲಿಲ್ಲ. ಆಗ ಅಷ್ಟಕ, ಪ್ರತರ್ದನ, ವಸುಮಾನ್, ಶಿಬಿಚಕ್ರವರ್ತಿ ಮುಂತಾದ ಎಲ್ಲ ರಾಜರೂ ಸೇರಿ ತಮ್ಮ ಪುಣ್ಯಾರ್ಜಿತವಾದ ಲೋಕಗಳನ್ನೆಲ್ಲ ಯಯಾತಿ ರಾಜನಿಗೆ ಕೊಡಮಾಡಿದರು. ''ರಾಜರ್ಷಿಯೇ ನಮ್ಮ ಪಾಲಿನ ಲೋಕಗಳನ್ನೆಲ್ಲ ನಾವು ನಿನಗೆ ಕೊಟ್ಟು ಬಿಟ್ಟಿದ್ದೇವೆ. ನಿನ್ನ ಪಾಲಿನ ನರಕಕ್ಕೆ ನಾವು ಹೋಗುತ್ತೇವೆ. ನಾವು ಕೊಟ್ಟ ದಿವ್ಯಲೋಕಗಳನ್ನು ನಾವಂತೂ ಪ್ರವೇಶಿಸುವದಿಲ್ಲ. ನಿನ್ನ ಅಧೀನವಾದ ಆ ಲೋಕಗಳಿಗೆ ಹೋಗುವದು ಬಿಡುವದೂ ನಿನಗೇ ಸೇರಿದ್ದು.''

**ಯಯಾತಿ** :- ರಾಜರ್ಷಿಗಳೇ ನೀನು ನಿಮ್ಮ ಘನತೆ ದೊಡ್ಡಿಸ್ತನ ಮತ್ತು ಮಾಹಾತ್ಮ್ಯಗಳಿಗೆ ಅನುಗುಣವಾಗಿ ಅನುರೂಪವಾಗಿಯೇ ಮಾತನಾಡಿದ್ದೀರಿ. ಸತ್ಯರೂಪಿಯಾದ ಪರಮಾತ್ಮನ ದರ್ಶನಮಾಡಿಕೊಂಡ ನಿಮ್ಮ ಬಾಯಿಂದ ಸತ್ಯಾತ್ಮಕವಾದ ಮಾತುಗಳು ಬಂದರೆ ಆಶ್ಚರ್ಯವಲ್ಲ. ದಾನ, ಧರ್ಮ, ಪರೋಪಕಾರಗಳು ನಿಮ್ಮ ಸ್ವಭಾವವೇ ಆಗಿವೆ. ಆದರೆ ನಾನು ಮಾತ್ರ ನೀವು ಎಷ್ಟೇ ಹೇಳಿದರೂ ನಿಮ್ಮ ದಾನವನ್ನು ಸ್ವೀಕರಿಸಲಾರೆ. ನಾನು ಮಾಡದಿರುವ ಪುಣ್ಯರಾಶಿಯ ಫಲವಾದ ದಿವ್ಯಲೋಕಗಳನ್ನು ಸ್ವೀಕರಿಸಲಾರೆ. ನನಗೆ ನಿಮ್ಮ ಪಾಲಿನ ಶುಭಲೋಕಗಳನ್ನು ಕೊಟ್ಟು ನರಕಕ್ಕೆ ಹೋಗುತ್ತೇವೆ ಎಂದು ನೀನು ಹೇಳಿದ್ದೀರಿ. ಆದರೆ ಇದು ಶಕ್ಯವಿಲ್ಲ. ಇಂಥ ಮಹಾದಾನ ಮಾಡಿದವರಿಗೆ ನರಕವು ಹೇಗಾದೀತು ? ಈ ದಾನಕ್ಕೆ ತಕ್ಕ ಮಹಾಫಲವು ನಿಮಗೆ ಮುಂದೆ ಅನಂತವಾಗಿ ಬರುವದರಲ್ಲಿ ಸಂದೇಹವಿಲ್ಲ.

**ಅಷ್ಟಕ** :- ಓಹ್ ! ಇದೇನು ! ಐದು ಬಂಗಾರದ ತೇರುಗಳು. ಏನು ಕಾಂತಿ ! ಎಂಥ ಹೊಳಪು ! ಅಗ್ನಿಯ ಕುಡಿಗಳಂತೆ ಕಂಗೊಳಿಸುತ್ತವೆ. ಸಜ್ಜನರೇ ಅತ್ತ ನೋಡಿರಿ.

**ಯಯಾತಿ** :- ಅದೇ ನಾನು ಹೇಳಲಿಲ್ಲವೆ ! ನಿಮ್ಮ ಮಹಾದಾನಕ್ಕೆ ಅನಂತ ಫಲವುಂಟು ಎಂದು ಹೇಳಿದ್ದು ಈಗಲೇ ನಿಜವಾಯಿತು ನೋಡಿ. ನಿಮ್ಮನ್ನು ಕರೆಯಲಿಕ್ಕೆ ನಾಲ್ಕು ಸುವರ್ಣ ರಥಗಳೇ ಬಂದಿವೆ. ನಿಮ್ಮ ಸಹವಾಸದಿಂದ ನನಗೂ ಫಲಪ್ರಾಪ್ತಿ. ಮಹಾದಾನಿಗಳಾದ ನೀವು ನಾಲ್ವರು ಮತ್ತು ನಾನು ಐದನೆಯವ. ನಮ್ಮನ್ನು ಐವರನ್ನೂ ದಿವ್ಯಲೋಕಕ್ಕೆ ಕರೆದುಕೊಂಡು ಹೋಗಲಿಕ್ಕೆ ಐದು ಬಂಗಾರದ ತೇರುಗಳೇ ಬಂದಿವೆ.

**ಅಷ್ಟಕ** :- ಮಹಾರಾಜನೇ, ನೀನು ರಥವನ್ನು ಆರೋಹಣಮಾಡು. ಆಕಾಶ ಮಾರ್ಗದಿಂದ ಮುಂದೆ ನಡೆ. ಸಮಯ ಬಂದಾಗ ನಾವೂ ನಿನ್ನ ಹಿಂದೆ ಬರುವೆವು.

**ಯಯಾತಿ** :- ಹಿಂದೆ ಮುಂದೆ ಏಕೆ ? ಎಲ್ಲರೂ ಕೂಡಿಯೇ ಹೋಗೋಣ. ಎಲ್ಲರೂ ಕೂಡಿಯೇ ಸ್ವರ್ಗವನ್ನು ಸಂಪಾದಿಸಿದ್ದೇವೆ. ದೇವಲೋಕದ ದಾರಿ ಈಗ ನಿಷ್ಕಂಟಕವಾಗಿದೆ. ಆಗ ಅಷ್ಟಕ, ವಸುಮಾನ್, ಪ್ರತರ್ದನ, ಶಿಬಿಚಕ್ರವರ್ತಿ ನಾಲ್ವರೂ ಯಯಾತಿ ರಾಜನೊಂದಿಗೆ ದೇವಲೋಕದ ಆ ಸುವರ್ಣರಥವನ್ನು ಏರಿ ಸ್ವರ್ಗ ಲೋಕಕ್ಕೆ ಪ್ರಯಾಣಮಾಡಿದರು. ಅವರ ಕೀರ್ತಿಯು ಭೂಮ್ಯಾಕಾಶಗಳನ್ನು ವ್ಯಾಪಿಸಿ ಬೆಳಗುತ್ತಿದೆ.

**ಅಷ್ಟಕ** :- ದೇವೇಂದ್ರನು ನನ್ನ ಸ್ನೇಹಿತ. ಆದರಿಂದ ನಾನೇ ಮೊದಲು ಹೋಗುವವ ಎಂದು ತಿಳಿದಿದ್ದೆ. ಆದರೆ ಶಿಬಿಚಕ್ರವರ್ತಿಯ ರಥವು ನಮ್ಮನ್ನೆಲ್ಲ ಹಿಂದೆ ಹಾಕಿ ಮುಂದೆ ಹೋಗುತ್ತಿದೆಯಲ್ಲ ! ಇದಕ್ಕೇನು ಕಾರಣ ?

**ಯಯಾತಿ** :- ಶಿಬಿಯು ಸರ್ವಸ್ವವನ್ನೂ ದಾನಮಾಡಿದ ಪುಣ್ಯಾತ್ಮ. ಆದುದರಿಂದ ದೇವಪಥದಲ್ಲಿ ಅವನು ನಮಗೆಲ್ಲ ಮಾರ್ಗದರ್ಶಿಯಾಗಿ ಮುಂದುವರೆದಿದ್ದು ಉಚಿತವೇ ಆಗಿದೆ. ನಮ್ಮೆಲ್ಲರಿಗಿಂತ ಅವನು ಶ್ರೇಷ್ಠನಾಗಿದ್ದಾನೆ. ದಾನ, ಶೌಚಾಚಾರ, ಸತ್ಯ, ಅಹಿಂಸಾ, ಐಶ್ವರ್ಯ, ಸ್ಥೈರಣೆ, ಸಮಬುದ್ಧಿ, ಪ್ರಾಣದಯೆ ಮುಂತಾದ ಗುಣಗಳಿಗೆಲ್ಲ ಶಿಬಿಯು ತವರುಮನೆ. ಇಷ್ಟೆಲ್ಲ ಇದ್ದರೂ ಅವನು ವಿನೀತ, ಭಗವದ್ಭಕ್ತ. ಆತ ಏವ ಸರ್ವಶ್ರೇಷ್ಠ.

**ಅಷ್ಟಕ** :- ಯಯಾತಿ ರಾಜನೇ, ನೀನು ಮಾಡಿದ ಕಾರ್ಯವನ್ನು ಬೇರಾರೂ ಮಾಡಲಾರರು. ನೀನು ಯಾರು ? ಎಲ್ಲಿಂದ ಬಂದೆ ? ಹೇಗೆ ಬಂದೆ ?

**ಯಯಾತಿ** :- ನಾನು ನಹುಷರಾಜನ ಮಗ. ಪುರುವಿನ ತಂದೆ. ಭೂಲೋಕದ ಸಾರ್ವಭೌಮ. ನಾವು ಮಾಡಿದ ದಾನವನ್ನು ಹೇಳಬಾರದು. ಆದರೆ ನೀನು ನನ್ನ ಮೊಮ್ಮಗನೇ ಆದುದರಿಂದ ನಿನ್ನ ಮುಂದೆ ತಿಳಿಸಲಿಕ್ಕೆ ಅಡ್ಡಿ ಇಲ್ಲ. ನಾನು ಈಭೂಮಂಡಲವನ್ನೆಲ್ಲ ನನ್ನ ಬಾಹು ಬಲದಿಂದ ಗೆದ್ದೆ. ಬ್ರಾಹ್ಮಣರಿಗೆ ಭೂಮಿಯನ್ನು, ಹಸುಗಳನ್ನು, ಕುದುರೆ, ಆನೆ, ಐಶ್ವರ್ಯ, ಗ್ರಾಮ, ರಾಜ್ಯ ಎಲ್ಲವನ್ನು ದಾನಕೊಟ್ಟೆ. ಸತ್ಯದಿಂದಲೇ ನಾನು ಈ ಮೊದಲು ಪುಣ್ಯಲೋಕಗಳನ್ನು ಪಡೆದದ್ದು. ಸತ್ಯದಿಂದಲೇ ಭೂಮ್ಯಾಕಾಶಗಳು ಚಲಿಸದೆ ನಿಂತಿರುತ್ತವೆ. ಮಾನವರ ಅಂತರಂಗದಲ್ಲಿ ತೊಳಗಿ ಬೆಳಗುವ ಜೀವಜ್ಯೋತಿಯೇ ಸತ್ಯ. ಸಜ್ಜನರು ಸತ್ಯದ ಪೂಜಕರಾಗಿದ್ದಾರೆ. ಸತ್ಯವನ್ನು ನುಡಿದರೆ ಸತ್ಯವಾಗಿ ನಡೆದರೆ ಎಲ್ಲ ದೇವತೆಗಳನ್ನೂ ಮುನಿಗಳನ್ನು ಪೂಜೆಮಾಡಿದಂತೆ. ಹೀಗೆ ಮಾತಾಡುತ್ತ ಅವರೆಲ್ಲರೂ ಸ್ವರ್ಗವನ್ನು ಸೇರಿದರು. ಈರೀತಿಯಾಗಿ ಮಿತ್ರರು ಹಾಗೂ ಮೊಮ್ಮಕ್ಕಳ ಪುಣ್ಯದಿಂದ ಸ್ವರ್ಗಭ್ರಷ್ಟನಾದ ಯಯಾತಿಯು ಮತ್ತೆ ಸ್ವರ್ಗಕ್ಕೆ ತೆರಳಿದನು. ಆ ಯಯಾತಿಯಿಂದ ಪ್ರಾರಂಭವಾದ ಪುರುವಂಶದಲ್ಲಿಯೇ ಶತಾನೀಕ, ನೀನೂ ಜನಿಸಿರುವಿರಿ. ನಿಮ್ಮ ಮೂಲ ಪುರುಷನ ಚರಿತ್ರೆಯನ್ನು ನಿನಗಾಗಿ ವಿಸ್ತಾರವಾಗಿ ಹೇಳಿದೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತಮೂರನೇಯ ಅಧ್ಯಾಯವು ಮುಗಿದುದು*

—o—

ಕಾರ್ತವೀರ್ಯನ ಶೌರ್ಯ. ಪರಶುರಾಮನಿಂದ ಅವನ ಸಂಹಾರ ಕಾರ್ಯ

ಅಧ್ಯಾಯ - ೪೪

**ಸೂತ ಉವಾಚ**

**ಇತ್ಯೇತತ್ ಶೌನಕಾದ್ರಾಜಾ ಶತಾನೀಕೋ ನಿಶಮ್ಯ ತತ್**
**ವಿಸ್ಮಿತಃ ಪರಯಾಪ್ರೀತ್ಯಾ ಪೂರ್ಣಚಂದ್ರ ಇವಾಬಭೌ॥**

**ಸೂತ** - ಶತಾನೀಕ ಮಹಾರಾಜನು ಶೌನಕ ಮುನಿಯಿಂದ ಈ ಎಲ್ಲ ಇತಿಹಾಸವನ್ನು ಕೇಳಿ ಅತ್ಯಂತ ಆಶ್ಚರ್ಯಚಕಿತನಾದನು. ಆನಂದದಿಂದ ಅರಳಿದ ಅವನ ಮುಖವು ಪೂರ್ಣ ಚಂದ್ರನಂತಾಯಿತು. ಅವನು ವಿಧಿಪೂರ್ವಕವಾಗಿ ಪುರಾಣವನ್ನು ಹೇಳಿದ ಶೌನಕ ಮುನಿಯನ್ನು ಭಕ್ತಿಯಿಂದ ಪೂಜಿಸಿದನು. ಅವನಿಗೆ ಹಣ, ಹೊನ್ನು, ಹಸು, ರತ್ನ ಬಗೆಬಗೆಯ ಬಟ್ಟೆ ಮುಂತಾದವುಗಳನ್ನು ದಾನವಿತ್ತನು. ಶೌನಕಮುನಿಗಳೂ ಕೂಡ ಮಹಾರಾಜನು ಪ್ರೀತಿಯಿಂದ ಕೊಟ್ಟದ್ದನ್ನೆಲ್ಲ ಆನಂದದಿಂದ ಸ್ವೀಕರಿಸಿದನು. ಮತ್ತು ಅದನ್ನೆಲ್ಲ ಅಲ್ಲಿಯೇ ಇದ್ದ ಬ್ರಾಹ್ಮಣರಿಗೆಲ್ಲ ತಾನು ಪುನಃ ದಾನವಿತ್ತು ಅಲ್ಲಿಂದ ಅದೃಶ್ಯವಾದನು.

**ಋಷಿಗಳು :-** ಯಯಾತಿಯ ವಂಶವು ಯದು ಮೊದಲಾದ ಅವನ ಮಕ್ಕಳಿಂದ ಮುಂದೆ ಹೇಗೆ ಬೆಳೆದು ಬೆಳಗಿತು ಎಂಬುದನ್ನು ಬಿತ್ತರಿಸಬೇಕು.

**ಸೂತ :-** ಯಯಾತಿಯ ಹಿರಿಯ ಮಗನಾದ ಯದುವಿನ ವಂಶ ಬಿತ್ತರಗೊಂಡ ಬಗೆಯನ್ನು ನಿರೂಪಿಸುತ್ತೇನೆ ಕೇಳಿರಿ. ಯದುರಾಜನಿಗೆ ಮಕ್ಕಳು ಐವರು. ಸಹಸ್ರಜಿತ್, ಕ್ರೋಷ್ಟು, ನೀಲ, ಅಂತಿಕ, ಲಘು ಎಂದು. ದೇವಪುತ್ರರಂತಿದ್ದ ಇವರೈವರೂ ಶೂರಧೀರರು. ಬಿಲ್ಲುವಿದ್ಯೆ ಚೆನ್ನಾಗಿಬಲ್ಲವರು. ಸಹಸ್ರಜಿತಗೆ ಶತಜಿತ್ ಎಂಬ ಮಗ ಜನಿಸಿದ. ಶತಜಿತಗೆ ಹೈಹಯ, ಹಯ, ವೇಣುಹಯ ಎಂದು ಮೂವರು ಮಕ್ಕಳು. ಹೈಹಯನ ಮಗ ಧರ್ಮನೇತ್ರ. ಅವನಿಗೆ ಕುಂತಿ ಎಂಬ ಪುತ್ರ. ಕುಂತಿಗೆ ಸಂಹತ. ಸಂಹತನಿಗೆ ಮಹಿಷ್ಮಂತ. ಅವನಿಗೆ ರುದ್ರಶ್ರೇಣ್ಯ. ಇವನು ಕಾಶಿಯಲ್ಲಿದ್ದ. ದುರ್ದಮ ಇವನ ಮಗನೇ.

ದುರ್ದಮನಿಗೆ ಕನಕ ಎಂಬ ಮಗ. ಕನಕನಿಗೆ ಕೃತವೀರ್ಯ, ಕೃತಾಗ್ನಿ, ಕೃತವರ್ಮ, ಕೃತೌಜ ಎಂದು ನಾಲ್ಕು ಮಕ್ಕಳು. ಕೃತವೀರ್ಯನ ಪುತ್ರ ಅರ್ಜುನ. ಈ ಕಾರ್ತವೀರ್ಯಾರ್ಜುನನಿಗೆ ಸಾವಿರ ತೋಳುಗಳಿದ್ದವು. ಸಪ್ತದ್ವೀಪವತಿಯಾದ ಭೂಮಿಗೆಲ್ಲ ಅವನು ಚಕ್ರವರ್ತಿಯಾಗಿ ಆಳಿದ. ಹತ್ತುಸಾವಿರವರ್ಷ ಯಾರಿಂದಲೂ ಮಾಡಲಶಕ್ಯವಾದ ಘೋರತಪಸ್ಸನ್ನು ಆಚರಿಸಿದ. ದತ್ತಾತ್ರೇಯನನ್ನು ಆರಾಧಿಸಿ ನಾಲ್ಕು ವರಗಳನ್ನೂ ಪಡೆದ "(೧) ನನಗೆ ಸಾವಿರ ತೋಳುಗಳು ಇರಬೇಕು. (೨) ನಾನು ಅಧರ್ಮಕಾರ್ಯಕ್ಕೆ ಇಳಿದರೆ ಸತ್ಪುರುಷರು ಅದನ್ನು ತಡೆಯಬೇಕು.

(೩) ಯುದ್ಧದಲ್ಲಿ ನಾನು ಗೆದ್ದ ಸಮಗ್ರ ಭೂಮಂಡಲದ ಶಾಸನವು ಧರ್ಮಕ್ಕೆ ಅನುಸಾರವಾಗಿಯೇ ನನ್ನಿಂದ ನಡೆಯಬೇಕು. (೪) ನನಗಿಂತ ಬಲಿಷ್ಠನಾದವನಿಂದ ನನ್ನ ವಧೆಯು ರಣರಂಗದಲ್ಲಿಯೇ ಆಗಬೇಕು.

ಈ ವರದ ಬಲದಿಂದ ಸಾಗರಸೀಮೆಯವರೆಗೆ ಇರುವ ಏಳುದ್ವೀಪಗಳಿಂದ ಒಡಗೂಡಿದ ಭೂಮಂಡಲವನ್ನೆಲ್ಲ ಜಯಿಸಿದನು. ಅವನ ಇಷ್ಟದಂತೆ ಸಾವಿರ ಬಾಹುಗಳು ಅವನಿಗೆ ಚಿಗಿತವು. ಹತ್ತುಸಾವಿರಯಜ್ಞಗಳನ್ನು ಅವನು ನೆರವೇರಿಸಿದನು. ಅವನ ಯಾಗಗಳಲ್ಲಿ ಯಥೇಚ್ಛ ದಕ್ಷಿಣೆ, ಬಂಗಾರದ ಕಂಬ, ಕನಕ ವೇದಿಕೆಗಳು. ವಿಮಾನಗಳಲ್ಲಿ ಬಂದು ದೇವ ಸುಂದರಿಯರೂ ಗಂಧರ್ವರೂ ಅವನ ಯಜ್ಞಗಳಿಗೆ ಶೋಭೆ ತರುತ್ತಿದ್ದರು. ನಾರದರು ಯಜ್ಞಮಂಟಪದಲ್ಲಿ ನಿಂತು ಅವನ ಮಹಿಮೆಯನ್ನು ಗಾನಮಾಡಿದರು. ರಾಜ್ಯದಲ್ಲಿ ಯಾರಾದರೂ ಕಳವುಮಾಡ ಹೊರಟರೆ ಇದ್ದಲ್ಲಿಂದ ಬಂದು ಅವರನ್ನು ಹಿಡಿಯುತ್ತಿದ್ದನು. ಎಂಬತ್ತೈದು ಸಾವಿರ ವರ್ಷಕಾಲ ಅವನು ಸರ್ವ ಸಂಪದಗಳಿಂದಲೂ ಮುತ್ತು ರತ್ನಗಳಿಂದಲೂ, ಧನ ಧಾನ್ಯಗಳಿಂದಲೂ ಸಮೃದ್ಧವಾದ ಸಾಮ್ರಾಜ್ಯವನ್ನು ಅವನು ಆಳಿದನು.

ಕ್ಷೇತ್ರಪಾಲನಾದ ಅವನು ಮಳೆಬಾರದಿದ್ದಾಗ ತಾನೇ ಪರ್ಜನ್ಯನಾಗಿ ಮಳೆಗರೆಯುತ್ತಿದ್ದನು. ತನ್ನ ಸಾವಿರ ತೋಳುಗಳಿಂದ ಅಡ್ಡಗಟ್ಟಿ ನರ್ಮದಾ ನದಿಯ ನೀರಿನ ಪ್ರವಾಹವು ಬೇರೆ ಕಡೆಗೆ ತಿರುಗುವಂತೆ ಮಾಡಿದನು. ಸರ್ಪರಾಜನಾದ ಕರ್ಕೋಟಕನ ಮಗನಾದ ನಾಗನನ್ನು ಗೆದ್ದು ತನ್ನ ರಾಜಧಾನಿಯಾದ ಮಾಹಿಷ್ಮತಿಯಲ್ಲಿ ತಂದಿರಿಸಿದನು. ಅವನು ತನ್ನ ಸಹಸ್ರಬಾಹುಗಳಿಂದ ಭೋರ್ಗರೆವ ಸಮುದ್ರದ ಹೆದ್ದೆರೆಗಳನ್ನು ಕಲಕುತ್ತ ಜಲಕ್ರೀಡೆಯನ್ನಾಡತೊಡಗಿದಾಗ ತಿಮಿಂಗಿಲಗಳು ಮೊಸಳೆಗಳೂ ಮೀನಗಳೂ ಪುಡಿಪುಡಿಯಾಗುತ್ತಿದ್ದವು. ಮತ್ತೊಮ್ಮೆ ಸಮುದ್ರಮಂಥನ ನಡೆಯಿತೇ ಎಂದು ಪಾತಾಳಲೋಕದ ನಾಗಗಳು, ದೈತ್ಯರು ಬೆಕ್ಕಸಬೆರಗಾಗಿ ಬೆಪ್ಪಾಗಿ ನಿಲ್ಲುತ್ತಿದ್ದವು. ಮಹಾಪರಾಕ್ರಮಿಯಾದ ರಾವಣನನ್ನು ಯುದ್ಧದಲ್ಲಿ ಗೆದ್ದು ಮಾಹಿಷ್ಮತಿಯ ಬಂದೀಖಾನೆಯಲ್ಲಿ ಇರಿಸಿದನು. ಬ್ರಹ್ಮರ್ಷಿ ಪುಲಸ್ತ್ಯರು ಬಂದು ಅವನನ್ನು ಸಮಾಧಾನಪಡಿಸಿದ ಬಳಿಕ ರಾವಣನನ್ನು ಸೆರೆಯಿಂದ ಮುಕ್ತಮಾಡಿದನು.

ಇಂಥ ಅದಮ್ಯ ಶಕ್ತಿಯುಳ್ಳ ಇಂಥ ಬಲಿಷ್ಠ ಕಾರ್ತವೀರ್ಯಾರ್ಜುನನ ತಾಳೇಮರಗಳ ತೋಪಿನಂತಿದ್ದ ಸಾವಿರ ತೋಳುಗಳನ್ನೂ ಪರಶುರಾಮನು ಕತ್ತರಿಸಿ ಹಾಕಿದನು. ಇದಕ್ಕೆ ಅನ್ನುವರು ದೈವೀಶಕ್ತಿ ಎಂದು. ಹಿಂದೆ ಮದಾಂಧನಾದ ಕಾರ್ತವೀರ್ಯನು ಆ ಪವಮಹರ್ಷಿಯ ತಪೋವನವನ್ನು ಸುಟ್ಟಾಗ ಕುಪಿತನಾದ ಆ ಮಹರ್ಷಿಯು ಶಾಪಕೊಟ್ಟನು. ''ನನ್ನ ತಪೋವನವನ್ನು ಸುಟ್ಟದ್ದರಿಂದ ನಿನ್ನ ಸಾವಿರ ಬಾಹುಗಳನ್ನೆಲ್ಲ ಕಡಿದು ತಪಸ್ವಿ ಬ್ರಾಹ್ಮಣನಾದ ಪರಶುರಾಮನು ನಿನ್ನನ್ನು ಸಂಹರಿಸಲಿ '' ಎಂದು. ಆ ಪಾಪ ಈ ಶಾಪ ಎರಡೂ ಕೂಡಿ ಬಂದುದರಿಂದ ಪರಶುರಾಮನು ಕಾರ್ತವೀರ್ಯಾರ್ಜುನನನ್ನು ಕೊಂದು ಅವನಿಗೆ ಮೃತ್ಯುವಾಗಿ

ಪರಿಣಮಿಸಿದನು. ಆ ಕಾರ್ತವೀರ್ಯಾರ್ಜುನನಿಗೆ ಶೂರ ಶೂರಸೇನ ದೃಷ್ಣಕ್ರೋಷ್ಟು, ಜಯಧ್ವಜ ಮುಂತಾಗಿ ನೂರು ಜನ ಮಕ್ಕಳಿದ್ದರು. ಅವರಲ್ಲಿ ಈ ಐವರು ಶೂರರೂ, ಧರ್ಮಾತ್ಮರೂ ಆಗಿದ್ದರು. ಜಯಧ್ವಜನಿಗೆ ತಾಲಜಂಘ ಎಂಬ ಒಬ್ಬ ಮಗ. ಅವನಿಗೆ ನೂರು ಜನ ಮಕ್ಕಳು. ತಾಲಜಂಘರೆಂದೇ ಅವರೆಲ್ಲರ ಪ್ರಸಿದ್ಧಿ. ಹೈಹಯವಂಶದಲ್ಲಿ ತಾಲಜಂಘರಲ್ಲದೆ ವೀತಿಹೋತ್ರ, ಶರ್ಯಾತ, ಭೋಜ, ಆವಂತಿ, ಕುಂತಿಕೇರ ಎಂದು ಮುಂತಾದ ಮನೆತನಗಳು ಪ್ರಸಿದ್ಧಿಯನ್ನೂ ಅಭಿವೃದ್ಧಿಯನ್ನೂ ಪಡೆದವು.

ವೀತಿಹೋತ್ರನಿಗೆ ಆನರ್ತ ಎಂಬ ಮಗನು ಹುಟ್ಟಿದನು. ಅವನಿಂದ ಮುಂದೆ ಅಮಿತ್ರಕರ್ಶನ ಮೊದಲಾದ ರಾಜರಿಂದ ಆ ವಂಶವು ಮುಂದೆ ಬೆಳೆಯಿತು. ಪುಣ್ಯಪ್ರತಾಪಿಯಾದ ಈ ಕಾರ್ತವೀರ್ಯಾರ್ಜುನನ ಚರಿತ್ರವನ್ನು ಕೀರ್ತನಗೈದರೆ ಯಜ್ಞಯಾಗಮಾಡಿದಂತೆ ಸ್ವರ್ಗಪ್ರಾಪ್ತಿಯಾಗುವದು ಖಂಡಿತ. ಪ್ರಜೆಗಳನ್ನು ಧರ್ಮದಿಂದ ತಂದೆಯಂತೆ ಕಾಪಾಡಿದ ಆ ಪುಣ್ಯಾತ್ಮನ ಪ್ರಾತಃಕಾಲದಲ್ಲಿ ನಾಮಸ್ಮರಣೆಯು ಪಾಪನಾಶಕವೂ ಪುಣ್ಯಕಾರಕವೂ ಆಗಿರುತ್ತದೆ. ವಸ್ತುಗಳನ್ನು ಕಳೆದುಕೊಂಡಾಗ ಕಾರ್ತವೀರ್ಯಾರ್ಜುನನನ್ನು ನೆನೆದರೆ ಅವೆಲ್ಲ ಮರಳಿ ದೊರಕುತ್ತವೆ. ಇವನ ಚರಿತ್ರೆಯು ಪವಿತ್ರವಾಗಿರುತ್ತದೆ.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು



**ಋಷಿ ಉವಾಚ:**

**ಕಿಮರ್ಥಂ ತದ್ವನಂ ದಗ್ಧಂ ಆಪವಸ್ಯ ಮಹಾತ್ಮನಃ ।**
**ಕಾರ್ತವೀರ್ಯೇಣ ವಿಕ್ರಮ್ಯ ಸೂತ ತದ್ಬ್ರೂಹಿ ತತ್ವತಃ**

**ರಕ್ಷಿತಾಸುತ ರಾಜರ್ಷಿಃ ಪ್ರಜಾನಾಮಿತಿ ನಃ ಶ್ರುತಮ್**
**ಸ ಕಥಂ ರಕ್ಷಿತಾ ಭೂತ್ವಾ ಅದಹತ್ತತ್ತಪೋವನಮ್ ॥**

**ಋಷಿಗಳು** :- ಮಹಾತ್ಮನಾದ ಆಪವ ಮಹರ್ಷಿಯ ತಪೋವನವನ್ನು ಕಾರ್ತವೀರ್ಯಾರ್ಜುನನು ಏಕೆ ಸುಟ್ಟುಹಾಕಿದನು. ರಾಜರ್ಷಿಯಾದ ಆ ಕಾರ್ತವೀರ್ಯಾರ್ಜುನನು ಪ್ರಜೆಗಳ ಕೈವಾರಿ ಎಂದು ಕೇಳಿದ್ದೇವೆ. ಇಂಥ ಪ್ರಜಾಪಾಲಕನು ಮುನಿಯ ಬನವನ್ನು ದಹನಮಾಡಲು ಕಾರಣವೇನು ? ಇದನ್ನು ನನಗೆ ತಿಳಿಸಿರಿ.

**ಸೂತ** :- ಸೂರ್ಯದೇವನು ಬ್ರಾಹ್ಮಣರೂಪದಿಂದ ಕಾರ್ತವೀರ್ಯಾರ್ಜುನನ ಬಳಿಗೆ ಬಂದು ಒಂದು ವರವನ್ನು ಕೇಳಿಕೊಂಡನು. ''ರಾಜನ್, ನಾನು ಸೂರ್ಯ. ನನಗೆ ಸಂತೋಷವಾಗುವ ಕಾರ್ಯವನ್ನು ನಡೆಸಿಕೊಡುತ್ತೇನೆ ಎಂದು ವಚನ ಕೊಡು.''

**ಕಾರ್ತವೀರ್ಯ** :- ಆ ಕಾರ್ಯವು ಯಾವದು ಅದನ್ನು ಹೇಳು. ನಿನ್ನಿಂದ ಅದನ್ನು ಕೇಳಿ ತಿಳಿದುಕೊಂಡ ಬಳಿಕ ಆ ವಿಷಯದಲ್ಲಿ ಮಾಡಬೇಕಾದುದನ್ನು ಮಾಡುತ್ತೇನೆ.

**ಸೂರ್ಯ** :- ಜ್ಞಾನಿಶ್ರೇಷ್ಠನಾದ ಮಹಾರಾಜನೇ, ಈ ಪ್ರಪಂಚದಲ್ಲಿ ಚಲಿಸಲು ಬಾರದ ಸ್ಥಾವರ ಪದಾರ್ಥಗಳನ್ನೆಲ್ಲ ನನಗೆ ಆಹಾರವಾಗಿ ನೀಡು. ಆ ಎಲ್ಲ ಗಿಡಬಳ್ಳಿ ಪೊದೆ ಹುಲ್ಲು, ಮರ, ಕಾಡುಬೀಡುಗಳನ್ನೆಲ್ಲ ತಿಂದು ತೇಗಿ ತೃಪ್ತಿ ಹೊಂದುತ್ತೇನೆ.

**ಕಾರ್ತವೀರ್ಯ** :- ಜಗತ್ತಿನಲ್ಲಿಯ ಕಾಡುಮರ ಬಳ್ಳಿ ಮುಂತಾದ ಸ್ಥಾವರ ವಸ್ತುಗಳನ್ನೆಲ್ಲ ಸುಡುವಂಥ ಶಕ್ತಿಯಾಗಲಿ ತೇಜಸ್ಸಾಗಲಿ ನನ್ನಲ್ಲಿ ಇಲ್ಲ. ಆದುದರಿಂದ ನಿನಗೆ ನಾನು ನಮಸ್ಕರಿಸುತ್ತೇನೆ.

**ಸೂರ್ಯ** :- ''ಮಹಾರಾಜ ಆ ವಿಷಯದಲ್ಲಿ ನಿನಗೇಕೆ ಚಿಂತೆ ? ನೀನು ಹೂ ಅಂದರೆ ಸಾಕು. ನಿನಗೆ ನಾನು ಅಕ್ಷಯವಾದ ಬೆಂಕಿಯ ಬಾಣಗಳನ್ನೇ ಕೊಡುತ್ತೇನೆ. ನೀನು ಬಿಲ್ಲಿಗೆ ಹೂಡಿಬಿಟ್ಟ ಮಾತ್ರಕ್ಕೆ ಅವು ಜ್ವಾಲೆಯ ಮಾಲೆಗಳಾಗಿ ತರುಲತೆಗಳನ್ನೆಲ್ಲ ಸುಟ್ಟುಹಾಕುವವು. ಅವುಗಳಲ್ಲಿ ನನ್ನ ತೇಜಸ್ಸಿನ ಅಂಶಗಳನ್ನು ತುಂಬಿದ್ದರಿಂದ ಆ ಅಗ್ನಿಬಾಣಗಳಿಂದ ಸ್ಥಾವರ ಪ್ರಪಂಚವೆಲ್ಲವೂ ಸುಟ್ಟು

ಬೂದಿಯಾಗುವದು. ಅದರಿಂದಲೇ ನನಗೆ ತೃಪ್ತಿ.'' ಆದಿತ್ಯದೇವನು ಹೀಗೆ ಬಲವಂತದಿಂದ ಕಾರ್ತವೀರ್ಯಾರ್ಜುನನಿಗೆ ಬೆಂಕಿಯ ಬಾಣಗಳನ್ನು ಕೊಟ್ಟು ಗಿಡಬಳ್ಳಿಗಳನ್ನು ಸುಟ್ಟುಹಾಕಲು ಆದೇಶವಿತ್ತನು. ಅದರಂತೆ ಇವನು ಬಾಣ ಬಿಟ್ಟು ಸ್ಥಾವರ ಸೃಷ್ಟಿಯನ್ನೆಲ್ಲ ಸುಡತೊಡಗಿದನು.

ಗ್ರಾಮ, ಆರಾಮ, ಗೊಲ್ಲಭಿಲ್ಲರ ಹಳ್ಳಿ, ಉಪವನ, ತಪೋವನ, ಕೈದೋಟ, ಹೂದೋಟ, ಹುಲ್ಲುಗಾವಲು, ಹಸಿರುಗಾವಲು, ಲತಾಮಂಟಪ, ಬನದ ತೋಪುಗಳು, ಕುಂಜನಿಕುಂಜಗಳು ಎಲ್ಲವೂ ಅರ್ಜುನನ ಘೋರಾಸ್ತ್ರಗಳಿಗೆ ತುತ್ತಾಗಿ ದಗ್ಧವಾದವು. ವನಸ್ಪತಿ ಪ್ರಪಂಚವೇ ಅಗ್ನಿಗೆ ಆಹುತಿಯಾಯಿತು. ಎಲ್ಲ ದಿಕ್ಕುಗಳಲ್ಲಿಯೂ ಸ್ಮಶಾನದೃಶ್ಯ. ಮರವಿಲ್ಲ, ಬಳ್ಳಿ ಇಲ್ಲ, ಹೂ ಇಲ್ಲ, ಹುಲ್ಲು ಇಲ್ಲ, ಔಷಧಿ ಇಲ್ಲ, ಸಸ್ಯವಿಲ್ಲ, ಬೆಳೆ ಇಲ್ಲ, ಕಾಳಿಲ್ಲ, ಕೂಳಿಲ್ಲ. ನೋಡಿದಲ್ಲೆಲ್ಲ ಬರೆಬಯಲು. ಬಂಜರಭೂಮಿ. ಹಸಿರಿನ ಹೆಸರೇ ಇಲ್ಲ. ನೆಲಹೊಲಗಳೆಲ್ಲ ಬರೀ ರಣಭೂಮಿ ರುದ್ರಭೂಮಿಯಂತೆ ರಣಗುಡುತ್ತಿದ್ದವು.

ಆ ಕಾಲದಲ್ಲಿ ಆಪವ ಎಂಬ ಮಹಾಮುನಿಯು ಜಲಗರ್ಭದಲ್ಲಿ ಕುಳಿತುಕೊಂಡು ಸಲಿಲ ಸಮಾಧಿಯಿಂದ ತಪಸ್ಸನ್ನು ಮಾಡುತ್ತಿದ್ದನು. ಹತ್ತು ಸಾವಿರವರ್ಷ ಸಾಗಿತು ಅವನ ತೋಯಾಂತರಾಳದಲ್ಲಿಯ ತಪಸ್ಸು. ಅಷ್ಟು ವರ್ಷಗಳ ಆನಂತರ ಅವನ ನಡುನೀರಿನಲ್ಲಿಯ ತಪೋನುಷ್ಠಾನವು ಮುಗಿಯಿತು. ಜಲಾಧಿವಾಸದಿಂದ ಅವನು ಎದ್ದು ಮೇಲೆ ಬಂದನು. ತನ್ನ ಆಶ್ರಮಕ್ಕೆ ಬಂದು ನೋಡಲು ಅದೆಲ್ಲವೂ ಸುಟ್ಟು ಬೂದಿಯಾಗಿತ್ತು. ಒಂದು ಬೀಜಾಂಕುರವೂ ಉಳಿಯದಂತೆ ಫಲಪುಷ್ಪಭರಿತವಾದ ತನ್ನ ತಪೋವನವನ್ನು ಸುಟ್ಟುಹಾಕಿದ ಕಾರ್ತವೀರ್ಯಾರ್ಜುನನಿಗೆ ಆಪವ ಮುನಿಯು ಕೋಪದಿಂದ ''ಪರಶುರಾಮನು ನಿನ್ನ ಕೈಬಳ್ಳಿಗಳನ್ನು ಕಡಿದು ನಿನ್ನನ್ನು ಕೊಂದುಹಾಕಲಿ'' ಎಂದು ಶಾಪಕೊಟ್ಟನು. ಅದರಂತೆ ಪರಶುರಾಮನು ಕಾರ್ತವೀರ್ಯನನ್ನು ಕೊಂದು ಕ್ಷತ್ರಿಯರಾಜರ ಸೊಕ್ಕುಮುರಿದು ಸದ್ದನ್ನೆಲ್ಲ ಅಡಗಿಸಿದನು. ಆ ಕಾರ್ತವೀರ್ಯಾರ್ಜುನನ ವಂಶವೇ ಕ್ರೋಷ್ಟು ಮುಂತಾದ ರಾಜರ್ಷಿಗಳಿಂದ ಮುಂದುವರೆಯಿತು. ವಿಷ್ಣುವಿನ ಅವತಾರನಾದ ಕೃಷ್ಣನು ಜನಿಸಿದ್ದು ಈ ಕ್ರೋಷ್ಟುವಿನ ಕುಲದಲ್ಲಿಯೇ. ಈ ಕ್ರೋಷ್ಟು ರಾಜನಿಗೆ ವೃಜನೀವಾನ್ ಎಂಬ ಮಗನು ಇದ್ದನು. ಅವನಿಗೆ ಸ್ವಾಹಾ, ಸ್ವಾಹಾನಿಗೆ ಮಹಾಬಲ, ಮಹಾಬಲನಿಗೆ ವೃಷಂಗು ಎಂಬ ಮಗನು ಹುಟ್ಟಿದನು. ವೃಷಂಗುವಿಗೆ ಚಿತ್ರ, ಚಿತ್ರರಥ ಎಂಬ ವಂಶವರ್ಧಕ ಪುತ್ರರು ಜನಿಸಿದರು. ಚಿತ್ರರಥನಿಗೆ ಶಶಿಬಿಂದು ಎಂಬ ಮಗನು ಹುಟ್ಟಿ ಚಕ್ರವರ್ತಿಯಾದನು. ಆ ಶಶಿಬಿಂದುವಿಗೆ ಹತ್ತುಸಾವಿರ ಮಕ್ಕಳು. ಅವರೆಲ್ಲರೂ ಬುದ್ಧಿವಂತರೂ, ಸುಂದರರೂ, ಶ್ರೀಮಂತರೂ, ತೇಜಸ್ವಿಗಳೂ ಆಗಿದ್ದರು. ಪೃಥುಶ್ರವ, ಪೃಥುಯಶ, ಪೃಥುಧರ್ಮ, ಪೃಥುಂಜಯ, ಪೃಥುಕೀರ್ತಿ, ಪೃಥುಮನ ಎಂದು ಮುಂತಾಗಿ ಹೆಸರುಳ್ಳ ಈ ಶಶಿಬಿಂದು ರಾಜನ ಮಕ್ಕಳಲ್ಲಿ ಪೃಥುಶ್ರವನು ಶ್ರೇಷ್ಠನೆಂದು ಹೇಳುತ್ತಾರೆ. ಅವರಲ್ಲಿ ಸುಯಜ್ಞ ಎಂಬ ಶಶಿಬಿಂದು ಕುಮಾರನಿಗೆ ಅದೇ ಹೆಸರಿನ ಒಬ್ಬ ಮಗನು ಇದ್ದನು. ಆ ಸುಯಜ್ಞ ರಾಜನಿಗೆ ಉಶನಸ ಎಂಬ

ಪುತ್ರನು ಉತ್ಪನ್ನನಾದನು. ಅವನು ಧರ್ಮದಿಂದ ರಾಜ್ಯವಾಳಿ ನೂರುಅಶ್ವಮೇಧ ಯಾಗಗಳನ್ನು ಮಾಡಿದನು. ಆ ಉಶನಸನ ಮಗನೇ ರಾಜ ಶ್ರೇಷ್ಠನಾದ ಮರುತ್ತ ಮಹರಾಜ. ಮರುತ್ತನಿಗೆ ಕಂಬಲ ಬರ್ಹಿಷ. ಅವನಿಗೆ ರುಕ್ಮಕವಚ ಎಂಬ ಮಕ್ಕಳು ಆದರು. ರುಕ್ಮಕವಚನು ವೈರಿಗಳನ್ನೆಲ್ಲ ಸಂಹರಿಸಿ ಭೂತಲವನ್ನೆಲ್ಲ ಗೆದ್ದು ಅಶ್ವಮೇಧ ಯಾಗಮಾಡಿ ರಾಜ್ಯವನ್ನೆಲ್ಲ ಬ್ರಾಹ್ಮಣರಿಗೆ ದಾನಕೊಟ್ಟುಬಿಟ್ಟನು ದಕ್ಷಿಣಾ ರೂಪವಾಗಿ.

ಆ ರುಕ್ಮಕವಚನಿಗೆ ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ, ಹರಿ ಎಂದು ಐದುಜನ ಮಕ್ಕಳು. ಅವರು ಐವರೂ ವೀರರು. ಬಿಲ್ಲುವಿದ್ಯೆಯಲ್ಲಿ ಬಲ್ಲಿದರು. ಪರಿಘ, ಹರಿ ಎಂಬ ಇಬ್ಬರು ವಿದೇಹ ರಾಜ್ಯದಲ್ಲಿ ಅಧಿಪತಿಗಳಾಗಿ ತಮ್ಮ ತಂದೆಯಿಂದ ನೇಮಿಸಲ್ಪಟ್ಟರು. ರುಕ್ಮೇಷನು ತಂದೆಯ ಸಿಂಹಾಸನವನ್ನು ಏರಿದನು. ಪೃಥು ರುಕ್ಮನು ಅವನನ್ನು ಬೆಂಬಲಿಸಿ ನಿಂತನು. ಆದರೆ ಆ ಐವರಲ್ಲಿ ನಡುವಿನವನಾದ ಜ್ಯಾಮಘನಿಗೆ ಮಾತ್ರ ಯಾವ ರಾಜ್ಯಾಧಿಕಾರವೂ ದೊರಕಲಿಲ್ಲ. ಸೋದರರೆಲ್ಲರೂ ಕೂಡಿ ಅವನನ್ನು ರಾಜ್ಯದಿಂದ ಹೊರಹಾಕಿದರು. ಆಗ ನಿರುಪಾಯನಾದ ಆ ರಾಜಕುಮಾರನು ಅಡವಿಯ ಪಾಲಾದನು. ಅರಣ್ಯದಲ್ಲಿರುವ ಒಂದು ಆಶ್ರಮಕ್ಕೆ ಹೋಗಿ ಅಲ್ಲಿ ಒಬ್ಬ ಬ್ರಾಹ್ಮಣನ ಉಪದೇಶದಿಂದ ಸಮಾಧಾನ ಹೊಂದಿ ಕೆಲವು ದಿನ ಪ್ರಶಾಂತಚಿತ್ತದಿಂದ ಅಲ್ಲಿಯೇ ವಾಸಿಸಿದನು. ಮುಂದೆ ಅವನು ಏನಾದರೂ ಉಪಜೀವನವನ್ನು ದೊರಕಿಸಬೇಕೆಂದು ರಥಾರೂಢನಾಗಿ ಬಿಲ್ಲು ಹಿಡಿದು ನರ್ಮದಾನದಿಯ ತೀರದಲ್ಲಿ ತಿರುಗಾಡಿದನು.

ಋಕ್ಷವಂತ ಎಂಬ ಗಿರಿಗೆ ಹೋಗಿ ಅಲ್ಲಿಯ ಜನರೊಡನೆ ಬೆರೆತು ಅವರೆಲ್ಲರ ಸ್ನೇಹ ಸಂಪಾದನೆಮಾಡಿದನು - ಜ್ಯಾಮಘನಿಗೆ ಚೈತ್ರಾ ಎಂಬ ಕುಶಲಳಾದ ಪತ್ನಿ ಇದ್ದಳು. ಅವನಿಗೆ ಮಕ್ಕಳು ಆಗಲಿಲ್ಲ. ಆದರೂ ಭಾರ್ಯೆಯ ಭಯದಿಂದ ಅವನು ಬೇರೆ ಮದುವೆ ಆಗಲಿಲ್ಲ. ಮುಂದೆ ಕೆಲವು ದಿನಗಳು ಕಳೆದ ಬಳಿಕ ಜ್ಯಾಮಘನು ಯುದ್ಧದಲ್ಲಿ ಗೆದ್ದು ರಾಜ್ಯವನ್ನು ಸಂಪಾದಿಸಿದನು. ಆ ಸಂಗ್ರಾಮದ ವೈರಿ ವಿಜಯದಲ್ಲಿ ರಾಜ ಕನ್ಯೆಯೊಬ್ಬಳನ್ನು ಸೆರೆಹಿಡಿದು ರಥದಲ್ಲಿ ತನ್ನ ಪಕ್ಕದಲ್ಲಿಯೇ ಕೂಡಿಸಿಕೊಂಡು ಮನೆಗೆ ಕರೆತಂದನು. ದಿಗ್ವಿಜಯ ಮಾಡಿಕೊಂಡು ಬಂದ ಗಂಡನನ್ನು ಸ್ವಾಗತಿಸಲಿಕ್ಕೆಂದು ಬಂದ ಚೈತ್ರೆಯು ಅರಸನ ಪಕ್ಕದಲ್ಲಿ ಮತ್ತೊಬ್ಬ ಕನ್ಯೆ ಕುಳಿತಿದ್ದನ್ನು ಕಂಡು ಕಣ್ಣು ತೆಗೆದು ಕೇಳಿದಳು. ಇವಳು ಯಾರು? ರಾಜನು ಗಾಬರಿಯಿಂದ ತಡವರಿಸಿ ತೊದಲುತ್ತ ಇವಳು ನಿನ್ನ ಸೊಸೆ ಎಂದು ಹೇಳಿದನು. ಯಾರ ಸೊಸೆ ? ನನಗೆ ಮಕ್ಕಳೇ ಆಗದಿರುವಾಗ ಸೊಸೆ ಹೇಗೆ ಬರುವಳು ? ಎಂದು ರಾಣಿ ಸವಾಲು ಹಾಕಿದಳು. ಅದಕ್ಕೆ ರಾಜನು ಸಾವರಿಸಿಕೊಂಡು ಮುಂದೆ ನಿನಗೆ ಹುಟ್ಟಲಿರುವ ಮಗನ ಭಾವಿಭಾರ್ಯೆ ಎಂದು ಹೇಳಿದನು.

ಮಹಾರಾಜನ ಈ ಗಡಿಬಿಡಿ ಗೊಂದಲ ಭಾರ್ಯಾಭಯ ಮುಂತಾದವುಗಳನ್ನು ಕಂಡು ಬಂಧಿಯಾಗಿ ಬಂದ ಆ ರಾಜಕನ್ಯೆಗೆ ಬಹಳ ಕೆಡಕು ಎನಿಸಿತು. ಅವಳು ಮನೆಯಲ್ಲಿ ಕುಳಿತಲ್ಲಿಯೇ ಉಗ್ರವಾದ ತಪಸ್ಸನ್ನು ಮಾಡಿದಳು. ಅವಳ ತಪಸ್ಸಿನ

ಪ್ರಭಾವದಿಂದ ಅವಳ ಭಾವಿ ಅತ್ತೆಗೆ ಮುಪ್ಪು ಬಂದರೂ ಒಂದು ಗಂಡು ಮಗನು ಹುಟ್ಟಿದನು. ಅವನಿಗೆ ವಿದರ್ಭ ಎಂದು ಹೆಸರು. ವಿದರ್ಭನು ದೊಡ್ಡವನಾದ ಬಳಿಕ ಅವನಿಗೆಂದು ತಂದ ರಾಜಕನ್ಯೆಯನ್ನೇ ಮದುವೆ ಮಾಡಿದನು. ಯುದ್ಧದಲ್ಲಿ ಕೈದಿಯಾಗಿ ತಂದ ಆ ರಾಜಕುಮಾರಿಗೆ ಅಂದೇ ಸ್ನುಷಾ ಎಂದು ಹೆಸರಿಟ್ಟರು. ಸ್ನುಷೆಗೆ ವಿದರ್ಭರಾಜನಿಂದ ಕ್ರಥ, ಕೈಶಿಕ, ಲೋಮಪಾದ ಎಂಬ ಮೂವರು ಶೂರರು ರಣಧೀರರೂ ಧರ್ಮಿಷ್ಠರೂ ಆದ ಮಕ್ಕಳು. ಲೋಮಪಾದನ ಮಗ ಮನು. ಮನುವಿನ ಪುತ್ರ ಜ್ಞಾತಿ.

ಕೈಶಿಕನಿಗೆ ಚಿದಿ ಎಂಬ ಮಗ. ಆ ಚಿದಿಯಿಂದ ಆ ಮನೆತನದವರಿಗೆಲ್ಲ ಚೈದ್ಯರು ಎಂಬ ಹೆಸರು ಬಂದಿತು. ಕ್ರಥ ಎಂಬ ವಿದರ್ಭರಾಜ ಪುತ್ರನಿಗೆ ಕುಂತಿ ಎಂಬ ಮಗನು ಹುಟ್ಟಿದ. ಕುಂತಿಯಿಂದ ಧೃಷ್ಟ, ಅವನಿಂದ ರಣಧೃಷ್ಟ. ಅವನಿಗೆ ನಿರ್ವೃತಿ, ನಿರ್ವೃತಿಗೆ ವಿದೂರಥ, ಅವನಿಗೆ ದಾಶಾರ್ಹ. ದಾಶಾರ್ಹನಿಂದ ವ್ಯೋಮ, ವ್ಯೋಮನಿಗೆ ಜೀಮೂತ, ಜೀಮೂತನಿಗೆ ವಿಮಲ. ವಿಮಲನಿಂದ ಭೀಮರಥ. ಭೀಮರಥನಿಂದ ನವರಥ ಮುಂತಾದ ಮಕ್ಕಳು ಆದರು. ಈ ನವರಥನಿಂದ ಮುಂದೆ ಈ ಮನೆತನದಲ್ಲಿ ದೃಢರಥ, ಶಕುನಿ, ಶರಂಭ, ದೇವರಾತ, ದೇವಕ್ಷತ್ರ, ಮಧು, ಪುರವಸ, ಪುರುದ್ವಂತ, ಜಂತು ಮುಂತಾದ ರಾಜರು ಒಬ್ಬರಾದ ಮೇಲೆ ಒಬ್ಬರು ಜನಿಸಿ ಪ್ರಸಿದ್ಧರಾದರು. ಜಂತುವಿಗೆ ಇಕ್ಷ್ವಾಕುವಿನ ಮಗಳನ್ನು ಕೊಟ್ಟಿತ್ತು. ಆ ಇಕ್ಷ್ವಾಕಿಯು ಈ ಜಂತುವಿನಿಂದ ಸತ್ವಗುಣಗಳಿಂದ ಕೂಡಿದ ಸಾತ್ವತ ಎಂಬ ಮಗನನ್ನು ಪಡೆದಳು. ಆ ಸಾತ್ವತನಿಂದ ಕೌಸಲ್ಯಾ ಎಂಬ ಮಡದಿಯಲ್ಲಿ ಭಜಿ, ಭಜಮಾನ, ದಿವ್ಯ, ದೇವಾವೃಧ, ಅಂಧಕ, ಮಹಾಭೋಜ, ವೃಷ್ಣಿ ಎಂದು ಮಕ್ಕಳಾದರು. ಇವರ ಈ ಸಾತ್ವತರ ವಂಶವಿಸ್ತಾರವನ್ನು ಹೇಳುತ್ತೇನೆ ಕೇಳಿರಿ.

''ಸ್ರಂಜಯನಿಗೆ ಇಬ್ಬರು ಹೆಣ್ಣುಮಕ್ಕಳು ಇದ್ದರು. ಅವರಲ್ಲಿ ವಾಹ್ಯಕಾ ಎಂಬ ಒಬ್ಬ ಹೆಣ್ಣುಮಗಳನ್ನು ಸಾತ್ವತ ವಂಶದ ಭಜಮಾನನಿಗೆ ಕೊಟ್ಟಿತ್ತು. ಭಜಮಾನನಿಗೆ ವಾಹ್ಯಕೆಯಲ್ಲಿ ಜನಿಸಿದ ಮಕ್ಕಳೆಲ್ಲ ವಾಹ್ಯಕ ಎಂಬ ಹೆಸರನ್ನೇ ಪಡೆದರು. ಸ್ರಂಜಯನ ಇನ್ನೊಬ್ಬ ಮಗಳನ್ನೂ ಭಜಮಾನನಿಗೇ ಕೊಟ್ಟಿತ್ತು. ನಿಮಿಕ್ರಿವಿ, ವೃಷ್ಣಿ ಮುಂತಾದವರು ವಾಹ್ಯಕೆಯ ಮಕ್ಕಳು. ಕೌಸಲ್ಯೆಯ ಮಗನಾದ ದೇವಾವೃಧನಿಗೆ ಮಕ್ಕಳಿರಲಿಲ್ಲ. ಪುತ್ರಪ್ರಾಪ್ತಿಗಾಗಿ ಅವನು ಪರ್ಣಾಶಾನದಿಯ ದಂಡೆಯ ಮೇಲೆ ತಪಸ್ಸನ್ನುಮಾಡಿದನು. ಒಂದುದಿನ ಅವನು ಆ ನದೀತೀರದಲ್ಲಿ ಮಂತ್ರೋಚ್ಚಾರಣ ಪೂರ್ವಕವಾಗಿ ಆಚಮನಮಾಡುವಾಗ ಆ ಪರ್ಣಾಶಾ ನದಿಯು ಅವನ ಇಷ್ಟಾರ್ಥವನ್ನು ನೆರವೇರಿಸಲಿಕ್ಕಾಗಿ ನಾರೀರೂಪದಿಂದ ಬಂದಳು. ಮಹಾರಾಜನಿಗೆ ತನ್ನನ್ನು ವರಿಸಬೇಕೆಂದು ಕೇಳಿಕೊಂಡಳು. ಆದರೆ ಮಹಾರಾಜನಿಗೆ ಭಯ. ನದಿಯನ್ನು ಮದುವೆಯಾದರೆ ಮಕ್ಕಳೂ ಕೂಡ ನೀರಿನ ರೂಪದವರೇ ಹುಟ್ಟಬಹುದು ಎಂದು. ಆಗ ಪ್ರಮದೆಯ ರೂಪದಿಂದ ಬಂದ ಪರ್ಣಾಶೆಯು ಅವನಿಗೆ ತಿಳಿಸಿ ಹೇಳಿದಳು.

"ಮಹಾರಾಜನೇ, ಸಂತಾನಕ್ಕಾಗಿ ನಿನ್ನ ಮನದ ಕೊರಗು ಮತ್ತು ನೀನು ಪಡುವ ಕಷ್ಟಗಳನ್ನು ಕಂಡು ನಿನ್ನ ಕಾಮನೆಯನ್ನು ಪೂರ್ಣಮಾಡಬೇಕೆಂದು ನಾನು ಬಂದಿದ್ದೇನೆ. ಸುಂದರವಾದ ಈ ದಿವ್ಯದೇಹವನ್ನು ಧರಿಸಿದ್ದೇನೆ. ನನ್ನಿಂದ ನಿನಗೆ ತೇಜಸ್ವಿಯಾದ ಮಗನು ಜನಿಸುವನು." ಅವಳ ಸದುದ್ದೇಶವನ್ನು ತಿಳಿದ ಬಳಿಕ ಆ ನರಪತಿಯು ನದೀರೂಪಳಾದ ಆ ನಾರೀಮಣಿಯನ್ನು ವಿವಾಹವಾದನು. ಒಂಬತ್ತು ತಿಂಗಳು ತುಂಬಿದ ಬಳಿಕ ಪರ್ಣಾಶೆಯು ದೇವಾವೃಧನಿಂದ ಬಭ್ರು ಎಂಬ ಗಂಡುಮಗನನ್ನು ಹೆತ್ತಳು. ಅವನು ಒಳ್ಳೊಳ್ಳೆ ಗುಣಗಳಿಗೆಲ್ಲ ಖಣಿಯಾಗಿದ್ದನು. ತಂದೆಯಂತೆ ಜನಪ್ರಿಯನೂ ದೇವಸ್ವಭಾವದವನೂ ಆಗಿದ್ದನು. ದೇವಾವೃಧ ಮತ್ತು ಬಭ್ರುವಿನ ಸದ್ಗುಣಗಳು ಅಂದಿನ ಪ್ರಪಂಚದಲ್ಲಿ ಎಲ್ಲ ಕಡೆಗೂ ಪ್ರಸಿದ್ಧವಾಗಿ ಜಾಣ್ಣುಡಿ ನಾಣ್ಣುಡಿ ರೂಪದಿಂದ ಹಾಡಿ ಹೊಗಳಲ್ಪಟ್ಟವು.

"ಯಥೈವ ಶೃಣುಮೋದೂರಾದಪಶ್ಯಾಮ ತಥಾಂತಿಕಾತ್
ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಸ್ಸಮಃ"

ಈ ತಂದೆಮಕ್ಕಳಿಬ್ಬರೂ ದೊಡ್ಡ ಮನುಷ್ಯರು. ಇಬ್ಬರೂ ಗುಣವಂತರು. ಸಜ್ಜನರು. ನಾವು ಇವರನ್ನು ದೂರದಿಂದ ನಿರುಕಿಸಿದ್ದೇವೆ. ಹತ್ತಿರದಲ್ಲಿದ್ದೂ ಪರೀಕ್ಷಿಸಿದ್ದೇವೆ. ಆದರೂ ನಮಗೆ ಇವರಲ್ಲಿ ದೋಷ ಕಂಡಿಲ್ಲ. ಮಾನವ ಕುಲದಲ್ಲಿಯೇ ಬಭ್ರು ಅತ್ಯಂತ ಶ್ರೇಷ್ಠ ವ್ಯಕ್ತಿ. ಅವನ ತಂದೆ ದೇವಾವೃಧನಂತೂ ದೇವತಾ ಮನುಷ್ಯ." ಹೀಗೆ ಪೌರಾಣಿಕ ಗೀತ ಗಾಥಾಗಳಲ್ಲಿ ಆ ಪಿತಾಪುತ್ರರ ಹೆಸರು ಅಜರಾಮರವಾಗಿ ಉಲ್ಲೇಖಿತವಾಗಿದೆ. ದಾನಿ, ಧುರೀಣನಾದ ಅವನು ಶಾಸ್ತ್ರೋಕ್ತವಾಗಿ ಅನೇಕ ಯಜ್ಞಯಾಗಗಳನ್ನುಮಾಡಿ ಬ್ರಾಹ್ಮಣರಿಗೆ ವಿಪುಲವಾಗಿ ದಾನದಕ್ಷಿಣೆಯಿತ್ತನು. ಕಂಕನ ಮಗಳು ಕುಕುರ, ಭಜಮಾನ, ಶಶಿ, ಕಂಬಲಬರ್ಹಿಷ ಎಂಬ ನಾಲ್ಕು ಮಕ್ಕಳನ್ನು ಪಡೆದಳು. ಕುಕುರನ ಮಗನೇ ವೃಷ್ಣಿ. ಅವನಿಂದ ಧೃತಿ, ಧೃತಿಯಿಂದ ಕಪೋತರೋಮ, ಅವನಿಗೆ ತೈತ್ತಿರಿ, ತೈತ್ತಿರಿಗೆ ಸರ್ಪ, ನಲ, ಕಿಲ ಎಂದು ಮೂವರು ಮಕ್ಕಳು ಜನಿಸಿದರು. ನಂದನವನದಲ್ಲಿ ದುಂದುಭಿ ಬಾರಿಸಿದಂತೆ ಇದ್ದಿತಂತೆ ಕಿಲನ ಧ್ವನಿ. ಆದುದರಿಂದಲೇ ಅವನಿಗೆ ಕಿಲ ಎಂದು ಹೆಸರು ಬಂದಿತು. ಕಿಲನು ಅಶ್ವಮೇಧ ಮುಂತಾದ ಅನೇಕ ಯಜ್ಞಯಾಗಗಳನ್ನು ಮಾಡಿದನು. ಅವನು ಅತಿರಾತ್ರ ಎಂಬ ಯಜ್ಞವನ್ನು ಮಾಡುತ್ತಿರುವಾಗ ಯಜ್ಞಮಂಟಪದಲ್ಲಿಯ ಸಭಾರಂಗದಿಂದಲೇ ಪುನರ್ವಸು ಎಂಬ ಕುಮಾರನು ಉದಿಸಿ ಮೇಲಕ್ಕೆ ಎದ್ದು ಬಂದನು. ಆದ್ದರಿಂದ ಅವನು ಮಹಾಪಂಡಿತನೂ, ಕರ್ಮಠನೂ, ದಾನಶೂರನೂ ಆದನು.

ಪುನರ್ವಸುವಿಗೆ ಆಹುಕ, ಆಹುಕಿ ಮಗ ಮತ್ತು ಮಕ್ಕಳು ಹುಟ್ಟಿದರು. ಆಹುಕನಿಗೆ ಸಂಗ್ರಾಮದಲ್ಲಿ ಸೋಲೆಂಬುದೇ ಇರಲಿಲ್ಲ. ಅಜಿತ ಎಂದೇ ಜಗತ್ತಿನಲ್ಲಿ ಅವನ ಪ್ರಸಿದ್ಧಿ. ಜನಸಾಮಾನ್ಯರಲ್ಲಿ ಪ್ರಸಿದ್ಧನಾದ ಅವನು ಗೀತ ನಾಯಕನಾಗಿ ಹೊಗಳಲ್ಪಟ್ಟ. ಅವನ ಪ್ರಶಂಸಾಪರವಾದ ಈ ಪದ್ಯಗಳು ಆಗ ಜನರಲ್ಲಿ ಪ್ರಸಿದ್ಧವಾಗಿದ್ದವು. ಅವುಗಳಲ್ಲಿ ಆಹುಕನ ಸತ್ವ, ದಾನ, ಕಾರ್ಯ, ಜ್ಞಾನ

ಮುಂತಾದ ಗುಣಗಳು ವ್ಯಕ್ತವಾಗಿವೆ. ಆಹುಕನು ತನ್ನ ಸೋದರಿಯನ್ನು ಆವಂತೀರಾಜನಿಗೆ ಕೊಟ್ಟನು. ಕಾಶ್ಯನ ಮಗಳನ್ನು ಆಹುಕನಿಗೆ ಧಾರೆಯೆರೆದು ಕೊಟ್ಟಿತ್ತು. ದೇವಕ, ಉಗ್ರಸೇನ ಎಂದು ಆಹುಕನಿಗೆ ಇಬ್ಬರು ಮಕ್ಕಳು. ದೇವಕನಿಗೆ ದೇವವಂತ, ಉಪದೇವ, ಸುದೇವ, ದೇವರಕ್ಷಿತ, ಎಂಬ ಹೆಸರಿನ ವೀರರೂ ದೇವತೋಪಮರೂ ಆದ ಪುತ್ರರು ಜನಿಸಿದರು. ಇದರಂತೆ ದೇವಕಿ, ಶ್ರುತದೇವಿ, ಮಿತ್ರದೇವಿ, ಯಶೋಧರಾ, ಶ್ರೀದೇವಿ, ಸತ್ಯದೇವಿ, ಸುತಾಪಿ ಎಂದು ಏಳುಜನ ಹೆಣ್ಣುಮಕ್ಕಳು. ಈ ಏಳೂ ಕುಮಾರಿಕೆಯರನ್ನು ದೇವಕನು ವಸುದೇವನಿಗೆ ಕೊಟ್ಟು ಮದುವೆ ಮಾಡಿದನು. ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಕಂಸಿ, ಶಂಕು, ಅಜಭು, ರಾಷ್ಟ್ರಪಾಲ, ಯುದ್ಧಮುಷ್ಟಿ, ಸುಮುಷ್ಟಿದ ಎಂದು ಒಂಭತ್ತು ಜನ ಗಂಡುಮಕ್ಕಳು ಮತ್ತು ಕಂಸಿ, ಕಂಸವತಿ, ಸುತಂತು, ರಾಷ್ಟ್ರಪಾಲಿ, ಕಂಕೆ ಎಂದು ಐದು ಹೆಣ್ಣುಮಕ್ಕಳು ಜನಿಸಿದರು. ಇವರಲ್ಲಿ ಕಂಸನೇ ಜೇಷ್ಠನಾಗಿದ್ದನು. ಇದು ಕುಕರನ ವಂಶದ ವಿಸ್ತರಣ ಕಥೆ. ರಥಿಕರಲ್ಲಿ ಪ್ರಮುಖನಾದ ವಿದೂರಥನು ಭಜಮಾನನ ಎರಡನೆಯ ಹೆಂಡತಿಯ ಮಗ. ಈ ಭಜಮಾನನಿಗೆ ರಾಜಾಧಿದೇವ ಎಂಬ ಮಗನೂ ಅವನಿಗೆ ಶೋಣಾಶ್ವ, ಶ್ವೇತವಾಹನ ಎಂಬ ನಿಯಮನಿಷ್ಠರಾದ ಮಕ್ಕಳು ಉತ್ಪನ್ನರಾದರು.

ಶೋಣಾಶ್ವನಿಗೆ ಶಮಿ, ದೇವಶರ್ಮ, ನಿಕುಂತ, ಶಕ್ರ, ಶತ್ರುಜಿತ್ ಎಂಬ ಹೆಸರಿನ ಮಕ್ಕಳು. ಹಿರಿಯನಾದ ಶಮಿಯಿಂದ ಪ್ರತಿಕ್ಷತ್ರ, ಭೋಜ, ಹೃದೀಕ ಎಂದು ಮುಂತಾಗಿ ವಂಶವು ಮುಂದುವರೆಯಿತು. ಹೃದೀಕನಿಗೆ ಕೃತವರ್ಮ, ಶತಧನ್ವ, ದೇವಾರ್ಹ, ನಾಭ, ಭೀಷಣ, ಮಹಾಬಲ, ಅಜಾತ, ವನಜಾತ, ಕನೀಯಕ, ಕರಂಭಕ ಎಂದು ಮುಂತಾಗಿ ಹತ್ತು ಜನ ಮಕ್ಕಳುಹುಟ್ಟಿದರು. ದೇವಾರ್ಹನಿಗೆ, ಕಂಬಲಬರ್ಹಿಷ, ಎಂಬ ಮಗನು ಹುಟ್ಟಿದನು. ಅವನಿಗೆ ಅಸಮಂಜ ಎಂಬ ಪುತ್ರನು. ಮತ್ತೆ ಅವನಿಗೆ ತಮೋಜ ಎಂಬ ಮಗನು ಹುಟ್ಟಿದನು. ಇವರಲ್ಲಿಯ ಅಜಾತನಿಗೆ ಸುದಂಷ್ಟ್ರ, ಕೃಷ್ಣ, ಸುಂದ, ಎಂಬ ಮೂರು ಮಂದಿ ಮಕ್ಕಳಾದರು. ಮೇಲೆ ಹೇಳಿದ ಈ ಎಲ್ಲ ಮನೆತನದವರಿಗೆ ಅಂಧಕರು ಎಂದು ಕರೆಯುತ್ತಿದ್ದರು. ಈ ಅಂಧಕ ಅಂಶದ ಅಭಿವೃದ್ಧಿಯ ವೃತ್ತಾಂತವನ್ನು ಕೀರ್ತನೆಗೈಯುವವರ ವಂಶವು ಅಭಿವೃದ್ಧಿಯನ್ನು ಹೊಂದುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿದುದು*

—o—

## ಕರಡಿಯ ಮಗಳನ್ನು ಮೆಚ್ಚಿ ಮದುವೆಯಾದ ಕೃಷ್ಣ | ಅಧ್ಯಾಯ - ೪೬

**ಸೂತ ಉವಾಚ**

**ಗಾಂಧಾರೀಚೈವ ಮಾದ್ರೀಚ ವೃಷ್ಣಿಭಾರ್ಯೇ ಬಭೂವತುಃ ।**
**ಗಾಂಧಾರೀ ಜನಯಾಮಾಸ ಸುಮಿತ್ರಂ ಮಿತ್ರನಂದನಮ್ ॥**

ವೃಷ್ಣಿಗೆ ಗಾಂಧಾರಿ, ಮಾದ್ರಿ ಇಬ್ಬರು ಹೆಂಡಂದಿರು ಇದ್ದರು. ಗಾಂಧಾರಿಯು ಸುಮಿತ್ರ ಎಂಬ ಮಗನನ್ನು ಹೆತ್ತಳು. ಮಾದ್ರಿಗೆ ಯುಧಾಜಿತ, ದೇವಮೀಢುಷ, ಅನಮಿತ್ರ, ಶಿಬಿ, ಕೃತಲಕ್ಷಣ ಎಂದು ಪಂಚಪುತ್ರರು. ಅನಮಿತ್ರನಿಗೆ ನಿಘ್ನ, ಪ್ರಸೇನ, ಶಕ್ತಿಸೇನ ಎಂದು ಮಕ್ಕಳು. ಪ್ರಸೇನನ ಬಳಿಯಲ್ಲಿ ಸ್ಯಮಂತಕ ಎಂಬ ಅತ್ಯುತ್ತಮವಾದ ಒಂದು ರತ್ನವಿದ್ದಿತು. ಆ ದಿವ್ಯವಾದ ರತ್ನವನ್ನು ಪ್ರಸೇನನು ತನ್ನ ಹೃದಯದಲ್ಲಿಯೇ ಧರಿಸಿರುತ್ತಿದ್ದನು. ಶ್ರೀಕೃಷ್ಣನು ರತ್ನಗಳರಾಜದಂತಿದ್ದ ಆ ಮಣಿಯನ್ನು ತನಗೆ ಕೊಡಬೇಕು ಎಂದು ಕೇಳಿದನು. ಆದರೆ ಪ್ರಸೇನನು ಕೊಡಲಿಲ್ಲ. ಅದನ್ನು ಪ್ರಸೇನನಿಂದ ಕಸಿದುಕೊಳ್ಳುವ ಶಕ್ತಿ ಶ್ರೀ ಕೃಷ್ಣನಿಗೆ ಸಾಕಷ್ಟಿದ್ದಿತು. ಆದರೆ ಅವನು ಹಾಗೆ ಮಾಡಲಿಲ್ಲ.

ಒಂದು ದಿನ ಪ್ರಸೇನರಾಜನು ಆ ಮಣಿಯನ್ನು ತನ್ನ ಕೊರಳ ಹಾರವನ್ನು ಮಾಡಿಕೊಂಡೇ ಬೇಟೆಗೆ ಹೋದನು. ಕಾಡಿನಲ್ಲಿ ಗುಹೆಯಲ್ಲಿಯ ಒಂದು ಕರಡಿಯು ಆ ಅನರ್ಘ್ಯವಾದ ರತ್ನವನ್ನು ಕಂಡು ಪ್ರಸೇನನನ್ನು ಕೊಂದು ರತ್ನವನ್ನು ತೆಗೆದುಕೊಂಡಿತು. ಈ ಸುದ್ದಿಯನ್ನು ತಿಳಿಯದ ಜನರು ಪ್ರಸೇನನು ಊರಲ್ಲಿ ಇಲ್ಲದಿರುವದನ್ನು ನೋಡಿ ಕೃಷ್ಣನೇ ಸ್ಯಮಂತಕದ ಆಶೆಯಿಂದ ಪ್ರಸೇನನನ್ನು ಕೊಂದಿದ್ದಾನೆ ಎಂದು ಸಂದೇಹಪಟ್ಟರು. ಇದು ಕೃಷ್ಣನಿಗೆ ತಿಳಿಯಿತು. ಅದಕ್ಕೆ ಅವನು ''ಪ್ರಸೇನನು ಮಣಿಯನ್ನು ಧರಿಸಿ ಕಾಡಿಗೆ ಹೋಗಿದ್ದ. ಅಲ್ಲಿ ಯಾವನೋ ಒಬ್ಬ ಪಾಪಿಯು ಆ ರತ್ನದ ಆಶೆಗಾಗಿ ಪ್ರಸೇನನನ್ನು ಕೊಂದು ಹಾಕಿದ್ದಾನೆ. ಆ ಪಾಪಿ ಯಾರು ಎಂಬುದನ್ನು ಕಂಡು ಹಿಡಿದು ಹುಡುಕಿ ನಾನು ಸಂಹರಿಸುತ್ತೇನೆ.'' ಎಂದು ತನ್ನ ಮೇಲೆ ಆರೋಪ ಹೊರಸಿದ ಜನರಿಗೆಲ್ಲ ಉತ್ತರಕೊಟ್ಟು ಅರಣ್ಯಕ್ಕೆಹೋದನು. ಅಲ್ಲಿ ಅಡವಿಯ ಒಂದುಭಾಗದ ಗುಹೆಯಲ್ಲಿ ಕರಡಿಯ ಸದ್ದು ಗದ್ದಲಗಳು ಕೇಳಿಬಂದವು. ಹೂಂಕರಿಸುವ ಕರಡಿಯ ಆಹ್ವಾನದಂತಿರುವ ಆ ಶಬ್ದವನ್ನು ಕೇಳಿ ಗೋವಿಂದನು ಖಡ್ಗವನ್ನು ಹಿಡಿದು ಗುಹೆಯಲ್ಲಿ ಪ್ರವೇಶಮಾಡಿದನು. ಒಳಗೆ ಹೋಗಿ ಜಾಂಬುವಂತನನ್ನು ಕಂಡು ಕೃಷ್ಣನಿಗೆ ಕೋಪ ಬಂದಿತು. ಕಣ್ಣುಕೆಂಪಗೆಮಾಡಿ ಆ ಕರಡಿಗಳ ಅರಸನನ್ನು ಕೈಯಿಂದ ಹಿಡಿದನು. ಆಗ ಆ ಜಾಂಬುವಂತನು ಶ್ರೀ ಕೃಷ್ಣನನ್ನು ಶಾಸ್ತ್ರೋಕ್ತವಾದ ಪೂಜಾದಿಕರ್ಮಗಳಿಂದ ಸ್ತೋತ್ರಮಾಡಿದನು. ಅದರಿಂದ ಸಂತುಷ್ಟನಾದ ಆ

ಪರಮಾತ್ಮನು ಅವನಿಗೆ ಇಷ್ಟವಾದ ವರವನ್ನು ಕೊಡುವದಾಗಿ ಹೇಳಿದನು. ಆಗ ಜಾಂಬುವಂತನು ಭಕ್ತಿಯಿಂದ ಬಾಗಿ ಹೇಳಿದನು -

''ಪ್ರಭು, ನನಗೆ ಎರಡು ವರಗಳನ್ನು ದಯಪಾಲಿಸು. ನಿನ್ನ ಚಕ್ರದ ಹೊಡೆತದಿಂದ ನನಗೆ ಮರಣವನ್ನು ಕರುಣಿಸು. ನನ್ನ ಮಗಳಾದ ಜಾಂಬವತಿಯನ್ನು ನೀನು ಪತ್ನಿಯಾಗಿ ಪರಿಗ್ರಹಣ ಮಾಡಬೇಕು. ಮತ್ತು ಪ್ರಸೇನನನ್ನು ಕೊಂದು ನಾನು ತಂದ ಈ ಸ್ಯಮಂತಕ ಮಣಿಯನ್ನು ನನ್ನ ಕನ್ಯಾಮಣಿಯೊಂದಿಗೆ ಸ್ವೀಕರಿಸಬೇಕು.''. ಜಾಂಬುವಂತನ ಅಪೇಕ್ಷೆಯ ಮೇರೆಗೆ ಕೃಷ್ಣನು ಅವನನ್ನು ತನ್ನ ಸುದರ್ಶನ ಚಕ್ರದಿಂದ ಸಂಹರಿಸಿದನು. ಅನಂತರ ಅವನಿಗೆ ಅಂತ್ಯ ಸಂಸ್ಕಾರಗಳನ್ನೆಲ್ಲ ಮಾಡಿದನು. ಆ ಬಳಿಕ ಜಾಂಬುವತಿ ಎಂಬ ಕನ್ಯಾಮಣಿಯೊಂದಿಗೆ ಆ ಸ್ಯಮಂತಕ ಮಣಿಯನ್ನೂ ಊರಿಗೆ ತೆಗೆದುಕೊಂಡು ಬಂದನು.

ದ್ವಾರಕೆಯಲ್ಲಿ ದೊಡ್ಡಸಭೆ. ಯಾದವರೆಲ್ಲರೂ ಬಂದಿದ್ದಾರೆ. ಆಗ ಸತ್ರಾಜಿತನನ್ನು ಕರೆದು ಸ್ಯಮಂತಕವನ್ನು ಅವನಿಗೆ ಒಪ್ಪಿಸಿದನು. ಆಗ ಯಾದವರು ಕೃಷ್ಣನನ್ನು ಕುರಿತು ''ಪ್ರಸೇನನನ್ನು ನೀನೇ ಕೊಂದು ಮಣಿಯನ್ನು ಅಪಹರಿಸಿರುವೆ ಎಂದು ನಂಬಿದ್ದೆವು. ಈಗ ನಮಗೆ ನಮ್ಮ ತಪ್ಪಿನ ಅರಿವು ಆಗಿದೆ. ಇದರಲ್ಲಿ ನಿನ್ನದೇನೂ ದೋಷವಿಲ್ಲ. ಎಂದು ಹೇಳಿದರು.'' ಸತ್ರಾಜಿತನಿಗೆ ಕೇಕೆಯ ರಾಜಕುಮಾರಿಯಲ್ಲಿ ಭಂಗಕಾರನೆ ಮೊದಲಾದ ನೂರುಜನ ಪ್ರಖ್ಯಾತ ಪುತ್ರರು ಉತ್ಪನ್ನರಾದರು. ಭಂಗಕಾರನಿಗೆ ವ್ರತವತೀ ಎಂಬ ಪತ್ನಿಯಿಂದ ಸತ್ಯಭಾಮಾ, ವ್ರತಿನಿ, ಪದ್ಮಾವತಿ ಎಂಬ ಮೂವರು ರೂಪವತಿಯರಾದ ಕನ್ಯಾರತ್ನಗಳು ಜನಿಸಿದರು. ಆ ಮೂವರನ್ನು ಅವನು ಕೃಷ್ಣನಿಗೇ ಮದುವೆಮಾಡಿಕೊಟ್ಟನು. ವೃಷ್ಣಿಯ ಕಡೆಯ ಮಗನಾದ ಅನಮಿತ್ರನಿಂದ ಆ ಮನೆತನವು ಶಿನಿ, ಸತ್ಯಕ, ಸಾತ್ಯಕಿ, ಯಯುಧಾನ, ಅಸಂಗ, ದ್ಯುಮ್ನಿ, ಯುಗಂಧರ ಎಂದು ಮುಂತಾಗಿ ಆ ವಂಶದಲ್ಲಿ ಒಬ್ಬರಾದ ಮೇಲೆ ಒಬ್ಬರು ರಾಜರು ಹುಟ್ಟಿ ಬೆಳಗಿದರು. ಇದು ಅನಮಿತ್ರನ ವಂಶವಿಸ್ತಾರದ ವೃತ್ತಾಂತ. ಅನಮಿತ್ರನಿಗೆ ಶಿನಿಯ ತಾಯಿಯಲ್ಲದೆ ಇನ್ನಿಬ್ಬರು ಮಡದಿಯರು ಇದ್ದರು. ಅವರಲ್ಲಿ ಪೃಥು ಎಂಬ ಪತ್ನಿಯಿಂದ ಯುಧಾಜಿತನೂ ಮತ್ತೊಬ್ಬಳಲ್ಲಿ ವೃಷಭ ಮತ್ತು ಕ್ಷತ್ರ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ವೃಷಭನು ಕಾಶಿರಾಜನ ಮಗಳಾದ ಜಯಂತಿಯನ್ನು ಮದುವೆಯಾಗಿ ಜಯಂತ ಎಂಬ ಮಗನನ್ನು ಹಡೆದಳು.

ಜಯಂತನು ಜ್ಞಾನಸಂಪನ್ನನು ವೀರವರೇಣ್ಯನು ಆಗಿದ್ದನು. ಯಜ್ಞಯಾಗಾದಿ ಪುಣ್ಯಕರ್ಮಗಳನ್ನು ಎಡೆಬಿಡದೆ ಯಾವಾಗಲೂ ಆಚರಿಸುತ್ತಲೇ ಇದ್ದನು. ಅತಿಥಿಪೂಜಕನಾದ ಆ ಜಯಂತನಿಗೆ ಅಕ್ರೂರ ಎಂಬ ಮಗನು ಹುಟ್ಟಿದನು. ತಂದೆಯಂತೆ ಅವನೂ ಕೂಡ ದಾನಶೂರನಾಗಿದ್ದು ನಿತ್ಯವೂ ಯಜ್ಞಯಾಗಗಳನ್ನು ಮಾಡುತ್ತಿದ್ದನು. ಅಕ್ರೂರನು ಶೈಭ್ಯರಾಜನ ರತ್ನಾ ಎಂಬ ಕನ್ಯಾರತ್ನವನ್ನು ಮದುವೆಯಾಗಿದ್ದನು. ಅವನಿಗೆ ಉಪಲಂಭ, ಸದಾಲಂಭ, ವೃಕಲ, ವೀರ್ಯ,

ಸವಿತರ, ಸದಾಪಕ್ಷ, ಶತ್ರುಘ್ನ, ಅರಿಮೇಜಯ, ಧರ್ಮಭೃತ್, ಧರ್ಮವರ್ಮ, ದೃಷ್ಟಮಾನ ಎಂದು ಹನ್ನೊಂದು ಜನ ಪುತ್ರರು. ಎಲ್ಲರೂ ತಂದೆಯಂತೆ ಯಜ್ಞಯಾಗಮಾಡುವವರೇ. ಅಕ್ರೂರನ ಮತ್ತೊಬ್ಬ ಪತ್ನಿಯಾದ ಉಗ್ರಸೇನಿಯಲ್ಲಿ ದೇವವಂತ, ಉಪದೇವ, ಇಬ್ಬರು ಮಕ್ಕಳು ಇದ್ದರು. ಮಗದೊಬ್ಬ ಮಡದಿ ಅಶ್ವಿನಿಯಲ್ಲಿ ಪೃಥು, ವಿಪೃಥು, ಅಶ್ವತ್ಥಾಮ, ಸುಬಾಹು, ಸುಪಾರ್ಶ್ವ, ಗವೇಷಣ, ವೃಷ್ಟಿನೇಮಿ, ಸುಧರ್ಮ, ಶರ್ಯಾಮಿ, ಅಭೂಮಿ, ವಜ್ರಭೂಮಿ, ಶ್ರಮಿಷ್ಠ ಮುಂತಾದ ಮಕ್ಕಳು ಜನಿಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿದುದು*



## ಶ್ರಾವಣ ಅಷ್ಟಮೀದಿನ ಕೃಷ್ಣನ ಜನ್ಮದಿನ

ಅಧ್ಯಾಯ - ೪೭

**ಸೂತ ಉವಾಚ**

**ಐಕ್ಷ್ವಾಕೀ ಸುಷುವೇ ಶೂರಂ ಖ್ಯಾತಮದ್ಭುತಮೀಢುಷಂ ।**
**ಪೌರುಷಾಜ್ಜಜ್ಞಿರೇ ಶೂರಾದ್ಭೋಜಾಯಾಂ ಪುತ್ರಕಾದಶ ॥**

ಇಕ್ಷ್ವಾಕು ಪುತ್ರಿಯು ಪೌರುಷ ಎಂಬ ತನ್ನ ಪತಿಯಿಂದ ಶೂರ ಎಂಬ ಮಗನನ್ನು ಹಡೆದಳು. ಶೂರನಿಗೆ ಭೋಜಾ ಎಂಬ ಭಾಮಿನಿಯಲ್ಲಿ ವಸುದೇವ, ಅನಾಧೃಷ್ಠಿ, ಶಿನಿ, ದೇವಮಾರ್ಗ, ದೇವಶ್ರವ, ಸಸೃಜ್ಯ, ಶಾಮ, ಶಮೀಕ, ಸಂಯಾಪ ಎಂದು ಹತ್ತುಜನ ಮಕ್ಕಳುಹುಟ್ಟಿದರು. ಮತ್ತೂ ಶ್ರುತಕೀರ್ತಿ, ಪೃಥಾ, ಶ್ರುತದೇವಿ ಶ್ರುತಶ್ರವಾ ರಾಜಾಧಿದೇವಿ ಎಂದು ಐವರು ಕನ್ಯೆಯರು ಹುಟ್ಟಿದರು. ಶೂರನ ಹಿರಿಯ ಮಗನಾದ ವಸುದೇವನಿಗೆ ಆನಕದುಂದುಭಿ ಎಂದೂ ಹೆಸರು ಇದ್ದಿತು.

ಶೂರನ ಐದೂಜನ ಹೆಣ್ಣುಮಕ್ಕಳು ಶೂರರಾದ ಮಕ್ಕಳನ್ನು ಹೆತ್ತ ವೀರಮಾತೆಯರು ಎಂದು ಹೆಸರಾದರು. ಶ್ರುತದೇವಿಯು ಕೃತ ಎಂಬ ಪತಿಯಿಂದ ಸುಗ್ರೀವ ಎಂಬ ಮಗನನ್ನು ಹಡೆದಳು. ಶ್ರುತಕೀರ್ತಿಯು ಕೈಕಯ ರಾಜನನ್ನು ಮದುವೆಯಾಗಿ ಅನುವ್ರತ ಎಂಬ ರಾಜಕುಮಾರನ ತಾಯಿ ಎನಿಸಿದಳು. ಶ್ರುತಶ್ರಮೆಯು ಚೈದ್ಯರಾಜನ ಮಡದಿಯಾಗಿ ಸುನೀಥ ಎಂಬ ಬಲಿಷ್ಠ ರಾಜನಿಗೆ ಜನ್ಮ ಕೊಟ್ಟಳು. ಈ ಶೂರ ರಾಜನು ಮುದುಕನಾದ ಬಳಿಕ ಪೃಥಾ ಎಂಬ ಮಗಳನ್ನು ತನ್ನ ಮಿತ್ರನಾದ ಕುಂತಿಭೋಜನಿಗೆ ಸಂರಕ್ಷಣೆ ಮಾಡಲಿಕ್ಕೆಂದು ಕೊಟ್ಟಿದ್ದನು. ಅದರಿಂದ ಅವಳಿಗೆ ಕುಂತಿ ಎಂದು ಹೆಸರು ಬಂದಿತು. ಆ ಕುಂತೀದೇವಿಯನ್ನು ವಸುದೇವನು ಪಾಂಡುರಾಜನಿಗೆ ಕೊಟ್ಟು ಮದುವೆಮಾಡಿದನು. ಕುಂತಿಯು ಪಾಂಡುರಾಜನಿಗಾಗಿ ತನ್ನ ಮಂತ್ರಬಲದಿಂದ ಯಮಧರ್ಮನನ್ನು ಆಹ್ವಾನಿಸಿ ಧರ್ಮರಾಜ ಎಂಬ ಮಗನನ್ನು ಹಡೆದಳು. ವಾಯುದೇವರ ಅನುಗ್ರಹದಿಂದ ಭೀಮಸೇನ ಎಂಬ ಮಗನನ್ನೂ, ದೇವೇಂದ್ರನ ದಯೆಯಿಂದ ಅರ್ಜುನ ಎಂಬ ಕುಮಾರನನ್ನೂ ಹಡೆದಳು.

ಪಾಂಡುರಾಜನ ಮತ್ತೊಬ್ಬ ಮಡದಿಯಾದ ಮಾದ್ರೀದೇವಿಯಲ್ಲಿ ಅಶ್ವಿನೀ ದೇವತೆಗಳ ಅನುಗ್ರಹದಿಂದ ನಕುಲ, ಸಹದೇವ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ವಸುದೇವನ ಮಡದಿಯಾದ ರೋಹಿಣಿಯು ಬಲರಾಮ, ಸಾರಣ, ದುರ್ಧಮ, ದಮನ, ಸುಭ್ರು, ಪಿಂಡಾಲಕ, ಮಹಾಹನು ಎಂಬ ಹೆಸರಿನ ಗಂಡುಮಕ್ಕಳನ್ನೂ ಇಬ್ಬರು ಹೆಣ್ಣುಮಕ್ಕಳನ್ನು ಹಡೆದಳು. ವಸುದೇವನ ಇನ್ನೊಬ್ಬ ಪತ್ನಿ ದೇವಕಿಯಲ್ಲಿ ಸುಷೇಣ ಕೀರ್ತಿಮಂತ, ಉದಾಸಿ, ಭದ್ರಸೇನ, ಋಷಿವಾಸ, ಭದ್ರ, ವಿದೇಹ ಎಂಬ ಏಳು ಮಕ್ಕಳು ಜನಿಸಿದರು. ಇವರೆಲ್ಲರನ್ನೂ ಕಂಸನು ಕೊಂದುಹಾಕಿದನು.

ದೇವಕಿಯ ಎಂಟನೇ ಮಗನಾದ ಕೃಷ್ಣನು ವರ್ಷಾಋತುವಿನ ಕೃಷ್ಣ ಪಕ್ಷದ ಅಷ್ಟಮಿಯ ದಿನ ಹುಟ್ಟಿದನು. ಕೃಷ್ಣನ ಅನಂತರ ವಸುದೇವನಿಂದ ದೇವಕಿಯಲ್ಲಿ ಸುಭದ್ರಾ ಎಂಬ ಹೆಣ್ಣು ಮಗಳೂ, ಶೂರಿ ಎಂಬ ಗಂಡುಮಗನೂ ಹುಟ್ಟಿದರು. ವಸುದೇವನಿಗೆ ತಾಮ್ರಾ ಎಂಬ ಪತ್ನಿಯಿಂದ ಸಹದೇವನೂ ದೇವರಕ್ಷಿತಾ ಎಂಬ ಮತ್ತೊಬ್ಬ ಹೆಂಡತಿಯಿಂದ ಉಪಾಸಂಗಧರ ಎಂಬ ಗಂಡುಮಗನೂ ಸುಂದರೀ ಎಂಬ ಒಬ್ಬ ಹೆಣ್ಣುಮಗಳೂ ಹುಟ್ಟಿದರು. ಸುಂದರಿಯನ್ನು ಕಂಸನು ಕೊಂದನು. ಉಪದೇವಿ ಎಂಬ ಬೇರೊಬ್ಬ ಭಾರ್ಯೆಯಿಂದ ವಸುದೇವನಿಗೆ ವಿಜಯ, ರೋಚಮಾನ, ವೃಧಮಾನ, ದೇವಲ ಎಂಬ ಮಹಿಮಾಶಾಲಿಗಳಾದ ಮಕ್ಕಳು ಹುಟ್ಟಿದರು. ವೃಕದೇವಿ ಎಂಬ ವಸುದೇವನ ಪತ್ನಿಯಲ್ಲಿ ಅವಗಾಹ, ನಂದಕ ಎಂಬ ಮಕ್ಕಳು ಹುಟ್ಟಿದರು.

ವಸುದೇವನು ಶ್ರದ್ಧಾದೇವಿ ಎಂಬ ವೈಶ್ಯ ಸ್ತ್ರೀಯೊಡನೆ ವಿಹಾರಮಾಡಿ ಕೌಶಿಕ ಎಂಬ ಮಗನನ್ನು ಹಡೆದನು. ಇವರಲ್ಲದೆ ವಸುದೇವನಿಗೆ ಸುತನೂ, ರಥ ರಾಜಿ ಎಂಬ ಇನ್ನೂ ಇಬ್ಬರು ಪತ್ನಿಯರು ಇದ್ದರು. ಅವರಿಂದ ಪುಂಡ್ರ, ಕಪಿಲ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಲ್ಲದೆ ವಸುದೇವನಿಗೆ ಒಳ್ಳೇ ಬಿಲ್ಲಾಳು ಎನಿಸಿದ ಜರ ಎಂಬ ಹೆಸರಿನ ಬೇಡರ ಜಾತಿಯ ಮಗನೂ ಇದ್ದನು. ಸೌಭದ್ರ ಭವ ಎಂಬ ಹೆಸರಿನವರು ವಸುದೇವನ ಮಕ್ಕಳು. ದೇವಭಾಗನ ಮಗನಾದ ಉದ್ಧವನೂ ಮತ್ತು ದೇವಶ್ರವನೂ ಮಹಾಪಂಡಿತರಾಗಿದ್ದರು. ಐಕ್ಷ್ವಾಕಿಯು ಅನಾದೃಷ್ಟಿಯಿಂದ ನಿಧೂತಸತ್ವ ಎಂಬ ಮಗನನ್ನು ಹಡೆದಳು. ಇವನ ಮಗನೇ ಶ್ರಾದ್ಧದೇವ.

ಕರೂಷನು ಸಂತಾನಕ್ಕಾಗಿ ಶ್ರೀಕೃಷ್ಣನನ್ನು ಆರಾಧಿಸಿದನು. ಅವನ ಸೇವೆಯಿಂದ ಸಂತುಷ್ಟನಾದ ಭಗವಂತನು ಸುಚಂದ್ರ ಎಂಬ ಮಗನನ್ನು ಅವನಿಗೆ ಕರುಣಿಸಿದನು. ಕೃಷ್ಣಪರಮಾತ್ಮನಿಗೆ ಜಾಂಬುವತಿಯಲ್ಲಿ ಚಾರುದೇಷ್ಣ, ಸಾಂಬ ಎಂಬ ಇಬ್ಬರು ಮಕ್ಕಳಾದರು. ಅವರಿಬ್ಬರೂ ಶೂರರೂ ಸುಂದರರೂ ಆಗಿದ್ದರು. ನಂದನಿಗೆ ತಂತಿ ತಂತಿಪಾಲ, ಶಮೀಕನಿಗೆ ವಿರಾಜ, ಧನು, ಶಾಮ, ಸೃಂಜಯ ಎಂಬ ಹೆಸರಿನ ನಾಲ್ಕು ಜನ ಮಕ್ಕಳು ಹುಟ್ಟಿದರು. ಶಾಮನಿಗೆ ಮಕ್ಕಳು ಆಗಲಿಲ್ಲ. ಶಮೀಕನು ಭೋಜವಂಶದವ ನಾಗಿರಲು ಬೇಸರಪಟ್ಟು ಕಾಡಿಗೆಹೋಗಿ ತಪಸ್ಸುಮಾಡಿ ರಾಜರ್ಷಿಯಾದನು. ಹೀಗೆ ಶ್ರೀ ಕೃಷ್ಣನ ಜನ್ಮವೃತ್ತಾಂತವನ್ನು ಮತ್ತು ಅವನ ಬಳಗದ ಬಳ್ಳಿ ಬೆಳೆದ ಬಗೆಯನ್ನು ಕೇಳಿದವರ ಮತ್ತು ಹೇಳಿದವರ ಪಾಪಗಳೆಲ್ಲವೂ ಪರಿಹಾರವಾಗುವವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿದುದು*

—o—

## ದೇವದೈತ್ಯರ ಹನ್ನೆರಡು ಯುದ್ಧ. ಹರಿಯ ಹನ್ನೆರಡು ಅವತಾರ

ಅಧ್ಯಾಯ - ೪೮

**ಸೂತ ಉವಾಚ**

**ಅಥದೇವೋ ಮಹಾದೇವಃ ಪೂರ್ವಂ ಕೃಷ್ಣಃ ಪ್ರಜಾಪತಿಃ ।**
**ವಿಹಾರಾರ್ಥಂ ಮಹಾದೇವಃ ಮಾನುಷೇಷ್ವಪಿ ಜಾಯತೇ ॥**

**ಸೂತ** :- ಎಲ್ಲ ದೇವತೆಗಳಿಗೂ ಅಧಿದೇವನಾದ ಶ್ರೀ ಕೃಷ್ಣನು ಬ್ರಹ್ಮದೇವರಲ್ಲಿ ನಿಂತು ಜಗತ್ತನ್ನು ಸೃಷ್ಟಿಮಾಡಿ ಪ್ರಜಾಪತಿ ಎನಿಸುತ್ತಾನೆ. ಮಹಾದೇವರಲ್ಲಿ ನಿಂತು ಸಂಹಾರಮಾಡಿ ಮಹಾದೇವ ಎನಿಸುತ್ತಾನೆ. ಸ್ವಯಂವಿಷ್ಣುವಾದ ತಾನೇ ಜಗತ್‌ಪಾಲಕನಾಗಿ ಕೃಷ್ಣ ಎನಿಸುತ್ತಾನೆ. ಇಂಥ ದೇವಾಧಿದೇವನಾದ ಆ ಪರಮಾತ್ಮನು ಲೀಲಾರೂಪಿಯಾಗಿ ಹಿಂದೆ ದ್ವಾಪರ ಯುಗದಲ್ಲಿ ಮನುಷ್ಯಕುಲದಲ್ಲಿ ಕೃಷ್ಣನಾಗಿ ಅವತಾರಮಾಡಿದನು. ದೇವಕಿ ವಸುದೇವರ ತಪಸ್ಸಿಗೆ ಮೆಚ್ಚಿದ ಆ ಭಗವಂತನು ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ ನಾಲ್ಕು ತೋಳುಗಳಿಂದ ಒಡಗೂಡಿದವನಾಗಿಯೇ ದೇವಕೀದೇವಿಯಲ್ಲಿ ಕಾಂತಿಯಿಂದ ಬೆಳಗುತ್ತ ಆವಿರ್ಭವಿಸಿದನು. ಅದೇ ಹುಟ್ಟಿದ ಆ ಅದ್ಭುತ ಕೂಸು ಚತುರ್ಬಾಹು. ಆ ಬಾಹುಗಳಲ್ಲಿ ಶಂಖ ಚಕ್ರಾದಿ ಲಾಂಛನ, ಎದೆಯಲ್ಲಿ ಶ್ರೀವತ್ಸ, ಮುಖದಲ್ಲಿ ವಿಲಕ್ಷಣಕಾಂತಿ, ಮೈಯಲ್ಲಿ ಮಿಂಚು. ಇವನ್ನೆಲ್ಲ ಕಂಡು ವಸುದೇವನು ಗಾಬರಿಯಾಗಿ ಬೇಡಿಕೊಂಡನು. ''ದೇವ, ನಿನ್ನ ಈ ದಿವ್ಯರೂಪವನ್ನು ಮರೆಮಾಡು. ನನಗೆ ಕಂಸನ ಭೀತಿ, ಆದುದರಿಂದ ನಿನ್ನನ್ನು ಬಿನ್ನವಿಸುತ್ತೇನೆ. ನಿನ್ನ ಆರುಜನಅಣ್ಣಂದಿರನ್ನೆಲ್ಲ ಅವನು ಕೊಂದು ಹಾಕಿದ್ದಾನೆ.'' ವಸುದೇವನ ಈ ಮಾತನ್ನು ಕೇಳಿ ಭಗವಂತನು ತನ್ನ ಆ ದಿವ್ಯ ರೂಪವನ್ನು ಮರೆಮಾಡಿದನು. ಚಿಕ್ಕ ಮಗುವಾಗಿಯೇ ದೇವಕಿಯ ಪಕ್ಕದಲ್ಲಿ ಪವಡಿಸಿದನು. ಮತ್ತು ''ನನ್ನನ್ನು ನಂದಗೋಪನ ಮನೆಗೆ ಕರೆದುಕೊಂಡು ಹೋಗು. ಅದರಿಂದ ನಿನ್ನ ಮಗನಾದ ಬಲರಾಮನ ರಕ್ಷಣೆಯೂ ಆಗುವದು. ಎಲ್ಲ ಯಾದವರ ಕಲ್ಯಾಣವೂ ಆಗುವದು. ನಂದಗೋಪನ ಮನೆಗೆ ಕಳಿಸಿದ ಈ ನಿನ್ನ ದೇವಕೀಕುಮಾರನೇ ಕಂಸನನ್ನು ಕೊಲ್ಲುವನು'' ಎಂದು ಹೇಳಿದನು.

**ಋಷಿ** :- ಈ ದೇವಕೀ ವಸುದೇವರು ಯಾರು ? ಯಶೋದಾ ನಂದಗೋಪರು ಯಾರು ? ಅವರ ಹೊಟ್ಟೆಯಿಂದ ವಿಷ್ಣು ರೂಪಿಯಾದ ಜಗದೀಶ್ವರನು ಅವತಾರಮಾಡಿ ಬಂದುದೆಂತು ? ಇವರ ಮನೆಯಲ್ಲಿ ಬೆಳೆದುದೆಂತು ? ಆ ಪರಮಾತ್ಮನಿಂದ ಅವ್ವ ಅಪ್ಪ ಎನ್ನಿಸಿಕೊಳ್ಳಲು ಯಶೋದಾ ನಂದಗೋಪರು ಎಂಥ ಪುಣ್ಯ ಮಾಡಿದ್ದರು ? ಇದನ್ನೆಲ್ಲ ನಮಗೆ ಹೇಳಬೇಕು.

**ಸೂತ** :- ಪೂರ್ವಕಾಲದಲ್ಲಿ ಕಶ್ಯಪ ಅದಿತಿ ಎಂಬ ದಂಪತಿಗಳಿದ್ದರು. ಕಶ್ಯಪರಲ್ಲಿ ಬ್ರಹ್ಮದೇವರ ಅಂಶ. ಅದಿತಿದೇವಿಯಲ್ಲಿ ಭೂದೇವಿಯ ಅಂಶ. ಆ ಅದಿತಿ ಕಶ್ಯಪರೇ ಈಗ ದೇವಕೀ ವಸುದೇವರಾಗಿ ಜನಿಸಿದರು. ಧರ್ಮಗ್ಲಾನಿಯಾದುದನ್ನು ಕಂಡು ಭಗವಾನ್ ಶ್ರೀ ಹರಿಯು ವೃಷ್ಣಿಕುಲದಲ್ಲಿ ದುಷ್ಟದೈತ್ಯರನ್ನು ಸಂಹಾರಮಾಡಿ ಧರ್ಮಸಂಸ್ಥಾಪನೆ ಮಾಡಲಿಕ್ಕಾಗಿ ಅವತಾರ ಮಾಡಿದನು. ಅವನು ದೊಡ್ಡವನಾದ ಬಳಿಕ ರುಕ್ಮಿಣೀ, ಸತ್ಯಭಾಮಾ, ನಾಗ್ನಜಿತೀ, ಸುಭಾಮಾ, ಶೈಬ್ಯಾ, ಗಾಂಧಾರೀ, ಲಕ್ಷಣಾ, ಮಿತ್ರವಿಂದಾ, ಕಾಲಿಂದೀ, ಜಾಂಬವತೀ, ಸುಶೀಲಾ, ಮಾದ್ರೀ, ಕೌಶಲ್ಯಾ, ವಿಜಯಾ ಮುಂತಾಗಿ ಹದಿನಾರುಸಾವಿರಕನ್ನೆಯರನ್ನು ಮದುವೆಯಾದನು. ರುಕ್ಮಿಣಿಯು ಚಾರುದೇಷ್ಣ, ಪ್ರದ್ಯುಮ್ನ, ಸುಚಾರು, ಚಾರುಭದ್ರ, ಭದ್ರ, ಪರಶು, ಚಾರುಗುಪ್ತ, ಚಾರುಭದ್ರ, ಸುಚಾರಕ, ಚಾರುಹಾಸ ಎಂಬ ಮಕ್ಕಳನ್ನು ಹಡೆದಳು. ಚಾರುಮತಿ ಒಬ್ಬ ಹೆಣ್ಣು ಮಗಳೂ ರುಕ್ಮಿಣೀದೇವಿಗೆ ಇದ್ದಳು. ಭಾನು, ರೋಹಿತ, ದೀಪ್ತಿಮಾನ್, ತಾಮ್ರ, ಚಕ್ರ, ಜಲಂಧಮ ಮುಂತಾದವರು ಸತ್ಯಭಾಮೆಯ ತೇಜಸ್ವಿ ಕುಮಾರರು. ಹೆಣ್ಣು ಮಕ್ಕಳು ನಾಲ್ವರು ಸತ್ಯಭಾಮೆಗೆ. ಸಾಂಬ ಜಾಂಬವತಿಯ ಮಗ. ಹತ್ತುಸಾವಿರ ಜನರಲ್ಲಿ ಎದ್ದು ಕಾಣುವಂತಹದು ಸಾಂಬನ ಸೌಂದರ್ಯ. ಮಿತ್ರವೃಂದೆಗೆ ಮಿತ್ರವಂತ, ಮಿತ್ರವಿಂದ ಎಂಬ ಪುತ್ರರೂ, ನಾಗ್ನಜಿತಿಗೆ ಮಿತ್ರಬಾಹು, ಸುನೀಥ ಎಂಬ ತನುಜರೂ ಕೃಷ್ಣನಿಂದ ಹುಟ್ಟಿದರು. ಪರಮಾತ್ಮನ ಸಾವಿರ ಲಕ್ಷ ಸಂಖ್ಯೆಯಲ್ಲಿ ಆ ಮಕ್ಕಳನ್ನು ಲೆಕ್ಕ ಮಾಡಿ ಹೇಳಲಿಕ್ಕಾದೀತೇ !

ಪ್ರದ್ಯುಮ್ನನ ಪತ್ನಿ ವೈದರ್ಭಿಯು ಅನಿರುದ್ಧ ಎಂಬ ಮಗನನ್ನು ಹೆತ್ತಳು. ಅನಿರುದ್ಧನಿಗೆ ಮೃಗಧ್ವಜನು ಮಗನಾಗಿದ್ದ. ಸುಪಾರ್ಶ್ವನ ಮಗಳಾದ ಕಾಶ್ಯೆಯಲ್ಲಿ ಸಾಂಬನಿಗೆ ದೇವಾಂಶರಾದ ಐವರುಮಕ್ಕಳು. ಒಟ್ಟು ಶ್ರೀ ಕೃಷ್ಣ ಪರಮಾತ್ಮನ ಮಿತ್ರಬಾಂಧವ ಪುತ್ರಪೌತ್ರಪ್ರಪೌತ್ರ ಪರಿವಾರ ಮೂರುಕೋಟಿ ಅರವತ್ತು ಲಕ್ಷ ಜನರಿದ್ದರಂತೆ. ಇವರೆಲ್ಲರೂ ದೇವಾಂಶರಾದುದರಿಂದ ಅತಿತೇಜಸ್ವಿಗಳೂ ಶೂರರೂ ಆಗಿದ್ದರು. ಹಿಂದೆ ದೇವಾಸುರಯುದ್ಧದಲ್ಲಿ ಹತರಾದ ದೈತ್ಯರು ಈಗ ಮತ್ತೆ ಮಾನವಲೋಕದಲ್ಲಿ ಜನಿಸಿ ಜನರನ್ನೆಲ್ಲ ಪೀಡಿಸಿ ಹಿಂಸಿಸುತ್ತಿದ್ದರು. ಅವರೆಲ್ಲರನ್ನೂ ಸಂಹರಿಸಲಿಕ್ಕಾಗಿ ಶ್ರೀವಿಷ್ಣುಪರಮಾತ್ಮನು ಕೃಷ್ಣರೂಪಿಯಾಗಿ ಯಾದವಕುಲದಲ್ಲಿ ಹುಟ್ಟಿದನು. ಯಾದವರ ಒಂದುನೂರಾ ಒಂದು ಕುಲಗಳು ವೃಷ್ಣವಕುಲಗಳೇ. ಅವರೆಲ್ಲರಿಗೂ ಕೃಷ್ಣನೇ ನಾಯಕ, ಪಾಲಕ, ಶಾಸಕ. ಅವರೆಲ್ಲರೂ ಅವನ ಆಜ್ಞಾಪಾಲಕರು.

**ಋಷಿಗಳು** :- ಸಪ್ತರ್ಷಿಗಳು, ಕುಬೇರ, ನಾರದ, ಧನ್ವಂತರಿ, ಯಕ್ಷಕುಲದ ಮಾಣಿಚರ ಶಾಲಕಿ ಮತ್ತು ಆದಿದೇವನಾದ ವಿಷ್ಣು ಇವರೆಲ್ಲರೂ ಒಟ್ಟೊಟ್ಟಿಗೆ ಏತಕ್ಕಾಗಿ ಭೂಮಿಯಲ್ಲಿ ಅವತರಿಸುವರು ? ವಿಷ್ಣು ಹಿಂದೆಮಾಡಿದ ಅವತಾರಗಳೆಷ್ಟು ? ಮುಂದಾದರು ಬ್ರಾಹ್ಮಣ ಕ್ಷತ್ರಿಯ ತಪಸ್ವಿ ಕುಲಗಳಲ್ಲಿ ಅವನು ತಾಳುವ ಅವತಾರಗಳೆಷ್ಟು? ವೃಷ್ಣಿವಂಶದ ಅಲಂಕಾರ ಭೂತನಾದ ಆ ಕೃಷ್ಣ

ಪರಮಾತ್ಮನು ಆಗಾಗ ಮೇಲಿಂದ ಮೇಲೆ ಮನುಷ್ಯ ಕುಲದಲ್ಲಿ ಏಕೆ ಹುಟ್ಟಿ ಬರುತ್ತಾನೆ ? ಇದನ್ನೆಲ್ಲ ತಿಳಿಸಬೇಕು.

**ಸೂತ** :- ಭಗವಾನ್ ಶ್ರೀ ವಿಷ್ಣುವು ಯುಗಯುಗಾಂತರಗಳ ಸಂಧಿಕಾಲದಲ್ಲಿಯೂ ದೇವಾಸುರರ ಸಂಗ್ರಾಮ ಸಂದರ್ಭಗಳಲ್ಲಿಯೂ ಧರ್ಮಗ್ಲಾನಿಯಾದ ಸಮಯಗಳಲ್ಲಿಯೂ ಮನುಷ್ಯಜಾತಿಯಲ್ಲಿ ಅವತಾರ ಮಾಡಿ ಭೂಮಿಗೆ ಬರುತ್ತಾನೆ. ಹಿಂದೆ ದೈತ್ಯರಾಜನಾದ ಹಿರಣ್ಯಕಶಪು ಮೂರುಲೋಕಗಳನ್ನು ಆಳುತ್ತಿರುವಾಗ, ಅನಂತರ ಬಲಿಚಕ್ರವರ್ತಿಯು ಮೂರುಲೋಕಗಳ ಶಾಸನವನ್ನು ನಡೆಸುವಾಗ ದೇವದೈತ್ಯರ ನಡುವೆ ಘನಘೋರ ಯುದ್ಧವಾಯಿತು. ಆ ಕಾಲದಲ್ಲಿ ಭೃಗುಋಷಿಯ ಶಾಪನಿಮಿತ್ತವಾಗಿ ಮತ್ತು ಧರ್ಮಚಕ್ರ ವ್ಯವಸ್ಥೆಗಾಗಿ ಆ ಭಗವಂತನು ಮನುಷ್ಯ ಕುಲದಲ್ಲಿ ಅವತಾರ ಮಾಡಿದನು. ಈ ದೇವದಾನವರ ಯುದ್ಧದಲ್ಲಿ ಆ ವಿಷ್ಣುವಿನ ಕಾರ್ಯವು ಏನು ? ಮತ್ತು ಅಸುರಾಸುರ ಸಂಗ್ರಾಮದ ವೃತ್ತಾಂತವೇನು ? ಇದನ್ನೆಲ್ಲ ನಮಗೆ ಹೇಳಿರಿ.

**ಸೂತ** - ಕಶ್ಯಪ ಮುನಿಯ ದಿತಿ ಅದಿತಿ ಎಂಬ ಧರ್ಮ ಪತ್ನಿಯರಿಂದ ಜನಿಸಿದ ದೇವದೈತ್ಯರು ಭಾಗಾದಿಗಳು ದಾಯಾದಿಗಳು. ಈ ಮಲಸಂಬಂಧ ಮೂಲಕವಾಗಿ ಆಸ್ತಿಹಕ್ಕಿನ ನೆವದಿಂದ ಅವರೀರ್ವರಲ್ಲಿ ಘೋರ ಹೋರಾಟಗಳು ಆಗಾಗ ಆಗುತ್ತಲೇ ಇರುತ್ತವೆ. ಆ ಕಾಲದಲ್ಲಿಯೇ ಶಂಡ ಮತ್ತು ಮರ್ಕ ಎಂಬ ಶುಕ್ರಾಚಾರ್ಯರ ಶಿಷ್ಯರು ಇಬ್ಬರು ಅಸುರರ ಪಕ್ಷವನ್ನು ಬಿಟ್ಟು ದೇವತೆಗಳ ಪಕ್ಷವನ್ನು ವಹಿಸಿದರು. ಈ ಸಂಧಿಕಾಲದಲ್ಲಿಯೇ ಶ್ರೀ ವಿಷ್ಣು ನರಸಿಂಹ ವರಾಹ ಮುಂತಾದ ಹನ್ನೆರಡು ಅವತಾರಗಳನ್ನು ಎತ್ತಿದ್ದು. ಈ ಸಂಗ್ರಾಮಗಳಲ್ಲಿ ಶ್ರೀ ವಿಷ್ಣುವು ಅವತಾರಎತ್ತಿ ದೇವಪಕ್ಷದಲ್ಲಿ ಪ್ರಮುಖನಾಗಿ ನಿಂತು ಯುದ್ಧ ಮಾಡಿದ್ದರಿಂದ ಕೆಲವು ಸಮರಗಳಿಗೆ ಹರಿಯ ಅವತಾರದ ಹೆಸರುಗಳೇ ಬಂದಿವೆ. ಅವುಗಳಲ್ಲಿ ನರಸಿಂಹಾವತಾರ ಕಾಲದಲ್ಲಿ ಆದ ನರಸಿಂಹಯುದ್ಧ ಪ್ರಥಮ. ವಾಮನಾವತಾರಕಾಲದ್ದು ಎರಡನೆಯ ದೇವದಾನವ ಸಂಗ್ರಾಮ. ಮೂರನೆಯದೇ ವರಾಹ ಸಂಗ್ರಾಮ. ನಾಲ್ಕನೆಯದು ಅಮೃತಮಂಥನ ಕಾಲದ ಸಮರ. ಐದನೆಯದು ತಾರಕಾಮಯ ಸಂಗ್ರಾಮ. ಆರನೆಯದು ಆಡೀಬಕ. ಏಳನೆಯದು ತ್ರೈಪುರ. ಎಂಟನೆಯದು ಅಂಧಕ. ಒಂಬತ್ತನೆಯದು ವೃತ್ರಘಾತಕ. ಹತ್ತನೆಯದು ಧಾತ್ರ. ಹನ್ನೊಂದನೆಯದು ಹಾಲಾಹಲ, ಹನ್ನೆರಡನೆಯದೇ ಕೋಲಾಹಲ.

ಮೊದಲಯುದ್ಧದಲ್ಲಿ ಹರಿಯು ನರಸಿಂಹರೂಪ ತಾಳಿ ದೈತ್ಯಕುಲದ ದೊರೆಯಾದ ಹಿರಣ್ಯಕಶಿಪುನನ್ನು ಸಂಹರಿಸಿದನು. ಎರಡನೆಯದರಲ್ಲಿ ವಾಮನನು ಬಲಿಚಕ್ರವರ್ತಿಯಿಂದ ಭೂಮಿಯನ್ನು ಬೇಡಿಪಡೆದು ಆಳೆದುಕೊಂಡು ಅವನನ್ನೇ ಕಟ್ಟಿಕೂಡಿಸಿದನು. ಮೂರನೆಯ ವರಾಹ ಸಂಗ್ರಾಮದಲ್ಲಿ ವರಾಹರೂಪಿ ವಿಷ್ಣು ಹಂದಿಯ ವೇಷತಾಳಿ ಹಿರಣ್ಯಾಕ್ಷನನ್ನು ಕೊಂದು ಸಮುದ್ರದ ಆಳಕ್ಕೆ ಇಳಿದು ಭೂಮಿಯನ್ನು ಮೇಲಕ್ಕೆ ತಂದನು. ಅಮೃತಮಂಥನ ಎಂಬ ನಾಲ್ಕನೆಯ

ಸಂಗ್ರಾಮದಲ್ಲಿ ದೇವೇಂದ್ರನು ಹರಿಯ ಬೆಂಬಲದಿಂದ ದೈತ್ಯರಾಜ ಪ್ರಹ್ಲಾದನನ್ನು ಗೆದ್ದನು. ಮುಂದೆ ಪ್ರಹ್ಲಾದನ ಮಗ ವಿರೋಚನನು ಇಂದ್ರನನ್ನು ಕೊಲ್ಲಬೇಕೆಂದು ಯತ್ನಿಸಿದನು. ಆಗಲೇ ತಾರಕಾಮಯ ಸಂಗ್ರಾಮ ಪ್ರಾರಂಭ. ಹರಿಯ ಬಲವುಳ್ಳ ದೇವಸೇನೆಯ ಹೊಡೆತ ತಾಳದೇ ದೈತ್ಯರು ಪರಾಜಿತರಾದರು. ಇಂದ್ರನೇ ವಿರೋಚನನ್ನು ಸಂಹರಿಸಿದ.

ಇದರಂತೆ ಆರನೆಯ ಆಡೀಬಕ. ಏಳನೆಯ ತ್ರೈಪುರ ಮುಂತಾದ ಸಮರಗಳಲ್ಲಿ ಹರಿಹರರಬಲದಿಂದ ದೇವತೆಗಳು ದೈತ್ಯರನ್ನು ಕೊಂದರು. ಎಂಟನೆಯ ಅಂಧಕಾಸುರ ಸಂಗ್ರಾಮದಲ್ಲಿ ಮಹಾದೇವನು ಮೂರುಲೋಕಗಳಲ್ಲಿ ಇದ್ದ ದೈತ್ಯದಾನವ ಪಿಶಾಚರನ್ನೆಲ್ಲ ನಿರ್ಮೂಲಮಾಡಿದನು. ಒಂಬತ್ತನೆಯ ವೃತ್ರಸಂಗ್ರಾಮ. ಹತ್ತನೆಯ ಧಾತ್ರ ಸಂಗ್ರಾಮಗಳಲ್ಲಿ ಇಂದ್ರನು ದೈತ್ಯಸಂಹಾರವನ್ನು ಪ್ರಚಂಡಪ್ರಮಾಣದಲ್ಲಿ ಮಾಡಿದನು. ಹನ್ನೊಂದನೆಯ ಹಾಲಾಹಲದಲ್ಲಿ ಸುರೇಶ್ವರನು ಹಾಲಾಹಲನಾಮಕ ದಾನವನನ್ನು ವಧಿಸಿದನು. ಆ ಕಾಲದಲ್ಲಿ ವಿಪ್ರಚಿತ್ತಿ ಎಂಬ ದೈತ್ಯನು ಸುರೇಂದ್ರನ ಆಯುಧಗಳ ಪ್ರಹಾರವನ್ನು ತಾಳಲಾಗದೇ ಅವನ ಧ್ವಜದಲ್ಲಿಯೇ ಮಾಯೆಯಿಂದ ಅಡಗಿಕೊಂಡನು. ಆಗ ಇಂದ್ರನೂ ಕೂಡ ಅದೇ ಧ್ವಜದಲ್ಲಿ ಹೊಕ್ಕು ಅವನನ್ನು ಹೊಡೆದು ಕೊಂದನು. ಕೊನೆಯ ಕೋಲಾಹಲ ಎಂಬ ಕದನದಲ್ಲಿ ಶಚೀಪತಿಯು ತನ್ನ ಮೇಲೆ ಒಟ್ಟಾಗಿ ಎರಿಬಂದ ದೈತ್ಯದಾನವರನ್ನು ತನ್ನ ವಿಕ್ರಮದಿಂದ ಗೆದ್ದು ಕಟ್ಟಿಹಾಕಿದನು. ಈ ದೇವದಾನವ ಯುದ್ಧರೂಪವಾದ ಯಜ್ಞದ ಅವಸಾನದ ಅವಭೃಥಸ್ನಾನದ ಕಾಲದಲ್ಲಿ ಶಂಡ ಮರ್ಕ ಎಂಬ ಇಬ್ಬರು ಶಿಷ್ಯರು ಪಕ್ಷಾಂತರಮಾಡಿ ದೇವತಾಪಕ್ಷಕ್ಕೆ ಬಂದುಕೂಡಿದರು. ಹೀಗೆ ಹಿಂದೆ ನಡೆದ ಹನ್ನೆರಡು ಸಮರಗಳಲ್ಲಿ ಎರಡೂ ಪಕ್ಷಗಳಿಗೂ ಸಾಕಷ್ಟು ಕಷ್ಟನಷ್ಟಗಳು ಉಂಟಾದವು. ಆದರೆ ಅದರಿಂದ ಜನಸಾಮಾನ್ಯರಿಗೆ ಮಾತ್ರ ಕಲ್ಯಾಣವೇ ಆಯಿತು. ದೈತ್ಯಕುಲದ ಹಿರಣ್ಯಕಶಿಪು, ಪ್ರಹ್ಲಾದ, ಬಲಿಚಕ್ರವರ್ತಿ ಈ ಮೂವರು ದಾನವೇಶ್ವರರ ಆಧಿಪತ್ಯದಲ್ಲಿ ಹತ್ತು ಯುಗಗಳಷ್ಟು ದೀರ್ಘಕಾಲ ಮೂರು ಲೋಕಗಳೂ ಇದ್ದವು. ಅದರಲ್ಲಿ ಹತ್ತು ಕೋಟಿ ಎಪ್ಪತ್ತೆರಡು ಲಕ್ಷ ಎಂಬತ್ತು ಸಾವಿರವರ್ಷ ಬರೀ ಹಿರಣ್ಯಕಶಿಪುವಿನ ಅಧಿಕಾರವಿದ್ದಿತು. ಇಪ್ಪತ್ತು ಲಕ್ಷ ಎಪ್ಪತ್ತುಸಾವಿರ ವರ್ಷಗಳವರೆಗೆ ಬಲಿರಾಜನ ಶಾಸನವಿದ್ದಿತು.

ಅನಂತರ ದೈತ್ಯರ ಅಧಿಪತಿ ಪ್ರಹ್ಲಾದನಿಂದ ದೇವೇಂದ್ರನು ತ್ರೈಲೋಕ್ಯ ಶಾಸನದ ಅಧಿಕಾರವನ್ನು ಹರಿಯ ಬೆಂಬಲದಿಂದ ಹೋರಾಡಿ ಗೆದ್ದು ಪಡೆದು ಹತ್ತು ಯುಗಮಾನದವರೆಗೆ ತಾನು ನಡೆಯಿಸಿದ್ದನು. ಈ ಅವಧಿಯಲ್ಲಿ ಜಗತ್ತಿನಲ್ಲಿರುವ ಸಜ್ಜನರಿಗೆ ದೈತ್ಯದಾನವ ಮುಂತಾದವರುಗಳ ಉಪಟಳವು ತಪ್ಪಿತು. ದೈತ್ಯಗುರು ಶುಕ್ರಾಚಾರ್ಯರೂ ಕೂಡ ಅಸುರರನ್ನು ಬಿಟ್ಟು ಸುರಪಕ್ಷದಲ್ಲಿ ಸೇರಿಕೊಂಡು ಬಿಟ್ಟರು. ದೇವತೆಗಳು ಪ್ರಾರಂಭಿಸಿದ ಯಜ್ಞದಲ್ಲಿ ಶುಕ್ರಾಚಾರ್ಯರೂ ಭಾಗವಹಿಸಿದರು.

ಆಗ ದೈತ್ಯರೆಲ್ಲರೂ ಗಾಬರಿಯಾಗಿ ತಮ್ಮ ಗುರುಗಳನ್ನು ಏಕಾಂತದಲ್ಲಿ ಕರೆದು ಬಿನ್ನವಿಸಿದರು. - "ಗುರುಗಳೇ, ಇದೇನು ? ನಾವು ನೋಡುತ್ತಿರುವಂತೆಯೇ ನೀವು ನಮ್ಮನ್ನೆಲ್ಲ ತೊರೆದು ದೇವತೆಗಳ ಯಜ್ಞಕ್ಕೆ ಹೋಗಿಬಿಟ್ಟಿರಲ್ಲ ! ನಿಮ್ಮನ್ನೇ ನಂಬಿದ ನಾವು ಈಗ ಏನು ಮಾಡೋಣ ? ನೀವೇ ನಮ್ಮ ವಿರುದ್ಧ ಪಕ್ಷಕ್ಕೆ ಸೇರಿದ ಬಳಿಕ ನಮಗೆ ಇನ್ನು ಈ ಪೃಥ್ವಿಯಲ್ಲಿ ಉಳಿಗಾಲವಿಲ್ಲ. ನಾವಿನ್ನು ರಸಾತಳಕ್ಕೆ ಇಳಿಯುತ್ತೇವೆ. ರಾಕ್ಷಸ ಕುಲದ ಅಧಃಪಾತವೇ ಆಯಿತು" ಎಂದು ಗೋಳಿಟ್ಟರು. ಶಿಷ್ಯರ ಈ ಶೋಚನೀಯ ಅವಸ್ಥೆ ಕಂಡು ಶುಕ್ರರ ಎದೆ ಕರಗಿ ಅವರು ಅವರನ್ನು ಸಂತೈಸುತ್ತ ನುಡಿದರು.

"ಹೆದರಬೇಡಿರಿ ಓ ಅಸುರರೇ ! ನನ್ನ ತೇಜಸ್ಸಿನಿಂದ ನಾನು ನಿಮ್ಮನ್ನು ಮೇಲಕ್ಕೆ ಎತ್ತಿ ಹಿಡಿಯುತ್ತೇನೆ. ಮಂತ್ರಮಾರಿಕೆಗಳ ರಸದ್ರವ್ಯಗಳು, ರನ್ನ, ಹೊನ್ನ ಮುಂತಾದವೆಲ್ಲವೂ ನನ್ನ ಬಳಿಯಲ್ಲಿಯೇ ಇವೆ. ಅದರ ಕಾಲುಭಾಗ ಮಾತ್ರ ದೇವತೆಗಳಲ್ಲಿದೆ. ಇದೆಲ್ಲವನ್ನೂ ನಾನು ನಿಮಗೇ ಕೊಟ್ಟುಬಿಡುತ್ತೇನೆ. ಇವುಗಳನ್ನೆಲ್ಲ ನಾನು ವಶೀಕರಣವಿದ್ಯೆಯಿಂದ ನಿಮಗಾಗಿಯೇ ಸಂಗ್ರಹಿಸಿದ್ದೇನೆ."

ಇದನ್ನು ಕೇಳಿ ದೇವತೆಗಳಿಗೆ ಗಾಬರಿಯಾಯಿತು. "ಶುಕ್ರಾಚಾರ್ಯರ ಬಳಿಯಲ್ಲಿರುವ ಸಾಧನ ಸಾಮಗ್ರಿ ಎಲ್ಲವೂ ದೈತ್ಯರ ಸ್ವಾಧೀನವಾಗಿಬಿಟ್ಟರೆ ತಮ್ಮ ಸರ್ವಸ್ವವೂ ಘಾತವಾದಂತೆ ಎಂದು ಅವರು ಬಗೆದರು. ಬಾಯಿಂದ ಕೊಡುತ್ತೇನೆ ಎಂದು ಹೇಳಿದ್ದನ್ನು ಕೈಯಿಂದ ಕೊಡುವದರೊಳಗಾಗಿ ನಾವು ಹೋಗಿ ದೈತ್ಯರನ್ನು ಹೊಡೆದುಬಡಿದು ಪಾತಾಳಕ್ಕೆ ಓಡಿಸಿಬಿಡೋಣ" ಎಂದು ಯೋಚಿಸಿ ದೇವತೆಗಳು ದೈತ್ಯರ ಮೇಲೆ ಏರಿಹೋದರು. ಅಕಸ್ಮಾತ್ತಾಗಿ ವೀರಾವೇಶದಿಂದ ಬಂದು ತಮ್ಮನ್ನೆಲ್ಲ ಕಡಿದುಕೊಚ್ಚಿಕೊಂದು ಹಾಕುತ್ತಿರುವ ದೇವತೆಗಳ ರಣದ ರಭಸವನ್ನು ತಾಳಲಾರದೆ ತತ್ತರಿಸಿ ಶುಕ್ರಾಚಾರ್ಯರ ಕಡೆಗೆ ಓಡಿಹೋದರು. ಬೆನ್ನಟ್ಟಿ ಬರುವ ದೇವತೆಗಳನ್ನು ಕಂಡು ಶುಕ್ರಾಚಾರ್ಯರು ಸ್ವಯಂಶಿಷ್ಯರ ರಕ್ಷಣೆಗೆ ಕೈಕಟ್ಟಿ ನಿಂತುಕೊಂಡರು. ಗುರುವಿನ ಕರುಣೆಯಿಂದ ಬಲಗೊಂಡ ದೈತ್ಯರು ದೇವತೆಗಳ ಮೇಲೆ ತಿರುಗಿದಾಳಿಹೂಡಿದರು. ನುಗ್ಗಿ ಬಂದ ದೇವಸೈನ್ಯವನ್ನೆಲ್ಲ ಹೊಡೆದು ಹಿಮ್ಮೆಟ್ಟಿಸಿದರು. ಹೀಗೆ ಶುಕ್ರಾಚಾರ್ಯರು ಹಿಂಬದಿಯಲ್ಲಿ ಬೆಂಬಲರಾಗಿ ನಿಂತಬಳಿಕ ದೈತ್ಯರನ್ನು ಗೆಲ್ಲುವದು ಸಾಧ್ಯವಿಲ್ಲ ಎಂದು ಬಗೆದು ಮರಳಿದರು ದೇವತೆಗಳು. ಹಿಂದಿರುಗಿದ ಬಳಿಕ ಶುಕ್ರಾಚಾರ್ಯರು ತನ್ನ ಶಿಷ್ಯ ದೈತ್ಯರಿಗೆಲ್ಲ ಹಿತೋಪದೇಶವನ್ನು ಮಾಡಿದರು.

"ದೈತ್ಯರೇ, ಹಿಂದೆ ನಿಮಗೂ ದೇವತೆಗಳಿಗೂ ನಡೆದ ಹನ್ನೆರಡು ಯುದ್ಧಗಳಲ್ಲಿ ದೇವತೆಗಳು ದೈತ್ಯಕುಲದ ಧುರೀಣರನ್ನೆಲ್ಲ ಒಂದಿಲ್ಲ ಒಂದು ಯುಕ್ತಿಯಿಂದ ಹಂಚಿಕೆಮಾಡಿ ಕೊಂದುಹಾಕಿದ್ದಾರೆ. ಮೂರಡಿ ಭೂಮಿದಾನದ ನೆವದಿಂದ ಬಲಿರಾಜನನ್ನು ಮೂಲೆಗೊತ್ತಿದರು. ಇದರಂತೆ ಜಂಭ ವಿರೋಚನರನ್ನು ಕೊಂದು ಹಾಕಿದರು. ಈಗ ಉಳಿದವರು ನೀವು ಕೆಲವೇ ಮಂದಿ. ಈಗ ಅವರೊಂದಿಗೆ

ಯುದ್ಧಬೇಡ. ನಿಮಗೆ ಈಗ ಕಾಲ ಅನುಕೂಲವಿಲ್ಲ. ಆದುದರಿಂದ ನೀವು ಈಗ ಯುದ್ಧದಿಂದ ವಿರಮಿಸಿರಿ. ನಿಮಗೆ ಗೆಲುವನ್ನು ತಂದುಕೊಡಲು ನಾನೊಂದು ಹೊಸ ಹಾದಿಯನ್ನು ಕಂಡು ಹಿಡಿಯುತ್ತೇನೆ. ಯಾರಿಗೂ ಗೊತ್ತಿಲ್ಲದ ಮಂತ್ರಗಳನ್ನು ಮಹೇಶ್ವರನಿಂದ ನಾನು ಪಡೆದು ಬಂದ ಬಳಿಕ ಮತ್ತೆ ಸುರುವುಮಾಡಿರಿ ಸುರರೊಡನೆ ಸಂಗ್ರಾಮವನ್ನು. ಆಗ ಜಯಲಕ್ಷ್ಮಿಯ ಮಾಲೆಯು ನಿಮಗೆ.'' ಹೀಗೆ ಶುಕ್ರಾಚಾರ್ಯರು ದೈತ್ಯರಿಗೆ ಹೇಳಿ ದೇವತೆಗಳಿಗೆ ಪ್ರಹ್ಲಾದನ ಮುಖಾಂತರ ಹೇಳಿ ಕಳಿಸಿದರು. ''ನಮ್ಮಲ್ಲಿ ಯುದ್ಧದ ಸಾಮಗ್ರಿ ಇಲ್ಲ. ಆದುದರಿಂದ ನಾವು ಯುದ್ಧ ಬಿಟ್ಟಿದ್ದೇವೆ. ಶಸ್ತ್ರಗಳನ್ನು ಕೆಳಗೆ ಇಟ್ಟಿದ್ದೇವೆ. ರಥಗಳಿಂದ ಕೆಳಗೆ ಇಳಿದಿದ್ದೇವೆ. ನಾರುಬಟ್ಟೆ ಉಟ್ಟುಕೊಂಡು ಕಾಡಿನಲ್ಲಿ ತಪಸ್ಸನ್ನು ಮಾಡುತ್ತಿದ್ದೇವೆ.'' ಪ್ರಹ್ಲಾದನು ಹೇಳಿದ ಬಳಿಕ ಇದು ಸತ್ಯವೆ ಇರಬಹುದು ಎಂದು ಬಗೆದು ದೇವತೆಗಳು ನಿಶ್ಚಿಂತೆಯಿಂದ ಯುದ್ಧ ಬಿಟ್ಟು ಮನೆಗೆ ಮರಳಿದರು. ಅನಂತರ ಶುಕ್ರಾಚಾರ್ಯರು ದೈತ್ಯರನ್ನು ಕುರಿತು ''ದಾನವರೇ, ನೀವು ಗರ್ವಬಿಟ್ಟು ಕೆಲಕಾಲ ಮಹಾದೇವರ ಧ್ಯಾನಮಾಡಿರಿ. ನಿಮ್ಮ ಕಾರ್ಯ ಸಾಧನೆಯಾಗಬೇಕಾದರೆ ನೀವು ಈಗ ಕೋಪ ಮದ ದಂಭಗಳನ್ನು ತೊರೆದು ತಪಸ್ವಿಗಳಾಗಿ ಇರತಕ್ಕದ್ದು. ನಮ್ಮ ತಂದೆಯ ಆಶ್ರಮದ ಬಳಿ ನನಗಾಗಿ ಕಾಯುತ್ತಲಿರಿ.'' ಎಂದು ಹೇಳಿ ಮಹಾದೇವರನ್ನು ಮೊರೆ ಹೊಕ್ಕರು.

**ಶುಕ್ರ** :- ಪ್ರಭುದೇವ, ನನ್ನ ಶಿಷ್ಯರಾದ ದೈತ್ಯರು ದೇವತೆಗಳನ್ನು ಗೆಲ್ಲಬೇಕು. ಅದಕ್ಕಾಗಿ ಸುರಗುರು ಬೃಹಸ್ಪತ್ಯಾಚಾರ್ಯನಿಗೆ ತಿಳಿಯದ ಮಂತ್ರಗಳನ್ನು ನನಗೆ ದಯಪಾಲಿಸು.

## ಇಂದ್ರಕುವರಿ ಜಯಂತಿಯೊಡನೆ ದೈತ್ಯಗುರು ಶುಕ್ರಾಚಾರ್ಯರ ಮಧುಚಂದ್ರ ವಿಹಾರ

**ಮಹಾದೇವ** :- ಭಾರ್ಗವ, ಅದಕ್ಕಾಗಿ ನೀನು ಒಂದು ಸಾವಿರವರ್ಷ ತಲೆಕೆಳಗೆ ಕಾಲುಮೇಲೆಮಾಡಿ ಶೀರ್ಷಾಸನದಲ್ಲಿ ನಿಂತು ತಪಸ್ಸನ್ನುಮಾಡು. ಹಿಪ್ಪಲಿಯ ಹೊಗೆಕುಡಿದು ಸಾವಿರವರ್ಷ ವ್ರತಮಾಡಿದರೆ ಮಾತ್ರ ನೀನು ಬಯಸಿದ ದಿವ್ಯಮಂತ್ರಗಳು ನಿನಗೆ ದೊರಕುತ್ತವೆ. ಶಿವನ ನುಡಿಯನ್ನು ಕೇಳಿ ಶುಕ್ರಾಚಾರ್ಯರು ಒಪ್ಪಿ ಪರಮೇಶ್ವರನ ಪಾದ ಹಿಡಿದು, ''ಪ್ರಭು, ನೀನು ಅಣತಿಯಿತ್ತಂತೆ ಸಹಸ್ರವರ್ಷದ ಈ ವ್ರತವನ್ನು ನಾನು ಆಚರಿಸುತ್ತೇನೆ.'' ಎಂದು ಪ್ರಾರ್ಥಿಸಿದನು. ಅನಂತರ ಪಾರ್ವತೀ ಪತಿಯು ಶುಕ್ರನು ಶೀರ್ಷಾಸನದಲ್ಲಿ ನಿಂತು ತಪಂಗೈಯುವಾಗ ಹಿಪ್ಪಲಿಯ ಹೊಗೆಯನ್ನು ಹಾಕಲಿಕ್ಕಾಗಿ ಕುಂಡಧಾರ ಎಂಬ ಯಕ್ಷನನ್ನು ಕಳಿಸಿಕೊಟ್ಟನು. ಶುಕ್ರಾಚಾರ್ಯರು ದೈತ್ಯಕುಲದ ಹಿತಕ್ಕಾಗಿ ಮಹಾದೇವರು ಹೇಳಿದಂತೆ ವ್ರತತಪೋನುಷ್ಠಾನಮಾಡುತ್ತ ಬ್ರಹ್ಮಚರ್ಯದಿಂದ ಅಲ್ಲಿಯೇ ನಿಂತುಕೊಂಡರು. ದೇವತೆಗಳೂ ಯೋಚನೆಮಾಡಿದರು. ಶುಕ್ರಾಚಾರ್ಯರು ತಪಸ್ಸನ್ನು ಮಾಡಿ ಸಿದ್ಧಿ ಪಡೆದುಕೊಂಡು ಬಂದ ಬಳಿಕ ಅವರನ್ನು ಗೆಲ್ಲುವದು ನಮಗೆ ಶಕ್ಯವಾಗಲಿಕ್ಕಿಲ್ಲ. ಈಗ ಹೇಗೂ ಅವರಿಗೆ ಗುರುವಿಲ್ಲ. ತಯಾರಿ ಇಲ್ಲ.

ಸಾಮಗ್ರಿ ಇಲ್ಲ. ಈಗಲೇ ದೈತ್ಯರನ್ನು ಮುಗಿಸಿಬಿಡಬೇಕು ಎಂದು ರಾಜಕಾರಣ ದೃಷ್ಟಿಯಿಂದ ವಿಚಾರಮಾಡಿ ಒಮ್ಮೆಲೇ ದೈತ್ಯರ ಮೇಲೆ ಯುದ್ಧಘೋಷಣೆಮಾಡಿ ಏರಿಬಂದರು. ಆಕಸ್ಮಿಕ ದಾಳಿಮಾಡಿ ನುಗ್ಗಿಬಂದ ಸುರಸೇನೆಯನ್ನು ಕಂಡು ದೈತ್ಯರೆಲ್ಲರೂ ಕಂಗೆಟ್ಟು ಹೋದರು. ದೀನರಾಗಿ ಅವರಿಗೆ ಕೇಳಿಕೊಂಡರು.

''ನಾವೆಲ್ಲರೂ ನಿಮಗೆ ಹೇಳಿ ಕಳಿಸಿ ಶಸ್ತ್ರಸಂನ್ಯಾಸ ಮಾಡಿದ್ದೇವೆ. ನೀವೂ ಆಗ ಯುದ್ಧಮಾಡುವದಿಲ್ಲ ಎಂದು ಅಭಿಪ್ರಾಯ ಕೊಟ್ಟಿದ್ದೀರಿ. ನಮ್ಮ ಗುರುಗಳು ತಪಸ್ಸಿಗೆ ಹೋಗಿದ್ದಾರೆ. ಈಗ ಒಮ್ಮೆಲೆ ಏರಿಬಂದರೆ ಏನು ಗತಿ ! ಇದು ನ್ಯಾಯವೇ? ಗುರುಗಳಿಲ್ಲದೇ ನಿರಾಯುಧರಾಗಿ ಕುಳಿತವರ ಮೇಲೆ ದಾಳಿಮಾಡುವದು ವಿಹಿತವೇ ? ಮೇಲಾಗಿ ನಾವೆಲ್ಲ ಮುನಿವೃತ್ತಿಯನ್ನು ಅಂಗೀಕರಿಸಿದ್ದೇವೆ. ನಾರುಮಡಿ ತೊಟ್ಟಿದ್ದೇವೆ. ಕೃಷ್ಣಾಜಿನಉಟ್ಟಿದ್ದೇವೆ. ಜಟಾಗಡ್ಡಬಿಟ್ಟಿದ್ದೇವೆ. ನಮಗೀಗ ಸಹಾಯಕರಾರೂ ಇಲ್ಲ'' ಎಂದು. ಇಷ್ಟು ಹೇಳಿ ಅವರು ದೇವತೆಗಳ ಎದುರು ಯುದ್ಧಕ್ಕೆ ನಿಲ್ಲದೇ ಶುಕ್ರಾಚಾರ್ಯರ ತಾಯಿಯ ಬಳಿಗೆ ಓಡಿಹೋದರು. ಅವಳೂ ಅವರಿಗೆ ಅಭಯದ ಆಶ್ವಾಸನೆಯಿತ್ತು ಧೈರ್ಯ ಹೇಳಿದಳು.

''ದೈತ್ಯರೇ ಹೆದರಬೇಡಿರಿ, ಹೆದರಬೇಡಿರಿ, ನನ್ನ ಬಳಿಗೆ ಬನ್ನಿ. ಇಲ್ಲಿ ಇದ್ದಾಗ ನಿಮಗೆ ಯಾವ ಭಯವೂ ಇಲ್ಲ.'' ಗುರುಮಾತೆಯ ಈ ಭರವಸೆ ನುಡಿ ಕೇಳಿ ದೈತ್ಯರಿಗೆ ಧೈರ್ಯಬಂದಿತು. ಅವರೆಲ್ಲರೂ ಅವಳ ಆಶ್ರಮದಲ್ಲಿ ಬಂದು ನಿಂತರು. ದೈತ್ಯರನ್ನು ಬೆನ್ನಟ್ಟಿ ಬಂದ ದೇವತೆಗಳು ದೈತ್ಯರೆಲ್ಲರೂ ಒಂದೆಡೆ ಸಿಕ್ಕರು. ಎಂದು ಹರ್ಷದಿಂದ ಅವರ ಮೇಲೆ ಎರಗಿದರು. ಕೈಗೆ ಸಿಕ್ಕಂತೆ ಕೊಂದುಹಾಕತೊಡಗಿದರು. ಅದನ್ನು ಕಂಡು ಆ ಶುಕ್ರಾಚಾರ್ಯರ ತಾಯಿಗೆ ಬಹುಕೋಪ ಬಂದಿತು. ಅವಳು ಗರ್ಜಿಸಿದಳು.

''ಎಲೈ ಸುರರೇ, ನನ್ನ ಅಪ್ಪಣೆ ಇಲ್ಲದೆ ನನ್ನ ಆಶ್ರಮವನ್ನು ಪ್ರವೇಶಿಸಿ ನನ್ನ ಭಕ್ತರಾದ ದೈತ್ಯರನ್ನು ಸಂಹರಿಸತೊಡಗಿರುವಿರಾ ? ಹಾಗಾದರೆ ನಿಮ್ಮ ಒಡೆಯನಾದ ಇಂದ್ರನು ಇಲ್ಲದಂತೆ ಮಾಡುತ್ತೇನೆ ನಿಲ್ಲಿರಿ.'' ಎಂದು ಹೇಳಿ ಮಂತ್ರ ಮಾಟಗಳ ಸಾಮಗ್ರಿಗಳನ್ನೆಲ್ಲ ಸಿದ್ಧಪಡಿಸಿಕೊಂಡು ದೇವೇಂದ್ರನ ಮೇಲೆ ತನ್ನ ಮಾಯೆಯನ್ನು ಪ್ರಯೋಗಿಸಿದಳು. ಮಾಯಾವಿನಿಯಾದ ಆ ತಪಸ್ವಿನಿಯ ಮಾಟದಿಂದ ಒಮ್ಮೆಲೆ ದೇವೇಂದ್ರನು ಕಂಬದಂತೆ ಜಡವಾಗಿ ನಿಂತುಬಿಟ್ಟನು. ಅವನಿಗೆ ಕೈಕಾಲು ಅಲುಗಾಡಿಸಲೂ ಆಗಲಿಲ್ಲ. ಆಗ ಉಳಿದ ದೇವತೆಗಳೆಲ್ಲರೂ ಬೆದರಿಬೆಪ್ಪಾಗಿ ಮೂಢಮೂಕರಾಗಿ ಓಡಿಹೋದರು. ವಿಷ್ಣು ಮಾತ್ರ ಅಲ್ಲಿಯೇ ನಿಂತುಕೊಂಡಿದ್ದ. ದೇವತೆಗಳೆಲ್ಲ ಚದರಿಹೋದ ಬಳಿಕ ಇಂದ್ರನನ್ನು ಕುರಿತು ''ಸುರರಾಜ'' ನೀನು ನನ್ನ ದೇಹದಲ್ಲಿ ಪ್ರವೇಶಿಸು. ನಾನು ನಿನ್ನನ್ನು ಸುರಕ್ಷಿತವಾಗಿ ಕರೆದೊಯ್ಯುವೆನು'' ಎಂದು ಹೇಳಿದನು. ಹರಿಯ ಈ ಮಾತನ್ನು ಕೇಳಿದ ಕೂಡಲೇ ದೇವೇಂದ್ರನು ಅವನ ದೇಹದಲ್ಲಿ ಪ್ರವೇಶಮಾಡಿಬಿಟ್ಟನು. ಹೀಗೆ ಹರಿಯಿಂದ ಸುರಪತಿಯು ರಕ್ಷಿಸಲ್ಪಟ್ಟದ್ದನ್ನು ನೋಡಿ ಆ ಮುದುಕಿಗೆ ಮತ್ತಿಷ್ಟು ಕೋಪ ಬಂದಿತು.

ಆ ಮಾಯಾಗಾತಿಯು ಕೋಪಾಟೋಪದಿಂದ ನುಡಿ ಕಿಡಿಯನ್ನು ಉದರಿಸಿದಳು. "ಓಹೋ! ಹೀಗೋ ! ಹಾಗಾದರೆ ವಿಷ್ಣುಸಹಿತವಾಗಿ ಈ ಸುರೇಂದ್ರನನ್ನು ನನ್ನ ಮಂತ್ರಶಕ್ತಿಯಿಂದ ಸುಟ್ಟುಬಿಡುತ್ತೇನೆ. ಎಲ್ಲ ಪ್ರಾಣಿಗಳು ಕಣ್ಣು ತೆರೆದು ನೋಡುತ್ತಲೇ ಇರಿ. ನನ್ನ ತಪಸ್ಸಿನ ಬಲವು ಎಷ್ಟಿದೆ ಎಂಬುದನ್ನು ತಿಳಿಯಿರಿ."

ಯೋಗಸಿದ್ಧಳಾದ ಆ ವೃದ್ಧಮಾತೆಯ ಈ ಸಿಡಿಲಿನಂಥ ಮಾತನ್ನು ಕೇಳಿ ಇಂದ್ರ ವಿಷ್ಣು ಇಬ್ಬರೂ ತಲ್ಲಣಿಸಿದಂತಾದರು. ಹರಿಇಂದ್ರನಿಗೆ "ಇದರಿಂದ ಪಾರಾಗುವ ಬಗೆಯಾವದು" ಎಂದು ಕೇಳಿದನು. "ದೇವಾ, ಇವಳು ನಮ್ಮನ್ನು ಸುಡುವದಕ್ಕಿಂತ ಮೊದಲೇ ನೀನೇ ಇವಳನ್ನು ಕೊಂದುಬಿಡು. ತಡಮಾಡಬೇಡ. ನಿನಗೆ ಏನೂ ಆಗಲಿಕ್ಕಿಲ್ಲ. ಆದರೆ ಇವಳಿಂದ ನನಗೆ ಮಾತ್ರ ಹಿಂಸೆ ಖಂಡಿತ." ಎಂದು ದೇವೇಂದ್ರನು ದೀನನಾಗಿ ನುಡಿದನು. ಆದರೆ ಶ್ರೀ ಹರಿಯು "ಇವಳು ಹೆಣ್ಣುಮಗಳು, ಇವಳನ್ನು ನಾನು ಕೊಲ್ಲುವದೆಂತು ?" ಎಂದು ಯೋಚಿಸಿ ಸುಮ್ಮನಿದ್ದನು. ಆದರೆ ಬಿಟ್ಟರೆ ಇಂದ್ರನು ಸಾಯುತ್ತಾನೆ. ಅವನು ನನ್ನ ಭಕ್ತ. ಅವನನ್ನು ಬದುಕಿಸುವದೇ ನನ್ನ ಧರ್ಮ ಎಂದು ವಿಚಾರಿಸಿ ಇಂದ್ರನಿಗಾಗಿ ಚಕ್ರವನ್ನು ಎತ್ತಿದನು.

ಆ ಮುದುಕಿಯು ಇವರಿಬ್ಬರನ್ನೂ ಸುಡುವ ಎತ್ತುಗಡೆಯಲ್ಲಿದ್ದಳು. ಅದನ್ನು ಕಂಡು ಸುರರಾಜನ ಸಂಹಾರವಾದೀತೆಂದು ಭಯಗೊಂಡು ಅವಸರದಿಂದ ಸುದರ್ಶನ ಚಕ್ರವನ್ನು ಅವಳ ಮೇಲೆ ಪ್ರಯೋಗಿಸಿದನು. ಅರೆಕ್ಷಣದಲ್ಲಿ ಸುದರ್ಶನವು ಅವಳ ತಲೆಯನ್ನು ಕಡಿದು ನೆಲಕ್ಕೆಸೆಯಿತು. ಇದರಿಂದ ಭೃಗುಋಷಿಗೆ ಬಹಳ ಸಿಟ್ಟು ಬಂದಿತು. ಅವರು ವಿಷ್ಣುವಿಗೆ ಶಾಪವಿತ್ತರು- "ಸ್ತ್ರೀವಧವು ಪಾಪ ಎಂದು ನಿನಗೆ ಗೊತ್ತಿದೆ. ಆದರೂ ನನ್ನ ಮಡದಿಯಾದ ಈ ವೃದ್ಧೆಯನ್ನು ನೀನು ಸಂಹಾರಮಾಡಿದೆ. ಆದುದರಿಂದ ನೀನು ಏಳುಸಲ ಮನುಷ್ಯಜನ್ಮದಲ್ಲಿ ಹುಟ್ಟು." ಧರ್ಮನಾಶವಾಗಿ ಅಧರ್ಮ ತಲೆಯೆತ್ತಿದಾಗ ದುಷ್ಟರನಾಶವನ್ನು ಮಾಡುವದಕ್ಕೆ ಪರಮಾತ್ಮನು ಭೃಗುಮುನಿಯ ಈ ಶಾಪವನ್ನು ನಿಮಿತ್ತ ಮಾಡಿಕೊಂಡು ಮನುಷ್ಯಜಾತಿಯಲ್ಲಿ ಅವತರಿಸಿ ಬರುತ್ತಾನೆ.

ಹೀಗೆ ಶ್ರೀ ವಿಷ್ಣುವಿಗೆ ಶಾಪಕೊಟ್ಟು ಆನಂತರ ಭೃಗುಋಷಿಯು ತಲೆಕಡಿದು ಬಿದ್ದ ತನ್ನ ಮಡದಿಯ ದೇಹದ ಕಡೆಗೆ ನೋಡಿದನು. ಅವಳ ರುಂಡ ಒಂದು ಕಡೆ ದಂಡ ಒಂದುಕಡೆ ಬಿದ್ದದ್ದವು. ಅವೆರಡನ್ನೂ ಎತ್ತಿ ತಂದು ಒಂದೆಡೆ ಕೂಡಿಸಿ ಜೋಡಿಸಿ ಇಟ್ಟು ಮೇಲೆ ಕೈ ಆಡಿಸುತ್ತ ಹೇಳಿದನು. "ದೇವಿ, ನಿನ್ನನ್ನು ಹರಿಯು ಚಕ್ರದಿಂದ ಹೊಡೆದು ಕೊಂದನಷ್ಟೇ! ಇರು. ನಾನೀಗ ನಿನ್ನನ್ನು ಬದುಕಿಸುತ್ತೇನೆ." ಎಂದು ನುಡಿದು ಅವಳ ತಲೆಯನ್ನು ರುಂಡದ ಮೇಲೆ ಗಟ್ಟಿಯಾಗಿ ಕೂಡಿಸಿ ಒತ್ತಿ ಹಿಡಿದು ಹೀಗೆ ನುಡಿದನು -

"ನಾನು ಧರ್ಮದಂತೆ ನಡೆದಿದ್ದರೆ, ಸತ್ಯವನ್ನು ನುಡಿದಿದ್ದರೆ, ತಪಸ್ಸನ್ನು ಮಾಡಿದ್ದು ನಿಜವಿದ್ದರೆ ಅದರ ಬಲದಿಂದ ನೀನು ಬದುಕು."ಎಂದು ಮತ್ತೆಮತ್ತೆ ಹೇಳಿ ತಣ್ಣೀರನ್ನು ಪ್ರೋಕ್ಷಿಸಿದನು. ಅವಳನ್ನು ದಿಟ್ಟಿಸಿ ನೋಡುತ್ತ

ಅಭಿಮಂತ್ರಿತವಾದ ನೀರನ್ನು ಪ್ರೋಕ್ಷಿಸಿ 'ಜೀವಿಸು ಜೀವಿಸು' ಎಂದು ಮತ್ತೆ ಮತ್ತೆ ಒತ್ತಿ ನುಡಿಯಲು ಅವಳು ಮೆಲ್ಲನೆ ಕಣ್ಣು ತೆರೆದು ಎದ್ದು ಕುಳಿತಳು. ನಿದ್ದೆಯಿಂದ ಎದ್ದಂತೆ ಮರಣದಿಂದ ಚೇತರಿಸಿಕೊಂಡು ಎದ್ದುಕುಳಿತ ಅವಳನ್ನು ಕಂಡು ಅಲ್ಲಿದ್ದ ಪ್ರಾಣಿಗಳೆಲ್ಲವೂ ಆಶ್ಚರ್ಯ ಆನಂದದಿಂದ ಕೂಗತೊಡಗಿದವು. ಪ್ರಾಣಿಗಳ ಆ ಹರ್ಷೋದ್ಗಾರವು ದಶದಿಕ್ಕುಗಳನ್ನೆಲ್ಲ ತುಂಬಿತು. ಹೀಗೆ ಭೃಗುಮುನಿ ತನ್ನಮಡದಿಯನ್ನು ಮತ್ತೆ ಬದುಕಿಸಿಕೊಂಡಿದ್ದನ್ನು ಕಂಡು ದೇವತೆಗಳಿಗೂ ಅತ್ಯಾಶ್ಚರ್ಯವಾಯಿತು. ಆದರೆ ಮಡದಿ ಮೃತಳಾದರೂ ಗಾಬರಿಯಾಗದೆ ಅವಳನ್ನು ಭೃಗುಋಷಿಯು ಮರಳಿ ಬದುಕಿಸಿಕೊಂಡದ್ದನ್ನು ನೋಡಿ ದೇವೇಂದ್ರನಿಗೆ ಮಾತ್ರ ಎದೆಹೊಡೆದುಕೊಳ್ಳತೊಡಗಿತು. ಶುಕ್ರಾಚಾರ್ಯರ ಭಯದಿಂದ ಇಡೀರಾತ್ರಿ ನಿದ್ದೆಹತ್ತಲಿಲ್ಲ ಆಗ ಅವನು ತನ್ನ ಮಗಳಾದ ಜಯಂತಿಯನ್ನು ಕರೆದು ಅವಳಿಗೆ ಹೇಳಿದನು -

''ಮಗಳೇ, ಈ ಶುಕ್ರಾಚಾರ್ಯನು ನಮಗೆ ಕೇಡನ್ನುಂಟುಮಾಡಿ ನಮ್ಮ ವೈರಿಗಳಿಗೆ ವಿಜಯವನ್ನು ಸಂಪಾದಿಸಿಕೊಡಲಿಕ್ಕಾಗಿ ಉಗ್ರವ್ರತವನ್ನು ಮಾಡತೊಡಗಿದ್ದಾನೆ. ಅದರಿಂದ ನನಗೆ ಚಿಂತೆಯೂ ಆಗಿದೆ, ಗಾಬರಿಯೂ ಆಗಿದೆ. ಆದುದರಿಂದ ನೀನು ಅವನಿದ್ದಲ್ಲಿಗೆ ಹೋಗು. ಅವನ ಆಯಾಸವನ್ನು ಕಳೆದು ಮನಸ್ಸಿಗೆ ಉಲ್ಲಾಸವಾಗುವಂತೆ ಆದರೋಪಚಾರಗಳಿಂದ ಅವನನ್ನು ಸತ್ಕರಿಸು. ನಿನ್ನಲ್ಲಿ ಆ ದೈತ್ಯಾಚಾರ್ಯರಿಗೆ ನೇಹ ನೆಚ್ಚಿಕೆಮೂಡುವಂತೆ ಜಾಗರೂಕಳಾಗಿ ಸೇವೆ ಮಾಡು. ಅವನನ್ನು ಒಲಿಸಿ ಸಂತೋಷಗೊಳಿಸಿ ಆರಾಧಿಸಲಿಕ್ಕಾಗಿಯೇ ನಿನ್ನನ್ನು ಬಿಟ್ಟಿದ್ದೇನೆ. ನನ್ನ ಹಿತಕ್ಕಾಗಿ ಈ ಪ್ರಯತ್ನವನ್ನು ನೀನು ಮಾಡು.''

ತಂದೆಯ ಈ ಮಾತನ್ನು ಕೇಳಿ ಇಂದ್ರಪುತ್ರಿಯಾದ ಜಯಂತಿಯು ಶುಕ್ರರು ತಪಃಗೈಯುವ ತಾಣಕ್ಕೆ ಹೋದಳು. ಅಲ್ಲಿ ಕುಂಡಧಾರ ಎಂಬ ಯಕ್ಷನು ಅವರಿಗೆ ಹಿಪ್ಪಲಿಯ ಹೊಗೆಯನ್ನು ಕುಡಿಸುತ್ತಿದ್ದನು. ಜಯಂತಿಯು ಅಲ್ಲಿ ಹೋಗಿ ನಿಂತು ತಂದೆ ಹೇಳಿದಂತೆ ಶುಕ್ರಾಚಾರ್ಯರ ಸೇವೆಗೆ ಅಣಿಯಾದಳು. ಮಧುರ ಮಾತು, ಹಿತಮಿತವಾದ ಸ್ತುತಿ, ನಿರಂತರಸೇವೆ, ದಣಿವಾದಾಗ ಮೈಗೆ ಹಿತವೆನಿಸುವಂತೆ ಮೈತಿಕ್ಕುವದು, ವ್ರತಾನುಷ್ಠಾನಗಳಿಗೆ ಸಕಲ ಸೌಕರ್ಯಗಳನ್ನು ಕಲ್ಪಿಸುವದು ಇವೇ ಮುಂತಾದ ವಿವಿಧ ಸೇವಾಸಮಾರಾಧನೆಗಳನ್ನುಮಾಡುತ್ತ ಬಹಳ ವರ್ಷಗಳವರೆಗೆ ಅಲ್ಲಿ ಅವರ ಆಶ್ರಮದಲ್ಲಿ ನೆಲೆಸಿದಳು. ಹೀಗೆ ದೈತ್ಯಾಚಾರ್ಯನು ಕೈಕೊಂಡ ಸಾವಿರ ವರ್ಷದ ಧೂಮವ್ರತವು ಪೂರ್ಣವಾಯಿತು. ಇಷ್ಟು ದಿನ ಆತ್ಮಧ್ಯಾನನಿರತನಾದ ಅವನ ದೇಹವೆಲ್ಲ ಕೊರಗಿ ಸೊರಗಿ ಒಣಗಿ ಹೋಗಿದ್ದಿತು. ಮೈತುಂಬ ಭಸ್ಮಲೇಪನ ಮಾಡಿ ಶಿವರಾಧನೆಯ ಸಹಸ್ರ ವರ್ಷಗಳು ಪೂರ್ತಿಯಾದ ಬಳಿಕ ಮಹಾದೇವನು ಸುಪ್ರಸನ್ನನಾಗಿ ಅವನೆದುರು ಬಂದು ನಿಂತು 'ಬೇಕಾದ ವರಬೇಡು' ಎಂದು ಹೇಳಿದನು.

**ಮಹಾದೇವ** :- ಬ್ರಾಹ್ಮಣೋತ್ತಮ, ಇಂಥ ಘೋರವಾದ ತಪಸ್ಸನ್ನು ಈ ಪ್ರಪಂಚದಲ್ಲಿ ನಿನ್ನ ಹೊರತು ಬೇರೆ ಯಾರೂ ಇಂದಿನವರೆಗೆ ಮಾಡಿಲ್ಲ.

ನೀನೊಬ್ಬನೇ ಮಾಡಿದವ. ಇದರಿಂದ ನೀನು ಜ್ಞಾನ, ಬಲ, ತಪಸ್ಸು, ತೇಜಸ್ಸು, ಬುದ್ಧಿ ಇವುಗಳಲ್ಲಿ ಎಲ್ಲ ದೇವತೆಗಳನ್ನೂ ಮೀರಿಸಬಲ್ಲೆ. ಇದರಿಂದ ನಿನಗೆ ಬಯಸಿದ್ದೆಲ್ಲವೂ ದೊರಕುವದು. ನೀನು ಗೆಲ್ಲಬಹುದು. ನೀನು ಇನ್ನು ಮೇಲೆ ವಿಶ್ವ ವಿಜಯಿಯಾಗಿರುವೆ. ಆದರೆ ನೀನು ಮಾತ್ರ ಇದನ್ನು ಯಾರಿಗೂ ಹೇಳಬಾರದು. ರಹಸ್ಯವಾಗಿರಲಿ.'' ಪರಮೇಶ್ವರನು ಶುಕ್ರಾಚಾರ್ಯನಿಗೆ ಪ್ರಜಾಧಿಪತ್ವವನ್ನೂ ಧನಾಧಿಪತ್ಯವನ್ನೂ ಮತ್ತು ಯಾರಿಗೂ ಕೊಲ್ಲಲು ಬಾರದಂಥ ಅವಧ್ಯತ್ವವನ್ನೂ ವರರೂಪವಾಗಿ ಕರುಣಿಸಿದನು. ಇಂಥ ದಿವ್ಯವಾದ ವರಗಳನ್ನು ಕೊಟ್ಟದ್ದಕ್ಕಾಗಿ ಶುಕ್ರಾಚಾರ್ಯರಿಗೆ ಪರಮಾನಂದವಾಯಿತು. ಮೈತುಂಬಾ ಹಿಗ್ಗಿನ ಮುಳ್ಳು ನಿಮಿರಿ ನಿಂತವು. ಇನ್ನೂ ತನ್ನ ತಪೋನುಷ್ಠಾನಕ್ಕಾಗಿ ಹಾಕಿದ ಶೀರ್ಷಾಸನದ ಅವಸ್ಥೆಯಲ್ಲಿ ತಲೆಕೆಳಗೆಮಾಡಿ ನಿಂತುಕೊಂಡೇ ದಿವ್ಯಸ್ತೋತ್ರವನ್ನು ಮಾಡಿದನು.

ಶುಕ್ರಉವಾಚ

ನಮೋಸ್ತು ಶಿತಿಕಂಠಾಯ ಮಹಿಷ್ಠಾಯ ಸುವರ್ಚಸೇ
ಲೇಲಿಹಾನಾಯ ಕಾವ್ಯಾಯ ವತ್ಸರಾಯಾಂಧಸಃಪತೇ ॥

ಕಪರ್ದಿನೇ ಕರಾಲಾಯ ಹರ್ಯಕ್ಷ್ಣೇ ವರದಾಯ ಚ
ಸಂಸ್ತುತಾಯ ಸುತೀರ್ಥಾಯ ದೇವದೇವಾಯ ರಂಹಸೇ
ಉಷ್ಣೀಷಿಣೇ, ಸುವಕ್ತ್ರಾಯ ಬಹುರೂಪಾಯ ವೇಧಸೇ
ವಸುರೇತಾಯ ರುದ್ರಾಯ ತಪಸೇ ಚಿತ್ರವಾಸಸೇ
ಸಹಸ್ರ ಶಿರಸೇಚೈವ ಸಹಸ್ರಾಕ್ಷಾಯ ಮೀಢುಷೇ
ವರಾಯ ಭವ್ಯರೂಪಾಯ ಶ್ವೇತಾಯ ಪುರುಷಾಯಚ
ಗಿರೀಶಾಯ ನಮೋಽರ್ಕಾಯ ಬಲಿನೇ ಆಜ್ಯಪಾಯಚ
ಸುತೃಪ್ತಾಯ ಸುವಸ್ತ್ರಾಯ ಧನ್ವಿನೇ ಭಾರ್ಗವಾಯಚ
ಮಹಾದೇವಾಯ ಶರ್ವಾಯ ವಿಶ್ವರೂಪ ಶಿವಾಯಚ
ಹಿರಣ್ಯಾಯ ವರಿಷ್ಠಾಯ ಜ್ಯೇಷ್ಠಾಯ ಮಧ್ಯಮಾಯಚ
ನಿತ್ಯಾಯ ಚಾತ್ಮಲಿಂಗಾಯ ಸೂಕ್ಷ್ಮಾಯೈವೇತರಾಯಚ
ಬದ್ಧಾಯವಿಭವೇಚೈವ ತುಭ್ಯಂ ಮೋಕ್ಷಾತ್ಮನೇನಮಃ
ವಾಸ್ತೋಷ್ಪತೇ ಪಿನಾಕಾಯ ಮುಕ್ತಯೆ ಕೇವಲಾಯಚ
ಮೃಗವ್ಯಾಧಾಯ ದಕ್ಷಾಯ ಸ್ಥಾಣವೇ ಭೀಷಣಾಯಚ
ಬಹುನೇತ್ರಾಯ ಧುರ್ಯಾಯ ತ್ರಿನೇತ್ರಾಯೇಶ್ವರಾಯಚ
ಕಪಾಲಿನೇ ಚ ವೀರಾಯ ಮೃತ್ಯವೇ ತ್ರ್ಯಂಬಕಾಯಚ ॥

ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ಈ ಮೂರು ಕಾರ್ಯಗಳನ್ನುಮಾಡುವ ಹರಿಹರಬ್ರಹ್ಮಾದಿ ತ್ರಿಮೂರ್ತಿಗಳಲ್ಲಿ ಕೊನೆಯದಾದ ಸಂಹಾರಕಾರ್ಯವನ್ನು

ಮಾಡುವ ನೀಲಕಂಠನಿಗೆ ನಮಸ್ಕಾರ. ಸಂಹಾರ ಸ್ವರೂಪಿಯಾಗಿದ್ದರೂ ಅವನೇ ಜೀವರಾಶಿಗೆ ಅನ್ನ ನೀಡುವ ಆಹಾರದ ಅಧಿಪತಿಯಾಗಿಯೂ ಆಗಿದ್ದಾನೆ. ಕಾಲ ರೂಪಿಯೂ ಕಮನೀಯ ಕಾಂತಿಯುಕ್ತನೂ ಆದ ಆ ಶಿವನಿಗೆ ನಮ್ಮ ನಮಸ್ಕಾರ. ಜಡೆಯನ್ನು ಧರಿಸಿದ ಭಯಂಕರರೂಪವುಳ್ಳ ಚಂದ್ರಸೂರ್ಯರೆಂಬ ಕಣ್ಣುಳ್ಳ, ಬಯಸಿದ ವರ ನೀಡುವ, ವರ್ಣನೀಯನೂ ಜಗದ್ಗುರುವೂ ಪವಿತ್ರಮೂರ್ತಿಯೂ ದೇವಾಧಿದೇವನೂ ಆದ ಪರಮೇಶ್ವರನಿಗೆ ವಂದನೆ. ಕಿರೀಟ ಧರಿಸಿ ವಿಚಿತ್ರ ಬಟ್ಟೆ ತೊಟ್ಟ ಭಕ್ತರಿಗೆ ಐಶ್ವರ್ಯನೀಡುವ ಜಗತ್ಕರ್ತನಾದ ಬಹು ರೂಪಿಯೆನಿಸಿದ ಮಂಗಳಮುಖಿ ರುದ್ರದೇವನಿಗೆ ನಮಸ್ಕಾರ. ಸಹಸ್ರಶೀರ್ಷ ಸಹಸ್ರಾಕ್ಷ ಎಂದು ವೇದಗಳಲ್ಲಿ ಪುರುಷಸೂಕ್ತದಿಂದ ಹೊಗಳಲ್ಪಟ್ಟ, ಬಿಳಿಬಣ್ಣ ಭವ್ಯರೂಪವುಳ್ಳ ವರವೀಯುವ ಪರಮೇಶ್ವರನಿಗೆ ನಮೋನಮಃ. ಕೈಲಾಸಲೋಕದಲ್ಲಿ ವಾಸಿಸಿ ಸೂರ್ಯರೂಪದಿಂದ ಜಗತ್ತಿಗೆ ಬೆಳಕನ್ನು ನೀಡುವ, ಯಜ್ಞದಲ್ಲಿ ಆಜ್ಯಭಾಗ ಪಡೆಯುವ, ಆದರೂ ನಿತ್ಯ ತೃಪ್ತನಾದ, ಪಿನಾಕ ಎಂಬ ಬಿಲ್ಲನ್ನು ಧರಿಸಿದ. ಆನೆಯ ತೊಗಲನ್ನೇ ವಸ್ತ್ರವಾಗಿ ಮಾಡಿಕೊಂಡ ಮಹಾಬಲಿಷ್ಠನಾದ ಶಿವನಿಗೆ ಸಾಷ್ಟಾಂಗ ನಮಃ.

ದುಷ್ಟರನ್ನು ನಿಗ್ರಹಿಸುವ ಪ್ರಪಂಚವನ್ನೆಲ್ಲ ವ್ಯಾಪಿಸಿ ಸರ್ವರಿಗೂ ಮಂಗಳವನ್ನುಂಟುಮಾಡುವ, ಸರ್ವರಿಗೂ ಆಧಾರನಾದ ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳಲ್ಲಿ ನಡುವಿನವನಾದ, ಜ್ಯೇಷ್ಠಶ್ರೇಷ್ಠನಾದ ಶಿವನಿಗೆ ನಮೋನಮಃ. ನಿತ್ಯಸತ್ಯಸ್ವರೂಪಿಯೂ ಪರಮಾತ್ಮನ ಸರ್ವಲಕ್ಷಣೋಪೇತನೂ ವ್ಯಕ್ತಾವ್ಯಕ್ತ ಸ್ವರೂಪನೂ ಷಡ್ಗುಣೈಶ್ವರ್ಯಸಂಪನ್ನನಾದರೂ ಮುಕ್ತನುಮೋಕ್ಷಪ್ರದನೂ ಆಗಿದ್ದರೂ ಭಕ್ತರಉದ್ಧಾರಕ್ಕಾಗಿ ಬದ್ಧಕಂಕಣನಾಗಿ ಕರ್ಮಬಂಧನಕ್ಕೆ ಒಳಗಾದವರಂತೆ ಭಿಕ್ಷಾಟನಾದಿ ವಿವಿಧಲೀಲೆಗಳನ್ನುಮಾಡುವ ಪರಶಿವನೇ ನಿನಗೆ ನನ್ನ ನಮಸ್ಕಾರ.'' ಈ ರೀತಿಯಾಗಿ ಶುಕ್ರಾಚಾರ್ಯನು ಪರಮೇಶ್ವರನನ್ನು ಸ್ತೋತ್ರ ಮಾಡಿ ''ಸ್ವಾಮಿ ಈ ನಿನ್ನ ಸ್ತೋತ್ರದಲ್ಲಿ ನಾನು ನಿನ್ನ ಮಹಿಮೆಯನ್ನು ಪೂರ್ಣ ಬಣ್ಣಿಸಲಿಕ್ಕಾಗದೆ ಎಷ್ಟೋ ಬಿಟ್ಟಿರಬಹುದು. ನಾನೂ ಒಬ್ಬ ನಿನ್ನ ಭಕ್ತ ಎಂದು ಭಾವಿಸಿ ನನ್ನ ಅಪರಾಧವನ್ನು ಕ್ಷಮಿಸಬೇಕು'' ಎಂದು ವಿನಯದಿಂದ ಹೇಳಿಕೊಂಡನು. ಭಕ್ತಿಯುಕ್ತವಾದ ಈ ಸ್ತೋತ್ರದಿಂದ ಪರಮೇಶ್ವರನು ಪ್ರಸನ್ನನಾಗಿ ಭಕ್ತಿಭರದಿಂದ ಬಾಗಿನಿಂತ ಶುಕ್ರಾಚಾರ್ಯರ ಮೈಮೇಲೆಲ್ಲ ಅಂತಃಕರಣದಿಂದ ಕೈಯಾಡಿಸಿ ಅಲ್ಲಿಯೇ ಅದೃಶ್ಯನಾದನು. ಮಹೇಶ್ವರನು ಮರೆಯಾದ ಬಳಿಕ ಶುಕ್ರಾಚಾರ್ಯರು ತಮ್ಮ ಬಳಿಯಲ್ಲಿಯೇ ನಿಂತುಕೊಂಡ ಜಯಂತಿಯನ್ನು ನೋಡಿ ಪ್ರಶ್ನಿಸಿದರು.

''ಕಲ್ಯಾಣಿ ನೀನು ಯಾರು? ಯಾರ ಮಗಳು ನನ್ನ ಕಷ್ಟದಲ್ಲಿ ನೀನೂ ಸಮಭಾಗಿಯಾಗಿ ಕಷ್ಟಪಡುತ್ತಿರುವಿಯಲ್ಲ ! ಇಷ್ಟು ದೇಹದಂಡನೆಮಾಡಿ ನನ್ನ ಜೊತೆಗೇ ನೀನೂ ಕೂಡ ತಪಸ್ಸಿಗೆ ನಿಂತುಕೊಂಡಂತಿದೆ. ಈ ಕಾಯಕ್ಲೇಶವನ್ನು ಸಹಿಸಿಕೊಂಡು ನನ್ನ ಸೇವೆಯನ್ನು ಏಕೆ ಮಾಡುತ್ತಿರುವಿ ? ಈ ನಿನ್ನ ಸೇವೆ ಭಕ್ತಿ ವಿನಯ ಆದರ ಉಪಚಾರ ಪ್ರೀತಿ ಪರಿಶ್ರಮಗಳನ್ನು ಕಂಡು ನಾನು

ಪ್ರೀತನಾಗಿದ್ದೇನೆ. ಸುಂದರಿ ನಿನಗೆ ಏನು ಬೇಕಾಗಿದೆ. ಎಷ್ಟೇ ಕಷ್ಟವಾದರೂ ಚಿಂತೆಯಿಲ್ಲ. ನಿನ್ನ ಅಪೇಕ್ಷೆಯನ್ನು ನಾನೀಗ ಪೂರ್ಣಮಾಡುತ್ತೇನೆ.'' ಶುಕ್ರಾಚಾರ್ಯರ ಈ ಪ್ರಸನ್ನತೆಯ ನುಡಿ ಕೇಳಿ ಚತುರಳಾದ ಜಯಂತಿಯು ''ಗುರುಗಳೇ, ನೀವು ಮಹಾ ತಪಸ್ವಿಗಳಲ್ಲವೇ! ಅಂದ ಬಳಿಕ ನನ್ನ ಅಪೇಕ್ಷೆಯನ್ನು ನನ್ನ ಬಾಯಿಯಿಂದಲೇ ಏಕೆ ಹೇಳಿಸಬೇಕು? ನಿಮ್ಮ ತಪೋಬಲದಿಂದ ನನ್ನ ಅಂತರಂಗದ ಆಸೆಯನ್ನು ಅರಿತು ಅದನ್ನು ಪೂರೈಸಿರಿ.''

ಶುಕ್ರಾಚಾರ್ಯರು ಕೂಡಲೇ ಒಂದು ಕ್ಷಣ ಕಣ್ಣುಮುಚ್ಚಿ ಕುಳಿತು ದಿವ್ಯ ದೃಷ್ಟಿಯಿಂದ ಜಯಂತಿಯ ಬಯಕೆಯೇನೆಂಬುದನ್ನು ತಿಳಿದುಕೊಂಡರು ಮತ್ತು ಅವಳಿಗೆ ಹೇಳಿದರು. ''ಓ! ಚೆಲುವಿನ ಹೆಣ್ಣೇ, ಗೊತ್ತಾಯಿತು ನಿನ್ನ ಹೃದಯದ ಆಸೆ. ಯಾವ ಪ್ರಾಣಿಗೂ ಕಾಣದಂತೆ ಗುಪ್ತವಾಗಿ ಅದೃಶ್ಯ ರೂಪದಿಂದ ಹತ್ತು ವರ್ಷಗಳ ಕಾಲ ನನ್ನೊಡನೆ ಸಮಾಗಮವನ್ನು ಕಾಮಿಸುತ್ತಲಿರುವೆ. ಇಷ್ಟು ದಿನ ಕಷ್ಟಪಟ್ಟು ನನ್ನ ಸೇವೆಮಾಡಿದ ನೀನು ಇಂಥ ವರಕ್ಕೆ ಅರ್ಹಳೇ ಆಗಿರುವಿ. ದೇವಿ, ನಿನ್ನ ಕನ್ನೈದಿಲೆಯಂತಿರುವ ಕಾಯಕಾಂತಿ, ಹೊಂದಾವರೆಯಂತೆ ಸುಂದರಕಂಗಳು, ಮಧು ಮಧುರವಾದ ಮಾತುಗಳನ್ನು ಕಂಡು ಕೇಳಿದ ನನಗೆ ನೀನು ಯಾವ ವರ ಕೇಳಿದರೂ ಕೊಟ್ಟುಬಿಡಬೇಕು ಎಂದೆನಿಸಿದೆ. ಆದುದರಿಂದ ನಿನ್ನ ಕಾಮನೆಯನ್ನು ಪೂರ್ಣಗೊಳಿಸುತ್ತೇನೆ. ನಮ್ಮ ಮನೆಗೆ ಹೋಗೋಣ ನಡೆ.'' ಎಂದು ಹೇಳಿ ಜಯಂತಿಯೊಡನೆ ಮನೆಗೆ ಬಂದರು. ಒಲಿದು ಬಂದ ಆ ಹೆಣ್ಣನ್ನು ಶುಕ್ರಾಚಾರ್ಯರು ವಿಧಿಪೂರ್ವಕವಾಗಿ ಮದುವೆಯಾಗಿ ಅವಳ ಅಪೇಕ್ಷೆಯಂತೆ ರಹಸ್ಯವಾಗಿ ಹತ್ತು ವರ್ಷಗಳ ಕಾಲದ ಗುಪ್ತವಿಹಾರವನ್ನು ಅದೃಶ್ಯರಾಗಿ ಕೈಕೊಂಡರು. ಇತ್ತ ದೈತ್ಯರೆಲ್ಲರೂ ಶುಕ್ರಾಚಾರ್ಯರೂ ತಮ್ಮ ಸಾವಿರ ವರ್ಷದ ತಪೋನುಷ್ಠಾನವನ್ನು ಯಥಾಸಾಂಗವಾಗಿ ಮಾಡಿ ಮುಗಿಸಿ ಬಂದರೆಂದು ಸಂತೋಷದಿಂದ ಅವರ ದರ್ಶನಕ್ಕೆ ಬಂದರು. ಆದರೆ ಅವರಾರಿಗೂ ಗುರುಗಳ ದರ್ಶನವೇ ಆಗಲಿಲ್ಲ. ಅದೃಶ್ಯನಾದ ಗುರು ಜಯಂತಿಯೊಡನೆ ರಹಸ್ಯದಲ್ಲಿ ರತಿವಿಲಾಸಲೀಲಾಲೋಲನಾಗಿ ಜಗತ್ತಿನಿಂದ ತನ್ನನ್ನು ಮರೆಮಾಡಿಕೊಂಡಿದ್ದ. ಶುಕ್ರಾಚಾರ್ಯರ ಈ ಗುಪ್ತಪ್ರೇಮವ್ಯಾಪಾರದ ಲಕ್ಷಣ ತಿಳಿದು ದೈತ್ಯರೆಲ್ಲರೂ ನಿರಾಶರಾಗಿ ಹಿಂತಿರುಗಿ ಹೋಗಿ ಬಿಟ್ಟರು.

## ನಕಲಿ ಶುಕ್ರಾಚಾರ್ಯರಿಗೆ ಗುರುಪೂಜೆಯ ಗೌರವ. ಸಲೀಗುರುವಾದ ನಿಜಶುಕ್ರಾಚಾರ್ಯರಿಗೆ ಮೂಲೆಗುಂಪಿನ ಅಗೌರವ.

ಶುಕ್ರಾಚಾರ್ಯರು ಜಯಂತಿಯೊಡನೆ ಹತ್ತು ವರ್ಷದ ಮಧುಚಂದ್ರ ವಿಹಾರದಲ್ಲಿ ಮಗ್ನರಾಗಿದ್ದಾರೆ ಎಂಬ ಸಮಾಚಾರವು ಸುರಗುರು ಬೃಹಸ್ಪತ್ಯಾಚಾರ್ಯರಿಗೆ ತಿಳಿದು ಬಂದಿತು. ಆಗ ಅವರು ಇಂದ್ರನೊಡನೆ ವಿಚಾರ ವಿನಿಮಯಮಾಡಿ ಒಂದು ಹಂಚಿಕೆಮಾಡಿದರು. ಸ್ವಯಂ ಬೃಹಸ್ಪತ್ಯಾಚಾರ್ಯರೇ ದೈತ್ಯಗುರು ಶುಕ್ರಾಚಾರ್ಯರ ವೇಷವನ್ನು ಧರಿಸಿ ದೈತ್ಯದಾನವರನ್ನೆಲ್ಲ ತನ್ನ ಬಳಿಗೆ ಕರೆದರು. ಗುರುಭಕ್ತಿಯಿಂದ ಬಂದ ಅವರಿಗೆ 'ನನ್ನ ಶಿಷ್ಯರಿಗೆಲ್ಲ ಸುಸ್ವಾಗತ. ನಾನು ನಿಮ್ಮ ಹಿತಕ್ಕಾಗಿ ಬೇಕಾದ

ಯಜ್ಞಯಾಗಗಳನ್ನು ಮಾಡಿಸುತ್ತೇನೆ. ನಿಮಗಾಗಿ ಬೇಕಾದಷ್ಟು ವಿದ್ಯೆಗಳನ್ನು ಕಲಿತುಕೊಂಡೇ ಬಂದಿದ್ದೇನೆ. ಅವುಗಳನ್ನು ನಿಮಗೆ ಕಲಿಸಿಕೊಡಲಿಕ್ಕಾಗಿ ನಾನೀಗ ನಿಮ್ಮನ್ನು ಕರೆದಿದ್ದೇನೆ' ಎಂದು ಹೇಳಿದರು. ಇದನ್ನು ಕೇಳಿ ದೈತ್ಯರೆಲ್ಲರು ಅತ್ಯಂತ ಉತ್ಸಾಹದಿಂದ ಶುಕ್ರರೂಪಿಯಾದ ಬೃಹಸ್ಪತ್ಯಾಚಾರ್ಯರ ಬಳಿಯಲ್ಲಿ ಬಂದು ನಿಂತರು. ಹತ್ತುವರ್ಷಗಳು ಉರುಳಿದವು. ಶುಕ್ರಾಚಾರ್ಯರು ಜಯಂತಿಗೆ ರಹಸ್ಯವಿಹಾರಕ್ಕಾಗಿ ಕೊಟ್ಟ ಅವಧಿಯು ಪೂರ್ಣವಾಯಿತು. ಅನಂತರ ಆ ದೈತ್ಯಗುರು ಪ್ರಕಟವಾಗಿ ವಿಹಾರ ವೇದಿಕೆಯಿಂದ ಎದ್ದುಹೊರಬಂದನು. ಈ ಅವಧಿಯ ಕೊನೆಯಲ್ಲಿ ಆ ದೈತ್ಯಾಚಾರ್ಯನಿಂದ ಜಯಂತಿಗೆ ದೇವಯಾನಿ ಎಂಬ ಮಗಳು ಹುಟ್ಟಿದಳು.

ಅನಂತರ ಆ ದಾನವ ಪುರೋಹಿತ ಶುಕ್ರಾಚಾರ್ಯರು ತನ್ನ ಶಿಷ್ಯರಾದ ದೈತ್ಯದಾನವರನ್ನು ಹಿಡಿದು ಅವರಿಂದ ಯಜ್ಞಯಾಗಗಳನ್ನು ಮಾಡಿಸಬೇಕೆಂದು ಹೊರಟು ನಿಂತರು. ಆಗ ಜಯಂತಿಗೆ ಬಹಳ ದುಃಖವಾಯಿತು. ತಮ್ಮ ಸುಖವಿಹಾರವನ್ನು ಮುಗಿಸುವದು ಅವಳಿಗೆ ಇನ್ನೂ ಬೇಕಾಗಿರಲಿಲ್ಲ. ಕಂಗಳಲ್ಲಿ ನೀರುತುಂಬಿ ದೀನದೃಷ್ಟಿಯಿಂದ ಅವಳು ಶುಕ್ರರ ಕಡೆಗೆ ನೋಡತೊಡಗಿದಳು. ಆಗ ಶುಕ್ರರು ಅವಳನ್ನು ಸಂತೈಸುತ್ತ ''ದೇವಿ, ನೀನು ಇಷ್ಟು ಏಕೆ ಗಾಬರಿಯಾಗಿರುವೆ. ನಿನ್ನ ಕಣ್ಣಿನ ಕಾಂತಿಯೇ ಕುಂದಿಹೋಗಿದೆ. ನಾನು ನನ್ನ ಶಿಷ್ಯರನ್ನು ನೋಡಿಬರಲು ಹೊರಟಿದ್ದೇನೆ. ಇದಕ್ಕೇಕೆ ಇಷ್ಟು ದುಃಖ'' ? ಅವರ ಈ ಮಾತನ್ನು ಕೇಳಿ ವಿರಹಕಾತರಳಾಗಿ ನಿಂತ ಜಯಂತಿಯು ತನ್ನಲ್ಲಿ ತಾನೇ ಸಮಾಧಾನ ಮಾಡಿಕೊಂಡು ಹೇಳಿದಳು. ''ನಿಮ್ಮ ಪೌರೋಹಿತ್ಯಧರ್ಮಕ್ಕೆ ನಾನು ಅಡ್ಡಿಯಾಗಿ ನಿಲ್ಲಲಾರೆ. ನೀವು ನಿಮ್ಮ ಭಕ್ತರನ್ನು ಕಂಡುಬನ್ನಿರಿ'' ಎಂದು ಸಂತೋಷದಿಂದ ಬೀಳ್ಕೊಟ್ಟಳು. ಅನಂತರ ಶುಕ್ರಾಚಾರ್ಯರು ದೈತ್ಯರ ಬಳಿಗೆ ಬಂದು ನೋಡಿದರು. ಅಲ್ಲಿ ಎಲ್ಲವೂ ವಿಪರೀತವಾಗಿತ್ತು. ಬೃಹಸ್ಪತ್ಯಾಚಾರ್ಯರು ತನ್ನ ರೂಪದಿಂದ ದೈತ್ಯರನ್ನೆಲ್ಲ ವಂಚಿಸಿ ತನ್ನೆಡೆಗೆ ಸೆಳೆದುಕೊಂಡು ಬಿಟ್ಟಿದ್ದರು. ಅದನ್ನು ಕಂಡು ಖಿನ್ನರಾಗಿ ಶುಕ್ರಾಚಾರ್ಯರು ದೈತ್ಯರಿಗೆ ಹೇಳಿದರು.

''ದಾನವರೇ, ನಿಜವಾದ ಶುಕ್ರ ನಾನಿದ್ದೇನೆ. ಇವನು ನಕಲೀಶುಕ್ರ. ನೀವೆಲ್ಲರೂ ಮೋಸಹೋಗಿದ್ದೀರಿ. ನಿಮಗಾಗಿ ನಾನು ಮಹೇಶ್ವರವನ್ನು ಒಲಿಸಿಗೊಂಡು ಬಂದಿದ್ದೇನೆ. ನಿಮ್ಮನ್ನು ವಂಚಿಸಲಿಕ್ಕಾಗಿ ನನ್ನ ವೇಷಹಾಕಿದ್ದಾನೆ. ಅವನು ಬೃಹಸ್ಪತಿ. ಸುರಗುರು. ಅವನನ್ನು ಬಿಟ್ಟು ನನ್ನನ್ನು ಅನುಸರಿಸಿರಿ''

ಆಗ ದೇವಗುರು ಬ್ರಹಸ್ಪತ್ಯಾಚಾರ್ಯರೂ ಕೂಡ ದೈತ್ಯರ ಬಳಿಗೆ ಬಂದು ''ನಿಜವಾದ ದೈತ್ಯರ ಗುರುವಾದ ಶುಕ್ರಾಚಾರ್ಯನು ನಾನೇ. ಇವನು ಬೃಹಸ್ಪತಿ. ದೇವತೆಗಳಗುರು. ಇವನು ನನ್ನ ವೇಷದಿಂದ ಬಂದು ನಿಮ್ಮನ್ನು ವಂಚಿಸುತ್ತಿದ್ದಾನೆ. ನೀವು ಅವನ ಬಳಿಗೆ ಹೋಗಬೇಡಿರಿ. ನನ್ನ ಕಡೆಗೇ ಬನ್ನಿ. ಅಲ್ಲಿ ಹೋದರೆ ಮೋಸಹೋಗುವಿರಿ '', ಎಂದು ನುಡಿದನು. ಆಗ ದೈತ್ಯರಿಗೆ ಏನೂ ತಿಳಿಯದಂತಾಯಿತು. ನಿಜವಾದ ಶುಕ್ರ ಯಾರು ? ನಕಲೀ ಶುಕ್ರ ಯಾರು ? ಎಂದು

ಪತ್ತೆ ಹಚ್ಚುವದೇ ಕಷ್ಟವಾಯಿತು. ಇಬ್ಬರದೂ ಅದೇ ರೂಪ. ಅದೇ ನಿಲುವು. ಅದೇ ಮುಖಚರ್ಯೆ. ಇಬ್ಬರೂ ' ನಾನುಶುಕ್ರ', ನಾನುಶುಕ್ರ' ಎಂದು ಹೇಳುತ್ತಿದ್ದಾರೆ. ಯಾರನ್ನು ನಂಬುವದು ಯಾರನ್ನು ಬಿಡುವದು! ದಿಗ್ಭ್ರಾಂತರಾಗಿ ನಿಂತುಕೊಂಡರು ದೈತ್ಯರೆಲ್ಲರೂ ! ಕೊನೆಗೆ ಅವರು ತಮ್ಮತಮ್ಮಲ್ಲಿ ವಿಚಾರಿಸಿದರು. ಈಗಿದ್ದ ನಮ್ಮ ಗುರು ಹತ್ತುವರ್ಷಗಳಿಂದ ನಮಗೆ ಹಿತೋಪದೇಶಮಾಡುತ್ತ ರಕ್ಷಿಸುತ್ತಿದ್ದಾನೆ. ಇದೀಗ ಹೊಸದಾಗಿ ಬಂದವ ನಾನೇ ಶುಕ್ರ ಎಂದು ಹೇಳಿಕೊಳ್ಳುತ್ತಿದ್ದರೂ ಇಷ್ಟು ದಿನ ನಂಬಿದವನನ್ನು ಬಿಡುವದು ಸರಿಯಲ್ಲ. ನಮ್ಮ ಈ ಗುರು-ಶಿಷ್ಯ ಭಾವವನ್ನು ಸಹಿಸದೆ ಹೊರಗಿನವನಾವನೋ ನಮ್ಮ ಗುರು ಶುಕ್ರಾಚಾರ್ಯರ ವೇಷದಿಂದ ಬಂದು ನಮ್ಮನ್ನು ಮೋಸಮಾಡುತ್ತಿದ್ದಾನೆ. ಆದುದರಿಂದ ನಾವೀಗ ಅವನಿಗೆ ಅವಕಾಶ ಕೊಡುವದುಬೇಡ.'' ಎಂದು ಆಲೋಚಿಸಿ ಅವರೆಲ್ಲರೂ ನಿಜವಾದ ಶುಕ್ರಾಚಾರ್ಯರನ್ನು ಬಿಟ್ಟು ಶುಕ್ರವೇಷಧರಿಸಿದ ಬೃಹಸ್ಪತ್ಯಾಚಾರ್ಯರನ್ನೇ ಗುರುಗಳೆಂದು ಬೆಂಬಲಿಸಿ ನಮಸ್ಕರಿಸಿ ಅವರ ಬಳಿಗೆ ಬಂದು ನಿಂತರು. ಮತ್ತು ತಮ್ಮನ್ನು ಮೋಸ ಮಾಡಲಿಕ್ಕೆ ಬಂದ ವೇಷಧಾರಿ ಗುರು ಎಂದು ಸಿಟ್ಟಿನಿಂದ ಕಣ್ಣು ಕೆಂಪಗೆಮಾಡಿ ನಿಜ ಶುಕ್ರರಿಗೆ - ''ಅವರೇ ನಮ್ಮ ನಿಜವಾದ ಗುರು. ನೀನು ನಮ್ಮ ಗುರುವಲ್ಲ. ನೀನು ಈಗಲೇ ಇಲ್ಲಿಂದ ಹೊರಟುಹೋಗು. ನೀನು ಯಾರೇ ಇದ್ದರೂ ನಮಗೆ ಬೇಡ. ಇವನು ಶುಕ್ರಾಚಾರ್ಯನೇ ಆಗಿರಲಿ, ಬೃಹಸ್ಪತ್ಯಾಚಾರ್ಯನೇ ಆಗಿರಲಿ. ಹತ್ತು ವರ್ಷಗಳಿಂದ ಕೈಹಿಡಿದು ಕಾಪಾಡಿದ್ದರಿಂದ ಇವನೇ ನಮ್ಮ ಗುರು. ಇನ್ನು ನೀನು ಇಲ್ಲಿ ನಿಲ್ಲದೇ ಹೊರಟುಹೋಗು. ''

ಇದರಿಂದ ಶುಕ್ರಾಚಾರ್ಯರಿಗೆ ಸಿಟ್ಟು ಬಂದಿತು. ಅವರು ತನ್ನ ಮೂರ್ಖ ಶಿಷ್ಯರಿಗೆ ''ದಾನವರೇ, ನನ್ನನ್ನು ಈ ರೀತಿ ಧಿಕ್ಕರಿಸಿ ನಡೆದಿದ್ದಕ್ಕಾಗಿ ನಿಮ್ಮ ಬುದ್ಧಿಭ್ರಂಶವಾಗಿ ನೀವು ಸೋಲನ್ನು ಅನುಭವಿಸಿರಿ'' ಎಂದು ಶಾಪವಿತ್ತು ತಮ್ಮ ಮನೆಗೆ ತೆರಳಿದರು. ಅನಂತರ ದೈತ್ಯರೆಲ್ಲರೂ ತಾವು ಗುರು ಎಂದು ನಂಬಿದ ವೇಷಧಾರಿ ಶುಕ್ರಾಚಾರ್ಯರ ಬಳಿಗೆ ಬಂದರು. ಅವರಿಗೆ ನಿಜವಾದಶುಕ್ರರು ದೈತ್ಯರನ್ನು ಶಪಿಸಿಹೋದ ಸಮಾಚಾರ ತಿಳಿಯಿತು. ಅದರಿಂದ ಅವರಿಗೆ ತಮ್ಮ ಕೆಲಸವಾದಂತಾಯಿತು. ಎಂದು ಸಂತೋಷಪಟ್ಟು ''ಇನ್ನೇಕೆ ಈ ಕೃತ್ರಿಮವೇಷ'' ಎಂದು ತಮ್ಮ ನಿಜರೂಪದಿಂದ ಬೃಹಸ್ಪತ್ಯಾಚಾರ್ಯರಾಗಿ ನಿಂತುಕೊಂಡರು. ಅದನ್ನು ಕಂಡು ದಾನವರು ಉದ್ಭ್ರಾಂತರಾಗಿ ಹುಚ್ಚರಂತಾದರು.

''ಅಬ್ಬ, ಎಂಥ ದೊಡ್ಡ ಮೋಸ ! ನಾವು ನಮ್ಮ ನಿಜವಾದ ಗುರುವನ್ನು ಗುರುತಿಸಲಾರದೇ ಹೋದೆವಲ್ಲ ! ಈ ದೇವಗುರು ನಮಗೆ ಹಿಂದೆ ಮುಂದೆ ಕೂಡಿಯೇ ಹೊಡೆತ ಹಾಕಿದ. ಈ ಕಪಟ ಗುರುವನ್ನು ನಂಬಿ ನಾವು ನಮ್ಮ ನಿಜವಾದ ಕುಲಗುರುವನ್ನು ಎಷ್ಟು ಧಿಕ್ಕರಿಸಿ ನುಡಿದೆವಲ್ಲ ! ಅಯ್ಯೋ ಧಿಕ್ಕಾರವಿರಲಿ ನಮ್ಮ ದಡ್ಡತನಕ್ಕೆ '' ಎಂದು ತಮ್ಮಷ್ಟಕ್ಕೆ ತಾವೇ ಬೈದುಕೊಂಡು ಪಶ್ಚಾತ್ತಾಪಪಡುತ್ತ ಮತ್ತೆ ಅವರೆಲ್ಲರೂ ಶುಕ್ರಾಚಾರ್ಯರ ಬಳಿಗೆ ಓಡಿಹೋದರು. ಆಶ್ರಮದಲ್ಲಿ ಕುಪಿತರಾಗಿ

ಕುಳಿತ ಗುರುಗಳ ಪಾದದಮೇಲೆ ಬಿದ್ದುಹೊರಳಾಡಿ, ದೈನದೀನವಾಗಿ ಅಂಗಲಾಚಿ ಬೇಡಿಕೊಂಡರು. ಬಾಗಿ ನಿಂತು ತಮ್ಮ ತಪ್ಪನ್ನು ತೋಡಿಕೊಂಡರು. ಹೇಗಾದರೂ ಮಾಡಿ ನಮ್ಮನ್ನು ಮನ್ನಿಸಿರಿ ಎಂದು ಹೇಳಿಕೊಂಡರು. ಪ್ರಹ್ಲಾದನನ್ನು ಮುಂದೆ ಮಾಡಿಕೊಂಡು ದೈತ್ಯರು -

"ಗುರುವರ್ಯ ನೀವು ನಮ್ಮನ್ನು ಕೈಬಿಡಬೇಡಿ. ನಾವು ನಿಮ್ಮ ಭಕ್ತರೂ ಶಿಷ್ಯರೂ ಅಲ್ಲವೇ? ನಿಮ್ಮ ಹೊರತು ನಮಗೆ ಬೇರೆ ಆಶ್ರಯವು ಯಾರದಿದೆ ? ನೀವು ಕಾಣದಂತಾದಾಗ ದೇವಗುರು ನಿಮ್ಮ ರೂಪದಿಂದ ನಮ್ಮನ್ನು ವಂಚಿಸಿದನು. ಯಾರೇ ಇರಲಿ ನಿಮ್ಮ ರೂಪ ಕಂಡಕೂಡಲೇ ನಮ್ಮ ತಲೆಬಗ್ಗುವದು, ಕೈಮುಗಿಯುವುದು. ಆ ದೇವಾಚಾರ್ಯನ್ನು ಶುಕ್ರಾಚಾರ್ಯರು ಎಂದು ತಿಳಿದೇ ನಾವು ಅನುಸರಿಸಿದೆವು. ನಿಮ್ಮ ವಿಷಯದಲ್ಲಿ ನಮ್ಮ ಭಕ್ತಿ ಎಷ್ಟಿದೆ ಎಂಬುದನ್ನು ನಿಮ್ಮ ತಪೋದೃಷ್ಟಿಯಿಂದ ನೀವೇ ಪರೀಕ್ಷಿಸಿ ತಿಳಿದುಕೊಳ್ಳಬಹುದು. ನೀವು ನಮ್ಮ ಮೇಲೆ ಅನುಗ್ರಹ ದೃಷ್ಟಿಯನ್ನು ಹಾಕದೇ ಹೋದರೆ ನಾವು ರಸಾತಳಕ್ಕೆ ಇಳಿಯುತ್ತೇವೆ. ದಯಮಾಡಿ ನಮ್ಮನ್ನು ತೊರೆಯಬೇಡಿರಿ ಪ್ರಸನ್ನರಾಗಿರಿ. "

ಅವರ ದೀನವಾಣಿಯನ್ನು ಕೇಳಿ ಶುಕ್ರಾಚಾರ್ಯರಿಗೆ ಮರುಕ ಉಂಟಾಯಿತು. ದಿವ್ಯದೃಷ್ಟಿಯಿಂದ ನೋಡಿ ನಡೆದ ಘಟನೆಯನ್ನೆಲ್ಲ ವಿಚಾರಿಸಿ ಇದರಲ್ಲಿ ದೈತ್ಯರದು ಏನೂ ತಪ್ಪಿಲ್ಲ ಎಂದು ನಿರ್ಧರಿಸಿ ಅವರ ಮೇಲಿನ ಸಿಟ್ಟು ಕಡಿಮೆಯಾಗಿ ಕರುಣೆ ಉಕ್ಕಿ ಬಂದಿತು. ಆಗ ಅವರು ದೈತ್ಯರನ್ನು ಸಂತೈಸುತ್ತ " ಶಿಷ್ಯರೇ ಬೆದರಬೇಡಿರಿ ಬೆಚ್ಚಬೇಡಿರಿ. ರಸಾತಲಕ್ಕೂ ಹೋಗಬೇಡಿರಿ. ಆಗಬೇಕಾದುದೆಲ್ಲ ಆಗಿಯೇ ತೀರುವದು. ನಾನೇನೋ ನಿಮ್ಮ ದುರದೃಷ್ಟವನ್ನು ಬದಲಿಸಬೇಕೆಂದು ಅತ್ಯುಗ್ರ ತಪಸ್ಸನ್ನುಮಾಡಿ ಬಂದೆ. ಆದರೆ ಆಗಬಾರದು ಆಗೇ ಹೋಯಿತು. ಅದೃಷ್ಟವು ಎಲ್ಲರಿಗಿಂತ ಬಲಿಷ್ಠವಾಗಿರುತ್ತದೆ. ಆ ವಿಧಿಯನ್ನು ಬದಲಿಸುವದು ಯಾರಿಗೂ ಶಕ್ಯವಿಲ್ಲ. ನನ್ನ ಶಾಪದಿಂದ ಕಳೆದುಹೋದ ನಿಮ್ಮ ಬುದ್ಧಿಶಕ್ತಿಯು ಈಗ ಮರಳಿ ಬರುವದು. ನೀವು ದೇವತೆಗಳ ಜೊತೆಗೆ ಯುದ್ಧಮಾಡಿ ಒಮ್ಮೆಯಾದರೂ ಗೆದ್ದು ಆ ಮೇಲೆ ಬೇಕಾದರೆ ಪಾತಾಳಕ್ಕೆ ಹೋಗಿರಿ. ಬೃಹಸ್ಪತಿಗೆ ಬುದ್ಧಿಯಲ್ಲಿ ಸರಿದೂಗುವ ನನ್ನ ಇಬ್ಬರು ಶಿಷ್ಯರು ದೇವತೆಗಳೊಡನೆ ನೀವು ಮಿಲಿತರಾದಾಗ ನಿಮಗೆ ಸಹಾಯಕರಾಗುವರು. ಬ್ರಹ್ಮದೇವರು ಕೂಡ ಹಿಂದೆ ಇದನ್ನೇ ಹೇಳಲಿಲ್ಲವೇ ? ನಿಮ್ಮ ಉತ್ಕರ್ಷದಕಾಲವು ಬಂದಾಗ ನೀವು ನನ್ನ ಅನುಗ್ರಹದಿಂದ ಮೂರು ಲೋಕದಅಧಿಪತಿಗಳಾಗಿ ಮೆರೆದಿರಿ. ಹತ್ತುಯುಗಗಳವರೆಗೆ ದೇವತೆಗಳ ತಲೆ ಮೆಟ್ಟಿ ತ್ರೈಲೋಕ್ಯದ ಆಧಿಪತ್ಯವನ್ನು ಅನುಭವಿಸಿದಿರಿ. ಬ್ರಹ್ಮದೇವರು ಈ ಕಾಲವನ್ನೇ ದೈತ್ಯರ ಉಚ್ಛ್ರಾಯದ ಕಾಲ ಎಂದು ನಿಗದಿಮಾಡಿ ಹೇಳಿದ್ದು.

ಇನ್ನು ಮುಂದೆ ಬ್ರಹ್ಮನು ಹೇಳಿದಂತೆ ಸಾವರ್ಣಿ ಮನ್ವಂತರದಲ್ಲಿ ಬಲಿರಾಜನು ಇಂದ್ರನಾಗಿ ನಿಮ್ಮ ಉನ್ನತಿ ಕಾಲವು ಮತ್ತೆ ಬರುವದು. ಯುಕ್ತಿಯ ಮಾತಿನಿಂದ ಬಲಿಚಕ್ರವರ್ತಿಯಿಂದ ಮೂರು ಲೋಕಗಳನ್ನೂ ಕಸಿದುಕೊಂಡ ಶ್ರೀ ಹರಿಯು ಅವನಿಗೆ

ರಹಸ್ಯವಾಗಿ ಸಾವರ್ಣಿ ಮನ್ವಂತರದಲ್ಲಿ ನಿನ್ನನ್ನು ಇಂದ್ರಪದವಿಗೆ ಏರಿಸುತ್ತೇನೆಂದು ಹೇಳಲಿಲ್ಲವೆ ! ಬಲಿಯ ಮಹಾದಾನ ಹಾಗೂ ಸತ್ಯಸಂಧತೆಗಳನ್ನು ಮೆಚ್ಚಿದ ಬ್ರಹ್ಮನೂ ಶಿವನೂ ಹಾಗೇ ಹೇಳಿದ್ದಾರೆ. ಆದುದರಿಂದ ಈಗ ಬಲಿರಾಜನು ತನಗೆ ಅನುಕೂಲ ಕಾಲವನ್ನು ಅದೃಶ್ಯವಾಗಿ ಕಾಯುತ್ತಿದ್ದಾನೆ. ನೀವೂ ಈಗ ನನ್ನ ಹೇಳಿಕೆಯಂತೆ ದೇವತೆಗಳ ಮೇಲೆ ಯುದ್ಧಸಾರಿರಿ. ಇದೊಂದು ಸಲ ಗೆಲವು ನಿಮ್ಮ ಬೆನ್ನು ತಟ್ಟುವದು'' ಎಂದು ಹೇಳಿದರು. ಶುಕ್ರಾಚಾರ್ಯರ ಈ ಮಾತಿನಿಂದ ಉತ್ಸಾಹಿತರಾದ ದೈತ್ಯರು ದೇವತೆಗಳ ಮೇಲೆ ಒಮ್ಮೆಲೆ ಏರಿ ಬಂದರು ಶಸ್ತ್ರಾಸ್ತ್ರ ಸನ್ನದ್ಧರಾಗಿ. ದೇವದಾನವರಲ್ಲಿ ನೂರುವರ್ಷ ಯುದ್ಧನಡೆದು ದೈತ್ಯರು ದೇವತೆಗಳನ್ನು ಸೋಲಿಸಿದರು. ಆಗ ದೇವತೆಗಳು ತಮ್ಮ ತಮ್ಮಲ್ಲಿಯೇ ಆಲೋಚನೆಗೈದರು.

## ದೈತ್ಯ ಪುರೋಹಿತರ ಪಕ್ಷಾಂತರ

''ದೈತ್ಯರನ್ನು ನಾವು ಗೆಲ್ಲಬೇಕಾದರೆ ದೈತ್ಯಪಕ್ಷದಲ್ಲಿದ್ದವರನ್ನು ನಾವು ನಮ್ಮ ಕಡೆಗೆ ಪಡೆದುಕೊಳ್ಳಬೇಕು. ನಾವು ಒಂದು ಯಜ್ಞ ಮಾಡಿ ಅದಕ್ಕೆ ಶುಕ್ರ ಶಿಷ್ಯರಾದ ಶಂಡ ಮತ್ತು ಮರ್ಕ ಎಂಬ ದಾನವ ಪುರೋಹಿತರನ್ನು ಆಮಂತ್ರಿಸೋಣ. ಮುಂದೆ ಅವರ ಸಹಾಯದಿಂದ ದೈತ್ಯರನ್ನು ಜಯಿಸೋಣ.'' ಹೀಗೆ ವಿಚಾರಿಸಿ ಸುರರು ಯಜ್ಞಕ್ಕಾಗಿ ಶಂಡ, ಮರ್ಕರನ್ನು ಆಹ್ವಾನಿಸಿದರು. ಅವರು ಬಂದ ಬಳಿಕ ''ಬ್ರಾಹ್ಮಣೋತ್ತಮರೇ, ನೀವು ದೈತ್ಯ ಪಕ್ಷವನ್ನು ಬಿಟ್ಟು ನಮ್ಮೊಡನೆ ಸೇರಿರಿ. ನಾವು ನಿಮಗೆ ಬೇಕಾದ ಭೋಗೈಶ್ವರ್ಯ ಸ್ಥಾನಮಾನಗಳನ್ನು ಕೊಟ್ಟು ಗೌರವಿಸುತ್ತೇವೆ '' ಎಂದು ಆಶೆಆಮಿಷತೋರಿದರು. ಅದಕ್ಕೆ ಶಂಡಾಮರ್ಕರು ಸಮ್ಮತಿಸಿದರು. ದೇವತೆಗಳು ಅವರೊಡನೆ ಒಳಸಂಚುಮಾಡಿ ದೈತ್ಯಸೇನೆಯ ಲೋಪದೋಷ ದೌರ್ಬಲ್ಯಗಳನ್ನೆಲ್ಲ ತಿಳಿದುಕೊಂಡರು. ಅದನ್ನು ತಿಳಿದು ದೇವತೆಗಳು ಸರಿಯಾಗಿ ಅದರ ಉಪಯೋಗಮಾಡಿಕೊಂಡು ಪ್ರಚಂಡವಾಗಿ ಪ್ರಹಾರಮಾಡಿ ದೈತ್ಯರನ್ನೆಲ್ಲ ಸೋಲಿಸಿದರು. ಶುಕ್ರಾಚಾರ್ಯರ ಶಾಪವು ಅವರ ತೇಜೋವಧೆಯನ್ನೇ ಮಾಡಿತ್ತು. ದೇವತೆಗಳು ಪರಾಜಿತರಾದ ದೈತ್ಯರನ್ನು ಬೆನ್ನಟ್ಟಿ ಬರಲು ಅವರೆಲ್ಲರೂ ಪಾತಾಳ ಲೋಕವನ್ನು ಪ್ರವೇಶಿಸಿದರು.

ಆ ಸಂದರ್ಭದಲ್ಲಿ ಭೃಗು ಮುನಿಯು ಕೊಟ್ಟ ಶಾಪದ ನೆಪದಿಂದ ಧರ್ಮವು ಹ್ರಾಸೋನ್ಮುಖವಾದಾಗ ಭೂಮಿಯಲ್ಲಿ ಅವತಾರಮಾಡಿ ದುಷ್ಟದೈತ್ಯರನ್ನು ದಮನ ಮಾಡಿ ಪರಮಾತ್ಮನು ಧರ್ಮಸಂಸ್ಥಾಪನೆಯ ಮಹಾಕಾರ್ಯವನ್ನು ಮಾಡುವನು. ಅಸುರರಲ್ಲಿ ಪ್ರಹ್ಲಾದನ ಆಜ್ಞೆಗೆ ತಪ್ಪಿ ನಡೆದವರೆಲ್ಲ ಮಾನವರಿಂದ ವಧಿಸಲ್ಪಡುವರೆಂದು ಬ್ರಹ್ಮದೇವರ ಭವಿಷ್ಯವಾಣಿಯಿದೆ. ಚಾಕ್ಷುಷ ಮನ್ವಂತರದಲ್ಲಿ ಪರಮಾತ್ಮನು ಧರ್ಮ ಎಂಬ ಮುನಿಯಿಂದ ನರನಾರಾಯಣ ರೂಪದಿಂದ ಅವತಾರ ಮಾಡಿದನು. ವೈವಸ್ವತ ಮನ್ವಂತರದಲ್ಲಿ ಪರಮಾತ್ಮನು ಮತ್ಸ್ಯಾವತಾರ ಮಾಡಿದಾಗ ದೇವತೆಗಳು ಯಜ್ಞವನ್ನುಮಾಡಿದರು. ಆಗ ಸ್ವಯಂ ಬ್ರಹ್ಮನೇ ಪುರೋಹಿತನಾಗಿದ್ದನು. ಹಿರಣ್ಯಕಶಿಪನನ್ನು ಸಂಹರಿಸಲಿಕ್ಕಾಗಿ ಶ್ರೀ ಹರಿಯು ನರಸಿಂಹಅವತಾರಮಾಡಿದಾಗ

ರುದ್ರದೇವರೇ ಪುರೋಹಿತರು. ಏಳನೆಯ ತ್ರೇತಾಯುಗದ ಮೂರನೆಯಪಾದದಲ್ಲಿ ಬಲಿಯ ನಿಗ್ರಹಕ್ಕಾಗಿ ವಿಷ್ಣು ವಾಮನ ರೂಪದಿಂದ ಅವತರಿಸಿದ. ಆಗ ಪೌರೋಹಿತ್ಯ ಧರ್ಮನದು. ಈ ಮೇಲೆ ಹೇಳಿದ ನಾರಾಯಣ, ನರಸಿಂಹ, ವಾಮನ ಈ ಮೂರು ಅವತಾರಗಳು ವಿಷ್ಣುವಿನ ದಿವ್ಯಾವತಾರಗಳು, ಎನಿಸುತ್ತವೆ. ಭೃಗಮಹಾಋಷಿಯ ಶಾಪದಿಂದ ಪರಮಾತ್ಮನು ಏಳು ಮಾನುಷ ಅವತಾರಗಳನ್ನು ತಾಳಿದನು. ಆ ಮತ್ಸ್ಯಾದ್ಯತಾರಗಳನ್ನು ಹೇಳುವೆನು ಕೇಳಿರಿ.

ಮೊಟ್ಟ ಮೊದಲನೆಯ ತ್ರೇತಾಯುಗದಲ್ಲಿ ಧರ್ಮಗ್ಲಾನಿಯಾಗಲು ಮಾರ್ಕಂಡೇಯ ಮುಂತಾದ ಮುನಿಗಳೊಂದಿಗೆ ದತ್ತಾತ್ರೇಯ ರೂಪದಿಂದ ಭಗವಂತನು ಅವತಾರ ಮಾಡಿದನು. ಹದಿನೈದನೆಯ ತ್ರೇತಾಯುಗದಲ್ಲಿ ಉತ್ತಂಕ ಮೊದಲಾದವರಿಂದ ಒಡಗೂಡಿ ಮಾಂಧಾತ ಮಹಾರಾಜನ ರೂಪದಿಂದ ಮಾನವನಾಗಿ ಹುಟ್ಟಿದನು. ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ಪರಶುರಾಮಾವತಾರ. ಆಗ ವಿಶ್ವಾಮಿತ್ರರ ಪೌರೋಹಿತ್ಯ. ಇಪ್ಪತ್ತುನಾಲ್ಕನೆಯ ತ್ರೇತೆಯಲ್ಲಿ ರಾವಣವಧಾರ್ಥ ರಾಮಾವತಾರ. ವಸಿಷ್ಠರು ಪುರೋಹಿತ ಪಟ್ಟದಲ್ಲಿ. ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ ಜಾತೂಕರ್ಣ್ಯ ಮೊದಲಾದವರೊಂದಿಗೆ ವ್ಯಾಸರೂಪದಿಂದ ಕೃಷ್ಣನ ಅವತಾರ. ಧರ್ಮ ವ್ಯವಸ್ಥೆ ಹಾಗೂ ಅಸುರನಾಶಕ್ಕಾಗಿ ದ್ವೈಪಾಯನ ಮೊದಲಾದವರಿಂದ ಕೂಡಿಕೊಂಡು ಸುಂದರವಾದ ಬೌದ್ಧಾವತಾರ ವಾಯಿತು. ಈ ಕಲಿಯುಗದ ಕೊನೆಯ ಸಂಧಿಕಾಲದಲ್ಲಿ ವಿಷ್ಣು ಯಶನ ಮಗನಾಗಿ ಕಲ್ಕಿ ಎಂಬ ಹತ್ತನೆಯ ಅವತಾರವನ್ನು ವಿಷ್ಣು ಮಾಡಲಿರುವನು. ಆ ಅವತಾರದಲ್ಲಿ ಯಾಜ್ಞವಲ್ಕ್ಯರೇ ಪುರೋಹಿತರು. ಕಲ್ಕಿ ರೂಪಿಯಾದ ಶ್ರೀ ಹರಿಯು ತನ್ನ ಇಪ್ಪತ್ತೆಂಟನೇಯ ವಯಸ್ಸಿನಲ್ಲಿ ಬ್ರಾಹ್ಮಣರಿಂದ ಕೂಡಿಕೊಂಡು ಬ್ರಹ್ಮದ್ವೇಷಿಗಳನ್ನೂ ಧರ್ಮದ್ರೋಹಿಗಳಾದ ಶೂದ್ರರಾಜರನ್ನೂ ಸಂಹರಿಸುವನು. ಹೀಗೆ ಧರ್ಮ ಕಂಟಕರಾದ ಪಾಖಂಡಿಗಳನ್ನೆಲ್ಲ ವಧೆಗೈದು ಪ್ರಜೆಗಳಿಗೆಲ್ಲ ಸುಖಸಂಪತ್ತುಗಳನ್ನು ಒದಗಿಸಿ ಎಲ್ಲರೂ ಸಂತೋಷದಿಂದ ಇರುವಂತೆ ಮಾಡುವನು.

ಆದರೆ ಮುಂದೆ ಜನರು ಒಬ್ಬರ ಮೇಲೆ ಒಬ್ಬರು ಆಕಸ್ಮಿಕವಾಗಿ ಕೋಪಿಸಿಕೊಂಡು ಪರಸ್ಪರ ವಿನಾಶಕ್ಕೆ ಪ್ರವೃತ್ತರಾಗುವರು. ಕಲ್ಕಿ ರೂಪಿ ಪರಮಾತ್ಮನು ಜನರಿಗೆಲ್ಲ ನೆಮ್ಮದಿಯನ್ನುಂಟು ಮಾಡಿ ಅದೃಶ್ಯನಾಗಿ ಬಿಡುವದರಿಂದ ಜನರಲ್ಲಿ ಕಲಹಾಗ್ನಿಯು ಹೊತ್ತಿಕೊಂಡು ಉರಿಯತೊಡಗುವದು. ಪ್ರಜರೆಲ್ಲರೂ ಕೂಡಿ ಮೊದಲು ರಾಜರನ್ನೆಲ್ಲ ನಿರ್ನಾಮ ಮಾಡುವರು. ದೇಶವೆಲ್ಲ ಅನಾಯಕವಾಗಿ ತಮ್ಮ ತಮ್ಮಲ್ಲಿಯೇ ಹೋರಾಟ ಏರಾಟಗಳಿಂದ ಎಲ್ಲರಿಗೂ ದುಃಖ ದುರವಸ್ಥೆಗಳು ಪ್ರಾಪ್ತವಾಗುವವು. ಜಾತಿ ಧರ್ಮಗಳೆಲ್ಲವೂ ನಾಶವಾಗುವವು. ಜನರು ಅನ್ನ ಮಾರಾಟ ಮಾಡಿ ಹೊಟ್ಟೆ ತುಂಬಿಕೊಳ್ಳುವರು. ಬ್ರಾಹ್ಮಣರು ವೇದ ವಿದ್ಯೆಗಳನ್ನು ಮಾರಿಕೊಳ್ಳುವರು. ಹೆಣ್ಣು ಮಕ್ಕಳು ಬಗೆ ಬಗೆಯಿಂದ ಕೇಶ ಶೃಂಗಾರ ಮಾಡಿಕೊಂಡು ತಮ್ಮ ಮೈಯನ್ನೇ ಮಾರಲಿಕ್ಕಿಡುವರು. ಜನರ ಆಯುಷ್ಯವು ಆರೋಗ್ಯವು ಕ್ಷೀಣಿಸುವದು. ಹೊಟ್ಟೆ ಬಟ್ಟೆಗಿಲ್ಲದೆ ಪ್ರಜರೆಲ್ಲರೂ ಅನಾಥರಾಗಿ

ಮನೆಮಾರು ತೊರೆದು ಬಿಟ್ಟು ಬಯಲುಗಳಲ್ಲಿ ತೊಗಟೆ ತೊಗಲುಗಳನ್ನೇ ಉಟ್ಟುಕೊಂಡು ಅಂಡಲೆಯುವರು. ಎಲ್ಲಡೆಗೂ ಜಾತಿ ಸಾಂಕರ್ಯ, ರೋಗ ರುಜಿನ, ದುಃಖ, ದಾರಿದ್ರ್ಯ, ಕಪಟಕಲಹ, ಸುಳ್ಳು, ವ್ಯಭಿಚಾರ, ಇವೆಲ್ಲವೂ ಲೆಕ್ಕವಿಲ್ಲದಷ್ಟೂ ನಡೆಯುವವು. ಸಿಡಿಲು, ಭೂಕಂಪ, ಅತಿವೃಷ್ಟಿ, ಅನಾವೃಷ್ಟಿಗಳಿಂದ ನಿತ್ಯವೂ ಜನಕ್ಷೋಭೆ ಪ್ರಜಾಪೀಡೆ ನಡೆಯುವದು.

ಹೀಗೆ ಸಂಧಿಕಾಲದಲ್ಲಿ ಜನರು ಕಷ್ಟ ನಷ್ಟಗಳನ್ನು ಅನುಭವಿಸುತ್ತ ಕಲಿಯುಗವು ಮುಗಿಯುವಾಗ ಎಲ್ಲರೂ ನಾಶ ಹೊಂದುವರು. ಆ ಕಲಿಯುಗವು ಮುಗಿದ ಬಳಿಕ ಮತ್ತೆ ಕೃತ ಯುಗದ ಆರಂಭ. ಹೀಗೆ ಯದುವಂಶವು ಬೆಳೆದ ಬಗೆಯನ್ನು ಬಿತ್ತರಿಸುವ ಪ್ರಸಂಗದಿಂದ ದೇವದೈತ್ಯರ ಸಂಗ್ರಾಮ ವೃತ್ತಾಂತವನ್ನೂ ವಿವರವಾಗಿ ನಾನು ನಿಮಗೆ ತಿಳಿಸಿದೆನು. ಇನ್ನು ಯಯಾತಿಯ ಉಳಿದ ಮಕ್ಕಳಾದ ತುರ್ವಸು ಪೂರು, ದ್ರುಹ್ಯು, ಆನು ಇವರ ವಂಶ ವಿಸ್ತರಣದ ವೃತ್ತಾಂತವನ್ನು ನಿರೂಪಿಸುತ್ತೇನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿದುದು*



## ನದೀಮೂಲ ಋಷಿ ಮೂಲ ಕೇಳಬಾರದು

ಅಧ್ಯಾಯ - ೪೯

**ಸೂತ ಉವಾಚ**

**ತುರ್ವಸೋಸ್ತು ಸುತೋಗರ್ಭೋ ಗೋಭಾನುಸ್ತಸ್ಯಚಾತ್ಮಜಃ**
**ಗೋಭಾನೋಸ್ತು ಸುತೋ ವೀರಸ್ತ್ರಿಸಾರಿರಪರಾಜಿತಃ ॥**

**ಸೂತ :-** ತುರ್ವಸುವಿನ ಮಗ ಗರ್ಭ, ಅವನ ಪುತ್ರ ಗೋಭಾನು. ಅವನಿಗೆ ತ್ರಿಸಾರಿ. ಹಾಗೆಯೇ ಮುಂದೆ ಆ ವಂಶದಲ್ಲಿ ಕರಂಧಮ, ಭರತ, ದುಷ್ಯಂತ ಎಂಬ ರಾಜರ್ಷಿಗಳು ಬೆಳಗಿದರು. ಯಯಾತಿಯ ಶಾಪದಿಂದ ತುರ್ವಸುವಿನ ವಂಶದವರಿಗೆ ಅಕಾಲ ವೃದ್ಧಾಪ್ಯವು ಬರತೊಡಗಲು ದುಷ್ಯಂತನ ತಂದೆ ಭರತನು ಪುರುವಂಶ ಸಂಬಂಧದಿಂದ ಪುರುವಂಶವನ್ನು ಸೇರಿದ. ದುಷ್ಯಂತನಿಂದ ಮುಂದೆ ವರೂಥ, ಅಂಡೀರ, ಸಂಧಾನ ಎಂಬ ರಾಜರು ಕ್ರಮವಾಗಿ ರಾಜ್ಯವನ್ನಾಳಿದರು. ಸಂಧಾನನಿಗೆ ಪಾಂಡ್ಯ, ಕೇರಲ, ಚೋಲ, ಕರ್ಣ ಎಂಬ ಸಹೋದರರಿದ್ದರು. ಅವರೆಲ್ಲರೂ ಆಳಿದ ದೊಡ್ಡ ದೊಡ್ಡ ದೇಶಗಳಿಗೆ ಈಗಲೂ ಅವರ ಹೆಸರೇ ಇರುತ್ತದೆ. ದ್ರುಹ್ಯುವಿಗೆ ಶೂರ, ಸೇತು ಎಂಬ ಇಬ್ಬರು ಮಕ್ಕಳು. ಸೇತುವಿನ ಪುತ್ರ ಶರದ್ವಾನ್. ಅವನ ಮಗ ಗಾಂಧಾರ. ಅವನಾಳಿದ ದೇಶವೇ ಗಾಂಧಾರ. ಗಾಂಧಾರನ ಮಗ ಧರ್ಮ, ಅವನ ಮಗ ಘೃತ, ಘೃತನಿಂದ ಪ್ರಚೇತಸ. ಪ್ರಚೇತಸನಿಗೆ ನೂರಾರು ಜನ ಮಕ್ಕಳು. ಅವರೆಲ್ಲರೂ ಉತ್ತರ ದೇಶಗಳಿಗೆ ಹೋಗಿ ಮ್ಲೇಚ್ಛ ರಾಷ್ಟ್ರಗಳಿಗೆ ಅಧಿಪತಿಗಳಾದರು. ಯಯಾತಿ ಪುತ್ರ ಆನುವಿಗೆ ಸಭಾನರ, ಚಾಕ್ಷುಷ, ಪರಮೇಷು ಎಂದು ಮೂವರು ಮಕ್ಕಳು. ಸಭಾನರನಿಂದ ಈ ಕುಲವು ಕೋಲಾಹಲ, ಸಂಜಯ, ಪುರಂಜಯ, ಜನಮೇಜಯ, ಮಹಾಶಾಲ, ಮಹಾಮನ ಎಂದು ಮುಂತಾಗಿ ರಾಜಮಹಾರಾಜರಿಂದ ಮುಂದುವರಿಯಿತು.

ಧರ್ಮಾತ್ಮನಾದ ಮಹಾಮನುಚಕ್ರವರ್ತಿಗೆ ಕೀರ್ತಿಶಾಲಿಯಾದ ಉಶೀನರ, ತಿತಿಕ್ಷು ಎಂದು ಇಬ್ಬರು ಪುತ್ರರು. ಉಶೀನರನಿಗೆ ಬೃಶಾ, ಕೃಶಾ, ನವಾ, ದರ್ಶಾ ಮತ್ತು ದೃಷದ್ವತೀ ಎಂದು ಐದುಪತ್ನಿಯರು. ಇವನಿಗೆ ಭೃಶೆಯಿಂದ ನೃಗ, ನವೆಯಿಂದ ನವ, ಕೃಶೆಯಿಂದ ಕೃಷ, ದರ್ಶೆಯಿಂದ ಸುಪುತ, ದೃಷದ್ವತಿಯಿಂದ ಶಿಬಿ ಚಕ್ರವರ್ತಿ ಎಂಬ ಮಕ್ಕಳು ಜನಿಸಿದರು. ಶಿಬಿ ಸಾರ್ವಭೌಮನಿಗೆ ಪೃಥುದರ್ಭ, ಸುವೀರ, ಕೇಕಯ, ಭದ್ರಕ ಎಂದು ನಾಲ್ಕುಮಕ್ಕಳು. ಅವರು ಆಳಿದ ದೇಶಗಳಿಗೆ ಅವರವರ ಹೆಸರೇ ಬಂದಿತು. ನೃಗನಾಳಿದ ರಾಷ್ಟ್ರಕ್ಕೂ ಕೇಕಯ ಎಂದೇ ಹೆಸರು. ಸುಪುತನ ರಾಜಧಾನಿ ಅಂಬಷ್ಠೆ. ವೃಷಾಲನದು ವೃಷರಾಪುರಿ. ನವನದು ನವರಾಷ್ಟ್ರ. ಇನ್ನು ತಿತಿಕ್ಷುವಿನ ವಂಶವಿಸ್ತಾರವನ್ನು ಹೇಳುವೆ ಕೇಳಿ. ತಿತಿಕ್ಷುವು ಮೂಡಣ ನಿಟ್ಟಿನಲ್ಲಿ ಮಹಾರಾಜನಾಗಿ ಪ್ರಸಿದ್ಧಿಪಡೆದ. ಅವನ ವಂಶದಲ್ಲಿ ಮುಂದೆ ವೃಷದ್ರಥ, ಸೇನ, ಸುತಪ್ರಸ, ಬಲಿಚಕ್ರವರ್ತಿ ಎಂಬ ರಾಜಮಹಾರಾಜರು ಬಾಳಿ ಬೆಳಗಿದರು.

ದೈತ್ಯ ಚಕ್ರವರ್ತಿಯಾದ ವಿರೋಚನನು ಮಕ್ಕಳಿಲ್ಲದೇ ಕೊರಗುತ್ತಿದ್ದನು. ದೈತ್ಯ ಜಾತಿಯ ಮಡದಿಯರಲ್ಲಿ ಅವನಿಗೆ ಮಕ್ಕಳಾಗದ್ದನ್ನು ನೋಡಿ ಬಹಳ ಚಿಂತೆಯಾಯಿತು. ತನ್ನ ವಂಶವು ನಶಿಸಿ ಹೋಗಬಾರದು. ಎಂಬ ವಿಚಾರದಿಂದ ಅವನು ತಿತಿಕ್ಷು ಮನೆತನದ ಸುತಪಸನ ಪತ್ನಿಯಲ್ಲಿ ಸಂತಾನವನ್ನು ಪಡೆದನು. ಆ ದೈತ್ಯ ಸಾರ್ವಭೌಮನಿಗೆ ಮಾನವ ಸ್ತ್ರೀಯಲ್ಲಿ ಹುಟ್ಟಿದ ಮಗನೇ ಬಲಿರಾಜ. ಇದರಿಂದ ಬಲಿರಾಜನು ದಾನವವಂಶಕ್ಕೂ, ಮಾನವವಂಶಕ್ಕೂ ಅಭಿವೃದ್ಧಿಗೆ ಕಾರಣನಾದ. ಯೋಗಿಯೂ, ವಿರಾಗಿಯೂ, ತ್ಯಾಗಿಯೂ, ಆದ ಆ ಬಲಿರಾಜನು ವಾಮನರೂಪಿಯಾದ ಪರಮಾತ್ಮನಿಂದ ನಿಗ್ರಹಿಸಲ್ಪಟ್ಟ. ಆ ಬಲಿರಾಜನಿಗೂ ಮಕ್ಕಳಾಗಲಿಲ್ಲ. ಆಗ ಅವನು ಮಹಾತಮಸ್ ಎಂಬ ಮುನಿಯಿಂದ ತನ್ನ ಮಡದಿಯಲ್ಲಿ ಅಂಗ, ವಂಗ, ಕಲಿಂಗ, ಸಹ್ಮ, ಪುಂಡ್ರ ಎಂದು ಐದು ಮಕ್ಕಳನ್ನು ಪಡೆದನು. ಬಲಿಯ ಭಾರ್ಯೆಯಲ್ಲಿ ಬ್ರಾಹ್ಮಣರಲ್ಲಿ ಹುಟ್ಟಿದ್ದರಿಂದ, ಅವರು ಬ್ರಾಹ್ಮಣರಾಗಿಯೇ ಬಲಿರಾಜನ ವಂಶವನ್ನು ಬೆಳೆಸಿದರು. ಬ್ರಹ್ಮದೇವರ ಅನುಗ್ರಹದಿಂದ ಬಲಿಚಕ್ರವರ್ತಿಗೆ ಯೋಗಸಿದ್ಧಿ, ಕಲ್ಪಾಂತ, ಆಯುಷ್ಯ, ಅಜೇಯತ್ವ, ಧರ್ಮಬುದ್ಧಿ, ತ್ರಿಕಾಲಜ್ಞಾನ, ಸಮರವಿಜಯ, ಧರ್ಮಜ್ಞತೆ ಮುಂತಾದವು ಪ್ರಾಪ್ತವಾಗಿದ್ದವು. ಬಲಿಚಕ್ರವರ್ತಿಯ ಐದೂಜನಮಕ್ಕಳೂ ತಾವೂ ಐದೈದು ಮಕ್ಕಳನ್ನೂ ಹಡೆದರು. ಅವರಿಗೆ ಅಂಗರು, ವಂಗರು, ಕಲಿಂಗರೂ, ಸುಹ್ಮಕರೂ, ಎಂದೇ ಹೆಸರಾಯಿತು. ಇನ್ನು ಅಂಗರಾಜನ ಸಂತಾನದ ಅಭಿವೃದ್ಧಿಯನ್ನು ತಿಳಿಸುತ್ತೇನೆ ಕೇಳಿರಿ.

**ಮುನಿಗಳು :-** ಮಹಾತ್ಮರಾದ ಬಲಿರಾಜನಿಗೆ ಪಂಚಪುತ್ರರು ಹೇಗೆ ಹುಟ್ಟಿದರು ? ಅವನ ಹೆಂಡತಿಯ ಹೆಸರೇನು ? ಅವಳಲ್ಲಿ ಪಂಚಪುತ್ರರನ್ನು ಉತ್ಪಾದನೆಮಾಡಿದ ಋಷಿಯಾರು ? ಅವನ ಪ್ರಭಾವವು ಏನು ? ಪುತ್ರೋತ್ಪಾದನದ ಪ್ರಕಾರವು ಯಾವದು ? ಇದನ್ನೆಲ್ಲ ನಮಗೆ ವಿವರಿಸಿ ಹೇಳಿರಿ.

## ಹೊಟ್ಟೆಯಲ್ಲಿರುವ ಕೂಸಿನಿಂದ ಬಲಾತ್ಕರಿಸಬ

**ಸೂತ :-** ಪೂರ್ವಕಾಲದಲ್ಲಿ ಸರ್ವಶಾಸ್ತ್ರಗಳಲ್ಲಿ ಉಶಿಜ ಎಂಬ ಒಬ್ಬ ಋಷಿಯು ಇದ್ದನು. ಅವನಿಗೆ ಮಮತಾ ಎಂಬ ಹೆಸರಿನ ಮಡದಿ ಇದ್ದಳು. ಅವಳ ಚೆಲುವು ಮಾದಕ,

ನೋಡಿದವರಿಗೆ ಮೋಹಕ. ಉಶಿಜನ ತಮ್ಮ ಬೃಹಸ್ಪತಿ ಮಹಾತೇಜಸ್ವಿ. ಆದರೆ ಮಮತೆಯ ಸೌಂದರ್ಯ ನೋಡಿ ಅವನು ಕಾಮವಶನಾದ. ಪ್ರೇಮೋನ್ಮಾದದಿಂದ ಅವಳನ್ನು ಬಲಾತ್ಕರಿಸತೊಡಗಿದ. ಅಸಹಾಯಕಳಾದ ಮಮತೆಯು ಬೃಹಸ್ಪತಿಯ ತೇಜಪ್ರಭಾವಕ್ಕೆ ಬೆದರಿದ್ದರೂ ಬಲವಾಗಿಯೇ ನಿಷೇಧಮಾಡಿದಳು.

''ಮಹಾನುಭಾವನೇ, ನಾನು ನಿನ್ನ ಅಣ್ಣನ ಮಡದಿ. ಅವನಿಂದ ಈಗ ಗರ್ಭಿಣಿಯಾಗಿರುವೆನು. ಈ ಅಧರ್ಮಕಾರ್ಯವನ್ನು ಬಿಟ್ಟುಬಿಡು. ನನ್ನ ಗರ್ಭದಲ್ಲಿದ್ದ ನಿನ್ನ ಅಣ್ಣನ ಮಗನು ಈಗಾಗಲೇ ವೇದಮಂತ್ರಗಳನ್ನು ಅಲ್ಲಿಯೇ ಹೇಳುತ್ತಿದ್ದಾನೆ. ಈ ನಿನ್ನ ಕಾಮಚೇಷ್ಟೆಯಿಂದ ಆ ಕೂಸಿಗೂ ಕೋಪ ಬಂದೀತು. ನಿಮ್ಮ ಅಣ್ಣನಂತೆ ನೀನೂ ಅಮೋಘವೀರ್ಯನು. ಒಂದು ಗರ್ಭದಲ್ಲಿ ಒಂದು ಮಗು ಇರುವಾಗಲೇ ಇನ್ನೊಂದಕ್ಕೆ ಅವಕಾಶವೆಲ್ಲಿ? ದಯಮಾಡಿ ನನ್ನನ್ನು ಬಿಟ್ಟುಬಿಡು'' ಅವಳು ಇಷ್ಟು ಹೇಳಿದರೂ ಕಾಮಾಂಧನಾದ ಬೃಹಸ್ಪತಿಯು ಕೇಳಲಿಲ್ಲ. ಪತಿವ್ರತೆಯಾದ ಮಮತೆಯು ಬಲವಾಗಿ ನಿಷೇಧಿಸಿದರೂ ವಿಷಯಾತುರನಾದ ದೇವಗುರು ಬಲಾತ್ಕರಿಸಿದನು. ಆಗ ಮಮತೆಯ ಹೊಟ್ಟೆಯಲ್ಲಿದ್ದ ಹಸುಳೆಯು ಸಿಟ್ಟಿಗೆದ್ದು ನುಡಿಯಿತು.

''ಕಕ್ಕನೇ, ನೀನು ತಿಳುವಳಿಕೆಯುಳ್ಳವ. ಧರ್ಮಜ್ಞ. ನನ್ನ ತಾಯಿಯು ಗರ್ಭಿಣಿ. ನಾನು ಅವಳ ಬಸಿರಿನಲ್ಲಿ ಕುಳಿತಿದ್ದೇನೆ. ಇಷ್ಟಾದರೂ ಅವಳು ಬೇಡಬೇಡವೆಂದು ಬಿನ್ನವಿಸುತ್ತಿದ್ದರೂ ನೀನು ಬಲವಂತದಿಂದ ಭೋಗ ಮಾಡುವದು ಎಂಥ ಅನ್ಯಾಯ!''

ಗರ್ಭದಲ್ಲಿರುವ ಶಿಶುವು ತನ್ನ ಸುಖಕ್ಕೆ ಆತಂಕವಾಗುವದನ್ನು ಕಂಡು ಬೃಹಸ್ಪತಿಗೆ ಕೋಪ ಬಂದಿತು. ''ನನಗೆ ಆತಂಕವನ್ನುಂಟುಮಾಡುವ ನೀನು ಚಿರಕಾಲ ಕತ್ತಲೆಯಲ್ಲಿರುವ ಕುರುಡನಾಗು'' ಎಂದು ಶಪಿಸಿದನು. ಬೃಹಸ್ಪತಿಯ ಶಾಪದಿಂದ ಉಶಿಜನಿಂದ ಹುಟ್ಟಿದ ಮಮತೆಯ ಮಗನು ಕುರುಡನಾಗಿ ಹುಟ್ಟಿದನು. ಬೃಹಸ್ಪತಿಯಂತೆ ಅತ್ಯಂತ ತೇಜಸ್ವಿಯಾದ ಅವನಿಗೆ ದೀರ್ಘತಮ ಎಂಬ ಹೆಸರು ಬಂದಿತು. ಮುಂದೆ ಅವನು ಅಖಂಡ ಬ್ರಹ್ಮಚರ್ಯವ್ರತದಿಂದ ತನ್ನ ಸಹೋದರನ ಆಶ್ರಮದಲ್ಲಿ ವಾಸಮಾಡಿದ್ದನು. ಇವನ ಕಕ್ಕನ ಮಗನಾದ ಆ ಸಹೋದರನು ಕಾಮಧೇನುವಿನ ಸಂತಾನವಾದ ಒಂದು ಎತ್ತನ್ನು ಸಾಕಿದ್ದನು. ಆ ಎತ್ತು ದೀರ್ಘತಮನಿಗೆ ಹಸುವಿನ ಧರ್ಮಗಳನ್ನು ತಿಳಿಸಿಕೊಡುತ್ತಿತ್ತು. ಒಂದು ದಿನ ಅದು ಯಜ್ಞಕಾರ್ಯಕ್ಕಾಗಿ ತಂದ ಹಸಿರು ಕುಶದರ್ಭೆಗಳನ್ನು ತಿನ್ನತೊಡಗಿತು. ಅದನ್ನು ಕಂಡು ದೀರ್ಘತಮನು ಅದರ ಎರಡೂ ಕೋಡುಗಳನ್ನು ಹಿಡಿದು ತಡೆದನು. ಬಲಿಷ್ಠವಾದ ಆ ಎತ್ತು ಎಷ್ಟು ಕೊಸರಾಡಿದರೂ ಶಕ್ತಿವಂತನಾದ ದೀರ್ಘತಮನ ಹಿಡಿತದಿಂದ ಬಿಡಿಸಿ ಕೊಳ್ಳಲಿಕ್ಕಾಗಲಿಲ್ಲ. ಬಹಳ ಹೊತ್ತು ಒದ್ದಾಡಿ ಗುದ್ದಾಡಿ ಎಷ್ಟು ಪ್ರಯತ್ನಿಸಿದರೂ ಆಚೀಚೆ ಸರಿದಾಡಲಿಕ್ಕೂ ಆಗದೆ ದಣಿದು ಹೋದ ಆ ಎತ್ತು ದೀನವಾಗಿ ನುಡಿಯಿತು.

"ಅಯ್ಯಾ ಋಷಿಪುತ್ರಾ, ಬಲಿಷ್ಠನಾದ ಋಷಿಕುಮಾರನೆ, ನೀನು ನನ್ನನ್ನು ಬಿಟ್ಟುಬಿಡು. ನಿನ್ನಂಥ ಶಕ್ತಿಸಂಪನ್ನನಾದ ಮನುಷ್ಯನನ್ನೇ ನಾನು ಈವರೆಗೆ ನೋಡಲಿಲ್ಲ. ಬಲದಲ್ಲಿ ನನಗೆ ಸಮರೇ ಯಾರೂ ಇರಲಿಲ್ಲ. ಅಂಥ ನನ್ನನ್ನು ನೀನು ಇಂದು ಮಣಿಸಿದೆ. ನಿನ್ನ ಸಾಮರ್ಥ್ಯವನ್ನು ಕಂಡು ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡು ಕೊಡುತ್ತೇನೆ. ಮೊದಲು ನನ್ನ ಕೊಂಬನ್ನು ಬಿಡು". ಆ ಎತ್ತಿನ ಮಾತನ್ನು ಕೇಳಿ ದೀರ್ಘತಮನು ತನ್ನ ಹಿಡಿತವನ್ನು ಇನ್ನೂ ಬಿಗಿಪಡಿಸಿ ನುಡಿದನು.

"ಕಂಡ ಕಂಡವರ ಮನೆಯಲ್ಲಿ ಕಂಡದ್ದನ್ನೆಲ್ಲ ಮೇಯುವ ದುಷ್ಟಸ್ವಭಾವವುಳ್ಳ ನಿನ್ನನ್ನು ನಾನು ಜೀವಂತ ಬಿಡಲಾರೆ. ನನ್ನಿಂದ ತಪ್ಪಿಸಿಗೊಂಡು ಎಲ್ಲಿಗೆ ಹೋಗುವಿ ? ಹೆರವರ ವಸ್ತುವನ್ನು ಕೇಳದೇ ತಿನ್ನುವ ನಿನ್ನಂಥ ಪಶುವನ್ನು ನಾನು ಬಿಡುವದಿಲ್ಲ." ಆಗ ಆ ಎತ್ತು ದೀರ್ಘತಮನಿಗೆ ಪಶುಧರ್ಮವನ್ನು ತಿಳಿಸುತ್ತ ಹೇಳಿತು- "ಅಯ್ಯಾ! ಎತ್ತುಗಳಿಗೆ ಪಾಪ ಇಲ್ಲ. ಕಳವು ಪಶುಗಳಲ್ಲಿ ಅಧರ್ಮವಲ್ಲ. ಅವುಗಳಿಗೆ ಭಕ್ಷ್ಯಾಭಕ್ಷ್ಯ ನಿರ್ಬಂಧವಿಲ್ಲ. ತಿನ್ನುವ ಹಾಗೂ ಕುಡಿಯುವ ನಿರ್ಬಂಧ ಮನುಷ್ಯರಿಗೆ ಮಾತ್ರ. ಪಶುಗಳು ಏನು ತಿಂದರೂ ತಪ್ಪಿಲ್ಲ. ಏನು ಕುಡಿದರೂ ಪಾಪವಲ್ಲ. ಆಹಾರದಂತೆ ನಮಗೆ ವಿಹಾರದಲ್ಲಿಯೂ ನಿರ್ಬಂಧವಿಲ್ಲ. ನಮ್ಮ ಜಾತಿಗೆ ಬೇಕಾದವರೊಡನೆ ಬೇಕೆನಿಸಿದಾಗ ಬೆರೆಯಬಹುದು. ಹಸು ಎತ್ತು ಮುಂತಾದ ಪ್ರಾಣಿವರ್ಗದಲ್ಲಿ ನಿಯಮ ನಿಬಂಧನೆಗಳಿಲ್ಲ. ಸ್ವಚ್ಛಂದ ವಿಹಾರ ಸ್ವೇಚ್ಛಾಹಾರದಿಂದಿರುವದೇ ಗೋಧರ್ಮ." ಹಸು ಪಶುಗಳ ಈ ಸ್ವೈರಾಚಾರದ ಸ್ವಚ್ಛಂದ ಧರ್ಮವು ದೀರ್ಘತಮನಿಗೆ ಬಹಳ ಹಿಡಿಸಿತು. ಇಂಥ ಈ ಪಶುಧರ್ಮವನ್ನು ವಿವರವಾಗಿ ತಿಳಿಸಿ ಹೇಳಿದ ಆ ಎತ್ತಿಗೆ ತನಗೆ ಸಾಧ್ಯವಾದಷ್ಟು ಆಹಾರವನ್ನು ಕೊಟ್ಟು ನೀರನ್ನು ಕುಡಿಸಿ ಉಪಚರಿಸಿದನು. ಅದು ಹೋದ ಬಳಿಕ ಅದು ಉಪದೇಶ ಮಾಡಿದ ಗೋಧರ್ಮವನ್ನೇ ಮಾನವರೂ ಕೂಡಾ ಅನುಸಿರಿಸುವದು ಬಹಳ ಒಳ್ಳೆಯದು. ಎಂದು ಯೋಚಿಸಿ ತಾನು ಇನ್ನು ಮುಂದೆ ಪಶುಧರ್ಮಕ್ಕೆ ಅನುಸಾರವಾಗಿಯೇ ನಡೆಯುವದು ಎಂದು ನಿರ್ಧರಿಸಿದ.

## ಕುರುಡನಾದರೂ ಕಾಮಚೇಷ್ಟೆಯನ್ನು ಬಿಡದ ಮುನಿಯನ್ನು ನದಿಗೆ ನುಗ್ಗಿಸಿದಳು

ಅನ್ನ ಪಾನಗಳಲ್ಲಿಯ ನಿಯಮ ನಿಬಂಧನೆಗಳನ್ನೆಲ್ಲ ತೊರೆದು, ಕಂಡದ್ದನ್ನು ತಿನ್ನುವದು, ಸಿಕ್ಕಿದನ್ನು ಕುಡಿಯುವದು, ಉಂಚ್ಛೃಂಖಲವಾಗಿ ಇರುವದು ಪ್ರಾರಂಭ ವಾಯಿತು. ಆಶ್ರಮದ ಒಳಗೆ ಇರುವ ತನ್ನ ತಮ್ಮನ ಮಡದಿಯ ಬಳಿಗೆ ಹೋಗಿ ತೀರ ಹತ್ತಿರದಲ್ಲಿ ಹೋಗಿ ನಿಂತುಕೊಂಡನು. ಪರಪುರುಷನಾದ ಇವನು ಅತಿ ಹತ್ತಿರದಲ್ಲಿ ಸುಳಿದಾಡುವದನ್ನು ಕಂಡು ಆ ಮಾನಿನಿಗೆ ಸಂಶಯ ಬಂದು ಸಿಡುಕಿನಿಂದ ದೂರಸರಿದು ಅವನಿಗೂ ದೂರನಿಲ್ಲಲು ಹೇಳಿದಳು. ಆದರೆ ಗೋಧರ್ಮವನ್ನೇ ಅನುಸರಿಸಬೇಕು. ಎಂದು ಸಂಕಲ್ಪಿಸಿದ ದೀರ್ಘತಮನು ಅವಳ ನಿಷೇಧವನ್ನು ಲೆಕ್ಕಿಸದೇ ತನ್ನ ಸೊಸೆಯಂತಿದ್ದ ಸೋದರಪತ್ನಿಯ ಮೈಮೇಲೆ ಹೋದನು. ಆಗ ಅವಳು ದೀರ್ಘತಮನನ್ನು ಚೆನ್ನಾಗಿ ಹಳಿದು ಹೀಗೆಳೆದು, ತನ್ನ ಎರಡೂ ಕೈಗಳಿಂದ ಹಿಡಿದು ಹೇಳಿದಳು. "ನಿನ್ನ ನಡತೆ ಏಕೋ ವಿಪರೀತಕಿಟ್ಟಿದೆ.

ಬುದ್ಧಿ ತಲೆಕೆಳಗಾಗಿದೆ. ಮದತುಂಬಿದ ಗೂಳಿಯಂತೆ ವರ್ತಿಸುತ್ತಿರುವಿ. ಕಾಮ ಪ್ರೇಮಗಳನ್ನು ಎಲ್ಲಿ ಮಾಡಬೇಕೋ ಎಲ್ಲಿ ಮಾಡಬಾರದೋ ? ಎನ್ನುವ ಜ್ಞಾನವೇ ನಿನಗೆ ಇದ್ದಂತಿಲ್ಲ. ಪಶುವಿನಂತೆ ನಿನ್ನ ಮಗಳ ಸಮಾನಳಾದ ನನ್ನ ಮೇಲೆಯೇ ಏರಿ ಬಂದಿರುವಿ. ನೀತಿಗೆಟ್ಟ ನಿನ್ನನ್ನು ಮನೆಬಿಟ್ಟು ಈಗಲೇ ಹೊರಗೆ ಹಾಕಿಸುತ್ತೇನೆ. ಕುರುಡನಾದರೂ ಕಾಮಚಾಪಲ್ಯವನ್ನು ಬಿಡದ ನಿನ್ನಂತಹ ದಾರಿಬಿಟ್ಟ ದುರುಳನನ್ನು ನಾನು ಇನ್ನು ಹೊಟ್ಟೆಗೆಹಾಕಿ ಇಟ್ಟುಗೊಳ್ಳಲಾರೆ.'' ಹೀಗೆ ಹೇಳಿ ಮರದ ಪೆಟ್ಟಿಗೆಯಲ್ಲಿ ಹಾಕಿ ಗಂಗೆಯ ಪ್ರವಾಹದಲ್ಲಿ ನೂಕಿಬಿಟ್ಟಳು. ನದಿನೀರಿನ ಪ್ರವಾಹದ ಗುಂಟ ತೇಲುತ್ತ ದೀರ್ಘತಮನ ಪೆಟ್ಟಿಗೆಯು ಹರಿದುಹೋಯಿತು.

ಆಕಸ್ಮಿಕವಾಗಿ ಗಂಗಾ ತಟಾಕಕ್ಕೆ ಬಂದ ಬಲಿಚಕ್ರವರ್ತಿಯು ನೀರಿನ ಪ್ರವಾಹದಲ್ಲಿ ಸೆಳವಿನಗುಂಟ ತೆರೆಯತೊಟ್ಟಿಲಲ್ಲಿ ತೂಗಾಡುತ್ತ ನಡೆದ ಸಂದೂಕವನ್ನು ನೋಡಿದನು. ಅದನ್ನು ನಾವಿಕರಿಂದ ದಂಡೆಗೆ ತರಿಸಿದನು. ಪೆಟ್ಟಿಗೆಯ ಮುಚ್ಚಳತೆರೆದುನೋಡಿದಾಗ ಅದರಲ್ಲಿ ಮಹರ್ಷಿಯೊಬ್ಬನು ಬಂಧಿತನಾದದ್ದು ಕಂಡು ಬಂದಿತು. ಅವನನ್ನು ಅತ್ಯಾದರದಿಂದ ಮನೆಗೆ ಕರೆದುಕೊಂಡು ಹೋದನು. ಅರಮನೆಯಲ್ಲಿ ಅವನಿಗೆ ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ನೀಡಿ, ಸೇವೆ ಸತ್ಕಾರಗಳನ್ನು ಮಾಡಿ ಸಂತೋಷಪಡಿಸಿದನು. ಬಲಿಚಕ್ರವರ್ತಿಯ ಅಂತಃಪುರದಲ್ಲಿ ದೀರ್ಘತಮ ಮಹರ್ಷಿಗೆ ಬಲಿಚಕ್ರವರ್ತಿಯ ಆದೇಶದಂತೆ ಸಮಸ್ತ ರಾಜೋಪಚಾರಗಳೆಲ್ಲವೂ ಲಭ್ಯವಾದವು. ಅದರಿಂದ ಅತ್ಯಂತ ಸಂತುಷ್ಟನಾದ ಮಹರ್ಷಿ ದೀರ್ಘತಮನು ಬಲಿರಾಜನಿಗೆ ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದನು. ಆಗ ಬಲಿರಾಜನು ''ಮಹಾನುಭಾವರೇ, ನನಗೆ ಸಂತತಿಯಿಲ್ಲ. ದೊಡ್ಡವರಾದ ತಾವು ನನ್ನ ಧರ್ಮಪತ್ನಿಯಲ್ಲಿ ನಿಯೋಗವಿಧಿಯಿಂದ ನನಗೆ ಮಕ್ಕಳನ್ನು ದಯಪಾಲಿಸಬೇಕು. ಅವರಿಗೆ ಧರ್ಮಜ್ಞಾನವೂ ಇರಲಿ, ವ್ಯವಹಾರ ಚಾತುರ್ಯವೂ ಇರಲಿ'' ಎಂದು ಕೇಳಿಕೊಂಡನು.

ಬಲಿಯ ಬಿನ್ನಹಕ್ಕೆ ಮುನಿಯು ಸಂತೋಷದಿಂದ ಸಮ್ಮತಿಸಿದನು. ಮಹಾರಾಜನು ತನ್ನ ಭಾರ್ಯೆಯನ್ನು ಕರೆದು ಮಹರ್ಷಿಗಳ ಸೇವೆಮಾಡಿ ಸಂತಾನ ಪಡೆಯಲು ಹೇಳಿದನು. ಆದರೆ ಮಹಾರಾಣಿಗೆ ಆ ಮುನಿಯನ್ನು ಕಂಡರೆ ಆಗದು. ತಲೆತುಂಬ ಜಡೆ, ಮುಖದತುಂಬ ಗಡ್ಡ ಮೀಸೆ, ಮೇಲೆ ಮುದುಕ, ಅದರಲ್ಲಿಯೂ ಕುರುಡ, ಇಂಥ ಮುನಿಯ ಸಂಗವು ಆ ಪ್ರಾಯದ ಪ್ರಮದೆಗೆ ಹೇಗೆ ಒಪ್ಪಿಗೆಯಾದೀತು ? ಅವಳು ತನ್ನ ಓರ್ವ ಶೂದ್ರ ದಾಸಿಯನ್ನು ಕರೆದು ಋಷಿಯನ್ನು ಉಪಚರಿಸಲು ಹೇಳಿದಳು.

## ಶೂದ್ರದಾಸಿಯಿಂದ ತೇಜಸ್ವಿ ಸಂತಾನ

ಭಕ್ತಿಯಿಂದ ತನ್ನನ್ನು ಸೇವಿಸಿದ ಆ ಶೂದ್ರದಾಸಿಗೆ ದೀರ್ಘತಮ ಮಹಾ ಮುನಿಯು ಕಕ್ಷೀವಂತನೇ ಮೊದಲಾದ ತೇಜಸ್ವಿ ಮಕ್ಕಳನ್ನು ಕರುಣಿಸಿದ. ಅವರೆಲ್ಲರೂ ಋಷಿಧರ್ಮದಲ್ಲಿ ನಿಪುಣರೂ, ಬ್ರಹ್ಮಜ್ಞಾನಿಗಳೂ, ಸರ್ವಧರ್ಮ

ಮರ್ಮಜ್ಞರೂ ಇದ್ದರು. ಅವರ ಈ ಪಾವಿತ್ರ್ಯ, ಪಾಂಡಿತ್ಯ, ಪ್ರಭಾವಗಳನ್ನು ಕಂಡು ಹೆಮ್ಮೆಯಿಂದ ಬಲಿಚಕ್ರವರ್ತಿಯು ಇವರೆಲ್ಲರೂ ನನ್ನ ಮಕ್ಕಳು ಎಂದು ಹೆಮ್ಮೆಯಿಂದ ಹೇಳಿಕೊಂಡನು.

ಇದನ್ನುಕೇಳಿ ದೀರ್ಘಮುನಿಯು ತುಸು ವಿಷಾದದಿಂದ ಹೇಳಿದನು. "ಮಹಾರಾಜ, ನಿನ್ನ ಹೆಂಡತಿಯಲ್ಲಿ ಜನಿಸಿದ್ದರೆ ನಿನ್ನ ಮಕ್ಕಳು ಆಗಬಹುದಾಗಿತ್ತು. ಆದರೆ ಈಗ ಇವರು ನನ್ನಿಂದ ಶೂದ್ರನಾರಿಯಲ್ಲಿ ಹುಟ್ಟಿದ ಮಕ್ಕಳು ಆಗಿರುತ್ತಾರೆ. ನಿನ್ನ ಪಟ್ಟದರಸಿಯಾದ ಸುದೇಷ್ಣೆಯು ನೀನು ಹೇಳಿದರೂ ನನ್ನ ಬಳಿ ಬರಲಿಲ್ಲ. ನಾನು ಮುಪ್ಪಿನ ಮುದುಕ, ಮೇಲೆ ಕುರುಡ, ಇಂಥ ನನ್ನ ಸಮಾಗಮಕ್ಕೆ ಜಿಗುಪ್ಸೆಪಟ್ಟುಕೊಂಡು ಮಹಾರಾಣಿಯು ತನ್ನ ತೊತ್ತನ್ನು ಅಟ್ಟಿದಳು. ಇವರೆಲ್ಲರೂ ನಿನ್ನ ಮಕ್ಕಳಲ್ಲ. ಆ ದಾಸೀಪುತ್ರರು."

ಇದನ್ನು ಕೇಳಿ ಮಹಾರಾಜನಿಗೆ ಬಹಳ ಕೆಡುಕೆನಿಸಿತು. ಮುನಿಯ ಕ್ಷಮೆ ಬೇಡಿಕೊಂಡು ಅವರನ್ನೂ ಸಮಾಧಾನಪಡಿಸಿದನು. ಮತ್ತು ಅಂತಃಪುರದಲ್ಲಿ ಮಹಾರಾಣಿಯನ್ನು ಹಳಿದು "ಎಂಥ ಸುವರ್ಣ ಸಂಧಿಯನ್ನು ತಪ್ಪಿಸಿಬಿಟ್ಟೆ ! ನೀನು ಬಿಟ್ಟದ್ದರಿಂದ ನಮ್ಮ ತೊತ್ತಿನ ಹೊಟ್ಟೆಯಿಂದ ಎಂಥ ತೇಜಸ್ವಿಯಾದ ಸಮರ್ಥ ಸಂತಾನ ಜನಿಸಿದೆ. ನಮಗೆ ಎಂದು ಮೀಸಲಿಟ್ಟ ಸತ್ಸಂತಾನ ಹೆರವರ ಪಾಲಾಯಿತು. ನನ್ನ ಸಮಸ್ತ ಸಾಮ್ರಾಜ್ಯಕ್ಕೂ ಉತ್ತರಾಧಿಕಾರಿಯಿಲ್ಲದೆ ಪ್ರಜಾಪರಿವಾರವೂ ಮಂತ್ರಿ ಮಹಾರಾಜರೂ ಚಿಂತಾಕ್ರಾಂತರಾಗಿದ್ದಾರೆ. ಕರುಣೆಸುವ ಋಷಿ ಕೃಪೆತೋರುವಾಗ ನಿಮ್ಮ ಬುದ್ಧಿಗೇಡಿತನದಿಂದ ಇಡೀ ರಾಷ್ಟ್ರವೇ ಅರಾಜಕವಾಗುವ ಪ್ರಸಂಗ ಬಂದಿದೆ. ಈಗಲಾದರೂ ನೀನು ಲಕ್ಷಣವಾಗಿ ಅಲಂಕರಿಸಿಕೊಂಡು ಆ ಮಹಾಮುನಿಯ ಬಳಿಗೆ ಹೋಗಿ ಅವರನ್ನು ಸೇವೆಮಾಡು. ಈಗಲೂ ಅವರು ನಿನಗೆ ಅತ್ಯುತ್ತಮನಾದ ಪುತ್ರರತ್ನವನ್ನು ದಯಪಾಲಿಸುತ್ತಾರೆ " ಎಂದು ಬುದ್ಧಿ ಹೇಳಿದನು. ಸ್ವಯಂ ತಾನೇ ಕುಳಿತು ಮಹಾರಾಣಿಯನ್ನು ವಸ್ತ್ರಾಲಂಕಾರಗಳಿಂದ ಶೃಂಗರಿಸಿ ದೀರ್ಘತಮ ಋಷಿಯ ಬಳಿಗೆ ಕಳಿಸಿಕೊಟ್ಟನು. ಸಂತಾನಕಾಮನೆಯಿಂದ ಪತಿಯ ಆಜ್ಞೆಯಿಂದ ಬಂದ ಸುದೇಷ್ಣಾದೇವಿಯನ್ನು ಕಂಡು ಮಹಾಮುನಿ ಹೇಳಿದನು.

"ಈ ಸಲ ನಿನಗೆ ಸಂತತಿಯ ಅಪೇಕ್ಷೆ ಇದ್ದರೆ ಒಂದು ಕೆಲಸ ಮಾಡಬೇಕು. ನೀನೇ ನನ್ನ ಮೈತುಂಬ ತುಸು ಉಪ್ಪು ಬೆರೆಸಿ ಮೊಸರು ಹಾಗೂ ಜೇನುತುಪ್ಪಗಳನ್ನು ಚೆನ್ನಾಗಿ ಸವರಿ ನಾಲಿಗೆಯಿಂದ ಅಸಹ್ಯಪಟ್ಟುಕೊಳ್ಳದೇ ನೆಕ್ಕಬೇಕು. ಅಂದರೆ ನಿನಗೆ ಮಕ್ಕಳಾಗುತ್ತವೆ." ಮುನಿಯ ಈ ಆದೇಶಕ್ಕೆ ಒಪ್ಪಿ ಸುದೇಷ್ಣಾ ರಾಣಿಯು ದೀರ್ಘತಮನ ದೇಹಕ್ಕೆಲ್ಲ ಹೆಜ್ಜೇನು ಹಾಗೂ ಹೆಪ್ಪುಗಟ್ಟಿದ ಮೊಸರು ಲೇಪಿಸಿ ಮುನಿಯ ಸರ್ವಾಂಗವನ್ನು ಗುದಪ್ರದೇಶವೊಂದನ್ನು ಬಿಟ್ಟು ನೆಕ್ಕಿದಳು. ಆಗ ಮಹಾಮುನಿಯು ಮಹಾರಾಣಿಗೆ "ದೇವಿ, ನಿನಗೆ ಇನ್ನು ಸರ್ವಾಂಗ ಸುಂದರನೂ, ಸಮರ್ಥನೂ ಆದ ಮಗನು ಸಂಭವಿಸುವನು. ಆದರೆ ಅವನಿಗೆ ಗುದ ಪ್ರವೇಶ ಮಾತ್ರ ದೇಹದಲ್ಲಿ ಇರುವುದಿಲ್ಲ" ಎಂದು ತಿಳಿಸಿದನು. ಆಗ ಅವಳಿಗೆ ಗಾಬರಿಯಾಯಿತು.

ಅವಳು ಮಹರ್ಷಿಗೆ ಕೈಜೋಡಿಸಿ ಅಂಗಲಾಚಿದಳು. ''ಮಹನೀಯರೇ, ದಯಮಾಡಿ ತಾವು ನನಗೆ ಗುದವಿಲ್ಲದ ಮಗನನ್ನು ಕೊಡಬೇಡಿರಿ. ನನ್ನ ಕಡೆಯಿಂದ ಶಕ್ಯವಿದ್ದಷ್ಟು ನಾನು ತಮ್ಮ ಸೇವೆಮಾಡಿದ್ದೇನೆ. ಸಾಧ್ಯವಾದಷ್ಟು ನಿಮ್ಮನ್ನು ತೃಪ್ತಿಪಡಿಸಿದ್ದೇನೆ. ನನ್ನ ಮೇಲೆ ಪ್ರಸನ್ನರಾಗಿ ಪೂರ್ಣಾಂಗನಾದ ಮಗನನ್ನು ಕರುಣಿಸಬೇಕು.

ಅರಸಿಯ ಈ ಬೇಡಿಕೆಯನ್ನು ಕೇಳಿ ದೀರ್ಘತಮ ಮುನಿಯು ದೃಢ ನಿರ್ಧಾರದ ದನಿಯಲ್ಲಿ ಹೇಳಿದನು. ''ಕಲ್ಯಾಣೀ, ನೀನು ನಾನು ಹೇಳಿದ್ದಕ್ಕೆ ಅಸಹ್ಯಪಟ್ಟುಕೊಂಡದ್ದರಿಂದ ಹೀಗಾಯಿತು. ನನ್ನ ಮಾತು ಬದಲಾಗಲಾರದು. ನಿನಗೆ ಈ ಮಗನಿಂದ ಯಾವ ಪ್ರಯೋಜನವೂ ಇಲ್ಲ. ನಿನ್ನ ಮೊಮ್ಮಗನು ಮಾತ್ರ ಸರ್ವಾಂಗ ಸುಂದರನಾಗಿ ನಿನಗೆ ಸಂತೋಷವನ್ನೂ, ಸದ್ಗತಿಯನ್ನೂ, ಸಮಾಧಾನವನ್ನು ತಂದುಕೊಡುವನು. ಆದರೆ ನಿನ್ನ ಮಗನಿಗೆ ಅಪಾನೇಂದ್ರಿಯವು ಇಲ್ಲದಿದ್ದರೂ ಅವನ ಆರೋಗ್ಯಕ್ಕೆ ಬಾಧಕವಿಲ್ಲ. ಅವನ ಜೀವನಕ್ಕೆ ವ್ಯತ್ಯಾಸವಿಲ್ಲ. ನನ್ನ ಈ ಒಂದು ಅವಯವದ ಬಗ್ಗೆ ಜಿಗುಪ್ಸೆಪಟ್ಟುಬಿಟ್ಟಿದ್ದರಿಂದ ಒಬ್ಬ ಮಗನು ಮಾತ್ರ ಗುದೇಂದ್ರಿಯಶೂನ್ಯನಾಗಿ ಜನಿಸುವನು. ಉಳಿದ ನನ್ನ ಅವಯವಗಳನ್ನೆಲ್ಲ ನೀನು ಭಕ್ತಿಯಿಂದಲೇ ನೆಕ್ಕಿದ್ದರಿಂದ ಹುಣ್ಣಿಮೆಯ ಚಂದ್ರನಂತಿರುವ ಐದು ಗಂಡುಮಕ್ಕಳು ಜನಿಸುವರು.ಅವರು ಐವರೂ ತೇಜೋವಂತರೂ, ಶೀಲವಂತರೂ, ಯಾಗಿಗಳೂ, ಧರ್ಮಧುರಂಧರರೂ ಆಗುವರು.

ಹೀಗೆ ಹೇಳಿ ಮುನಿಯು ಸುದೇಷ್ಣಾದೇವಿಯ ಅಂಗಾಂಗಗಳನ್ನೆಲ್ಲ ನೇವರಿಸಿದನು. ತೆಳುಹೊಟ್ಟೆಯನ್ನು ಕೈಯಿಂದ ಮಿದುವಾಗಿ ಮುಟ್ಟಿ ''ಇದರಲ್ಲಿ ಚಂದ್ರೋದಯವಾದಂತೆ ಐದು ದೇವತಾಸದೃಶವಾದ ಗರ್ಭಗಳು ಬೇಗನೆ ಮೂಡುವವು.'' ಎಂದು ಪ್ರೀತಿಯಿಂದ ಹೇಳಿ ಅನುಗ್ರಹಿಸಿದನು. ಮಹಾಮುನಿಯ ಹೇಳಿಕೆಯಂತೆ ಮಹಾರಾಣಿ ಸುದೇಷ್ಣೆಯಲ್ಲಿ ಅಂಗ, ಕಳಿಂಗ, ವಂಗ, ಪುಂಡ್ರ, ಸುಹ್ಮ ಎಂಬ ಮಹಾಬಲಿಷ್ಠರಾದ ಕ್ಷೇತ್ರಜ ಪುತ್ರರು ಉತ್ಪನ್ನರಾದರು. ಅವರೆಲ್ಲರೂ ತುಸು ದೊಡ್ಡವರಾದ ಬಳಿಕ ಸ್ವಯಂದೀರ್ಘತಮ ಮುನಿಯೇ ಉಪನಯನ ಸಂಸ್ಕಾರ ಮಾಡಿ ಬ್ರಹ್ಮತೇಜ ಉಕ್ಕುವಂತೆ ಮಾಡಿದನು.

ಹೀಗೆ ಬಲಿಚಕ್ರವರ್ತಿಯು ದೀರ್ಘತಮಮುನಿಯ ಅನುಗ್ರಹದಿಂದ ಮನುಷ್ಯ ಸ್ತ್ರೀಯಲ್ಲಿ ಮಕ್ಕಳನ್ನು ಪಡೆದನು. ದೀರ್ಘತಮ ಮುನಿಯು ಕಾಮಧೇನುವಿನ ಮಗನಾದ ಎತ್ತಿನಿಂದ ಗೋಧರ್ಮದ ಉಪದೇಶಪಡೆದು ಅದರಂತೆ ನಡೆದದ್ದರಿಂದ ಅವನು ಈ ತರಹದ ವಿಲಕ್ಷಣವಾದ ತಪಸ್ಸಿದ್ಧಿಯು ಉಂಟಾಗಿತ್ತು. ಮತ್ತು ಲೋಕೋತ್ತರವಾದ ಬ್ರಹ್ಮತೇಜಸ್ಸೂ ಪ್ರಾಪ್ತವಾಗಿತ್ತು. ಆದರೆ ಈ ಗೋಧರ್ಮವನ್ನು ಅನುಸರಿಸಿದ್ದರಿಂದ ಅವನು ಮನೆ, ಮಾರುಗಳಿಗೆ ಎರವಾಗಿ ಬಂಧುಬಳಗದವರ ಪ್ರೀತಿ ವಿಶ್ವಾಸಗಳಿಂದ ವಂಚಿತನಾಗಬೇಕಾಯಿತು. ಮತ್ತು ಆದ್ದರಿಂದಲೇ ಗಂಗಾಪ್ರವಾಹದಲ್ಲಿ ಹರಿದು ಹೋಗಲೇಬೇಕಾಯಿತು. ಇಷ್ಟೆಲ್ಲ ಕಷ್ಟಪರಂಪರೆಯನ್ನೂ ಅನುಭವಿಸಿದರೂ ಬಿಡದೆ ಗೋಧರ್ಮವನನ್ನೇ ಅನುಸರಿಸುವ ಆ ಮುನಿಯ ನಿಷ್ಠೆಯನ್ನು ಕಂಡು

ಗೋವುಗಳ ದೇವಿಯಾದ ಸ್ವರ್ಗದ ಕಾಮಧೇನುವಿಗೆ ಕರುಣೆ ಹುಟ್ಟಿತು. ಅವಳು ದೀರ್ಘತಮನ ಬಳಿಗೆ ಬಂದು ಪ್ರೀತಿಯಿಂದ ಹೇಳಿದಳು.

## ಕಾಮಧೇನು ಮೂಸಿದ ಕುರುಡ ಚಕ್ಷುಷ್ಮಂತನಾದ

ಪುಣ್ಯಶೀಲನಾದ ಮಹಾಮುನಿಯೇ ನಿನ್ನ ಅನನ್ಯ ಭಕ್ತಿಯಿಂದ ನಾನು ಪ್ರೀತಳಾಗಿದ್ದೇನೆ. ನಿನ್ನ ಗೋಧರ್ಮ ನಿಷ್ಠೆಯಿಂದ ಪ್ರಸನ್ನಳಾಗಿದ್ದೇನೆ. ಬೃಹಸ್ಪತಿಯ ಶಾಪದಿಂದ ನಿನ್ನಲ್ಲಿ ಕುರುಡು ಮುಪ್ಪು ವೈರೂಪ್ಯ ಕಪ್ಪು ಬಣ್ಣಗಳು ಬಂದಿರುತ್ತವೆ. ನೀನೀಗ ನನ್ನ ಹತ್ತಿರ ಬಂದು ನಿಲ್ಲು. ನಾನು ನಿನ್ನ ಮೈಯನ್ನು ಮೂಸಿ ನೋಡಿ ನಿನ್ನ ಕಣ್ಣಿನ ಕತ್ತಲೆಯನ್ನೇ ಕಳೆದುಬಿಡುತ್ತೇನೆ. ಮುಪ್ಪನ್ನು ತಪ್ಪಿಸಿಬಿಡುತ್ತೇನೆ. ಕಪ್ಪನ್ನುತೊಲಗಿಸುತ್ತೇನೆ. ನಿನಗೆ ಎಂದೂ ಸಾವು ಬರದಂತೆ ಮಾಡುತ್ತೇನೆ.

ಹೀಗೆ ನುಡಿದ ಕಾಮಧೇನುವಿನ ಕರುಣಾಪೂರಿತವಾದ ಈ ನುಡಿಯನ್ನು ಕೇಳಿ ದೀರ್ಘತಮನು ಆ ಗೋಮಾತೆಯ ಬಳಿ ಹೋಗಿ ನಿಂತನು. ಅದು ಸ್ನೇಹದಿಂದ ಈ ಕುರುಡುಮುನಿಯ ಅಡಿಯಿಂದಮುಡಿಯವರೆಗೆ ಇಡೀ ದೇಹವನ್ನೆಲ್ಲ ಒಮ್ಮೆ ಮೂಸಿತು. ಕೂಡಲೇ ಅವನಿಗೆ ಸುಂದರವಾದ ಕಣ್ಣುಗಳು ಬಂದವು. ಅವನ ಕಪ್ಪು ಬಣ್ಣ ಹೋಗಿ ಮೈ ತುಂಬ ಮಿಂಚಿನ ಕಾಂತಿಯು ಸೂಸ ತೊಡಗಿತು. ಮುಪ್ಪು ಹೋಗಿ ಹೊಸಹರೆ ಹೋಗರೇರಿ ದೇಹವು ನಳನಳಿಸತೊಡಗಿತು. ಸರ್ವಾಂಗ ಸುಂದರನಾದ ಆ ತರುಣ ಮುನಿಗೆ ದಿವ್ಯದೃಷ್ಟಿಯೂ, ದಿವ್ಯದೇಹವೂ ಲಭಿಸಿದ್ದು ಮಾತ್ರವಲ್ಲದೇ ಮುಪ್ಪು ಸಾವೂ ಎರಡೂ ತಪ್ಪಿ ಅವನು ದೀರ್ಘಾಯುಷಿಯಾದನು. ಇಷ್ಟೆಲ್ಲ ಭಾಗ್ಯವು ಗೋವಿನಿಂದಲೇ ಲಭಿಸಿದುದರಿಂದ ಅವನಿಗೆ ಅಂದಿನಿಂದ '' ಗೌತಮ '' ಎಂದು ಹೆಸರು ಬಂದಿತು.

ಅನಂತರ ಗೌತಮ ಮುನಿಯಿಂದ ದಾಸಿಯಲ್ಲಿ ಜನಿಸಿದ ಕಕ್ಷೀವಂತ ಎಂಬ ಪುತ್ರನೊಂದಿಗೆ ಆ ಮಹಾಮುನಿಯು ಗಿರಿವ್ರಜ ಎಂಬ ಅರಣ್ಯಕ್ಕೆ ತಪಸ್ಸಿಗೆ ತೆರಳಿದನು. ಆ ತಪೋವನದಲ್ಲಿ ಯಾಗ, ಯೋಗ, ಧ್ಯಾನ, ಜಪತಪೋನುಷ್ಠಾನಗಳನ್ನು ಮಾಡುತ್ತಿರುವ ತಂದೆಯ ಬಳಿಯಲ್ಲಿಯೇ ಕುಳಿತು, ಅವನು ಮಾಡುವ ಧರ್ಮಕರ್ಮಗಳನ್ನೆಲ್ಲ ನೋಡಿಕೊಂಡು ಚೆನ್ನಾಗಿ ತಿಳಿದುಕೊಂಡು ತಾನೂ ಮಹಾತಪಸ್ವಿ ಎನಿಸಿದನು. ದೀರ್ಘಕಾಲದವರೆಗೆ ತಂದೆಯಂತೆ ಅತಿ ಉಗ್ರವಾದ ಜಪತಪೋನುಷ್ಠಾನಗಳನ್ನೂ ಧ್ಯಾನೋಪಾಸನೆಯನ್ನೂ ಮಾಡಿ ತಪಸ್ಸಿದ್ಧಿಯನ್ನು ಪಡೆದುಕೊಂಡನು. ಹೀಗೆ ಬಹುಕಾಲ ತಪಸ್ಸುಮಾಡಿ ಶೂದ್ರ ತಾಯಿ ಮೂಲಕವಾಗಿ ಬಂದ ಶೂದ್ರ ದೇಹವನ್ನು ಕಳೆದುಕೊಂಡು ದಿವ್ಯವಾದ ಬ್ರಾಹ್ಮಣ್ಯವನ್ನು ಪಡೆದನು. ಆಗ ಗೌತಮ ಮುನಿಗೆ ಅತ್ಯಂತ ಸಂತೋಷವೆನಿಸಿತು. ನಿನ್ನಿಂದ ನನಗೆ ಈಗ ನಿಜವಾದ ಸಂತಾನದ ಸಂತಸವು ಸೌಭಾಗ್ಯವು ಪ್ರಾಪ್ತವಾದವು. ನಿನ್ನಿಂದ ನನ್ನ ಇಹಲೋಕ ಪರಲೋಕಗಳ ಉಭಯ ಪ್ರಯೋಜನವೂ ದೊರಕಿದಂತಾಯಿತು. ಎಂದು ಹೇಳಿದನು.'' ಅನಂತರ ಗೌತಮ ಮುನಿಯು ಕೃತಾರ್ಥ ಭಾವನೆಯಿಂದ ಈ ದೇಹವನ್ನು ಪರಿತ್ಯಾಗಮಾಡಿ ಬ್ರಹ್ಮಲೋಕವನ್ನು

ಕುರಿತು, ಪ್ರಯಾಣಮಾಡಿದನು. ಕಕ್ಷೀವಂತನು, ಬ್ರಾಹ್ಮಣ್ಯವನ್ನು ಗಳಿಸಿದ ಬಳಿಕ ಅವನ ಸಂತಾನವು ಸಾವಿರ ಸಂಖ್ಯೆಯಲ್ಲಿ ಬೆಳೆಯಿತು. ಅವರಿಗೆ ಕೌಕ್ಷಾಂಡರೂ, ಗೌತಮರೂ ಎಂಬ ಹೆಸರು ಬಂದಿತು.

ಇತ್ತ ಬಲಿಚಕ್ರವರ್ತಿಯು ದೀರ್ಘತಮ ಮುನಿಯ ದಯೆಯಿಂದ ತನಗೆ ದೊರೆತ ಸತ್‌ಸಂತಾನದಿಂದ ಕೃತಾರ್ಥನಾಗಿ ಯೋಗಾಭ್ಯಾಸದಲ್ಲಿ ನಿರತನಾದನು. ಅವನ ಜ್ಯೇಷ್ಠ ಪುತ್ರನಾದಅಂಗರಾಜನಿಂದ ಮುಂದೆ ಅವನ ಸಂತತಿಯು ದಧಿವಾಹನ, ದಿವಿರಥ, ಧರ್ಮರಥ, ಚಿತ್ರರಥ ಎಂದು ಮುಂತಾಗಿ ಕುಡಿಯೊಡೆದು ಬೆಳೆಯಿತು. ಇವರಲ್ಲಿ ಶ್ರೀಮಂತನಾದ ಧರ್ಮರಥನು ವಿಷ್ಣುಪದ ಎಂಬ ಗಿರಿಯಲ್ಲಿ ಸೋಮರಸವನ್ನು ದೇವೇಂದ್ರನೊಂದಿಗೆ ಪಾನಮಾಡಿದನು. ಈ ದಶರಥರಾಜನಿಗೆ ಚತುರಂಗ ಎಂಬ ಗಂಡು ಮಗನೂ, ಶಾಂತಾ ಎಂಬ ಹೆಣ್ಣು ಮಗಳೂ ಇದ್ದರು. ಶಾಂತೆಯನ್ನು ಲೋಮಪಾದನಿಗೆ ಕೊಟ್ಟಿತು. ದಶರಥರಾಜನಿಗೆ ಋಷ್ಯಶೃಂಗ ಮುನಿಯ ಅನುಗ್ರಹದಿಂದ ಚತುರಂಗ ಎಂಬ ಮಗನು ಜನಿಸಿದ್ದನಷ್ಟೇ. ಆ ಚತುರಂಗ ಮಗನೇ ಪೃಥುಲಾಷ್ಕನ ಮಗ ಚಂಡ. ಇವನ ಮೊದಲಿನ ರಾಜಧಾನಿಯಾದ ಮಾಲಿನಿ ಎಂಬಪಟ್ಟಣಕ್ಕೆ ಇವನಿಂದ ಮುಂದೆ ಚಂಪಾವತಿ ಎಂದು ಹೆಸರಾಯಿತು. ಈ ಚಂಪರಾಜನು ಪೂರ್ಣಭದ್ರಮುನಿಯ ಪ್ರಭಾವದಿಂದ ಹರ್ಯಂಗ ಎಂಬ ಮಗನನ್ನು ಪಡೆದನು. ವಿಭಾಂಡಕಮುನಿಯ ಪೌರೋಹಿತ್ಯದಲ್ಲಿ ಈ ಹರ್ಯಂಗನು ಒಂದು ಯಜ್ಞಮಾಡಿ ಸ್ವರ್ಗದ ಆನೆ ಐರಾವತವನ್ನು ಇಳೆಗೆ ಇಳಿಸಿದನು. ಹರ್ಯಂಗನಿಂದ ಮುಂದೆ ಭದ್ರರಥ ಬೃಹತ್ಕರ್ಮ, ಬೃಹದ್ಭಾನು, ಮಹಾತ್ಮವಂತ, ಬೃಹನ್ಮನ, ಜಯದ್ರಥ, ಬೃಹದ್ರಥ, ಜನಮೇಜಯ, ಅಂಗ ಮುಂತಾದ ರಾಜರು ಈ ವಂಶದಲ್ಲಿ ಜನಿಸಿದರು. ಈ ಅಂಗರಾಜನ ಸಾಕು ಮಗನೇ ಕರ್ಣ. ಕುಂತಿದೇವಿಯು ಕನ್ಯಾವಸ್ಥೆಯಲ್ಲಿ ಹೆತ್ತಪುತ್ರ. ಕರ್ಣನಮಗ ವೃಷಸೇನ. ಇದು ಬಲಿಯ ಹಿರಿಯ ಮಗ ಅಂಗರಾಜನ ಕುಲಬಳ್ಳಿ ಬೆಳೆದ ಬಗೆ.

**ಋಷಿಗಳು** :- ಕುಂತೀಪುತ್ರ ಕರ್ಣನನ್ನು ಅಧಿರಥ ಎಂಬ ಸೂತನು ಬೆಳೆಸಿದ್ದನಷ್ಟೇ! ಆದುದರಿಂದ ಅವನು ಸೂತಪುತ್ರನೆಂದೇ ಪ್ರಸಿದ್ಧನಾಗಿದ್ದ. ಆ ಸೂತಪುತ್ರ ಇಲ್ಲಿ ಅಂಗರಾಜನು ಆದುದೆಂತು ?

**ಸೂತ** :- ಈ ಅಂಗವಂಶದ ಬೃಹನ್ಮನನಿಗೆ ಶೈಬ್ಯನ ಕನ್ನೆಯರಾದ ಯಶೋದೇವಿ ಸತ್ಯಾ ಎಂಬ ಇಬ್ಬರು ಮಡದಿಯರಿಂದ ಜಯದ್ರಥ, ವಿಜಯ ಎಂಬ ಈರ್ವರು ಗಂಡುಮಕ್ಕಳು ಜನಿಸಿದರು. ವಿಜಯನಿಂದ ಬೃಹತ್ಪುತ್ರ, ಬೃಹದ್ರಥ, ಸತ್ಯಕರ್ಮ ಎಂದು ರಾಜರಾದರು. ಸತ್ಯಕರ್ಮನ ಮಗನೇ ಅಧಿರಥ. ಈ ಅಧಿರಥನಿಗೆ ಸೂತ ಎಂದು ಹೆಸರಿದ್ದಿತು. ಅವನೇ ಕರ್ಣನನ್ನು ಸಾಕಿ ಬೆಳೆಸಿದ ತಂದೆ. ಆದುದರಿಂದಲೇ ಕರ್ಣನಿಗೆ ಸೂತಪುತ್ರ ಎಂಬ ಹೆಸರು ಬಂದಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಶಕುಂತಲೆಯನ್ನು ವಂಚಿಸಿದ ದುಷ್ಯಂತ ಅಧ್ಯಾಯ - ೫೦

## ಆಕಾಶವಾಣಿಯನ್ನು ಕೇಳಿ ಅವಳನ್ನೂ ಪುತ್ರಭರತನನ್ನು ಸ್ವೀಕರಿಸಿದ

**ಸೂತ ಉವಾಚ**

**ಪೂರೋಃ ಪುತ್ರೋ ಮಹಾತೇಜಾ ರಾಜಾ ಸಜನಮೇಜಯಃ**
**ಪ್ರಾಚೀತ್ವತಃ ಸುತಸ್ತಸ್ಯ ಸಪ್ರಾಚೀಮಕರೋದ್ದಿಶಮ್ ॥**

**ಸೂತ** :- ಯಯಾತಿಯ ಕೊನೆಯ ಮಗನಾದ ಪುರುವಿಗೆ ಜನಮೇಜಯ ಎಂಬ ಮಗನಿದ್ದನು. ಜನಮೇಜಯನ ಮಗನೇ ''ಪೂರ್ವ'' ಎಂಬ ದಿಕ್ಕನ್ನು ಕಲ್ಪಿಸಿದ ಪ್ರಾಚೀತ್ವಂತ. ಈ ಪ್ರಾಚೀತ್ವಂತನಿಂದ ಮುಂದೆ ಪೂರುವಿನ ವಂಶವು ಮನಸ್ಯು, ಪೀತಾಯುಧ, ದುಂಧು, ಬಹುವಿಧ, ಸಂಪಾತಿ, ರಂಹವರ್ಚಸ, ಭದ್ರಾಶ್ವ ಎಂದು ಮುಂತಾಗಿ ರಾಜಮಹಾರಾಜರು ಜನಿಸಿ ಈ ಕುಲವನ್ನು ಬೆಳಕಿಗೆ ತಂದರು. ಭದ್ರಾಶ್ವನಿಗೆ ''ದೃತಾ'' ಎಂಬ ಅಪ್ಸರಸ್ತ್ರೀಯು ಒಲಿದು ಆಗಸದಿಂದ ಇಳೆಗೆ ಇಳಿದು ಬಂದು ಮಡದಿಯಾಗಿ ಅವನೊಡನೆ ಬಾಳ್ವೆ ಮಾಡಿದಳು. ಆ ಅಪ್ಸರಾಂಗನೆಯಲ್ಲಿ ಭದ್ರಾಶ್ವನಿಗೆ ಔಚೇಯು, ಹೃಷೇಯು, ಕಕ್ಷೇಯು, ಸೇನೇಯು, ಧೃತೇಯು, ವಿನೇಯು, ಸ್ಥಲೇಯು, ಧಮೇಯು, ಸನ್ನತೇಯು, ಪೂರ್ಣೇಯು ಎಂದು ಹತ್ತು ಜನ ಮುತ್ತಿನಂಥ ಮಕ್ಕಳು ಉತ್ಪನ್ನರಾದರು.

ಜ್ಯೇಷ್ಠ ಪುತ್ರನಾದ ಔಚೇಯುವಿಗೆ ತಕ್ಷಕ ಎಂಬ ಸರ್ಪರಾಜನು ತನ್ನ ಮಗಳಾದ ''ಜ್ವಲನಾ'' ಎಂಬ ಕನ್ಯೆಯನ್ನು ಧಾರೆಎರೆದುಕೊಟ್ಟನು. ಜ್ವಲನೆಯಲ್ಲಿ ರಂತಿನಾರ ಎಂಬ ರಾಜಶ್ರೇಷ್ಠನು ಜನಿಸಿದನು. ರಂತಿನಾರನಿಗೆ ಮನಸ್ವಿನಿ ಎಂಬ ಮಡದಿಯಿಂದ ಅಮೂರ್ತರಯು, ತ್ರಿವನ ಎಂಬ ಇಬ್ಬರು ಧಾರ್ಮಿಕರೂ ಮಂಗಳಾಂಗರೂ ಆದ ಮಕ್ಕಳು ಹುಟ್ಟಿದರು. ''ಗೌರಿ'' ಎಂಬ ಒಬ್ಬ ಹೆಣ್ಣು ಮಗಳು ಜನಿಸಿದಳು. ಈ ಗೌರಿಯ ಮಗನೇ ಮಾಂಧಾತ ಚಕ್ರವರ್ತಿ. ಇದೇ ಮನಸ್ವಿನಿ ರಂತಿನಾರ ದಂಪತಿಗಳ ಎರಡನೆಯಮಗಳಾದ ''ಇಲಿನಾ'' ಎಂಬ ನಾರೀಮಣಿಯು ಯಮದೇವರನ್ನು ವರಿಸಿ ಬ್ರಹ್ಮಜ್ಞಾನಿಗಳಾದ ಮಕ್ಕಳನ್ನು ಪಡೆದಳು. ಈ ಇಲಿನೆಯ ಒಬ್ಬ ಮಗನನ್ನು ಉಪದಾನವಿಯು ಮದುವೆಯಾಗಿ ಋಷ್ಯಂತ, ದುಷ್ಯಂತ, ಪ್ರವೀರ, ಅನಘ ಎಂಬ ನಾಲ್ಕು ಮಕ್ಕಳನ್ನು ಪಡೆದಳು. ದುಷ್ಯಂತನು ಕಣ್ವ ಋಷಿಯ ಸಾಕುಮಗಳಾದ ಶಕುಂತಲೆಯನ್ನು ವಿವಾಹವಾಗಿ ರಣಧೀರನಾದ ಭರತಚಕ್ರವರ್ತಿಯನ್ನು ಪಡೆದನು. ಈ ಭರತನಿಂದಲೇ ಈ ವಂಶದವರಿಗೆಲ್ಲ ಭಾರತರು ಎಂದು ಪ್ರಸಿದ್ಧಿಯಾಯಿತು.

ದುಷ್ಯಂತನು ಬೇಟೆಗೆ ಹೋದಾಗ ಕಣ್ವರ ಆಶ್ರಮದಲ್ಲಿದ್ದ ಶಕುಂತಲೆಯನ್ನು ಒಲಿದು, ಒಲಿಸಿ ಗಂಧರ್ವ ವಿವಾಹದಿಂದ ಪರಿಗ್ರಹಿಸಿದ್ದನು. ಮುಂದೆ ತನ್ನ

ರಾಜಧಾನಿಗೆ ಬಂದ ಬಳಿಕ ಜನಾಪವಾದದ ಭಯದಿಂದ ಶಕುಂತಲೆಯನ್ನು ಅಂತಃಪುರಕ್ಕೆ ಕರೆಸಿಕೊಳ್ಳಲಿಲ್ಲ. ಶಕುಂತಲೆಯು ಆಶ್ರಮದಲ್ಲಿಯೇ ಭರತಚಕ್ರವರ್ತಿಗೆ ಜನ್ಮವಿತ್ತಳು. ಮುಂದೆ ಆ ಮಗನನ್ನು ಕರೆದುಕೊಂಡು ದುಷ್ಯಂತ ಮಹಾರಾಜನ ಬಳಿಗೆ ಬಂದು ಆ ಮಗನನ್ನೂ ತನ್ನನ್ನೂ ಸ್ವೀಕರಿಸಬೇಕೆಂದು ಬೇಡಿಕೊಂಡಳು. ಆಗ ಲೋಕಾಪವಾದದ ಭಯದಿಂದ ಮಹಾರಾಜನು ಶಕುಂತಲೆಗೆ ''ನೀನು ನನ್ನ ಮಡದಿಯೂ ಅಲ್ಲ, ಇವನು ನನ್ನ ಮಗನೂ ಅಲ್ಲ'' ಎಂದು ಹಾರಿಕೆಯ ಉತ್ತರವಿತ್ತು ಅವರಿಬ್ಬರನ್ನೂ ಧಿಕ್ಕರಿಸಿದನು. ಆಗ ಹೀಗೆ ಆಕಾಶವಾಣಿಯಾಯಿತು.

''ಓ ! ದುಷ್ಯಂತ ಶಕುಂತಲೆಯು ಹೇಳಿದ ಮಾತು ಸತ್ಯ. ಇವನು ನಿನ್ನ ಔರಸ ಪುತ್ರ. ನೀನೇ ಈ ಮಗುವಿನ ನಿಜವಾದ ತಂದೆ. ತಾಯಿಯೆಂದರೆ ಒಂದು ಚರ್ಮದ ಚೀಲ. ವೀರ್ಯದಾನ ಮಾಡಿದವನೇ ನಿಜವಾದ ತಂದೆ. ಇವಳಲ್ಲಿ ಈ ಪುತ್ರನ ಉತ್ಪತ್ತಿಗೆ ವಾಸ್ತವಿಕ ಕಾರಣನೆಂದರೆ ನೀನು. ನೀನೇ ಈ ಮಗುವಿನ ತಂದೆ. ಶಕುಂತಲೆಯನ್ನು ಅವಮಾನಿಸಬೇಡ. ಇವರಿಬ್ಬರನ್ನೂ ನೀನು ಸ್ವೀಕರಿಸು. ಇವನು ನಿನ್ನನ್ನು ನಿನ್ನ ವಂಶವನ್ನೂ ಉದ್ಧರಿಸುವನು.''. ಈ ಆಕಾಶವಾಣಿಯನ್ನು ಕೇಳಿದ ಬಳಿಕ ದುಷ್ಯಂತನು ಭರತನನ್ನು ತನ್ನಪುತ್ರನೆಂದು ಸ್ವೀಕರಿಸಿದನು. ಆ ಭರತನು ಅಖಂಡ ಭೂಮಂಡಲದ ಏಕರಾಟ್ ಸಾಮ್ರಾಟನಾಗಿ ಧರ್ಮಶಾಸನವನ್ನು ಬಹುಕಾಲ ಪರ್ಯಂತರ ನಡೆಸಿದನು. ಈ ಭರತ ಮಹಾರಾಜನ ಅಂತಃಪುರದಲ್ಲಿಯ ತಾಯಿ ದಾಯಿಯರ ಅವಾಂತರದಿಂದ ಹುಟ್ಟಿದ ಮಕ್ಕಳೆಲ್ಲವೂ ಹಸುಳೆಯಿದ್ದಾಗಲೇ ಅಸುನೀಗಿ ನಾಶವಾದವು. ಆಗ ಮರುತ್‌ದೇವತೆಗಳು ಬೃಹಸ್ಪತಿಯ ಮಗನಾದ ಭರದ್ವಾಜನನ್ನು ತಂದು ಆ ಭರತನಿಗೆ ಒಪ್ಪಿಸಿ ''ಇವನನ್ನು ನಿನ್ನ ಮಗನನ್ನಾಗಿ ಮಾಡಿಕೋ'' ಎಂದು ಹೇಳಿದರು. ಅಂದಿನಿಂದ ಭರದ್ವಾಜನು ಭರತ ಚಕ್ರವರ್ತಿಯ ಮಗನಾದನು.

**ಋಷಿಗಳು :-** ಮಹಾತೇಜಸ್ವಿಯಾದ ಭರದ್ವಾಜನನ್ನು ಮರುತ್‌ದೇವತೆಗಳು ಭರತಪುತ್ರನನ್ನಾಗಿ ಮಾರ್ಪಡಿಸಿದ್ದು ಹೇಗೆ ?

**ಸೂತರು :-** ಉಶಿಜಮುನಿಯು ತನ್ನ ಪತ್ನಿಯಾದ ಮಮತೆಯು ಗರ್ಭಿಣಿಯಾದಾಗ ಸ್ವರ್ಗದಿಂದ ಭೂಲೋಕಕ್ಕೆ ಹೋದನು. ಆಗ ಅವನ ತಮ್ಮನಾದ ಬೃಹಸ್ಪತಿಯು ತನ್ನ ಅತ್ತಿಗೆಯನ್ನು ಕಾಮಿಸಿದನು. ಅವಳು ಇದು ಅಧರ್ಮ, ಅನ್ಯಾಯ, ಅನೀತಿ ಎಂದು ಜರಿದು ನಿಷೇಧಿಸಿದಳು. ಆದರೂ ಕಾಮಾಂಧನಾದ ದೇವಗುರು ಕೇಳದೆ ಬಲವಂತಮಾಡಿದಾಗ ಮಮತೆಯ ಗರ್ಭದಲ್ಲಿರುವ ತೇಜಃಪುಂಜವಾದ ಶಿಶುವು ಕಕ್ಕನನ್ನು ಧಿಕ್ಕರಿಸಿ ನುಡಿಯಿತು. ಇದರಿಂದ ಬೃಹಸ್ಪತಿಯ ಭೋಗಸಾಹಸವು ವ್ಯರ್ಥವಾಗಿ ನೆಲದ ಪಾಲಾಗಿ ಅಲ್ಲಿಯೇ ಒಂದು ಮಗು ಉತ್ಪನ್ನವಾಯಿತು. ಅದನ್ನು ಕಂಡು ಮಮತೆಯು ಬೃಹಸ್ಪತಿಗೆ ''ಭರಸ್ವೈನಂ'' ''ಬ್ರಹಸ್ಪತಿಯೇ, ಇದು ನಿನ್ನ ಮಗು. ಇದನ್ನು ನೀನೇ ರಕ್ಷಣೆಮಾಡು. ನಾನು ನನ್ನ ಮನೆಗೆ ಹೊರಟುಹೋಗುತ್ತೇನೆ'' ಎಂದು ಹೇಳಿ ತನ್ನ ಮನೆಗೆಹೋದಳು. ''ಭರಸ್ವ'' ಎಂದು ಮಮತೆ ಹೇಳಿದ್ದರಿಂದ

## ಶಕುಂತಲೆಯನ್ನು ವಂಚಿಸಿದ ದುಷ್ಯಂತ

ಅಧ್ಯಾಯ - ೫೦

## ಆಕಾಶವಾಣಿಯನ್ನು ಕೇಳಿ ಅವಳನ್ನೂ ಪುತ್ರಭರತನನ್ನು ಸ್ವೀಕರಿಸಿದ

**ಸೂತ ಉವಾಚ**

**ಪೂರೋಃ ಪುತ್ರೋ ಮಹಾತೇಜಾ ರಾಜಾ ಸಜನಮೇಜಯಃ**
**ಪ್ರಾಚೀತ್ವತಃ ಸುತಸ್ತಸ್ಯ ಸಪ್ರಾಚೀಮಕರೋದ್ದಿಶಮ್ ॥**

**ಸೂತ** :- ಯಯಾತಿಯ ಕೊನೆಯ ಮಗನಾದ ಪುರುವಿಗೆ ಜನಮೇಜಯ ಎಂಬ ಮಗನಿದ್ದನು. ಜನಮೇಜಯನ ಮಗನೇ ''ಪೂರ್ವ'' ಎಂಬ ದಿಕ್ಕನ್ನು ಕಲ್ಪಿಸಿದ ಪ್ರಾಚೀತ್ವಂತ. ಈ ಪ್ರಾಚೀತ್ವಂತನಿಂದ ಮುಂದೆ ಪೂರುವಿನ ವಂಶವು ಮನಸ್ಯು, ಪೀತಾಯುಧ, ದುಂಧು, ಬಹುವಿಧ, ಸಂಪಾತಿ, ರಂಹವರ್ಚಸ, ಭದ್ರಾಶ್ವ ಎಂದು ಮುಂತಾಗಿ ರಾಜಮಹಾರಾಜರು ಜನಿಸಿ ಈ ಕುಲವನ್ನು ಬೆಳಕಿಗೆ ತಂದರು. ಭದ್ರಾಶ್ವನಿಗೆ ''ದೃತಾ'' ಎಂಬ ಅಪ್ಸರಸ್ತ್ರೀಯು ಒಲಿದು ಆಗಸದಿಂದ ಇಳೆಗೆ ಇಳಿದು ಬಂದು ಮಡದಿಯಾಗಿ ಅವನೊಡನೆ ಬಾಳ್ವೆ ಮಾಡಿದಳು. ಆ ಅಪ್ಸರಾಂಗನೆಯಲ್ಲಿ ಭದ್ರಾಶ್ವನಿಗೆ ಔಚೇಯು, ಹೃಷೇಯು, ಕಕ್ಷೇಯು, ಸೇನೇಯು, ಧೃತೇಯು, ವಿನೇಯು, ಸ್ಥಲೇಯು, ಧಮೇಯು, ಸನ್ನತೇಯು, ಪೂರ್ಣೇಯು ಎಂದು ಹತ್ತು ಜನ ಮುತ್ತಿನಂಥ ಮಕ್ಕಳು ಉತ್ಪನ್ನರಾದರು.

ಜ್ಯೇಷ್ಠ ಪುತ್ರನಾದ ಔಚೇಯುವಿಗೆ ತಕ್ಷಕ ಎಂಬ ಸರ್ಪರಾಜನು ತನ್ನ ಮಗಳಾದ ''ಜ್ವಲನಾ'' ಎಂಬ ಕನ್ಯೆಯನ್ನು ಧಾರೆಎರೆದುಕೊಟ್ಟನು. ಜ್ವಲನೆಯಲ್ಲಿ ರಂತಿನಾರ ಎಂಬ ರಾಜಶ್ರೇಷ್ಠನು ಜನಿಸಿದನು. ರಂತಿನಾರನಿಗೆ ಮನಸ್ವಿನಿ ಎಂಬ ಮಡದಿಯಿಂದ ಅಮೂರ್ತರಯು, ತ್ರಿವನ ಎಂಬ ಇಬ್ಬರು ಧಾರ್ಮಿಕರೂ ಮಂಗಳಾಂಗರೂ ಆದ ಮಕ್ಕಳು ಹುಟ್ಟಿದರು. ''ಗೌರಿ'' ಎಂಬ ಒಬ್ಬ ಹೆಣ್ಣು ಮಗಳು ಜನಿಸಿದಳು. ಈ ಗೌರಿಯ ಮಗನೇ ಮಾಂಧಾತ ಚಕ್ರವರ್ತಿ. ಇದೇ ಮನಸ್ವಿನಿ ರಂತಿನಾರ ದಂಪತಿಗಳ ಎರಡನೆಯಮಗಳಾದ ''ಇಲಿನಾ'' ಎಂಬ ನಾರೀಮಣಿಯು ಯಮದೇವರನ್ನು ವರಿಸಿ ಬ್ರಹ್ಮಜ್ಞಾನಿಗಳಾದ ಮಕ್ಕಳನ್ನು ಪಡೆದಳು. ಈ ಇಲಿನೆಯ ಒಬ್ಬ ಮಗನನ್ನು ಉಪದಾನವಿಯು ಮದುವೆಯಾಗಿ ಋಷ್ಯಂತ, ದುಷ್ಯಂತ, ಪ್ರವೀರ, ಅನಘ ಎಂಬ ನಾಲ್ಕು ಮಕ್ಕಳನ್ನು ಪಡೆದಳು. ದುಷ್ಯಂತನು ಕಣ್ವ ಋಷಿಯ ಸಾಕುಮಗಳಾದ ಶಕುಂತಲೆಯನ್ನು ವಿವಾಹವಾಗಿ ರಣಧೀರನಾದ ಭರತಚಕ್ರವರ್ತಿಯನ್ನು ಪಡೆದನು. ಈ ಭರತನಿಂದಲೇ ಈ ವಂಶದವರಿಗೆಲ್ಲ ಭಾರತರು ಎಂದು ಪ್ರಸಿದ್ಧಿಯಾಯಿತು.

ದುಷ್ಯಂತನು ಬೇಟೆಗೆ ಹೋದಾಗ ಕಣ್ವರ ಆಶ್ರಮದಲ್ಲಿದ್ದ ಶಕುಂತಲೆಯನ್ನು ಒಲಿದು, ಒಲಿಸಿ ಗಂಧರ್ವ ವಿವಾಹದಿಂದ ಪರಿಗ್ರಹಿಸಿದ್ದನು. ಮುಂದೆ ತನ್ನ

ರಾಜಧಾನಿಗೆ ಬಂದ ಬಳಿಕ ಜನಾಪವಾದದ ಭಯದಿಂದ ಶಕುಂತಲೆಯನ್ನು ಅಂತಃಪುರಕ್ಕೆ ಕರೆಸಿಕೊಳ್ಳಲಿಲ್ಲ. ಶಕುಂತಲೆಯು ಆಶ್ರಮದಲ್ಲಿಯೇ ಭರತಚಕ್ರವರ್ತಿಗೆ ಜನ್ಮವಿತ್ತಳು. ಮುಂದೆ ಆ ಮಗನನ್ನು ಕರೆದುಕೊಂಡು ದುಷ್ಯಂತ ಮಹಾರಾಜನ ಬಳಿಗೆ ಬಂದು ಆ ಮಗನನ್ನೂ ತನ್ನನ್ನೂ ಸ್ವೀಕರಿಸಬೇಕೆಂದು ಬೇಡಿಕೊಂಡಳು. ಆಗ ಲೋಕಾಪವಾದದ ಭಯದಿಂದ ಮಹಾರಾಜನು ಶಕುಂತಲೆಗೆ ''ನೀನು ನನ್ನ ಮಡದಿಯೂ ಅಲ್ಲ, ಇವನು ನನ್ನ ಮಗನೂ ಅಲ್ಲ'' ಎಂದು ಹಾರಿಕೆಯ ಉತ್ತರವಿತ್ತು ಅವರಿಬ್ಬರನ್ನೂ ಧಿಕ್ಕರಿಸಿದನು. ಆಗ ಹೀಗೆ ಆಕಾಶವಾಣಿಯಾಯಿತು.

''ಓ ! ದುಷ್ಯಂತ ಶಕುಂತಲೆಯು ಹೇಳಿದ ಮಾತು ಸತ್ಯ. ಇವನು ನಿನ್ನ ಔರಸ ಪುತ್ರ. ನೀನೇ ಈ ಮಗುವಿನ ನಿಜವಾದ ತಂದೆ. ತಾಯಿಯೆಂದರೆ ಒಂದು ಚರ್ಮದ ಚೀಲ. ವೀರ್ಯದಾನ ಮಾಡಿದವನೇ ನಿಜವಾದ ತಂದೆ. ಇವಳಲ್ಲಿ ಈ ಪುತ್ರನ ಉತ್ಪತ್ತಿಗೆ ವಾಸ್ತವಿಕ ಕಾರಣನೆಂದರೆ ನೀನು. ನೀನೇ ಈ ಮಗುವಿನ ತಂದೆ. ಶಕುಂತಲೆಯನ್ನು ಅವಮಾನಿಸಬೇಡ. ಇವರಿಬ್ಬರನ್ನೂ ನೀನು ಸ್ವೀಕರಿಸು. ಇವನು ನಿನ್ನನ್ನು ನಿನ್ನ ವಂಶವನ್ನೂ ಉದ್ಧರಿಸುವನು.''. ಈ ಆಕಾಶವಾಣಿಯನ್ನು ಕೇಳಿದ ಬಳಿಕ ದುಷ್ಯಂತನು ಭರತನನ್ನು ತನ್ನಪುತ್ರನೆಂದು ಸ್ವೀಕರಿಸಿದನು. ಆ ಭರತನು ಅಖಂಡ ಭೂಮಂಡಲದ ಏಕರಾಟ್ ಸಾಮ್ರಾಟನಾಗಿ ಧರ್ಮಶಾಸನವನ್ನು ಬಹುಕಾಲ ಪರ್ಯಂತರ ನಡೆಸಿದನು. ಈ ಭರತ ಮಹಾರಾಜನ ಅಂತಃಪುರದಲ್ಲಿಯ ತಾಯಿ ದಾಯಿಯರ ಅವಾಂತರದಿಂದ ಹುಟ್ಟಿದ ಮಕ್ಕಳೆಲ್ಲವೂ ಹಸುಳೆಯಿದ್ದಾಗಲೇ ಅಸುನೀಗಿ ನಾಶವಾದವು. ಆಗ ಮರುತ್‌ದೇವತೆಗಳು ಬೃಹಸ್ಪತಿಯ ಮಗನಾದ ಭರದ್ವಾಜನನ್ನು ತಂದು ಆ ಭರತನಿಗೆ ಒಪ್ಪಿಸಿ ''ಇವನನ್ನು ನಿನ್ನ ಮಗನನ್ನಾಗಿ ಮಾಡಿಕೋ'' ಎಂದು ಹೇಳಿದರು. ಅಂದಿನಿಂದ ಭರದ್ವಾಜನು ಭರತ ಚಕ್ರವರ್ತಿಯ ಮಗನಾದನು.

**ಋಷಿಗಳು :-** ಮಹಾತೇಜಸ್ವಿಯಾದ ಭರದ್ವಾಜನನ್ನು ಮರುತ್‌ದೇವತೆಗಳು ಭರತಪುತ್ರನನ್ನಾಗಿ ಮಾರ್ಪಡಿಸಿದ್ದು ಹೇಗೆ ?

**ಸೂತರು :-** ಉಶಿಜಮುನಿಯು ತನ್ನ ಪತ್ನಿಯಾದ ಮಮತೆಯು ಗರ್ಭಿಣಿಯಾದಾಗ ಸ್ವರ್ಗದಿಂದ ಭೂಲೋಕಕ್ಕೆ ಹೋದನು. ಆಗ ಅವನ ತಮ್ಮನಾದ ಬೃಹಸ್ಪತಿಯು ತನ್ನ ಅತ್ತಿಗೆಯನ್ನು ಕಾಮಿಸಿದನು. ಅವಳು ಇದು ಅಧರ್ಮ, ಅನ್ಯಾಯ, ಅನೀತಿ ಎಂದು ಜರಿದು ನಿಷೇಧಿಸಿದಳು. ಆದರೂ ಕಾಮಾಂಧನಾದ ದೇವಗುರು ಕೇಳದೆ ಬಲವಂತಮಾಡಿದಾಗ ಮಮತೆಯ ಗರ್ಭದಲ್ಲಿರುವ ತೇಜಃಪುಂಜವಾದ ಶಿಶುವು ಕಕ್ಕನನ್ನು ಧಿಕ್ಕರಿಸಿ ನುಡಿಯಿತು. ಇದರಿಂದ ಬೃಹಸ್ಪತಿಯ ಭೋಗಸಾಹಸವು ವ್ಯರ್ಥವಾಗಿ ನೆಲದ ಪಾಲಾಗಿ ಅಲ್ಲಿಯೇ ಒಂದು ಮಗು ಉತ್ಪನ್ನವಾಯಿತು. ಅದನ್ನು ಕಂಡು ಮಮತೆಯು ಬೃಹಸ್ಪತಿಗೆ ''ಭರಸ್ವೈನಂ'' ''ಬ್ರಹಸ್ಪತಿಯೇ, ಇದು ನಿನ್ನ ಮಗು. ಇದನ್ನು ನೀನೇ ರಕ್ಷಣೆಮಾಡು. ನಾನು ನನ್ನ ಮನೆಗೆ ಹೊರಟುಹೋಗುತ್ತೇನೆ'' ಎಂದು ಹೇಳಿ ತನ್ನ ಮನೆಗೆಹೋದಳು. ''ಭರಸ್ವ'' ಎಂದು ಮಮತೆ ಹೇಳಿದ್ದರಿಂದ

ಅವನಿಗೆ ಭರದ್ವಾಜ ಎಂದು ಹೆಸರು ಬಂದಿತು. ಮಮತೆಯು ಅದೇ ಹುಟ್ಟಿದ ಕೂಸನ್ನು ಬಿಟ್ಟುಹೋದ ಬಳಿಕ ಬೃಹಸ್ಪತಿಯೂ ಕೂಡ ಆ ಮಗುವನ್ನು ಅಲ್ಲಿಯೇ ಬಿಟ್ಟು ತಾನೂ ಅಲ್ಲಿಂದ ಹೋಗಿಬಿಟ್ಟನು. ಹೀಗೆ ತಾಯಿ ತಂದೆ ಇಬ್ಬರೂ ತೊರೆದು ಹೋದದ್ದರಿಂದ ಆ ಮಗು ಅನಾಥವಾಗಿ ಅಲ್ಲಿಯೇ ಬಿದ್ದಿತು. ಅದನ್ನು ನೋಡಿ ಮರುತ್‌ದೇವತೆಗಳಿಗೆ ಕರುಣೆ ಬಂದಿತು. ಅವರು ಆ ಕೂಸನ್ನು ಕನಿಕರದಿಂದ ಎತ್ತಿಕೊಂಡರು. ಮನೆಯಲ್ಲಿಟ್ಟು ರಕ್ಷಿಸಿದರು.

ಇದೇ ಕಾಲದಲ್ಲಿ ಭೂಲೋಕದ ಭರತಖಂಡದಲ್ಲಿ ಭರತಚಕ್ರವರ್ತಿಯು ಮಕ್ಕಳಾಗಬೇಕು ಎಂಬ ಹೆಬ್ಬಯಕೆಯಿಂದ ಸಂತಾನಪ್ರದವಾದ ಅನೇಕ ಯಜ್ಞ ಯಾಗಗಳನ್ನು ಬಹುಕಾಲದಿಂದ ಮಾಡುತ್ತಲಿದ್ದನು. ಎಷ್ಟು ಯಜ್ಞಮಾಡಿದರೂ ಅವನಿಗೆ ಸಂತತಿಯಾಗಲಿಲ್ಲ. ಕೊನೆಗೆ ಅವನು ಮಕ್ಕಳ ಸಲುವಾಗಿ ಮರುತ್ಸೋಮ ಎಂಬ ಯಜ್ಞವನ್ನು ಪ್ರಾರಂಭಿಸಿದನು. ಈ ಅವನ ಯಾಗದಿಂದ ಸಂತೋಷವಾಯಿತು ಮರುದ್ದೇವತೆಗಳಿಗೆ. ಅವರು ಬೃಹಸ್ಪತಿಯ ಔರಸಪುತ್ರನಾದ ಭರದ್ವಾಜನನ್ನು ತಂದು ಭರತಚಕ್ರವರ್ತಿಗೆ "ಇಕೋ ನಿನ್ನ ಯಜ್ಞಕ್ಕೆ ನಾವು ಈ ಮಗುವನ್ನು ಫಲವಾಗಿ ಕೊಟ್ಟಿದ್ದೇವೆ. ಇವನನ್ನೇ ನಿನ್ನ ಪುತ್ರನನ್ನಾಗಿ ಮಾಡಿಕೋ " ಎಂದು ಹೇಳಿದರು.

## ಭರತ ಚಕ್ರವರ್ತಿಗೆ ದೇವದತ್ತಪುತ್ರ ಭರದ್ವಾಜ

ಅಂಥ ದಿವ್ಯತೇಜೋಭಾಸುರನಾದ ಶ್ರೇಷ್ಠ ಬಾಲಕನನ್ನು ಮರುದ್ಗಣದವರು ತನಗೆ ಕೊಡಮಾಡಿದ್ದರಿಂದ ಭರತರಾಜನಿಗೆ ಅತ್ಯಾನಂದವಾಯಿತು. ತಾನು ಇಷ್ಟು ದಿನ ಮಾಡಿದ ಯಜ್ಞಯಾಗಗಳೆಲ್ಲವೂ ಸಾರ್ಥಕವಾದವು ಎಂಬ ಕೃತಾರ್ಥಭಾವನೆ ಅವನಲ್ಲಿ ಬೇರೂರಿತು. ಸಂತಸದಿಂದ ಆ ಮಗುವನ್ನು ತನ್ನ ಪುತ್ರನನ್ನಾಗಿ ಮಾಡಿಕೊಂಡು ಸಂಭ್ರಮದಿಂದ ಬೆಳೆಸಿದನು. ಈ ಭರದ್ವಾಜನು ಮಗನಾಗಿ ಬರುವದಕ್ಕಿಂತ ಮೊದಲು ಭರತಚಕ್ರವರ್ತಿಗೆ ಪುತ್ರರು ಹುಟ್ಟಿದ್ದರೂ ಅಂತಃಪುರದಲ್ಲಿಯ ಅವ್ಯವಸ್ಥೆಯಿಂದ ಅದೆಲ್ಲವೂ 'ವಿತಥ'ವಾಗಿದ್ದಿತು ಎಂದರೆ ವ್ಯರ್ಥವಾಗಿದ್ದಿತು. ಆದುದರಿಂದ ಭರತನ ತರುವಾಯ ಈ ಭರದ್ವಾಜ ಮುನಿಗೆ 'ವಿತಥ ರಾಜಕುಮಾರ' ಎಂದೇ ಹೆಸರಾಯಿತು.

ಈ ಭರದ್ವಾಜನು ಬ್ರಾಹ್ಮಣನಾಗಿ ಹುಟ್ಟಿ ಕ್ಷತ್ರಿಯನಾಗಿ ಬೆಳೆದದ್ದರಿಂದ ಅವನ ವಂಶದವರು ಹಲವರು ಬ್ರಾಹ್ಮಣರಾದರೆ ಕೆಲವರು ಕ್ಷತ್ರಿಯರು. ಅವರಿಗೆ ದ್ವಾಮುಷಾಯಣರು ಎಂದು ಕರೆಯುವರು. ದ್ವಾಮುಷಾಯಣ ಎಂದರೆ ಬ್ರಾಹ್ಮಣ ಕ್ಷತ್ರಿಯ ಎರಡೂ ಕುಲಗಳಿಗೆ ಸಂಬಂಧಿಸಿದವು ಎಂದು ಅರ್ಥ. ವಿತಥ ರಾಜನಿಗೆ ಪಟ್ಟಾಭಿಷೇಕಮಾಡಿ ಭರತಚಕ್ರವರ್ತಿಯು ಸ್ವರ್ಗವನ್ನು ಸೇರಿದನು. ವಿತಥನು ಅರ್ಥಾತ್ ಭರದ್ವಾಜನು ತನ್ನ ಮಗನಾದ ಭುವಮನ್ಯುವಿಗೆ ರಾಜ್ಯಭಾರವನ್ನು ಒಪ್ಪಿಸಿ ಸದ್ಗತಿಯನ್ನು ಹೊಂದಿದನು. ಭುವಮನ್ಯುವಿಗೆ ಬೃಹತ್‌ಕ್ಷತ್ರ, ಮಹಾವೀರ್ಯ, ನರ, ಗರ್ಗ ಎಂಬ ಮಹಾಪರಾಕ್ರಮಶಾಲಿಗಳಾದ ನಾಲ್ಕು ಮಕ್ಕಳು. ನರನಿಗೆ ಸಂಕೃತಿ, ಸಂಕೃತಿಗೆ ಮಹಾಯಶ, ರಂತಿದೇವ ಎಂಬ ಇಬ್ಬರು

ಮಕ್ಕಳು ಜನಿಸಿದರು. ಗರ್ಗನಿಗೆ ಶಿಬಿಚಕ್ರವರ್ತಿಯು ಪುತ್ರನಾಗಿ ಜನಿಸಿದನು. ಶಿಬಿಯಿಂದ ಮುಂದೆ ಗರ್ಗ ಮನೆತನದವರಿಗೆಲ್ಲ ಶೈಬ್ಯರು ಎಂದು ಹೆಸರಾಯಿತು. ಇವರೆಲ್ಲರೂ ಕ್ಷತ್ರಿಯವರ್ಣ ಸಂಬಂಧವುಳ್ಳ ಬ್ರಾಹ್ಮಣರು. ಈ ವಂಶದ ಆಹಾರ್ಯ ಎಂಬ ರಾಜನಿಗೆ ''ಉರುಕ್ಷವ'' ಎಂಬ ಮಗನು ಹುಟ್ಟಿದನು. ಉರುಕ್ಷವನಿಗೆ ''ವಿಶಾಲಾ'' ಎಂಬ ಮಡದಿಯಲ್ಲಿ 'ತ್ರಪಣ' 'ಪುಷ್ಕರಿ ' 'ಕವಿ' ಎಂಬ ಮೂರು ಮಕ್ಕಳು. ಇವರಿಗೆಲ್ಲ 'ಉರುಕ್ಷವ' ಎಂದೇ ಹೆಸರು. ಇವರೆಲ್ಲರೂ ಬ್ರಾಹ್ಮಣ್ಯವನ್ನು ಪಡೆದರು. ಇವರಿಗೆ ಮಹರ್ಷಿಗಳು ಎಂದು ಆ ಕಾಲದಲ್ಲಿ ಗೌರವ ಇದ್ದಿತು. ಹೀಗೆ ಗರ್ಗರು, ಸಂಕೃತಿಗಳು ಮತ್ತು ಕವಿಯ ವಂಶದ ಕಾವ್ಯರು, ಈ ಮೂರುಕುಲದವರು ಕ್ಷತ್ರಿಯಧರ್ಮ ಸಹಿತರಾದ ಬ್ರಾಹ್ಮಣರು.

ಬೃಹತ್ ಕ್ಷತ್ರನ ವಂಶವನ್ನು ಹೇಳುತ್ತೇನೆ ಕೇಳಿರಿ - ಭರದ್ವಾಜನ ಮೊಮ್ಮಗನಾದ ಬೃಹತ್ ಕ್ಷತ್ರನಿಗೆ ಹಸ್ತಿ ಎಂಬ ಒಬ್ಬ ಮಗನು ಇದ್ದನು. ಇವನೇ ಹಸ್ತಿನಾವತಿ ಪಟ್ಟಣವನ್ನು ಮೊಟ್ಟಮೊದಲು ನಿರ್ಮಿಸಿದನು. ಹಸ್ತಿರಾಜನಿಗೆ 'ಅಜಮೀಢ' 'ದ್ವಿಮೀಢ ' 'ಪುರುಮೀಢ' ಎಂದು ಮೂವರು ಮಕ್ಕಳು. ಇವರು ಮೂವರೂ ಕೀರ್ತಿಶಾಲಿಗಳು. ಹಿರಿಯನಾದ ಆಜಮೀಢನಿಗೆ 'ನೀಲಿನೀ' 'ಧೂಮಿನೀ' 'ಕೇಶಿನೀ' ಎಂಬ ಮೂವರು ಧರ್ಮಪತ್ನಿಯರು ಇದ್ದರು. ಇವರಿಂದಲೇ ಮುಂದೆ 'ಕುರುಕುಲದ' ಅಭಿವೃದ್ಧಿ.

## ಮುನಿ ಭರದ್ವಾಜನ ಅನುಗ್ರಹದಿಂದ ರಾಜರ ವಂಶವಿಸ್ತಾರ

ಇವರ ಮಕ್ಕಳೆಲ್ಲರೂ ದೇವತೆಗಳಂತೆ ದಿವ್ಯತೇಜೋಭಾಸುರರೂ ಮಹಾ ಧಾರ್ಮಿಕರೂ ಆಗಿದ್ದರು. ಇವರೆಲ್ಲ ಮಕ್ಕಳು ಅಜಮೀಢನಿಗೆ ತಪಸ್ಸನ್ನುಮಾಡಿ ಮಾಡಿ ಮುದುಕನಾದ ಬಳಿಕ ಭಾರಧ್ವಾಜ ಮುನಿಯ ಅನುಗ್ರಹದಿಂದ ಜನಿಸಿದರು. ಆ ಪುತ್ರಜನನದ ವಿವರ. ಅಜಮೀಢನ ಪತ್ನಿಯಾದ ಕೇಶನಿಯಲ್ಲಿ 'ಕಣ್ವ' ಎಂಬ ಕುಮಾರನು ಜನಿಸಿದನು. ಕಣ್ವನ ಮಗ ಮೇಧಾತಿಥಿ. ಈ ಮನೆತನದ ಬ್ರಾಹ್ಮಣರಿಗೆ ಮುಂದೆ 'ಕಾಣ್ವಾಯನ'ಎಂಬ ಹೆಸರು ಬಂದಿತು. ಅಜಮೀಢ ರಾಜನಿಗೆ 'ಧೂಮಿನಿ' ಎಂಬ ಪತ್ನಿಯಲ್ಲಿ 'ಬ್ರಹದ್ಧನು' ಎಂಬ ಕುಮಾರನು ಜನಿಸಿದನು. ಮುಂದೆ ಇದೇ ಮನೆತನದಲ್ಲಿ ಬೃಹಂತ, ಬೃಹನ್ಮನ, ಬೃಹತ್‌ಧನ, ಬೃಹದಿಷು, ಜಯದ್ರಥ, ಅಶ್ವಜಿತ್, ಸೇನಜಿತ್, ಎಂಬ ರಾಜಮಹಾರಾಜರು ಆಗಿ ಆಳಿದರು.

ಸೇನಜಿತ್ ರಾಜನಿಗೆ ರುಚಿರಾಶ್ವ, ಕಾವ್ಯ, ಬೃಹದ್ರಥ, ವತ್ಸ ಎಂದು ನಾಲ್ಕು ಜನ ಮಕ್ಕಳು. ಇವರೆಲ್ಲರೂ ಲೋಕವಿಖ್ಯಾತರು. ಕೊನೆಯವನಾದ ವತ್ಸನು ಅವಂತೀ ದೇಶಕ್ಕೆ ಅಧಿಪತಿಯಾಗಿ ಅವಂತೀ ಎಂಬ ರಾಜಧಾನಿಯನ್ನು ನಿರ್ಮಿಸಿದನು. ಈ ವತ್ಸನ ವಂಶದವರೆ ಪರಿವತ್ಸಕರು ಎಂದು ಪ್ರಸಿದ್ಧರು. ಸೇನಜಿತನ ಹಿರಿಯ ಮಗನಾದ ರುಚಿರಾಶ್ವನಿಗೆ ಪೃಥುಸೇನ ಎಂಬ ಕೀರ್ತಿಶಾಲಿಯಾದ ಮಗನಿದ್ದನು. ಪೃಥುಸೇನನ ಮಗನೇ '' ಪೌರ''. ಅವನ ಮಗ ''ನೀಪ '' ನೀಪನಿಗೆ ನೂರುಜನ ತೇಜಸ್ವಿಪುತ್ರರು. ನೀಪರು ಎಂದೇ ಅವರ ಪ್ರಖ್ಯಾತಿ. ಅವರಲ್ಲಿ ಆ ಕುಲಕ್ಕೆ ಕೀರ್ತಿ ತಂದವ ಶ್ರೀ ಮಾನ

ಎಂಬ ಹೆಸರಿನವ. ಸೇನಜಿತನ ಎರಡನೇ ಮಗನಾದ ಕಾವ್ಯನಿಗೆ ಯುದ್ಧಪ್ರಿಯನಾದ ಸಮರ ಎಂಬ ಮಗನು ಹುಟ್ಟಿದನು. ಸಮರನಿಗೆ ಪಾರ, ಸಂಪಾರ, ಸದಶ್ವ ಎಂಬ ಮೂವರು ಮಕ್ಕಳು. ಪಾರ ಪುತ್ರನು ಪೃಥು. ಪೃಥುವಿಗೆ ಸುಕೃತ, ಸುಕೃತನಿಗೆ ವಿಭ್ರಾಜ. ವಿಭ್ರಾಜನಿಗೆ ಅಣುಹ ಎಂಬುವವನು ಮಗನಾದನು. ಈ ಅತ್ಯಂತ ಕೀರ್ತಿಶಾಲಿಯಾದ ಈ ಅಣುಹನಿಗೆ ಶುಕಾಚಾರ್ಯರ ಮಗಳಾದ ಕೃತ್ವಿ ಎಂಬ ಕನ್ಯೆಯನ್ನು ಧಾರೆಯೆರೆದು ಕೊಟ್ಟಿತು. ಈ ಅಣುಹನಿಗೆ ಬ್ರಹ್ಮದತ್ತ ಎಂಬ ಮಗನು ಹುಟ್ಟಿದನು. ಬ್ರಹ್ಮದತ್ತನಿಗೆ ಯುಗದತ್ತ ಎಂಬ ಮಗನಾದನು. ವಿಭ್ರಾಜ ಮಹಾರಾಜನು ತನ್ನ ಪುಣ್ಯ ಬಲದಿಂದ ಮತ್ತೆ ವಿಶ್ವಕ್‌ಸೇನ ಎಂಬ ಮಹಾರಾಜನಾಗಿ ಹುಟ್ಟಿದನು. ವಿಶ್ವಕ್‌ಸೇನನ ಮಗನೇ ಉದಕ್‌ಸೇನ. ಅವನ ಪುತ್ರ ಭಲ್ಲಾಟ. ಭಲ್ಲಾಟನ ಮಗನೇ ಜನಮೇಜಯ. ಈ ಜನಮೇಜಯ ಮಹಾರಾಜನಿಗೋಸ್ಕರವಾಗಿಯೇ ಉಗ್ರಾಯುಧನು ನೀಪರು ಎಂಬ ರಾಜಕುಮಾರರನ್ನೆಲ್ಲ ಸಂಹಾರಮಾಡಿದನು.

**ಋಷಿಗಳು :-** ಈ ಉಗ್ರಾಯುಧನು ಯಾರು ? ಅವನ ವಂಶ ಯಾವದು ? ನೀಪ ನೃಪರನ್ನೆಲ್ಲ ಅವನು ಸಂಹರಿಸಲು ಕಾರಣವೇನು ?

**ಸೂತಮುನಿ :-** ಸೂರ್ಯವಂಶದಲ್ಲಿ ಜನಿಸಿದ ಉಗ್ರಾಯುಧನು ಮಹಾತಪಸ್ವಿ. ಅವನು ಅರಣ್ಯದ ಒಂದು ಆಶ್ರಮದಲ್ಲಿ ಮೋಟುಮರದಂತೆ ಆಚೀಚೆ ಅಲುಗಾಡದೆ ನಿಂತುಕೊಂಡು ಒಂದುಸಾವಿರವರ್ಷ ತಪಸ್ಸುಮಾಡಿದನು. ಅವನ ತಪೋಮಹಿಮೆಯನ್ನು ಕಂಡು ಕೇಳಿ ತಿಳಿದ ಜನಮೇಜಯ ರಾಜನು ಅವನ ಬಳಿ ಬಂದು ಸೇವೆಮಾಡಿ ಸಂತೋಷಪಡಿಸಿದನು. ಸಂತುಷ್ಟನಾದ ಉಗ್ರಾಯುಧನು ಜನಮೇಜಯ ರಾಜನಿಗೆ ರಾಜ್ಯಾಧಿಕಾರವನ್ನು ಕೊಡಿಸುವದಾಗಿ ಆಶ್ವಾಸನೆಯಿತ್ತನು. ಅದಕ್ಕಾಗಿ ಆ ಕಾರ್ಯದಲ್ಲಿ ಅಧಿಕಾರದ ಗದ್ದುಗೆಯನ್ನು ಆಕ್ರಮಿಸಿದ ನೀಪರಾಜರನ್ನು ಕರೆದು ಜನಮೇಜಯ ರಾಜನಿಗೆ ರಾಜ್ಯವನ್ನುಕೊಡಲು ಹೇಳಿದನು. ಸಾಮೋಪಾಯದಿಂದ ಅವರು ದಾರಿಗೆ ಬಾರದಂತಾದರು. ಆಗ ಇಬ್ಬರೂ ಕೂಡಿ ದಂಡೋಪಾಯವನ್ನು ಕೈಕೊಂಡು ನೀಪರನ್ನು ಸಂಹರಿಸತೊಡಗಿದರು. ತಿರುಗಿ ಪ್ರಹಾರಮಾಡಬಂದ ಆ ನೀಪ ನೃಪಾಲರಿಗೆ ಉಗ್ರಾಯುಧನು ''ನೀವು ನನ್ನ ಮಾತನ್ನು ಕೇಳಲಿಲ್ಲ. ಆದುದರಿಂದ ನಿಮ್ಮೆಲ್ಲರನ್ನೂ ಯಮನು ಕರೆದೊಯ್ಯಲಿ'' ಎಂದು ಶಾಪ ಕೊಟ್ಟನು. ಮಹಾತಪಸ್ವಿಯಾದ ಉಗ್ರಾಯುಧನು ಶಾಪಾಕ್ಷರಗಳನ್ನು ಉಚ್ಚರಿಸುವ ದೊಂದೇ ತಡ. ಯಮಧರ್ಮನು ತನ್ನ ದೂತರೊಂದಿಗೆ ಬಂದು ಆ ನೀಪರನ್ನೆಲ್ಲ ಯಮಲೋಕಕ್ಕೆ ಸೆಳೆದು ಒಯ್ಯತೊಡಗಿದನು. ಆ ಭೀಕರ ದೃಶ್ಯವನ್ನು ಕಂಡು ಉಗ್ರಸೇನನಿಗೆ ಕರುಣೆ ಬಂದಿತು. ''ವ್ಯರ್ಥವಾಗಿ ಸಾಯುತ್ತಿರುವ ಈ ನೀಪರಾಜರನ್ನೆಲ್ಲ ಈ ಯಮದೂತರಿಂದ ನೀನು ಉಳಿಸು ಎಂದು ಅವನು ಜನಮೇಜಯ ರಾಜನಿಗೆ ಆಜ್ಞೆಮಾಡಿದನು.

ಉಗ್ರಾಯುಧನ ಆಜ್ಞೆಗೆ ತಲೆಬಾಗಿ ಜನಮೇಜಯನು ನೀಪರ ರಕ್ಷಣೆಗಾಗಿ ಟೊಂಕಕಟ್ಟಿದನು. ನಿರ್ದಯೆಯಿಂದ ನೀಪರನ್ನೆಲ್ಲ ಸೆಳೆದೊಯ್ಯುತ್ತಿರುವ

ಯಮನನ್ನು ಆಹ್ವಾನಿಸಿ ಯುದ್ಧವನ್ನು ಪ್ರಾರಂಭಮಾಡಿದನು. ಅನೇಕ ನರಲೋಕದ ವೀರರೊಡನೆ ಒಡಗೂಡಿ ನೀಪರನ್ನು ಒಯ್ಯಲು ಬಂದ ಯಮ ಹಾಗೂ ಯಮದೂತರೊಡನೆ ಹಣಾಹಣಿಯಾಗಿ ಹೋರಾಡಿ ವೀರನಾದ ಜನಮೇಜಯನು ನೀಪರನ್ನೆಲ್ಲ ರಕ್ಷಿಸಿದ. ಮೃತ್ಯು, ಮಾರಿ, ರೋಗ, ಯಮದೂತ, ಮುಂತಾದ ಪರಿವಾರಸಹಿತವಾಗಿ ಯಮನನ್ನು ಹಿಮ್ಮೆಟ್ಟಿಸಿ, ಜಯಿಸಿ, ಅವರಿಂದ ನೀಪರಾಜರನ್ನೆಲ್ಲ ಉಳಿಸಿ ಉಗ್ರಾಯುಧ ಮುನಿಗೆ ಒಪ್ಪಿಸಿದನು. ಇದರಿಂದ ಯಮಧರ್ಮನಿಗೂ ಅತ್ಯಂತ ಸಂತೋಷವಾಯಿತು. ಪ್ರಸನ್ನನಾದ ಆ ಮೃತ್ಯುದೇವತೆಯು ಅವರೆಲ್ಲರಿಗೂ ಮೋಕ್ಷಸಾಧಕವಾದ ದಿವ್ಯಜ್ಞಾನೋಪದೇಶವನ್ನು ಮಾಡಿದನು. ಯಮನಿಂದ ಉಪದೇಶಪಡೆದ ಅವರೆಲ್ಲರೂ ಪರತತ್ವವನ್ನು ತಿಳಿದು ಅದಕ್ಕೆ ಉಚಿತವಾದ ಧ್ಯಾನ, ಉಪಾಸನೆಗಳನ್ನುಮಾಡಿ ಶ್ರೀ ಕೃಷ್ಣಪರಮಾತ್ಮನ ಸಾನ್ನಿಧ್ಯವನ್ನು ಪಡೆದರು. ಉಗ್ರಾಯುಧನ ಈ ತಪೋಮಹಿಮೆಯನ್ನು ಕೇಳಿ ಅರಿತುಕೊಂಡವರಿಗೆ ಅಪಮೃತ್ಯುವಿನ ಅಂಜಿಕೆಯಿಲ್ಲ.

ಅಜಮೀಢ ಮಹಾರಾಜನಿಗೆ ಧೂಮಿನಿ ಎಂಬ ಮತ್ತೊಬ್ಬ ಹೆಂಡತಿಯಲ್ಲಿ 'ಯವೀನರ' ಎಂಬ ಮತ್ತೊಬ್ಬ ಪುತ್ರನು ಹುಟ್ಟಿದನು. ಮಹಾಪಂಡಿತನಾದ ಈ ಯವೀನರನ ವಂಶದಲ್ಲಿ ಮುಂದೆ ಧೃತಿಮಂತ, ಸತ್ಯಧ್ಯುತಿ, ಧೃಢನೇಮಿ ಸುಧರ್ಮ, ಪ್ರತಾಪವಂತ, ಮಹಾಪೌರವ, ರುಕ್ಮರಥ, ಸುಪಾರ್ಶ್ವ, ಸುಮತಿ, ಸನ್ನತಿ, ಕೃತ ಮುಂತಾದ ಪುಣ್ಯಾತ್ಮರೂ ಪರಾಕ್ರಮಶಾಲಿಗಳೂ ಆದ ಅನೇಕ ರಾಜಮಹಾರಾಜರು ಒಬ್ಬರಾದ ಮೇಲೆ ಒಬ್ಬರು ಜನಿಸಿ ಕ್ರಮೇಣ ರಾಜ್ಯವಾಳಿ ಬಾಳಿ, ಬೆಳಗಿದರು. ಕೊನೆಯವನಾದ ಕೃತ ಮಹಾರಾಜನು ಕುಶಲನ ಮಗನಾದ ಹಿರಣ್ಯನಾಭಿಯ ಶಿಷ್ಯನಾಗಿ ಮಹಾಪಂಡಿತನು ಎನಿಸಿದನು. ವೇದವಿದ್ವಾಂಸನಾದ ಈ ಕೃತನು ಸಾಮವೇದದ ಸಂಹಿತೆಗಳನ್ನು ಇಪ್ಪತ್ತುನಾಲ್ಕು (೨೪) ಭಾಗವಾಗಿ ವಿಂಗಡಿಸಿದನು. ಅವುಗಳಿಗೆ **'ಪ್ರಾಚ್ಯಸಾಮ'** ಎಂಬ ಹೆಸರು ಬಂದಿತು. ಸಾಮವೇದಾಭ್ಯಾಸಿಗಳಿಗೆ ಆ ವಿಭಾಗದ ಮೂಲಪುರುಷನಾದ ಕೃತರಾಜನಿಂದ **'ಕಾರ್ತರು'** ಎಂಬ ಹೆಸರು ಲೋಕದಲ್ಲಿ ಪ್ರಖ್ಯಾತವಾಗಿದೆ. ಈ ಕೃತನ ಮಗನಾದ ಉಗ್ರಾಯುಧನು ಪೌರವವಂಶವನ್ನು ಬೆಳೆಸಿದನು. ಪೃಥಕನ ತಂದೆಯಾದ ಪಾಂಚಾಲಪತಿ ನೀಲರಾಜನನ್ನು ಸಂಹರಿಸಿ ಮಹಾಪರಾಕ್ರಮಶಾಲಿಯಾಗಿ ಮಹೀಮಂಡಲದಲ್ಲಿ ಮೆರೆದನು.

ಈ ಉಗ್ರಾಯುಧನಿಗೆ ''ಕ್ಷೇಮ'' ಎಂಬ ಮಗನಿದ್ದನು. ಆ ಕ್ಷೇಮನಿಂದ ''ಸುನೀಥ'' ಸುನೀಥನಿಗೆ ''ನೃಪಂಜಯ'' ನೃಪಂಜನಿಗೆ ''ವೀರಥ'' ಎಂಬ ಮಕ್ಕಳು ಆದರು. ಇವರೆಲ್ಲರೂ ಉರುವಿನ ವಂಶದಲ್ಲಿ ಹುಟ್ಟಿ ಬೆಳೆದು ಬೆಳಗಿದ ರಾಜರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತನೆಯ ಅಧ್ಯಾಯ ಮುಗಿದುದು*

—o—

## ನೀಲಿನೀ ಅಜಮೀಢರಿಂದ ಕುರುಕುಲದ ವಿಸ್ತಾರ | ಅಧ್ಯಾಯ - ೫೧

**ಸೂತ ಉವಾಚ**

**(೨) ಅಜಮೀಢಸ್ಯ ನೀಲಿನ್ಯಾಂ ನೀಲಃ ಸಮಭವನ್ನೃಪಃ ।**
**ನೀಲಸ್ಯ ತಪಸೋಗ್ರೇಣ ಸುಶಾಂತಿರುದಪದ್ಯತ ।**

ಅಜಮೀಢ ಮಹಾರಾಜನ ಮೂರನೆಯ ರಾಣಿ ನೀಲಿನಿಯಲ್ಲಿ ನೀಲ ಎಂಬ ಮಗನು ಹುಟ್ಟಿದನು. ಆ ನೀಲನಿಂದ ಸುಶಾಂತಿ, ಸುಶಾಂತಿಯ ಮಗ ಪುರುಜಾನು ಪುರಾಜಾನುವಿಗೆ ಪೃಥು ಎಂಬ ಮಗನು ಹುಟ್ಟಿದನು. ಪೃಥುವಿಗೆ ಭದ್ರಾಶ್ವ ಎಂಬ ಪುತ್ರನು ಜನಿಸಿದನು. ಭದ್ರಾಶ್ವ ಮಹಾರಾಜನಿಗೆ ಮುದ್ಗಲ, ಜಯ, ಬೃಹದಿಷು, ಜಮೀನರ. ಕಪಿಲ. ಇವರು ಆಳುವ ದೇಶಗಳಿಗೆ ಪಾಂಚಾಲ ಎಂಬ ಹೆಸರು ಬಂದಿತು. ಪಂಚ ಎಂದರೆ ಐದು, ಅಲಮ್ ಎಂದರೆ ಶಕ್ತಿ ಈ ಐವರು ರಾಜಕುಮಾರರು ತಮ್ಮ ಶಕ್ತಿಯ ಬಲದಿಂದ ಆಳಿದ ಐದು ನಾಡುಗಳೂ ಕೂಡಿ ಪಾಂಚಾಲರಾಷ್ಟ್ರವಾಯಿತು. ಅಲ್ಲಿಯ ಅರಸರೂ **ಪಾಂಚಾಲ** ಎಂದು ಕರೆಯಲ್ಪಟ್ಟರು. ಮುದ್ಗಲಮುನಿಯ ಮಕ್ಕಳು **ಮೌದ್ಗಲ್ಯ** ಎಂಬ ಹೆಸರು. ಇವರು ಕ್ಷತ್ರ ಧರ್ಮಸಹಿತವಾದ ಬ್ರಾಹ್ಮಣರು. ಕಾಣ್ವಮುದ್ಗಲ ಎಂದು ಹೆಸರು ಬಂದಿತು. ಮುದ್ಗಲನಿಗೆ ಬ್ರಹ್ಮಿಷ್ಠ ಎಂಬ ಮಗನು ಹುಟ್ಟಿದನು. ಅವನ ಮಗ ಇಂದ್ರಸೇನ. ಇಂದ್ರಸೇನನಿಗೆ ವಿಂಧ್ಯಾಶ್ವ ಎಂಬ ಮಗನು ಜನಿಸಿದನು.

ವಿಂಧ್ಯಾಶ್ವನಿಗೆ ಮೇನಕೆಯಲ್ಲಿ ದೀವೋದಾಸ, ಅಹಲ್ಯಾ. ಶರದ್ವಂತನ ಮಡದಿಯಾದ ಅಹಲ್ಯೆಯು ಶತಾನಂದ ಎಂಬ ಮಗನನ್ನು ಪಡೆದಳು. ಆ ಶತಾನಂದನಿಗೆ ಸತ್ಯಧೃತಿ ಎಂಬ ಧರ್ಮವೇದದಲ್ಲಿ ನಿಪುಣನಾದ ಮಗನು ಹುಟ್ಟಿದನು. ಧಾರ್ಮಿಕನಾದ ಈ ಸತ್ಯಧೃತಿಯು ಒಬ್ಬ ಅಪ್ಸರಸ್ತ್ರೀಯನ್ನು ನೋಡಿ ಮನಸ್ಸು ಚಂಚಲವಾಗಿ ನೀರಿನಲ್ಲಿಯೇ ಅವನ ಶಕ್ತಿಪಾತವಾಯಿತು. ಅದರಿಂದ ಆ ಸರೋವರದಲ್ಲಿಯೇ ಒಂದು ಗಂಡು ಮಗು ಒಂದು ಹೆಣ್ಣು ಮಗು ಉದಯಿಸಿ ನಿಂತವು. ಒಂದು ದಿನ ಶಂತನು ಮಹಾರಾಜನು ಅದೇ ಕಾಡಿಗೆ ಬೇಟೆಯಾಡಲು ಹೋದಾಗ ಸರೋವರದಲ್ಲಿ ಆಟವಾಡುವ ಎರಡು ಚಿಕ್ಕಮಕ್ಕಳನ್ನು ಕಂಡು ಆ ಮಕ್ಕಳ ಮೇಲೆ ಅವನಿಗೆ ಮರುಕ ಮೂಡಿತು. ಕನಿಕರದಿಂದ ಅವೆರಡೂ ಮಕ್ಕಳನ್ನು ಎತ್ತಿಕೊಂಡು ಮನೆಗೆ ಬಂದನು.

ಇದೆಲ್ಲವೂ ಶರಧ್ವಂತನ ಪುತ್ರ ಸಂತತಿ. ಇವರಿಗೆ ಗೌತಮರು ಎಂದು ಹೆಸರು. ಇನ್ನು ಮುಂದೆ ದಿವೋದಾಸನ ಸಂತತಿಯನ್ನು ಹೇಳುತ್ತೇನೆ ಕೇಳಿರಿ. ದೀವೋದಾಸನಿಗೆ ಮಿತ್ರಯು ಎಂಬ ಮಗನೂ ಮೈತ್ರಾಯನ ಎಂಬ ಮತ್ತೊಬ್ಬ ಮಗನೂ ಹುಟ್ಟಿದರು. ಮಿತ್ರಯುವಿನ ಮಗನೇ ಮೈತ್ರೇಯ. ಇವರೆಲ್ಲರೂ

ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಸಂಬಂಧಉಳ್ಳವರು. ಮೈತ್ರೇಯನಿಂದ ಮುಂದೆ ಈ ವಂಶದಲ್ಲಿ ಚೈದ್ಯವರ, ವಿದ್ವಾನ್, ಸುಹಾಸ, ಸೋಮಕ, ಜಂತು ಮುಂತಾದ ರಾಜರು ಹುಟ್ಟಿ ರಾಜ್ಯವಾಳಿದರು.

ಕೊನೆಯವನಾದ ಜಂತು ಅಲ್ಪಾಯುಷ್ಕನಾದುದರಿಂದ ಸೋಮಕ ರಾಜನು ತಪಸ್ಸು ಮಾಡಿ ನೂರುಜನ ಮಕ್ಕಳನ್ನು ಪಡೆದನು. ಅಜಮೀಢ ಮಹಾರಾಜನ ಮತ್ತೊಬ್ಬ ಮಹಾರಾಣಿ ಧೂಮಿನಿಯು ಮಕ್ಕಳಾಗಬೇಕೆಂದು ನೂರುವರ್ಷ ಉಗ್ರತಪಸ್ಸನ್ನು ಮಾಡಿದಳು. ಆ ಕಾಲದಲ್ಲಿ ಹೋಮಶೇಷವಾದ ಅನ್ನವನ್ನು ಮಾತ್ರ ಊಟ ಮಾಡಿ ಅಗ್ನಿಶಾಲೆಯಲ್ಲಿಯೇ ದರ್ಭೆಗಳ ಮೇಲೆಯೇ ಆ ಪತಿವ್ರತೆಯು ಮಲಗುತ್ತಿದ್ದಳು. ನಿರಂತರವೂ ನಡೆದ ಹೋಮಹವನಗಳ ಹೊಗೆಯಿಂದ ಧೂಮಿನಿಯ ಮೈಯೆಲ್ಲವೂ ಕಪ್ಪಾಗಿತ್ತು. ಅಜಮೀಢ ಮಹಾರಾಜನು ಹೊಗೆಬಣ್ಣದ ಧೂಮಿನಿಯೊಡನೆ ಕೂಡಿ ವೃಷ ಎಂಬ ಗಂಡು ಮಗನನ್ನು ಹೆತ್ತನು. ಅವನ ಮೈಬಣ್ಣವೂ ಹೊಗೆಬಣ್ಣದ್ದೇ ಇತ್ತು. ಅಜಮೀಢ ಧೂಮಿನಿಯರ ನೂರುಮಕ್ಕಳಲ್ಲಿ ವೃಷರಾಜನೇ ಹಿರಿಯ. ಆ ವೃಷರಾಜನಿಂದ ಸೌವರ್ಣನೂ, ಸೌವರ್ಣನಿಂದ ಕುರುರಾಜನೂ ಜನಿಸಿದರು. ಪ್ರಯಾಗಕ್ಕಿಂತ ಪುಣ್ಯಕ್ಷೇತ್ರವಾದ ಕುರುಕ್ಷೇತ್ರವನ್ನು ಈ ಕುರುರಾಜನೇ ನಿರ್ಮಿಸಿದನು. ಕುರುರಾಜನು ಯಜ್ಞಗಳನ್ನು ಮಾಡಲಿಕ್ಕಾಗಿ ಎಷ್ಟೋ ವರ್ಷಗಳ ಕಾಲ ನೆಲವನ್ನು ಊಳುತ್ತಿದ್ದನು. ಇಂದ್ರನಿಗೆ ಹೆದರಿಕೆ, ''ಇವನು ಎಲ್ಲಿ ತನ್ನ ಇಂದ್ರಪದವಿಯನ್ನು ಆಕ್ರಮಿಸುವನೋ'' ಎಂದು. ಬಳಿಕ ದೇವೇಂದ್ರನು ಕುರುರಾಜನಿಗೆ ಬಯಸಿದ ವರವನ್ನು ಕೊಟ್ಟನು. ದೇವತೆಗಳ ವರಪ್ರಭಾವದಿಂದ ಕುರುರಾಜನು ಉತ್ತಿಬಿತ್ತಿದ ಹೊಲ ನೆಲವೆಲ್ಲ ಪವಿತ್ರವೂ ರಮಣೀಯವೂ ಆದ ಪವಿತ್ರಸ್ಥಳವಾಯಿತು. ಈ ಕುರುರಾಜನ ವಂಶವು ಮುಂದೆ ಅತ್ಯಧಿಕವಾಗಿ ವಿಸ್ತಾರಗೊಂಡಿತು. ಆ ವಂಶದವರಿಗೆ **ಕೌರವರು** ಎಂಬ ಹೆಸರು ಬಂದಿತು. ಕುರುರಾಜನಿಗೆ ಸುಧನ್ವ, ಜನ್ಹು, ಪರೀಕ್ಷಿತ, ಪ್ರಜನ ಎಂಬ ನಾಲ್ಕು ಜನ ಶೂರರಾದ ಮಕ್ಕಳಾದರು.

ಕುರುವಿನ ಹಿರಿಯ ಮಗನಾದ ಸುಧನ್ವನಿಗೆ ಪುತ್ರ ಎಂಬ ಹೆಸರಿನ ಪುತ್ರನು ಹುಟ್ಟಿದನು. ಪುತ್ರನಿಗೆ ಧರ್ಮಶಾಸ್ತ್ರದ ರಹಸ್ಯವನ್ನು ಅರಿತ ಚವನ ಎಂಬ ಮಗನು ಜನಿಸಿದನು. ಚವನನ ಮಗ ಕ್ರಿಮಿ. ಕ್ರಿಮಿಯ ಮಗ ಚೈದ್ಯೋಪರಿಚರ. ಇವನು ಅದೇ ಹೆಸರಿನ ವಸುವಿನ ವಂಶಸಂಭೂತನಾಗಿದ್ದನು. ಈ ಚೈದ್ಯೋಪರಿಚರ ವಸುವಿಗೆ ಗಿರಿಕಾ ಎಂಬ ಪತ್ನಿಯಲ್ಲಿ ಬೃಹದ್ರಥ, ಪ್ರತ್ಯಷ್ಟರ, ಕುಷ, ಹರಿವಾಹನ, ಯಜು, ಮತ್ಸ್ಯ ಎಂಬ ಆರುಜನ ಗಂಡು ಮಕ್ಕಳೂ ಕಾಲಿ ಎಂಬ ಒಬ್ಬ ಹೆಣ್ಣು ಮಗಳೂ ಜನಿಸಿದರು.

ಹಿರಿಯ ಮಗನಾದ ಬೃಹಥ್ರನ ವಂಶದಲ್ಲಿ ಮುಂದೆ ಕುಶಾಗ್ರ, ವೃಷಭ, ಪುಣ್ಯವಂತ, ಪುಣ್ಯ, ಸತ್ಯಧೃತಿ, ಸರ್ವ, ಸಂಭವ, ಬೃಹದ್ರಥ ಎಂಬ ಮಕ್ಕಳು ಜನಿಸಿದರು. ಬೃಹದ್ರಥನಿಗೆ ಇಬ್ಬರು ಹೆಂಡಂದಿರು. ಓರ್ವ ಋಷಿಯು ಮಹಾರಾಜನಿಗೆ ಸಂತಾನ ಪ್ರದವಾದ ಒಂದು ಫಲವನ್ನು ಅಭಿಮಂತ್ರಿಸಿ ಮಹಾರಾಣಿಗೆ

ಕೊಡು ಎಂದು ಕೊಟ್ಟಿದ್ದನು. ಬೃಹದ್ರಥನ ಇಬ್ಬರೂ ಮಡದಿಯರು ಆ ಫಲವನ್ನು ಹೆಚ್ಚಿ ಸಮನಾಗಿ ಎರಡು ಹೋಳುಮಾಡಿ ಇಬ್ಬರೂ ಒಂದೊಂದು ಭಾಗವನ್ನು ಭಕ್ಷಿಸಿದರು. ಇಬ್ಬರೂ ಗರ್ಭಿಣಿಯರಾದರು. ಆದರೆ ನವಮಾಸ ತುಂಬಿದ ಬಳಿಕ ಇಬ್ಬರ ಹೊಟ್ಟೆಯಿಂದಲೂ ದೇಹದ ಒಂದೊಂದು ಭಾಗಗಳು ಮಾತ್ರ ಹುಟ್ಟಿದವು. ಆಗ ಅವರಿಬ್ಬರೂ ಗಾಬರಿಯಾಗಿ ಮನುಷ್ಯ ದೇಹದ ಈ ಒಂದು ಅರ್ಧ ಭಾಗವನ್ನು ತೆಗೆದುಕೊಂಡು ಮಾಡುವದೇನು ಎಂದು ಅಸಹ್ಯಪಟ್ಟುಕೊಂಡು ಅದನ್ನು ಊರ ಹೊರಗಿನ ಕಂದಕದಲ್ಲಿ ದಾಸಿಯರಿಂದ ಚೆಲ್ಲಿಸಿದರು. ಜರಾ ಎಂಬ ರಾಕ್ಷಸಿಯು ಹಾಳು ಕಂದಕದಲ್ಲಿ ತಿರುಗಾಡುವಾಗ ಅವೆರಡೂ ದೇಹದ ಅರ್ಧ ತುಣುಕುಗಳನ್ನೇ ನೋಡಿ ''ಇವೆರಡೂ ಒಂದೇ ಶಿಶುವಿನ ಶರೀರದ ಎರಡು ಸೀಳಿದ ಭಾಗಗಳಂತೆ ತೋರುತ್ತವೆ'' ಎಂದು ತರ್ಕಿಸಿ ಅವೆರಡನ್ನು ಒಂದು ಗೂಡಿಸಿತು. ಅವೆರಡು ದೇಹಾರ್ಧ ಭಾಗಗಳ ಸರಿಯಾದ ಹೊಂದಾಣಿಕೆಯಿಂದ ಒಂದು ಸುಂದರ ಮಗು ಜೀವತುಂಬಿರೂಪುಗೊಂಡಿತು. ಅದನ್ನು ತಂದು ಆ ಜರಾರಾಕ್ಷಸಿಯು ಬೃಹದ್ರಥನಿಗೆ ಒಪ್ಪಿಸಿತು. ಮತ್ತು ತನಗೆ ದೊರೆತ ಆ ಎರಡು ದೇಹದ ಅರ್ಧ ಭಾಗಗಳನ್ನು ಜೋಡಿಸಿ ತಂದಿರುವದಾಗಿ ಹೇಳಿತು. ಆಗ ಮಹಾರಾಜನು ತನ್ನ ಇಬ್ಬರೂ ಪತ್ನಿಯರನ್ನು ಕರೆಸಿ ವಿಚಾರಿಸಿದನು. ಅವರ ಮಾತಿನಿಂದ ಮುಖದ ಹೋಲಿಕೆಯಿಂದಲೂ, ಸಾಮುದ್ರಿಕ ಲಕ್ಷಣಗಳಿಂದಲೂ ಆ ಮಗು ತನ್ನದೇ ಎಂದು ನಿಶ್ಚಿತವಾದುದರಿಂದ ಅದನ್ನು ತಾನು ಸ್ವೀಕರಿಸಿ ಪುತ್ರನೆಂದು ಸಂರಕ್ಷಿಸಿದನು, ಜರಾ ರಾಕ್ಷಸಿಯು ಕೂಡಿಸಿ ಮಾಡಿದ್ದರಿಂದ ಅವನಿಗೆ ಜರಾಸಂಧ ಎಂದು ಹೆಸರಾಯಿತು. ಮಹಾಬಲಿಷ್ಠನಾದ ಜರಾಸಂಧನು ಎಲ್ಲ ಕ್ಷತ್ರಿಯರನ್ನು ಗೆದ್ದು ವಿಶ್ವವಿಜಯಿ ಆದನು.

ಈ ಜರಾಸಂಧನಿಂದ ಮುಂದೆ ಆ ವಂಶದಲ್ಲಿ ಸಹದೇವ, ,ಸೋಮವಿತ್, ಶ್ರುತಶ್ರವ ಮುಂತಾದ ರಾಜರು ಆದರು. ಇವರಿಗೆಲ್ಲ **ಮಾಗಧರು** ಎಂದು ಹೆಸರು. ಸುರಥನಿಗೆ ವಿದೂರಥ, ವಿದೂರಥನಿಗೆ ಸಾರ್ವಭೌಮ. ಅನಂತರ ಜಯತ್ಸೇನ, ಅವನಿಗೆ ರುಚಿರ, ರುಚಿರನಿಂದ ಭೌಮ, ಭೌಮನಿಗೆ ತ್ವರಿತಾಯು. ತ್ವರಿತಾಯುವಿನಿಂದ ಅಕ್ರೋಧನ, ಅವನಿಗೆ ದೇವಾತಿಥಿ, ಅವನಿಂದ ದಕ್ಷ, ದಕ್ಷನಿಂದ ಭೀಮಸೇನ, ಭೀಮಸೇನನಿಂದ ದಿಲೀಪ, ದಿಲೀಪನಿಂದ ಪ್ರದೀಪ ಎಂಬ ಮಕ್ಕಳು ಆದರು. ಪ್ರದೀಪನಿಗೆ ದೇವಾಪಿ, ಶಂತನು, ಬಾಹ್ಲೀಕ ಎಂದು ಮೂವರು ಮಕ್ಕಳು. ಬಾಹ್ಲೀಕನಿಗೆ ಏಳು ಜನ ಮಕ್ಕಳು. ಅವರಿಗೆಲ್ಲ ಬಾಹ್ಲೀಶ್ವರರೆಂದು ಪ್ರಸಿದ್ಧಿ. ಹಿರಿಯನಾದ ದೇವಾಪಿಯನ್ನು ಪ್ರಜೆಗಳೆಲ್ಲರೂ ಅವಮಾನಿಸಿ ಹೊರಗೆ ಹಾಕಿದರು. ಅದರಿಂದ ಅವನು ಮುನಿವೃತ್ತಿಯನ್ನು ಅಂಗೀಕರಿಸಿದನು.

**ಮುನಿಗಳು** :- ಪ್ರಜೆಗಳು ರಾಜನಾದ ದೇವಾಪಿಯನ್ನು ಅವಮಾನಿಸಲು ಕಾರಣವೇನು ? ಅವನಲ್ಲಿ ಏನು ದೋಷವಿದ್ದಿತು ?

**ಸೂತ** :- ರಾಜಕುಮಾರನಾದ ದೇವಾಪಿಗೆ ಕುಷ್ಠರೋಗವು ತಗಲಿತು. ಆ ಕಾರಣದಿಂದ ಪ್ರಜೆಗಳು ಅವನನ್ನು ತಮ್ಮ ರಾಜನೆಂದು ಮನ್ನಿಸಲು

ಸಮ್ಮತಿಸಲಿಲ್ಲ. ಕಾರಣ ಅವನು ವನವಾಸಿಯಾಗಿ ಮುನಿವೃತ್ತಿಯನ್ನು ಅಂಗೀಕರಿಸಿದ. ಶಂತನುವಿನ ಸಂತತಿಯ ಅಭಿವೃದ್ಧಿಯನ್ನು ಇನ್ನು ಮುಂದೆ ಬಿತ್ತರಿಸುತ್ತೇನೆ ಕೇಳಿರಿ.

''ಶಂತನುವು ವೈದ್ಯಶಾಸ್ತ್ರದಲ್ಲಿ ಘನಪಂಡಿತನಾಗಿದ್ದನು. ಮಹಾಭಿಷಕ್ ಎಂಬ ಹೆಸರು ಅವನಿಗೆ ಬಂದುದು ಇದೇ ಕಾರಣಕ್ಕಾಗಿ. ಅವನ ವೈದ್ಯವಿದ್ಯೆಯಲ್ಲಿಯ ಪಾಂಡಿತ್ಯ ಎಲ್ಲರ ಮನೆ ಮಾತಾಗಿತ್ತು. ಅವನ ವೈದ್ಯಕೀಯ ಜ್ಞಾನ ಹಾಗೂ ಹಸ್ತ ಗುಣಗಳು ಆ ಕಾಲದಲ್ಲಿ ಜಾಣ್ಣುಡಿ, ನಾಣ್ಣುಡಿಗಳಲ್ಲಿ ಹೊಗಳಿ ಹಾಡಲ್ಪಟ್ಟಿವೆ.

**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ರೋಗಿನಮೇವ ಚ ।**
**ಪುನರ್ಯುವಾ ಚ ಭವತಿ ತಸ್ಮಾತ್ತಂ ಶಂತನುಂ ವಿದುಃ ॥**

ಎಂಥ ರೋಗವೇ ಇರಲಿ, ಎಷ್ಟೇ ಮುಪ್ಪಿನಿಂದ ಜೀರ್ಣನಾಗಿರಲಿ, ಶಂತ ರಾಜನು ಕೈಯಿಂದ ಮುಟ್ಟಿದರೆ ಸಾಕು ರೋಗಗಳೆಲ್ಲವೂ ದೂರವಾಗಿ ಹೊಸ ಹರೆ ಉಕ್ಕುತ್ತ ಹೊಸಶಕ್ತಿ ಚಿಮ್ಮುತ್ತದೆ. ಅವನಿಂದ ಜನರಿಗೆಲ್ಲ ಸುಖ ಸಮಾಧಾನ. ಅದಕ್ಕಾಗಿಯೇ ಅವನು ''ಶಂತನು'' ಸಂತೋಷವನ್ನು ಹಬ್ಬಿಸುವವ ಎಂಬ ಹೆಸರು. ಈ ರೀತಿಯಾಗಿ ಶಂತನುವಿನ ಶೀಲಸದ್ಗುಣಗಳನ್ನು ಪ್ರಜೆಗಳು ಹೊಗಳುತ್ತಾರೆ. ಈ ಶಂತನು ರಾಜನು ಭಾಗೀರಥಿಯನ್ನು ಭಾರ್ಯೆಯನ್ನಾಗಿ ವರಿಸಿದನು. ಆ ದೇವ ಗಂಗೆಯಲ್ಲಿ ಶಂತನುವಿಗೆ ದೇವವ್ರತ ಎಂಬ ಕುಮಾರನು ಉದಿಸಿದನು. ದಾಶರಾಜನ ಮಗಳಾದ ಕಾಳಿಯು ಶಂತನುವಿನ ಎರಡನೆಯ ಹೆಂಡತಿ. ಅವಳಿಂದ ಶಂತನುವಿಗೆ ವಿಚಿತ್ರವೀರ್ಯ ಎಂಬ ಮಗನು ಹುಟ್ಟಿದನು. ಈ ವಿಚಿತ್ರವೀರ್ಯನ ಮಡದಿಯಲ್ಲಿ ಕೃಷ್ಣದ್ವೈಪಾಯನ ಮಹರ್ಷಿಗಳು ಧೃತರಾಷ್ಟ್ರ, ಪಾಂಡು, ವಿದುರ ಎಂಬ ಮೂವರು ಮಕ್ಕಳನ್ನು ನಿಯೋಗ ವಿಧಿಯಿಂದ ಉತ್ಪಾದನೆ ಮಾಡಿದರು.

ಧೃತರಾಷ್ಟ್ರನಿಗೆ ಶೂರನಾದ ದುರ್ಯೋಧನನೇ ಮೊದಲಾದ ನೂರುಜನ ಮಕ್ಕಳು ಹುಟ್ಟಿದರು. ಪಾಂಡುರಾಜನಿಗೆ ಮಾದ್ರಿ, ಕುಂತಿ ಎಂಬ ಇಬ್ಬರು ಧರ್ಮಪತ್ನಿಯರು. ಪಾಂಡುವಿಗೆ ದೇವತಾನುಗ್ರಹದಿಂದ ಐದು ಮಕ್ಕಳು ಆದರು. ಯಮದೇವರ ದಯೆಯಿಂದ ಧರ್ಮರಾಜನೂ, ವಾಯುದೇವರ ಅನುಗ್ರಹದಿಂದ ಭೀಮಸೇನನೂ, ಇಂದ್ರನಿಂದ ಅವನಷ್ಟೇ ಪರಾಕ್ರಮಿಯಾದ ಅರ್ಜುನನೂ, ಕುಂತೀದೇವಿಯ ಹೊಟ್ಟೆಯಲ್ಲಿ ಹುಟ್ಟಿದರು. ಪಾಂಡುರಾಜನ ಕಿರಿಯ ಕುಟುಂಬಿನಿ ಮಾದ್ರಿದೇವಿಯೂ ಅಶ್ವಿನಿದೇವತೆಗಳ ಕೃಪೆಯಿಂದ ನಕುಲ ಮತ್ತು ಸಹದೇವ ಎಂಬ ಇಬ್ಬರು ಮಕ್ಕಳನ್ನು ಹಡೆದಳು. ಈ ಪಂಚಪಾಂಡವರಿಗೆಲ್ಲ ದ್ರೌಪದಿಯು ಧರ್ಮಪತ್ನಿ. ಈ ಐವರಿಂದಲೂ ಅವಳಿಗೆ ಒಬ್ಬೊಬ್ಬ ಮಕ್ಕಳು ಜನಿಸಿದರು. ಧರ್ಮರಾಜನಿಂದ ಪ್ರತಿವಿಂಧ್ಯ., ಭೀಮಸೇನನಿಂದ ಶ್ರುತಸೇನ, ಅರ್ಜುನನಿಂದ ಶ್ರುತ ಕೀರ್ತಿ, ಸಹದೇವನಿಂದ ಶ್ರುತಕರ್ಮ, ನಕುಲನಿಂದ ಶತಾನೀಕ. ಹೀಗೆ ದ್ರೌಪದೀ ದೇವಿಗೆ ಪಂಚಪುತ್ರರು ಪಂಚಪಾಂಡವರಿಂದ. ಇವರಲ್ಲದೇ ಪಾಂಡವರಿಗೆ ಬೇರೆ ಆರುಜನ ಮಕ್ಕಳೂ ಇದ್ದರು. ಭೀಮಸೇನನಿಗೆ ಹಿಡಂಬಿ ಎಂಬ ರಾಕ್ಷಸ ರಮಣಿಯಿಂದ ಘಟೋತ್ಕಚ ಎಂಬ ಮಗನು, ಕಾಶಿ ಎಂಬ ಕಾಂತೆಯಿಂದ ಸರ್ವಗ

ಎಂಬ ಪುತ್ರನೂ ಹುಟ್ಟಿದರು. ಸಹದೇವನಿಗೆ ಮಾದ್ರಿ ಎಂಬ ಮತ್ತೊಬ್ಬ ಮಡದಿಯಲ್ಲಿ ಸುಹೋತ್ರ ಎಂಬ ಸುತನು ಉತ್ಪನ್ನನಾದನು. ನಕುಲನಿಗೆ ಚೇದಿರಾಜಕುಮಾರಿಯಾದ ಚೇದ್ಯಾವತಿಯಲ್ಲಿ ನಿರಮಿತ್ರ ಎಂಬ ಪುತ್ರನು ಜನಿಸಿದನು. ಧರ್ಮರಾಜನಿಗೆ ದೇವಕೀ ಎಂಬ ಧರ್ಮಪತ್ನಿಯಲ್ಲಿ ಯೌಧೇಯ ಎಂಬ ಗಂಡು ಮಗನು ಹುಟ್ಟಿದನು. ಅರ್ಜುನನಿಗೆ ಕೃಷ್ಣನ ತಂಗಿಯಾದ ಸುಭದ್ರೆಯಲ್ಲಿ ಮಹಾವೀರನೆನಿಸಿದ ಅಭಿಮನ್ಯು ಎಂಬ ಮಗನು ಹುಟ್ಟಿದನು. ಅಭಿಮನ್ಯುವಿನ ಮಗನೇ ಶೂರನಾದ ಪರೀಕ್ಷಿತ. ಪರೀಕ್ಷಿತ ರಾಜನಿಗೆ ಜನಮೇಜಯ ಮಹಾರಾಜನು ಮಗನಾದನು. ಇವನು ಅತ್ಯಂತ ಧಾರ್ಮಿಕ. ಜನಮೇಜಯ ಮಹಾರಾಜನು ತನ್ನ ಒಂದು ಯಜ್ಞದಲ್ಲಿ ಯಾಜ್ಞವಲ್ಕ್ಯ ಮಹರ್ಷಿಗಳನ್ನು ಬ್ರಹ್ಮನನ್ನಾಗಿ ವರಿಸಿದನು. ಆದರಿಂದ ಅವನ ಗುರುಗಳಾದ ವೈಶಂಪಾಯನ ಮುನಿಗಳು ಕೋಪಗೊಂಡು ಯಾಜ್ಞವಲ್ಕ್ಯರನ್ನು ಶಪಿಸಿದನು.

**ವೈಶಂಪಾಯನ ಉವಾಚ**

**ಬ್ರಹ್ಮಾಣಂ ಕಾರಯಾಮಾಸ ಮಖೇ ವಾಜಸನೇಯಕಂ ।**
**ಸ ವೈಶಂಪಾಯನೇನೈವ ಶಪ್ತಃ ಕಿಲ ಮಹರ್ಷಿಣಾ ॥**

**ನಸ್ಥಾಸ್ಯತೀಹ ದುರ್ಬುದ್ಧೇ ತವೈತದ್ವಚನಂ ಭುವಿ ।**
**ಯಾವತ್ ಸ್ಥಾಸ್ಯಸಿತ್ವಂ ಲೋಕೇ ತಾವದೇವ ಪ್ರವರ್ತತೆ ॥**

''ಎಲೈ ದುರ್ಬುದ್ಧಿಯೇ ನೀನು ಪ್ರಚಾರಮಾಡುವ ಈ ಶುಕ್ಲ ಯಜುರ್ವೇದ ಸಂಹಿತೆಯು ಭೂಮಿಯಲ್ಲಿ ಸ್ಥಿರವಾಗಿ ನಿಲ್ಲುವದಿಲ್ಲ. ಎಷ್ಟು ಕಾಲ ನೀನು ಈ ಲೋಕದಲ್ಲಿ ಬದುಕಿರುವೆಯೋ ಅಷ್ಟು ಕಾಲ ಮಾತ್ರವೇ ಅದು ಉಳಿದಿರುವದು.''

**ಕ್ಷತ್ರಸ್ಯ ವಿಜಯಂ ಜ್ಞಾತ್ವಾ ತತಃ ಪ್ರಭೃತಿ ಸರ್ವಶಃ ।**
**ಅಭಿಗಮ್ಯ ಸ್ಥಿತಾಶ್ಚೈವ ನೃಪಂ ಚ ಜನಮೇಜಯಂ ॥**

ಆ ಬಳಿಕ ಎಲ್ಲ ಕಡೆಯಲ್ಲೂ ಕ್ಷತ್ರಿಯರು ಏಳಿಗೆ ಬರುವದನ್ನು ತಿಳಿದು ಯಾಜಕರು ಜನಮೇಜಯ ಮಹಾರಾಜನ ಬಳಿಗೆ ಬಂದು ಅವನ ಆಶ್ರಯದಲ್ಲಿ ನೆಲೆಸಿದರು.

**ತತಃ ಪ್ರಭೃತಿ ಶಾಪೇನ ಕ್ಷತ್ರಿಯಸ್ಯ ತು ಯಾಜಿನಃ ।**
**ಉತ್ಪನ್ನಾ ಯಾಜಿನೋ ಯಜ್ಞೇ ತತಃ ಪ್ರಭೃತಿ ಸರ್ವಶಃ ॥**

ಅಲ್ಲಿಂದ ಮೊದಲುಗೊಂಡು ವೈಶಂಪಾಯ ಮಹರ್ಷಿಯ ಶಾಪದಿಂದ ಕ್ಷತ್ರಿಯನು ಮಾಡುವ ಯಾಗದಲ್ಲಿ ಪೌರೋಹಿತ್ಯವನ್ನು ನಡೆಸುವ ಬ್ರಾಹ್ಮಣರು ಕ್ಷೀಣಗತಿಗೆ ಬಂದರು.

**ಕ್ಷತ್ರಸ್ಯ ಯಾಜಿನಃ ಕೇಚಿತ್‌ಶಾಪಾತ್ತಸ್ಯ ಮಹಾತ್ಮನಃ**
**ಪೌರ್ಣಮಾಸೇನ ಹವಿಷಾ ಇಷ್ಟ್ವಾ ತಸ್ಮಿನ್ ಪ್ರಜಾಪತಿಂ ।**
**ಸ ವೈಶಂಪಾಯನೇನೈವ ಪ್ರವಿಶನ್ ವಾರಿತಸ್ತತಃ ॥**

ಶುಕ್ಲ ಯಜುರ್ವೇದ ಸಂಹಿತೆಯಲ್ಲಿ ಪಾರಂಗತನೂ ಪುರುವಂಶೋತ್ಪನ್ನನೂ ಪರೀಕ್ಷಿತನ ಪುತ್ರನೂ ಆದ ಜನಮೇಜಯರಾಜನು ಎರಡುಸಾರಿ ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿಶಾಲಿಯಾದನು.

**ಪ್ರವರ್ತಯಿತ್ವಾ ತತ್ಸರ್ವಮೃಷಿರ್ವಾಜಸನೇಯಕಂ ।**
**ವಿವಾದೇ ಬ್ರಾಹ್ಮಣೈಃ ಸಾರ್ಧಮಭಿಶಪ್ತೋ ವನಂ ಯಯೌ ॥**

ರಾಜರ್ಷಿಯಾಗಿದ್ದ ಅವನು ಶುಕ್ಲಯಜುರ್ವೇದವನ್ನೆಲ್ಲವನ್ನೂ ಲೋಕದಲ್ಲಿ ನೆಲೆಗೊಳಿಸಿ ಬ್ರಾಹ್ಮಣರೊಡನೆ ವಿವಾದ ಹುಟ್ಟಲು, ಅವರ ಶಾಪಕ್ಕೆ ಗುರಿಯಾಗಿ ವನಕ್ಕೆ ತೆರಳಿದನು. ಈ ಜನಮೇಜಯ ರಾಜನಿಗೆ ಶತಾನೀಕ ಎಂಬ ಶೂರನಾದ ಮಗನಿದ್ದನು. ವನಕ್ಕೆ ಹೋಗುವ ಮುನ್ನ ಜನಮೇಜಯಮಹೀಪಾಲನು ಶತಾನೀಕನಿಗೆ ಪಟ್ಟಕಟ್ಟಿ ಸರ್ವಸಾಮ್ರಾಜ್ಯದ ಶಾಸನಸೂತ್ರವನ್ನು ಅವನಿಗೆ ಒಪ್ಪಿಸಿದನು. ವೀರವರೇಣ್ಯನಾದ ಶತಾನೀಕನು ಅಶ್ವಮೇಧಯಜ್ಞವನ್ನುಮಾಡಿದನು. ಶತಾನೀಕನಿಗೆ ''ಅಧಿಸೋಮಕೃಷ್ಣ'' ಎಂಬ ಹೆಸರಿನ ಒಬ್ಬ ಗಂಡು ಮಗನು ಜನಿಸಿದನು. ಇವನು ಬಹು ಕೀರ್ತಿಶಾಲಿ. ಈ ಅಧಿಸೋಮ ಕೃಷ್ಣನೇ ಈ ಕಾಲದಲ್ಲಿ ನಮಗೆಲ್ಲ ಅರಸನಾಗಿ ನಮ್ಮ ರಾಷ್ಟ್ರವನ್ನು ಆಳುತ್ತಿದ್ದಾನೆ.ಇವನ ಆಳ್ವಿಕೆಯ ಕಾಲದಲ್ಲಿಯೇ ನೀವೆಲ್ಲರೂ ಬೇರಾರಿಗೂ ಮಾಡಲು ಅಶಕ್ಯವಾದ ಬಹುಕಾಲ ನಡೆಯುವ ದೀರ್ಘಸತ್ರ ಎಂಬ ಈಯಾಗ ಕೈಗೊಂಡಿರುವಿರಿ. ಬ್ರಾಹ್ಮಣಶ್ರೇಷ್ಠರೇ, ಪುಷ್ಕರಕ್ಷೇತ್ರದಲ್ಲಿ ಮೂರು ವರ್ಷ, ಕುರುಕ್ಷೇತ್ರದಲ್ಲಿ ದೃಷದ್ವತೀ ನದಿಯ ತಟಾಕದಲ್ಲಿ ಎರಡು ವರ್ಷ, ಹೀಗೆ ಐದು ವರ್ಷ ಕಾಲ ಈ ಯಜ್ಞವು ನಡೆದಿರುತ್ತದೆ.

**ಮುನಿಗಳು** :- ಪೂಜ್ಯರೇ, ಈವರೆಗೆ ನೀವು ಹಿಂದೆ ನಡೆದುಹೋದ ಪ್ರಪಂಚದ ವೃತ್ತಾಂತವನ್ನೆಲ್ಲ ನಮಗೆ ತಿಳಿಸಿದಿರಿ. ರೋಮಾಂಚಕಾರಿಯಾದ ನಮ್ಮ ದೇಶದ ಈ ಪ್ರಾಚೀನ ಇತಿಹಾಸವನ್ನೆಲ್ಲ ಕೇಳಿ ನಮಗೆ ಆನಂದವಾಯಿತು. ನಮಗೆ ಈಗ ಮಾನವಕೋಟಿಯ ಮುಂದಿನ ಭವಿಷ್ಯಗರ್ಭದಲ್ಲಿ ಅಡಗಿದ ಸಂಗತಿ ಸಮಾಚಾರಗಳನ್ನೆಲ್ಲ ತಿಳಿದುಕೊಳ್ಳಬೇಕೆಂಬ ಕುತೂಹಲ. ಕ್ಷತ್ರಿಯಧರ್ಮಕ್ಕೆ ಮುಂದೆ ನೆಲೆ ಯಾವದು ? ಯಾವಯಾವರಾಜರು ಇನ್ನು ಮುಂದೆ ಇಲ್ಲಿ ಜನಿಸುವರು ? ಅವರ ಹೆಸರು ಆಯುಷ್ಯದ ಮಿತಿ ಏನು ? ಎಷ್ಟು ? ಕೃತ, ತ್ರೇತ, ದ್ವಾಪರ, ಕಲಿ ಈ ನಾಲ್ಕು ಯುಗಗಳ ಕಾಲಪ್ರಮಾಣ ಎಷ್ಟು ? ಕಲಿಯ ದೋಷಗಳು ಯಾವವು ? ಇದರ ಕೊನೆ ಎಂದು ? ಎಂತು ? ನಾಲ್ಕುಯುಗಗಳ ಪ್ರಜೆಗಳಲ್ಲಿ ಕಂಡುಬರುವ ಗುಣದೋಷಗಳು ಯಾವವು ? ಇದೆಲ್ಲವನ್ನೂ ವಿವರವಾಗಿ ಒಂದೊಂದಾಗಿ ನಮಗೆ ತಿಳಿಸಿ ಹೇಳಿರಿ.

**ಸೂತ** :- ನಿರ್ದೋಷಮೂರ್ತಿಯಾದ ಭಗವಾನ್ ವೇದವ್ಯಾಸದೇವರು ಇದೆಲ್ಲವನ್ನೂ ನನಗೆ ಈ ಮೊದಲೇ ಹೇಳಿದ್ದಾರೆ. ಕಲಿಕಾಲದ ಭವಿಷ್ಯದ ಚಿತ್ರವನ್ನು ಯಥಾವತ್ತಾಗಿ ನನಗೆ ನಿರೂಪಿಸಿದ್ದಾರೆ. ಅದನ್ನೇ ನಾನು ನಿಮಗೆ ತಿಳಿಸುತ್ತೇನೆ, ಮತ್ತು ಮುಂದಿನ ಕಲಿಯುಗ ಹಾಗೂ ಬರಲಿರುವ ಮನ್ವಂತರಗಳ ವಿಷಯವನ್ನೂ

ಭಾವೀ ರಾಜರ ವೃತ್ತಾಂತವನ್ನೂ, ಇಕ್ಷ್ವಾಕು, ಪೌರವ ವಂಶಗಳ ನೆಲೆಯನ್ನೂ ಉಳಿದ ಅನೇಕಾನೇಕ ರಾಜಪ್ರಜರ ಸುದ್ದಿ ಸಮಾಚಾರಗಳನ್ನೂ ಹೇಳುತ್ತೇನೆ. ಮತ್ತು ಮುಂಬರುವ ಕ್ಷತ್ರ, ಪಾರಶವ, ಶೂದ್ರ ಇವರಲ್ಲದೇ ಉಳಿದ ವರ್ಣಬಾಹ್ಯರಾದ ಆಂಧ್ರ, ಶಕ, ಪುಲಿಂದ, ಚೂಲಕ, ಯವನ, ಕೈವರ್ತ, ಆಭೀರ, ಶಬರ, ಮತ್ತು ಬೇರೆ ಬೇರೆ ಮ್ಲೇಚ್ಛ ಜಾತಿ-ಜನಾಂಗದ ವೃತ್ತಾಂತಗಳನ್ನು ಅವರವರ ಹೆಸರು, ದೆಸೆ, ದಿಶೆಗಳೊಂದಿಗೆ ಬಿತ್ತರಿಸುತ್ತೇನೆ ಕೇಳಿರಿ - ಇವರೆಲ್ಲರಿಗೂ ಮೊಟ್ಟಮೊದಲಿನ ರಾಜನೆಂದರೆ ಅಧಿಸೋಮಕೃಷ್ಣ. ಅವನ ವಂಶವು ಬೆಳೆದ ಬಗೆ ಹೀಗಿದೆ.

ಅಧಿಸೋಮಕೃಷ್ಣನಿಗೆ ವಿವಕ್ಷು ಎಂಬ ಮಗನು ಉದಯಿಸಲಿರುವನು. ಅವನ ರಾಜಧಾನಿಯಾದ ಹಸ್ತಿನಾವತಿಪಟ್ಟಣವು ಗಂಗಾನದಿಯ ಮಹಾಪೂರದಲ್ಲಿ ಕೊಚ್ಚಿ ಹೋಗುವದು. ಆಗ ವಿವಕ್ಷು ರಾಜನು ತನ್ನ ರಾಜಧಾನಿಯನ್ನು ಕೌಶಾಂಬಿ ಎಂಬ ನಗರಕ್ಕೆ ಸ್ಥಳಾಂತರಿಸುವನು. ವಿವಕ್ಷುವಿಗೆ ಶೂರರಾದ ಎಂಟುಜನ ಮಕ್ಕಳು ಜನಿಸುವರು. ಜೇಷ್ಠಪುತ್ರನ ಹೆಸರು ಭೂತಿ. ಭೂತಿಯ ಮಗ ಚಿತ್ರರಥ, ಚಿತ್ರರಥನಿಗೆ ಶುಚಿದ್ರವ, ಶುಚಿದ್ರವನಿಂದ ವೃಷ್ಣಿಮಂತ, ಅವನಿಗೆ ಸುಷೇಣ, ಸುಷೇಣನಿಗೆ ಸುನೀತ ಎಂಬ ಮಕ್ಕಳು ಆಗುವರು. ಈ ಸುನೀತನಿಂದ ಮುಂದೆ ನೃಚಕ್ಷು, ಸುಖೀಬಲ, ಪರಿಪ್ಲವ, ಸುತಪ, ಮೇಧಾವಿ, ಪುರಂಜಯ, ಉರುವ, ತಿಗ್ಮಾತ್ಮ, ಬೃಹದ್ರಥ, ವಸುಧಾಮ, ಶತಾನೀಕ, ಉದಯನ, ವಹೀನರ, ದಂಡಪಾಣಿ, ನಿರಮಿತ್ರ, ಕ್ಷೇಮಕ ಎಂದು ಅನೇಕ ರಾಜಮಹಾರಾಜರು ಈ ಪೂರುವಿನ ವಂಶದಲ್ಲಿ ಮುಂದೆ ಜನಿಸಲಿರುವರು. ಬೃಹತ್‌ಕ್ಷತ್ರನ ವಂಶವು ಕ್ರಮೇಣ ಅಭಿವೃದ್ಧಿಹೊಂದುತ್ತ ಕ್ಷೇಮಕರಾಜನವರೆಗೆ ಬಂದು ನಿಂತು ಬಿಡುತ್ತದೆ. ದೇವತೆಗಳಿಗೂ, ಋಷಿಗಳಿಗೂ ಮಾನ್ಯವಾದ ಕ್ಷತ್ರಿಯವಂಶಕ್ಕೆ ಪಾಂಡವವಂಶದ ಕ್ಷೇಮಕರಾಜನೇ ಕೊನೆ. ಈ ಮಾತನ್ನು ಪ್ರಾಚೀನರಾದ ವಿದ್ವಾನ್ ಬ್ರಾಹ್ಮಣರೇ ಈ ರೀತಿಯಾಗಿ ಹೇಳಿದ್ದಾರೆ.

ಅತ್ರಾನುವಂಶ ಶ್ಲೋಕೋಽಯಂ ಗೀತೋ ವಿಜ್ಞೈಃಪುರಾತನೈಃ ।
ಬೃಹತ್ ಕ್ಷತ್ರಸ್ಯ ಯೋ ಯೋನಿರ್ವಂಶೋ ದೇವರ್ಷಿಸತ್ಕೃತಃ ।
ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾಸ್ಯತಿ ಕತೌಯುಧೇ ॥

ಇದೆಲ್ಲವೂ ಪಾಂಡವನಾದ ಅರ್ಜುನನವಂಶವು ಮುಂದೆ ಹೊಂದಲಿರುವ ಬಿತ್ತರದ ಬಗೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿದುದು*

—o—

ಅಗ್ನಿಯ ವಿವಿಧರೂಪಗಳು ಮತ್ತು ಕಾರ್ಯಗಳು | ಅಧ್ಯಾಯ - ೫೨

**ಋಷಿಯ ಉವಾಚಃ**

**ಯೇ ಪೂಜ್ಯಾಃ ಸ್ಯುರ್ದ್ವಿಜಾತೀನಾಮಗ್ನಯಃ ಸೂತಸರ್ವದಾ ।**
**ತಾನಿದಾನೀಂ ಸಮಾಚಕ್ಷ್ವ ತದ್ವಂಶಂಚಾನುಪೂರ್ವಶಃ ।**

ದ್ವಿಜರಿಗೆ ಸರ್ವದಾ ಪರಮಪೂಜ್ಯವಾದ ಅಗ್ನಿಗಳು ಯಾವವು ? ಎಂಬುದನ್ನು ನಮಗೆ ಈಗ ನಿರೂಪಿಸಿರಿ. ಮತ್ತು ಆ ಅಗ್ನಿಕುಲವು ಕ್ರಮವಾಗಿ ಬೆಳೆದ ಬಗೆಯನ್ನೂ ತಿಳಿಸಿರಿ.

**ಸೂತ** :- ವಿಶ್ವಮಾನ್ಯರಾದ ಅಗ್ನಿದೇವರು ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವರ ಮಾನಸಪುತ್ರರಾಗಿ ಜನಿಸಿದರು. ಅವರಿಂದ ಸ್ವಾಹಾದೇವಿಯು ಪಾವಕ, ಪವಮಾನ, ಶುಚಿ ಎಂದು ಮೂರು ಅಗ್ನಿಪುತ್ರರನ್ನು ಹೆತ್ತಳು. ಅರಣಿ ಎಂದರೆ ಕಟ್ಟಿಗೆಯ ಕೊರಡುಗಳನ್ನು ಕಡೆದಾಗ ಹುಟ್ಟುವ ಬೆಂಕಿಗೆ **ಪವಮಾನ** ಎಂದು ಹೆಸರು. ಮಿಂಚುಗಳಲ್ಲಿ ಮಿಂಚುವ ಅಗ್ನಿಯು **ಪಾವಕ,** ಸೂರ್ಯಮಂಡಲದಲ್ಲಿರುವ ಅಗ್ನಿ **ಶುಚಿ.** ಇವರೆಲ್ಲರೂ ಸ್ಥಾವರಾಗ್ನಿಗಳು. ಪವಮಾನನ ಮಗನಿಗೆ ಹವ್ಯವಾಹ ಎನ್ನುವರು. ಈ ಹವ್ಯವಾಹನು ಯಜ್ಞಯಾಗಗಳಲ್ಲಿ ದೇವತೆಗಳ ಉದ್ದೇಶದಿಂದ ನೀಡಿದ ಆಹುತಿಗಳನ್ನು ಅವರಿಗೆ ಒಯ್ದುಮುಟ್ಟಿಸುವ ಕಾರ್ಯವನ್ನುಮಾಡುತ್ತಾನೆ. ಆದುದರಿಂದ ಇವನಿಗೆ ಹವ್ಯವಾಹ ಎಂದು ಹೆಸರು. ಪಾವಕಾಗ್ನಿಗೆ ಸಹರಕ್ಷ ಎಂಬ ಪುತ್ರನು ಜನಿಸಿದನು. ಪಿತೃಗಳಿಗೆ ಹವಿಸ್ಸನ್ನು ಒಯ್ದುಮುಟ್ಟಿಸುವ ಕವ್ಯವಾಹ ಎಂಬ ಅಗ್ನಿಯು ಶುಚಿಯ ಮಗ. ಕವ್ಯ ಎಂದರೆ ಪಿತೃದೇವತೆಗಳ ಆಹಾರ. ಅದನ್ನು ಪಿತೃಗಳಿಗೆ ಮುಟ್ಟಿಸುವ ಕಾರ್ಯ ಮೂಲಕವಾಗಿ ಅವನಿಗೆ ಕವ್ಯವಾಹ ಎಂಬ ಹೆಸರು ಬಂದಿದೆ.

ಬ್ರಹ್ಮದೇವರ ಹಾಗೂ ಭಾವೀ ಬ್ರಹ್ಮನಾದ ವಾಯುದೇವರ ಜ್ಯೇಷ್ಠಪುತ್ರನಾದ ಹವ್ಯವಾಹನನು ದೇವತೆಗಳ ಅಗ್ನಿ. ಸಹರಕ್ಷನು ಅಸುರರ ಅಗ್ನಿ. ಕವ್ಯವಾಹನನು ಪಿತೃಗಳ ಅಗ್ನಿ. ಈ ಮೂವರೂ ಪಿತೃದೇವತಾ ದೈತ್ಯಕುಲಗಳ ಅಗ್ನಿತ್ರಯರೆಂದು ಪ್ರಸಿದ್ಧರಾಗಿದ್ದಾರೆ. ಈ ಮೂವರಿಂದ ಅಗ್ನಿಕುಲವು ಮುಂದೆ ಮಕ್ಕಳು, ಮೊಮ್ಮಕ್ಕಳ ಮುಖಾಂತರ ಕವಲೊಡೆದು ನಲವತ್ತು ಜನರ ಒಂದು ಅಗ್ನಿಗಣ ಎಂದು ಪ್ರಸಿದ್ಧವಾಯಿತು.

ಅವರನ್ನೆಲ್ಲ ವಿಂಗಡಿಸಿ ಅವರ ನಾಮಧಾಮಗಳನ್ನು ತಿಳಿಸುತ್ತೇನೆ ಕೇಳು. ಬ್ರಹ್ಮದೇವರ ಚೊಚ್ಚಲ ಮಗನಾದ ಲೌಕಿಕಾಗ್ನಿಯು ಪಾವನಾಗ್ನಿ ಎಂಬ ಹೆಸರಿನಿಂದ ಖ್ಯಾತನಾಗಿದ್ದಾನೆ. ಲೌಕಿಕಾಗ್ನಿಯ ಪುತ್ರನೇ ಬ್ರಹ್ಮೂದನಾಗ್ನಿ. ಅವನಿಗೆ ಭರತ ಎಂದೂ ಹೆಸರು. ಪೂರ್ವಕಾಲದಲ್ಲಿ ಹವ್ಯವಾಹನನು ಯಜ್ಞದ ಹವಿರ್ಭಾಗವನ್ನು ಕೊಂಡೊಯ್ಯುವಾಗ ಒಮ್ಮೆಲೇ ಮರಣಹೊಂದಿದನು. ಮುಂದೆ ಇದೇ ಹವ್ಯವಾಹ

ಅಗ್ನಿಯು ಪುಷ್ಕರಸಮುದ್ರದಮಂಥನದಿಂದ ಅಥರ್ವಾಗ್ನಿಯ ಪುತ್ರನಾಗಿ ಜನಿಸಿದನು. ಈ ಅಥರ್ವಾಗ್ನಿಯು ಭೃಗುಋಷಿಯ ಪುತ್ರ. ಇವನ ಮಗನೇ ಅಂಗೀರಸ. ಅಂಗೀರಸನ ಮಗ ಲೌಕಿಕಾಗ್ನಿ. ಅವನಿಗೆ ದಕ್ಷಿಣಾಗ್ನಿ ಎಂದು ಹೆಸರು.

ಪವಮಾನಾಗ್ನಿಗೆ ನಿರ್ಮಥ್ಯ ಎಂದು ಇನ್ನೊಂದು ಹೆಸರು. ಇದಕ್ಕೆ ಕಾರಣ ಅರಣಿ ಮಂಥನ. ಎರಡು ಕೊರಡುಗಳನ್ನು ಮಸೆದು ಕಡಿದಾಗ ಈ ನಿರ್ಮಥ್ಯಾಗ್ನಿಯು ಉತ್ಪನ್ನವಾಗುವದು. ಬ್ರಾಹ್ಮಣರಿಗೆ ಇದು ಪ್ರಧಾನ. ಇದಕ್ಕೆ ಗಾರ್ಹಪತ್ಯಾಗ್ನಿ ಎಂದೂ ಕರೆಯುತ್ತಾರೆ. ಪವಮಾನಾಗ್ನಿಗೆ ಸಂಶತಿ ಎಂಬ ಮಡದಿಯಲ್ಲಿ ಸಭ್ಯ ಆವಸಥ್ಯ ಎಂಬ ಇಬ್ಬರು ಅಗ್ನಿಕುಮಾರರು ಜನಿಸಿದರು.

ಬ್ರಾಹ್ಮಣರೆಲ್ಲರೂ ಆಹವನೀಯ ಎಂದು ಗೌರವದಿಂದ ಕರೆಯುವ ಹವ್ಯವಾಹಾಗ್ನಿಯು ಕಾವೇರಿ, ಕೃಷ್ಣವೇಣಿ, ನರ್ಮದಾ, ಯಮುನಾ, ಗೋದಾವರಿ, ವಿತಸ್ತಾ, ಚಂದ್ರಭಾಗಾ, ಇರಾವತೀ, ವಿಪಾಶಾ, ಕೌಶಿಕೀ, ಶತದ್ರು, ಸರಯೂ, ಸೀತಾ, ಮನಸ್ವಿನೀ, ಹ್ಲಾದಿನೀ, ಪಾವನಾ ಎಂಬ ಹದಿನಾರು ನದಿಗಳನ್ನು ಕಾಮಿಸಿ ಪ್ರೇಮಿಸಿದನು. ಈ ಹದಿನಾರು ನದಿನೀರೆಯರನ್ನು ಒಲಿದು ಮೋಹಿಸಿದ ಅಗ್ನಿದೇವನು ತಾನೂ ಹದಿನಾರು ರೂಪಗಳನ್ನು ತೆಗೆದುಕೊಂಡು ವಿಹಾರಗೈಯುತ್ತ ಒಂದು ವಿಶ್ರಾಂತ ಸ್ಥಳವನ್ನು ಅಪೇಕ್ಷಿಸಿದನು. ಅವನ ಅಪೇಕ್ಷೆಯಂತೆ ಈ ಹದಿನಾರು ನದಿಗಳ ಹೆಸರಿನಿಂದ ಅಲ್ಲಲ್ಲಿ ವಿಹಾರಸ್ಥಾನಗಳು ಏರ್ಪಟ್ಟವು. ಅವುಗಳಿಗೆ ಧಿಷ್ಣ್ಯ ಎಂದು ಹೆಸರು. ಆ ಆ ಸ್ಥಳಗಳಲ್ಲಿ ಆ ನದೀನೀರೆಯರಲ್ಲಿ ಆಹವನೀಯಾಗ್ನಿಗೆ ಹದಿನಾರುಮಕ್ಕಳು ಹುಟ್ಟಿದವು. ಧಿಷ್ಣ್ಯ ಎಂಬ ಆಶ್ರಯಸ್ಥಳಗಳಲ್ಲಿ ಉತ್ಪನ್ನರಾದುದರಿಂದ ಅವರಿಗೆ ಧಿಷ್ಣ ಎಂದು ಹೆಸರಾಯಿತು. ಈ ಷೋಡಶ ಅಗ್ನಿಕುಮಾರರಲ್ಲಿ ಕೆಲವರು ವಿಹರಣೀಯರು, ಹಲವರು ಉಪಸ್ಥೇಯರು ಎಂದು ಪ್ರಸಿದ್ಧರಾಗಿದ್ದಾರೆ. ವೈದಿಕಮಂತ್ರ ಸಂಸ್ಕಾರಮೂಲಕ ಒಂದು ತಾಣದಿಂದ ಇನ್ನೊಂದೆಡೆಗೆ ಒಯ್ಯಲ್ಪಡುವದು ವಿಹರಣೀಯ ಎಂದೆನಿಸುವದು. ಉಪಸ್ಥಾನ ಅರ್ಥಾತ್ ಸ್ತುತಿಮೂಲಕ ವಿಶಿಷ್ಟಸ್ಥಾನದಲ್ಲಿ ಇಟ್ಟು ಪೂಜಿಸಲ್ಪಡುವ ಅಗ್ನಿ ಉಪಸ್ಥೇಯ ಎನಿಸಿಕೊಳ್ಳುವದು, ಪ್ರವಹಣ, ಅಗ್ನೀಧ್ರ ಮತ್ತು ಇವರೀರ್ವರ ಬಳಿಯಲ್ಲಿರುವ ಇತರ ಧಿಷ್ಣ್ಯಾಗ್ನಿಗಳನ್ನು, ಯಜ್ಞಯಾಗಾದಿ ವಿಧಿವಿಹಿತ ಸತ್ಕರ್ಮಗಳನ್ನು ಪ್ರಾರಂಭಿಸುವಾಗ ಆ ಆ ಸ್ಥಳಗಳಲ್ಲಿ ಸ್ಥಾಪಿಸುತ್ತಾರೆ.

ಆವಾಹನದ ಉದ್ದೇಶವಿಲ್ಲದೇ ಕರ್ಮಸಾಫಲ್ಯಕ್ಕಾಗಿ, ಕಡ್ಡಾಯವಾಗಿ ಸ್ಥಾಪಿಸ್ಪಡುವ ಅಗ್ನಿಗಳಲ್ಲಿ ವಾಸವಾಗ್ನಿಯು ಪ್ರಥಮ. ಎರಡನೆಯ ಅಗ್ನಿಗೆ, ಉತ್ತರವೇದಿಕಾಗ್ನಿ ಎಂದು ಹೆಸರು. ಸಮ್ರಾಡಗ್ನಿಯ ಎಂಟು ಮಕ್ಕಳನ್ನು ಹೋಮಹವನಗಳಲ್ಲಿ ಋತ್ವಿಜರು ಸ್ತುತಿಸುತ್ತಾರೆ. ಅವರಲ್ಲಿ ಮೊದಲನೆಯವ ಪರ್ಜನ್ಯಾಗ್ನಿ. ಎರಡನೆಯವನು ಪವಮಾನಾಗ್ನಿ. ಮೂರನೆಯವನೇ ಉತ್ತರವೇದಿಕೆಯಲ್ಲಿರುವ ಪಾವಕೋಷ್ಣ ಅಥವಾ ಸಮಾಹ್ಯಾಗ್ನಿ. ನಾಲ್ಕನೆಯವ ಹವ್ಯಸೂದನ. ಅವನಿಗೆ ಅಸಂಸ್ಪೃಜಶಾಮಿತ್ರ ಎಂದೂ ಬೇರೆ ಹೆಸರುಗಳುಂಟು. ಸಂಧ್ಯಾಜ್ಯೋತಿ ಹಾಗೂ

ಕಾದ್ರೆಶ್ವರ್ಯ್ಯ ಎಂದು ಎರಡು ಹೆಸರುಗಳಲ್ಲದೇ ಪಂಚಮಾಗ್ನಿಗೆ ಶತಧಾಮ ಎಂಬ ಮೂರನೇಹೆಸರೂ ಉಂಟು. ಆರನೆಯವನಾದ ಬ್ರಹ್ಮಜ್ಯೋತಿಯು ವಸುಧಾನುಬ್ರಹ್ಮಸ್ಥಾನೀಯ ಎಂದು ಕರೆಯಲ್ಪಡುತ್ತಾನೆ. ಅಜೈಕಪಾತ್ ಎಂಬ ಹೆಸರುಳ್ಳ ಏಳನೆಯ ಉಪಸ್ಥೇಯಾಗ್ನಿಯನ್ನು ಎಲ್ಲರು ಸ್ತುತಿಸುತ್ತಾರೆ. ಯಜ್ಞಶಾಲೆಯ ಮುಂಭಾಗದಲ್ಲಿರುವದೇ ಇದಕ್ಕೆ ಕಾರಣ. ದಕ್ಷಿಣದ ಹೊರ ಆವರಣದಲ್ಲಿ ಇರುವ ಅಹರ್ಬುಧ್ನ್ಯ ಎಂಬ ಅಗ್ನಿಯು ಎಂಟನೆಯ ಉಪಸ್ಥೇಯಾಗ್ನಿ ಆಗಿದ್ದಾನೆ. ಈ ಎಂಟುಬಗೆಯ ಅಗ್ನಿಗಳೂ ಸಮ್ರಾಡಗ್ನಿಯ ಪುತ್ರರಾಗಿದ್ದು ದ್ವಿಜರಿಗೆ ಪೂಜಾರ್ಹರಾಗಿದ್ದಾರೆ. ಇದರಂತೆ ವಿಹರಣೀಯಾಗ್ನಿಗಳಲ್ಲಿಯೂ ಎಂಟು ಪ್ರಕಾರಗಳು. ಅವರ ಅಭಿವೃದ್ಧಿಯ ಬಗೆಯನ್ನು ವಿವರಿಸುವೆನು.

ಹೌತ್ರಿಯಾಗ್ನಿಯ ಪುತ್ರ ಬರ್ಹಿಷಾಗ್ನಿ. ಪ್ರಶಂಸ್ಯಾಗ್ನಿ ದ್ವಿತೀಯ. ವೈಶ್ವದೇವ ತೃತೀಯ. ನೀರಿನ ಉತ್ಪತ್ತಿಗೆ ಕಾರಣನಾದ, ನಾಲ್ಕನೇಯ ಅಗ್ನಿಗೆ ಸ್ವಾಂಭ, ಸೇತು, ಎಂದು ಹೆಸರುಗಳು. ಯೋಗ ಎಂಬ ಹೆಸರುಳ್ಳ ಐದನೆಯ ಅಗ್ನಿಯನ್ನು ಪಾವಕನೆಂದು ಕರೆಯುತ್ತಾರೆ. ಯಜ್ಞ ಮುಕ್ತಾಯ ಕಾಲದಲ್ಲಿ ವರುಣನ ಜೊತೆಗೆ ಇವನಿಗೆ ಪೂಜೆ. ವಿದ್ಧಾಗ್ನಿ, ಮನ್ಯುಮಾನ್. ಎಂಬ ಹೆಸರುಗಳನ್ನು ಪಡೆದ ಜಠರಾಗ್ನಿಯು ಆರನೆಯವ. ಹೃದಯಾಗ್ನಿಯ ಪುತ್ರನಾದ ಇವನು ಜೀವಿಗಳ ಜಠರದಲ್ಲಿದ್ದು ಉಂಡ ಆಹಾರವನ್ನು ಪಚನಮಾಡುವನು. ಈ ಜಠರಾಗ್ನಿಯ ಮಗನಾದ ಸಂವರ್ತಕಾಗ್ನಿಯು ವಸ್ತುಗಳ ಪರಸ್ಪರ ಸಂಘರ್ಷದಿಂದ ಹುಟ್ಟಿ ಪ್ರಾಣಿ ಪ್ರಪಂಚವನ್ನೆಲ್ಲ ಸುಟ್ಟುಹಾಕುವನು. ಏಳನೆಯದಾದ ಈ ಸಂವರ್ತಕಾಗ್ನಿಯು ಸಮುದ್ರದಗರ್ಭದಲ್ಲಿಯೂ ನೆಲೆಸಿ ಸಮುದ್ರದ ನೀರನ್ನೆಲ್ಲ ಕುಡಿಯುತ್ತ ವಡವಾಗ್ನಿ ಎಂದು ಕರೆಯಲ್ಪಡುವನು. ಈ ವಡವಾಗ್ನಿಯ ಪುತ್ರನೇ ಸಹರಕ್ಷನ ಮಗ ಕಾಮಾಗ್ನಿ. ಇವನು ಮಾನವರ ಮನೆಮನೆಗಳಲ್ಲಿ ನೆಲೆಸಿರುತ್ತಾನೆ. ಕಾಮಾಗ್ನಿಯ ಮಗ ಕ್ರವ್ಯಾದಾಗ್ನಿ. ಮೃತರಾದ ಜೀವಿಗಳ ದೇಹಗಳನ್ನು ಇದೇ ಅಗ್ನಿಯು ಜ್ವಾಲೆಗಳಿಂದ ದಹಿಸಿ ಭಕ್ಷಿಸುತ್ತಾನೆ. ಇವರೆಲ್ಲರೂ ಪಾವಕಾಗ್ನಿಯ ಸಂತತಿ.

ಸೂರ್ಯನಲ್ಲಿರುವ ಶುಚಿ ಎಂಬ ಅಗ್ನಿಯ ಮಕ್ಕಳನ್ನು ಗಂಧರ್ವರು ದೈತ್ಯರು ತಮ್ಮ ಯಜ್ಞಯಾಗಾದಿ ಕಾರ್ಯಗಳಿಗಾಗಿ ಕೊಂಡೊಯ್ದರು. ಅರಣಿಮಂಥನದಿಂದ ಉತ್ಪನ್ನವಾಗುವ ಅಗ್ನಿಗೆ **ಆಯುಸ್ಸ** ಎಂಬ ಹೆಸರು. ಪಶುಬಂಧಕರ್ಮದಲ್ಲಿ ಈ ಅಗ್ನಿಯ ಪ್ರಣಯನ ಕಾರ್ಯವು ನೆರವೇರುತ್ತದೆ. ಆಯುಸ್ಸಿನ ಮಗ ಮಹಿಮಾನ. ಮಹಿಮಾನನ ಮಗ ದಹನಾಗ್ನಿ. ಪಾಶವಯಜ್ಞಗಳಲ್ಲಿ ಇವನೇ ಅಭಿಮಾನ ದೇವತೆಯಾಗಿ ಹೋಮಮಾಡಿದ ಹವಿರ್ಭಾಗಗಳನ್ನು ಭಕ್ಷಿಸುವನು. ದೇವ ಲೋಕದ ಹವ್ಯಕವ್ಯಗಳ ಭಕ್ಷಣವು ಈ ದಹನಾಗ್ನಿಗೇ ಮೀಸಲು. ಇವನ ಮಗ ಸಹತಾಗ್ನಿ. ಅದ್ಭುತಾಗ್ನಿ ಎಂದೂ ಅವನಿಗೆ ಹೆಸರು. ಅದ್ಭುತಾಗ್ನಿಯ ಪುತ್ರನಾದ ವೀರಾಗ್ನಿ ಅಥವಾ ಮಹಾಗ್ನಿಯು ಪ್ರಾಯಶ್ಚಿತ್ತ ಕರ್ಮಗಳಿಗೆಲ್ಲ ಅಧಿದೇವತೆಯಾಗಿ ಹೋಮಮಾಡಿದ ಹವ್ಯವನ್ನು ಸ್ವೀಕರಿಸುತ್ತಾನೆ. ವೀರಾಗ್ನಿಯಿಂದ ವಿವಿಧಾಗ್ನಿ, ವಿವಿಧಾಗ್ನಿಗೆ ಮಹಾಕವಿ, ಅರ್ಕ ಎಂಬ

ಇಬ್ಬರು ಮಕ್ಕಳು. ಅರ್ಕನಿಗೆ ರಕ್ಷೋಹ, ಸುರಭಿ, ವಸುಮಂತ, ನಾದ, ಹರ್ಯಶ್ವ, ರುಕ್ಮವಂತ, ಪ್ರವರ್ಗ್ಯ, ಕ್ಷೇಮವಂತ ಎಂಬ ಎಂಟುಜನ ಮಕ್ಕಳು. ಕಾಮ್ಯಕರ್ಮ ರೂಪವಾಗಿ ಮಾಡುವ ಯಜ್ಞಗಳಲ್ಲಿ ಈ ಎಂಟೂಜನ ಅಗ್ನಿಗಳು ಅಭಿಮಾನಿ ದೇವತೆಗಳಾಗಿದ್ದು, ಭವಿಷ್ಯಕಾಲದಲ್ಲಿ ಯಜ್ಞಕರ್ತರಿಗೆ ಶುಭವನ್ನುಂಟುಮಾಡಿ, ಅವರ ಇಷ್ಟಾರ್ಥಗಳನ್ನು ಪೂರೈಸುತ್ತಾರೆ. ಈ೧೪ ಅಗ್ನಿಗಳು ಸೂರ್ಯಮಂಡಲದಲ್ಲಿ ಅಧಿಷ್ಠಿತನಾದ ಶುಚಿಯೆಂಬ ಅಗ್ನಿಯ ಪ್ರಜೆಗಳು, ಇವರೆಲ್ಲರೂ ಸ್ವಾಯಂಭುವ ಮನ್ವಂತರದಲ್ಲಿ ಯಾಮರು ಎಂಬ ಪ್ರಸಿದ್ಧರಾದ ದೇವತಾಗಣದೊಂದಿಗೆ ಯಜ್ಞಕಾರ್ಯ ನಿರ್ವಾಹಕರು ಆಗಿದ್ದರು. ಮುಂದಿನ ಸ್ವಾರೋಚಿಷ ಮನುವಿನಿಂದ ಸಾವರ್ಣಿಮನುವಿನವರೆಗೆ ಏಳೂ ಮನ್ವಂತರಗಳಲ್ಲಿಯೂ ಹಾಗೂ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರ ದಲ್ಲಿಯೂ ಹಾಗೂ ಮುಂದೆ ಬರುವ ಮನ್ವಂತರಗಳಲ್ಲಿಯೂ ಅಗ್ನಿ ದೇವತೆಗಳ ಸ್ಥಾನಮಾನ ಲಕ್ಷಣ, ವ್ಯಾಪ್ತಿ, ಸ್ಥಿತಿಗತಿಗಳು ಇದೇ ಕ್ರಮದಲ್ಲಿ ಇರುವವು ಎಂದು ಪ್ರಾಜ್ಞರ ನಿಷ್ಕರ್ಷ. ಯಾಮಾದಿ ದೇವತೆಗಳಂತೆ ಈ ಎಲ್ಲ ಅಗ್ನಿಗಳು ಪ್ರತಿಯೊಂದು ಮನ್ವಂತರದಲ್ಲಿ ಸ್ಥಿರವಾಗಿದ್ದು ದೇವತೆಗಳೊಡನೆ ತಮ್ಮತಮ್ಮ ಅಧಿಕಾರವನ್ನು ಮೇಲೆ ಹೇಳಿದಂತೆ ನಡಿಸಿ, ಲೋಕ ಕ್ಷೇಮವನ್ನುಂಟುಮಾಡುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ವಿಹಿತಕರ್ಮಗಳ ಅನುಷ್ಠಾನ. ನಿಷಿದ್ಧ-ಕರ್ಮ ತ್ಯಾಗ ಎರಡೂ ಪುಣ್ಯಪ್ರದ. ಸದ್ಗತಿ ಕಾರಣ

ಅಧ್ಯಾಯ - ೫೩

**ಋಷಿಯ ಉವಾಚಃ**

**ಇದಾನೀಂ ಪ್ರಾಹ ಯದ್ವಿಷ್ಣುಃ ಪೃಷ್ಟಃ ಪರಮಮುತ್ತಮಂ**
**ತಮಿದಾನೀಂ ಸಮಾಚಕ್ಷ ಧರ್ಮಾಧರ್ಮಸ್ಯ ವಿಸ್ತರಮ್ ॥**

**ಋಷಿಗಳು** :- ಮನುಚಕ್ರವರ್ತಿಯು ಧರ್ಮಾಧರ್ಮ ವಿಷಯಗಳಲ್ಲಿ ಪ್ರಶ್ನೆ ಮಾಡಿದಾಗ ವಿಷ್ಣು ಸಮಂಜಸವಾದ ಉತ್ತರಕೊಟ್ಟು ಸಮಾಧಾನಪಡಿಸಿದನಂತೆ. ಆ ಸೂಕ್ಷ್ಮ ತತ್ವವನ್ನು ತಾವು ನಮಗೆ ಈಗ ತಿಳಿಸಿರಿ.

**ಸೂತ** :- ಸೃಷ್ಟಿಯ ಪೂರ್ವಕಾಲದಲ್ಲಿ ಪ್ರಪಂಚವೆಲ್ಲವೂ ನೀರಿನಿಂದ ಏಕಾಕಾರವಾಗಿ ಜಲಮಯವಾಗಿದ್ದಾಗ ಮೀನದ ರೂಪತಳೆದ ಶ್ರೀ ಹರಿಯು ಸೂರ್ಯಪುತ್ರನಾದ ಮನುಮಹಾರಾಜನಿಗೆ ಸೃಷ್ಟಿ ಮತ್ತು ಪ್ರತಿಸೃಷ್ಟಿಯ ಕ್ರಮಕಥೆಯನ್ನೆಲ್ಲ ಬಿತ್ತರಿಸಿದನು. ಆನಂತರ ಆ ವಿಶ್ವಸ್ವರೂಪಿಯಾದ ಪರಮಾತ್ಮನು ಕರ್ಮಯೋಗವನ್ನೂ ಸಾಂಖ್ಯಯೋಗವನ್ನೂ ಅವರಿಗೆ ಉಪದೇಶಗೈದನು.

**ಋಷಿಗಳು** :- ಸೂತಾಚಾರ್ಯ, ಭಗವತ್ಪ್ರೋಕ್ತವಾದ ಆ ಕರ್ಮಯೋಗದ ಲಕ್ಷಣಗಳನ್ನು ಕೇಳಬೇಕೆಂದು ನಮಗೆ ಜಿಜ್ಞಾಸೆ, ವ್ರತಶೀಲರಾದ ತಮಗೆ ತಿಳಿಯದ ವಿಚಾರವಾವುದು ?

**ಸೂತ** :- ಹರಿ ಹೇಳಿದ ಆ ಕರ್ಮಯೋಗವನ್ನು ತಿಳಿಸುತ್ತೇನೆ ಕೇಳಿ. ಸಾವಿರ ಜ್ಞಾನಕ್ಕಿಂತ ಒಂದು ಕರ್ಮಯೋಗವು ಶ್ರೇಷ್ಠ ಎನಿಸುತ್ತದೆ. ದಿವ್ಯಜ್ಞಾನದ ನಿಜವಾದ ಹುಟ್ಟು ಕರ್ಮಯೋಗದಿಂದಲೇ ಆಗುವದು. ಕರ್ಮಯೋಗವನ್ನು ಸರಿಯಾಗಿ ಅರಿತು ಮಾಡಿದರೆ ಬ್ರಹ್ಮಜ್ಞಾನವು ತಾನಾಗಿ ಮೂಡಿಬರುವದು. ಕರ್ಮಬಿಟ್ಟು ಜ್ಞಾನವಿಲ್ಲ. ಜ್ಞಾನವಿಲ್ಲದೇ ಮಾಡಿದ ಕರ್ಮಕ್ಕೆ ಫಲವಿಲ್ಲ. ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಕರ್ಮಯೋಗ ಎನಿಸುವದು. ಇಂಥ ಕರ್ಮಯೋಗವು ಪರಮಜ್ಞಾನಕ್ಕೆ ಕಾರಣ ವಾಗುವದು. ಈ ಕರ್ಮಕಾಂಡದ ಧರ್ಮಸೂಕ್ಷ್ಮವನ್ನು ಅರಿಯಲು ಸಕಲ ವೇದಗಳು ಮತ್ತು ದೊಡ್ಡವರು ಸಂಪ್ರದಾಯ ಪರಂಪರೆಯಿಂದ ಅನುಸರಿಸುತ್ತ ಬಂದ ಶಿಷ್ಟಾಚಾರವು ಮುಖ್ಯಸಾಧನವಾಗಿದೆ. ಧರ್ಮಾಚರಣೆಯಲ್ಲಿ ಆ ಬಗೆಯ ಗುಣಗಳು ಮುಖ್ಯವಾಗಿರುತ್ತವೆ, ಎಲ್ಲ ಪ್ರಾಣಿಗಳಲ್ಲಿಯೂ ದಯೆ, ಕ್ಷಮೆ, ದೀನರಕ್ಷಣ, ಅಸೂಯೆಯಿಲ್ಲದಿರುವುದು, ಅಂತಃಶುದ್ಧಿ, ಬಹಿಃಶುದ್ಧಿ, ಸದಾಚಾರ, ದಾನ, ಪರಸ್ತ್ರೀ ಪರದ್ರವ್ಯ ವಿಮುಖತೆ. ಈ ಎಲ್ಲ ಎಂಟು ಗುಣಗಳನ್ನು ಸ್ವಭಾವಗುಣಗಳನ್ನಾಗಿ ಬೆಳೆಸಿಕೊಂಡು ಯಾವಾಗಲೂ ಶುಭಕರ್ಮಗಳನ್ನು ಮಾಡುವದೇ ಕರ್ಮಯೋಗ. ಇಂಥ ಕರ್ಮಯೋಗವು ಜ್ಞಾನಯೋಗಕ್ಕೆ ನಾಂದಿಯಾಗಿ ಭಗವತ್ಪ್ರಾಪ್ತಿಗೆ ಕಾರಣವಾಗುವದು. ಇವೆಲ್ಲವೂ ಆತ್ಮಗುಣವೆನಿಸುತ್ತವೆ. ಇವೆಲ್ಲ ಸ್ವಭಾವಧರ್ಮಗಳಾದ ಬಳಿಕ ಶ್ರುತಿಸ್ಮೃತಿಗಳಲ್ಲಿ ಹೇಳಿದ ಕರ್ತವ್ಯ ಕರ್ಮಗಳನ್ನು ಅನೂಚಾನವಾಗಿ ಆಚರಿಸಬೇಕು.

ಪ್ರತಿದಿನವೂ ಪಂಚಮಹಾಯಜ್ಞಗಳನ್ನು ನೆರವೇರಿಸಬೇಕು. ಇದರಿಂದ ದೇವತೆಗಳು, ಪಿತೃಗಳು, ಋಷಿಗಳು, ಮಾನವರು ಮತ್ತು ಭೂತಗಳು ಇವಕ್ಕೆಲ್ಲ ತೃಪ್ತಿ ತಣಿವು. ವೇದಾಧ್ಯಯನದಿಂದ ಋಷಿಗಳನ್ನು, ಹೋಮಹವನದಿಂದ ದೇವತೆಗಳನ್ನು, ಶ್ರಾದ್ಧತರ್ಪಣಗಳಿಂದ ಪಿತೃಗಳನ್ನು, ಅನ್ನದಾನದಿಂದ ಮಾನವರನ್ನು, ಬಲಿಕರ್ಮದಿಂದ ಎಲ್ಲ ಪ್ರಾಣಿಗಳನ್ನು ತೃಪ್ತಿಪಡಿಸುವದು ಪ್ರತಿಯೊಬ್ಬ ಗೃಹಸ್ಥನ ಕರ್ತವ್ಯವಾಗಿದೆ. ಇವು ಪಂಚಮಹಾಯಜ್ಞಗಳೆಂದು ಕರೆಯಲ್ಪಡುತ್ತವೆ. ಒರಳು, ಬೀಸುವಕಲ್ಲು, ಒಲೆ, ನೀರು, ಪಾತ್ರೆಗಳು, ಪೊರಕೆ ಮುಂತಾದ ಪದಾರ್ಥಗಳನ್ನು ಪ್ರಾಪಂಚಿಕರು ತಮ್ಮತಮ್ಮ ಗೃಹಶುದ್ಧಿ, ಪಾಕಸಿದ್ಧಿಗಳಾಗಿ ಉಪಯೋಗಿಸುವಾಗ ಅನೇಕ ಸ್ಥೂಲ ಸೂಕ್ಷ್ಮ ಜೀವಜಂತುಗಳ ಸಂಹಾರವು ಅನಿವಾರ್ಯ ಆಗುತ್ತದೆ. ಅದರಿಂದ ಮಾನವನಿಗೆ ಬರುವ ಪ್ರಾಣಿಹತ್ಯಾ ಪಾಪವನ್ನು ಕಳೆಯಲಿಕ್ಕಾಗಿ ಮತ್ತು ಮುಂದೆ ಸದ್ಗತಿಗಾಗಿ, ಈ ಪಂಚಮಹಾಯಜ್ಞಗಳನ್ನು ಆಚರಿಸಬೇಕು ಎಂದು ಧಾರ್ಮಿಕಗ್ರಂಥಗಳಲ್ಲಿ ವಿಧಾನಮಾಡಿದ್ದಾರೆ. ಈ ಎಲ್ಲ ಧರ್ಮಕರ್ಮಗಳನ್ನು ಸರಿಯಾಗಿ, ಶಾಸ್ತ್ರೋಕ್ತವಾಗಿ ಆಚರಿಸದಿದ್ದರೆ ಎಂಥ ಸಂಸ್ಕಾರಸಂಪನ್ನ ವ್ಯಕ್ತಿಯೂ ಮೋಕ್ಷವನ್ನು ಪಡೆಯಲಾರ. ಆದುದರಿಂದ ಮೇಲೆ ಹೇಳಿದ ಎಂಟು ಆತ್ಮಗುಣಗಳನ್ನು ಪಡೆದು, ಈ ಎಲ್ಲ ಪಂಚಮಹಾಯಜ್ಞವೇ ಮೊದಲಾದ ವೇದೋಕ್ತಕರ್ಮಗಳನ್ನು ತಪ್ಪದೇ ಆಚರಿಸಬೇಕು. ಗೋದಾನ, ಭೂದಾನ, ಹಿರಣ್ಯದಾನ, ವಸ್ತ್ರದಾನಗಳಿಂದಲೂ ಗಂಧ, ಪುಷ್ಪ, ನೀರು, ನೈವೇದ್ಯ, ಮಂಗಳಾರತಿ ಮುಂತಾದ ಉಪಚಾರಗಳಿಂದಲೂ ಸರ್ವವೇದ ಸ್ವರೂಪಿಯಾದ ಶಿವನನ್ನು

ಆರಾಧಿಸಬೇಕು. ಶಾಸ್ತ್ರೋಕ್ತವಾಗಿ, ವ್ರತೋಪವಾಸಗಳನ್ನು ಶ್ರದ್ಧೆಯಿಂದ ಆಚರಿಸಿದರೆ ಅದೇ ಪರಮೇಶ್ವರನ ಪೂಜೆಯೆನಿಸುವದು. ಬ್ರಹ್ಮ, ವಿಷ್ಣು, ಸೂರ್ಯ, ಶಿವ, ಅಷ್ಟವಸುಗಳು, (೧೧) ರುದ್ರರು, ಲೋಕಪಾಲಕರು, ಪಿತೃದೇವತೆಗಳು ಎಲ್ಲವೂ ಶ್ರೀವಾಸುದೇವನ ಒಂದೊಂದು ವಿಭೂತಿ ರೂಪವೆನಿಸುವದು. ಬ್ರಹ್ಮ, ಸೂರ್ಯ, ಶಿವರಲ್ಲಿ ಸಾಕ್ಷಾತ್ ಶ್ರೀವಿಷ್ಣುವೇ ನಿಂತುಕೊಂಡು ಜಗದ್ವ್ಯಾಪಾರವನ್ನೆಲ್ಲ ಮಾಡಿಸುತ್ತಾನೆ. ಅಲ್ಲಿರುವ ಭಗವದ್ರೂಪಗಳಿಗೆ ಪರಸ್ಪರ ಭೇದವಿಲ್ಲ. ಸೂರ್ಯಾದಿಗಳಲ್ಲಿರುವ ಭಗವದ್ರೂಪಗಳಲ್ಲಿ ಅಭೇದವನ್ನು ಚಿಂತಿಸಿ, ಅವನನ್ನು ಪೂಜಿಸಿದರೆ ಪ್ರಪಂಚವನ್ನೇ ಪೂಜಿಸಿದಂತೆ, ಸೂರ್ಯನಲ್ಲಿ, ತ್ರಿಮೂರ್ತಿಗಳ ಸನ್ನಿಧಾನ. ಅದರಿಂದ ಅವನನ್ನು ಭಕ್ತಿಯಿಂದ ಪೂಜಿಸಬೇಕು. ಜಪ, ಉಪವಾಸ, ಹೋಮ, ಹವನ, ವ್ರತದಾನ ಮುಂತಾದ ಪುಣ್ಯಕಾರ್ಯಗಳನ್ನೆಲ್ಲ ಅಗ್ನಿ ಮತ್ತು ಬ್ರಾಹ್ಮಣರ ಮುಖಾಂತರವಾಗಿ ನೆರವೇರಿಸಿದರೆ ಸರ್ವದೇವತೆಗಳಿಗೂ ಪ್ರೀತಿ.

ಹೀಗೆ, ವಿಹಿತಕರ್ಮಗಳನ್ನು ಆಚರಿಸಿ, ನಿಷಿದ್ಧಕರ್ಮಗಳನ್ನು ತ್ಯಜಿಸಿ ವೇದಾಂತ ಹಾಗೂ ಧರ್ಮಶಾಸ್ತ್ರಗಳಲ್ಲಿ ಶ್ರದ್ಧೆ ಇರಿಸಿ, ಪಾಪಭೀರುವಾಗಿ, ಪುಣ್ಯಶೀಲನಾಗಿ, ನಡೆಯುವ ಮನುಷ್ಯನಿಗೆ ಈ ಲೋಕದಲ್ಲಿ ಹೊಂದಬೇಕಾದುದು ಬೇರೆಯಿಲ್ಲ. ಪರಲೋಕದಲ್ಲಿ ದೊರಕಲಾರದ ಸುಖವಿಲ್ಲ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತಮೂರನೆಯ ಅಧ್ಯಾಯ ಮುಗಿದುದು*



## ಹದಿನೆಂಟು ಮಹಾಪುರಾಣಗಳ ಶ್ಲೋಕ ಸಂಖ್ಯೆಗಳ ನಿರೂಪಣ — ಅಧ್ಯಾಯ - ೫೪

**ಋಷಿಯ ಉವಾಚ:**

**ಪುರಾಣಸಂಖ್ಯಾಮಾಚಕ್ಷ್ವ ಸೂತವಿಸ್ತರಶಃಕ್ರಮಾತ್**
**ದಾನಧರ್ಮಮಶೇಷಂ ತು ಯಥಾವದಾನುಪೂರ್ವಶಃ ॥**

**ಮುನಿಗಳು ಅಂದದ್ದು** :- ಸೂತನೇ ಎಲ್ಲ ಪುರಾಣಗಳ ಸಂಖ್ಯೆಯನ್ನು ನಮಗೆ ಕ್ರಮವಾಗಿ ನಿರೂಪಿಸು. ಹಾಗೂ ಎಲ್ಲ ವಿಧವಾದ ದಾನಧರ್ಮಗಳನ್ನು ತಿಳಿಸಿ ಹೇಳು.

**ಸೂತ** - ಈ ಪುರಾಣಗಳ ವಿಷಯಗಳನ್ನು ಪುರಾಣಪುರುಷ ಎಂದು ಹೆಸರಾದ ಮತ್ಸ್ಯರೂಪೀ ಶ್ರೀವಿಷ್ಣು, ಮನುಮುನಿಗೆ ತಿಳಿಸಿ ಹೇಳಿದ್ದಾನೆ. ಎಲ್ಲ ಪುರಾಣಗಳಲ್ಲಿಯೂ ಶ್ರೀಹರಿಯ ಮಹಿಮೆಯು ಪ್ರತಿಪಾದಿತವಾಗಿರುವದರಿಂದ ಅವನಿಗೆ ಪುರಾಣಪುರುಷನೆಂದು ಹೆಸರು ಬರಲು ಕಾರಣ. ಭಗವಂತನು ಹೇಳಿದ ಪುರಾಣಗಳ ಸ್ವರೂಪವನ್ನು ನಿನಗೆ ಹೇಳುತ್ತೇನೆ ಕೇಳು.

**ಮತ್ಸ್ಯ** :- ಎಲ್ಲ ಶಾಸ್ತ್ರಗಳಿಗಿಂತ ಮೊದಲು ಪರಬ್ರಹ್ಮ ರೂಪಿಯಾದ ಆ ಪರಮಾತ್ಮನ ಮುಖದಿಂದ ಮೊಟ್ಟ ಮೊದಲು ಪುರಾಣವೇ ಉತ್ಪನ್ನವಾಯ್ತು. ಅನಂತರ ಆ ಪರಮಾತ್ಮನ ಮುಖಗಳಿಂದ ವೇದಗಳ ಪ್ರಾದುರ್ಭಾವ. ಹಿಂದೆ

ಕಲ್ಪಾಂತರದಲ್ಲಿ ಧರ್ಮಾರ್ಥಕಾಮಗಳಿಗೆ ಸಾಧನವಾದ ಪುರಾಣವು ಒಂದೇ ಇದ್ದಿತು. ಆದರೆ ಅದರ ಪ್ರಮಾಣ ಮಾತ್ರ ನೂರಾರು ಕೋಟಿ ಗ್ರಂಥಗಳಾಗುವಷ್ಟು ವಿಸ್ತಾರವಾಗಿತ್ತು. ಹಿಂದೆ ಪ್ರಪಂಚವೆಲ್ಲವೂ ಪ್ರಳಯದಗ್ಧವಾಗಿ ಪ್ರನಷ್ಟವಾಗಿ ಹೋದಬಳಿಕ ನಾನು ಹಯಗ್ರೀವ ರೂಪವನ್ನು ಧರಿಸಿದೆ. (೪) ನಾಕು ವೇದಗಳನ್ನು, (೬) ಆರು ವೇದಾಂಗಗಳನ್ನು, ಪುರಾಣವನ್ನು, ತರ್ಕಶಾಸ್ತ್ರವನ್ನು, ಮೀಮಾಂಸಾ ಹಾಗೂ ಧರ್ಮಶಾಸ್ತ್ರಗಳನ್ನು ವ್ಯಕ್ತಗೊಳಿಸಿ ವಿಭಾಗಿಸಿ, ಇಟ್ಟೆನು. ಅನಂತರ ಮತ್ಸ್ಯರೂಪದಿಂದ ಹೊಸಸೃಷ್ಟಿಯು ಪ್ರಾರಂಭವಾದ ಬಳಿಕ ಈ ಎಲ್ಲ ವೇದಪುರಾಣ ಸಾಹಿತ್ಯವನ್ನು ನೀರಿನಲ್ಲಿ ಹರಿದಾಡುತ್ತಲೇ ಉಪದೇಶ ಮಾಡಿದೆನು. ಅದನ್ನೆಲ್ಲ ಕೇಳಿಕೊಂಡು ಬ್ರಹ್ಮದೇವನು ಮುನಿಗಳಿಗೆ ಉಪದೇಶಿಸಿದನು.

ಈ ಪುರಾಣಜ್ಞಾನದಿಂದ ಜನರಿಗೆ ಶಾಸ್ತ್ರೋಕ್ತವಾದ, ಧರ್ಮಕರ್ಮಗಳಲ್ಲಿಯೂ, ತದ್ಬೋಧಕವಾದ ಮೂಲಗ್ರಂಥಗಳಲ್ಲಿಯೂ ಪ್ರವೃತ್ತಿಯುಂಟಾಯಿತು. ಮುಂದೆ ಕಾಲಕ್ರಮದಿಂದ ಜನರಿಗೆ ಅದನ್ನೆಲ್ಲ ತಿಳಿದುಕೊಳ್ಳುವದು ದುಸ್ತರವಾಯಿತು. ಆಗ ನಾನು ಜನರ ಮೇಲಿನ ಅನುಕಂಪೆಯಿಂದ ಶ್ರೀವೇದವ್ಯಾಸರ ರೂಪವನ್ನು ಧರಿಸಿ, ಕ್ರೋಡೀಕರಿಸಿದ್ದೇನೆ. ಅದೆಲ್ಲವನ್ನೂ ಸಂಗ್ರಹಮಾಡಿ (೪) ನಾಕುಲಕ್ಷ ಗ್ರಂಥದ ಗಾತ್ರಕ್ಕೆ ಅದೆಲ್ಲವನ್ನೂ ಹೊಂದಿಸಿದ್ದೇನೆ. ಈ ೪ ಲಕ್ಷ ಗ್ರಂಥರೂಪವಾದ ಪುರಾಣವಾಙ್ಮಯವನ್ನು (೧೮) ಹದಿನೆಂಟು ಪುರಾಣಗಳ ರೂಪಗಳಿಂದ ವಿಂಗಡಿಸಿದ್ದೇನೆ. ದೇವಲೋಕದಲ್ಲಿ ಮಾತ್ರ ಈ ಪುರಾಣ ಸಾಹಿತ್ಯದ ಪ್ರಮಾಣವು ಒಂದು ನೂರು ಕೋಟಿ.

ಋಷಿವರ್ಯರೇ, ಬ್ರಹ್ಮದೇವನು ಮಹಾಮುನಿ ಮರೀಚಿ ಮಹರ್ಷಿಗೆ ಬಿತ್ತರಿಸಿದಂತೆ ನಿಮಗೆ ನಾನು ಆ ಎಲ್ಲ ಪುರಾಣಗಳ ಹೆಸರುಗಳನ್ನು ಹೇಳುತ್ತೇನೆ ಕೇಳಿರಿ. ಅವುಗಳ ಪ್ರಮಾಣ ಪ್ರಕಾರಗಳು ಕೆಳಗೆ ಕಾಣಿಸಿದಂತೆ ಇವೆ.

ಬ್ರಹ್ಮಪುರಾಣವು (೧೩) ಹದಿಮೂರು ಸಾವಿರ ಗ್ರಂಥಗಳುಳ್ಳದ್ದು. ಹಿಂದೆ ಪ್ರಪಂಚವೆಲ್ಲವೂ ಒಂದು ಅಂದವಾದ ಹೊಂದಾವರೆಯಂತೆ ಇದ್ದಿತು. ಆ ವೃತ್ತಾಂತವನ್ನೆಲ್ಲ ವಿವರಿಸುವ ಪುರಾಣವು ಪದ್ಮಪುರಾಣ ಎಂದು ಹೆಸರಾಗಿದೆ. ಇದು (೫೫) ಐವತ್ತೈದು ಸಾವಿರ ಗ್ರಂಥಗಳಿಂದೊಡಗೂಡಿದೆ. ಪರಾಶರಮಹರ್ಷಿಯು ವರಾಹಕಲ್ಪದ ವೃತ್ತಾಂತವನ್ನು ವಿಷ್ಣುಪುರಾಣರೂಪವಾಗಿ ಬಿತ್ತರಿಸಿದ್ದಾನೆ. ಇದರ ಪ್ರಮಾಣ (೨೩) ಇಪ್ಪತ್ತಮೂರು ಸಾವಿರ ಗ್ರಂಥಾತ್ಮಕ. ಶ್ವೇತಕಲ್ಪದ ಪ್ರಸಂಗದಿಂದ ವಾಯುದೇವರು ಧರ್ಮೋಪದೇಶಮಾಡಿದರು. ವಾಯುಪುರಾಣದಲ್ಲಿ ರುದ್ರಮಾಹಾತ್ಮ್ಯವು ವರ್ಣಿತವಾಗಿದೆ. ಇದರಲ್ಲಿ (೨೪) ಇಪ್ಪತ್ತುನಾಕುಸಾವಿರ ಗ್ರಂಥಗಳಿವೆ. ಗಾಯತ್ರೀಮಂತ್ರದ ಅರ್ಥಪ್ರತಿಪಾದಕವಾದ ಮಹಾಪುರಾಣಕ್ಕೆ ಭಾಗವತ ಎಂದು ಹೆಸರು. ಅದರಲ್ಲಿ ಸಾರಸ್ವತ ಕಲ್ಪದ ಮಹಾಪುರುಷರ ವೃತ್ತಾಂತಗಳೊಂದಿಗೆ ವೃತ್ರವಧಾದಿ ಅನೇಕ ಸಂಗತಿಗಳು ನಿರೂಪಿಸಲ್ಪಟ್ಟಿವೆ. (೧೮) ಹದಿನೆಂಟುಸಾವಿರ ಶ್ಲೋಕಗಳುಳ್ಳ ಈ ಭಾಗವತ ಮಹಾಪುರಾಣವನ್ನು ಭಾದ್ರಪದ

ಮಾಸದಲ್ಲಿ ಹೇಳಿ ಅಥವಾ ಕೇಳಿ, ಪೌರ್ಣಮೆಯಂದು ಬಂಗಾರದ ಸಿಂಹದೊಡನೆ ದಾನಮಾಡಿದರೆ ಸದ್ಗತಿಯಾಗುವದು. ಇದರ ಪರಿಮಿತಿ (೧೮) ಹದಿನೆಂಟು ಸಾವಿರ ಗ್ರಂಥ. ಬೃಹತ್ಕಲ್ಪಕ್ಕೆ ಸಂಬಂಧಿಸಿದ ಧರ್ಮಗಳನ್ನು ನಾರದ ಮುಖಾಂತರ ಬಿತ್ತರಿಸಿದ ಪುರಾಣವು ನಾರದೀಯಪುರಾಣ. ಇದರಲ್ಲಿ (೨೫) ಇಪ್ಪತ್ತೈದು ಸಾವಿರ ಪದ್ಯಗಳು ಇರುತ್ತವೆ. ಮಾರ್ಕಂಡೇಯ ಪುರಾಣದಲ್ಲಿ (೯) ಒಂಬತ್ತು ಸಾವಿರ ಪದ್ಯಗಳು. ವಿಷಯ ಧರ್ಮಾಧರ್ಮವಿಚಾರ. ಹೇಳಿದವರು ಧರ್ಮಚಾರಿಗಳಾದ ಮಹರ್ಷಿಗಳು. ಕೇಳಿದವರು ಪಕ್ಷಿಗಳು. ಅಗ್ನಿಪುರಾಣ (೧೬) ಹದಿನಾರುಸಾವಿರಗ್ರಂಥಗಳಿಂದ ಒಡಗೂಡಿದೆ. ಅದರಲ್ಲಿ ಬಂದುದು ಈಶಾನಕಲ್ಪದ ವೃತ್ತಾಂತ. ಅಗ್ನಿಯು ವಕ್ತಾ-ವಶಿಷ್ಠರು ಶ್ರೋತಾ. ಚತುರ್ಮುಖ ಬ್ರಹ್ಮದೇವರು ಅಘೋರ ಕಲ್ಪವೃತ್ತಾಂತದ ನೆಪದಿಂದ •ಪ್ರಪಂಚದ ಸ್ಥಿತಿಗತಿಗಳನ್ನು ಮನುವಿಗೆ ಹೇಳಿದರು. ಇದಕ್ಕೆ ಭವಿಷ್ಯಪುರಾಣವೆಂದು ಹೆಸರು. (೧೪) ಹದಿನಾಕುಸಾವಿರದಐದುನೂರು ಗ್ರಂಥಗಳಿಂದ ಕೂಡಿದ ಈ ಪುರಾಣದಲ್ಲಿ ಸೂರ್ಯನ ಮಹಿಮೆ, ಪ್ರಾಣಿವರ್ಗದ ಲಕ್ಷಣ, ಭವಿಷ್ಯಕಾಲದ ಸಮಾಚಾರಗಳೆಲ್ಲವೂ ನಿರೂಪಿತವಾಗಿವೆ.

ರಥಂತರ ಕಲ್ಪದ ವೃತ್ತಾಂತವನ್ನು ಬಿತ್ತರಿಸುವ ಬ್ರಹ್ಮವೈವರ್ತಪುರಾಣವು (೧೮) ಹದಿನೆಂಟು ಸಾವಿರ ಶ್ಲೋಕಾತ್ಮಕವಾಗಿದೆ. ಇದರ ವಿಷಯ ಕೃಷ್ಣ ಮಹಿಮೆ. ಬ್ರಹ್ಮವರಾಹವೃತ್ತಾಂತ. ನಿವೇದಕ-ಸಾವರ್ಣಿಮನು, ಶ್ರಾವಕ ನಾರದ. ಶಿವನು ಅಗ್ನಿಲಿಂಗದ ಮಧ್ಯದಲ್ಲಿ ನಿಂತು, ಮಗ ಕುಮಾರಸ್ವಾಮಿಗೆ ಪುರುಷಾರ್ಥ ಸಿದ್ಧಿಗಾಗಿ, ಕಲ್ಪಾಂತರದಲ್ಲಿ ಹೇಳಿದ ಪುರಾಣವೇ ಲಿಂಗಪುರಾಣ. ಇದರ ಪರಿಮಿತಿ (೧೧) ಹನ್ನೊಂದು ಸಾವಿರ ಗ್ರಂಥಾತ್ಮಕ.

ವಿಷ್ಣು ಭೂದೇವಿಗೆ ವರಾಹದೇವರ ಮಹಿಮೆಯನ್ನು ಬಣ್ಣಿಸಿ ಹೇಳಿದ (೨೪) ಇಪ್ಪತ್ತುನಾಕು ಸಾವಿರ ಶ್ಲೋಕಾತ್ಮಕವಾದ ಗ್ರಂಥಕ್ಕೆ ವರಾಹಪುರಾಣ ಎಂದು ಹೆಸರು. ಪುರಾಣಗಳಲ್ಲಿ ಅತಿ ಹೆಚ್ಚಿನ ಎಂದರೆ (೮೧) ಎಂಬತ್ತೊಂದು ಸಾವಿರದ ಒಂದು ನೂರು ಗ್ರಂಥವುಳ್ಳ ಬೃಹದಾಕಾರದ ಪುರಾಣವೆಂದರೆ ಸ್ಕಂದಪುರಾಣ, ಇದರಲ್ಲಿ ಕುಮಾರಸ್ವಾಮಿಯು ಮಾಹೇಶ್ವರಧರ್ಮವನ್ನೂ ಶಿವನಚರಿತ್ರೆಯನ್ನೂ ವಿಸ್ತರಿಸಿ ನಿರೂಪಿಸಿದ್ದಾನೆ. ಬ್ರಹ್ಮದೇವನು ತ್ರಿವಿಕ್ರಮನ ಮಾಹಾತ್ಮ್ಯೆಯನ್ನು ಕೂರ್ಮಕಲ್ಪಾನುಸಾರವಾಗಿ (೧೦) ಹತ್ತುಸಾವಿರಪದ್ಯಗಳಲ್ಲಿ ಪ್ರತಿಪಾದಿಸಿದ ಪುರಾಣವೇ ವಾಮನಪುರಾಣ. ಕೂರ್ಮರೂಪವನ್ನು ಧರಿಸಿದ ಶ್ರೀಹರಿಯು ಇಂದ್ರದ್ಯುಮ್ನನ ಪ್ರಸಂಗದಿಂದ ಲಕ್ಷ್ಮೀಕಲ್ಪದ ವೃತ್ತಾಂತವನ್ನು ನಾಲ್ಕು ಪುರುಷಾರ್ಥಗಳ ಮಹಿಮೆಯನ್ನು ಋಷಿಗಳಿಗೆ ಬಣ್ಣಿಸಿ ಹೇಳಿದ ಪುರಾಣವೇ ಕೂರ್ಮಪುರಾಣ. ಇದರಲ್ಲಿ (೧೮) ಹದಿನೆಂಟು ಸಾವಿರ ಪದ್ಯಗಳಿರುತ್ತವೆ. ಋಷಿಗಳೇ, ವೇದೋದ್ಧಾರ ಮಾಡಲಿಕ್ಕೆ ಮೀನ ರೂಪಧರಿಸಿದ ಹರಿಯು ಈ ಶ್ವೇತವರಾಹ ಕಲ್ಪದ ಪ್ರಾರಂಭದಲ್ಲಿ ವೈವಸ್ವತ ಮನುವಿಗೆ ನಿರೂಪಿಸಿದ ಪುರಾಣವೇ ಮತ್ಸ್ಯಪುರಾಣ. (೧೪) ಹದಿನಾಕು ಸಾವಿರ ಗ್ರಂಥಾತ್ಮಕವಾದ ಇದರಲ್ಲಿ ಶ್ರೀನೃಸಿಂಹ

ದೇವರ ಅವತಾರ ವರ್ಣನೆ. ಏಳು ಕಲ್ಪಗಳ ವೃತ್ತಾಂತವು ಇದರಲ್ಲಿ ಅಡಕವಾಗಿದೆ. ಅಂಡಾಂಕಾರವಾದ ಈ ಜಗತ್ತಿನಿಂದ ಗರುಡನ ಉತ್ಪತ್ತಿ ಹಾಗೂ ಮಾಹಾತ್ಮ್ಯ ವಿಷಯದಲ್ಲಿ ಸ್ವಯಂ ಶ್ರೀಕೃಷ್ಣನು ಹೇಳಿದ ಗರುಡಕಲ್ಪದ ವೃತ್ತಾಂತ ರೂಪವಾಗಿರುವ ಪುರಾಣವು ಗರುಡಪುರಾಣವೆನಿಸುವದು. ಇದರಲ್ಲಿ (೧೮) ಹದಿನೆಂಟು ಸಾವಿರ ಗ್ರಂಥಗಳಿವೆ.

ಬ್ರಹ್ಮಾಂಡದ ಮಹಿಮೆ ಹಾಗೂ ಭವಿಷ್ಯಕಲ್ಪಗಳ ವಿಚಾರವನ್ನು (೧೨) ಹನ್ನೆರಡುಸಾವಿರಪದ್ಯಗಳಲ್ಲಿ ಬಿತ್ತರಿಸಿದ ಪುರಾಣವೇ ಬ್ರಹ್ಮಾಂಡ ಪುರಾಣವೆನಿಸುವದು. ಶ್ರೀವ್ಯಾಸಮುನಿಯು (೪) ನಾಲ್ಕು ಲಕ್ಷ ಗ್ರಂಥಾತ್ಮವಾದ ಪುರಾಣರಾಶಿಯನ್ನು ನಮ್ಮ ತಂದೆಗೆ ಹೇಳಿದನು. ನಮ್ಮ ತಂದೆ ನನಗೆ, ನಾನು ನಿಮಗೆ. ಈ ಕ್ರಮದಲ್ಲಿ ಶ್ರೀ ಕೃಷ್ಣದ್ವೈ ೈಪಾಯನರು ಜಗದೋದ್ಧಾರಕ್ಕಾಗಿ ಈ ಎಲ್ಲ ಪುರಾಣಗಳನ್ನು ಕಡಿಮೆ ಆಗದಂತೆ ಈ ಕಾಲದ ಜನರ ಬುದ್ಧಿ ಹಾಗೂ ಯೋಗ್ಯತೆಗಳಿಗೆ ಅನುಸಾರವಾಗಿ ಸಂಕ್ಷೇಪೀಕರಿಸಿ ಹೇಳಿದ್ದಾರೆ. ಇದು ದೇವತೆಗಳಲ್ಲಿ ಇನ್ನೂ ವಿಸ್ತಾರವಾಗಿ ಅಂದರೆ ನೂರು ಕೋಟಿ ಗ್ರಂಥ ರೂಪವಾಗಿ ಇರುತ್ತದೆ. ಇದೆಲ್ಲವೂ ಮಹಾಪುರಾಣಗಳ ಸಮಾಚಾರ. ಇನ್ನು ಲೋಕದಲ್ಲಿ ಪ್ರಸಿದ್ಧವಿರುವ ಉಪಪುರಾಣಗಳ ವಿಷಯಗಳನ್ನು ತಿಳಿಸುವೆನು ಕೇಳು. ಶ್ರೀ ನೃಸಿಂಹಾವತಾರದ ವರ್ಣನೆ ಇರುವ (೧೮) ಹದಿನೆಂಟು ಸಾವಿರ ಗ್ರಂಥಾತ್ಮಕವಾದ ಪುರಾಣಕ್ಕೆ ಶ್ರೀ ನೃಸಿಂಹಪುರಾಣವೆಂದು ಹೆಸರು. ನಂದಾದೇವಿಯ ಮಹಾತ್ಮ್ಯವುಳ್ಳದ್ದು ನಂದಿಪುರಾಣ. ಪರಮೇಶ್ವರನ ಮಹಿಮೆಯನ್ನು ಹೇಳುವ ಮತ್ತೊಂದು ಕಥಾಭಾಗವು ಸಾಂಬಪುರಾಣ. ಹಿಂದಿನ ಕಲ್ಪಗಳ ವೃತ್ತಾಂತವನ್ನು ತಿಳಿಸುವ ಈ ಪುರಾಣಗಳ ಆನುಪೂರ್ವಿಯನ್ನು ತಿಳಿಯುವದರಿಂದ ಪುಣ್ಯಕೀರ್ತಿ. ಇದರಂತೆ ಆದಿತ್ಯಪುರಾಣವೂ ಒಂದು ಉಪಪುರಾಣ. ಈ ಪುರಾಣಗಳಲ್ಲಿ ಬಹುಮುಖ್ಯವಾಗಿ ಐದು ವಿಷಯಗಳು ಪ್ರತಿಪಾದಿತವಾಗಿರುತ್ತವೆ. ಬ್ರಹ್ಮದೇವರು ಮಾಡುವ ಸಾಕ್ಷಾತ್ ಸೃಷ್ಟಿ, ಅವರ ಮಾನಸಪುತ್ರರಾದ ಮರೀಚ್ಯಾದಿ ಮಹಾಮುನಿಗಳು ಮಾಡುವಪ್ರತಿಸೃಷ್ಟಿ; ಸೂರ್ಯ ಚಂದ್ರರ ವಂಶಗಳು, (೧೪) ಹದಿನಾಕು ಮನ್ವಂತರಗಳು, ಬೇರೆ ಬೇರೆ ವಂಶದಲ್ಲಿ ಜನಿಸಿದ ಋಷಿಗಳು ಹಾಗೂ ರಾಜರಚರಿತ್ರೆ, ಈ ಐದು ವಿಷಯಗಳ ವರ್ಣನೆಯೇ ಪುರಾಣದ ಮುಖ್ಯ ಲಕ್ಷಣ. ಸಾಮಾನ್ಯವಾಗಿ ಈ ಪುರಾಣಗಳಲ್ಲಿ ಬ್ರಹ್ಮ, ವಿಷ್ಣು, ಸೂರ್ಯ, ರುದ್ರರ ಮಹಿಮೆಯ ಬಣ್ಣನೆಯೂ ಪುರುಷಾರ್ಥ ವಿವೇಚನೆಯೂ ಧರ್ಮವಿರುದ್ಧವಾದ ಕಾರ್ಯಗಳ ದುಷ್ಪರಿಣಾಮಗಳ ಸ್ವರೂಪವೂ ವರ್ಣಿಸಲ್ಪಟ್ಟಿರುತ್ತವೆ. ಈ ಪುರಾಣಗಳು ಸಾತ್ವಿಕ, ರಾಜಸ, ತಾಮಸ, ಸಂಕೀರ್ಣ ಹೀಗೆ ನಾಲ್ಕು ಬಗೆ ಇವೆ.

''ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂಹರೇಃ
ರಾಜಸೇಷುಚಮಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ
ತದ್ವದಗ್ನೇಶ್ಚ ಮಾಹಾತ್ಮ್ಯಂ ತಾಮಸೇಷು ಶಿವಸ್ಯಚ ।
ಸಂಕೀರ್ಣೇಷು ಸರಸ್ವತ್ಯಾಃ ಪಿತೃಣಾಂಚ ನಿಗದ್ಯತೇ ॥''

ವಿಷ್ಣುವಿನ ಮಹಿಮೆಯನ್ನು ಹೇಳುವ ಪುರಾಣ ಸಾತ್ವಿಕಪುರಾಣ. ಬ್ರಹ್ಮನ ಮಹಿಮೆ ಹೇಳುವದು ರಾಜಸಪುರಾಣ. ಶಿವ ಮತ್ತು ಅಗ್ನಿದೇವರ ಪ್ರಭಾವ ಪ್ರಾಶಸ್ತ್ಯಗಳನ್ನು ಚಿತ್ತರಿಸುವ ಪುರಾಣಗಳೆಲ್ಲವೂ ತಾಮಸಪುರಾಣ. ನಾಲ್ಕನೆಯದಾದ ಸಂಕೀರ್ಣ ಪುರಾಣಗಳಲ್ಲಿ ಸರಸ್ವತೀ ಮತ್ತು ಪಿತೃಗಳ ಮಹಿಮೆ, ಹಾಗೂ ಪ್ರಭಾವಗಳು ವರ್ಣಿತವಾಗಿರುತ್ತವೆ. ಸತ್ಯವತಿಯ ಮಗನಾದ ಶ್ರೀವೇದವ್ಯಾಸ ಮಹರ್ಷಿಗಳು ಈ ಹದಿನೆಂಟು ಪುರಾಣಗಳನ್ನು ರಚಿಸಿ ಅವುಗಳ ವಿವರಣರೂಪವಾದ ಮಹಾಭಾರತವೆಂಬ ಹೆಬ್ಬೊತ್ತಿಗೆಯನ್ನು ಬರೆದರು. ಇದರಲ್ಲಿ ಒಂದುಲಕ್ಷ ಶ್ಲೋಕಗಳು ಇರುತ್ತವೆ. ವೇದಾರ್ಥವನ್ನು ಈ ಮಹಾಗ್ರಂಥವು ವಿಶದಪಡಿಸುತ್ತದೆ.

ಬ್ರಹ್ಮದೇವರು ಒಂದುನೂರುಕೋಟಿಶ್ಲೋಕಗಳುಳ್ಳ ವಿಸ್ತಾರವಾದ ರಾಮಚರಿತ್ರೆಯನ್ನು ದೇವತೆಗಳಿಗೆಲ್ಲ ಉಪದೇಶಿಸಿದ್ದರು. ಅದನ್ನು ನಾರದ ಮಹರ್ಷಿಯು ವಾಲ್ಮೀಕಿಮುನಿಗೆ ನಿರೂಪಿಸಿದನು. ಆ ವಾಲ್ಮೀಕಿ ಮಹರ್ಷಿಯು ಪುರುಷಾರ್ಥ ಸಾಧಕವಾದ ರಾಮಾಯಣವೆಂಬ ದಿವ್ಯಕಾವ್ಯವನ್ನು ರಚಿಸಿದನು. ಪುರಾಣಗಳು ಮಹಾಭಾರತ, ರಾಮಾಯಣ ಇವೆಲ್ಲವೂ ಸೇರಿ ಐದೂಕಾಲುಲಕ್ಷ ಗ್ರಂಥಗಳಾಗಿ ಭೂಲೋಕದಲ್ಲಿ ಖ್ಯಾತವಾಗಿವೆ. ಇವು ಪರಮಪಾವನವೂ, ಕೀರ್ತಿಪ್ರದವೂ, ಪಿತೃಗಳಿಗೆ ಅತ್ಯಂತ ಪ್ರೀತ್ಯಾಸ್ಪದವಾದವುಗಳೂ ಆಗಿರುತ್ತವೆ. ದೇವತೆಗಳಿಗೆ ತೃಪ್ತಿಯನುಂಟುಮಾಡುವ ಈ ಮತ್ಸ್ಯ ಪುರಾಣವು ಮಾನವರ ಸಕಲ ಪಾಪಗಳನ್ನು ಪರಿಹರಿಸುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು*

## ದಾನಧರ್ಮ ಮತ್ತು ವ್ರತೋಪವಾಸಗಳ ವಿಧಿ ವಿಧಾನ | ಅಧ್ಯಾಯ - ೫೫

### ನಕ್ಷತ್ರ ಪುರುಷವ್ರತ

**ಸೂತ ಉವಾಚ :**

**ಅತಃಪರಂ ಪ್ರವಕ್ಷ್ಯಾಮಿ ದಾನಧರ್ಮಾನಶೇಷತಃ**
**ವ್ರತೋಪವಾಸಸಂಯುಕ್ತಾನ್ ಯಥಾಮತ್ಸ್ಯೋದಿತಾನಿಹ ॥**

**ಸೂತ** :- ಮತ್ಸ್ಯರೂಪಿಯಾದ ಶ್ರೀ ಹರಿಯು ಮನುಮಹಾರಾಜನನ್ನು ಕುರಿತು ನಿರೂಪಿಸಿದ ವ್ರತ, ಉಪವಾಸಗಳ ಬಗೆಗೂ, ದಾನ-ಧರ್ಮಗಳ ಬಗೆಗೂ ವಿವರವಾಗಿ ಹೇಳುವೆನು. ಮತ್ತು ಧರ್ಮ, ಕಾಮ, ಅರ್ಥ, ಎಂಬ ಪುರುಷಾರ್ಥಗಳನ್ನು ಸಾಧಿಸಲು ಸಹಕಾರಿಯಾದ ಶಿವ ನಾರದ ಸಂವಾದವನ್ನು ನಿಮಗೆ ತಿಳಿಸುವೆನು. ಶಾಂತ ಮನಸ್ಸಿನಿಂದ ಕೇಳಿರಿ. ಹಿಂದೆ ಒಂದು ದಿನ ಕೈಲಾಸ ಪರ್ವತದ ಉತ್ತುಂಗ ಶೃಂಗದಲ್ಲಿ ಅನಂಗವೈರಿಯಾದ ಗಂಗಾಧರನು ತನ್ನ ಅಂಗನೆಯಾದ ಸರ್ವಮಂಗಲೆಯೊಂದಿಗೆ ಮಂಡಿಸಿದ್ದಾನೆ. ಅಲ್ಲಿಗೆ ಆ ಕಾಲದಲ್ಲಿ ನಾರದ ಮುನಿಯು ದಯಮಾಡಿಸಿ ಪ್ರಶ್ನೆ ಕೇಳಿದನು.

**ನಾರದ** :- ದೇವಾಧಿದೇವತೆಗಳಿಗೆಲ್ಲ ಒಡೆಯನಾದ ಪರಮೇಶ್ವರನೇ, ಮಾನವನು ಸಿರಿ, ಸೌಂದರ್ಯ, ಆರೋಗ್ಯ, ಸೌಭಾಗ್ಯ, ಆಯುಷ್ಯ ಮತ್ತು ಸಕಲ ವಿಧವಾದ ಭಾಗ್ಯ ಭೋಗ್ಯಗಳಿಂದ ಒಡಗೂಡಿ ನಿನ್ನ ಅಥವಾ ವಿಷ್ಣುವಿನ ಭಕ್ತನಾಗುವ ಬಗೆ ಯಾವದು ? ಇದರಂತೆ ನಾರಿಯು ಸುಮಂಗಲೆಯಾಗಿ ಸಕಲ ವಿಧವಾದ ಸೌಭಾಗ್ಯಗಳನ್ನು ಪಡೆಯಲು ಮಾರ್ಗವಾವುದು? ಕ್ರಮವಾಗಿಯಾದರೂ ಚಿಂತೆಯಿಲ್ಲ. 'ಕೊನೆಗಾದರೂ ಮುಕ್ತಿಮಂದಿರಕ್ಕೆ ತಲುಪಲು ಸಹಕಾರಿಯಾಗಬಲ್ಲ ಒಂದು ವ್ರತವನ್ನು ನನಗಾಗಿ ನಿರೂಪಿಸು.

**ಮಹಾದೇವ** :- ಬ್ರಹ್ಮಜ್ಞಾನಿಯಾದ ನಾರದನೇ, ನಿನ್ನ ಪ್ರಶ್ನೆ ಯೋಗ್ಯ ! ಎಲ್ಲ ಲೋಕಗಳಿಗೂ ಹಿತಕಾರಕ. ಇದಕ್ಕೆ ಉತ್ತರ ರೂಪವಾಗಿ ನಾನು ಈಗ ಹೇಳಲಿರುವ ವ್ರತದ ಶ್ರವಣ ಮಾತ್ರದಿಂದಲೇ ಮನಸ್ಸಿಗೆ ಶಾಂತಿ. ಇದು ನಕ್ಷತ್ರಪುರುಷ ವ್ರತ. ಈ ವ್ರತವು ಸಾಕ್ಷಾತ್ ನಾರಾಯಣಸ್ವರೂಪವೇ. ಅಡಿಯಿಂದ ಮುಡಿಯವರೆಗೆ ಹರಿಯ ನಾಮಗಳನ್ನು ಪಠಿಸುತ್ತ ಶಾಸ್ತ್ರೋಕ್ತವಾಗಿ ವಾಸುದೇವನ ಮೂರ್ತಿಯನ್ನು ಚೈತ್ರ ಮಾಸದಲ್ಲಿ ಮೂಲಾ ಮೊದಲಾದ ನಕ್ಷತ್ರಗಳಲ್ಲಿ ಪೂಜಿಸಬೇಕು.

ಮೂಲಾ ನಕ್ಷತ್ರದಲ್ಲಿ ''ವಿಶ್ವಧರಾಯನಮಃ'' ಎಂದು ಪಾದಗಳನ್ನು ಪೂಜಿಸಬೇಕು. ರೋಹಿಣೀ ನಕ್ಷತ್ರದಲ್ಲಿ 'ಅನಂತಾಯನಮಃ' ಎಂದು ಹಿಮ್ಮಡಿಯನ್ನೂ, ಅಶ್ವಿನೀ ನಕ್ಷತ್ರದಲ್ಲಿ 'ವರದಾಯನಮಃ' ಎಂದು ಮೊಣಕಾಲುಗಳನ್ನೂ, ಪೂರ್ವಾಷಾಢಾ, ಉತ್ತರಾಷಾಢಾ ಎಂಬ ನಕ್ಷತ್ರಗಳಲ್ಲಿ 'ನಮಃಶಿವಾಯ' ಎಂದು ತೊಡೆಗಳನ್ನೂ, ಪೂರ್ವಾ, ಉತ್ತರಾ, ಫಲ್ಗುನೀ ನಕ್ಷತ್ರಗಳಲ್ಲಿ 'ಕಾಮಾಯನಮಃ' ಎಂದು ಮೇಢ್ರಾವಯವನ್ನೂ, ಕೃತ್ತಿಕಾ ನಕ್ಷತ್ರದಲ್ಲಿ, 'ಶಾರ್ಙ್ಗಧರಾಯನಮಃ' ಎಂದು ಸೊಂಟವನ್ನೂ, ಪೂರ್ವಾಭಾದ್ರಪದ, ಉತ್ತರಾಭಾದ್ರಪದ ನಕ್ಷತ್ರಗಳಲ್ಲಿ, 'ಕೇಶವಾಯನಮಃ' ಎಂದು ಪಾರ್ಶ್ವಗಳನ್ನೂ, ರೇವತೀ ನಕ್ಷತ್ರದಲ್ಲಿ, 'ದಾಮೋದರಾಯ ನಮಃ' ಎಂದು ಉದರವನ್ನೂ, ಅನುರಾಧಾ ನಕ್ಷತ್ರದಂದು 'ಮಾಧವಾಯನಮಃ' ಎಂದು ಹೃದಯವನ್ನೂ, ಧನಿಷ್ಠೆಯಲ್ಲಿ 'ಪಾಪನಾಶಕಾಯನಮಃ' ಎಂದು ಬೆನ್ನನ್ನೂ ವಿಶಾಖೆಯಲ್ಲಿ 'ಶಂಖಚಕ್ರಗದಾಖಡ್ಗಧರಾಯನಮಃ' ಎಂದು ಬಾಹುಗಳನ್ನೂ, ಹಸ್ತಾ ನಕ್ಷತ್ರದಂದು 'ಮಧುಸೂದನಾಯನಮಃ' ಎಂದು ಕೈಗಳನ್ನೂ, ಪುನರ್ವಸು ನಕ್ಷತ್ರದಂದು, 'ಸಾಮವೇದ ಪತಯೇನಮಃ' ಎಂದು ಅಂಗೈಗಳನ್ನೂ, ಆಶ್ಲೇಷಾ ನಕ್ಷತ್ರದಲ್ಲಿ, 'ಮತ್ಸ್ಯರೂಪಿಣೇನಮಃ' ಎಂದು ಉಗುರುಗಳನ್ನೂ ಜ್ಯೇಷ್ಠಾ ನಕ್ಷತ್ರದಲ್ಲಿ 'ಕೂರ್ಮಾಯನಮಃ' ಎಂದು ಕಂಠವನ್ನೂ, ಶ್ರವಣಾ ನಕ್ಷತ್ರದಲ್ಲಿ 'ವರಾಹಾಯನಮಃ' ಎಂದು ಕಿವಿಗಳನ್ನೂ, ಪುಷ್ಯ ನಕ್ಷತ್ರದಲ್ಲಿ 'ನರಸಿಂಹಾಯನಮಃ' ಎಂದು ಮುಖವನ್ನೂ ಸ್ವಾತಿ ನಕ್ಷತ್ರದಲ್ಲಿ 'ವಾಮನಾಯನಮಃ' ಎಂದು ಹಲ್ಲುಗಳನ್ನೂ, ಶತಭಿಷಾ ನಕ್ಷತ್ರದಲ್ಲಿ 'ಪರಶುರಾಮಾಯನಮಃ' ಎಂದು ಮುಖವನ್ನೂ, ಮಘಾದಲ್ಲಿ 'ರಾಮಾಯನಮಃ' ಎಂದು ಮೂಗನ್ನೂ, ಮೃಗಶಿರದಲ್ಲಿ 'ಬಲರಾಮಾಯನಮಃ' ಎಂದು ಕಣ್ಣುಗಳನ್ನೂ,

ಚಿತ್ತಾ ನಕ್ಷತ್ರದಲ್ಲಿ 'ನಮಃಶಾಂತಾಯಬುದ್ಧಾಯ' ಎಂದು ಹಣೆಯನ್ನೂ, ಭರಣಿಯಲ್ಲಿ 'ಕಲ್ಕಿರೂಪಿಣೇನಮಃ' ಎಂದು ತಲೆಯನ್ನೂ ಆರ್ದ್ರಾ ನಕ್ಷತ್ರದಲ್ಲಿ 'ಹರಯೇನಮಃ' ಎಂದು ಕೇಶಗಳನ್ನೂ ಪೂಜಿಸಬೇಕು.

ಆ ಆ ನಕ್ಷತ್ರಗಳಿದ್ದ ದಿನ ಉಪವಾಸವಿದ್ದು ಭಕ್ತಿಯಿಂದ ಭಗವಂತನನ್ನು ಮೇಲೆ ಹೇಳಿದ ಕ್ರಮದಲ್ಲಿ ಅರ್ಚಿಸುವದು ನಕ್ಷತ್ರಪುರುಷವ್ರತದ ಮುಖ್ಯ ಕರ್ತವ್ಯ. ಪ್ರತಿದಿನವೂ ಬ್ರಾಹ್ಮಣಭೋಜನ ಮಾಡಿಸಬೇಕು. ವ್ರತವು ಸಾಂಗವಾಗಿ ಮುಗಿದ ಬಳಿಕ ಮುತ್ತುರತ್ನಗಳಿಂದ ಅಲಂಕೃತವಾದ ವಾಸುದೇವನಮೂರ್ತಿಯನ್ನು ಸಾಮಗಾನ ಪಂಡಿತನೂ ಸುಶೀಲನೂ, ವಿನಯಶಾಲಿಯೂ ಆದ ಸದ್ಗುಣಿಯಾದ ದ್ವಿಜನಿಗೆ ದಾನಕೊಡಬೇಕು. ಅದರೊಂದಿಗೆ ಬಟ್ಟೆಬರೆ, ಪಟ್ಟೆಪೀತಾಂಬರ, ಹಣ ಹೊನ್ನು, ಹಾಸಿಗೆ ಹಸು ಹಾಗೂ ಸಂಸಾರಕ್ಕೆ ಉಪಯುಕ್ತವಾದ ಇತರ ಪದಾರ್ಥಗಳನ್ನೂ ದಾನ ಕೊಡಬೇಕು. ಇದರಂತೆ ಲಕ್ಷ್ಮೀನಾರಾಯಣರ ಬಂಗಾರದ ಮೂರ್ತಿಗಳನ್ನು ಮಾಡಿಸಿ ಒಳ್ಳೆ ಹಾಸಿಗೆಯೊಂದಿಗೆ ಬ್ರಾಹ್ಮಣರಿಗೆ ದಾನಕೊಡಬೇಕು. "ಕೃಷ್ಣ, ನಿನ್ನ ಹಾಸಿಗೆ ಎಂದೂ ಲಕ್ಷ್ಮಿಯಿಂದ ಶೂನ್ಯವಾಗುವದಿಲ್ಲ. ಅದರಂತೆ ನನ್ನ ಹಾಸಿಗೆಯೂ ಎಂದೂ ತೆರವಾಗದಿರಲಿ" ಎಂದು ಪ್ರಾರ್ಥಿಸಬೇಕು. ಇದರಿಂದ ಮಾನವರ ದಾಂಪತ್ಯ ಸುಖವು ಅವಿಚ್ಛಿನ್ನವಾಗಿ, ಅಖಂಡಸೌಭಾಗ್ಯ ಪ್ರಾಪ್ತಿಯಾಗುವದು.

ಈ ವ್ರತ ಮಾಡುವವರು ಊಟದಲ್ಲಿ ಉಪ್ಪು ಬಳಸಬಾರದು. ಅಲವಣ ಪಥ್ಯ ಮಾಡಬೇಕು. ವ್ರತ ಮುಗಿಯುವವರೆಗೆ ಜಿಪುಣತನ ಮಾಡದೇ ಬ್ರಹ್ಮಭೋಜನ ಮಾಡಿಸಬೇಕು. ಹೀಗೆ ನಕ್ಷತ್ರವ್ರತಮಾಡುವವರು ಶ್ರೀವಿಷ್ಣುವಿನ ಅನುಗ್ರಹದಿಂದ ಸಕಲೇಷ್ಟಗಳನ್ನೂ ಪಡೆಯುವರು. ಅವರ ಹಿಂದುಮುಂದಿನ ತಲೆಯವರು ಮಾಡಿದ ಬ್ರಹ್ಮಹತ್ಯಾದಿ ದೋಷಗಳೂ ಕೂಡ ಇದರಿಂದ ಪರಿಹಾರ ಕಾಣುವವು. ಈ ವ್ರತದ ವಿಧಿವಿಧಾನ ಮಹಿಮೆಗಳನ್ನು ಭಕ್ತಿಯಿಂದ ಆಲಿಸಿದ ಪುರುಷರೂ ಪ್ರಮದೆಯರೂ ಕಲಿಕಲ್ಮಷವನ್ನೆಲ್ಲ ಕಳೆದುಕೊಂಡು ಇಷ್ಟಾರ್ಥ ಪುರುಷಾರ್ಥಗಳನ್ನೆಲ್ಲ ಪಡೆಯುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೈದನೆಯ ಅಧ್ಯಾಯ ಮುಗಿದುದು*



## ಉಪವಾಸಮಾಡಲು ಶಕ್ತಿಇಲ್ಲದವರಿಗೆ ಕೆಲವು ವ್ರತಗಳು | ಅಧ್ಯಾಯ - ೫೬

**ನಾರದ ಉವಾಚ**

**ಉಪವಾಸೇಷ್ವಶಕ್ತಸ್ಯ ತದೇವ ಫಲಮಿಚ್ಛತಃ**
**ಅನಭ್ಯಾಸೇನ ರೋಗಾದ್ವಾ ಕಿಮಿಷ್ಟಂ ವ್ರತಮುತ್ತಮಂ ॥**

**ನಾರದ** :- ರೋಗ, ರುಜಿನ, ಅಶಕ್ತತೆ ಅನಭ್ಯಾಸ ಮುಂತಾದ ಕಾರಣಗಳಿಂದ ಉಪವಾಸಮಾಡಲು ಶಕ್ಯವಿಲ್ಲದವರಿಗೆ ಅದೇ ಫಲವು ಪ್ರಾಪ್ತವಾಗಬೇಕಾದರೆ ಏನು ಮಾಡಬೇಕು ? ಅದಕ್ಕೇನಾದರೂ ಬೇರೆ ವ್ರತ ಉಂಟೇ ? ಇದ್ದರೆ ಅದು ಯಾವದು ?

**ಮಹಾದೇವ** :- ಅಂಥವರು ಶಾಸ್ತ್ರೋಕ್ತ ವಿಧಿಯಿಂದ **ಆದಿತ್ಯಶಯನ** ಎಂಬ ವ್ರತವನ್ನು ಆಚರಿಸಬೇಕು. ಕೆಲವು ವಿಶಿಷ್ಟ ನಕ್ಷತ್ರವಿದ್ದ ದಿನಗಳಲ್ಲಿ ಈ ವ್ರತವನ್ನುಮಾಡಿ ಶಿವನನ್ನು ಅರ್ಚಿಸಬೇಕು. ಹಸ್ತಾನಕ್ಷತ್ರಸಹಿತವಾದ ಸಪ್ತಮಿ ಭಾನುವಾರ ಮತ್ತು ಸೂರ್ಯಸಂಕ್ರಾಂತಿ ದಿನಗಳಂದು ಈ ವ್ರತವನ್ನು ಆಚರಿಸಿದರೆ ಸರ್ವಾರ್ಥಸಿದ್ಧಿ. ಉಮಾಮಹೇಶ್ವರರಮೂರ್ತಿಯನ್ನು ಸೂರ್ಯನ ನಾಮಗಳಿಂದ ಪೂಜಿಸಬೇಕು. ಅದೇ ರೀತಿಯಾಗಿ ಶಿವಲಿಂಗದಲ್ಲಿ ಸೂರ್ಯನ ಪೂಜೆ ಮಾಡಬೇಕು. ಸೂರ್ಯನಿಗೂ ಶಿವನಿಗೂ ಭೇದವೇ ಇಲ್ಲ. ಆದುದರಿಂದಲೇ ಅಲ್ಲಿ ಇವನ ಪೂಜೆ. ಇಲ್ಲಿ ಅವನ ಪೂಜೆ. ಅದರ ಕ್ರಮವನ್ನು ಬಿತ್ತರಿಸುವೆ ಕೇಳು.

ಸೂರ್ಯಾಯನಮಃ ಎಂದು ಹಸ್ತಾ ನಕ್ಷತ್ರದಲ್ಲಿ ಪಾದಗಳನ್ನೂ, ಚಿತ್ರಾ ನಕ್ಷತ್ರದಲ್ಲಿ ಹಿಮ್ಮಡಿ, ಸ್ವಾತಿ ನಕ್ಷತ್ರದಲ್ಲಿ ಮೊಳಕಾಲು, ವಿಶಾಖೆಯಲ್ಲಿ ಮಂಡೆ, ಅನುರಾಧಾದಲ್ಲಿ ತೊಡೆ, ಜ್ಯೇಷ್ಠಾದಲ್ಲಿ ಗುಹ್ಯದೇಶ, ಮೂಲಾದಲ್ಲಿ ಸೊಂಟ, ಪೂರ್ವೋತ್ತರಾಷಾಢಾಗಳಲ್ಲಿ ನಾಭಿ, ಶ್ರವಣಾದಲ್ಲಿ ಉದರ, ಧನಿಷ್ಠಾದಲ್ಲಿ ಬೆನ್ನು, ಶತಭಿಷಾದಲ್ಲಿ ಕಣ್ಣು, ಪೂರ್ವಾಭಾದ್ರಾ ಉತ್ತರಾಭಾದ್ರಾಗಳಲ್ಲಿ ಬಾಹು, ರೇವತಿಯಲ್ಲಿ ಹಸ್ತಾ, ಅಶ್ವಿನಿಯಲ್ಲಿ ಉಗುರು, ಭರಣಿಯಲ್ಲಿ ಕೊರಳು, ಕೃತ್ತಿಕಾದಲ್ಲಿ ಕುತ್ತಿಗೆ, ರೋಹಿಣಿಯಲ್ಲಿ ತುಟಿ, ಮೃಗಶಿರೆಯಲ್ಲಿ ಹಲ್ಲು, ಆರ್ದ್ರಾದಲ್ಲಿ ನಾಲಿಗೆ, ಪುನರ್ವಸುವಿನಲ್ಲಿ ಮೂಗು, ಪುಷ್ಯದಲ್ಲಿ ಹಣೆ, ಅಶ್ಲೇಷಾದಲ್ಲಿ ಮುಂಗುರುಳು, ಮಘಾದಲ್ಲಿ ತಲೆ ಹಾಗೂ ಕಿವಿ, ಪೂರ್ವಾ ಫಲ್ಗುಣಿಯಲ್ಲಿ ನೇತ್ರ, ಉತ್ತರಾಫಲ್ಗುಣಿಯಲ್ಲಿ ಹುಬ್ಬುಗಳನ್ನು ಪೂಜಿಸಬೇಕು. ಹೀಗೆ ಶಿವಲಿಂಗದಲ್ಲಿ ಸೂರ್ಯನನ್ನೂ, ಸೂರ್ಯಮಂಡಲದಲ್ಲಿ ಶಿವನನ್ನೂ ಅವರವರ ಪೂಜ್ಯನಾಮಗಳನ್ನು ಉಚ್ಚರಿಸಿ ಅರ್ಚಿಸಬೇಕು. ಮತ್ತು

**''ನಮೋಸ್ತು ಪಾಶಾಂಕುಶ ಶೂಲಪದ್ಮ**
**ಕಪಾಲಸರ್ಪೇಂದುಧನುರ್ಧರಾಯ ॥**
**ಗಜಾಸುರಾನಂಗ ಪುರಾಂಧಕಾದಿ**
**ವಿನಾಶಕಾರಾಯನಮಃಶಿವಾಯ॥''**

ಪಾಶ, ಅಂಕುಶ, ತ್ರಿಶೂಲ, ಪದ್ಮ, ಕಪಾಲ, ಹಾವು, ಚಂದ್ರ, ಪಿನಾಕಗಳನ್ನು ಧರಿಸಿದ ಶಿವನಿಗೆ ನಮಸ್ಕಾರ. ಗಜಾಸುರ, ಕಾಮ, ತ್ರಿಪುರಾಸುರ, ಅಂಧಕಾಸುರ ಮುಂತಾದ ವೈರಿಗಳನ್ನು ವಿನಾಶಗೈದ ಪರಶಿವನಿಗೆ ಪ್ರಣಾಮ.'' ಎಂದು ಹೇಳಿ ಶಂಕರನನ್ನು ಸ್ತೋತ್ರಗೈಯ್ಯಬೇಕು. ಈ ವ್ರತಮಾಡುವಾಗ ಸಂಜೆಯವರೆಗೆ ಮಾತ್ರ ಉಪವಾಸವಿದ್ದು ರಾತ್ರಿ ಭೋಜನಮಾಡಬೇಕು. ಎಣ್ಣೆ, ತರಕಾರಿ, ಮಾಂಸ, ಉಪ್ಪು ಬಿಟ್ಟು ಊಟಮಾಡಬೇಕು. ಎಲೆಯಲ್ಲಿ ಏನೂ ಚೆಲ್ಲಬಾರದು. ಹೀಗೆ ಆದಿತ್ಯಶಯನ ವ್ರತಮಾಡಿ ಪುನರ್ವಸು ನಕ್ಷತ್ರದಂದು ಒಂದು ಬಳ್ಳದಲ್ಲಿ ಅಕ್ಕಿ, ಅತ್ತಿಮರದ ಪಾತ್ರೆಯಲ್ಲಿ ತುಪ್ಪ ಹಾಗೂ ಚಿನ್ನವನ್ನು ಬ್ರಾಹ್ಮಣನಿಗೆ ದಾನಕೊಡಬೇಕು.

ಚಿತ್ರಾ ನಕ್ಷತ್ರದಲ್ಲಿ 'ನಮಃಶಾಂತಾಯಬುದ್ಧಾಯ' ಎಂದು ಹಣೆಯನ್ನೂ, ಭರಣಿಯಲ್ಲಿ ' ಕಲ್ಕಿರೂಪಿಣೇನಮಃ ' ಎಂದು ತಲೆಯನ್ನೂ ಆರ್ದ್ರಾ ನಕ್ಷತ್ರದಲ್ಲಿ ' ಹರಯೇನಮಃ ' ಎಂದು ಕೇಶಗಳನ್ನೂ ಪೂಜಿಸಬೇಕು.

ಆ ಆ ನಕ್ಷತ್ರಗಳಿದ್ದ ದಿನ ಉಪವಾಸವಿದ್ದು ಭಕ್ತಿಯಿಂದ ಭಗನಂತನನ್ನು ಮೇಲೆ ಹೇಳಿದ ಕ್ರಮದಲ್ಲಿ ಅರ್ಚಿಸುವದು ನಕ್ಷತ್ರಪುರುಷವ್ರತದ ಮುಖ್ಯ ಕರ್ತವ್ಯ. ಪ್ರತಿದಿನವೂ ಬ್ರಾಹ್ಮಣಭೋಜನ ಮಾಡಿಸಬೇಕು. ವ್ರತವು ಸಾಂಗವಾಗಿ ಮುಗಿದ ಬಳಿಕ ಮುತ್ತುರತ್ನಗಳಿಂದ ಅಲಂಕೃತವಾದ ವಾಸುದೇವನಮೂರ್ತಿಯನ್ನು ಸಾಮಗಾನ ಪಂಡಿತನೂ ಸುಶೀಲನೂ, ವಿನಯಶಾಲಿಯೂ ಆದ ಸದ್ಗುಣಿಯಾದ ದ್ವಿಜನಿಗೆ ದಾನಕೊಡಬೇಕು. ಅದರೊಂದಿಗೆ ಬಟ್ಟೆಬರೆ, ಪಟ್ಟೆಪೀತಾಂಬರ, ಹಣ ಹೊನ್ನು, ಹಾಸಿಗೆ ಹಸು ಹಾಗೂ ಸಂಸಾರಕ್ಕೆ ಉಪಯುಕ್ತವಾದ ಇತರ ಪದಾರ್ಥಗಳನ್ನೂ ದಾನ ಕೊಡಬೇಕು. ಇದರಂತೆ ಲಕ್ಷ್ಮೀನಾರಾಯಣರ ಬಂಗಾರದ ಮೂರ್ತಿಗಳನ್ನು ಮಾಡಿಸಿ ಒಳ್ಳೆ ಹಾಸಿಗೆಯೊಂದಿಗೆ ಬ್ರಾಹ್ಮಣರಿಗೆ ದಾನಕೊಡಬೇಕು. ''ಕೃಷ್ಣ, ನಿನ್ನ ಹಾಸಿಗೆ ಎಂದೂ ಲಕ್ಷ್ಮಿಯಿಂದ ಶೂನ್ಯವಾಗುವದಿಲ್ಲ. ಅದರಂತೆ ನನ್ನ ಹಾಸಿಗೆಯೂ ಎಂದೂ ತೆರವಾಗದಿರಲಿ '' ಎಂದು ಪ್ರಾರ್ಥಿಸಬೇಕು. ಇದರಿಂದ ಮಾನವರ ದಾಂಪತ್ಯ ಸುಖವು ಅವಿಚ್ಛಿನ್ನವಾಗಿ, ಅಖಂಡಸೌಭಾಗ್ಯ ಪ್ರಾಪ್ತಿಯಾಗುವದು.

ಈ ವ್ರತ ಮಾಡುವವರು ಊಟದಲ್ಲಿ ಉಪ್ಪು ಬಳಸಬಾರದು. ಅಲವಣ ಪಥ್ಯ ಮಾಡಬೇಕು. ವ್ರತ ಮುಗಿಯುವವರೆಗೆ ಜಿಪುಣತನ ಮಾಡದೇ ಬ್ರಹ್ಮಭೋಜನ ಮಾಡಿಸಬೇಕು. ಹೀಗೆ ನಕ್ಷತ್ರವ್ರತಮಾಡುವವರು ಶ್ರೀವಿಷ್ಣುವಿನ ಅನುಗ್ರಹದಿಂದ ಸಕಲೇಷ್ಟಗಳನ್ನೂ ಪಡೆಯುವರು. ಅವರ ಹಿಂದುಮುಂದಿನ ತಲೆಯವರು ಮಾಡಿದ ಬ್ರಹ್ಮಹತ್ಯಾದಿ ದೋಷಗಳೂ ಕೂಡ ಇದರಿಂದ ಪರಿಹಾರ ಕಾಣುವವು. ಈ ವ್ರತದ ವಿಧಿವಿಧಾನ ಮಹಿಮೆಗಳನ್ನು ಭಕ್ತಿಯಿಂದ ಆಲಿಸಿದ ಪುರುಷರೂ ಪ್ರಮದೆಯರೂ ಕಲಿಕಲ್ಮಷವನ್ನೆಲ್ಲ ಕಳೆದುಕೊಂಡು ಇಷ್ಟಾರ್ಥ ಪುರುಷಾರ್ಥಗಳನ್ನೆಲ್ಲ ಪಡೆಯುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೈದನೆಯ ಅಧ್ಯಾಯ ಮುಗಿದುದು*



## ಉಪವಾಸಮಾಡಲು ಶಕ್ತಿಇಲ್ಲದವರಿಗೆ ಕೆಲವು ವ್ರತಗಳು — ಅಧ್ಯಾಯ - ೫೬

**ನಾರದ ಉವಾಚ**

**ಉಪವಾಸೇಷ್ವಶಕ್ತಸ್ಯ ತದೇವ ಫಲಮಿಚ್ಛತಃ**
**ಅನಭ್ಯಾಸೇನ ರೋಗಾದ್ವಾ ಕಿಮಿಷ್ಟಂ ವ್ರತಮುತ್ತಮಂ ॥**

**ನಾರದ** :- ರೋಗ, ರುಜಿನ, ಅಶಕ್ತತೆ ಅನಭ್ಯಾಸ ಮುಂತಾದ ಕಾರಣಗಳಿಂದ ಉಪವಾಸಮಾಡಲು ಶಕ್ಯವಿಲ್ಲದವರಿಗೆ ಅದೇ ಫಲವು ಪ್ರಾಪ್ತವಾಗಬೇಕಾದರೆ ಏನು ಮಾಡಬೇಕು ? ಅದಕ್ಕೇನಾದರೂ ಬೇರೆ ವ್ರತ ಉಂಟೇ ? ಇದ್ದರೆ ಅದು ಯಾವದು ?

**ಮಹಾದೇವ** :- ಅಂಥವರು ಶಾಸ್ತ್ರೋಕ್ತ ವಿಧಿಯಿಂದ **ಆದಿತ್ಯಶಯನ** ಎಂಬ ವ್ರತವನ್ನು ಆಚರಿಸಬೇಕು. ಕೆಲವು ವಿಶಿಷ್ಟ ನಕ್ಷತ್ರವಿದ್ದ ದಿನಗಳಲ್ಲಿ ಈ ವ್ರತವನ್ನುಮಾಡಿ ಶಿವನನ್ನು ಅರ್ಚಿಸಬೇಕು. ಹಸ್ತಾನಕ್ಷತ್ರಸಹಿತವಾದ ಸಪ್ತಮಿ ಭಾನುವಾರ ಮತ್ತು ಸೂರ್ಯಸಂಕ್ರಾಂತಿ ದಿನಗಳಂದು ಈ ವ್ರತವನ್ನು ಆಚರಿಸಿದರೆ ಸರ್ವಾರ್ಥಸಿದ್ಧಿ. ಉಮಾಮಹೇಶ್ವರರಮೂರ್ತಿಯನ್ನು ಸೂರ್ಯನ ನಾಮಗಳಿಂದ ಪೂಜಿಸಬೇಕು. ಅದೇ ರೀತಿಯಾಗಿ ಶಿವಲಿಂಗದಲ್ಲಿ ಸೂರ್ಯನ ಪೂಜೆ ಮಾಡಬೇಕು. ಸೂರ್ಯನಿಗೂ ಶಿವನಿಗೂ ಭೇದವೇ ಇಲ್ಲ. ಆದುದರಿಂದಲೇ ಅಲ್ಲಿ ಇವನ ಪೂಜೆ. ಇಲ್ಲಿ ಅವನ ಪೂಜೆ. ಅದರ ಕ್ರಮವನ್ನು ಬಿತ್ತರಿಸುವೆ ಕೇಳು.

ಸೂರ್ಯಾಯನಮಃ ಎಂದು ಹಸ್ತಾ ನಕ್ಷತ್ರದಲ್ಲಿ ಪಾದಗಳನ್ನೂ, ಚಿತ್ರಾ ನಕ್ಷತ್ರದಲ್ಲಿ ಹಿಮ್ಮಡಿ, ಸ್ವಾತಿ ನಕ್ಷತ್ರದಲ್ಲಿ ಮೊಳಕಾಲು, ವಿಶಾಖೆಯಲ್ಲಿ ಮಂಡೆ, ಅನುರಾಧಾದಲ್ಲಿ ತೊಡೆ, ಜ್ಯೇಷ್ಠಾದಲ್ಲಿ ಗುಹ್ಯದೇಶ, ಮೂಲಾದಲ್ಲಿ ಸೊಂಟ, ಪೂರ್ವೋತ್ತರಾಷಾಢಾಗಳಲ್ಲಿ ನಾಭಿ, ಶ್ರವಣಾದಲ್ಲಿ ಉದರ, ಧನಿಷ್ಠಾದಲ್ಲಿ ಬೆನ್ನು, ಶತಭಿಷಾದಲ್ಲಿ ಕಣ್ಣು, ಪೂರ್ವಾಭಾದ್ರಾ ಉತ್ತರಾಭಾದ್ರಾಗಳಲ್ಲಿ ಬಾಹು, ರೇವತಿಯಲ್ಲಿ ಹಸ್ತಾ, ಅಶ್ವಿನಿಯಲ್ಲಿ ಉಗುರು, ಭರಣಿಯಲ್ಲಿ ಕೊರಳು, ಕೃತ್ತಿಕಾದಲ್ಲಿ ಕುತ್ತಿಗೆ, ರೋಹಿಣಿಯಲ್ಲಿ ತುಟಿ, ಮೃಗಶಿರೆಯಲ್ಲಿ ಹಲ್ಲು, ಆರ್ದ್ರಾದಲ್ಲಿ ನಾಲಿಗೆ, ಪುನರ್ವಸುವಿನಲ್ಲಿ ಮೂಗು, ಪುಷ್ಯದಲ್ಲಿ ಹಣೆ, ಆಶ್ಲೇಷಾದಲ್ಲಿ ಮುಂಗುರುಳು, ಮಘಾದಲ್ಲಿ ತಲೆ ಹಾಗೂ ಕಿವಿ, ಪೂರ್ವಾ ಫಲ್ಗುಣಿಯಲ್ಲಿ ನೇತ್ರ, ಉತ್ತರಾಫಲ್ಗುಣಿಯಲ್ಲಿ ಹುಬ್ಬುಗಳನ್ನು ಪೂಜಿಸಬೇಕು. ಹೀಗೆ ಶಿವಲಿಂಗದಲ್ಲಿ ಸೂರ್ಯನನ್ನೂ, ಸೂರ್ಯಮಂಡಲದಲ್ಲಿ ಶಿವನನ್ನೂ ಅವರವರ ಪೂಜ್ಯನಾಮಗಳನ್ನು ಉಚ್ಚರಿಸಿ ಅರ್ಚಿಸಬೇಕು. ಮತ್ತು

**''ನಮೋಸ್ತು ಪಾಶಾಂಕುಶ ಶೂಲಪದ್ಮ**
**ಕಪಾಲಸರ್ಪೇಂದುಧನುರ್ಧರಾಯ ॥**
**ಗಜಾಸುರಾನಂಗ ಪುರಾಂಧಕಾದಿ**
**ವಿನಾಶಕಾರಾಯನಮಃಶಿವಾಯ॥''**

ಪಾಶ, ಅಂಕುಶ, ತ್ರಿಶೂಲ, ಪದ್ಮ, ಕಪಾಲ, ಹಾವು, ಚಂದ್ರ, ಪಿನಾಕಗಳನ್ನು ಧರಿಸಿದ ಶಿವನಿಗೆ ನಮಸ್ಕಾರ. ಗಜಾಸುರ, ಕಾಮ, ತ್ರಿಪುರಾಸುರ, ಅಂಧಕಾಸುರ ಮುಂತಾದ ವೈರಿಗಳನ್ನು ವಿನಾಶಗೈದ ಪರಶಿವನಿಗೆ ಪ್ರಣಾಮ.'' ಎಂದು ಹೇಳಿ ಶಂಕರನನ್ನು ಸ್ತೋತ್ರಗೈಯ್ಯಬೇಕು. ಈ ವ್ರತಮಾಡುವಾಗ ಸಂಜೆಯವರೆಗೆ ಮಾತ್ರ ಉಪವಾಸವಿದ್ದು ರಾತ್ರಿ ಭೋಜನಮಾಡಬೇಕು. ಎಣ್ಣೆ, ತರಕಾರಿ, ಮಾಂಸ, ಉಪ್ಪು ಬಿಟ್ಟು ಊಟಮಾಡಬೇಕು. ಎಲೆಯಲ್ಲಿ ಏನೂ ಚೆಲ್ಲಬಾರದು. ಹೀಗೆ ಆದಿತ್ಯಶಯನ ವ್ರತಮಾಡಿ ಪುನರ್ವಸು ನಕ್ಷತ್ರದಂದು ಒಂದು ಬಳ್ಳದಲ್ಲಿ ಅಕ್ಕಿ, ಅತ್ತಿಮರದ ಪಾತ್ರೆಯಲ್ಲಿ ತುಪ್ಪ ಹಾಗೂ ಚಿನ್ನವನ್ನು ಬ್ರಾಹ್ಮಣನಿಗೆ ದಾನಕೊಡಬೇಕು.

ಈ ವ್ರತ ಮಾಡುವಾಗ ಏಳನೆಯ ದಿನ ಸಾಯಂಕಾಲ ಪಾರಣೆಯ ಸಮಯದಲ್ಲಿ ಜೋಡಿ ವಸ್ತ್ರವನ್ನು ಕೊಡಬೇಕು. ಕೊನೆಯ ಪಾರಣೆಯದಿನ ತುಪ್ಪ ಹಾಲು, ಬೆಲ್ಲ, ಬೆರಿಸಿ ಭೂರಿಭೋಜನ ಮಾಡಿಸಬೇಕು. ಎಂಟುಎಸಳಿನ ಬಂಗಾರದ ಕಮಲವನ್ನು ಎಂಟುಅಂಗುಲ ಆಕಾರದಲ್ಲಿ ರಚಿಸಿ ಪದ್ಮರಾಗದ ಎಲೆಗಳಿಂದ ಅಲಂಕರಿಸಿ ಉತ್ತಮವಾದ ಮೆತ್ತನ್ನ ಹಾಸಿಗೆಯಲ್ಲಿ ಇರಿಸಿ ಯೋಗ್ಯದ್ವಿಜನಿಗೆ ದಾನವೀಯಬೇಕು. ಇದರ ಜೊತೆಗೆ ದಿಂಬು, ಬೀಸಣಿಕೆ, ಮಗ್ಗಲು ಹಾಸಿಗೆ, ಮೇಲ್ವಾಸು, ಕನ್ನಡಿ, ಆಸನ, ಚಾಮರ, ಪಾದರಕ್ಷೆ, ಕೊಡೆ, ಬಟ್ಟೆ, ಬಂಗಾರ, ಗಂಧಚಂದನಗಳನ್ನೂ ದಾನಕೊಡಬೇಕು. ಬೆಳಿಗ್ಗೆ ಕರುಸಹಿತವಾದ ಹಿಂಡುವಹಸುವನ್ನು ಬೆಳ್ಳಿಯ ಗೊರಸು ಚಿನ್ನದಕೊಂಬು ವಸ್ತ್ರಗಳಿಂದ ಅಲಂಕರಿಸಿ ಕರೆಯುವ ಹಾಲಿನ ಪಾತ್ರೆಯೊಂದಿಗೆ ದಾನವೀಯಬೇಕು. ಕೈ ಮುಗಿದು ಆದಿತ್ಯನನ್ನು ಈ ಮಂತ್ರದಿಂದ ಪ್ರಾರ್ಥಿಸಬೇಕು.

**''ಯಥೈವಾದಿತ್ಯ ಶಯನಮಶೂನ್ಯಂ ತವ ಸರ್ವದಾ ।**
**ಕಾಂತ್ಯಾ ಧೃತ್ಯಾಶ್ರಿಯಾರತ್ಯಾತಥಾಮೇ ಸಂತು ಸಿದ್ಧಯಃ ॥**
**ಯಥಾ ನ ದೇವಾಃ ಶ್ರೇಯಾಂಸಂ ತ್ವದನ್ಯಮನಘಂ ವಿದುಃ**
**ತಥಾ ಮಾಮುದ್ಧರಾಽಶೇಷದುಃಖ ಸಂಸಾರ ಸಾಗರಾತ್ ॥**

ಆದಿತ್ಯದೇವ, ಕಾಂತಿಧೈರ್ಯ ತೇಜಪ್ರೀತಿಗಳು ಎಂದೂ ನಿನ್ನ ಮಗ್ಗಲನ್ನು ಬಿಟ್ಟು ಹೋಗುವದಿಲ್ಲ. ಅದರಂತೆ ನನ್ನ ಶಯ್ಯಾಸನಗಳು ನಿನ್ನ ಅನುಗ್ರಹದಿಂದ ಕಾಂತಿತೇಜ ಧೈರ್ಯ ಒಲವುಗಳು ಎಂದೂ ನನ್ನನ್ನು ಬಿಟ್ಟು ಹೋಗದೇ ನನಗೆ ಸಿದ್ಧಿರೂಪವಾಗಿ ದೊರಕಲಿ. ಎಲ್ಲ ದೇವತೆಗಳು ಭಾಸ್ಕರನಲ್ಲದೇ ಶ್ರೇಯಸ್ಕರ ದೇವತೆ ಬೇರೆ ಇಲ್ಲ. ಎಂದು ಬಲವಾಗಿ ನಂಬಿದ್ದಾರೆ. ನಾನೂ ಹಾಗೆ ನಂಬಿದ್ದೇನೆ. ನನ್ನನ್ನು ಈ ಎಲ್ಲ ದುಃಖಪೂರ್ಣವಾದ ಸಂಸಾರಸಾಗರದಿಂದ ಉದ್ಧರಿಸಿ ಕಾಪಾಡು.'' ಶಿವನನ್ನು ಉದ್ದೇಶಿಸಿ ಮಾಡಬೇಕಾದ ಈ ವ್ರತವನ್ನು ಶೀಲಗೆಟ್ಟ ಕಪಟನಿಂದಕರಿಗೆ ಹೇಳಬಾರದು. ಶಾಂತಮೂರ್ತಿಗಳಾದ ಭಕ್ತರಿಗೆ ಹೇಳದೇ ಇರಬಾರದು. ಇದರ ಒಂದೊಂದು ಅಕ್ಷರವೂ ವೇದಮಂತ್ರದಂತೆ ಮಹಾಪಾತಕವನ್ನು ಕಳೆಯಬಲ್ಲದು. ಈ ವ್ರತವನ್ನು ಭಕ್ತಿಯಿಂದ ಆಚರಿಸಿದವರಿಗೆ ಪತ್ನೀಪುತ್ರರಿಂದ ವಿಯೋಗವಿಲ್ಲ. ಸ್ತ್ರೀಯರಿಗೆ ರೋಗರುಜಿನ ದುಃಖದಾರಿದ್ರ್ಯವಿಲ್ಲ. ಪೂರ್ವದಲ್ಲಿ ಇದನ್ನು ವಶಿಷ್ಠ, ಅರ್ಜುನ, ಕುಬೇರ, ಇಂದ್ರಾದಿ ದೇವಮುನಿಗಳು ಆಚರಿಸಿದರು. ಇದನ್ನು ಹೇಳಿ ಕೇಳಿದವರ ಪಿತೃಗಳು ಉದ್ಧಾರವಾಗುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತಾರನೆಯ ಅಧ್ಯಾಯ ಮುಗಿದುದು*

—o—

## ಶಿವ ಕೃಷ್ಣಾಷ್ಟಮೀ ವ್ರತ

ಅಧ್ಯಾಯ - ೫೭

**ಶ್ರೀ ಭಗವಾನ್ ಉವಾಚ**

**ಶಿವಕೃಷ್ಣಾಷ್ಟಮೀಂವಕ್ಷ್ಯೇ ಸರ್ವಪಾಪ ಪ್ರಣಾಶಿನೀಂ**
**ಶಾಂತಿರ್ಮುಕ್ತಿಶ್ಚ ಭವತಿ ಜಯಃ ಪುಂಸಾಂ ವಿಶೇಷತಃ ॥**

**ಭಗವಂತ** :- ಇನ್ನುಮುಂದೆ ಕೃಷ್ಣಾಷ್ಟಮೀವ್ರತದ ವಿಷಯ ತಿಳಿಸುವೆ. ಎಲ್ಲ ಪಾಪಪರಿಹಾರಕ ಅದು. ವಿಶೇಷವಾಗಿ ಅದರಿಂದ ಮಾನವನಿಗೆ ಗೆಲವು ಶಾಂತಿ ಅಲ್ಲದೇ ಮೋಕ್ಷ ಕೂಡ ದೊರಕುವದು. ಕೃಷ್ಣಾಧಿಷ್ಠಿತ ಶಂಕರನನ್ನು ಬೇರೆ ಬೇರೆ ತಿಂಗಳಲ್ಲಿ ಬೇರೆ ಬೇರೆ ಹೆಸರಿನಿಂದ ಪೂಜಿಸಬೇಕು. ಅದರ ಕ್ರಮವನ್ನು ವಿವರಿಸುತ್ತೇನೆ :-

ಮಾರ್ಗಶೀರ್ಷ ಮಾಸದಲ್ಲಿ 'ಶಿವಾಯನಮಃ' ಎಂದು ಶಂಕರನನ್ನು, ಪುಷ್ಯದಲ್ಲಿ ಶಂಭುವನ್ನು, ಮಾಘದಲ್ಲಿ ಮಹೇಶ್ವರನನ್ನು, ಫಾಲ್ಗುಣದಲ್ಲಿ ಮಹಾದೇವನನ್ನು, ಪೂಜಿಸಬೇಕು. ಚೈತ್ರಮಾಸದಲ್ಲಿ 'ಸ್ಥಾಣು'ಎಂಬ ಹೆಸರಿನಿಂದ, ವೈಶಾಖದಲ್ಲಿ 'ಶಿವನಾಮ' ಎಂಬ ಹೆಸರಿನಿಂದ. ಜೇಷ್ಠದಲ್ಲಿ 'ಪಶುಪತಿ' ಎಂಬ ಅಭಿದಾನದಿಂದ ಆಷಾಢದಲ್ಲಿ 'ಉಗ್ರ' ಎಂಬ ಹೆಸರಿನಿಂದ,. ಪರಮೇಶ್ವರನನ್ನು ಪೂಜಿಸಬೇಕು. ಶ್ರಾವಣದಲ್ಲಿ 'ಶರ್ವ' ಎಂದು, ಭಾದ್ರಪದದಲ್ಲಿ 'ತ್ರಂಬಕ' ಎಂದು ಆಶ್ವೀನದಲ್ಲಿ 'ಹರ' ಎಂದು ಕಾರ್ತಿಕದಲ್ಲಿ 'ಈಶಾನ' ಎಂದು ಶಿವನನಾಮಗಳಿಂದ ಅವನನ್ನು ಅರ್ಚಿಸಬೇಕು.

ಪ್ರತಿತಿಂಗಳ ಕೃಷ್ಣಪಕ್ಷದ ಅಷ್ಟಮಿ ದಿನಗಳಲ್ಲಿ ಉಪವಾಸಮಾಡಿ ಹೊನ್ನು, ಹಸು ಹೊಲ, ನೆಲ, ಬಟ್ಟೆಬರೆಗಳನ್ನು ಬಡವರಿಗೂ, ಬ್ರಾಹ್ಮಣರಿಗೂ ಕೊಡಬೇಕು. ಭಕ್ತರ ಪೂಜೆಯೇ ಭಗವಂತನ ಪೂಜೆ. ಪ್ರತಿದಿನವೂ ಉಪವಾಸವಿದ್ದು ರಾತ್ರಿಯಲ್ಲಿ ಶಂಕರನನ್ನು ಪೂಜಿಸಬೇಕು. ಉಪವಾಸ ದಿನಗಳಲ್ಲಿ ಗೋಮೂತ್ರ, ಹಸುವಿನ ತುಪ್ಪ, ಹಾಲು, ಎಳ್ಳು, ಗೋದಿ, ದರ್ಭೋದಕ, ಗೋಶೃಂಗೋದಕ, ಬಾಗೆಯಹೂ, ಎಕ್ಕಿಎಲೆ, ಬಿಲ್ವಪತ್ರ, ಮೊಸರು, ಪಂಚಗವ್ಯಗಳನ್ನು ಭಕ್ಷಿಸಬಹುದು. ಮಹಾದೇವರಿಗೆ ಅರ್ಘ್ಯಕೊಟ್ಟು ಕಪಿಲಗೋವನ್ನು ವಸ್ತ್ರಹೊದಿಸಿ ದಾನಮಾಡಬೇಕು. ಪೂಜೆ ಮುಗಿದ ಬಳಿಕ ಮೊಸರನ್ನು ನೈವೇದ್ಯ ತೋರಿಸಿ ಶಿವನಿಗೆ ಛತ್ರ ಹಿಡಿದು ಚಾಮರ ಸೇವೆ ಸಲ್ಲಿಸಬೇಕು. ಐದು ಬಗೆಯ ರತ್ನಗಳಿಂದ ಕೂಡಿದ ನೀರಿನ ಕೊಡಗಳನ್ನೂ, ಹಸುಗಳನ್ನೂ, ಚಿನ್ನರನ್ನದವಸ್ತುವಡವೆಗಳನ್ನು, ಬಗೆಬಗೆಯ ವಸ್ತ್ರಾಲಂಕಾರಗಳನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು. ಇಷ್ಟೆಲ್ಲ ದಾನ ಮಾಡಬೇಕು. ಇಷ್ಟೆಲ್ಲ ದಾನಮಾಡಲು ಶಕ್ತಿ ಇಲ್ಲದಿದ್ದರೆ ಯಥಾಶಕ್ತಿ ಒಂದು ಗೋದಾನವನ್ನಾದರೂ ಮಾಡಬೇಕು. ಯೋಗ್ಯತೆ ಇದ್ದವರು ಜೀನತನ ಮಾಡಬಾರದು. ಈ ಕೃಷ್ಣಪಕ್ಷದ ಅಷ್ಟಮೀ ದಿನದಲ್ಲಿ ಉಪವಾಸಮಾಡಿ ಮಹಾದೇವರನ್ನು ಪೂಜಿಸಿದರೆ ೨೦೦೦ ಕಲ್ಪಗಳಕಾಲ ಶಿವಲೋಕದಲ್ಲಿ ಸುರಮಾನ್ಯನಾಗಿ ಮಾನವನು ವಾಸಿಸುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿದುದು*

## ಚಂದ್ರಶಯನ ವ್ರತ

ಅಧ್ಯಾಯ - ೫೮

**ನಾರದ ಉವಾಚ**

**ದೀರ್ಘಾಯುರಾರೋಗ್ಯ ಕುಲಾಭಿವೃದ್ಧಿ**
**ಯುಕ್ತಃ ಪುಮಾನ್ ಭೂಪಕುಲೇಯತಃಸ್ಯಾತ್ ॥**

**ಮುಹುರ್ಮುಹುರ್ಜನ್ಮನಿಯೇನಸಮ್ಯ**
**ಗ್ವ್ರತಂಸಮಾಚಕ್ಷ್ವ ತದಿಂದುಮೌಲೇ**

**ನಾರದ ಅಂದದ್ದು** :- ದೀರ್ಘಾಯುಷ್ಯ, ಆರೋಗ್ಯ, ವಂಶವೃದ್ಧಿ, ರಾಜೈಶ್ವರ್ಯ ಮುಂತಾದ ಭೋಗ ಭಾಗ್ಯಗಳು ಪ್ರಾಪ್ತವಾಗಲು ಮಾನವರು ಯಾವ ವ್ರತವನ್ನು ಆಚರಿಸಬೇಕು ಎಂಬುದನ್ನು ಶಂಕರನೇ ನೀನು ಹೇಳು.

**ಭಗವಾನ್ ಅಂದದ್ದು** :- ನಿನ್ನ ಪ್ರಶ್ನೆ ಅತಿಯೋಗ್ಯ. ಪುರಾಣಪಂಡಿತರಿಗೆ ಮಾತ್ರ ವಿದಿತವಾದ ರಹಸ್ಯವನ್ನು ನಾನೀಗ ನಿನಗೆ ಹೇಳುವೆ. ವ್ರತಗಳಲ್ಲೆಲ್ಲ **ರೋಹಿಣೀ ಚಂದ್ರಶಯನ ವ್ರತ** ಶ್ರೇಷ್ಠ. ಇದರಲ್ಲಿ ನಾರಾಯಣಮೂರ್ತಿಯನ್ನು ಚಂದ್ರನ ಶುಭನಾಮಗಳಿಂದ ಪೂಜಿಸಬೇಕು. ಸೋಮವಾರ ಹುಣ್ಣಿಮೆಯ ದಿನ ಅಥವಾ ರೋಹಿಣೀ ನಕ್ಷತ್ರವಿದ್ದ ಹುಣ್ಣಿಮೆಯದಿನ ಈ ವ್ರತವನ್ನು ಪ್ರಾರಂಭಿಸಬೇಕು. ಅಂದು ಸ್ನಾನಮಾಡಿ ಶುಚಿರ್ಭೂತವಾಗಿ ಪಂಚಗವ್ಯವನ್ನು ಪ್ರಾಶನಮಾಡಬೇಕು. ಅಪ್ಯಾಯಸ್ವ ಎಂಬ ವೇದಮಂತ್ರವನ್ನು ನೂರೆಂಟು ಸಲ ಜಪಿಸಬೇಕು. ಶೂದ್ರರೂ ಕೂಡ ಈ ವ್ರತವನ್ನು ಮಾಡಬಹುದು. ಆದರೆ ಈ ವ್ರತದಲ್ಲಿ ಒಂದು ಮುಖ್ಯ ನಿಯಮವೆಂದರೆ ವೇದನಿಂದಕರಾದ ಪಾಖಂಡಿಗಳೊಡನೆ ಮಾತನಾಡಕೂಡದು. ''ಸೋಮಾಯ ವರದಾಯಚ'' ''ವಿಷ್ಣವೇಚ ನಮೋನಮಃ'' ಎಂಬ ಮಂತ್ರದಿಂದ ಜಪಮಾಡಿ ಚಂದ್ರನ ಹೆಸರುಗಳನ್ನು ಉಚ್ಚರಿಸುತ್ತ ಚಂದ್ರಾಂತರ್ಯಾಮಿಯಾದ ಶ್ರೀಹರಿಯನ್ನು ಪೂಜಿಸಬೇಕು.

'ಸೋಮಾಯ ಶಾಂತಾಯ ನಮಃ' ಎಂದು ಪಾದಗಳನ್ನು 'ಅನಂತ ಧಾಮ್ನೇನಮಃ' ಎಂದು ಮಂಡಿ ಮೊಣಕಾಲುಗಳನ್ನು, 'ಜಲೋದರಾಯನಮಃ' ಎಂದು ತೊಡೆಗಳನ್ನು, 'ಅನಂತಬಾಹವೇ ನಮಃ' ಎಂದು ಮೇಢ್ರಾವಯವವನ್ನು 'ಕಾಮೋದರಾಯನಮಃ' ಎಂದು ಸೊಂಟವನ್ನು, 'ಅಮೃತೋದಾಯನಮಃ' ಎಂದು ಉದರವನ್ನು 'ಶಶಾಂಕಾಯನಮಃ' ಎಂದು ಹೊಕ್ಕಳವನ್ನು, 'ಚಂದ್ರಾಯನಮಃ' ಎಂದು ಮುಖವನ್ನು 'ದ್ವಿಜಾಧಿಪತಯೇ ನಮಃ' ಎಂದು ಮೇಲುಗೈಯನ್ನು, 'ಕುಮುದ್ವತೀಪ್ರಿಯಾಯನಮಃ' ಎಂದು ತುಟಿಗಳನ್ನೂ 'ವನೌಷಧಿನಾಥಾಯನಮಃ' ಎಂದು ಹುಬ್ಬುಗಳನ್ನು, 'ಇಂದೀವರ ಶ್ಯಾಮಕರಾಯ ನಮಃ' ಎಂದು ಕಣ್ಣುಗಳನ್ನು

'ಯಜ್ಞಪೂಜ್ಯಾಯನಮಃ' ಎಂದು ಕರಗಳನ್ನು 'ದೈತ್ಯ ನಿಷೂದನಾಯ ನಮಃ' ಎಂದು ಕೂದಲುಗಳನ್ನೂ 'ಶಶಾಂಕಾಯನಮಃ' ಎಂದು ತಲೆಯನ್ನು 'ವಿಶ್ವೇಶ್ವರಾಯನಮಃ' ಎಂದು ಕಿರೀಟವನ್ನೂ ಪೂಜಿಸಬೇಕು.

**''ಪದ್ಮಪ್ರಿಯೇ ರೋಹಿಣಿನಾಮಲಕ್ಷ್ಮಿಣೀ**
**ಸೌಭಾಗ್ಯ ಸೌಖ್ಯಾಮೃತಚಾರುಕಾಯೆ''**

''ಪದ್ಮಪ್ರೀಯಳಾದ ಲಕ್ಷ್ಮೀದೇವಿಯೆನಿಸಿರುವ ರೋಹಿಣಿ, ಸೌಭಾಗ್ಯ ಸೌಖ್ಯಗಳಿಂದ ಅಮೃತಮಯವಾಗಿ ತೋರುವ ಸುಂದರಶರೀರವುಳ್ಳ ನಿನಗೆ ವಂದನೆ''ಎಂದು ಪ್ರಾರ್ಥಿಸಬೇಕು. ಸುಗಂಧಹೂ ನೈವೇದ್ಯ ಧೂಪ ದೀಪಗಳಿಂದ ರೋಹಿಣೀದೇವಿಯನ್ನು ಚೆನ್ನಾಗಿ ಪೂಜಿಸಬೇಕು. ಅಂದು ನೆಲದಲ್ಲಿಯೇ ಮಲಗಬೇಕು. ಬೆಳಿಗ್ಗೆ ಬೇಗ ಎದ್ದು ಸ್ನಾನಮಾಡಿ ನೀರುತುಂಬಿದ ಬಂಗಾರದ ಕೊಡವನ್ನು ನಮಃ ಪಾಪವಿನಾಶನಾಯ, ಎಂದು ಹೇಳಿ ದಾನಮಾಡಬೇಕು. ಉಪವಾಸದ ನಂತರ ಗೋಮೂತ್ರ ಪ್ರಾಶನಮಾಡಿ ಹಾಲುತುಪ್ಪಬೆರೆಸಿ ಇಪ್ಪತ್ತೆಂಟು ತುತ್ತು ಅನ್ನ ಊಟ ಮಾಡಬೇಕು. ಅಂದು ಮಾಂಸ, ಉಪ್ಪು, ವರ್ಜ್ಯ. ಆ ಬಳಿಕ ಎರಡು ಗಳಿಗೆ ಮಹಾಭಾರತದ ಕಥೆಯನ್ನು ಕೇಳಬೇಕು.

ಕಡಹ, ಕನ್ನೈದಿಲೆ, ಕೇದಿಗೆ, ಜಾಜಿ, ಕಮಲ, ನೂರು ಎಲೆಯ ಪದ್ಮ,ಗೋರಂಬಿ ಮುಂತಾದ ಹೂಗಳನ್ನು ವಿಷ್ಣುವಿಗೆ ಏರಿಸಬೇಕು. ಚಂದ್ರನಿಗೆ ಮಲ್ಲಿಗೆ, ಗಣಿಗಲೆ, ಸಂಪಿಗೆ ಮುಂತಾದ ಹೂಗಳನ್ನು ಅರ್ಪಿಸಬೇಕು. ತತ್‌ಕಾಲದಲ್ಲಿ ಅರಳುವ ಹೂಗಳಿಂದ ದೇವರನ್ನು ಪೂಜಿಸಬೇಕು. ಹೀಗೆ ಒಂದು ವರ್ಷ ಶಾಸ್ತ್ರೋಕ್ತ ಪೂಜಾವಿಧಿಯನ್ನು ನಡೆಸಬೇಕು. ವ್ರತವು ಮುಗಿದ ಬಳಿಕ ಕನ್ನಡಿ, ದಿಂಬು, ಹಾಸಿಗೆ ಹೊದಿಕೆ ಮೊದಲಾದ ಎಲ್ಲ ಸಲಕರಣೆ ಸಹಿತವಾಗಿ ಶಯ್ಯಾದಾನ ಮಾಡಬೇಕು.

ಆರುಅಂಗುಲ ಎತ್ತರವಾದ ಚಂದ್ರನ ಮತ್ತು ನಾಲ್ಕುಅಂಗುಲ ಎತ್ತರದ ರೋಹಿಣಿಯ ಚಿನ್ನದ ಪ್ರತಿಮೆಯನ್ನುಮಾಡಿಸಿ ಅದನ್ನು ಎಂಟುಮುತ್ತುಗಳಿಂದ ಅಲಂಕರಿಸಿ, ವಸ್ತ್ರಉಡಿಸಿ ಅದನ್ನು ಹಾಲಿನ ಕೊಡದ ಮೇಲೆ ಕಂಚಿನಪಾತ್ರೆಯಲ್ಲಿ ಮಂತ್ರಾಕ್ಷತೆಗಳೊಡನೆ ಇಟ್ಟು, ಭತ್ತ, ಕಬ್ಬು, ಹಣ್ಣು, ಸಹಿತವಾಗಿ, ಪೂರ್ವಾಹ್ನದಲ್ಲಿ ಮಂತ್ರಪೂರ್ವಕವಾಗಿ ದಾನಮಾಡಬೇಕು. ಇದರಂತೆ ಸಾಲಂಕೃತ ಗೋದಾನ, ಶಂಖದಾನವನ್ನು ಮಾಡಬೇಕು. ಬ್ರಾಹ್ಮಣ ದಂಪತಿಗಳನ್ನು ವಸ್ತ್ರಾಲಂಕಾರದಿಂದ ಅಲಂಕರಿಸಿ ರೋಹಿಣಿಚಂದ್ರರೇ ಈ ರೂಪದಿಂದ ಬಂದಿದ್ದಾರೆಂದು ತಿಳಿಸಬೇಕು. ''ಶಶಾಂಕನೆ, ರೋಹಿಣಿಯು ಚಂದ್ರರೂಪಿಯಾದ ನಿನ್ನನ್ನು ಬಿಟ್ಟು ಹೋಗದಿರುವಂತೆ, ಐಶ್ವರ್ಯ ನನ್ನನ್ನು ಬಿಟ್ಟು ಹೋಗದಿರಲಿ, ಎಲ್ಲರಿಗೂ ಮುಕ್ತಿದಾತನಾದ ನಿನ್ನಿಂದ ನನಗೂ ಮುಕ್ತಿ ದೊರೆಯಲಿ. ನಿನ್ನಲ್ಲಿ ನಿರಂತರ ಭಕ್ತಿ ಇರಲಿ'' ಎಂದು ಪ್ರಾರ್ಥಿಸಬೇಕು.

ನಾರದ, ಸಂಸಾರದ ದುಃಖದಿಂದ ಹೆದರಿ ಮೋಕ್ಷಬಯಸುವ ಮಾನವನಿಗೆ ಸೌಂದರ್ಯ, ಸಂಪತ್ತು, ಸೌಭಾಗ್ಯ, ಆರೋಗ್ಯಗಳನ್ನು ಕೊಡುವ ಅತ್ಯುತ್ತಮವಾದ

ಈ ವ್ರತವು ಪಿತೃಗಳಿಗೆ ಪರಮಪ್ರಿಯವಾಗಿದೆ. ಈ ವ್ರತಮಾಡಿದವನು ಇಪ್ಪತ್ತೊಂದು ಕಲ್ಪಗಳ ಕಾಲ ತ್ರಿಲೋಕಾಧಿಪತಿಯಾಗಿ ಚಂದ್ರಲೋಕದಲ್ಲಿ ವಾಸಿಸುವನು. ಅನಂತರ ಮಿಂಚಿನರೂಪತಾಳಿ ಮೋಕ್ಷಹೊಂದುವನು. ಈ ರೋಹಿಣೀಚಂದ್ರ, ಶಯನವ್ರತವನ್ನುಮಾಡಿದ ಹೆಣ್ಣುಮಕ್ಕಳೂ ಮರಳಿ ಹುಟ್ಟುವದಿಲ್ಲ. ಮೋಕ್ಷಹೊಂದುವರು. ಚಂದ್ರನ ನಾಮೋಚ್ಚಾರಪೂರ್ವಕವಾಗಿ ವಿಷ್ಣುವನ್ನು ಪೂಜಿಸುವ, ಓದುವ, ಕೇಳುವ, ಉಪದೇಶಿಸುವ, ಪುಣ್ಯಾತ್ಮನು ವಿಷ್ಣುಲೋಕವನ್ನು ಸೇರಿ ದೇವತಾ ಪೂಜ್ಯನಾಗುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೆಂಟನೆಯ ಅಧ್ಯಾಯ ಮುಗಿದುದು*



## ದೇವತಾ ಪ್ರತಿಷ್ಠಾಪನಾ ವಿಧಿ

**ಅಧ್ಯಾಯ - ೫೯**

**ಸೂತ ಉವಾಚ**

**ಜಲಾಶಯಗತಂ ವಿಷ್ಣುಂ ಪಪ್ರಚ್ಛರವಿನಂದನಃ ।**
**ತಡಾಗಾಽರಾಮ ಕೂಪಾನಾಂ ವಾಪೀಷು ನಲಿನೀಷು ಚ ॥**
**ವಿಧಿಂ ಪೃಚ್ಛಾಮಿ ದೇವೇಶ ದೇವತಾಯತನೇಷು ಚ ॥**

**ಸೂತ** :- ಸೂರ್ಯಕುಮಾರನಾದ ವೈವಸ್ವತಮನು ಸಾಗರಮಧ್ಯದಲ್ಲಿರುವ ಮೀನಾಕೃತಿ ಶ್ರೀಹರಿಯನ್ನು ಕುರಿತು ಪ್ರಶ್ನಿಸುತ್ತಾನೆ. ''ದೇವೇಶ, ಕೆರೆ ಉಪವನ ಬಾವಿ ಕೊಳ ಸರೋವರಗಳನ್ನು ಮಾಡಿಸುವ ಮತ್ತು ಕಟ್ಟಿಸುವ ಹಾಗೂ ದೇವಸ್ಥಾನಗಳನ್ನು ನಿರ್ಮಿಸಿ ದೇವತಾಪ್ರತಿಷ್ಠೆಮಾಡುವ ವಿಧಿಗಳಾವವು ? ವಿಧಾನಗಳು ಏನು ? ಇಂತಹ ಕಾರ್ಯಗಳಲ್ಲಿ ಋತ್ವಿಜರು ಯಾರಿರಬೇಕು. ದೇವತೆ ಯಾರು ? ದಕ್ಷಿಣೆ, ಬಲಿ, ಪೂಜಾಸಾಮಾಗ್ರಿ, ಕಾಲ, ಸ್ಥಳ, ಆಚಾರ್ಯ ಹಾಗೂ ಸಲಕರಣೆಗಳು ಹೇಗಿರಬೇಕು ? ಎಂತಿರಬೇಕು ?'' ಇದನ್ನೆಲ್ಲ ಸವಿಸ್ತಾರವಾಗಿ ನಿರೂಪಿಸು.

**ಮತ್ಸ್ಯ** :- ಶೂರನಾದ ಮನುಮಹಾರಾಜ, ಸರೋವರ, ಉಪವನ, ದೇವತಾ ಪ್ರತಿಷ್ಠಾದಿವಿಧಿಯನ್ನು ಹೇಳುವೆನು ಕೇಳು. ಇದು ಪುರಾಣ ಇತಿಹಾಸ ಮುಂತಾದ ಪ್ರಾಚೀನ ಸಾಹಿತ್ಯದಲ್ಲಿ ಪ್ರಸಿದ್ಧವಾಗಿದೆ. ವೈದಿಕರು ನಿರೂಪಿಸುವ ಸಂಪ್ರದಾಯ ಸಿದ್ಧವಾದ ಕರ್ಮಪದ್ಧತಿಯೇ ಇದು. ರವಿಯು ಉತ್ತರಾಯಣದಲ್ಲಿ ಪ್ರವಿಷ್ಟನಾದ ಬಳಿಕ ಶುಭಕರವಾದ ಶುಕ್ಲಪಕ್ಷದಲ್ಲಿ ಜ್ಯೋತಿಷ್ಯ ಬಲ್ಲ ಬ್ರಾಹ್ಮಣರು ಹೇಳಿದ ಶುಭಮುಹೂರ್ತದಲ್ಲಿ ಹಿರಿಯರ ಹಾಗೂ ಗುರುಗಳ ಅನುಗ್ರಹ ಆಶೀರ್ವಾದ ಪಡೆದು ಕಾರ್ಯವನ್ನು ಪ್ರಾರಂಭಿಸಬೇಕು. ಕೆರೆಯದಂಡೆಯ ಮೇಲೆ ಪೂರ್ವ ಅಥವಾ ಉತ್ತರದಿಕ್ಕಿಗೆ ಇಳಿಜಾರಾದ ಒಂದು ಸ್ಥಳದಲ್ಲಿ ನಾಲ್ಕುಮೊಳ ಅಗಲ ನಾಲ್ಕು ಮೊಳ ಉದ್ದವಾದ ಚಚ್ಚೌಕಕಟ್ಟೆ ಅಥವಾ ವೇದಿಕೆಯನ್ನು ನಿರ್ಮಿಸಬೇಕು.

ಇದಕ್ಕೆ ನಾಲ್ಕು ಕಡೆ ನಾಲ್ಕುಮುಖಗಳಿರಬೇಕು. ಇದರ ಮೇಲೆ ಹದಿನಾರು ಮೊಳ ಉದ್ದ ಹಾಗೂ ಅಷ್ಟೇ ಅಗಲಳತೆಯುಳ್ಳ ಯಜ್ಞ ಮಂಟಪವನ್ನು ರಚಿಸಬೇಕು.

ವೇದಿಕೆಯ ನಾಲ್ಕು ಬದಿಗಳಲ್ಲಿ ಗುದ್ದುಮೊಳದ ಅಳತೆಯ ಕುಂಡಗಳನ್ನು ತೋಡಬೇಕು. ಅವುಗಳ ಸುತ್ತುಮುತ್ತ ಮೂರುಮೇಖಲೆ ಎಂದರೆ ಸುತ್ತುಗಟ್ಟುಗಳನ್ನು ನಿರ್ಮಿಸಬೇಕು. ಮೊದಲನೆಯ ಮೇಖಲೆ ೯ ಅಂಗುಲ ಎರಡನೆಯದು ಏಳು, ಮೂರನೆಯದು - ೫ ಬೆರಳಿನ ಪ್ರಮಾಣದಲ್ಲಿ ಇರಬೇಕು. ಒಳಗೆ ಒಂದುಯೋನಿ ಎಂದರೆ ಯಜ್ಞದಲ್ಲಿ ಆಹುತಿ ಹಾಕುವಾಗ ಚೆಲ್ಲಿದ ತುಪ್ಪವು ಅಗ್ನಿಕುಂಡದೊಳಗೆ ಹೋಗಲಿಕ್ಕಾಗಿ ಆನೆಯ ಸೊಂಡೆಯ ಕೆಳಗಿನ ತುಟಿಯಾಕಾರದ ಇಳುಕಲಾದ ಕೈಬಚ್ಚಲು ಅರೇಳು-ಬೆರಳಿನಷ್ಟು ಅಗಲ, ಹನ್ನೆರಡು ಬೆರಳು ಉದ್ದವಿದ್ದರೆ ಸಾಕು.

ನಾಲ್ಕು ಕಡೆಗಳಲ್ಲಿ ಒಂದೇ ಆಕಾರದ ಬಣ್ಣ ಬಣ್ಣದ ಪತಾಕೆಗಳಿಂದ ಅಲಂಕೃತವಾದ ಏಳುಅಗ್ನಿಕುಂಡಗಳು ಇರಬೇಕು. ಅರಳಿ, ಅತ್ತಿ, ಬಸರಿ ಮತ್ತು ಆಲದ ಮರಗಳ ಕೊಂಬೆಗಳಿಂದ ಮಂಟಪದ ನಾಲ್ಕು ದಿಕ್ಕುಗಳಿಗೆ ಬಾಗಿಲುಮಾಡಿ ಇಡಿಸಬೇಕು. ವೇದ-ಪಾರಂಗತರಾದ ಎಂಟುಜನ ಬ್ರಾಹ್ಮಣರನ್ನು ಹೋತಾರರನ್ನಾಗಿಯೂ, ಎಂಟು ಜನರನ್ನು ದ್ವಾರಪಾಲಕರನ್ನಾಗಿಯೂ ಎಂಟುಜನರನ್ನು ಜಪಮಾಡಲಿಕ್ಕಾಗಿಯೂ ನಿಯಮಿಸಬೇಕು. ಕುಲಶೀಲಗಳುಳ್ಳ ಮಂತ್ರಗಳ ಮರ್ಮಗಳನ್ನು ಅರಿತ ಜಿತೇಂದ್ರಿಯನಾದ ವಿಪ್ರೋತ್ತಮನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕು.

ಇಪ್ಪತ್ತೈದು ಜನ ಋತ್ವಿಜರನ್ನು ಹಾಗೂ ಆಚಾರ್ಯರನ್ನು ಯಜ್ಞವನ್ನು ಸಾಂಗ ಮಾಡಿಕೊಡಬೇಕೆಂದು ಪ್ರಾರ್ಥಿಸಬೇಕು. ಅವರಿಗೆಲ್ಲ ಬಂಗಾರದ ಆಭರಣ ಹಾಗೂ ಬಟ್ಟೆ, ಪವಿತ್ರಕಡಗಕಂಕಣಗಳನ್ನು ದಾನಕೊಡಬೇಕು. ಇವರ ಎರಡು ಪಟ್ಟು ಆಚಾರ್ಯನಿಗೆ. ಬಂಗಾರದ ಆನೆ ಮತ್ತು ಮಕರವನ್ನೂ, ಬೆಳ್ಳಿಯ ಮೀನು ಮತ್ತು ನೀರ ಹಾವನ್ನೂ, ತಾಮ್ರದ ನಳ್ಳಿ ಮತ್ತು ಕಪ್ಪೆಗಳನ್ನೂ ಕಬ್ಬಿಣದಿಂದ ಶಿಂಶುಮಾರವನ್ನೂ ಇದಕ್ಕಾಗಿ ಮಾಡಿಸಬೇಕು. ವೇದ-ವೇದಾಂತ ಪಾರಂಗತರಾದ ಬ್ರಾಹ್ಮಣರು ಯಜಮಾನನಿಗೆ ಸಕಲವಿಧವಾದ ವನಸ್ಪತಿಗಳಿಂದ ಮಿಶ್ರವಾದ ನೀರಿನಲ್ಲಿ ಸ್ನಾನ ಮಾಡಿಸಬೇಕು. ಅವನು ಬಿಳಿಬಟ್ಟೆ ಉಟ್ಟುಕೊಂಡು ಬಿಳಿಬಣ್ಣದ ಹೂವಿನ ಮಾಲೆ ಹಾಕಿಕೊಂಡು, ಶ್ರೀಗಂಧವನ್ನು ಮೈಗೆಲ್ಲ ಬಳಿದುಕೊಂಡು, ಮಗ, ಮಡದಿ, ಮೊಮ್ಮಗ ಈ ಮೂವರೊಡನೆ ಜೊತೆಗೂಡಿ ಪಶ್ಚಿಮದಿಕ್ಕಿನ ಬಾಗಿಲದಿಂದ ಯಜ್ಞಮಂಟಪವನ್ನು ಪ್ರವೇಶಿಸಬೇಕು. ಅನಂತರ ನಗಾರಿಗಳ ನಾದದೊಂದಿಗೆ ಮಂಗಳ ವಾದ್ಯಗಳನ್ನು ಮೊಳಗಿಸುತ್ತ ಯಜಮಾನನು ಐದುಬಣ್ಣದ ಹುಡಿಪುಡಿಗಳಿಂದ ಮುಂದೆ ಹೇಳಿದಂತೆ ಪಂಚರಂಗಿ ಮಂಡಲವನ್ನು ರಚಿಸಬೇಕು.

ವೇದಿಕೆಯ ಮೇಲೆ ಹದಿನಾರು ಆರೆಕಾಲುಗಳುಳ್ಳ ಒಂದು ದೊಡ್ಡ ಚಕ್ರವನ್ನು ಬರೆಯಬೇಕು. ಮಧ್ಯದಲ್ಲಿ ಪದ್ಮವನ್ನು ಚಿತ್ರಿಸಬೇಕು. ಅದರ ಒಂದೊಂದು ದಿಕ್ಕಿನಲ್ಲಿಯೂ ಕ್ರಮವಾಗಿ ಗ್ರಹಗಳನ್ನೂ ಲೋಕಪಾಲಕರನ್ನೂ ವಿನ್ಯಾಸಮಾಡಬೇಕು.

ನಟ್ಟನಡುವೆ ಆದಿಕರ್ಮನನ್ನು, ಸ್ಥಾಪನೆಮಾಡಿ ಬ್ರಹ್ಮ, ಶಿವ, ವಿಷ್ಣು ಈ ತ್ರಿಮೂರ್ತಿಗಳನ್ನು ಆಹ್ವಾನಿಸಬೇಕು. ಅದರಂತೆ ಲಕ್ಷ್ಮಿ ಪಾರ್ವತಿ, ವಿನಾಯಕರನ್ನೂ ಪ್ರತಿಷ್ಠಿಸಬೇಕು. ಜಲಪೂರ್ಣವಾದ ಕುಂಭಗಳನ್ನು ಗಂಧ, ಪುಷ್ಪ, ಭಕ್ಷ್ಯ ಫಲ ಸಹಿತವಾಗಿ ಸ್ಥಾಪನೆಮಾಡಬೇಕು. ಯಜಮಾನನು ಹೋಮ '' ಮಾಡಿರಿ '' ಎಂದು ಹೋತೃಗಳನ್ನೂ, ಮಂತ್ರಗಳನ್ನು ಜಪಿಸಿರಿ ಎಂದು ಜಾಪಕರನ್ನೂ ಪ್ರಾರ್ಥಿಸಬೇಕು. ವೇದಪಾರಾಯಣ ಮಾಡುವವರು ನಾಲ್ಕುದಿಕ್ಕುಗಳಲ್ಲಿ ಕುಳಿತು ಪ್ರಾರಂಭಿಸಬೇಕು. ಅನಂತರ ಯಜಮಾನನು ಅಗ್ನಿಗೆ ಪರಿಷೇಚನಮಾಡಿ ವರುಣ ದೇವತಾ ಮಂತ್ರಗಳಿಂದ ಋತ್ವಿಜರೊಂದಿಗೆ ಹೋಮವನ್ನು ಪ್ರಾರಂಭಿಸಬೇಕು. ನವಗ್ರಹ, ಇಂದ್ರ, ಈಶ್ವರ, ಮರುದ್ಗಣ, ಲೋಕಪಾಲ, ವಿಶ್ವಕರ್ಮ, ಮುಂತಾದವರಿಗೆಲ್ಲ ವೇದದಲ್ಲಿ ಹೇಳಿದಂತೆ ಆಹುತಿಯನ್ನು ಕೊಡಬೇಕು. ಪೂರ್ವದಿಕ್ಕಿನಲ್ಲಿ ಕುಳಿತಿರುವ ಋಗ್ವೇದಿಗಳು ರಾತ್ರಿಸೂಕ್ತ, ರುದ್ರಸೂಕ್ತ, ಪವಮಾನಸೂಕ್ತಗಳನ್ನೂ, ದಕ್ಷಿಣ ದಿಕ್ಕಿನಲ್ಲಿ ಕುಳಿತ ಯಜುರ್ವೇದಿಗಳು ಶಕ್ರಸೂಕ್ತ, ಸೋಮಸೂಕ್ತ, ಕೂಷ್ಮಾಂಡ ಸೂಕ್ತ, ಅಗ್ನಿಸೂಕ್ತಗಳನ್ನು ಪಾರಾಯಣಮಾಡಬೇಕು. ಅದರಂತೆ ಪಶ್ಚಿಮ ದಿಕ್ಕಿನಲ್ಲಿರುವ ಸಾಮವೇದಿಗಳು ವೈರಾಗ್ಯ ಪುರುಷಸೂಕ್ತ, ರುದ್ರಸಂಹಿತೆ, ಶೈಶವಸಾಮ, ಪಂಚನಿಧಸಾಮ, ಗಾಯತ್ರಿಸಾಮ ದೇವ, ಬೃಹತ್‌ಸಾಮ, ಕೌರವ, ರಥಂತರ, ಗವಾನ್ವತ, ರೌಣ್ವ ರಕ್ಷೋಘ್ನ ಮತ್ತು ವಯಃಸಾಮ ಎಂಬ ಮಂತ್ರಗಳನ್ನು ಗಾನಮಾಡಬೇಕು.

ಉತ್ತರದಿಕ್ಕಿನಲ್ಲಿರುವ ಅಥರ್ವಣವೇದಿಗಳು ಶಾಂತಿ ಮಂತ್ರ ಪುಷ್ಟಿಮಂತ್ರಗಳನ್ನು ವರುಣದೇವನ ಧ್ಯಾನ ಪುರಸ್ಸರವಾಗಿ ಜಪಿಸಬೇಕು. ಮೊದಲನೆ ದಿನ ರಾತ್ರಿ ಕಲಶಗಳಿಗೆ ಅಧಿವಾಸನವನ್ನುಮಾಡಿ ಆನೆ ಕುದುರೆ ಸಂಚರಿಸುವ ಬೀದಿ, ಬೆಟ್ಟ ನದಿಸಂಗಮ, ನೀರಿನಮಡು, ಹಸುಕಟ್ಟುವ ಕೊಟ್ಟಿಗೆ. ನಾಲ್ಕೂ ಬೀದಿಗಳ ಕೂಟಸ್ಥಲಗಳಿಂದ ಮಣ್ಣನ್ನು ತಂದು ಆ ಕಲಶಗಳಲ್ಲಿ ಹಾಕಬೇಕು. ಮತ್ತು ಗೋರೋಚನ, ಬಿಳಿಸಾಸಿವೆ ಗಂಧ, ಗುಗ್ಗಳಗಳನ್ನು ಆ ಕುಂಭಗಳಲ್ಲಿ ಹಾಕಿ ಪಂಚಗವ್ಯವನ್ನುಪ್ರೋಕ್ಷಿಸಿ ಶುದ್ಧೋದಕದಿಂದ ಆ ಕಲಶಕ್ಕೆ ಅಭಿಷೇಕಮಾಡಬೇಕು. ಪ್ರಾತಃಕಾಲವಾದ ಬಳಿಕ ಬ್ರಾಹ್ಮಣರಿಗೆ ಒಂದು ನೂರು ಅಥವಾ ೬೮, ೫೦, ೩೬ ಕನಿಷ್ಠ ೨೫ ಆದರೂ ಹಸುಗಳನ್ನು ದಾನಮಾಡಬೇಕು. ಆ ಹಸುಗಳ ದಾನವನ್ನು ಮುಂದೆ ಹೇಳಿದ ರೀತಿಯಲ್ಲಿಯೇ ಮಾಡಬೇಕು.

ಜೋತಿರ್ವಿದರು ಹೇಳಿದ ಶುಭಲಗ್ನದಲ್ಲಿ ವೇದಘೋಷ ಹಾಗೂ ಮಂಗಲ ವಾದ್ಯಗಳು ಮೊಳಗುತ್ತಿರುವಾಗ, ಹಸುಗಳನ್ನೆಲ್ಲ ಚಿನ್ನದ ಕೊಂಬುಗಳಿಂದ ಖುರಗಳಿಂದ ಸಿಂಗರಿಸಿ ಕೆರೆಯನೀರಿನಲ್ಲಿ ಇಳಿಸಬೇಕು. ಅನಂತರ ಸಂಕಲ್ಪಪೂರ್ವಕವಾಗಿ ಸಾಮವೇದ ಪಾರಂಗತ ಬ್ರಾಹ್ಮಣನಿಗೆ ಕೃಷ್ಣಾರ್ಪಣ ಪೂರ್ವಕವಾಗಿ ದಾನಕೊಡಬೇಕು. ಪಂಚರತ್ನ ಸಹಿತವಾದ ಬಂಗಾರದ ಪಾತ್ರೆಯಲ್ಲಿ ಹಿಂದೆ ಹೇಳಿದ ಮೀನು, ಮಕರ ಮುಂತಾದ ಪ್ರಾಣಿಗಳ ಧಾತು ಪ್ರತಿಮೆಗಳನ್ನು

ಇರಿಸಬೇಕು. ಅವುಗಳನ್ನು ದಾನ ಕೊಟ್ಟಿದ್ದೇನೆ ಎಂದು ಹೇಳಿದ ಬಳಿಕ ವೇದ ಪಂಡಿತರು ಎತ್ತಿಕೊಳ್ಳಬೇಕು. ನದೀನೀರನ್ನೂ, ಮೊಸರನ್ನೂ ಆ ಪಾತ್ರೆಗೆ ಹಾಕಿ ಅದರಲ್ಲಿ ಅಕ್ಷತೆಯ ಕಾಳುಗಳನ್ನು ಚೆಲ್ಲಬೇಕು. ಹಸುವನ್ನು ನೀರಿನಲ್ಲಿ ಉತ್ತರಕ್ಕೆ ಮುಖಮಾಡಿ ನಿಲ್ಲಿಸಿ, ಅಥರ್ವಣ ಮಂತ್ರದಿಂದಲೂ, 'ಪುನರ್ಮಾಮೇತಿ ಅಪೋಹಿಷ್ಠಾ' ಮುಂತಾದ ಮಂತ್ರಗಳಿಂದ ಅಭಿಷೇಕಮಾಡಬೇಕು. ಅನಂತರ ಮಂಗಲಸ್ನಾನಕ್ಕೆ ಬಂದು ಸರೋವರವನ್ನು ಪೂಜಿಸಿ ಸುತ್ತಲೂ ಬಲಿ ಹಾಕಬೇಕು.

ಹೀಗೆ ನಾಲ್ಕು ದಿನ ಹೋಮಮಾಡಿ ಕೊನೆಯ ದಿನ ಅದರ ಸಮಾಪ್ತಿ ಕಾರ್ಯವನ್ನು ನಡೆಯಿಸಿ ಯಥಾಶಕ್ತಿ ದಕ್ಷಿಣೆ ಕೊಡಬೇಕು. ಅನಂತರ ವರುಣ ದೇವನ ಕ್ಷಮೆಯನ್ನು ಕೋರಿ ಯಜ್ಞದಪಾತ್ರೆ ಹಾಗೂ ಸಲಕರಣೆಗಳನ್ನೆಲ್ಲ ಮಂಟಪ ಸಾಮಗ್ರಿ ಸಹಿತವಾಗಿ ಋತ್ವಿಜರಿಗೆ ಕೊಟ್ಟುಬಿಡಬೇಕು. ಹಾಸಿಗೆ, ಹೊನ್ನಿನ ಪಾತ್ರೆ ಇವೆರಡು ಮಾತ್ರ ಸ್ಥಾಪಕನಿಗೆ ಕೊಡಬೇಕು. ಅನಂತರ ಒಂದು ಸಾವಿರ ಅಥವಾ ಎಂಟುನೂರು ಇಲ್ಲವೆ ಐವತ್ತು ಕನಿಷ್ಠ ಇಪ್ಪತ್ತು ಜನ ಬ್ರಾಹ್ಮಣರಿಗಾದರೂ ಭೋಜನಮಾಡಿಸಿ ತೃಪ್ತಿಪಡಿಸಬೇಕು.

ಬಾವಿ, ಕೊಳ, ಪುಷ್ಕರಿಣಿ ಮುಂತಾದವುಗಳನ್ನು ಕಟ್ಟಿಸಿ ಪ್ರತಿಷ್ಠಾಪಿಸುವಾಗ ಮತ್ತು ದೇವಾಲಯಗಳ ಪ್ರತಿಷ್ಠೆಮಾಡುವಾಗ ಪುರಾಣೋಕ್ತ ಈ ಜಲಾಶಯಪ್ರತಿಷ್ಠಾ ಸೂಕ್ತವನ್ನೇ ಅನುಸರಿಸಬೇಕು. ಆದರೆ ಸ್ವಂತ-ಮನೆ, ಉಪವನ, ಮುಂತಾದವುಗಳ ನಿರ್ಮಾಣದಲ್ಲಿ ಇನ್ನೂ ಕೆಲವು ಮಂತ್ರಗಳು ಉಂಟು. ತೀರ ಸಣ್ಣ ಪುಟ್ಟ ಜಲಾಶಯಗಳ ಸ್ಥಾಪನದ ವಿಷಯದಲ್ಲಿ ಏಕಾಗ್ನಿ ವಿಧಾನದಿಂದ ಕಾರ್ಯವನ್ನು ನೆರವೇರಿಸಬಹುದು. ಆಗಲೂ ಯೋಗ್ಯತೆ ಇದ್ದರೆ ಯಜಮಾನನು ಜಿಪುಣತನವನ್ನು ತೋರದೆ ವೆಚ್ಚ ಮಾಡಬೇಕು. ಕಟ್ಟಿಸಿದ ಕೆರೆ, ಕೊಳ, ಕೂಪ, ಕಾಲುವೆಗಳಲ್ಲಿ ನೀರು ಮಳೆಗಾಲದಲ್ಲಿ ಮಾತ್ರ ನಿಲ್ಲುವಂತಿದ್ದರೆ ಯಜಮಾನನಿಗೆ ಅಗ್ನಿಷ್ಟೋಮಯಾಗ ಮಾಡಿದ ಫಲ, ಅದು ಶರತ್ಕಾಲದವರೆಗೆ ನಿಲ್ಲುವದಾದರೆ ವಾಜಪೇಯ ಯಾಗದ ಪುಣ್ಯ. ಹೇಮಂತ, ಶಿಶಿರ ಋತುಗಳವರೆಗೆ ಬತ್ತದೆ ನೀರುನಿಂತರೆ ಅತಿರಾತ್ರಯಾಗದ ಫಲ. ವಸಂತಕಾಲದವರೆಗೆ ನೀರು ಒಣಗದೇ ಇದ್ದರೆ ಅಶ್ವಮೇಧದ ಫಲ. ಗ್ರೀಷ್ಮ ಋತುವಿನ ವರೆಗೆ ಅರ್ಥಾತ್ ಮಳೆಯಾಗಿ ಹೊಸ ನೀರು ಬರುವವರೆಗೆ ಈ ನೀರು ಕೆರೆ, ಕೊಳ, ಸರಸ್ಸುಗಳಲ್ಲಿ ನಿಲ್ಲುವಂತಾದರೆ ರಾಜಸೂಯ ಯಾಗಕ್ಕಿಂತ ಹೆಚ್ಚಿನ ಪುಣ್ಯ ಬರುವದು. ಮಹಾರಾಜನೇ ಇಂಥ ವೇದೋಕ್ತವಾದ ವಿಶೇಷ ಧರ್ಮಕರ್ಮಗಳನ್ನು ಆಚರಿಸುವದರಿಂದ ಮಾನವರ ಸಕಲಪಾಪ ಪರಿಹಾರವಾಗಿ ಅನೇಕ ಕಲ್ಪಕಾಲ ಸ್ವರ್ಗದಲ್ಲಿ ಸುಖಪಟ್ಟು ಮುಂದೆ ಕೈಲಾಸ, ಮಹಾಲೋಕ, ಜನೋಲೋಕ ಮುಂತಾದ ದಿವ್ಯ ಲೋಕಗಳನ್ನೂ ಕಟ್ಟಕಡೆಗೆ ವಿಷ್ಣುವಿನ ಪರಮಪದವನ್ನು ಹೊಂದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು*

—o—

## ವೃಕ್ಷಗಳ ಉತ್ಸವ, ಉದ್ಯಾನ ಮತ್ತು ಉದ್ಯಾಪನ ವಿಧಾನ | ಅಧ್ಯಾಯ - ೬೦

**ಋಷಿಯ ಉವಾಚಃ**

**ಪಾದಪಾನಾಂ ವಿಧಿಂಸೂತಯಥಾವದ್ವಿಸ್ತರಾದ್ವದ ।**
**ವಿಧಿನಾಕೇನಕರ್ತವ್ಯಂ ಪಾದಪೋದ್ಯಾಪನಂ ಬುಧೈಃ ।**
**ಯೇಃ ಚ ಲೋಕಾಃ ಸ್ಮೃತಾಸ್ತೇಷಾಂ ತಾನಿದಾನೀಂವದಸ್ವನಃ ।**

**ಋಷಿಗಳು :-** ಗಿಡಗಳನ್ನು ನೆಟ್ಟು ಬೆಳೆಸುವ ವಿಧಾನವು ಯಾವುದು ? ವೃಕ್ಷಗಳ ಉತ್ಸವವನ್ನು, ಉದ್ಯಾನ-ಉದ್ಯಾಪನೆಗಳನ್ನು ಯಾವ ವಿಧಿಯಿಂದ ಆಚರಿಸಬೇಕು ? ಅದರಿಂದ ಎಂಥ ಪುಣ್ಯಲೋಕಗಳ ಪ್ರಾಪ್ತಿಯಿದೆ ಎಂಬುದನ್ನು ನಮಗೆ ಅರುಹು.

**ಸೂತ ಅಂದದ್ದು :-** ವನೋಪವನ, ಹೊಲ, ನೆಲಗಳಲ್ಲಿ ಗಿಡಗಳನ್ನು ನೆಟ್ಟು ಉತ್ಸವಮಾಡುವ ಕ್ರಮವನ್ನು ಹೇಳುತ್ತೇನೆ ಕೇಳು. ಹಿಂದೆ ಸರೋವರ ನಿರ್ಮಾಣಕ್ಕೆ ಹೇಳಿದಂತೆಯೇ ಈ ವನಮಹೋತ್ಸವಕ್ಕಾಗಿ ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಮತ್ತು ಋತ್ವಿಜರನ್ನು ವರಿಸುವದು. ಮಂಡಲರಚನೆ, ಸಲಕರಣೆಗಳ ಸಂಗ್ರಹ, ಆಚಾರ್ಯವರಣ ಇವೆಲ್ಲವನ್ನೂ ಹಿಂದಿನಂತೆಯೇ ನಡೆಸಬೇಕು. ಅಲ್ಲಿ ಹೇಳಿದಂತೆಯೇ ಇಲ್ಲಿಯೂ ಬ್ರಾಹ್ಮಣರನ್ನು ವಸ್ತ್ರಾಲಂಕಾರ ಗಳಿಂದಲೂ ಗಂಧ, ಹೂ, ಹಾರಗಳಿಂದಲೂ ಸತ್ಕರಿಸಬೇಕು. ಗಿಡಗಳನ್ನು ನೀರಿನಿಂದ ಪ್ರೋಕ್ಷಿಸಿ ಪರಿಮಳಚೂರ್ಣದಿಂದ ಚುಮುಕಿಸಿ ಹೂ, ಹಾರ ಹಾಕಿ ಬಟ್ಟೆ ಹೊದಿಸಿ ಅಲಂಕರಿಸಬೇಕು. ಎಲ್ಲ ಗಿಡಗಳಿಗೂ, ಎಲ್ಲ ಮರಗಳಿಗೂ ಬಂಗಾರದ ಸೂಜಿಯಿಂದ ಕಿವಿ ಚುಚ್ಚಿ, ಸುವರ್ಣಶಲಾಕೆಯಿಂದ ಕಾಡಿಗೆ ಹಚ್ಚಬೇಕು.

ಆ ಗಿಡಗಳ ಸಮೀಪದಲ್ಲಿಯೇ ಧಾನ್ಯರಾಶಿಯನ್ನು ಹರಡಿ ಅದರ ಮೇಲೆ ತಾಮ್ರದ ಕಲಶಗಳನ್ನು ಇರಿಸಿ, ಗಂಧ ಏರಿಸಿ, ಹೂಗಳಿಂದ ಸಿಂಗರಿಸಿ ಅಲ್ಲಿಯೇ ಸ್ಥಾಪಿಸಬೇಕು. ಬಲಿಗಾಗಿ ಸಿದ್ಧಪಡಿಸಿದ ಅನ್ನವನ್ನು ನೈವೇದ್ಯ ಮಾಡಬೇಕು. ಇಂದ್ರಾದಿ ಲೋಕಪಾಲಕರನ್ನೂ ವಿಶೇಷವಾಗಿ ವನಸ್ಪತಿಗಳನ್ನು ಉದ್ದೇಶಿಸಿ ಬ್ರಾಹ್ಮಣರು ಹೋಮಮಾಡಬೇಕು. ಅನಂತರ ಬೆನ್ನ ಮೇಲೆ ಬಿಳಿಯ ಬಟ್ಟೆ, ಕೊಂಬಿನಲ್ಲಿ ಚಿನ್ನದ ಒಡವೆ, ಪಾದಗಳಲ್ಲಿ ಬಂಗಾರದ ಪಾದಗಳನ್ನು, ಕೊರಳಿಗೆ ಹಾರವನ್ನು ಹಾಕಿ ಅಲಂಕರಿಸಿದ ಹಸುವನ್ನು ಕರು-ಸಹಿತವಾಗಿ ಮರಗಳ ನಡುವೆ ಉತ್ತರಾಭಿಮುಖವಾಗಿ ಬಿಡಬೇಕು. ಅನಂತರ ಪುರೋಹಿತರು ಮಂಗಲವಾದ್ಯಗಳನ್ನು ಮೊಳಗಿಸುತ್ತ ಅಭಿಷೇಕಮಂತ್ರ, ವರುಣಮಂತ್ರಗಳಿಂದ ಗಿಡಗಳಿಗೆ ಪ್ರೋಕ್ಷಣ ಮಾಡಬೇಕು. ಅವೇ ನೀರಿನಿಂದ ಅನಂತರ ಯಜಮಾನನು ಸ್ನಾನಮಾಡಿ ವೃಕ್ಷಗಳನ್ನು ಪೂಜಿಸಬೇಕು. ಅನಂತರ ಋತ್ವಿಜರನ್ನು ಹಸು, ಹೊನ್ನು, ಹಾಸಿಗೆ, ಬಟ್ಟೆ, ಪಾದರಕ್ಷೆ, ಉಂಗುರ, ಸಂಸಾರಕ್ಕೆ ಉಪಯುಕ್ತವಾದ ಪಾತ್ರೆ ಪರಡಿ ಮುಂತಾದ ಪದಾರ್ಥಗಳನ್ನು ದಾನಕೊಟ್ಟು ಪೂಜಿಸಬೇಕು. ಸಾಸಿವೆ, ಅಕ್ಕಿಕಾಳು, ಎಳ್ಳುಗಳಿಂದ ಹೋಮ

ಮಾಡಬೇಕು. ಹೀಗೆ ನಾಲ್ಕುದಿನ ಹೋಮಮಾಡಿ ಕೊನೆಯದಿನ ಅವಭೃಥಸ್ನಾನ, ಬ್ರಹ್ಮಭೋಜನ, ಯಥಾಶಕ್ತಿ ದಕ್ಷಿಣೆ ದಾನಾದಿಗಳನ್ನು ನಡೆಸಬೇಕು. ಮಿಕ್ಕವರಿಗಿಂತ ಎರಡು ಪಟ್ಟು ಆಚಾರ್ಯರಿಗೆ ದಕ್ಷಿಣೆ ಕೊಡಬೇಕು.

**ಅನೇನವಿಧಿನಾ ಯಸ್ತು ಕುರ್ಯಾದ್ವೃಕ್ಷೋತ್ಸವಂ ಬುಧಃ ।**
**ಸರ್ವಾನ್ ಕಾಮಾನವಾಪ್ನೋತಿಫಲಂ ಚಾನಂತಮಶ್ನುತೇ ।**

ಈ ಕ್ರಮದಿಂದ ವೃಕ್ಷೋತ್ಸವವನ್ನು ಮಾಡುವ ವಿದ್ವಾಂಸನ ಮನೋರಥಗಳೆಲ್ಲವೂ ಪೂರ್ಣವಾಗುವವು. ಅವನಿಗೆ ಅಕ್ಷಯ ಫಲವು ಲಭಿಸುವದು.

**ಯಶ್ಚೈಕಮಪಿ ರಾಜೇಂದ್ರ ವೃಕ್ಷಂ ಸಂಸ್ಥಾಪಯೇನ್ನರಃ ।**
**ಸೋಽಪಿ ಸ್ವರ್ಗೇವಸೇದ್ರಾಜ ಯಾವದಿಂದ್ರಾಯುತತ್ರಯಂ ।**

ಓ ರಾಜೇಂದ್ರಾ, ಯಾವನು ಕೊನೆಗೆ ಒಂದು ಮರವನ್ನಾದರೂ ನೆಡುವನೋ ಅಂತಹವನೂ ಕೂಡ ಮುವತ್ತು ಸಾವಿರ ಇಂದ್ರರು ಆಧಿಪತ್ಯ ನಡೆಸುವಷ್ಟು ಕಾಲ ಸ್ವರ್ಗದಲ್ಲಿ ವಾಸಿಸುವನು.

**ಭೂತಾನ್ ಭವ್ಯಾಂಶ್ಚ ಮನುಜಾಂಸ್ತಾರಯೇದ್ದ್ರುಮವರ್ಧನಾತ್ ।**
**ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ ।**

ಹಿಂದಿದ್ದ ಮತ್ತು ಮುಂದೆ ಹುಟ್ಟುವ ತನ್ನ ವಂಶೀಯರನ್ನು ಆತನು ಉದ್ಧರಿಸುವನು. ಅವರು ಮರಗಳಂತೆ ಸ್ಥಿರರೂ ದೃಢರೂ ಆಗುವರು. ಆ ಯಜಮಾನನು ಪುನರ್ಜನ್ಮವಿಲ್ಲದಂತಹ ಅತಿಶ್ರೇಷ್ಠವಾದ ಸಿದ್ಧಿಯನ್ನು ಪಡೆಯುವನು. ಈ ವೃಕ್ಷೋತ್ಸವದ ವಿಧಿಯನ್ನು ಪ್ರತಿನಿತ್ಯವೂ ಹೇಳುವ ಕೇಳವ ಜನರು ದೇವಪೂಜ್ಯರಾಗಿ ಬ್ರಹ್ಮಲೋಕದಲ್ಲಿ ವಾಸಿಸುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತನೆಯ ಅಧ್ಯಾಯ ಮುಗಿದುದು*

—o—

## ಸೌಭಾಗ್ಯಶಯನ ವ್ರತ

ಅಧ್ಯಾಯ - ೬೧

**ತಥೈವಾನ್ಯತ್ಪ್ರವಕ್ಷ್ಯಾಮಿ ಸರ್ವಕಾಲಫಲಪ್ರದಂ ।**
**ಸೌಭಾಗ್ಯಶಯನಂ ನಾಮಯತ್ಪುರಾಣವಿದೋ ವಿದುಃ ।**

**ಮತ್ಸ್ಯ** :- ಸರ್ವ ಮನೋರಥವನ್ನು ಪೂರ್ಣ ಮಾಡುವ ಮತ್ತೊಂದು ವ್ರತವನ್ನು ಹೇಳುತ್ತೇನೆ. ಪುರಾಣಜ್ಞರು ಅದನ್ನು **ಸೌಭಾಗ್ಯಶಯನ** ವ್ರತವೆಂದು ಕರೆಯುವರು. ಹಿಂದೆ ಒಂದು ಪ್ರಳಯಕಾಲದಲ್ಲಿ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ ಮುಂತಾದ ಲೋಕಗಳೆಲ್ಲವೂ ಸುಟ್ಟು ಹೋದವು. ಆಗ ಸಕಲ ಭುವನಸೌಭಾಗ್ಯವೆಲ್ಲವೂ ಒಂದುಗೂಡಿ ವೈಕುಂಠಲೋಕಕ್ಕೆ ಹೋಗಿ ವಿಷ್ಣುವಿನ ವಕ್ಷಸ್ಥಳದಲ್ಲಿ ನೆಲೆ ನಿಂತಿತು. ಮುಂದೆ ಎಷ್ಟೋ ಕಾಲವು ಕಳೆದ ಬಳಿಕ ಪ್ರಪಂಚದ ಹೊಸಸೃಷ್ಟಿಯಾಯಿತು. ಪ್ರಕೃತಿ ಪುರುಷರಿಂದ ಕೂಡಿದ ಜಗತ್ತನ್ನೆಲ್ಲ ಅಹಂಕಾರವು ಆವರಿಸಿತು. ಆಗ ಬ್ರಹ್ಮನಿಗೂ, ಕೃಷ್ಣನಿಗೂ ಸ್ಪರ್ಧೆ ಏರ್ಪಟ್ಟು ಅದರಿಂದ ಲಿಂಗಾಕಾರವಾದ ಒಂದು ಬೆಂಕಿಯ ಜ್ವಾಲೆಯು ಹೊರಹೊಮ್ಮಿತು. ಅದರಿಂದ ವಿಷ್ಣುವಿನ ಹೃದಯವು ಕಾವುಗೊಂಡಿತು. ಅಲ್ಲಿ ಆಶ್ರಯಪಡೆದ ತ್ರಿಭುವನ ಸೌಭಾಗ್ಯವು ಕರಗಿ ಅಲ್ಲಿಂದ ಹೊರಹೊಮ್ಮಿ ಹರಿದು ಭೂಮಿಯೆಡೆಗೆ ಸುರಿದು ಬರತೊಡಗಿತು. ಅಂತರಿಕ್ಷದಲ್ಲಿ ಹರಿದು ಬರುವ ಆ ಸ್ವಧೆಯ ಸೋನೆಯನ್ನು ಬ್ರಹ್ಮದೇವರ ಬುದ್ಧಿವಂತ ಮಾನಸಪುತ್ರನಾದ ದಕ್ಷಪ್ರಜಾಪತಿಯು ಕುಡಿದನು. ಅದರಿಂದ ಅವನಲ್ಲಿ ವಿಲಕ್ಷಣವಾದ ಸೌಂದರ್ಯವು ಅಸಾಧಾರಣವಾದ ಕಾಂತಿಯು ಸ್ವಯಂ ಪ್ರಸ್ಫುರಿಸಿದವು. ದಕ್ಷಪ್ರಜಾಪತಿ ಕುಡಿದು ಉಳಿದ ಆ ಸೌಭಾಗ್ಯರಸವು ನೆಲದ ಮೇಲೆ ಎಂಟು ಕಡೆ ಉದುರಿಬಿದ್ದು ಎಂಟು ರೂಪವನ್ನು ತಾಳಿತು. ಅದರಿಂದ ನೆಲ ಕಬ್ಬು, ಪಾದರಸ, ಅವರೆ, ಜೀರಿಗೆ, ಕೊತ್ತಂಬರೀಬೀಜ, ಮೊಸರು, ಮಜ್ಜಿಗೆ ಮುಂತಾದ ಪರಿಣಾಮಗಳನ್ನು ಪಡೆಯುವ ಹಸುವಿನ ಹಾಲು, ಕೇಶರ, ಉಪ್ಪು ಮುಂತಾದ ಅನೇಕ ಪದಾರ್ಥಗಳು ಉತ್ಪನ್ನವಾದವು.

ದಕ್ಷ ಪ್ರಜಾಪತಿಯು ವಿಷ್ಣುವಿನ ಹೃದಯದಿಂದ ಕರಗಿ ಸೂಸಿದ ಸೌಭಾಗ್ಯ ರಸವನ್ನು ಕುಡಿದ ಬಳಿಕ ಅವನಿಗೊಬ್ಬ ಮಗಳು ಹುಟ್ಟಿದಳು. ಅವಳೇ ಸತೀದೇವಿ. ಸೌಂದರ್ಯದಲ್ಲಿ ಅವಳಿಗೆ ಮಿಗಿಲಾದವರು ಯಾರೂ ಇಲ್ಲ. ಯಾವಲೋಕ ದಲ್ಲಿಯೂ ಇಲ್ಲ. ಲಾಲಿತ್ಯದಲ್ಲಿ ಲೋಕಾತೀತಳಾದುದರಿಂದ ಅವಳಿಗೆ ಲಲಿತೆ ಎಂದು ಹೆಸರು. ಜಗನ್ಮೋಹಿನಿಯಾದ ಆ ಲಲಿತೆಯನ್ನು ಪರಮೇಶ್ವರನಾದ ಶಿವನು ಮದುವೆ ಯಾದನು. ಅವಳು ಸೌಭಾಗ್ಯ ಸ್ವರೂಪಿಣಿ, ಭಾಗ್ಯಭೋಗಗಳನ್ನು, ಭುಕ್ತಿ ಮುಕ್ತಿಗಳನ್ನು, ಕೊಡುವ ಮಹಾದೇವಿ. ಆ ತಾಯಿಯನ್ನು ಭಕ್ತಿಯಿಂದ ಅರ್ಚಿಸಿದ ಗಂಡು, ಪೂಜಿಸಿದ ಹೆಣ್ಣು ಯಾವ ಫಲವನ್ನು ತಾನೇ ಹೊಂದಲಿಕ್ಕಿಲ್ಲ ?

ಮನು ''ಜನಾರ್ದನ, ಆ ಜಗದಂಬೆಯನ್ನು ಆರಾಧಿಸುವ ಬಗೆ ಯಾವುದು ? ಅದರ ವಿಧಿ-ವಿಧಾನಗಳನ್ನೆಲ್ಲ ಜಗನ್ನಾಥನಾದ ನೀನು ನನಗೆ ತಿಳಿಸು.

**ಮತ್ಸ್ಯ** :- ಚೈತ್ರಮಾಸದಲ್ಲಿ ಶುಕ್ಲಪಕ್ಷದ ತದಿಗೆ ದಿನ ಪ್ರಾತಃಕಾಲದಲ್ಲಿ ಎಳ್ಳು ಬೆರೆಸಿದ ನೀರಿನಲ್ಲಿ ಸ್ನಾನಮಾಡಬೇಕು. ತ್ರಿಭುವನ ಸುಂದರಿಯಾದ ಸತೀ ದೇವಿಯನ್ನು ಪರಮೇಶ್ವರನು ಪಾಣಿಗ್ರಹಣಮಾಡಿದ ಶುಭತಿಥಿಯು ಅದೇ ತಾನೇ! ಆ ದಿನ ಪಾರ್ವತೀ ಪರಮೇಶ್ವರರನ್ನು ಬಗೆ ಬಗೆಯ ಹಣ್ಣು-ಹಂಪಲ, ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಬೇಕು. ಶಿವ-ಶಿವೆಯರ ಪ್ರತಿಮೆಗಳನ್ನು ಪಂಚಾಮೃತ ಗಂಧೋದಕ, ಶುದ್ಧೋದಕಗಳಿಂದ ಸ್ನಾನಮಾಡಿಸಿ, ಹೂಗಳಿಂದ ಆ ತಾಯಿ ತಂದೆಯರನ್ನು ಪೂಜಿಸಬೇಕು. 'ಪಾಟಲಾಯೈ ನಮಃ' ಎಂದು ದೇವಿಯ ಪಾದಗಳಲ್ಲಿ, 'ಶಿವಾಯ ನಮಃ' ಎಂದು ಪರಮೇಶ್ವರನ ಪಾದಗಳಲ್ಲಿ ಹೂಗಳನ್ನು ಅರ್ಪಿಸಬೇಕು. 'ಶಿವಾಯ ನಮಃ', 'ಜಯಾಯೈ ನಮಃ' ಎಂದು ಪಾರ್ವತೀ ಪರಮೇಶ್ವರನ ಹಿಮ್ಮಡಿಗಳನ್ನು ಪೂಜಿಸಬೇಕು. 'ರುದ್ರಾಯ ನಮಃ,' 'ಭವಾನ್ಯೈ ನಮಃ' ಎಂದು ದೇವ-ದೇವಿಯರ ಮೊಣಕಾಲುಗಳನ್ನೂ, 'ವಿಜಯಾ ನಮಃ,' 'ರುದ್ರೈಶ್ವರ್ಯಾಯ ನಮಃ' ಎಂದು ಮಂಡಿಗಳನ್ನೂ 'ಹರಿಕೇಶಾಯ ನಮಃ,' 'ವರದಾಯೈ ನಮಃ' ಎಂದು ತೊಡೆಗಳನ್ನೂ, 'ಶಂಕರಾಯ ನಮಃ', 'ಈಶಾಯೈ ನಮಃ' ಎಂದು ಸೊಂಟಗಳನ್ನೂ, 'ಶೂಲಪಾಣಯೇ ನಮಃ' 'ಕೊಟಾಯೈ ನಮಃ' ಎಂದು ಇಬ್ಬರ ಉದರಗಳನ್ನು, 'ಈಶಾನ್ಯೈ ನಮಃ', 'ಸರ್ವಾತ್ಮನೇ ನಮಃ' ಎಂದು ಹೃದಯಗಳನ್ನೂ, 'ವೇದಾತ್ಮನೇ ನಮಃ', 'ರುದ್ರಾಣ್ಯೈನಮಃ' ಎಂದು ದೇವ-ದೇವಿಯರ ಕೊರಳನ್ನೂ, 'ತ್ರಿಪುರಾಂತಕಾಯ ನಮಃ', 'ಅನಂತಾಯೈ ನಮಃ', ಎಂದು ಇಬ್ಬರ ಕೈಗಳನ್ನೂ, 'ತ್ರಿಲೋಚನಾಯ ನಮಃ', 'ಉಗ್ರಪತ್ನ್ಯೈ ನಮಃ' ಎಂದು ಬಾಹುಗಳನ್ನೂ, 'ಈಶ್ವರಾಯ ನಮಃ', 'ಸ್ವಧಾಯೈ ನಮಃ' ಎಂದು ಮುಖಗಳನ್ನೂ, 'ಸ್ಥಾಣವೇ ನಮಃ', 'ಚಂದ್ರಶೇಖರ ಪ್ರೇಯಸ್ಯೈ ನಮಃ' ಎಂದು ತುಟಿಗಳನ್ನೂ, 'ಅರ್ಧನಾರೀಶ್ವರಾಯ ನಮಃ', 'ಶ್ಯಾಮಲಾಂಗ್ಯೈ ನಮಃ' ಎಂದು ಮೂಗುಗಳನ್ನೂ, 'ಉಗ್ರಾಯ ನಮಃ', 'ಲಲಿತಾಯೈನಮಃ' ಎಂದು ಹುಬ್ಬುಗಳನ್ನೂ, 'ಶಿವಾಯ ನಮಃ', 'ವಾಸವ್ಯೈ ನಮಃ' ಎಂದು ಮುಂಗುರುಳನ್ನೂ, 'ಶ್ರೀಕಂಠಾಯ ನಮಃ', 'ಭವಾನ್ಯೈ ನಮಃ' ಎಂದು ಕೇಶಗಳನ್ನೂ, 'ಭೀಮಯ ನಮಃ', 'ಭೀಮಾಭಾರ್ಯಾಯೈ ನಮಃ' ಎಂದು-ಇಬ್ಬರ ತಲೆಗಳನ್ನು ಪೂಜಿಸಬೇಕು.

ಹೀಗೆ ಶಾಸ್ತ್ರೋಕ್ತವಾಗಿ ಪಾರ್ವತೀ ಪರಮೇಶ್ವರನನ್ನು ಪೂಜಿಸಿ ಅವರ ಮುಂದೆ ತುಪ್ಪ, ಅವರೆ, ಕೇಸರಿ, ಹಾಲು, ಜೇರಿಗೆ, ಪಾದರಸ, ಉಪ್ಪು, ಕೋತಂಬರಿ ಈ ಎಂಟು ಸೌಭಾಗ್ಯ ದ್ರವ್ಯಗಳನ್ನು ಇರಿಸಬೇಕು. ಸೇವಿಸುವ ಜನರಿಗೆ ಸೌಭಾಗ್ಯವನ್ನು ಕೊಡುವದರಿಂದ ಸೌಭಾಗ್ಯಾಷ್ಟಕ ಎಂದು ಇವು ಪ್ರಸಿದ್ಧ ಆಗಿವೆ. ಇವೆಲ್ಲವನ್ನೂ ಪಾರ್ವತೀ ಪರಮೇಶ್ವರರಿಗೆ ನೈವೇದ್ಯಮಾಡಿ ಅಲ್ಲಿಯೇ ಇರಿಸಬೇಕು. ರಾತ್ರಿಯಲ್ಲಿ ಹಸುವಿನ ಕೊಂಬು ತೊಳೆದು ಇಟ್ಟುಕೊಂಡ ನೀರನ್ನು ಕುಡಿದು ನೆಲದ

ಮೇಲೆ ಮಲಗಬೇಕು. ಬೆಳಿಗ್ಗೆ ಸ್ನಾನ, ಸಂಧ್ಯೆ, ಜಪ, ಪೂಜೆಗಳನ್ನು ಮುಗಿಸಿ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ ಆ ಎಂಟು ಸೌಭಾಗ್ಯ ದ್ರವ್ಯಗಳನ್ನೂ, ಪಾರ್ವತೀ ಪರಮೇಶ್ವರರ ಎರಡೂ ಚಿನ್ನದ ಪ್ರತಿಮೆಗಳನ್ನೂ ದಾನಕೊಡಬೇಕು. ಇದರಂತೆಯೇ ಸಕಲ ವಿಧವಾದ ಸೌಭಾಗ್ಯವನ್ನು ಅಪೇಕ್ಷಿಸುವವರು ಇಡೀ ವರ್ಷ ಪ್ರತಿಯೊಂದು ಶುಕ್ಲಪಕ್ಷ ತೃತೀಯಾ ದಿನದಂದು ಭಕ್ತಿಯಿಂದ ಮಾಡಬೇಕು.

ಚೈತ್ರಮಾಸದಲ್ಲಿ ಗೋವಿನ ಕೋಡು ತೊಳೆದು ತೀರ್ಥರೂಪವಾದ ಗೋಶೃಂಗೋದಕವನ್ನೂ, ವೈಶಾಖದಲ್ಲಿ ಗೋಮಯಮಿಶ್ರನೀರನ್ನು ಪ್ರಾಶನ ಮಾಡಬೇಕು. ಅಂದರೆ ಕುಡಿಯಬೇಕು. ಜೇಷ್ಠಮಾಸದಲ್ಲಿ ಪಾರಿಜಾತ ಹೂ, ಆಷಾಢದಲ್ಲಿ ಬಿಲ್ವ ಪತ್ರ, ಶ್ರಾವಣದಲ್ಲಿ ಮೊಸರು-ತುಪ್ಪ, ಭಾದ್ರಪದದಲ್ಲಿ ಕುಶೋದರ ಆಶ್ವಿನದಲ್ಲಿ ಹಾಲು, ಕಾರ್ತಿಕದಲ್ಲಿ ತುಪ್ಪ ಮೊಸರು, ಮಾರ್ಗಶೀರ್ಷದಲ್ಲಿ ಗೊಮೂತ್ರ, ಪುಷ್ಯದಲ್ಲಿ ತುಪ್ಪ, ಮಾಘದಲ್ಲಿ ಕರಿಯೆಳ್ಳು, ಫಾಲ್ಗುಣದಲ್ಲಿ ಪಂಚಗವ್ಯ ಸೇವಿಸಬೇಕು. ಚೈತ್ರಮಾಸದಲ್ಲಿ ''ಲಲಿತಾದೇವೀ ಪ್ರೀಯತಾಂ '' ಎಂದು ಸಂಕಲ್ಪಮಾಡಿ ದಾನಧರ್ಮಗಳನ್ನು ಮಾಡಬೇಕು. ಇದರಂತೆ ಮುಂದಿನ ಹನ್ನೊಂದು ತಿಂಗಳಲ್ಲಿಯೂ ದೇವಿಯ ಒಂದೊಂದು ರೂಪವು ಪ್ರೀತವಾಗಲಿ ಎಂದು ಹೇಳಿ ಸಂಕಲ್ಪ ಪೂರ್ವಕವಾಗಿ ಪುಣ್ಯಕಾರ್ಯಗಳನ್ನು ಮಾಡಬೇಕು. ಆ ಮಾಸಾಭಿಮಾನಿಯು ದೇವಿಯ ರೂಪಗಳು ಕ್ರಮವಾಗಿ ಹೀಗಿವೆ. ಚೈತ್ರದಲ್ಲಿ ಲಲಿತಾ ಇದರ ಮುಂದಿನ ತಿಂಗಳುಗಳಲ್ಲಿ ವಿಜಯಾ, ಭದ್ರಾ, ಭವಾನಿ, ಕುಮುದಾ, ಶಿವಾ, ವಾಸುದೇವಿ, ಗೌರಿ, ಮಂಗಲಾ, ಕಮಲಾ, ಸತಿ, ಉಮಾ.

ಈ ಹನ್ನೆರಡು ತಿಂಗಳು ಕ್ರಮವಾಗಿ ಮಲ್ಲಿಗೆ, ಅಶೋಕ, ತಾವರೆ, ಕಡಹ, ಕನ್ನೈದಿಲೆ, ಜಾಜಿ, ಕುಬ್ಜಕ, ಕೆಂಪು ಗಣಿಗಲೆ, ಕರಿಗೋರಂಟಿ, ದೊಡ್ಡಗೋರಂಟಿ ಈ ಹೂವುಗಳನ್ನು ದೇವಿಗೆ ಏರಿಸಿ ಪೂಜಿಸಬೇಕು. ದಾಸಾಳದ ಹೂ, ಜಾಜಿ, ಕಮಲ, ಕೆಂಪುಗಣಿಗೆಲೆ ಹೂವುಗಳನ್ನು ದೊರೆತಾಗೆಲ್ಲಾ ಏರಿಸಲು ಅಡ್ಡಿ ಇಲ್ಲ. ಹೀಗೆ ಒಂದು ವರ್ಷ ಪೂರ್ತಿ ಸ್ತ್ರೀ ಪುರುಷರು ಭಕ್ತಿಯಿಂದ ಹಾಗೂ ಉಪವಾಸಾದಿ ನಿಯಮಗಳಿಂದ ಶಿವನನ್ನು ಪೂಜಿಸಿ ಬಂಗಾರದ ಪಾರ್ವತೀ ಪರಮೇಶ್ವರರ ಪ್ರತಿಮೆಗಳನ್ನು ಹಾಸಿಗೆಯ ಮೇಲೆ ಇರಿಸಿ, ಹಸು ಎತ್ತು ಸಹಿತವಾಗಿ ಬ್ರಾಹ್ಮಣರಿಗೆ ದಾನಕೊಡಬೇಕು. ಯಥಾಶಕ್ತಿ ದಂಪತಿಗಳಿಗೆ ಭೋಜನಮಾಡಿಸಿ ಧನಧಾನ್ಯ ವಸ್ತ್ರಾಲಂಕಾರಗಳಿಂದ ಪೂಜಿಸಬೇಕು. ಈ ವ್ರತದ ಕೊನೆಗೆ ಯಾವುದಾದರೂ ಒಂದು ಹಣ್ಣನ್ನು ತಿನ್ನುವುದಿಲ್ಲವೆಂದು ಪ್ರತಿಜ್ಞೆಮಾಡಬೇಕು.

ಈ ವ್ರತವನ್ನು ಪ್ರತಿ ತಿಂಗಳೂ ಮಾಡುವದರಿಂದ, ಆರೋಗ್ಯ, ಆಯುಷ್ಯ, ಸೌಭಾಗ್ಯ, ಸೌಂದರ್ಯ, ಐಶ್ವರ್ಯ, ಅಧಿಕಾರ ಎಲ್ಲವೂ ಸಮೃದ್ಧವಾಗಿ ಲಭಿಸುವವು. ಹನ್ನೆರಡುವರ್ಷ ಈ ಸೌಭಾಗ್ಯವಿನಯವ್ರತವನ್ನು ಮಾಡುವವನು, 'ಕೈಲಾಸದಲ್ಲಿಯೇ ದೇವಪೂಜಿತನಾಗಿ ' ಮೂವತ್ತುಸಾವಿರ ಕಲ್ಪಕಾಲ ಸುಖದಿಂದ ಇರುವನು. ಇದನ್ನು ಹೇಳುವವರೂ ಕೇಳುವವರೂ ವಿದ್ಯಾಧರರಾಗಿ ಸ್ವರ್ಗಲೋಕದಲ್ಲಿ ಬಹುಕಾಲ

ಬಾಳಿಬೆಳಗುವರು. ಇದಕ್ಕೂ ಮೊದಲು ಈ ವ್ರತವನ್ನು ಕಾಮ, ಕಾರ್ತವೀರ್ಯ, ಶತಧನ್ವ, ವರುಣ, ನಂದಿ, ಮೊದಲಾದವರು ಆಚರಿಸಿ ಪುಣ್ಯವನ್ನು ಪಡೆದಿದ್ದಾರೆ. ಇದರಿಂದಲೇ ಈ ವ್ರತದ ಆಚರಣೆಯಿಂದ ಎಂಥ ಪುಣ್ಯ ಫಲಪ್ರಾಪ್ತವಾಗುವದೆಂಬುದು ತಿಳಿಯಲು ಸಾಕು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತೊಂದನೇಯ ಅಧ್ಯಾಯ ಮುಗಿದುದು*



## ಸಪ್ತಲೋಕಗಳ ನಿಯಂತ್ರಣ ಮತ್ತು ಋಷಿಗಳ ಜನ್ಮಕಾರ್ಯಗಳ ನಿರೂಪಣೆ

ಅಧ್ಯಾಯ - ೬೨

**ನಾರದ ಉವಾಚ**

**ಭೂಲೋಕೋಽಥ ಭುವರ್ಲೋಕಃ ಸ್ವರ್ಗಲೋಕೋ ಮಹರ್ಜನಃ**
**ತಪಸ್ಸತ್ಯಂ ಚ ಸಪ್ತೈತೇ ದೇವಲೋಕಾಃ ಪ್ರಕೀರ್ತಿತಾಃ ॥**

**ನಾರದ :-** ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕ ಎಂಬ ಏಳು ದೇವಲೋಕಗಳು ಈ ಬ್ರಹ್ಮಾಂಡದಲ್ಲಿ ಇರುವವಷ್ಟೆ ! ಈ ಲೋಕಗಳ ಒಡೆತನವು ಸರತಿಯ ಮೇಲೆ ಯಾರಿಗೆ ಪ್ರಾಪ್ತವಾಗುವವು ? ಮತ್ತು ಹೇಗೆ ಪ್ರಾಪ್ತವಾಗುವವು ? ಮತ್ತು ಈ ಲೋಕದಲ್ಲಿ ಶುಭಕರವಾದ ಸಂತಾನ, ಸಂಪತ್ತು ಸೌಭಾಗ್ಯ, ಆಯುಷ್ಯ, ಭೋಗ, ಭಾಗ್ಯಗಳನ್ನುಪಡೆಯಲು ಮುಖ್ಯಸಾಧನವು ಯಾವುದು ? ಇದೆಲ್ಲವನ್ನೂ ಹೇಳಬೇಕು.

**ಮಹೇಶ್ವರ :-** ಪೂರ್ವಕಾಲದಲ್ಲಿ ದೇವೇಂದ್ರನು ವಾಯುದೇವರೊಂದಿಗೆ ಒಡಗೂಡಿ ದುಷ್ಟದೈತ್ಯರನ್ನೆಲ್ಲ ನಾಶಮಾಡಲು ಅಗ್ನಿದೇವರಿಗೆ ಆದೇಶವಿತ್ತನು. ಆಗ ಆ ಅನಿಲದೇವನು ಅನಲನ ಬೆಂಬಲಪಡೆದು ತಾರಕನ ನೇತೃತ್ವದಲ್ಲಿ ಸುರಪುರದ ಮೇಲೆ ಏರಿ ಬಂದ ದೈತ್ಯ ದಾನವರನ್ನೆಲ್ಲ ಸುಟ್ಟುಬೂದಿಮಾಡಿದನು. ತಾರಕ, ಕಮಲಾಕ್ಷ, ಪರಾವಸು, ವಿರೋಚನ ಮುಂತಾದ ದೈತ್ಯದಳದ ಧುರೀಣರು ಸಂಗ್ರಾಮಾಂಗಣವನ್ನು ಬಿಟ್ಟು ಓಡಿಹೋದರು. ಸಾಗರಗರ್ಭದಲ್ಲಿ ಅವಿತುಕೊಂಡರು. ಅಪರಂಪಾರಅಗಾಧ ಸಾಗರದ ವಿಶಾಲವಾದ ನೀರಿನ ಆಗರದಲ್ಲಿ ಎಲ್ಲಿಯೋ ಒಂದು ಗುಪ್ತಸ್ಥಳದಲ್ಲಿ ತೋಯರಾಶಿಯತಳದಲ್ಲಿ ತಲೆಮರೆಸಿಕೊಂಡು ಅಡಗಿದ ಆ ದಾನವರ ಧುರೀಣರನ್ನು ಹುಡುಕಿ ಹೊಡೆಯುವದು ಅಶಕ್ಯವೆಂದು ತಿಳಿದು ಅಗ್ನಿವಾಯುಗಳು ಆ ದುಷ್ಟರ ವಧವ್ಯಾಪಾರದಿಂದ ವಿಮುಖರಾದರು.

ಅಂದಿನಿಂದ ಜಾತ್ಯಾ ದುಷ್ಟಸ್ವಭಾವದ ಆ ದೈತ್ಯರು ನೀರುಬಿಟ್ಟು ಮೇಲೆ ಬಂದು ಕಂಡ-ಕಂಡ ದೇವಮಾನವರನ್ನೂ ಕೈಗೆ ಸಿಕ್ಕ ಮುನಿ ಮನುಜರನ್ನೂ

ಉರಗತುರಗಗಳನ್ನೂ ಕೊಂದು ತಿಂದು ಮತ್ತೆ ನೀರಿನಲ್ಲಿ ಅಡಗಿಬಿಡುತ್ತಿದ್ದರು. ಹೀಗೆ ಆ ದುರುಳರ ದಂಡು ಹನ್ನೆರಡು ಸಾವಿರ ವರುಷ ಆ ಜಲದುರ್ಗದ ಆಶ್ರಯ ಬಲದಿಂದ ಮೂರುಲೋಕದಲ್ಲಿಯ ಜೀವಜಂತುಗಳನ್ನೆಲ್ಲ ಕಾಡಿ ಪೀಡಿಸುತ್ತಿದ್ದರು. ಕೊನೆಗೆ ಇದನ್ನು ಕಂಡು ಕೋಪದಿಂದ ಕನಲಿ ಕೆಂಡದಂತಾದ ಸುರರಾಜನು ಅಗ್ನಿ-ವಾಯುಗಳನ್ನು ಕರೆದು ಈ ಸಮುದ್ರವು ನಮ್ಮ ಶತ್ರುಗಳಾದ ದೈತ್ಯರಿಗೆಲ್ಲ ಸುರಕ್ಷಿತವಾದ ಭದ್ರಕೋಟೆಯಾಗಿದೆ. ಜನರನ್ನೆಲ್ಲ ಹೊಡೆದು ಸಾಗರದ ದುರ್ಲಂಘ್ಯವಾದ ಈ ಜಲದುರ್ಗದಲ್ಲಿ ಅವರು ಹೊಕ್ಕು ಯಾರಿಗೂ ಶಿಕ್ಷಿಸಲು ಬಾರದಂತೆ ಸುರಕ್ಷಿತವಾಗಿ ಪಾರಾಗಿಬರುತ್ತಾರೆ. ಆದುದರಿಂದ ನೀವು ಈಗ ಆ ದುರುಳ-ದಾನವ ಧುರಂಧರರ ತಂಗುವತಾಣವಾದ ಸಮಗ್ರಸಾಗರವನ್ನೇ ಒಣಗಿಸಿಬಿಡಿರಿ' ಎಂದು ಆದೇಶವಿತ್ತನು.

ಆಗ ಅಗ್ನಿವಾಯುಗಳು ಜಂಭಾರಿಯಾದ ಸುರೇಶ್ವರನಿಗೆ ಬಿನ್ನವಿಸಿದರು- ''ದೇವರಾಜ, ಅಸಂಖ್ಯ ಅನಂತ ಪ್ರಾಣಿಗಳಿಗೆ ಅಗರವಾದ ಈ ವಿಶಾಲ ಸಾಗರವನ್ನು ಸುಟ್ಟು ಒಣಗಿಸುವದರಿಂದ ಕೊಟ್ಯಾವಧಿ ಪ್ರಾಣಿಗಳೂ, ಜಲಚರಗಳೂ ಸತ್ತು ಹೋಗುತ್ತವೆ. ಇಷ್ಟು ಅಸಂಖ್ಯ ಪ್ರಾಣಿಗಳ ಸಾಮೂಹಿಕ ಕಗ್ಗೊಲೆಗೆ ಕಾರಣವಾಗುವ ಈ ಸಮುದ್ರ ಶೋಷಣವು ಅತ್ಯಂತ ಅಧರ್ಮ. ಒಂದು ಯೋಜನ ವಿಸ್ತಾರವಾದ ಈ ಸಿಂಧುವಿನ ಪ್ರದೇಶದಲ್ಲಿಯೇ ಅನಂತಾನಂತಜೀವಿಗಳು ಜಲಚರಗಳು ಬದುಕಿ ಬಾಳುತ್ತವೆ. ಇಂಥ ಸಂಪೂರ್ಣ ಶರಧಿಯನ್ನೇ ಸುಟ್ಟು ಶೋಷಣಮಾಡಿದರೆ ಎಷ್ಟು ಪ್ರಾಣಿಹತ್ಯೆ? ಎಂಥ ಪಾಪಕಾರ್ಯ ! ಇಂಥ ಸಂಹಾರಕಾರ್ಯವನ್ನು ಮಾಡುವದು ಉಚಿತವೇ? ಆದುದರಿಂದ ಇಂಥ ಮಹಾಘೋರ ಪಾಪವನ್ನು ನಾವಂತೂ ಮಾಡಲಾರೆವು '' ಎಂದು ಸ್ಪಷ್ಟವಾಗಿ ಹೇಳಿದರು. ಇದರಿಂದ ಆ ಸುರ ಸಾರ್ವಭೌಮನಿಗೆ ಭಾರೀಕೋಪ. ಎರಡೂಕಂಗಳು ಕೆಂಪುಕೆಂಡ. ಅವನ ನುಡಿ-ನುಡಿಗಳೆಲ್ಲ ಕಿಡಿಯಾಗಿ ಹೊರಸೂಸುತ್ತಿದ್ದವು. ಅವನು ಸಿಟ್ಟಿನಿಂದ ಬೆಂಕಿಯಂತಾಗಿ ಬೆಂಕಿಯ ದೇವತೆಯನ್ನು ಕುರಿತು ಹೀಗೆ ನುಡಿದನು-

''ದೇವತೆಗಳಿಗೆ ವಿಧಿ ನಿಷೇಧಗಳಿಲ್ಲ, ಪಾಪಲೇಪವಿಲ್ಲ. ಆದರಲ್ಲಿಯೂ ಮಹಾಮಹಿಮೋಪೇತರಾದ ನಿಮ್ಮಂಥ ದೇವತಾ ಧುರೀಣರಿಗಂತೂ ಯಾವದೇ ಪಾತಕದ ಸಂಪರ್ಕವು ಆಗಲು ಶಕ್ಯವಿಲ್ಲ. ನನ್ನ ಅಪ್ಪಣೆಯನ್ನು ವಾಯುವಿನೊಂದಿಗೆ ಕೂಡಿ ಮೀರಿದ್ದು ನಿನ್ನ ಮೊದಲನೇ ಮಹಾಪರಾಧ. ಎರಡನೆಯದಾಗಿ ಧರ್ಮಬುದ್ಧಿ ಇಲ್ಲದ ಶಾಸ್ತ್ರನಿಂದಕರಾದ ದೈತ್ಯರ ಬಗ್ಗೆ ಅಹಿಂಸಾವ್ರತವನ್ನು ಅಂಗೀಕಾರ ಮಾಡಿದ್ದು ಘೋರಅಪರಾಧ. ದುಷ್ಟದಾನವರನ್ನು ಮುನಿಗಳಂತೆ ಭಾವಿಸಿ ಅವರ ಕರಾಳ ಕೃತ್ಯಗಳನ್ನೆಲ್ಲ ಮನ್ನಿಸುವದು ಶುದ್ಧತಪ್ಪು. ಆದುದರಿಂದ ನೀನು ನನ್ನ ಸಹಾಯಕನಾದ ಆ ವಾಯುವಿನೊಂದಿಗೆ ಒಂದೇ ಶರೀರದಲ್ಲಿ ಮಾನವ ಜನ್ಮ ತಳೆದು ಮುನಿರೂಪದಿಂದ ಹುಟ್ಟಿ ಬಾ. ಆ ಮನುಷ್ಯಜನ್ಮದಲ್ಲಿ ನೀನು ಸಮುದ್ರವನ್ನು ಇಂದಿನ ನನ್ನ ಆಜ್ಞೆಯಂತೆ ಬತ್ತಿಸಿದಾಗ ಮಾತ್ರ ಪುನಃ ನಿನಗೆ ದೇವತ್ವ ಪ್ರಾಪ್ತಿ.''

ಹೀಗೆ ಸುರಪತಿಯ ಶಾಪದಿಂದ ಅಗ್ನಿವಾಯುಗಳು ಆ ಕ್ಷಣದಲ್ಲಿಯೇ ಭೂಮಿಗೆ ಬಿದ್ದವು. ಮಿತ್ರವರುಣ ಎಂಬ ಮಹಾನುಭಾವರ ಶಕ್ತಿಯಿಂದ ಒಂದು ಕೊಡದಲ್ಲಿ ಇಬ್ಬರೂ ಮುನಿಗಳು ಕೂಡಿ ಒಂದೇ ಶರೀರದಲ್ಲಿ ಹುಟ್ಟಿದರು. ಅವನೇ ಅಗಸ್ತ್ಯ, ವಶಿಷ್ಠಋಷಿಯು ಅವನ ಸಹೋದರ.

**ನಾರದ :-** ಓ ತ್ರಿಪುರಾರಿಯೇ, ಅಗಸ್ತ್ಯ ಮುನಿಯು ವಶಿಷ್ಠ ಮಹರ್ಷಿಗೆ ಸಹೋದರನಾದುದು ಹೇಗೆ ? ಮಿತ್ರಾವರುಣರು ಅಗಸ್ತ್ಯನ ತಂದೆಯಾದುದು ಎಂತು ? ಅಗಸ್ತ್ಯ ಮುನಿಯು ಕುಂಭದಿಂದ ಏಕೆ ಹುಟ್ಟಿದನು ?

**ಮಹಾದೇವ :-** ಪೂರ್ವಕಾಲದಲ್ಲಿ ಒಮ್ಮೆ ಪುರಾಣಪುರುಷ ಎಂದು ಪ್ರಸಿದ್ಧನಾದ ನಾರಾಯಣನು ಧರ್ಮಋಷಿಯ ಪುತ್ರನಾಗಿ ಅವತರಿಸಿದ್ದನು. ಗಂಧಮಾದನಪರ್ವತದಲ್ಲಿ ಆ ಭಗವಂತನು ಉಗ್ರವಾದ ತಪಸ್ಸನ್ನೂ ಕೈಕೊಂಡಿದ್ದನು. ಅದನ್ನು ಕಂಡು ಶಚೀಪತಿಗೆ ಸ್ವರ್ಗಲೋಕದಲ್ಲಿ ಕುಳಿತಲ್ಲಿಯೇ ಹೆದರಿಕೆ. ತನ್ನ ಸ್ಥಾನಕ್ಕೆ ಎಲ್ಲಿ ದಾಳಿ ತರುವನೋ ಎಂದು. ನಾರಾಯಣ ಮುನಿಯ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಸುರೇಂದ್ರನು ಕಾಮನನ್ನೂ ಅವನ ಜೊತೆಗೆ ವಸಂತನನ್ನೂ ಕಳಿಸಿಕೊಟ್ಟನು. ದೇವರಾಜನ ಅಪ್ಪಣೆಯಂತೆ ಅಪ್ಸರೆಯರು ಅವರಿಬ್ಬರನ್ನು ಹಿಂಬಾಲಿಸಿದರು. ಈ ಕಾಮನ ಬಳಗವೆಲ್ಲವೂ ಸುರರಾಜನ ಸಂದೇಶದಂತೆ ಗಂಧಮಾದನಗಿರಿಗೆ ಐತಂದಿತು. ಅಪ್ಸರೆಯರು ಹಾಡಿದರು. ಕುಣಿದರು. ಬಾರಿಸಿದರು. ಹಾವ-ಭಾವ, 'ಬೆಡಗುಬಿನ್ನಾಣದಿಂದ ನಾರಾಯಣನ ಮನಸ್ಸನ್ನು ಕೆದಕಿ ಕದಡಲು ಹವಣಿಸಿದರು. ಸ್ವರ್ಗದ ಆ ಚೆಲುವು ಚಿಟ್ಟೆಗಳ ಹಾಡು-ಪಾಡು, ಕುಣಿತ-ಮಣಿತ, ಭಾವ-ಭಂಗಿ ಯಾವುದಕ್ಕೂ ತಪೋನಿಶ್ಚಲನಾದ ನಾರಾಯಣನ ಮನಸ್ಸು ಹಿಗ್ಗಲಿಲ್ಲ, ಬಗ್ಗಲಿಲ್ಲ, ಚಲಿಸಲಿಲ್ಲ. ಕುಣಿ ಕುಣಿದು ಆ ಸ್ವರ್ಗದ ಹೆಂಗಳೆಯರೆಲ್ಲ ದಣಿದುಹೋದರು. ಇದರಿಂದ ಕಾಮನ ಕಾಮಿನಿಯರೂ, ವಸಂತನ ವಿಲಾಸಿನಿಯರೂ, ಅಮರಾವತಿಯ ಅಂಗನೆಯರೂ ಎಲ್ಲರೂ ಖಿನ್ನ ವಿಷಣ್ಣರಾದರು. ಆಗ ನರನ ಸೋದರನಾದ ನಾರಾಯಣನು ಇವರೆಲ್ಲರ ಮನಸ್ಸನ್ನು ಸೂರೆಗೈಯುವಂಥ ಸೌಂದರ್ಯವುಳ್ಳ ಓರ್ವ ನಾರೀಮಣಿಯನ್ನು ತನ್ನ ತೊಡೆಯಿಂದಲೇ ನಿರ್ಮಾಣಮಾಡಿದನು.

ಮೂರುಲೋಕಕ್ಕೂ ಮೋಹಕವಾಗಿತ್ತು ಅವಳ ರಮ್ಯರೂಪ. ಅವಳ ಚೆಲವು ನಿಲುವುಗಳನ್ನು ಕಂಡು ದೇವತೆಗಳ ಚಿತ್ತ ಚಂಚಲವಾಯಿತು. ಕಾಮ ವಸಂತರು ಮನಸೋತು ಮುಗ್ಧರಾಗಿ ನಿಂತುಕೊಂಡರು. ಅದರಂತೆ ನಾರಾಯಣ ಋಷಿಯ ನವ-ನಿರ್ಮಿತಿಯಾದ ಆ ನಾರೀ ರತ್ನದ ಸೌಂದರ್ಯವನ್ನು ಕಂಡು ಮಿತ್ರಾ ವರುಣ ಎಂಬ ಇಬ್ಬರೂ ದೇವತೆಗಳು ಕಾಮವಶರಾದರು. ಅಮರಾವತಿಯಿಂದ ಬಂದ ಅಪ್ಸರಾಂಗನೆಯರೂ ಕೂಡ ಆ ರೂಪರಾಶಿಯನ್ನು ಕಂಡು ನಾಚಿ ತಲೆ ತಗ್ಗಿಸಿದರು. ಆಗ ನಾರಾಯಣ ಅವರಿಗೆ ಹೇಳಿದ ''ದೇವತೆಗಳೇ, ಇವಳೂ ಒಬ್ಬ ಅಪ್ಸರೆ. ನನ್ನ ಊರಿನಿಂದ ಜನಿಸಿದ್ದರಿಂದ ಊರ್ವಶಿಯೆಂದು ಇವಳ ಪ್ರಸಿದ್ಧಿಯಾಗುವದು.''

ದೇವತಾ ಶ್ರೇಷ್ಠನಾದ ಮಿತ್ರನಿಗೆ ಊರ್ವಶಿಯ ಮೈಮೆರಗನ್ನು ಕಂಡು ಮೋಹ ವಾಗಿತ್ತು. ಅವಳ ಮಾದಕರೂಪ ವರುಣನಿಗೂ ಮೋದಕ ಮೋಹಕವಾಗಿತ್ತು. ಶ್ರೀ ಹರಿಯ ಆಜ್ಞೆಯಂತೆ ಅವಳು ಸ್ವರ್ಗಲೋಕಕ್ಕೆ ಪಯಣ ಬೆಳೆಸಿದಾಗ ಮಿತ್ರ ಮಾರ್ಗ ಮಧ್ಯದಲ್ಲಿಯೇ ಅವಳನ್ನು ಸಂಧಿಸಿ "ನಾನು ನಿನ್ನ ಮೈಸಿರಿಗೆ ಮಾರುಹೋಗಿದ್ದೇನೆ. ನನ್ನೊಡನೆ ವಿಹರಿಸಿ ನನ್ನನ್ನು ಆನಂದ ಪಡಿಸು" ಎಂದು ಕೇಳಿಕೊಂಡನು.

ಅದಕ್ಕೆ ಊರ್ವಶಿಯು ಒಪ್ಪಿಗೆಯಿತ್ತು ಮುಂದೆ ನಡೆದಳು. ತುಸು ಮುಂದೆ ಹೋದ ಕೂಡಲೇ ವರುಣನು ಅವಳ ಸೌಂದರ್ಯದಿಂದ ಆಕರ್ಷಿತನಾಗಿ ಅವಳನ್ನು ವಿಹಾರಕ್ಕೆ ಆಹ್ವಾನಿಸಿದನು. ಆಗ ಆ ಸುರಸುಂದರಿ ಗೊಂದಲಗೆಟ್ಟಂತಾಗಿ ವಿನಯದಿಂದಲೇ ಹೇಳಿದಳು. "ಪ್ರಭು, ಇಂದು ಮೊದಲು ಮಿತ್ರದೇವನು ನನ್ನನ್ನು ವರಿಸಿದ್ದಾನೆ. ನಾನೂ ಅವನಿಗೆ ಒಲಿದು ಒಪ್ಪಿಗೆಯಿತ್ತಿದ್ದೇನೆ. ಆದುದರಿಂದ ನಿಮ್ಮ ಆಶೆಯನ್ನು ಇಂದು ನಾನು ಪೂರೈಸಲಾರೆ." ಅದಕ್ಕೆ ವರುಣನು "ಸುಂದರಿ ಮೊದಲು ಮಾತು ಕೊಟ್ಟಿದ್ದರೆ ನೀನು ಮಿತ್ರನ ಬಳಿಗೆ ಹೋಗು. ನಿನ್ನ ಈ ಚೆಲುವಿನ ಭಾಂಡಾರದಂತಿದ್ದ ನಿನ್ನ ಮೈಯನ್ನು ಅವನಿಗೆ ಒಪ್ಪಿಸು. ಆದರೆ ನಿನ್ನ ಮನಸ್ಸು ಮಾತ್ರ ನನ್ನ ಮೇಲಿರಲಿ. ನೀನು ಮನಃಪೂರ್ವಕವಾಗಿ ನನ್ನನ್ನು ಕಾಮಿಸಿ ಪ್ರೇಮಿಸಿದರೂ ಸಾಕು. ನಾನು ಕೃತಾರ್ಥ" ಎಂದನು. ಅವನ ಆ ಪ್ರಣಯದ ಗಾಢತೆಯನ್ನು ನೋಡಿ ಊರ್ವಶಿಗೂ ಅವನ ಮೇಲೆ ರಾಗೋದಯವಾಯಿತು. ಅವಳ ಮನಸ್ಸು ವರುಣನಲ್ಲಿಯೇ ನೆಟ್ಟಿತು. ಆದರೆ ಅವಳು ಮಿತ್ರನಿಗೆ ಮೊದಲು ಮಾತು ಕೊಟ್ಟಂತೆ ಅಂದಿನ ಇರುಳು ಅಭಿಸಾರಿಕೆಯಾಗಿ ಅವನ ಬಳಿಗೆ ಐತಂದಳು. ಆದರೆ ಅವಳ ಮನಸ್ಸುಮಾತ್ರ ವರುಣನಲ್ಲಿ. ಇದು ಮಿತ್ರನಿಗೆ ಗುರುತಾಯಿತು. ಮನಸ್ಸಿಲ್ಲದ ಬರಿ ಮೈಮಾಟ, ಪ್ರೇಮವಿಲ್ಲದ ಕಣ್ಣೋಟ ಅವಳ ಭಾವಶೂನ್ಯವಾದ ಬೇಟಕೂಟಗಳು ಅವನಿಗೆ ತೃಪ್ತಿಯೆನಿಸಲಿಲ್ಲ. ಅದರ ಕಾರಣವನ್ನು ಪರಾಮರ್ಶಿಸಿದಾಗ ಅವನ ದಿವ್ಯದೃಷ್ಟಿಗೆ ಸತ್ಯಸಂಗತಿ ಗೋಚರವಾಯಿತು. ಅವನಿಗೆ ಬಹಳ ಕೋಪ ಬಂದಿತು. ಸಿಟ್ಟಿನಿಂದ ಆ ಸುಂದರಿಯನ್ನು ಅವನು ಶಪಿಸಿ ಬಿಟ್ಟ.

"ನೀನು ಮನಸೊಬ್ಬನಿಗೆ, ಮೈಮತ್ತೊಬ್ಬನಿಗೆ ಕೊಟ್ಟು ವೇಶ್ಯಾಧರ್ಮವನ್ನು ಇಂದು ಇಲ್ಲಿ ಅನುಸರಿಸಿದೆ. ಆದುದರಿಂದ ಭೂಲೋಕಕ್ಕೆ ಹೋಗಿ ಮಾನವಿಯಂತೆ ಪುರೂರವ ಎಂಬ ಮನುಷ್ಯ ದೊರೆಯ ಸಂಗವನ್ನು ಪಡೆ. " ಆದರೆ ಮಿತ್ರ ವರುಣ ಇಬ್ಬರೂ ಊರ್ವಶಿಯ ರೂಪಾತಿಶಯವನ್ನು ಕಂಡು ವಿಕಾರವಶರಾಗಿದ್ದರು. ಇಬ್ಬರದೂ ಚಿತ್ತ ಚಂಚಲಿತವಾಗಿ ಶಕ್ತಿಪಾತವಾಯಿತು. ಅದನ್ನು ಇಬ್ಬರೂ ತಮ್ಮಲ್ಲಿಯ ನೀರಿನ ಕೊಡದಲ್ಲಿ ತುಂಬಿಟ್ಟರು. ಆ ಕುಂಭದಿಂದ ಇಬ್ಬರು ಋಷಿಕುಮಾರರು ಜನಿಸಿದರು. ಅವರಲ್ಲಿ ಒಬ್ಬ ವಸಿಷ್ಠ ಇನ್ನೊಬ್ಬ ಅಗಸ್ತ್ಯ. ಹಿಂದೆ ನಿಮಿ ಎಂಬ ಒಬ್ಬ ರಾಜ. ರಸಿಕನಾದ ಅವನು ಒಂದು ದಿನ ತನ್ನ ರಾಣಿ ರಮಣಿಯೊಂದಿಗೆ ಲೆತ್ತವಾಡುತ್ತಿದ್ದ. ಆಟದ ನೆಪ, ರತಿರೂಪಸೀ ರಮಣಿಯೊಂದಿಗೆ ಸರಸ ಆಟ, ಬೇಟ, ನೋಟ, ಚೆಲ್ಲಾಟಗಳಲ್ಲಿಯೇ ಅವನ ಎಲ್ಲ ಲಕ್ಷ್ಯ.

ಅದೇ ವೇಳೆಗೆ ಅಲ್ಲಿಗೆ ವಸಿಷ್ಠ ಮುನಿಗಳ ಆಗಮನ. ಮಾನಿನಿಯರ ಮೋಹಕ ಮುಖದ ಮುಂದೆ ಮುನಿಗೆ ಮಾನ ಮರ್ಯಾದೆ ಮಾಡುವದೇ ಮರೆತುಹೋಯಿತು. ಆ ಮಹಾರಾಜನಿಗೆ. ಮಡದಿಯೊಡನೆ ಆಟದಲ್ಲಿ ಮಗ್ನನಾಗಿ ಕುಳಿತು ಬಿಟ್ಟ. ವಸಿಷ್ಠನಿಗೆ ಕೂಡಲೇ ಕೋಪ. ಅದರ ಬೆನ್ನ ಹಿಂದೇ ಶಾಪ. ''ನಿನಗೆ ದೇಹವೆ ಇಲ್ಲದಂತಾಗಲಿ'' ರಾಜನದೂ ಪ್ರತಿಶಾಪ ' ನಿನ್ನ ಪಾಡೂ ಹಾಗೇ ಆಗಲಿ '. ಹೀಗೆ ಪರಸ್ಪರ ಶಾಪ ಪ್ರತಿಶಾಪಗಳಿಂದ ಇಬ್ಬರಿಗೂ ದೇಹಹಾನಿ. ತಮ್ಮ ಅಳಲನ್ನು ತೋಡಿಕೊಳ್ಳಲು ಬ್ರಹ್ಮದೇವರ ಬಳಿಗೆ ಇಬ್ಬರದೂ ಓಡಾಟ. ಶಾಪ ಪರಿಹಾರಕ್ಕಾಗಿ ಬ್ರಹ್ಮಜ್ಞಾನಿಗಳಿಬ್ಬರದೂ ಬ್ರಹ್ಮದೇವರಿಗೆ ಪ್ರಾರ್ಥನೆ. ಅನಂತರ ಬ್ರಹ್ಮದೇವರ ಅಪ್ಪಣೆ ನಿಮಿ ರಾಜನಿಗೆ ''ನೀನು ಜನರ ಕಣ್ಣನಂಚಿನ ಮೇಲೆ ನೆಲೆಸು'' ಎಂದು. ಅಂದಿನಿಂದ ಪ್ರಾಣಿಗಳಿಗೆ ಕಣ್ಣಿನ ಮೇಲೆ ರೆಪ್ಪೆಗಳು ಮೂಡಿದವು. ಅಲ್ಲಿಯೇ ಈಗಲೂ ನಿಮಿಯ ವಿಶ್ರಾಂತಿ. ಅದರಿಂದಲೇ ಕಣ್ಣಿನರೆಪ್ಪೆಗಳಿಗೆ 'ನಿಮಿಷ' ಎಂದು ಹೆಸರು ಬಂದಿತು. ವಸಿಷ್ಠರು ಮಾತ್ರ ಮಿತ್ರಾವರುಣರು ರೇತಃ ಸಿಂಚನ ಮಾಡಿದ ಆ ಜಲಕುಂಭದಲ್ಲಿ ಬಂದು ಕುಳಿತರು. ಮೊದಲಿದ್ದಂತೆಯೇ ಆ ಕೊಡದಿಂದ ಹೊರ ಬಂದರು.

ಅನಂತರ ಅಗಸ್ತ್ಯ ಮುನಿಯ ಪ್ರಾದುರ್ಭಾವ. ಅಚ್ಚಬಿಳಿಬಣ್ಣ. ನಾಲ್ಕು ಕೈ. ಒಂದರಲ್ಲಿ ದಂಡ ಮತ್ತೊಂದರಲ್ಲಿ ಕಮಂಡಲ. ಮಗದೊಂದರಲ್ಲಿ ಜಪಮಾಲೆ ನಾಲ್ಕನೆಯದರಲ್ಲಿ ಪುಸ್ತಕ. ದೊಡ್ಡವರಾದ ಬಳಿಕ ಅಗಸ್ತ್ಯರು ಲೋಪಾಮುದ್ರಾ ಎಂಬ ರಾಜಕುಮಾರಿಯನ್ನು ಮದುವೆಯಾದರು. ಮಲಯಪರ್ವತದ ಒಂದು ತಪ್ಪಲಿನಲ್ಲಿ ಮಡದಿಯೊಂದಿಗೆ ಅತ್ಯುಗ್ರವಾದ ತಪಸ್ಸನ್ನು ಆಚರಿಸಿದರು. ಮುಂದೆ ತಾರಕಾದಿ ದೈತ್ಯರಿಂದ ಜಗತ್ತಿಗೆಲ್ಲ ಬಹಳ ಉಪಟಳವಾಗುವುದನ್ನು ಅವರು ಕಂಡರು. ಭೂಮಿಯ ಮೇಲಿರುವ ಪ್ರಾಣಿಗಳನ್ನೂ ದೇವಮಾನವರನ್ನೂ ಹೊಡೆದು ಹಿಂಸಿಸಿ ಮತ್ತೆ ದೈತ್ಯರು ಸಮುದ್ರದಲ್ಲಿ ಹೋಗಿ ಅಡಗಿಕೊಂಡು ಕುಳಿತು ಬಿಡುತ್ತಿದ್ದರು. ಇದರಿಂದ ಇಂದ್ರ, ಅಗ್ನಿ, ವಾಯುದೇವರಿಗೂ ಅವರನ್ನು ಗೆಲ್ಲುವದು ಅಶಕ್ಯವಾಯಿತು. ಕೊಲ್ಲುವದಂತೂ ದೂರೇ ಉಳಿಯಿತು. ಇದೆಲ್ಲ ದೇವ ಮಾನವರಿಗೇ ದಾನವಾಧಮರಿಂದ ಆಗುವ ವಿಪರೀತ ತೊಂದರೆಗಳನ್ನು ಅನುಲಕ್ಷಿಸಿ ಪ್ರಜಾಕೋಟಿ ಕಲ್ಯಾಣಾಕಾಂಕ್ಷಿಗಳಾದ ಅಗಸ್ತ್ಯರು ರಾಕ್ಷಸರು ವಾಸಿಸುವ ಆ ಸಮುದ್ರದ ನೀರನ್ನೆಲ್ಲ ಕುಡಿದು ಒಣಗಿಸಿ ಬಿಟ್ಟರು. ಅಗಸ್ತ್ಯರ ಈ ಅದ್ಭುತವಾದ ಲೋಕೋಪಕಾರಕ ಕೃತ್ಯವನ್ನು ಕಂಡು ಹರಿಹರಬ್ರಹ್ಮಾದಿದೇವತೆಗಳು ಸುಪ್ರಸನ್ನರಾದರು. ಬೇಕಾದ ವರ ಬೇಡು ಎಂದರು. ಅದಕ್ಕೆ ಅಗಸ್ತ್ಯಮುನಿ ''ಬ್ರಹ್ಮ ಕಲ್ಪದವರೆಗೆ ನಾನು ದಕ್ಷಿಣಾಪಥದಲ್ಲಿ ವಿಮಾನ ಸಂಚಾರಿಯಾಗಿ ಇರಬೇಕು. ನನ್ನ ವಿಮಾನವು ಗೋಚರವಾಗಿ ನನ್ನ ದರ್ಶನ ಮಾಡಿಕೊಂಡು ಪೂಜೆಮಾಡುವ ಭಕ್ತನು ಕ್ರಮವಾಗಿ ಮೇಲಿನ ಏಳೂ ದಿವ್ಯಲೋಕಗಳಿಗೆ ಪ್ರಯಾಣಮಾಡಬೇಕು''. ಅಗಸ್ತ್ಯ ಮುನಿಯ ಈವರ ಪ್ರಾರ್ಥನೆಗೆ ತ್ರಿಮೂರ್ತಿಗಳು ಆಗಲಿ ಎಂದು ಹೇಳಿ ಅಪೇಕ್ಷಿತ ವರವನ್ನು ಕೊಟ್ಟು ಅನುಗ್ರಹಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಆದುದರಿಂದ

ಬುದ್ಧಿವಂತನು ಅಗಸ್ತ್ಯ ಋಷಿಯ ಪೂಜೆಯನ್ನು ಯಾವಾಗಲೂ ಮಾಡಬೇಕು. ಮತ್ತು ಆ ಮುನಿಯನ್ನು ಉದ್ದೇಶಿಸಿ ಅರ್ಘ್ಯವನ್ನು ಕೊಡಬೇಕು.

**ನಾರದ** :- ಶಂಭೋ, ಅಗಸ್ತ್ಯಮುನಿಗೆ ಅರ್ಘ್ಯದಾನಮಾಡುವ ಬಗೆ ಯಾವುದು ? ಅವನ ಪೂಜೆಯ ಪ್ರಕಾರ ಯಾವುದು ? ತಿಳಿಸಿರಿ.

**ಮಹಾದೇವ** :- ರಾತ್ರಿಯ ಕೊನೆಯ ಭಾಗದಲ್ಲಿ ಅಗಸ್ತ್ಯನ ಉದಯವಾದ ಬಳಿಕ ಅರುಣೋದಯ ಸಮಯದಲ್ಲಿ ಎಳ್ಳು ಮಿಶ್ರಿತ ನೀರಿನಲ್ಲಿ ಸ್ನಾನಮಾಡಿ ಗೃಹಸ್ಥನು ಶುಭ್ರಬಟ್ಟೆಯನ್ನು ಧರಿಸಬೇಕು. ತೂತು, ಒಡಕು, ಬಿರುಕು ಇಲ್ಲದ ಕಲಶದಲ್ಲಿ ಐದು ರತ್ನಗಳನ್ನು ಹಾಕಿ ತುಪ್ಪದ ಪಾತ್ರೆಯೊಂದಿಗೆ ಸ್ನಾನಮಾಡಬೇಕು. ಪುಷ್ಪವಸ್ತ್ರಗಳಿಂದ ಅಲಂಕರಿಸಬೇಕು. ಆ ಕುಂಭದ ಮೇಲೆ ಧಾನ್ಯ ತುಂಬಿದ ತಟ್ಟೆಯನ್ನಿಟ್ಟು ಅದರ ಮೇಲೆ ಅಂಗುಷ್ಠ ಪ್ರಮಾಣದ ದೀರ್ಘಬಾಹುವುಳ್ಳ ನಾಲ್ಕು ಮೋರೆಯ ಚಿನ್ನದಪ್ರತಿಮೆಯನ್ನು ಮಾಡಿಸಿ ಇಟ್ಟು ವಸ್ತ್ರಾಲಂಕಾರಗಳಿಂದ ಪೂಜಿಸಬೇಕು. ಕಂಚಿನ ಪಾತ್ರೆಯಲ್ಲಿ ಅಕ್ಷತೆಯನ್ನೂ ಶಿಂಪನ್ನೂ ಇರಿಸಿ ಮಂತ್ರವನ್ನು ಹೇಳುತ್ತ ದಕ್ಷಿಣಕ್ಕೆ ಮುಖಮಾಡಿ ಕೈಯೆತ್ತಿ ಅರ್ಘ್ಯಕೊಡಬೇಕು. ಯೋಗ್ಯತೆ ಇದ್ದರೆ ಬಿಳಿಹಸುವನ್ನು ವತ್ಸಸಹಿತವಾಗಿ ಅಲಂಕರಿಸಿ ಬ್ರಾಹ್ಮಣರಿಗೆ ದಾನ ಕೊಡಬೇಕು ಮತ್ತು ಆ ಸುವರ್ಣಪ್ರತಿಮೆ, ಕಲಶ, ಕಂಚಿನಪಾತ್ರೆ, ಘೃತಪಾತ್ರೆ ಮುಂತಾದ ಪೂಜೆಗಾಗಿ ಬಳಸಿದ ಎಲ್ಲ ವಸ್ತುವನ್ನು ಬ್ರಾಹ್ಮಣರಿಗೆ ದಾನಕೊಟ್ಟು ನಮಸ್ಕರಿಸಬೇಕು. ಹೀಗೆ ಈ ವ್ರತವನ್ನು ಏಳು ರಾತ್ರಿ ಕಳೆಯುವವರೆಗೆ ಮಾಡಬೇಕು. ಹೀಗೆ ಏಳು ವರ್ಷ ಈ ವ್ರತವನ್ನು ಅನುಷ್ಠಾನಮಾಡಿದವರಿಗೆ ಮೇಲಿನ ಏಳು ಲೋಕಗಳು ಪ್ರಾಪ್ತವಾಗುತ್ತವೆ. ವ್ರತದ ಕೊನೆಗೆ ಅಗಸ್ತ್ಯರನ್ನು ಈ ಕೆಳಗಿನ ಮಂತ್ರದಿಂದ ಸ್ತೋತ್ರಮಾಡಬೇಕು.

**ಕಾಶಪುಷ್ಪ ಪ್ರತೀಕಾಶ ಅಗ್ನಿಮಾರುತ ಸಂಭವ ।**
**ಮಿತ್ರಾವರುಣಯೋಃಪುತ್ರ ಕುಂಭಯೋನೇ ನಮೋಽಸ್ತುತೇ ॥**

ಕಾಶಪುಷ್ಪವನ್ನು ಹೋಲುವ, ಅಗ್ನಿಮಾರುತರ ಅವತಾರರಾದ, ಮಿತ್ರಾವರುಣರ ಪುತ್ರನಾದ ಎಲೈ ಅಗಸ್ತ್ಯ ಮಹರ್ಷಿಯೇ ನಿನಗೆ ನಮಸ್ಕಾರ.

**ವಿಂಧ್ಯವೃದ್ಧಿಕ್ಷಯಕರ ಮೇಘತೋಯವಿಷಾಪಹ ।**
**ರತ್ನವಲ್ಲಭದೇವೇಶ ಲಂಕಾವಾಸಿನ್ನಮೋಽಸ್ತುತೇ ॥**

ವಿಂಧ್ಯಪರ್ವತವು ಬೆಳೆಯದಂತೆ ಮಾಡಿ, ಮೇಘೋದಕದ ವಿಷವನ್ನು ಕಳೆದು, ರತ್ನಗಳಿಗೆ ಅಧಿಪನಾಗಿ, ದೇವತೆಗಳ ಪ್ರಭುವೆನಿಸಿ, ಲಂಕಾವಾಸಿಯಾದ ಓ ಅಗಸ್ತ್ಯ, ನಿನಗೆ ನಮಸ್ಕಾರ.

**ವಾತಾಪೀ ಭಕ್ಷಿತೋಯೇನ ಸಮುದ್ರಃ ಶೋಷಿತಃ ಪುರಾ ।**
**ಲೋಪಾಮುದ್ರಾಪತಿಃ ಶ್ರೀಮಾನ್ಯೋಽಸೌ ತಸ್ಮೈ ನಮೋನಮಃ ।**

''ಯಾವನು ಪೂರ್ವದಲ್ಲಿ ವಾತಾಪಿಯನ್ನು ಭಕ್ಷಿಸಿದನೋ, ಸಮುದ್ರವನ್ನು ಶೋಷಿಸಿದನೋ, ಅಂಥ ಶ್ರೀಮಂತನಾದ ಲೋಪಮುದ್ರಾದೇವಿಯ ಪತಿಯಾದ ಅಗಸ್ತ್ಯಮಹರ್ಷಿಗೆ ನಮಸ್ಕಾರ.'' ಹೀಗೆ ಅಗಸ್ತ್ಯ ಮಹಾಮುನಿಗೆ ಪ್ರಾರ್ಥನಾಪೂರ್ವಕವಾಗಿ ವಂದನೆಗೈಯಬೇಕು. ಇದರಂತೆ ಅಗಸ್ತ್ಯಋಷಿಯ ಧರ್ಮಪತ್ನಿಯಾದ ಲೋಪಾಮುದ್ರೆಗೂ ಭಕ್ತಿಯಿಂದ ನಮಿಸಿ ಆದರದಿಂದ ಅರ್ಘ್ಯಪ್ರದಾನ ಮಾಡಬೇಕು. ಲೋಪಾಮುದ್ರೆಗೆ ಅರ್ಘ್ಯಕೊಡುವ ಮಂತ್ರ -

**''ರಾಜಪುತ್ರಿ ಮಹಾಭಾಗೇ ಋಷಿಪತ್ನಿ ವರಾನನೇ**
**ಲೋಪಾಮುದ್ರೇ ನಮಸ್ತುಭ್ಯಮರ್ಘ್ಯೋ ಮೇ ಪ್ರತಿಗೃಹ್ಯತಾಂ ।**

''ಎಲೌ ರಾಜಪುತ್ರಿ, ಬಹು ಭಾಗ್ಯಸಂಪನ್ನೆ, ಋಷಿಪತ್ನಿ, ಮಂಗಳಮುಖೀ, ಲೋಪಾಮುದ್ರೆ, ನಿನಗೆ ನಮಸ್ಕಾರ ಮಾಡುವೆನು. ನಾನು ಒಪ್ಪಿಸಿದ ಈ ಪೂಜೋಪಹಾರವನ್ನು ಸ್ವೀಕರಿಸು''

ಪ್ರತಿವರ್ಷವೂ ಹೀಗೆ ವ್ರತವನ್ನು ಆಚರಿಸಿ ಅದರ ಫಲವನ್ನು ಪರಮಾತ್ಮನಿಗೆ ಸಮರ್ಪಣಮಾಡಬೇಕು. ಅಗಸ್ತ್ಯ ದಂಪತಿಗಳಿಗೆ ಅರ್ಘ್ಯ ಕೊಡುವವನು ಈ ಲೋಕದಲ್ಲಿ ಸೌಂದರ್ಯ, ಆರೋಗ್ಯಗಳನ್ನು ಪಡೆದು ಮುಂದೆ ಸಪ್ತಲೋಕಗಳನ್ನು ಹೊಂದುವನು. ಮಿತ್ರಾವರುಣರಿಂದ ಜನಿಸಿದ ಅಗಸ್ತ್ಯ ಮುನಿಯ ಉತ್ಪತ್ತಿ ಹಾಗೂ ಪ್ರಭಾವ ಅರ್ಘ್ಯದಾನ ಮತ್ತು ಪೂಜಾವಿಧಾನವನ್ನು ಓದಿದವರು ಕೇಳಿದವರು ವಿಷ್ಣು ಸಾನ್ನಿಧ್ಯವನ್ನು ಹೊಂದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಆರವತ್ತೆರಡನೆಯ ಅಧ್ಯಾಯ ಮುಗಿದುದು*



## ಸೌಭಾಗ್ಯ ಆರೋಗ್ಯದಾಯಕ ವ್ರತ

| ಅಧ್ಯಾಯ - ೬೩ |
|---|

**ಮನು ಉವಾಚಃ**

**''ಸೌಭಾಗ್ಯಾರೋಗ್ಯ ಫಲದಮಮುತ್ರಾಕ್ಷಯ್ಯ ಕಾರಕಂ ।**
**ಭುಕ್ತಿಮುಕ್ತಿಪ್ರದಂ ದೇವ ತನ್ಮೇ ಬ್ರೂಹಿ ಜನಾರ್ದನ ॥''**

**ಮನುಮಹಾರಾಜ ಅಂದದ್ದು** :- ದೇವ ಜನಾರ್ದನ, ಸೌಭಾಗ್ಯ ಆರೋಗ್ಯಗಳನ್ನು ಇಲ್ಲಿ ಇಹದಲ್ಲಿ, ಸ್ವರ್ಗ ಮೋಕ್ಷಗಳನ್ನು ಪರದಲ್ಲಿ. ಭೋಗ ಭಾಗ್ಯಗಳನ್ನು ಎರಡೂ ಕಡೆಯಲ್ಲಿ ಕೊಡುವ ವ್ರತವು ಯಾವುದಾದರೂ ಇದ್ದರೆ ನನಗಾಗಿ ಹೇಳು.

**ಮತ್ಸ್ಯ** :- ಹಿಂದೆ ಒಂದು ದಿನ ಕೈಲಾಸ ಶಿಖರದಲ್ಲಿ ಚಂದ್ರಚೂಡನ ಪಕ್ಕದಲ್ಲಿ ಪಾರ್ವತೀದೇವಿ. ಆ ಪಾರ್ವತಿ, ಪರಮೇಶ್ವರರಲ್ಲಿ ಸರಸಸಲ್ಲಾಪ, ಅನೇಕ ಕಥೋಪಕಥೆಗಳು ಧರ್ಮ ವಿಚಾರಗಳು ಆ ಸಂವಾದ ರೂಪವಾಗಿ ಆ ಕಾಲದಲ್ಲಿ

ನಡೆದವು. ಪಾರ್ವತಿಯ ಪ್ರಶ್ನೆಗೆ ಪರಮೇಶ್ವರನು ಕೊಟ್ಟ ಉತ್ತರದಲ್ಲಿ ಮೋಕ್ಷ ಮಾರ್ಗದ ದರ್ಶನವಿದೆ. ಮಹಾಫಲಪ್ರದವಾದ ಆ ಅನಂತತೃತಿಯಾವ್ರತವನ್ನು ನಿನಗೆ ಹೇಳುತ್ತೇನೆ ಕೇಳು.

ಭಾದ್ರಪದ ವೈಶಾಖ ಇಲ್ಲವೆ ಮಾರ್ಗಶೀರ್ಷ ತಿಂಗಳಲ್ಲಿ ಯಾವುದಾದರೂ ಒಂದು ಶುಕ್ಲಪಕ್ಷದ ತದಗಿಯ ದಿನ ಬಿಳಿಸಾಸಿವೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಪಂಚಾಮೃತದಲ್ಲಿ ಗೋರೋಚನವನ್ನು ತೆಯ್ದು ಶ್ರೀಗಂಧದೊಡನೆ ಕೂಡಿಸಿ ಹಣೆಯಲ್ಲಿ ತಿಲಕವನ್ನು ಧರಿಸಬೇಕು. ಗಂಡಸರಾಗಲಿ ಹೆಂಗಸರಾಗಲಿ ಕೆಂಪು ಬಟ್ಟೆಗಳನ್ನು ಧರಿಸಬೇಕು. ವಿಧವಾಸ್ತ್ರೀಯು ಕಾವಿಯಲ್ಲಿ ಎದ್ದಿದ ಶೀರೆಯನ್ನು ಉಟ್ಟುಕೊಳ್ಳಬೇಕು. ವ್ರತಮಾಡುವವರು ಕುಮಾರಿಯಾಗಿದ್ದರೆ ಮಾತ್ರ ಶುಭ್ರ ವಸ್ತ್ರವನ್ನು ಧರಿಸಬೇಕು. ಅನಂತರ ದೇವಿಗೆ ಪಂಚಾಮೃತದಿಂದ ಅಭಿಷೇಕ ಮಾಡಿ, ಗಂಧ ಎರಿಸಿ, ಬಿಳಿಯ ಹೂಗಳನ್ನು ಸಮರ್ಪಿಸಿ ಬಗೆಬಗೆಯ ಹಣ್ಣು ಹಂಪಲ ನೈವೇದ್ಯ ತೋರಿಸಬೇಕು. ನೈವೇದ್ಯದಲ್ಲಿ ಹಾಲು, ತುಪ್ಪ, ಬೆಲ್ಲ, ಜೀರಿಗೆ, ಕೋತಂಬರೀ ಮುಂತಾದ ವಸ್ತುಗಳು ಇರಬೇಕು. ಬಿಳಿಎಳ್ಳು ಮತ್ತು ಅಕ್ಷತೆಗಳಿಂದ ಪಾದದಿಂದ ತಲೆಯವರೆಗೆ ಪ್ರತಿಯೊಂದು ಪಕ್ಷದಲ್ಲಿಯೂ ಅರ್ಚನೆ ಮಾಡಬೇಕು. 'ವರದಾಯ್ಯೆ ನಮಃ' ಎಂದು ಪಾದಗಳನ್ನು, 'ಶ್ರಿಯ್ಯೈ ನಮಃ' ಎಂದು ಹಿಮ್ಮಡಿಗಳನ್ನು, 'ಅಶೋಕಾಯ್ಯೆ ನಮಃ' ಎಂದು ಮೊಣಕಾಲುಗಳನ್ನು 'ಪಾರ್ವತ್ಯೈ ನಮಃ' ಎಂದು ಮೊಂಡೆಗಳನ್ನು ಪೂಜಿಸಬೇಕು. ಹೀಗೆ ಮುಂದೆ 'ಮಂಗಲಕರಾಯ್ಯೆ ನಮಃ' ಎಂದು ತೊಡೆ, 'ವಾಮದೇವ್ಯೈ ನಮಃ' ಎಂದು ನಡು, 'ಪದ್ಮೋದರಾಯ್ಯೆ ನಮಃ' ಎಂದು ಉದರ 'ಕಾಮದಾಯ್ಯೆ ನಮಃ' ಎಂದು ಹೃದಯ, 'ಸೌಭಾಗ್ಯದಾಯಿನ್ಯೈ ನಮಃ' ಎಂದು ಕೈ, 'ದರಮುಖ ಶ್ರಿಯ್ಯೆ ನಮಃ' ಎಂದು ತೋಳು, 'ದರ್ಪಣವಾಸಿನ್ಯೈ ನಮಃ' ಎಂದು ಮುಖ 'ಸ್ಮರದಾಯೆ ನಮಃ' ಎಂದು ನಗೆ. 'ಗೌರ್ಯೈ ನಮಃ' ಎಂದು ಮೂಗು, 'ಉತ್ಪಲಾಯ್ಯೆ ನಮಃ' ಎಂದು ಕಣ್ಣು, 'ತುಷ್ಟೆ ನಮಃ' ಎಂದು ಹಣೆ 'ಕಾತ್ಯಾಯನ್ಯೈ ನಮಃ' ಎಂದು ಮುಂಗುರುಳು ಮತ್ತು ತಲೆಯನ್ನು ಪೂಜಿಸಬೇಕು.

**ನಮೋ ಗೌರ್ಯೈ ನಮೋಧೃತ್ಯೈ ನಮಃ ಕಾಂತ್ಯೈ ನಮಃ ಶ್ರಿಯ್ಯೈ।**
**ರಂಭಾಯ್ಯೆ ಲಲಿತಾಯ್ಯೆ ಚ ವಾಸುದೇವ್ಯೈ ನಮೋನಮಃ ॥**

ಗೌರಿಗೆ ನಮಸ್ಕಾರ, ಧೃತಿಗೆ ನಮಸ್ಕಾರ, ಕಾಂತಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ, ಲಲಿತೆಗೆ ನಮಸ್ಕಾರ, ವಾಸುದೇವಿಗೆ ನಮಸ್ಕಾರ ನಮಸ್ಕಾರ. ಹೀಗೆ ಶಾಸ್ತ್ರೋಕ್ತವಾಗಿ ಪಾರ್ವತೀದೇವಿಯನ್ನು ಪೂಜೆಮಾಡಿ ಹನ್ನೆರಡು ಎಸಳು ಹಾಗೂ ಕರಣಿಕೆಗಳಿಂದ ಕೂಡಿದ ಕಮಲವನ್ನು ಕುಂಕುಮದಿಂದ ಬರೆಯಬೇಕು. ಪೂರ್ವದಿಕ್ಕಿನಲ್ಲಿ ಗೌರಿಯನ್ನು, ಆಗ್ನೇಯದಲ್ಲಿ ಅಪರ್ಣೆಯನ್ನು, ದಕ್ಷಿಣದಲ್ಲಿ ಭವಾನಿಯನ್ನು ನೈಋತ್ಯದಲ್ಲಿ ರುದ್ರಾಣಿಯನ್ನು, ಪಶ್ಚಿಮದಲ್ಲಿ ಸೌಮ್ಯೆಯನ್ನು, ವಾಯವ್ಯದಲ್ಲಿ ಪಾಟಲೆಯನ್ನು, ನಡುವೆ ಉಳಿದಿರುವ ನಾಲ್ಕು ಎಸಳುಗಳ ಮೇಲೆ ಕ್ರಮವಾಗಿ ಮಾತಂಗಾ, ಮಂಗಲಾ, ಕುಮುದಾ,

ಸತೀದೇವಿಯರನ್ನು ಆಹ್ವಾಹಿಸಿ ಸ್ಥಾಪನೆಮಾಡಬೇಕು. ಇವೆಲ್ಲವುಗಳ ನಟ್ಟನಡುವೆ ಕರ್ಣಿಕೆಯ ಮೇಲೆ ರುದ್ರನನ್ನೂ, ಲಲಿತಾದೇವಿಯನ್ನೂ ವಿನ್ಯಾಸಮಾಡಿ ಪುಷ್ಪಾಕ್ಷತೆಗಳಿಂದ ಆಹ್ವಾನಿಸಿ ನಮಸ್ಕರಿಸಬೇಕು. ಮಂಗಲವಾದ್ಯಗಳನ್ನು ಮೊಳಗಿಸಿ ಧ್ಯಾನಗಳಿಂದ ಸ್ತುತಿಸಬೇಕು. ಸುಮಂಗಲೆಯರಿಗೆ ಗುಲಾಬಿ ಬಣ್ಣದ ಶೀರೆಯನ್ನೂ ಹೊಂಬಣ್ಣದ ಕುಪ್ಪಸಗಳನ್ನೂ ಕೊಟ್ಟು ಚಂದನವನ್ನು ಲೇಪಿಸಿ ಬೈತಲದ ನಡುವೆ ಸಿಂಧೂರ ಬಟ್ಟನ್ನು ಇರಿಸಿ ದೇವಿಗೆ ಪ್ರಿಯವಾದ ಸಿಂಧೂರದ ಚೂರ್ಣವನ್ನು ಮುಖದ ಮೇಲೆ ಸಿಂಪಡಿಸಬೇಕು. ಅನಂತರ ಪೂಜೆ ಮಾಡಿಸಿದ ಪುರೋಹಿತರನ್ನು ಯಥಾಶಕ್ತಿ ಪೂಜಿಸಬೇಕು. ಆ ದೇವಿಗೆ ಒಂದೊಂದು ತಿಂಗಳಲ್ಲಿ ಒಂದೊಂದು ಜಾತಿಯ ಪುಷ್ಪಗಳು ಪ್ರಿಯವಾಗಿರುತ್ತವೆ. ಭಾದ್ರಪದದಲ್ಲಿ ಬಿಳಿಯಕಮಲ, ಆಶ್ವೀನದಲ್ಲಿ ಬಂಧೂಕ, ಕಾರ್ತೀಕದಲ್ಲಿ ಹೊಂದಾವರೆ, ಮಾರ್ಗಶಿರದಲ್ಲಿ ಜಾಜಿಹೂ, ಪುಷ್ಯದಲ್ಲಿ ಹೊಂಬಣ್ಣದ ಗೋರಂಟೆ, ಮಾಘದಲ್ಲಿ ಕೇಸರಪುಷ್ಪ, ಫಾಲ್ಗುಣದಲ್ಲಿ ಸಿಂಧುವಾರ ಅಥವಾ ಜಾಜೀಪುಷ್ಪ, ಚೈತ್ರದಲ್ಲಿ ಮಲ್ಲಿಗೆ ಮತ್ತು ಅಶೋಕ, ವೈಶಾಖದಲ್ಲಿ ಪಾಟಲ, ಜ್ಯೇಷ್ಠದಲ್ಲಿ ಕಮಲಮಂದಾರ, ಆಷಾಢದಲ್ಲಿ ತಾವರೆ, ಶ್ರಾವಣದಲ್ಲಿ ಕದಂಬ ಮತ್ತು ಜಾಜೀಪುಷ್ಪಗಳಿಂದ ದೇವಿಯನ್ನು ಪೂಜಿಸಬೇಕು.

ಭಾದ್ರಪದಮಾಸದಲ್ಲಿ ಈ ವ್ರತವನ್ನು ಪ್ರಾರಂಭಿಸಿ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ಗರ್ಭೋದಕ, ಬಿಲ್ವಪತ್ರ, ಯಕ್ಕೀಹೂ, ಗೋದಿ, ಗೋಶೃಂಗೋದಕ, ಪಂಚಗವ್ಯ ಮತ್ತು ಬಿಲ್ವಪತ್ರ ಇವುಗಳನ್ನು ಪ್ರತಿ ತಿಂಗಳೂ ಒಂದರಂತೆ ಪ್ರಾಶನಮಾಡಬೇಕು. ಮತ್ತು ಶುಕ್ಲಪಕ್ಷ, ಕೃಷ್ಣಪಕ್ಷ ಎರಡರಲ್ಲಿಯೂ ಗಂಧ, ಹೂ, ಬಟ್ಟೆಗಳನ್ನು ಕೊಟ್ಟು ದಂಪತಿ ಪೂಜೆ ಮಾಡಬೇಕು. ಗಂಡಸರಿಗೆ ಪೀತಾಂಬರ, ಹೆಂಗಸರಿಗೆ ಗುಲಾಬಿ ಬಣ್ಣದ ಜೋಡುವಸ್ತ್ರ ಕೊಡಬೇಕು. ಮತ್ತು ಮುತ್ತೈದಿಗೆ ಅವರೆ, ಜೀರಿಗೆ, ಉಪ್ಪು, ಕಬ್ಬು, ಬೆಲ್ಲಗಳೊಂದಿಗೆ ಬಂಗಾರದಕಮಲ ಹಾಗೂ ಹಣ್ಣು ಹೂಗಳನ್ನು ಕೊಟ್ಟು ಸತ್ಕರಿಸಬೇಕು. ''ಹೇ ದೇವಿ, ಪರಮೇಶ್ವರನು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ. ಹಾಗೆ ನೀನೂ ನನ್ನ ಕೈಬಿಡದೆ ಸಂಸಾರಸಾಗರದಿಂದ ಪಾರುಮಾಡು'' ಎಂದು ಅವಳನ್ನು ಪ್ರಾರ್ಥಿಸಿಕೊಳ್ಳಬೇಕು. ಭಾದ್ರಪದ ಮೊದಲಾದ ಹನ್ನೆರಡು (೧೨) ತಿಂಗಳುಗಳಲ್ಲಿಯೂ ಕ್ರಮವಾಗಿ ಕುಮುದಾ, ವಿಮಲಾ, ಅನಂತಾ, ಭವಾನಿ, ಸುಧಾ, ಶಿವಾ, ಲಲಿತಾ, ಕಮಲಾ, ಗೌರೀ, ಸತಿ, ರಂಭಾ, ಪಾರ್ವತಿ ಎಂಬ ಮಹಾದೇವಿಯ ಭಿನ್ನಭಿನ್ನರೂಪಗಳನ್ನು ಪೂಜಿಸಿ ಕೊನೆಯ ದಿನ ಬಂಗಾರದ ಕಮಲಸಹಿತವಾಗಿ ಶಯ್ಯಾದಾನಮಾಡಬೇಕು. ಪ್ರತಿ ತಿಂಗಳವೂ ೨೪, ೧೨, ೮ ಅಥವಾ ೬ ದಂಪತಿಗಳನ್ನು ಯಥಾಶಕ್ತಿ ಪೂಜಿಸಬೇಕು. ಗುರುಪೂಜೆಯನ್ನು ತಪ್ಪದೇ ಮಾಡಬೇಕು. ಈ ವ್ರತವು ಪಾಪಪರಿಹಾರಕ ಮತ್ತು ಆರೋಗ್ಯವರ್ಧಕ. ಈ ವ್ರತಾನುಷ್ಠಾನದಲ್ಲಿ ಯೋಗ್ಯತೆ ಇದ್ದೂ ಜಿಪುಣತನ ಮಾಡಿದರೆ ಮಹಾ ಅನರ್ಥ.

ಬಸುರಿ, ಬಾಣಂತಿ, ಹುಡುಗಿ, ರೋಗಿಷ್ಠೆ ಮುಂತಾದವರು ಇನ್ನೊಬ್ಬರಿಂದ ಈ ವ್ರತವನ್ನು ಮಾಡಿಸಬೇಕು. ಮುತ್ತೈದೆ, ಕುಮಾರಿ ಅಥವಾ ವಿಧವಾ ಯಾರೇ

ಮಾಡಲಿ ಇದರಿಂದ ಗೌರಿಯ ಪೂರ್ಣಾನುಗ್ರಹವಾಗುವದು. ಬಡವರಾಗಲೀ ಶ್ರೀಮಂತ ರಾಗಲೀ ಮೇಲೆ ಹೇಳಿದ ನಿರ್ದಿಷ್ಟ ಕಾಲದ ವರೆಗೆ ಉಪವಾಸವಿದ್ದು ಮೂರು. ವರ್ಷ ಪುಷ್ಪಾರ್ಚನ ರೂಪದಿಂದ ಈ ವ್ರತವನ್ನು ಆಚರಿಸಿದರೆ ನೂರುಕೋಟಿ ಕಲ್ಪಕಾಲ ಶಿವಲೋಕದಲ್ಲಿ ವಾಸಮಾಡುವರು. ಇದನ್ನು ಹೇಳಿದವರು ಕೇಳಿದವರು ಇಂದ್ರಲೋಕವನ್ನು ಹೊಂದಿ ದೇವತೆಗಳ ಮನ್ನಣೆಯನ್ನು ಪಡೆಯುವರು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಆರವತ್ತಮೂರನೆಯ ಅಧ್ಯಾಯ ಮುಗಿದುದು

—o—

## ರಸಕಲ್ಯಾಣಿನೀ ವ್ರತ

**ಅಧ್ಯಾಯ - ೬೪**

**ಈಶ್ವರ ಉವಾಚ :**

**ಅಥಾನ್ಯಾಮಪಿ ವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।**
**ರಸಕಲ್ಯಾಣಿನೀಮೇತಾಂ ಪುರಾಕಲ್ಪವಿದೋ ವಿದುಃ ॥**

ದೇವಿ, ಪಾಪನಾಶಕವಾದ ಮತ್ತೊಂದು ತೃತೀಯಾವ್ರತವನ್ನು ಹೇಳುವೆನು. ಪೂರ್ವಕಲಗಳ ವೃತ್ತಾಂತವನ್ನು ಅರಿತವರು ಇದನ್ನು ರಸಕಲ್ಯಾಣಿನೀವ್ರತ ಎನ್ನುವರು. ಮಾಘಮಾಸದ ಶುಕ್ಲಪಕ್ಷದ ತೃತೀಯಾ ದಿನದಂದು ಪ್ರಾತಃಕಾಲದಲ್ಲಿ ಹಸುವಿನ ಹಾಲು ಮತ್ತು ಎಳ್ಳುಮಿಶ್ರಿತ ನೀರಿನಿಂದ ಸ್ನಾನಮಾಡಬೇಕು. ಅನಂತರ ದೇವಿಯ ಪ್ರತಿಮೆಗೆ ಜೇನುತುಪ್ಪ, ಕಬ್ಬಿನ ಹಾಲುಗಳಿಂದ ಅಭಿಷೇಕಮಾಡಿ ಬಲಭಾಗದ ಅಂಗಗಳನ್ನು ಪೂಜಿಸಿ ಅನಂತರ ಎಡಭಾಗವನ್ನು ಅರ್ಚಿಸಬೇಕು.

'ಲಲಿತಾಯೈ ನಮಃ' ಎಂದು ದೇವಿಯ ಪಾದಗಳನ್ನೂ, 'ಕಾಂತ್ಯೈ ನಮಃ' ಎಂದು ಮೊಣಕಾಲುಗಳನ್ನೂ, 'ಶ್ರಿಯೈ ನಮಃ' ಎಂದು ತೊಡೆಯನ್ನೂ, 'ಮದಾಲಸಾಯೈ ನಮಃ' ಎಂದು ಕಟೀದೇಶವನ್ನೂ, 'ಅಮಲಾಯೈ ನಮಃ' ಎಂದು ಉದರವನ್ನೂ, 'ಮದನಮರ್ದಿನ್ಯೈ ನಮಃ' ಎಂದು ಹೃದಯವನ್ನೂ, 'ಕುಮುದಾಯೈ ನಮಃ' ಎಂದು ಕಂಠವನ್ನೂ, ಪುಷ್ಪಗಳಿಂದ ಅರ್ಚಿಸಬೇಕು. ಹೀಗೆ ದೇವಿಯ ಬೇರೆಬೇರೆ ರೂಪಗಳಾದ ಮಾಧವಿ, ಕಮಲೆ, ರುದ್ರಾಣಿ, ಶಂಕರಿ ಮುಂತಾದ ರೂಪಗಳನ್ನು ನೆನೆದು ಭುಜ, ಮುಖ, ಹುಬ್ಬು ಮುಂಗುರುಗಳನ್ನು ಪೂಜಿಸಬೇಕು. ವಿಶ್ವವಾಸಿನಿಯನ್ನು ನಮಿಸಿ ತಲೆ, ಮದನಿಗೆ ವಂದಿಸಿ ಹಣೆ, ಮೋಹಿನಿಗೆ ವಂದಿಸಿ ಹುಬ್ಬು, ಅರ್ಧಚಂದ್ರ ಧಾರಿಣಿಯನ್ನು ನಮಿಸಿ ನೇತ್ರ, ತುಷ್ಟಿಯನ್ನು ನಮಿಸಿ ಮುಖ, ಉತ್ಕಂಠಿನಿಯನ್ನು ನಮಿಸಿ ಸ್ತನಗಳನ್ನು, ಅಮೃತೆಯನ್ನು ನಮಿಸಿ ರಂಭೆಯೇ ನಮಃ ಎಂದು ಕಿಬ್ಬೊಟ್ಟೆ, ವಿಶೋಕಾಯೈ ನಮಃ ಎಂದು ನಡು, ಮನ್ಮಥವಾಸಿನ್ಯೈ ನಮಃ ಎಂದು ಹೃದಯವನ್ನೂ, ಭೂಮಿಧಾರಿಣಿಯೇ ನಮಃ ಎಂದು ಪಾದಗಳನ್ನೂ, ಜಗದ್ರೂಪಿಣ್ಯೈ ನಮಃ ಎಂದು ಶಿರಸ್ಸನ್ನೂ ಪೂಜಿಸಬೇಕು.

ನಮೋ ಭವಾನ್ಯೈ ಕಾಮಿನ್ಯೈ ಕಾಮದೇವ್ಯೈ ಜಗತ್ಪ್ರಿಯೇ ।
ಆನಂದಾಯೈ ಸುನಂದಾಯೈ ಸುಭದ್ರಾಯೈ ನಮೋನಮಃ ॥

ಎಂದು ದೇವಿಯನ್ನು ಸ್ತೋತ್ರರೂಪದಿಂದ ಪ್ರಾರ್ಥನೆಮಾಡಿ ಭಕ್ತಿಯಿಂದ ಪೂಜಿಸಬೇಕು. ಹೀಗೆ ವಿಧಿಪೂರ್ವಕವಾಗಿ ದೇವಿಯನ್ನು ಪೂಜಿಸಿ, ಬ್ರಾಹ್ಮಣ ದಂಪತಿಗಳನ್ನು ಮಧುರ ಭೋಜನ ಸ್ವಾದು ಪಾನೀಯಗಳಿಂದ ತೃಪ್ತಿಪಡಿಸಿ, ನೀರು ತುಂಬಿದ ಕಲಶ, ಎರಡು ಬಿಳಿಬಟ್ಟೆ ಹಾಗೂ ಒಂದು ಬಂಗಾರದ ಕಮಲವನ್ನು ದಾನ ಕೊಟ್ಟು ಹೂವಿನಹಾರಹಾಕಿ ಚಂದನ ಗಂಧವನ್ನು ಮೈಗೆ ಸವರಿ ಪೂಜಿಸಬೇಕು. ಕುಮದಾ ದೇವಿಯು ಪ್ರೀತಳಾಗಲಿ ಎಂದು ಹೇಳಿ ಲವಣ ವ್ರತವನ್ನು ಆಚರಿಸಬೇಕು. ಪ್ರತಿ ತಿಂಗಳೂ ಈ ವಿಧಿಯಿಂದ ದೇವಿಯನ್ನು ಪೂಜಿಸಬೇಕು.

ಮಾಘದಲ್ಲಿ ಉಪ್ಪನ್ನು ಬಿಡಬೇಕು. ಇದರಂತೆ ಫಾಲ್ಗುಣದಲ್ಲಿ ಬೆಲ್ಲ, ಚೈತ್ರದಲ್ಲಿ ಎಳ್ಳೆಣ್ಣೆ, ವೈಶಾಖದಲ್ಲಿ ಜೇನುತುಪ್ಪ, ಆಷಾಢದಲ್ಲಿ ಜೀರಗೆ, ಶ್ರಾವಣದಲ್ಲಿ ಹಾಲು, ಭಾದ್ರಪದದಲ್ಲಿ ಮೊಸರು, ಅಶ್ವಿನದಲ್ಲಿ ತುಪ್ಪ, ಕಾರ್ತೀಕದಲ್ಲಿ ಜೇನುತುಪ್ಪ, ಮಾರ್ಗಶೀರ್ಷದಲ್ಲಿ ಕೋತಂಬರಿ, ಪುಷ್ಯದಲ್ಲಿ ಸಕ್ಕರೆಯನ್ನು ತಿನ್ನದೇ ಬಿಟ್ಟುಬಿಡಬೇಕು.

ಪ್ರತಿ ತಿಂಗಳ ಮಧ್ಯಾಹ್ನದಲ್ಲಿ ಈ ಪದಾರ್ಥಗಳನ್ನು ಪಾತ್ರೆಯಲ್ಲಿ ತುಂಬಿ ದಾನಕೊಡಬೇಕು. ಇದರ ಜೊತೆಗೆ ಲಡ್ಡು, ಪುಲಕಪೂರಿ, ಗಾರಿಗಿ, ಕಡಬು, ಗೋದಿರೊಟ್ಟಿ, ಮಂಡಗಿ, ಹಾಲು, ತರಕಾರಿ, ಮೊಸರನ್ನ, ಇಡ್ಲಿ, ಶಾವಿಗೇಣಿ ಇವುಗಳನ್ನೆಲ್ಲ ಮಾಘಾದಿ ಮಾಸಕ್ರಮದಿಂದ ಪಾತ್ರೆಯ ಮೇಲಿಟ್ಟು ದಾನಮಾಡಬೇಕು. ಮತ್ತು ಈ ಹನ್ನೆರಡು ತಿಂಗಳಲ್ಲಿಯೂ ಕುಮುದಾ, ಮಾಧವಿ, ಗೌರಿ, ರಂಭಾ, ಭದ್ರಾ, ಜಯಾ, ಶಿವಾ, ಉಮಾ, ರತಿ, ಸತಿ, ಮಂಗಲಾ, ರತಿಲಾಲಸಾ ಎಂಬ ದೇವಿಯ ರೂಪಗಳನ್ನು ಪ್ರೀತರಾಗಲಿ ಎಂದು ಪ್ರಾರ್ಥಿಸಬೇಕು. ವ್ರತದಿನಗಳಲ್ಲಿ ಪಂಚಗವ್ಯ ಮಾತ್ರ ತೆಗೆದುಕೊಂಡು ಉಪವಾಸಮಾಡಬೇಕು. ಅಶಕ್ತರಾದವರು ರಾತ್ರಿ ಭೋಜನಮಾಡಬಹುದು. ಮತ್ತೊಂದು ಮಾಘ ಮಾಸ ಬಂದಾಗ ಅಂಗುಷ್ಠ ಪ್ರಮಾಣದ ಪಂಚರತ್ನಗಳಿಂದ ಅಲಂಕೃತವಾದ ನಾಲ್ಕುತೋಳು ಹಾಗೂ ಚಂದ್ರಕಲೆಯಿಂದ ಶೋಭಿಸುವ ಅಂಗುಷ್ಠ ಪ್ರಮಾಣದ ಸ್ವರ್ಣಗೌರಿಯ ಪ್ರತಿಮೆಯನ್ನು ದಾನಮಾಡಬೇಕು. ಅಲಂಕೃತವಾದ ಎರಡು ಗೋವುಗಳನ್ನುದಾನ ಕೊಡಬೇಕು. ದೇವೀ ಭವಾನಿಯು ಪ್ರೀತಳಾಗಲೀ ಎಂದು ಸಾವಿರ ಜನರಿಗೆ ಊಟಕ್ಕೆ ಹಾಕಬೇಕು. ಈ ವಿಧಿಯಿಂದ ರಸಕಲ್ಯಾಣಿನೀ ವ್ರತವನ್ನುಮಾಡುವ ಹೆಂಗಸು, ಹುಡಿಗೆ ಇಲ್ಲವೆ ವಿಧವೆಯೂ ತನ್ನ ಪಾಪಗಳನ್ನೆಲ್ಲ ಕಳೆದುಕೊಂಡು ಅಗ್ನಿಷ್ಟೋಮ ಯಾಗಮಾಡಿದ ಪುಣ್ಯವನ್ನು ಪಡೆಯುವರು. ಸೌಭಾಗ್ಯ ಆರೋಗ್ಯಗಳನ್ನು ಪರ್ಯಾಪ್ತ ಪ್ರಮಾಣದಲ್ಲಿ ಪಡೆದು ಗೌರೀಲೋಕದಲ್ಲಿ ಮಾನ್ಯತೆಯನ್ನು ಹೊಂದುವರು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತನಾಲ್ಕನೆಯ ಅಧ್ಯಾಯ ಮುಗಿದುದು

—o—

## 'ಆರ್ದ್ರಾನಂದಕರೀ ವ್ರತ'

ಅಧ್ಯಾಯ - ೬೫

**ಈಶ್ವರ ಉವಾಚ**

**ತಥೈವಾನ್ಯಾಂ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।**
**ನಾಮ್ನಾ ಚ ಲೋಕೇ ವಿಖ್ಯಾತಾಮಾರ್ದ್ರಾನಂದ ಕರೀಮಿಮಾಂ॥**

**ಈಶ್ವರ** :- ದೇವಿ, ಪಾಪನಾಶಕವಾದ ಮತ್ತೊಂದು ತೃತೀಯಾ ವ್ರತವನ್ನು ಹೇಳುವೆನು. ಈ ಲೋಕದಲ್ಲಿ ಇದು ಆರ್ದ್ರಾನಂದಕರಿಯೆಂಬ ಹೆಸರಿನಿಂದ ಪ್ರಖ್ಯಾತವಾಗಿರುವದು. ಪೂರ್ವಾಷಾಢಾ, ಉತ್ತರಾಷಾಢಾ, ರೋಹಿಣಿ, ಮೃಗಶಿರಾ, ಹಸ್ತಾ, ಮೂಲಾ ಇವುಗಳಲ್ಲಿ ಯಾವುದಾದರೊಂದು ನಕ್ಷತ್ರದಿಂದ ಯುಕ್ತವಾದ ಒಂದು ಶುಕ್ಲಪಕ್ಷ ತೃತೀಯಾ ತಿಥಿಯಂದು ಪುಷ್ಪಗಂಧಧರಿಸಿದ ನೀರಿನಲ್ಲಿ ಸ್ನಾನ ಮಾಡಿ ಬಿಳಿಬಟ್ಟೆಯನ್ನು ಉಟ್ಟು ಗಂಧ ಲೇಪಿಸಿ ಕೊಂಡು ಶಿವಸತಿಯರನ್ನು ದಿವ್ಯಪೀಠದಲ್ಲಿ, ಕೂಡಿಸಿ ಬಿಳಿಹೂಗಳಿಂದ ಅರ್ಚಿಸಬೇಕು.

ಒಂದೊಂದು ದೇವಿಯ ನಾಮಗಳನ್ನು ಹೇಳಿ ನಮಃ ಎಂದು ಮುಂದೆ ಹೇಳಿದ ಕ್ರಮದಲ್ಲಿ ಹೂಗಳನ್ನು ಏರಿಸಬೇಕು. 'ವಾಸುದೇವಿಗೆ ನಮಃ' ಎಂದು ಪಾದಗಳನ್ನು, ಶಂಕರನಿಗೆ ನಮಃ ಎಂದು ಹಿಮ್ಮಡ, 'ಶೋಕನಾಶನಿ' ಎಂದು ಸತಿಯ ಮೊಣಕಾಲು, 'ಆನಂದ' ಎಂದು ಶಿವನ ಮೊಣಕಾಲು, 'ರಂಭಾಯೈ ಶಿವಾಯಚ' ಎಂದು ಇಬ್ಬರ ತೊಡೆ, 'ಆದಿತ್ಯೈ ಶೂಲಪಾಣಯೇಚನಮಃ' ಎಂದು ಮಧ್ಯದೇಶ, 'ಮಾಧವ್ಯೈ ಭವಾಯಚ' ಎಂದು ನಾಭಿ, 'ಆನಂದಕಾರಿಣ್ಯೈ ಇಂದುಧರಾಯಚ ನಮಃ' ಎಂದು ಹೃದಯ, 'ಉತ್ಕಂಠಿನ್ಯೈ ನೀಲಕಂಠಾಯಚನಮಃ' ಎಂದು ಇಬ್ಬರ ಕಂಠ, 'ಉತ್ಪಲಧಾರಿಣ್ಯೈ ರುದ್ರಾಯಚನಮಃ' ಎಂದು ಕೈ, 'ಪರಿರಂಭಿಣ್ಯೈ ನೃತ್ಯಶೀಲಾಯಚ' ಎಂದು ತೋಳು, ವಿಲಾಸಿನ್ಯೈ ವೃಷಭಧ್ವಜಾಯಚನಮಃ' ಎಂದು ಮುಖ, 'ಮಂದಾಹಾಸಿನ್ಯೈ ವಿಶ್ವತೋ ಮುಖಾಯಚ' ಎಂದು ನಗೆ, 'ಮದನವಾಸಿನ್ಯೈ ವಿಶ್ವವ್ಯಾಪಕಾಯನಮಃ' ಎಂದು ಕಣ್ಣು, 'ನೃತ್ಯಪ್ರಿಯಾಯೈ ತಾಂಡವೇಷ್ಟಾಯಚ' ಎಂದು ಹುಬ್ಬು, 'ಇಂದ್ರಾಣ್ಯೈ ಹವ್ಯವಾಹಾಯಚ ನಮಃ' ಇಬ್ಬರ ಹಣೆ, 'ಸ್ವಾಹಾಯೈ ವಿಭವಚ ನಮಃ' ಎಂದು ಆ ದಿವ್ಯ ದಂಪತಿಗಳ ಕಿರೀಟಗಳಿಗೆ ಪುಷ್ಪ ಏರಿಸಿ ಪೂಜಿಸಬೇಕು. ಅನಂತರ

**ವಿಶ್ವಕಾಯೌ, ವಿಶ್ವಮುಖೌ, ವಿಶ್ವಪಾದಕರೌ, ಶಿವೌ ।**
**ಪ್ರಸನ್ನ ವದನೌ ವಂದೇ ಪಾರ್ವತೀ ಪರಮೇಶ್ವರೌ ॥**

ಎಂದು ಭಕ್ತಿಯಿಂದ ವಿಶ್ವರೂಪಿಗಳಾದ, ವಿಶ್ವವ್ಯಾಪಿಗಳಾದ, ವಿಶ್ವದೇಹಿಗಳಾದ ಜನಕ್ಕೆಲ್ಲ ಕುಶಲವನ್ನುಂಟುಮಾಡುವ ಪ್ರಸನ್ನಮುಖದ ಪಾರ್ವತೀ ಪರಮೇಶ್ವರರಿಗೆ

ನಮಸ್ಕಾರ ಮಾಡಬೇಕು. ಹೀಗೆ ಶಾಸ್ತ್ರೋಕ್ತವಾಗಿ ಆ ಶಿವದಂಪತಿಗಳನ್ನು ಪೂಜೆ ಮಾಡಿ ಬಗೆಬಗೆಯ ಬಣ್ಣದ ಪುಡಿಗಳಿಂದ ಕಮಲಗಳನ್ನು ಕನ್ನೈದಿಲೆಗಳನ್ನು ಬರೆಯಬೇಕು. ಶಕ್ತ್ಯಾನುಸಾರ ತುಪ್ಪ ತುಂಬಿದ ನಾಲ್ಕು ಪಾತ್ರೆಗಳನ್ನು ಅನ್ನ ನೀರು ಸಹಿತವಾಗಿ ದಾನ ಮಾಡಬೇಕು.

ಮಾರ್ಗಶೀರ್ಷ ಮೊದಲಾದ ಹನ್ನೆರಡು ತಿಂಗಳುಗಳಲ್ಲಿ ಕ್ರಮವಾಗಿ ಗಂಧೋದಕ, ಪುಷ್ಪೋದಕ, ಶ್ರೀಗಂಧ, ಕೇಸರೀತೀರ್ಥ, ಹಸಿಹಾಲಿನ ಮೊಸರು, ಹಾಲು, ಗೋಶೃಂಗೋದಕ, ಹಿಟ್ಟುಕಲಿಸಿದನೀರು ಕೋಷ್ಟಚೂರ್ಣದನೀರು ಲಾಮಂಚೋದಕ ಗೋಧಿಹಿಟ್ಟಿನನೀರು, ಎಳ್ಳುನೀರು ಇವುಗಳನ್ನು ಪ್ರಾಶನ ಮಾಡಬೇಕು. ಮತ್ತು.

**ಗೌರೀ ಮೇ ಪ್ರೀಯತಾಂ ನಿತ್ಯಂ ಅಘನಾಶಾಯ ಮಂಗಲಾ ।**
**ಸೌಭಾಗ್ಯಾಯಾಸ್ತು ಲಲಿತಾ ಭವಾನೀ ಸರ್ವಸಿದ್ಧಯೇ ॥**

ಎಂದು 'ಮಂಗಲರೂಪಿಣಿಯಾದ ಮಹಾದೇವಿಯು ಪ್ರೀತಳಾಗಿ ನಮ್ಮ ಪಾಪವನ್ನು ಪರಿಹರಿಸಲಿ. ಆ ಲಲಿತಾ ದೇವಿಯು ಸೌಭಾಗ್ಯವನ್ನು ನೀಡಲಿ. ಭವಾನಿಯು ಸರ್ವಸಿದ್ಧಿಗಳನ್ನು ಕೊಡಲಿ' ಎಂದು ದೇವಿಯನ್ನು ಪ್ರಾರ್ಥಿಸಬೇಕು. ವರುಷದ ಕೊನೆಯಲ್ಲಿ ಉಪ್ಪು ಬೆಲ್ಲ, ಜೇನುತುಪ್ಪ, ಚಂದನ, ಪಂಚೆ, ಬಂಗಾರದ ಕಮಲ, ಕಬ್ಬು, ಹಣ್ಣು, ಸಹಿತ ಶಿವ ಸತಿಯರ ಬಂಗಾರದ ಪ್ರತಿಮೆಯನ್ನು ದಾನ ಮಾಡಬೇಕು. ದಿಂಬು ಗಾದೆ ಸಹಿತ ಬ್ರಾಹ್ಮಣರಿಗೆ ಕೊಟ್ಟು 'ಗೌರಿ ಮೇ ಪ್ರೀಯತಾಂ' ಎಂದು ಗೌರಿಯು ಪ್ರೀತಳಾಗಲಿ ಎಂದು ಪ್ರಾರ್ಥಿಸಬೇಕು.

ಈ ಸನಾತನವಾದ ತೃತೀಯಾವ್ರತಕ್ಕೆ 'ಆರ್ದ್ರಾನಂದ ಕರೀ' ಎಂದು ಪ್ರಖ್ಯಾತಿ ಇದೆ. ಈ ಶ್ರೇಷ್ಠವಾದ ವ್ರತವನ್ನು ಉಪವಾಸದಿಂದ ನೆರವೇರಿಸಿದ ಗಂಡಸು, ಹೆಂಗಸು, ಹುಡುಗಿ, ವಿಧವೆ ಯಾರೇ ಆಗಲಿ ಈ ಲೋಕದಲ್ಲಿ ಧನ, ಧಾನ್ಯ, ಆಯುಷ್ಯ, ಆರೋಗ್ಯ, ಸೌಭಾಗ್ಯ ಪಡೆದು ಅನುಭವಿಸಿ, ಬಹು ಕಾಲ ಇಲ್ಲಿ ಭೋಗ ಭಾಗ್ಯಗಳಿಂದ, ಸೌಖ್ಯಸೌಭಾಗ್ಯ, ಭಾಜನರಾಗಿ ಮುಂದೆ ಪಾರ್ವತೀ ಲೋಕವನ್ನು ಹೊಂದುವರು. ಇದನ್ನು ಹೇಳುವವರೂ ಕೇಳುವವರೂ ಮುಂದೆ ಇಂದ್ರಲೋಕವನ್ನು ಹೊಂದಿ ಮೂರು ಯುಗಗಳ ಕಾಲ ಗಂಧರ್ವ ಪೂಜಿತರಾಗುವರು. ಸಕಲ ದುಃಖ ಕಳೆದು ಆನಂದದಾಯಕವಾದ ಈ ತೃತೀಯಾ ವ್ರತವನ್ನು ವಿಧವೆಯಾಗಲಿ, ಸುಮಂಗಲೆಯಾಗಲಿ ನಡೆಸಿದರೆ ಮನೆಯಲ್ಲಿಯೇ ಅವಳು ಮೂರು ಬಗೆಯ ಆನಂದವನ್ನು ಅನುಭೋಗಿಸಿ ಜನ್ಮಾಂತರದಲ್ಲಿ ತನ್ನ ಪತಿ ಹಾಗೂ ಪ್ರಿಯ ಪರಿವಾರದೊಂದಿಗೆ ಗೌರಿಯ ಪ್ರಿಯ ಸಾನಿಧ್ಯವನ್ನು ಹೊಂದಿ ಸಂತೋಷದಿಂದಿರುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತೈದನೇಯ ಅಧ್ಯಾಯ ಮುಗಿದುದು*

—o—

## ಅಕ್ಷಯ ತೃತೀಯಾ ವ್ರತ

ಅಧ್ಯಾಯ - ೬೬

**ಈಶ್ವರ ಉವಾಚ**

**ಅಥಾನ್ಯಾಮಪಿ ವಕ್ಷ್ಯಾಮಿ ತೃತೀಯಾಂ ಸರ್ವಕಾಮದಾಂ ।**
**ಯಸ್ಯಾಂದತ್ತಂ ಹುತಂಜಪ್ತಂ ಸರ್ವಂಭವತಿ ಚಾಕ್ಷಯಃ ॥**

ಎಲ್ಲರ ಮನೋಭೀಷ್ಟಗಳನ್ನು ಪೂರೈಸುವ ಇನ್ನೂ ಒಂದು ತದಿಗೆವ್ರತ ಹೇಳುತ್ತೇನೆ. ದಕ್ಷಿಣೆಯನ್ನುಕೊಟ್ಟು ನೀಡಿದ ದಾನ, ಮಾಡಿದ ಜಪ, ಇಟ್ಟ ಆಹುತಿ, ಎಲ್ಲವೂ ಅಕ್ಷಯವಾಗುವದು. ವೈಶಾಖ ಶುಕ್ಲ, ತೃತೀಯಾ ತಿಥಿಯು ಅಕ್ಷಯ ಫಲದಾಯಕ. ಅದರೊಡನೆ ಕೃತ್ತಿಕಾನಕ್ಷತ್ರವೂ ಸೇರಿದರೆ ಇನ್ನೂ ವಿಶೇಷ. ಅಂದು ವ್ರತಾಚರಣೆಯಿಂದ ಪುಣ್ಯ ಅಕ್ಷಯ, ಸಂತತಿ ಅಕ್ಷಯ, ಸೌಭಾಗ್ಯ ಅಕ್ಷಯ.

**"ಅಕ್ಷತೈಸ್ತುನರಾಃ ಸ್ನಾನಾತ್ವಿಷ್ಣೋರ್ದತ್ವಾ ತಥಾಕ್ಷತಾನ್ ।**
**ಅಕ್ಷತೈಃ ಪೂಜ್ಯತೇ ವಿಷ್ಣುಃ ತೇನ ಸಾಪ್ಯಕ್ಷಯಾ ಸುತಾ ।**

ಅಂದು ಜನರು ಅಕ್ಷತೆಗಳನ್ನು ತಲೆಯ ಮೇಲಿರಿಸಿಕೊಂಡು ನೀರಿನಲ್ಲಿ ಹಾಕಿ ಸ್ನಾನಮಾಡಬೇಕು. ಅಕ್ಷತೆಗಳನ್ನು ಪರಮಾತ್ಮನಿಗೂ ಏರಿಸಬೇಕು. ಅಕ್ಷತೆಗಳಿಂದಲೇ ವಿಷ್ಣುವಿನ ಪೂಜೆಮಾಡಬೇಕು. ಇದರಿಂದ ಅಕ್ಷಯಫಲ ದೊರಕುವದು. ಆದುದರಿಂದಲೇ ಇದಕ್ಕೆ ಅಕ್ಷಯತೃತೀಯಾ ಎಂದು ಹೆಸರು ಬಂದಿದೆ. ಅಂದು ಬ್ರಾಹ್ಮಣರಿಗೆ ಅಕ್ಷತೆಗಳನ್ನುಕೊಟ್ಟು ಹಸಿಬಸಿ ಧಾನ್ಯಗಳನ್ನು ದಾನವಿತ್ತು ಯಥಾಶಕ್ತಿ ದಕ್ಷಿಣಾ-ದಾನಪೂರ್ವಕವಾಗಿ ಬ್ರಾಹ್ಮಣ ಭೋಜನಮಾಡಿಸಿದರೆ ಅಕ್ಷಯ ಫಲವು ಪ್ರಾಪ್ತವಾಗುತ್ತದೆ. ಈ ಒಂದು ಅಕ್ಷಯ ತೃತೀಯಾವ್ರತವನ್ನು ವಿಧಿ ಪೂರ್ವಕವಾಗಿ ಮಾಡಿದರೆ ಎಲ್ಲ ತೃತೀಯಾವ್ರತಗಳನ್ನು ಮಾಡಿದ ಫಲ ಬರುವದು. ತೃತೀಯಾ ದಿನದಂದು ಉಪವಾಸಮಾಡಿ ವಿಷ್ಣುಪೂಜೆಮಾಡಿದರೆ ರಾಜಸೂಯಯಾಗಮಾಡಿದ ಪುಣ್ಯಫಲವು ಪ್ರಾಪ್ತವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತಾರನೆಯ ಅಧ್ಯಾಯ ಮುಗಿದುದು*

—o—

## ಸಾರಸ್ವತ ವ್ರತ

**ಅಧ್ಯಾಯ - ೬೭**

**ಮನುರುವಾಚ-**

**ಮಧುರಾ ಭಾರತೀ ಕೇನವ್ರತೇನ ಮಧುಸೂದನ ।**
**ತಥೈವ ಜನಸೌಭಾಗ್ಯಮತಿವಿದ್ಯಾಸು ಕೌಶಲಂ ॥**

ಓ ಮಧುಸೂದನಾ, ಇಂಪಾದ ಮಾತು, ಸೌಭಾಗ್ಯ, ಮತಿ, ವಿದ್ಯೆ, ಅತಿಶಯವಾದ ಕೌಶಲ್ಯ, ದಂಪತಿಗಳಲ್ಲಿ ಅಸ್ಖಲಿತವಾದ ಪ್ರೇಮ, ಬಂಧುಜನರ ನಿರತಿಶಯ ವಿಶ್ವಾಸ, ದೀರ್ಘಾಯುಸ್ಸು ಇವೆಲ್ಲ ದೊರಕಬೇಕಾದರೆ ಯಾವ ವ್ರತವನ್ನು ಮಾಡಬೇಕು ? ನನಗೆ ತಿಳಿಸು.

**ಮತ್ಸ್ಯ** :- ಮಹಾರಾಜ, ನಿನ್ನ ಪ್ರಶ್ನೆ ಯೋಗ್ಯವಾಗಿದೆ. ಸರಸ್ವತೀದೇವಿಯ ಪ್ರೀತಿಯನ್ನುಂಟುಮಾಡುವ ಸಾರಸ್ವತವ್ರತವನ್ನು ಹೇಳುವೆನು ಕೇಳು. ಒಳ್ಳೆ ನಕ್ಷತ್ರ, ಗ್ರಹ, ತಿಥಿ, ಅನುಕೂಲವಿದ್ದ ಭಾನುವಾರದ ದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ಪಾಯಸ ಭೋಜನ ಮಾಡಿಸಿ ಅವರ ಅನುಗ್ರಹ ಪಡೆದು ಈ ವ್ರತವನ್ನು ಪ್ರಾರಂಭಿಸಬೇಕು. ಪುರೋಹಿತರಿಗೆ ಶಕ್ತ್ಯಾನುಸಾರ ಬಂಗಾರ ಬಿಳಿ ಬಟ್ಟೆಗಳನ್ನು ಕೊಟ್ಟು ಭಕ್ತಿಯಿಂದ ಗಾಯತ್ರಿದೇವಿಯನ್ನು ಪೂಜಿಸಬೇಕು. ಗಂಧ, ಹೂವು, ಹಾರಗಳನ್ನು ಅವಳಿಗೆ ಸಮರ್ಪಿಸಿ ಭಕ್ತಿಯಿಂದ ಕೆಳಗಿನ ಮಂತ್ರದಿಂದ ಪ್ರಾರ್ಥನೆ ಮಾಡಬೇಕು.

**ಯಥಾನದೇವಿ ಭಗವಾನ್ ಬ್ರಹ್ಮಲೋಕೇ ಪಿತಾಮಹಃ ।**
**ತ್ವಾಂ ಪರಿತ್ಯಾಜ್ಯ ಸಂತಿಷ್ಠೇತ್ತಥಾ ಭವ ವರಪ್ರದಾ ॥**

ಓ ದೇವಿ, ಬ್ರಹ್ಮದೇವನು ನಿನ್ನನ್ನು ಬಿಟ್ಟು ತನ್ನ ಬ್ರಹ್ಮಲೋಕದಲ್ಲಿರಲಾರನು. ಹಾಗೆಯೇ ನೀನೂ ನಿನ್ನ ಭಕ್ತನಾದ ನನ್ನನ್ನು ಕೈಬಿಡದೆ ವರವನ್ನು ಕರುಣಿಸು.

**ವೇದಾಃ ಶಾಸ್ತ್ರಾಣಿ ಸರ್ವಾಣಿ ಗೀತನೃತ್ಯಾದಿಕಂ ಚ ಯತ್ ।**
**ನ ವಿಹೀನಂ ತ್ವಯಾದೇವಿ ತಥಾ ಮೇಸಂತುಸಿದ್ಧಯಃ ॥**

ವೇದಗಳು, ಎಲ್ಲ ಬಗೆಯ ಶಾಸ್ತ್ರಗಳು ಮತ್ತು ಗೀತನೃತ್ಯಾದಿ ಕಲೆಗಳು ನಿನ್ನನ್ನುಳಿದು ಜೀವಿಸಲಾರವು. ಓ ದೇವಿ, ಹೀಗೆಯೇ ನನ್ನ ಮನೋರಥಸಿದ್ಧಿಗಳು ನನ್ನನ್ನು ಬಿಡದಿರಲಿ.

**ಲಕ್ಷ್ಮೀರ್ಮೇಧಾ ಧರಾಪುಷ್ಟಿರ್ಗೌರೀತುಷ್ಟಿಃ ಪ್ರಭಾಮತಿಃ ।**
**ಏತಾಂಭಿಃ ಪಾಹಿ ಅಷ್ಟಾಭಿಸ್ತನುಭಿರ್ಮಾಂ ಸರಸ್ವತಿ ॥**

ಎಲೌ ಸರಸ್ವತಿ, ಲಕ್ಷ್ಮೀ, ಮೇಧೆ, ಧರೆ, ಪುಷ್ಟಿ, ಗೌರಿ, ತುಷ್ಟಿ, ಪ್ರಭೆ, ಮತಿ ಈ ಎಂಟೂ ನಿನ್ನ ಶರೀರಗಳು. ಇವುಗಳ ಮೂಲಕ ನನ್ನನ್ನು ಸಲಹು.

ತಂಬೂರಿ, ಜಪಮಾಲೆ, ಕಮಂಡಲು ಪುಸ್ತಕಗಳನ್ನು ಧರಿಸಿದ ಗಾಯತ್ರಿದೇವಿಯನ್ನು ಬಿಳಿ ಹೂಗಳಿಂದಲೂ, ಅಕ್ಷತೆಗಳಿಂದಲೂ, ಭಕ್ತಿಯುಕ್ತನಾಗಿ ಪೂಜಿಸಬೇಕು. ವ್ರತಮಾಡುವವರು ಊಟಮಾಡುವಾಗ ಮಾತಾಡಬಾರದು. ಪ್ರತಿಯೊಂದು ಪಂಚಮೀ ತಿಥಿಯಂದು ಪಾತ್ರೆ ತುಂಬ ಅಕ್ಕಿ, ಮತ್ತೊಂದು ಪಾತ್ರೆ ತುಂಬ ತುಪ್ಪ, ಇನ್ನೊಂದು ಪಾತ್ರೆಯಲ್ಲಿ ಹಾಲು ತುಂಬಿ ಯಥಾಶಕ್ತಿ ಚಿನ್ನವನ್ನಿರಿಸಿ 'ಗಾಯತ್ರೀಪ್ರೀಯತಾಂ' ಗಾಯತ್ರಿದೇವಿಯು ಪ್ರೀತಳಾಗಲಿ ಎಂದು ದಾನಮಾಡಬೇಕು. ಈ ವ್ರತಾನುಷ್ಠಾನಕಾಲದಲ್ಲಿ ಈ ವ್ರತವನ್ನು ಆಚರಿಸಿದ ೧೩ ತಿಂಗಳಕಾಲ ಒಪ್ಪತ್ತುಊಟ ಮಾಡಬೇಕು. ವ್ರತವು ಸಮಾಪ್ತವಾದ ಬಳಿಕ, ಬಿಳಿಅಕ್ಕಿಯ ಅನ್ನ ಊಟಮಾಡಬೇಕು. ಇದಕ್ಕೂ ಮೊದಲು ಬ್ರಾಹ್ಮಣರಿಗೆ ಜೋಡಿವಸ್ತ್ರ ಮತ್ತು ದೇವಿಗೆ ಹೊದಿಸಿದ ಬಟ್ಟೆ, ಘಂಟೆ, ಚಂದನ, ಶುಭವಸ್ತ್ರ, ಮಂಟಪದ ಕಲಶ ಮುಂತಾದವುಗಳನ್ನೆಲ್ಲ ಹಸುವಿನೊಂದಿಗೆ ದಾನಮಾಡಬೇಕು. ವ್ರತವನ್ನು ಮಾಡಿಸಿದ ಗುರುಗಳನ್ನು ಕೂಡ ಜಿಪುಣತನಮಾಡದೇ ಭಕ್ತಿಯಿಂದ ಗೌರವಿಸಬೇಕು. ಈ ರೀತಿಯಾಗಿ ಸಾರಸ್ವತವ್ರತವನ್ನುಮಾಡುವವನು ವಿದ್ಯಾವಂತನೂ, ಶ್ರೀಮಂತನೂ ಆಗುವನು. ಅವನ ಮಾತಿನಲ್ಲಿ ಮಾಧುರ್ಯ, ಚಾತುರ್ಯ, ಎರಡೂ ಒಂದುಗೂಡುವವು. ಸ್ತ್ರೀಯಾಗಲೀ ಪುರುಷನಾಗಲೀ ಈ ವ್ರತವನ್ನು ಆಚರಿಸಿದರೆ ಸರಸ್ವತಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಮೂವತ್ತುಸಾವಿರಕಲ್ಪ ಬ್ರಹ್ಮಲೋಕದಲ್ಲಿ ನೆಲೆಸುವಂತಾಗುವರು. ಇದನ್ನು ಓದಿ ಕೇಳಿದವರಿಗೆ ಅಷ್ಟೇ ಕಾಲ ಪರ್ಯಂತ ವಿದ್ಯಾಧರನಗರದಲ್ಲಿ ವಾಸ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿದುದು*

—o—

## ಗ್ರಹಣಕಾಲದಲ್ಲಿ ಮಾಡಬೇಕಾದ ಸ್ನಾನ, ದಾನಗಳು ಅಧ್ಯಾಯ - ೬೮

**ಮನುರುವಾಚ**

**ಚಂದ್ರಾದಿತ್ಯೋಪರಾಗೇ ತು ಯತ್ಸ್ನಾನಮಭಿದೀಯತೇ ।**
**ತದಹಂ ಶ್ರೋತುಮಿಚ್ಛಾಮಿ ದ್ರವ್ಯಮಂತ್ರ ವಿಧಾನತಃ ॥**

ಚಂದ್ರಗ್ರಹಣ, ಸೂರ್ಯಗ್ರಹಣ, ಕಾಲದಲ್ಲಿ ಯಾವ ವ್ರತದಿಂದ ಹೇಗೆ ಸ್ನಾನ ಮಾಡಬೇಕು? ಆ ಗ್ರಹಣಸ್ನಾನದ ವಿಧಿವಿಧಾನಗಳನ್ನು ತಿಳಿಸಬೇಕು, ಕೇಳಬೇಕೆಂದು ಕುತೂಹಲ.

**ಮತ್ಸ್ಯ** :- ಯಾವ ಜನ್ಮರಾಶಿಯಲ್ಲಿ ಸೂರ್ಯಚಂದ್ರರ ಗ್ರಹಣವು ಒದಗಿ ಬಂದಿರುವದೋ ಆ ರಾಶಿಯವರು ಮಂತ್ರೌಷಧ ವಿಧಾನಗಳಿಂದ ಸ್ನಾನಮಾಡಬೇಕು. ಅದರ ಕ್ರಮವನ್ನು ಹೇಳುತ್ತೇನೆ ಕೇಳು. ಗ್ರಹಣಹಿಡಿಯುವ ಮೊದಲು ಔಷಧಿ, ವನಸ್ಪತಿ ಮುಂತಾದ ಸಾಮಗ್ರಿಗಳನ್ನು ಸಿದ್ಧಮಾಡಿಟ್ಟು ಕೊಳ್ಳಬೇಕು. ಸೋರದಿರುವ ನಾಲ್ಕುಕಲಶಗಳನ್ನು ಚತುಃಸಮುದ್ರಗಳು ಎಂದು ಭಾವಿಸಿ ಸ್ಥಾಪನೆಮಾಡಬೇಕು. ಆನೆ, ಕುದುರೆ, ಓಡಾಡುವ ಬೀದಿ, ಹಾವಿನ ಹುತ್ತ, ನದೀತಟಾಕ, ಸರೋವರ, ಹಸುತುಳಿದ ನೆಲ, ರಾಜದ್ವಾರ ಮುಂತಾದ ಪ್ರದೇಶಗಳಿಂದ ಮಣ್ಣು ತಂದು ಆ ಕಲಶಗಳಲ್ಲಿ ಹಾಕಬೇಕು, ಪಂಚಗವ್ಯ, ಖರೆಮುತ್ತು, ಗೋರೋಚನ, ಪದ್ಮ, ಶಂಖ, ಪಂಚರತ್ನ, ಸ್ಫಟಿಕ, ಗಂಧ ,ತೀರ್ಥ, ಸಾಸಿವೆ, ಆನೆಯದಂತ, ಕನ್ನೈದಿಲೆ, ಬಾಳದಬೇರು, ಗುಗ್ಗುಳ ಮುಂತಾದ ಪದಾರ್ಥ ಗಳನ್ನೆಲ್ಲ ಕಲಶದಲ್ಲಿ ಇಟ್ಟು ಎಲ್ಲ ಪುಣ್ಯ ತೀರ್ಥಗಳೂ ಈ ಕಲಶದಲ್ಲಿ ಒಂದು ಗೂಡಿ ಬಂದು ನೆಲಸಲಿ ಎಂದು ಕೆಳಗಿನ ಮಂತ್ರದಿಂದ ಆವಾಹನೆ ಮಾಡಬೇಕು.

**ಸರ್ವೇಸಮುದ್ರಾಃ ಸರಿತಸ್ತೀರ್ಥಾನಿಜಲದಾನದಾಃ**
**ಆಯಾಂತು ಯಜಮಾನಸ್ಯ ದುರಿತಕ್ಷಯ ಕಾರಕಾಃ ॥**

''ಯಜಮಾನನ ಪಾಪಗಳನ್ನೆಲ್ಲ ಪರಿಹರಿಸಬಲ್ಲ ಎಲ್ಲ ನದನದೀತೀರ್ಥ ಸಮುದ್ರಗಳು ಈ ಕಲಶದಲ್ಲಿ ಸನ್ನಿಹಿತವಾಗಲಿ. ದೇವತೆಗಳ ಒಡೆಯನಾದ ಸಾಸಿರಗಣ್ಣಿನ ಸುರೇಂದ್ರನು ಗ್ರಹಗಳ ಪೀಡೆಯನ್ನು ಪರಿಹರಿಸಲಿ. ದೇವತೆಗಳ ಮುಖ್ಯ ಸ್ವರೂಪನಾದ ಅಗ್ನಿದೇವನು ಚಂದ್ರಗ್ರಹಣದಿಂದ ನಮಗೆ ಒದಗಬಹುದಾದ ಅರಿಷ್ಟವನ್ನು ಕಳೆಯಲಿ. ಪ್ರಾಣಿಗಳು ಮಾಡುವ ಕರ್ಮಗಳಿಗೆಲ್ಲ ಸಾಕ್ಷೀಭೂತನಾದ ಯಮಧರ್ಮನೂ, ನಿರತಿಯೂ, ಜಲಾಧಿಪತಿ ವರುಣನೂ. ಪ್ರಾಣಿಗಳ ಪ್ರಾಣ ರೂಪನಾದ ವಾಯುದೇವನೂ, ಕುಬೇರನೂ, ಚಂದ್ರಕಲೆಯನ್ನು ಮುಡಿಯಲ್ಲಿ ಮುಡಿದ ಮಹಾದೇವನೂ. ಹರಿಹರ ಬ್ರಹ್ಮಾದಿ ದೇವತೆಗಳೂ, ಸೂರ್ಯದೇವನೂ ಗ್ರಹಣ ಮೂಲಕವಾದ ನನ್ನ ಸರ್ವಾರಿಷ್ಟಗಳನ್ನು ಶಾಂತಮಾಡಲಿ .''

ಹೀಗೆಯೆ ಎಲ್ಲ ದೇವತೆಗಳನ್ನು ಆವಾಹನಮಾಡಿ ವೇದಮಂತ್ರಗಳನ್ನು ಜಪಿಸುತ್ತ, ಆ ನಾಲ್ಕು ಕೊಡಗಳಲ್ಲಿಯ ನೀರಿನಿಂದ ಸ್ನಾನಮಾಡಬೇಕು. ಬ್ರಾಹ್ಮಣರಿಗೆ ಗಂಧಪುಷ್ಪಗಳನ್ನುಕೊಟ್ಟು ವಸ್ತ್ರದಾನ, ಗೋದಾನಗಳಿಂದ ಪೂಜಿಸಬೇಕು. ಮತ್ತು ತಮ್ಮ ಮನೆಯ ದೇವರನ್ನು ಪೂಜಿಸಬೇಕು. ಬ್ರಾಹ್ಮಣರು ಒಂದು ವಸ್ತ್ರದ ಪಟ್ಟಿಯಲ್ಲಿ ಅಥವಾ ಕಮಲದ ಎಲೆಯ ಮೇಲೆ ಮೇಲೆ ಹೇಳಿದ ದೇವತಾ ಆವಾಹನದ ಮಂತ್ರ ಬರೆದು ಪಂಚರತ್ನ ಸಹಿತವಾದ ಒಂದು ಬುಟ್ಟಿಯನ್ನು ಯಜಮಾನನ ತಲೆಯಮೇಲೆ ಇಡಬೇಕು. ಗ್ರಹಣಕಾಲ ಮುಗಿಯುವವರೆಗೂ ಅದನ್ನು ತಲೆಯ ಮೇಲೆ ಇಟ್ಟುಕೊಂಡು ದೇವರ ಧ್ಯಾನಮಾಡುತ್ತಾ ಇರಬೇಕು. ಗ್ರಹಣಬಿಟ್ಟ ಬಳಿಕ ಪೂರ್ವಕ್ಕೆ ಮುಖಮಾಡಿ ಮತ್ತೊಮ್ಮೆ ಸ್ನಾನಮಾಡಿ ತಮ್ಮ ಇಷ್ಟದೇವರನ್ನು ಪೂಜೆಮಾಡಬೇಕು. ಗೋದಾನವನ್ನು ಮಾಡಿ ಬ್ರಾಹ್ಮಣರಿಗೆ ಆ ಮಂತ್ರಗಳನ್ನು ಬರೆದಿರುವ ಬಟ್ಟೆಯಪಟ್ಟೆ ಹಾಗೂ ಬುಟ್ಟಿ, ಪಂಚರತ್ನಗಳನ್ನು ಕೂಡ ಅವರಿಗೆ ದಾನಕೊಡಬೇಕು. ಈ ನಿಯಮದಿಂದ ಗ್ರಹಣಸ್ನಾನ ಮಾಡುವವರಿಗೆ ಗ್ರಹಣದಿಂದ ಆಗುವ ಅನಿಷ್ಟಗಳು ಸಂಭವಿಸುವದಿಲ್ಲ. ಸೂರ್ಯಗ್ರಹಣದಲ್ಲಿ ಸೂರ್ಯ ದೇವಾತ್ಮಕವಾದ ಮಂತ್ರಗಳನ್ನು ಸ್ತೋತ್ರಗಳನ್ನು ಹೇಳಬೇಕು. ಯೋಗ್ಯತೆ ಇದ್ದವರು ಸೂರ್ಯ ಚಂದ್ರ ಗ್ರಹಣಕಾಲದಲ್ಲಿ ಹಸು, ರತ್ನಗಳನ್ನು ದಾನಕೊಡಬೇಕು. ಅದರಿಂದ ಮುಂದೆ ಅವರಿಗೆ ಅಧಿಕಾರ ಐಶ್ವರ್ಯವು ಪ್ರಾಪ್ತವಾಗುವದು. ಇದನ್ನು ಹೇಳಿ, ಕೇಳಿದವರ ಪಾಪ ಪರಿಹಾರವಾಗಿ ಮುಂದೆ ಇಂದ್ರ ಲೋಕದಲ್ಲಿಯೂ ಮಾನ ಮನ್ನಣೆ ಹೊಂದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತೆಂಟನೆಯ ಅಧ್ಯಾಯವು ಮುಗಿದುದು*

—o—

## ಸಪ್ತಮೀ ಸ್ನಪನವ್ರತ

ಅಧ್ಯಾಯ - ೬೮

**ನಾರದ ಉವಾಚ**

**ಕಿಮುದ್ವೇಗಾದ್ಭುತೇ ಕೃತ್ಯಮಲಕ್ಷ್ಮ್ಯಾಃ ಕೇನ ಹನ್ಯತೇ ।**
**ಮೃತವತ್ಸಾಭಿಷೇಕಾದಿ ಕಾರ್ಯೇಷು ಚ ಕಿಮಿಷ್ಯತೇ ॥**

**ನಾರದ** :- ಗಾಬರಿ, ಆಶ್ಚರ್ಯ ಮುಂತಾದವುಗಳಿಂದ ಮನೋವಿಕಾರವಾದಾಗ ಮಾಡಬೇಕಾದುದೇನು ? ಅಮಂಗಲವು ಪರಿಹಾರವಾಗುವದೆಂತು ? ಯಾವ ಸ್ತ್ರೀಯ ಮಕ್ಕಳು ಶೈಶವದಲ್ಲೇ ಸಾಯುವವೋ ಅವಳಿಗೂ, ಅವಳ ಮಗುವಿಗೂ, ಮಾಡಬೇಕಾದ ಪ್ರೋಕ್ಷಣಾದಿ ಕಾರ್ಯಗಳು ಯಾವವು ?

**ಮಹಾದೇವ** :- ತಪೋಧನನೇ, ಪೂರ್ವಜನ್ಮದಲ್ಲಿಮಾಡಿದ ಪಾಪಗಳು ರೋಗ ಬಡತನ, ಬಂಧುಜನರಮರಣ ಮುಂತಾದ ರೂಪದಿಂದ ಈ ಜನ್ಮದಲ್ಲಿ ಫಲಕೊಡುತ್ತವೆ. ಈ ದೋಷಪರಿಹಾರಕ್ಕಾಗಿ **ಸಪ್ತಮೀಸ್ನಪನ** ಎಂಬ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಹಾಲುಕುಡಿಯುವ ಶಿಶುಗಳು, ಹರೆಯದ ಹುಡುಗರು ಅಕಾಲದಲ್ಲಿ ಸಾವಿಗೆ ಈಡಾಗುವದನ್ನು ಅಲ್ಲಲ್ಲಿ ಕಾಣುತ್ತೇವೆ. ಹಾಗೂ ಬೇನೆ ಬಂದು ಎಷ್ಟೋ ಜನರು ವಯಸ್ಸಾಗದೇ ಮರಣವನ್ನಪ್ಪುವ ಪ್ರಸಂಗ ಬರುವದುಂಟು. ಎಷ್ಟೋ ಜನರಿಗೆ ತಲೆ ಕೆಡುವದು. ಗಾಳಿಹಾಯುವದು. ಚಿತ್ತ ವಿಕಾರ, ಮತಿಭ್ರಮಣೆ ಮುಂತಾದ ಅನೇಕ ರೋಗಗಳು ಬರುವವು. ಇವೆಲ್ಲ ಅನಿಷ್ಟ ಪರಿಹಾರಕ್ಕಾಗಿ ಈ **ಸಪ್ತಮಿ ಸ್ನಪನ** ಎಂಬ ವ್ರತವು ಭಗವಂತನಿಂದ ಕ್ಲಪ್ತ ವಾಗಿರುವದು. ಈ ವ್ರತವನ್ನು ವರಾಹಕಲ್ಪದಲ್ಲಿ ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೈದನೆ ಕೃತಯುಗ ಬಂದಾಗ ಕೃತವೀರ್ಯ ಎಂಬ ರಾಜನ ಪ್ರಶ್ನೆಗೆ ಉತ್ತರ ರೂಪವಾಗಿ ಸೂರ್ಯದೇವನು ಈ ಸಪ್ತಮೀಸ್ನಪನ ಎಂಬ ವ್ರತದ ವಿಧಿಯನ್ನು ಹೇಳುತ್ತಾನೆ. ಕೃತವೀರ್ಯನಿಗೆ ಸಾವಿರ ತೋಳುಗಳಿಂದ ಒಡಗೂಡಿದ ಸರ್ವಲಕ್ಷಣ ಸಂಪನ್ನನಾದ ಕಾರ್ತವೀರ್ಯಾರ್ಜುನನೆಂಬ ಒಬ್ಬ ಮಗನಿದ್ದನು. ಅವನ ಆಯುರಾರೋಗ್ಯಗಳಿಗಾಗಿ ಕೃತವೀರ್ಯರಾಜನು ಸೂರ್ಯನನ್ನು ವೇದಮಂತ್ರ ಗಳಿಂದ ಹಾಗೂ ಉಪವಾಸಾದಿ ವ್ರತಗಳಿಂದ ಆರಾಧನೆಗೈಯಲು ಸಂತುಷ್ಟನಾದ ಸೂರ್ಯದೇವನು ಆಯುಷ್ಯ ಐಶ್ವರ್ಯಪ್ರದವಾದ ಈ ವ್ರತವನ್ನು ಹೇಳಿದನು.

**ಸೂರ್ಯ** :- ಕೃತವೀರ್ಯರಾಜನೆ, ವ್ರತೋಪವಾಸಗಳಿಂದ ಬಹಳ ತೊಳಲಿ ಬಳಲಿರುವೆ. ಇನ್ನು ನಿನ್ನ ಶ್ರಮ ಸಾಕು. **ಸಪ್ತಮೀ ಸ್ನಪನ** ಎಂಬ ವ್ರತವನ್ನು ನೀನು ಆಚರಿಸು. ಅದರಿಂದ ನಿನ್ನ ಮಗನು ಚಿರಂಜೀವಿಯಾಗುವನು. ಲೋಕ ಕಲ್ಯಾಣಕ್ಕಾಗಿ ಆ ವ್ರತವನ್ನು ಹೇಳುತ್ತೇನೆ ಕೇಳು. ಹುಟ್ಟಿದ ಮಕ್ಕಳು ಸತ್ತುಹೋಗುತ್ತಿದ್ದರೆ ಅಂಥ ತಾಯಿಯು ಮತ್ತೆ ಬಸಿರಾದಾಗ ಏಳನೇ ತಿಂಗಳು ಈ ವ್ರತವನ್ನು ವಿಶೇಷವಾಗಿ ಶುಕ್ಲ

ಸಪ್ತಮೀ ದಿನದಂದು ಪ್ರಾರಂಭಿಸಬೇಕು. ಇದರಂತೆ ಅಕಾಲ ಮರಣವಾಗಬಾರದೆಂದು ಬಯಸುವ ಬಾಲಕರು, ಮುದುಕರೂ, ರೋಗಿಗಳೂ, ತಮ್ಮ ಜನ್ಮನಕ್ಷತ್ರ ಹಾಗೂ ತಿಥಿಗಳನ್ನು ಬಿಟ್ಟು ಗ್ರಹನಕ್ಷತ್ರಗಳು ಸರಿಯಾಗಿ ಇರುವ ಶುಭ ದಿನದಂದು ಈ ವ್ರತವನ್ನು ಪಾರಂಭಿಸಬೇಕು.

ಗೋಮಯದಿಂದ ನೆಲವನ್ನು ಸಾರಿಸಿ ಏಕಾಗ್ನಿಯನ್ನು ಸ್ಥಾಪನೆಮಾಡಿ ಕೆಂಪು ಅಕ್ಕಿಯ ಚರುವಿನಿಂದ ಸೂರ್ಯನಿಗೂ ರುದ್ರನಿಗೂ ವಿಹಿತವಾದ ಮಂತ್ರಗಳಿಂದ ಶಾಸ್ತ್ರೋಕ್ತವಾಗಿ ಹೋಮಮಾಡಬೇಕು. ಸೂರ್ಯದೇವತಾಕವಾದ ಏಳು ಋಕ್ಕುಗಳಿಂದ ಸೂರ್ಯನಿಗೆ ತುಪ್ಪದ ಆಹುತಿಗಳನ್ನು, ರುದ್ರಸೂಕ್ತದಿಂದ ರುದ್ರನಿಗೆ ಆಹುತಿಗಳನ್ನು ಸಮರ್ಪಿಸಬೇಕು. ಯಕ್ಕ ಮತ್ತು ಮುತ್ತಗದ ಸಮಿಧೆಗಳನ್ನುಹಾಕಿ ಅಕ್ಕೀ ಕಾಳು ಮತ್ತು ಕರಿಎಳ್ಳುಗಳಿಂದ ನೂರೆಂಟು ಸಲ ಹೋಮಮಾಡಬೇಕು. ಅನಂತರ ವ್ಯಾಹೃತಿಮಂತ್ರಗಳಿಂದ ನೂರೆಂಟು ತುಪ್ಪದ ಆಹುತಿಗಳನ್ನು ಕೊಡಬೇಕು. ಅನಂತರ ಯಜಮಾನನು ಮತ್ತೆ ಸ್ನಾನಮಾಡಿ ವೇದ ವಿದ್ವಾಂಸರಾದ ಬ್ರಾಹ್ಮಣರಿಂದ ನಾಲ್ಕು ಕಲಶಸ್ಥಾಪನೆ ಮಾಡಿಸಬೇಕು. ತೂತುಗಳಿಲ್ಲದ ಐದನೆಯ ಕುಂಭವನ್ನು ನಟ್ಟನಡುವೆ ಇಟ್ಟು ಮೊಸರು ಅಕ್ಷತೆಗಳಿಂದ ಅಲಂಕರಿಸಿ ಸೂರ್ಯದೇವತಾಕವಾದ ಏಳುಮಂತ್ರಗಳಿಂದ ಅಭಿಮಂತ್ರಣಗೈದು, ಸೌರ ಮಂತ್ರದಿಂದ ತೀರ್ಥಹಾಕಿ, ಎಲ್ಲ ಕುಂಭಗಳಲ್ಲಿಯೂ ಗಿಡಮೂಲಿಕೆ, ಪಂಚಗವ್ಯ, ಐದುರತ್ನಗಳನ್ನೂ ಒಳಗೆ ಇಟ್ಟು, ವಸ್ತ್ರ ಹೊದಿಸಿ, ಒಂದೊಂದು ಫಲಗಳನ್ನೂ ಮೇಲೆ ಇರಿಸಬೇಕು. ನದೀ ತಟಾಕ, ಹಸುತುಳಿದ ನೆಲ, ಆನೆ, ಕುದುರೆ, ಓಡಾಡುವ ಸ್ಥಳಗಳಿಂದ ಶುದ್ಧಮಣ್ಣನ್ನು ತಂದು ಅವುಗಳಲ್ಲಿ ಸೇರಿಸಬೇಕು. ಅನಂತರ ಬ್ರಾಹ್ಮಣನು ನಟ್ಟನಡುವಿನ ಕುಂಭವನ್ನು ಎತ್ತಿಕೊಂಡು ಸೌರಮಂತ್ರಗಳನ್ನು ಜಪಿಸಬೇಕು. ಅನಂತರ ಯಾವ ಅಂಗವೂ ಊನವಿರದ ಏಳುಜನ ಮುತ್ತೈದೆಯರು, ಏಳುಜನ ಬ್ರಾಹ್ಮಣರೂ ಮಕ್ಕಳನ್ನು ಕಳೆದುಕೊಂಡ ಈ ತಾಯಿಗೆ "ಇವಳಿಗೆ ಮುಂದೆ ಹುಟ್ಟುವ ಬಾಲಕನು ದೀರ್ಘಾಯುವಾಗಲಿ, ಈ ಮಹಿಳೆಯು, ಜೀವಂತ ಮಕ್ಕಳ ತಾಯಿಯಾಗಲಿ." ಎಂದು ಕೆಳಗಿನ ಮಂತ್ರದಿಂದ ಪ್ರಾರ್ಥಿಸಬೇಕು.

**ದೀರ್ಘಾಯುರಸ್ತು ಬಾಲೋಽಯಂ ಜೀವತ್ಪುತ್ರಾಚ ಭಾಮಿನೀ ॥**
**ಆದಿತ್ಯಶ್ಚಂದ್ರಮಾಃ ಸಾರ್ಧಂಗ್ರಹನಕ್ಷತ್ರ ಮಂಡಲೈಃ ॥**

**ಸಶಕ್ರಾ ಲೋಕಪಾಲಾ ವೈ ಬ್ರಹ್ಮವಿಷ್ಣು ಮಹೇಶ್ವರಾಃ ॥**
**ತೇ ತೇ ಚಾನ್ಯೇ ದೇವೌಘಾಃ ಸದಾ ಪಾಂತು ಕುಮಾರಕಂ ॥**

**ಮಿತ್ರಃ ಶನಿರ್ವಾ ಹುತಭುಗ್ಯೇ ಚ ಬಾಲಗ್ರಹಾಃ ಕ್ವಚಿತ್ ।**
**ಪೀಡಾಂ ಕುರ್ವಂತು ಬಾಲಸ್ಯ ಮಾ ಮಾತುರ್ಜನಕಸ್ಯ ವೈ ।**

"ಈ ಬಾಲಕನು ದೀರ್ಘಾಯುವಾಗಲಿ. ಈ ನಾರಿಯೂ ಸಹ ಬದುಕಿರುವ ಮಕ್ಕಳ ತಾಯಿಯೆನಿಸಲಿ. ಸೂರ್ಯನೂ, ಚಂದ್ರನೂ, ಗ್ರಹಗಳೂ, ನಕ್ಷತ್ರಗಳೂ,

ಇಂದ್ರಾದಿ, ದಿಕ್ಪಾಲಕರೂ, ಬ್ರಹ್ಮ-ವಿಷ್ಣು-ಮಹೇಶ್ವರರೂ ಇನ್ನೂ ಉಳಿದ ಆಯಾ ದೇವಗಣಗಳೂ ಯಾವಾಗಲೂ ಈ ಕುಮಾರನನ್ನು ರಕ್ಷಿಸಲಿ. ಸೂರ್ಯ, ಶನಿ, ಅಗ್ನಿ ಅಥವಾ ಇನ್ನು ಬೇರೆ ಬಾಲಗ್ರಹಗಳು ಈ ಕುಮಾರನಿಗೂ ಇವನ ತಾಯಿ-ತಂದೆಗಳಿಗೂ ಯಾವ ಪೀಡೆಯನ್ನೂ ಮಾಡದಿರಲಿ.'' ಎಂದು ಪ್ರಾರ್ಥಿಸಿ ಅನಂತರ ಮಕ್ಕಳನ್ನು ಕರೆದುಕೊಂಡು ಆ ತಾಯಿಯು ಪತಿಯೊಡನೆ ಕೂಡಿ ಏಳು ಜನ ಸುಮಂಗಲಿಯರನ್ನೂ ಗುರುವನ್ನೂ ಪೂಜಿಸಬೇಕು. ಧರ್ಮರಾಜನ ಚಿನ್ನದ ಪ್ರತಿಮೆಯನ್ನುಮಾಡಿಸಿ ತಾಮ್ರದ ಪಾತ್ರೆಯಲ್ಲಿಟ್ಟು ಗುರುವಿಗೆ ದಾನಮಾಡಬೇಕು. ಬಗೆ ಬಗೆಯ ಭಕ್ಷ್ಯ-ಭೋಜ್ಯಗಳಿಂದ ಬ್ರಾಹ್ಮಣರ ಭೋಜನ ಮಾಡಿಸಿ ಬಟ್ಟೆ-ಬಂಗಾರಗಳನ್ನು ಯಥಾಶಕ್ತಿ ದಾನಕೊಡಬೇಕು. ಭೋಜನಾನಂತರ ಗುರು 'ದೀರ್ಘಾಯುರಸ್ತುಬಾಲೋಽಯಂ ಯಾವದ್‌ವರ್ಷಶತಂಸುಖೀ' 'ಈ ಹುಡುಗನು ''ದೀರ್ಘಾಯುಷಿಯಾಗಿ ನೂರುವರ್ಷ ಸುಖವಾಗಿ ಬಾಳಲಿ. ಇವನ ಪಾಪಗಳಿಗೆ ಬೆಂಕಿಬಿದ್ದು ಸುಟ್ಟುಹೋಗಲಿ. ಬ್ರಹ್ಮ, ರುದ್ರ, ವಸು, ಷಣ್ಮುಖ, ವಿಷ್ಣು, ಇಂದ್ರ, ಅಗ್ನಿ ಮುಂತಾದ ದೇವತೆಗಳು ದುಷ್ಟರಿಂದ ಈ ಹುಡುಗನಿಗೆ ಯಾವ ಭಯಾಪಾಯಗಳೂ ಉಂಟಾಗದಂತೆ ಕಾಪಾಡಿ ವರಗಳನ್ನು ಕೊಡಲಿ,' ಎಂದು ಆಶೀರ್ವದಿಸಬೇಕು. ಹೀಗೆ ಹರಿಸಿದ ಗುರುವಿಗೆ ಮತ್ತು ಬ್ರಾಹ್ಮಣರಿಗೆ ಯಥಾಶಕ್ತಿ ದಾನಕೊಟ್ಟು ವಿಶೇಷತಃ ಗೋದಾನಮಾಡಿ ಬೀಳ್ಕೊಡಬೇಕು. ಅನಂತರ ಸೂರ್ಯನನ್ನು ನಮಿಸಿ ಶಂಕರನಿಗೆ ವಂದಿಸಿ, ಉಳಿದ ಚರುವನ್ನು ಪತಿಯೊಡನೆ ಭಕ್ಷಿಸಬೇಕು. ನಿರಂತರ ಈ ಶಾಂತಿಕರ್ಮ ವಿಧಾನದಿಂದ ಹಿಂದೆ ಕಾರ್ತವೀರ್ಯಾರ್ಜುನನು ದೀರ್ಘಾಯುವಾಗಿ ಹತ್ತುಸಾವಿರವರುಷ ಈ ಭೂಮಿಯನ್ನು ಆಳಿದನು. ಈ **ಸಪ್ತಮೀ ಸ್ನಪನ** ಎಂಬ ಶಾಂತಿ ವಿಧಾನವು ಪವಿತ್ರವೂ, ಪುಣ್ಯಪ್ರದವೂ, ಆಯುರ್ವರ್ಧಕವೂ ಆಗಿರುತ್ತದೆ; ಎಂದು ಕೃತವೀರ್ಯರಾಜನಿಗೆ ತಿಳಿಸಿ ಸೂರ್ಯದೇವನು ಅಲ್ಲಿಯೇ ಅದೃಶ್ಯನಾದನು.

**ಆರೋಗ್ಯಂ ಭಾಸ್ಕರಾದಿಚ್ಛೇತ್ ಧನಮಿಚ್ಛೇತ್ ಹುತಾಶನಾತ್ ।**
**ಈಶ್ವರಾತ್ ಜ್ಞಾನಮನ್ವಿಚ್ಛೇತ್ ಮೋಕ್ಷಮಿಚ್ಛೇತ್ ಜನಾರ್ದನಾತ್ ।**

ಸೂರ್ಯನಿಂದ ಆರೋಗ್ಯವನ್ನೂ, ಅಗ್ನಿಯಿಂದ ಐಶ್ವರ್ಯವನ್ನೂ, ಮಹಾದೇವನಿಂದ ಜ್ಞಾನವನ್ನೂ, ವಿಷ್ಣುವಿನಿಂದ ಮೋಕ್ಷವನ್ನೂ ಅಪೇಕ್ಷಿಸಬೇಕು. ಮಹಾಪಾಪನಾಶಕವೂ, ಬಾಲಕರ ಅಭಿವೃದ್ಧಿಗೆ ಸಾಧನವೂ ಆದ ಈ ವ್ರತವನ್ನು ಭಕ್ತಿಯಿಂದ ಕೇಳಿದರೂ ಸಾಕು. ಸಿದ್ಧಿಯು ಕರಗತವಾಗುವದು ಎಂದು ಮುನಿಗಳು ಹೇಳಿದ್ದಾರೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಅರವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಭೀಮ ದ್ವಾದಶೀವ್ರತ

ಅಧ್ಯಾಯ - ೭೦

**ಮತ್ಸ್ಯ ಉವಾಚ**

**ಪುರಾ ರಥಂತರೇ ಕಲ್ಪೇ ಪರಿಪೃಷ್ಟೋ ಮಹಾತ್ಮನಾ ।**
**ಮಂದರಸ್ಥೋ ಮಹಾದೇವಃ ಪಿನಾಕೀ ಬ್ರಹ್ಮಣಾ ಸ್ವಯಂ ॥**

ಹಿಂದೆ ರಥಂತರ ಕಲ್ಪದಲ್ಲಿ ಮಹಾತ್ಮ ಬ್ರಹ್ಮದೇವನು ಮಂದರಶೈಲದಲ್ಲಿರುವ ಮಹಾದೇವರ ಬಳಿಗೆ ತಾನೇ ಬಂದು ಪ್ರಶ್ನೆ ಮಾಡಿದನು.

**ಬ್ರಹ್ಮ** :- ದೇವತೆಗಳ ಒಡೆಯನೇ, ಮಾನವರಿಗೆ ಚ್ಯುತಿ ಇಲ್ಲದ ಆರೋಗ್ಯ, ಮಿತಿಯಿಲ್ಲದ ಐಶ್ವರ್ಯ ದೊರಕಲು ಉಪಾಯವಾವುದು ? ಅತಿ ಅಲ್ಪ ತಪಸ್ಸಿನಿಂದ ಮೋಕ್ಷವು ದೊರಕುವ ಬಗೆ ಯಾವುದು ? ಸ್ವಲ್ಪ ತಪಸ್ಸಿನಿಂದ ಮಹಾಫಲವು ದೊರಕುವ ಮಾರ್ಗವನ್ನು ಹೇಳಿಕೊಡಿರಿ.

**ಮತ್ಸ್ಯ** :- ಜಗತ್ತಿಗೆ ಕ್ಷೇಮಂಕರನಾದ ಶಂಕರನು ಬ್ರಹ್ಮದೇವರ ಪ್ರಶ್ನೆ ಕೇಳಿ ಲೋಕ ಕಲ್ಯಾಣ ಆಕಾಂಕ್ಷೆಯಿಂದ ಮನಸ್ಸಿಗೆ ಸಂತೋಷವಾಗುವಂತೆ ಹೀಗೆ ಉತ್ತರ ಕೊಟ್ಟನು.

''ಈಗ ನಡೆಯುವ ರಥಂತರ ಕಲ್ಪದ ಮುಂದಿನ 'ವಾರಾಹ' ಕಲ್ಪದ ಏಳನೆಯ ವೈವಸ್ವತ ಮನ್ವಂತರದ ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ವಿಷ್ಣುವು ಭೂಭಾರ ವನ್ನಿಳಿಸಲಿಕ್ಕಾಗಿ ಮೂರು ರೂಪದಿಂದ ಅವತರಿಸುವನು. ಕೃಷ್ಣದ್ವೈಪಾಯನ, ಕೃಷ್ಣ, ಬಲರಾಮ, ಇವೇ ಮೂರು ಆ ಭಗವಂತನ ಅವತಾರಗಳು. ಆ ಜಗತ್ಪತಿಯ ನಿವಾಸಕ್ಕಾಗಿ ನನ್ನ ಆದೇಶದಂತೆ ವಿಶ್ವಕರ್ಮನು ದ್ವಾರಾವತಿಯೆಂಬ ನಗರವನ್ನು ಈಗಿದ್ದ ಕುಶಸ್ಥಲಿಯಲ್ಲಿ ನಿರ್ಮಾಣಮಾಡುವನು. ಆ ಪಟ್ಟಣದಲ್ಲಿ ವಾಸುದೇವನ ಅಧ್ಯಕ್ಷತೆಯಲ್ಲಿ ಅಷ್ಟಮಹಿಷಿಯರೂ, ಯಾದವರೂ, ಕೌರವರೂ ಇತರ ರಾಜರೂ, ಅಲ್ಲದೆ ದೇವತೆಗಳೂ, ಗಂಧರ್ವರೂ ಕುಳಿತುಕೊಂಡಾಗ ಧರ್ಮಾಧರ್ಮ ವಿಷಯದಲ್ಲಿ, ವೇದಪುರಾಣ ವಿಷಯದಲ್ಲಿ ವಿಚಾರ ವಿಮರ್ಶೆಗಳು ನಡೆಯುವವು.

ಆ ಸಭೆಯ ಅವಸಾನದಲ್ಲಿ ಭೀಮಸೇನನು ಶ್ರೀ ಕೃಷ್ಣನನ್ನು ಕುರಿತು ನೀನು ಕೇಳುವ ಧರ್ಮದ ಮರ್ಮವನ್ನು ಪ್ರಶ್ನಿಸುವನು. ಆ ಕಾಲದಲ್ಲಿ ಅವನ ಪ್ರಶ್ನೆಗಳಿಗೆಲ್ಲ ಸ್ವಯಂ ಶ್ರೀಕೃಷ್ಣಪರಮಾತ್ಮನೇ ಉತ್ತರಕೊಟ್ಟು ಸಕಲ ಸಮಸ್ಯೆಗಳನ್ನೂ ಪರಿಹರಿಸುವನು. ಅಂದಿನಿಂದ ಭೀಮಸೇನನೇ ಈ ಕಾರಣಕ್ಕಾಗಿ ಮಹಾವ್ರತದ ಪ್ರವರ್ತಕನೆನಿಸುವನು. ಭೀಮನು ಅತ್ಯಂತ ಬುದ್ಧಿಶಾಲಿ. ಹತ್ತುಸಾವಿರ ಆನೆಗಳಬಲವುಳ್ಳವೀರ. ಭಾಗ್ಯಶಾಲಿ ಹಾಗೂ ಮದನಸುಂದರ. ಅವನ ಜಠರಾಗ್ನಿಯು ಅತಿತೀಕ್ಷ್ಣವಾದರೂ ಧಾರ್ಮಿಕನಾದ ಅವನು ಉಪವಾಸಾದಿ ವ್ರತಗಳನ್ನೆಂದಿಗೂ ಬಿಡುವದಿಲ್ಲ. ಅವನು ಮಾಡಿದ್ದರಿಂದಲೇ ಈ ವ್ರತವು ಎಲ್ಲ

ವ್ರತಗಳಿಗಿಂತ ಶ್ರೇಷ್ಠವೆನಿಸಿದುದು. ಆ ವ್ರತವನ್ನು ಮಾಡಿದವ ಭೀಮ. ಹೇಳಿದವ ಜಗದ್ಗುರು ವಾಸುದೇವ. ಅದರಿಂದ ಸರ್ವಪಾಪಗಳ ಪರಿಹಾರ. ಸಕಲ ಯಜ್ಞಫಲಗಳ ಪ್ರಾಪ್ತಿ. ವಾಸುದೇವನು ಭೀಮಸೇನನನ್ನು ಕುರಿತು ಆ ವ್ರತದ ವಿಧಾನವನ್ನು ಇಂತು ತಿಳಿಸಿದನು.

**ವಾಸುದೇವ** :- ಭೀಮಸೇನ, ಮಾಘಮಾಸದ ಶುಕ್ಲಪಕ್ಷದ ದಶಮಿದಿನ ತುಪ್ಪಹಚ್ಚಿಕೊಂಡು ಅಭ್ಯಂಗ ಸ್ನಾನವನ್ನು ಎಳ್ಳುಮಿಶ್ರಿತ ನೀರಿನಿಂದ ಮಾಡಬೇಕು. ಓಂ ನಮೋ ನಾರಾಯಣಾಯ ನಮಃ ಎಂದು ವಿಷ್ಣುವನ್ನು ಪೂಜಿಸಬೇಕು. 'ಕೃಷ್ಣಾಯ ನಮಃ' ಎಂದು ಶ್ರೀ ಹರಿಯ ಪಾದಗಳನ್ನೂ, 'ಸರ್ವಾತ್ಮನೇ ನಮಃ' ಎಂದು ತಲೆಯನ್ನೂ, 'ವೈಕುಂಠಾಯ ನಮಃ' ಎಂದು ಕಂಠವನ್ನೂ, 'ಶ್ರೀ ವತ್ಸಚಿಹ್ನ ಧರಿಸಿದವನೇ' ಎಂದು ಎದೆಯನ್ನೂ, 'ಶಂಖಚಕ್ರ ಗದಾಧರಾಯ ನಮಃ' ಎಂದು ತೋಳುಗಳನ್ನೂ, 'ದಾಮೋದರಾಯ ನಮಃ' ಎಂದು ಹೊಟ್ಟೆಯನ್ನೂ, 'ಪಂಚಶರಾಯ' ಎಂದು ತೊಡೆ, 'ಸರ್ವಭೂತಧರಾಯ' ಎಂದು ಮೊಣಕಾಲು, 'ನೀಲಾಯ ನಮಃ' ಎಂದು ಮಂಡೆಯನ್ನೂ, 'ವಿಶ್ವಸೃಜೇ ನಮಃ' ಎಂದು ಪಾದಗಳನ್ನೂ ಪೂಜಿಸಬೇಕು.

**ನಮೋ ದೇವ್ಯೈ ನಮಃ ಶಾಂತ್ಯೈ ನಮಃ ಕಾಂತ್ಯೈ ನಮಃಶ್ರಿಯೈ ।**
**ನಮಃ ಪುಷ್ಟ್ಯೈ ನಮಃ ಸ್ತುಷ್ಟ್ಯೈ ದೃಷ್ಟ್ಯೈ ಹೃಷ್ಟ್ಯೈ ನಮೋ ನಮಃ ॥**

ಎಂದು ಲಕ್ಷ್ಮೀದೇವಿಯನ್ನು ಪೂಜಿಸಬೇಕು. 'ನಮೋ ವಿಹಗನಾಥಾಯ ವಾಯುವೇಗಾಯ ಪಕ್ಷಿಣೇ' ಎಂದು ಪಕ್ಷಿಗಳ ರಾಜನಾದ ಗರುಡನನ್ನು ಪೂಜಿಸಬೇಕು. ಇದರಂತೆ ಈಶ್ವರ, ವಿನಾಯಕರನ್ನೂ, ಹೂವು, ಗಂಧ, ಧೂಪ - ದೀಪಗಳಿಂದ ಪೂಜಿಸಿ ಹಸುವಿನ ಹಾಲಿನಿಂದ ಮಾಡಿದ ಪಾಯಸವನ್ನು ತುಪ್ಪದೊಡನೆ ಮೌನದಿಂದ ಭಕ್ಷಿಸಬೇಕು. ಸಾಯಂಕಾಲ ಸಂಧ್ಯಾವಂದನೆಯ ಬಳಿಕ 'ಓಂ ನಮೋ ನಾರಾಯಣಾಯ ಇತಿ ತ್ವಾಮಹಂ ಶರಣಂ ಗತಃ' ಎಂದು ಪ್ರಾರ್ಥಿಸಿ ನಾರಾಯಣನಿಗೆ ಶರಣು ಹೋಗಬೇಕು.

''ಏಕಾದಶಿಯಲ್ಲಿ ನಿರಾಹಾರನಾಗಿ ಕೇಶವನನ್ನು ಪೂಜಿಸಿ, ರಾತ್ರಿ ಜಾಗರಣೆ ಮಾಡಿ ದ್ವಾದಶಿ ಪ್ರಾತಃಕಾಲ ಹಾಲು-ತುಪ್ಪಗಳಿಂದ ಹೋಮಮಾಡುತ್ತೇನೆಂದು ಸಂಕಲ್ಪ ಮಾಡಬೇಕು. ಆ ಹೋಮಕ್ಕಾಗಿ ಮುನ್ನ ದಿನವೇ ಮನೆಯ ಮುಂದೆ ಯಾಗಮಂಟಪವನ್ನು ಹತ್ತು ಅಥವಾ ಎಂಟು ಮೊಳ ಪ್ರಮಾಣದಲ್ಲಿ ರಚಿಸಬೇಕು. ನಾಲ್ಕು ಮೊಳದ ವೇದಿಕೆ, ಅದರಮೇಲೆ ತೋರಣ, ಅಲ್ಲಿ ಛಿದ್ರವುಳ್ಳ ಪೂರ್ಣಕಲಶವನ್ನು ಮೇಲೆತ್ತಿ ಕಟ್ಟಿ ದಿಕ್ಪಾಲಕರನ್ನು ಆಹ್ವಾನಿಸಿ ಪೂಜಿಸಬೇಕು. ಆ ಛಿದ್ರದಿಂದ ನೀರಿನ ಧಾರೆಯು ಹನಿಹನಿಯಾಗಿ ತನ್ನ ತಲೆಯ ಮೇಲೆ ಬೀಳುವಂತೆ ಇಡೀ ರಾತ್ರಿ ಕೃಷ್ಣಾಜಿನದ ಮೇಲೆ ಅದರಡಿಯಲ್ಲಿಯೇ ಕೂಡಬೇಕು. ಇದರಂತೆ ವಿಷ್ಣುಮೂರ್ತಿಯ ತಲೆಯಮೇಲೆಯೂ ಕ್ಷೀರಧಾರೆ ಬೀಳುವಂತೆ ತೂತುಳ್ಳ ಕ್ಷೀರಪಾತ್ರೆಯನ್ನು ಕಟ್ಟಿಡಬೇಕು. ಒಂದು ಮೊಳದಳತೆಯ ಅಗ್ನಿಕುಂಡವನ್ನು ರಚಿಸಿ

ಅದಕ್ಕೆ ಮೂರು ಸುತ್ತುಗಟ್ಟುಗಳನ್ನು ನಿರ್ಮಿಸಬೇಕು. ಆ ಅಗ್ನಿಕುಂಡಕ್ಕೆ ಹೋಮ ಮಾಡುವಾಗ ನೆಲದ ಮೇಲೆ ಚೆಲ್ಲಿದ ತುಪ್ಪವು ಅಗ್ನಿಕುಂಡಕ್ಕೆ ಹೋಗುವಂತೆ ರಚಿಸಿರುವ ಬಚ್ಚಲದ ಆಕಾರದಲ್ಲಿ ಇಳಿಜಾರಾದ ಯೋನಿಮುಖವನ್ನು ನಿರ್ಮಿಸಿ ಏಕಾಗ್ನಿಯನ್ನು ಸ್ಥಾಪಿಸಿ ಬ್ರಾಹ್ಮಣರಿಂದ ವಿಷ್ಣುದೇವತಾಕ ಮಂತ್ರಗಳಿಂದ ಎಳ್ಳು, ಅಕ್ಕಿ, ತುಪ್ಪಗಳ ಹೋಮಮಾಡಿಸಬೇಕು. ಹಸುವಿನಹಾಲಿನಿಂದ ಕೂಡಿದ ಚರುವನ್ನು ವಿಷ್ಣುವಿನ ಉದ್ದೇಶದಿಂದ ಹೋಮಮಾಡಿ ಅನಂತರ ತುಪ್ಪದ ಹೋಮವನ್ನು ಮಾಡಬೇಕು.

ಹದಿಮೂರು ನೀರಿನ ಕಲಶಗಳನ್ನು ಸ್ಥಾಪಿಸಿ ನಾಲ್ವರು ಋಗ್ವೇದಿಗಳು ಉತ್ತರಾಭಿಮುಖವಾಗಿ ಹೋಮ ಮಾಡಬೇಕು. ನಾಲ್ಕು ಯಜುರ್ವೇದಿಗಳು ರುದ್ರ ಮಂತ್ರಗಳನ್ನೂ, ನಾಲ್ಕು ಸಾಮವೇದಿಗಳು ವಿಷ್ಣುಮಂತ್ರಗಳನ್ನೂ, ಅದರ ಜೊತೆಗೆ ಅರಿಷ್ಟ ವರ್ಗವನ್ನೂ, ಪಾರಾಯಣಮಾಡಬೇಕು. ಈ ಹನ್ನೆರಡು ಜನ ಬ್ರಾಹ್ಮಣರಿಗೂ ಹಣ, ಹೊನ್ನು, ಹಾಸಿಗೆ, ಹೂವು, ಉಂಗುರ ಬಂಗಾರದ ಬಳೆ, ಉಡದಾರಗಳನ್ನು ದಾನಮಾಡಬೇಕು. ಇದರ ಎರಡು ಪಟ್ಟು ಆಚಾರ್ಯರಿಗೆ ಕೊಡಬೇಕು. ಬೆಳಗಾಗುವವರೆಗೆ ಮಂಗಲವಾದ್ಯ, ಗೀತಧ್ಯಾನಗಳಿಂದ ದೇವತಾರಾಧನೆಯನ್ನು ನಡಿಸಬೇಕು. ಹೀಗೆ ಬೆಳಗಾದ ಬಳಿಕ ಸ್ವರ್ಣಾಭರಣಗಳಿಂದ ಅಲಂಕೃತವಾದ ಹದಿಮೂರು ಹಸುಗಳನ್ನು ಚಂದನದ ನೀರಿನಿಂದ ಸ್ನಾನಮಾಡಿಸಿ, ಬಟ್ಟೆಹೊದಿಸಿ ದಾನಮಾಡಬೇಕು. ಆ ಬ್ರಾಹ್ಮಣರಿಗೆಲ್ಲ ತೃಪ್ತಿಯಾಗುವಂತೆ ಭೋಜನ ಮಾಡಿಸಿ ತಾನೂ ಉಪ್ಪು ಖಾರ ವರ್ಜಮಾಡಿ ಭೋಜನಮಾಡಬೇಕು. ಅನಂತರ ಪತ್ನೀಪುತ್ರರೊಂದಿಗೆ ಆ ಕಲಶಗಳನ್ನೂ, ಹಸುಗಳನ್ನೂ, ಹಾಸಿಗೆಗಳನ್ನೂ, ಹಣ ಹೊನ್ನುಗಳನ್ನೂ ಹೊತ್ತುಕೊಂಡು ಹೋಗಿ ಅವರನ್ನು ಕಳುಹಿಸಿ ಅರ್ಧ ಹಾದಿಯಿಂದ ಆಶೀರ್ವಾದಪಡೆದು ತಿರುಗಿ ಬರಬೇಕು. ಮನೆಗೆ ಬಂದ ಬಳಿಕ ಇತಿಹಾಸ ಪುರಾಣಗಳನ್ನು ಪಾರಾಯಣಮಾಡುತ್ತ ಆ ದಿವಸವನ್ನು ಕಳೆಯಬೇಕು. ಮಾತ್ಸರ್ಯವಿಲ್ಲದ ಭೀಮಸೇನ, ಸತ್ವಗುಣ ಪ್ರಧಾನನಾದುದರಿಂದ ನೀನು ಈ ವ್ರತವನ್ನುಮಾಡು. ಪಾಪನಾಶಕವಾದ ಈ ವ್ರತವು ಮುಂದೆ **ಭೀಮದ್ವಾದಶೀ** ಎಂದು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವದು.

ಗೊಲ್ಲರ ಹುಡುಗಿಯೊಬ್ಬಳು ಹಿಂದೆ ಈ ವ್ರತವನ್ನು ಮಾಡಿ ಜನ್ಮಾಂತರದಲ್ಲಿ ಊರ್ವಶಿಯೆಂಬ ಅಪ್ಸರಾಸ್ತ್ರೀಯಾಗಿ ಈಗಲೂ ಮೆರೆಯುತ್ತಿದ್ದಾಳೆ. ಹಿಂದೊಮ್ಮೆ ವೈಶ್ಯಕುಲದಲ್ಲಿ ಹುಟ್ಟಿದ ಮಹಿಳೆಯು, ಅಂದು ಕಲ್ಯಾಣಿನೀ ವ್ರತವೆಂದು ಪ್ರಸಿದ್ಧವಾದ ಇದೇ ವ್ರತವನ್ನು ಆಚರಣೆ ಮಾಡಿದ್ದರ ಫಲವಾಗಿ ಈಗ ಪೌಲೋಮೀ ಎಂಬ ಹೆಸರಿನ ಇಂದ್ರನ ಪತ್ನಿಯಾಗಿದ್ದಾಳೆ. ಹಿಂದಿನ ಜನ್ಮದಲ್ಲಿ ಆ ವೈಶ್ಯ ವನಿತೆಯ ಓರ್ವ ಪರಿಚಾರಿಕೆಯು ಈ ವ್ರತಮಾಡಿ ಈ ಜನ್ಮದಲ್ಲಿ ಈಗ ಸತ್ಯಭಾಮಾ ಎಂಬ ಹೆಸರಿನಿಂದ ನನ್ನ ಪ್ರಿಯ ಪತ್ನಿಯಾಗಿರುವಳು.'' ಸೂರ್ಯನು ಈ ಭೀಮದ್ವಾದಶಿಯಲ್ಲಿ ಸಹಸ್ರಧಾರೆಯಿಂದ ಸ್ನಾನಮಾಡಿದನು. ಅದರ ಫಲವಾಗಿ ತೇಜೋಮಂಡಲವನ್ನೂ,

ವೇದಶರೀರವನ್ನೂ ಪಡೆದನು. ಇಂದ್ರಾದಿ ದೇವತೆಗಳೂ, ದಿಕ್ಪಾಲಕರೂ, ವಸುಗಳೂ ಈ ವ್ರತವನ್ನು ಮಾಡಿ ಭಾಗ್ಯಶಾಲಿಗಳಾಗಿದ್ದಾರೆ. ಇದರ ಆಚರಣೆಯಿಂದ ಪಾಪನಾಶವಾಗುವದಲ್ಲದೇ ಹಿಂದು ಮುಂದಿನ ಪಿತೃಗಳು ಉದ್ಧಾರವಾಗುವರು. ಇದನ್ನು ಓದಿದವರೂ, ಕೇಳಿದವರೂ ಪುನಃ ಸಂಸಾರಕ್ಕೆ ಬರುವದಿಲ್ಲ. ಹಿಂದೆ ಕಲ್ಯಾಣಿನೀಎಂಬ ಹೆಸರುಳ್ಳ ಈ ಮಾಘಶುಕ್ಲದ್ವಾದಶೀ ವ್ರತವನ್ನು ದ್ವಾಪರಯುಗದ ಭೀಮಸೇನನು ಮಾಡಿದ. ಅನಂತರ ಭೀಮದ್ವಾದಶೀ ಎಂಬ ಹೆಸರು ಬಂದಿದೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತನೆಯ ಅಧ್ಯಾಯ ಮುಗಿದುದು*



## ವೇಶ್ಯಾಸ್ತ್ರಿಯರಿಗೂ ಒಂದು ವ್ರತ

**ಅಧ್ಯಾಯ - ೭೧**

**ಬ್ರಹ್ಮಾ ಉವಾಚ -**

**ಬ್ರಹ್ಮಾ**
**ವರ್ಣಾಽಶ್ರಮಾಣಾಂ ಪ್ರಭವಃ ಪುರಾಣೇಷು ಮಯಾ ಶ್ರುತಃ।**
**ಸದಾಚಾರಸ್ಯ ಭಗವನ್ ಧರ್ಮಶಾಸ್ತ್ರ ವಿನಿಶ್ಚಯಃ ॥**
**ಪಣ್ಯಸ್ತ್ರೀಣಾಂ ಸದಾಚಾರಂ ಶ್ರೋತುಮಿಚ್ಛಾಮಿ ತತ್ವತಃ ॥**

ವರ್ಣಗಳ ಮತ್ತು ಆಶ್ರಮಗಳ ಹುಟ್ಟುಕಟ್ಟುಗಳ ವಿಚಾರವನ್ನು ನಾನು ಪುರಾಣಗಳನ್ನು ಓದಿ ತಿಳಿದಿದ್ದೇನೆ ಹಾಗೂ ಧರ್ಮಶಾಸ್ತ್ರಗಳಲ್ಲಿ ನಿರೂಪಿಸಿದ ಸದಾಚಾರಗಳ ನಿರ್ಣಯವನ್ನೂ ಅರಿತಿದ್ದೇನೆ. ಆದರೆ ವೇಶ್ಯಾಸ್ತ್ರೀಯರ ಸದಾಚಾರ ಎಂದರೆ ಏನು ಎಂಬುದನ್ನು ವಾಸ್ತವಿಕವಾಗಿ ತಿಳಿಯಬಯಸುತ್ತೇನೆ. ತಿಳಿಸಬೇಕು.

**ಮಹಾದೇವ** :- ಮುಂಬರುವ ೨ ದ್ವಾಪರಯುಗದಲ್ಲಿಅವತಾರಮಾಡುವ ಶ್ರೀ ಕೃಷ್ಣನಿಗೆ ಎಂಟುಜನ ಪಟ್ಟಮಹಿಷಿಯರಲ್ಲದೇ ಇನ್ನೂ ಒಂದು ಸಾವಿರ ಹೆಂಡಂದಿರು ಆಗುವರು. ಆಗ ಒಮ್ಮೆ ವಸಂತ ಋತುವಿನ ವಿಕಾಸ. ನೋಡಿದಲ್ಲೆಲ್ಲ ಬಿರಿವಹೂ, ಸುರಿವಜೇನು, ಮೊರೆವತುಂಬಿ ತೀಡುವತಂಗಾಳಿ, ಸೂಸುವ ಪರಿಮಳ, ಕೃಷ್ಣನ ಅಂತಃಪುರದಲ್ಲಿಯೂ ವಸಂತವಿಲಾಸ, ಎಲ್ಲೆಡೆಗೆ ಕುಣಿತ-ಕುಡಿತ, ಒಲಿವು-ನಲಿವು, ಆನಂದದ ಉಲಿವು. ಈಗ ಅಲ್ಲಿಗೆ ಓರ್ವ ತರುಣನ ಆಗಮನ. ಚಿಗರೆಕಣ್ಣು, ಚಿನ್ನದಬಣ್ಣ, ಚೆಲುವಿನಚಿತ್ತಾರ, ಮೈತುಂಬಆಭರಣ, ಮದನನ ಮೂರುತಿಯೋ! ಎನ್ನುವಷ್ಟು ಮೋಹನಾಂಗ, ಮುಡಿಗೆ ಮಾಲತೀಕುಸುಮ ಮುಡಿದಿದ್ದಾನೆ. ನಡೆದಾಡಿದಲ್ಲೆಲ್ಲ ನರುಗುಂಪು ಇಡುಗುತ್ತಿತ್ತು. ನಿರುಕಿಸಿ ನೋಡಿದರು ಕೃಷ್ಣನ ನಲ್ಲೆಯರು. ಅವನು ಬೇರಾರೂ ಆಗಿರಲಿಲ್ಲ. ಕೃಷ್ಣನಮಗ ಸಾಂಬ. ಜಾಂಬುವತಿಯ ಮಗ. ಚೆಲುವಿನ ಚೆನ್ನಿಗರಾಮ. ಚಾರು ಚಂದ್ರಾಮ.

ಅವನ ಶಾಂತಿಕಾಂತವಾದ ಕಾಯ ಕಂಡು ಕೃಷ್ಣನ ಕಾಮಿನಿಯರಿಗೆಲ್ಲ ಕಾಮನ ಕಚಕುಳಿ. ಪ್ರೇಮದ ಒಳಸುಳಿ. ಆ ಮುದ್ದುಮಗನ ಮುಗ್ಧ ಮುಖವನ್ನು ಕದ್ದು

ನೋಡಿ ಕಾಮವಶರಾಗುವರು. ಸ್ವಾಮಿಗೆ ತಿಳಿಯಿತು ಅಂಗನೆಯರ ಅಪಚಾರ. ''ನಾನಿಲ್ಲದಾಗ ಹೀಗೆ ಕಾಮವಶರಾದ ನೀವೆಲ್ಲ ಕಳ್ಳರ ಕೈಗೆ ಬೀಳಿರಿ'' ಎಂದು ಶಪಿಸುವನು. ಅನಂತರ ದುಃಖಾರ್ತರಾದ ಆ ಸುಂದರೀ ಸಹಸ್ರವು ಕೃಷ್ಣನ ಕಾಲು ಹಿಡಿದು ಕರುಣೆತೋರು ಎಂದು ಅಂಗಲಾಚಿದರು. ಸ್ವಾಮಿ ಶ್ರೀಕೃಷ್ಣ ಉಶ್ಯಾಪವೀಯುವನು. ''ದಾಲ್ಭ್ಯ ಮಹರ್ಷಿಯು ಆ ಕಾಲದಲ್ಲಿ ನಿಮಗೆ ಉಪದೇಶಿಸುವ ವ್ರತದಿಂದ ದಾಸ್ಯಭಾವದಲ್ಲಿದ್ದರೂ ನೀವು ಸದ್ಗತಿಯನ್ನು ಪಡೆಯುವಿರಿ'' ಎಂದು ಹೇಳಿ ಅವರನ್ನು ಆಲಿಂಗಿಸಿ ಕೃಷ್ಣನು ಹೊರಟು ಹೋದನು. ಮುಂದೆ ಕೆಲ ಕಾಲ ಕಳೆದ ಬಳಿಕ ಭಗವಂತನ ಅವತಾರ ಸಮಾಪ್ತಿ. ಗಾರ್ಗ್ಯ ಮುನಿಯ ಶಾಪ. ಯಾದವೀ ಕಲಹ. ಒನಿಕೆಯ ಪ್ರಹಾರ. ಯಾದವ ಕುಲಕ್ಷಯ. ಕೃಷ್ಣ ಪರಮಾತ್ಮನ ಸ್ವರ್ಗ ಪ್ರಯಾಣ ಮುಂತಾದ ಅನೇಕ ಘಟನೆಗಳು ನಡೆಯುವವು. ಕೃಷ್ಣನ ಆಣತಿಯಂತೆ ಅರ್ಜುನನು ಬಂದು ಕೃಷ್ಣನ ಸಾವಿರ ಮಡದಿಯರನ್ನು ಕರೆದೊಯ್ಯುವನು. ದಾರಿಯಲ್ಲಿಯೇ ಕಳ್ಳರು ಬಂದು ಅರ್ಜುನನನ್ನು ಸೋಲಿಸಿ ಕೃಷ್ಣನ ಮಡದಿಯರನ್ನು ಬಲಾತ್ಕಾರದಿಂದ ಸೆಳೆದೊಯ್ಯುವರು.

ಕಳ್ಳರ ಕೈಯಲ್ಲಿ ಆ ಎಲ್ಲ ಕೃಷ್ಣಕಾಮಿನಿಯರ ಶೀಲ ಸೂರೆಯಾಗುವದು. ಬಲಾತ್ಕರಿಸಲ್ಪಟ್ಟ ಆ ಭಗವಂತನ ಭಾಮಿನಿಯರೆಲ್ಲ ಸಮುದ್ರ ದಂಡೆಯ ಮೇಲೆ ಕುಳಿತು ತಮ್ಮ ಸತೀತ್ವಭಂಗದಿಂದ ದುಃಖಸಂತಪ್ತರಾಗಿ ಕೂಡುವರು. ಆ ಕಾಲದಲ್ಲಿ ದಾಲ್ಭ್ಯನೆಂಬ ಯೋಗಿಯು ಅಲ್ಲಿಗೆ ದಯಮಾಡಿಸುವನು. ಅವನನ್ನು ಕಂಡು ಆ ಎಲ್ಲ ಅಚ್ಯುತನ ಅಂಗನೆಯರು ಆದರದಿಂದ ಸತ್ಕರಿಸಿ ನಮಸ್ಕಾರಮಾಡಿ ಕಣ್ಣೀರು ಕರೆಯುತ್ತ ತಮ್ಮ ದುಃಖ ದುರವಸ್ಥೆಗಳನ್ನುಅವನೆದುರು ಹೇಳಿ ತೋಡಿಕೊಂಡು, ಅತ್ತು ಗೋಗರೆದು ಶೀಲಭ್ರಂಶದಿಂದ ಸಂತಪ್ತರಾಗಿ ಹೊರಳಾಡಿ ಬಿಕ್ಕಿಬಿಕ್ಕಿ ರೋದಿಸುವರು. ಅವರಿಗೆ ತಮ್ಮ ಹಿಂದಿನ ಭೋಗಭಾಗ್ಯಗಳನ್ನು ಕೃಷ್ಣನ ಅಂತಃಪುರದಲ್ಲಿ ತಾವು ಪಟ್ಟಭೋಗ, ಅನುಭವಿಸಿದ ಆನಂದ, ಆಡಿದ ಆಟ, ಮಾಡಿದ ವಿಹಾರ, ಭೋಗಿಸಿದ ಭಾಗ್ಯ ಪಡೆದ ಗೌರವಗಳನ್ನು ನೆನೆನೆನೆದು ಮತ್ತಿಷ್ಟೂ ದುಃಖೋದ್ರೇಕ. ಆಗಿನ ಅಲ್ಲಿಯ ಹಾರ, ಆಹಾರ, ವಿಹಾರ, ವಿಲಾಸ, ವಿನೋದ, ವಿಭ್ರಮ, ವೈಭವ, ವೈಯಾರ, ಸೌಭಾಗ್ಯ, ನೆಚ್ಚಿನ ಗಂಡ, ಮೆಚ್ಚಿನ ಮಕ್ಕಳು, ಸ್ನೇಹದ ಪರಿವಾರ ಒಂದೇ ಎರಡೇ... ಅಯ್ಯೋ ಎಲ್ಲವೂ ಹೊರಟು ಹೋಯಿತು. ಎಲ್ಲವೂ ಬರಿದು, ಎಲ್ಲವೂ ತೆರವು. ಸರ್ವಂಶೂನ್ಯಂ... ಅಕಟಕಟ. ಇದೆಂಥ ಅಧಃಪಾತ ! ಸರ್ವಸ್ವಘಾತ ! ಆ ಕೃಷ್ಣನೆಲ್ಲಿ ಈ ಕಳ್ಳರೆಲ್ಲಿ ! ಅದು ಸ್ವರ್ಗ. ಇದು ನರಕ. ಅಂದು ಪತಿವ್ರತೆ ಇಂದು ಪತಿತೆ. ಆಗ ಕುಲೀನೆ ಈಗ ಕುಲಟೆ... ಹಿಂದಿನದನ್ನು ನೆನಪು ಮಾಡಿಕೊಂಡಷ್ಟೂ ದುಃಖದ ದಳ್ಳುರಿ. ಕಿಚ್ಚು ಕೆದರಿದಂತಾಗುತ್ತಿತ್ತು. ಆ ದುಃಖದಾವಾಗ್ನಿಯಲ್ಲಿ ಬೆಂದು ನೊಂದು ನವೆದು ಹೋದ ಆ ನಾರಿಯರು ಆ ದಾಲ್ಭ್ಯಮುನಿಯ ಎದುರು ಅಡ್ಡಬಿದ್ದು ಬೇಡಿಕೊಂಡರು.

''ಪೂಜ್ಯರೇ, ನಮ್ಮ ಗತಿಯೇನು ? ಕಳ್ಳರು ನಮ್ಮನ್ನು ಕರೆದೊಯ್ದು ಬಲಾತ್ಕಾರದಿಂದ ಭೋಗಿಸಿ ಶೀಲವನ್ನು ಹಾಳುಗೈದಿದ್ದಾರೆ, ನಮ್ಮ ಸತೀತ್ವ

ನಷ್ಟವಾಗಿದೆ. ನಾವು ನಾರೀಧರ್ಮದಿಂದ ಭ್ರಷ್ಟರಾಗಿದ್ದೇವೆ. ನಮಗೆ ಮುಂದೇನು ಗತಿ ? ನೀವೇ ದಾರಿ ತೋರಬೇಕು. ನಿಮ್ಮನ್ನೇ ಶರಣು ಬಂದಿದ್ದೇವೆ. ಈ ಪ್ರಸಂಗದಲ್ಲಿ ನಮಗೆ ಮಾರ್ಗದರ್ಶನ ಮಾಡಿಸಬೇಕೆಂದು ಭಗವಂತನೇ ನಿಮಗೆ ಅಪ್ಪಣೆಮಾಡಿದ್ದಾನೆ. ಸಾಕ್ಷಾತ್ ಜಗದೀಶ್ವರನೊಂದಿಗೆ ಸಮಾಗಮವನ್ನು ಪಡೆದ ನಮಗೆ ಈ ವೇಶ್ಯೆಯರ ದುರ್ದಶೆ ಏಕೆ ಬಂದಿತು ? ಪತಿಯನ್ನು ಬಿಟ್ಟು ಬಲಾತ್ಕಾರದಿಂದ ಬೇರೆಯವರ ಭೋಗಕ್ಕೆ ಬಲಿಯಾದ ಭ್ರಷ್ಟನಾರಿಯರಿಗೆ ಏನಾದರೂ ಕರ್ತವ್ಯ ಧರ್ಮಗಳಿದ್ದರೆ ತಿಳಿಸಿರಿ.

**ದಾಲ್ಭ್ಯ** :- ಹಿಂದೆ ಮಾನಸ ಸರೋವರದಲ್ಲಿ ನೀವೆಲ್ಲರೂ ಜಲಕ್ರೀಡೆಯನ್ನು ಆಡುತ್ತಿದ್ದಿರಿ. ಅಗ್ನಿಕನ್ಯೆಯರಾದ ನಿಮ್ಮ ಬಳಿಗೆ ಅಂದು ನಾರದ ಮಹರ್ಷಿಯು ಬಂದ. ಆ ಮಹಾಮುನಿಯು ಬಂದರೂ ''ನಾವು ಅಪ್ಸರಾಂಗನೆಯರು'' ಎಂಬ ಅಭಿಮಾನದಿಂದ ನೀವು ಅವನಿಗೆ ವಂದಿಸಲಿಲ್ಲ. ಆದರೆ ನಿಮಗೆ ಗೊತ್ತು. ಯಾವ ದೃಷ್ಟಿ ಉಂಟು ಆ ನಾರದನಿಗೆ ಎಂದು. ಆದುದರಿಂದ ಅಪ್ಸರಾಂಗನೆಯರೆ ನೀವು ಅಭಿಮಾನದಿಂದ ತಲೆಬಾಗಿಸದೇ ಬೀಗಿನಿಂತು ನಾರದರನ್ನು '' ನಾರಾಯಣನು ನಮಗೆ ಪತಿಯು ಹೇಗೆ ಆಗುವನು ಅದನ್ನು ತಿಳಿಸಿರಿ.'' ಇದನ್ನು ಕೇಳಿ ಆ ನಾರದ ಮಹರ್ಷಿಯು ಶಾಪವನ್ನೂ ವರವನ್ನೂ ಕೂಡಿಯೇ ಕೊಟ್ಟನು. ಚೈತ್ರ ವೈಶಾಖ ಮಾಸಗಳ ಶುಕ್ಲಪಕ್ಷ ದ್ವಾದಶಿ ದಿನ ಎರಡು ಹಾಸಿಗೆಗಳನ್ನು ಬಂಗಾರವನ್ನು ಉಳಿದ ಭೋಗವಸ್ತುಗಳನ್ನು ದಾನಮಾಡಿರಿ. ಇದರಿಂದ ನಿಮಗೆ ಮುಂದಿನ ಜನ್ಮದಲ್ಲಿ ಸಾಕ್ಷಾತ್ ನಾರಾಯಣ ನಿಮಗೆ ಪತಿಯಾಗಿ ದೊರಕುವನು. ನೀವು ನಿಮ್ಮ ಸೌಂದರ್ಯ ಸೌಭಾಗ್ಯಗಳ ಮದದಿಂದ ನನಗೆ ನಮಸ್ಕಾರ ಮಾಡದೇ ಪ್ರಶ್ನೆಯನ್ನು ಕೇಳಿದ್ದರಿಂದ ನಿಮಗೆ ಆ ಶ್ರೀ ಹರಿಯಿಂದ ವಿಯೋಗವೂ ಬೇಗ ಆಗುವದು. ಕಳ್ಳರು ನಿಮ್ಮನ್ನು ಕದ್ದೊಯ್ದು ಬಲಾತ್ಕರಿಸುವರು. ನಿಮಗೆ ವೇಶ್ಯೆಯರಪಾಡು ಉಂಟಾಗುವದು. ಹೀಗೆ ನಾರದರ ಮತ್ತು ಶ್ರೀಹರಿಯ ಶಾಪದಿಂದ ನಿಮಗೆ ಈಗ ವೇಶ್ಯೆಯರ ಗತಿ ಬಂದಿದೆ. ನಿಮಗೆ ಹಿತಕರವಾದ ಮಾತನ್ನು ನಾನು ಹೇಳುತ್ತೇನೆ ಕೇಳಿರಿ.

''ಪೂರ್ವಕಾಲದಲ್ಲಿ ದೇವದಾನವಯುದ್ಧದಲ್ಲಿ ದೇವತೆಗಳು ಸಹಸ್ರಾರು ದೈತ್ಯರನ್ನು ಸಂಹರಿಸಿದರು. ಆ ದಾನವರು ದಿಗ್ದೇಶಗಳನ್ನೆಲ್ಲ ಕೊಳ್ಳೆಹೊಡೆದು ಕೈಗೆ ಸಿಕ್ಕ ಕನ್ಯೆಯರನ್ನೆಲ್ಲ ಹಿಡಿದು ತಂದು ಮದುವೆ ಆಗಿ ಉಪಭೋಗಿಸಿದರು. ಸುರಾಸುರ ಯುದ್ಧದಲ್ಲಿ ದೈತ್ಯರೆಲ್ಲರೂ ಸತ್ತು ಹೋದ ಬಳಿಕ ದಾನವರ ಬಲಾತ್ಕಾರಕ್ಕೆ ಬಲಿಯಾದ ಲಕ್ಷಾವಧಿ ಲಲನೆಯರು ಅನಾಥರಾಗಿ ಅಗಂತುಕರಾಗಿ ಅಲೆದಾಡತೊಡಗಿದರು. ಅವರಿಗೆ ದೇವೇಂದ್ರನು ಆ ಕಾಲದಲ್ಲಿ ಒಂದು ಹಿತೋಪದೇಶವನ್ನು ಮಾಡಿದನು.

**ಇಂದ್ರ** :- ಚೆಲುವೆಯರೇ, ನೀವು ಇನ್ನು ಮುಂದೆ ರಾಜಮಂದಿರಗಳಲ್ಲಿಯೂ ದೇವಸ್ಥಾನಗಳಲ್ಲಿಯೂ, ವೇಶ್ಯಾಧರ್ಮವನ್ನು ಅನುಸರಿಸಿ ಭಕ್ತಿಯಿಂದ ವರ್ತಿಸಿರಿ. ರಾಜರೂ, ರಾಜರ ಮಕ್ಕಳೂ ನಿಮ್ಮ ಪತಿಸಮಾನರೆಂದು ಭಾವಿಸಿರಿ. ಅವರನ್ನು ಭಕ್ತಿಯಿಂದ ಸೇವಿಸುವದರಿಂದ ನಿಮಗೆ ಸೌಭಾಗ್ಯವು ಉಂಟಾಗುವದು. ಅದರಂತೆ ನಿಮ್ಮ ಮನೆಗೆ ಕೈಯಲ್ಲಿ ದುಡ್ಡನ್ನು ಹಿಡಿದುಕೊಂಡು ಯಾವನೇ ಬರಲಿ ನೀವು

ಪ್ರೀತಿಯಿಂದ ಅವನನ್ನು ಉಪಚರಿಸಿ. ಆದರೆ ಅವನು ಕಪಟಿಯಾಗಿರಬಾರದು. ಒಳ್ಳೆ ಪ್ರಾಮಾಣಿಕ ಪುರುಷನು ಪ್ರೀತಿಯಿಂದ ಬೇಡಿದ್ದನ್ನು ಕೊಡಲು ನಿಮ್ಮಲ್ಲಿಗೆ ಬಂದರೆ ನೀವು ನಿಮ್ಮ ಪ್ರಾಣಗಳನ್ನು ಅವನ ಸೇವೆಗೆ ಮುಡುಪಾಗಿ ಇಡಿರಿ. ದೇವತೆಗಳ ಹಬ್ಬ ಹರಿದಿನಗಳಲ್ಲಿ ಮತ್ತು ಪಿತೃಗಳ ತಿಥಿಗಳಂದು ನೀವು ಗೋದಾನ, ಭೂದಾನ, ಸುವರ್ಣದಾನ, ಧನದಾನ, ಧಾನ್ಯದಾನಗಳನ್ನು ಯಥಾಶಕ್ತಿ ಮಾಡಿರಿ. ಯೋಗ್ಯರಾದ ಬ್ರಾಹ್ಮಣರ ಆಜ್ಞೆಯನ್ನು ಪಾಲಿಸಿರಿ. ನಿಮಗೆ ಇನ್ನೂ ಒಂದು ವ್ರತವನ್ನು ನಾನು ಉಪದೇಶಿಸುತ್ತೇನೆ. ಯಾವ ವಿಚಾರವನ್ನು ಮಾಡದೇ ಅದನ್ನು ಅನುಸರಿಸಿರಿ.

''ಇದರ ಹೆಸರು **ಮಹಾವ್ರತ.** ಹಸ್ತಾ, ಪುಷ್ಯ, ಪುನರ್ವಸು ನಕ್ಷತ್ರವಿರುವ ಭಾನುವಾರ ದಿನ ಈ ವ್ರತವನ್ನು ಆಚರಿಸಬೇಕು. ಅಂದು ಈ ವ್ರತಾನುಷ್ಠಾನ ಕೈಗೊಂಡ ಕಾಮಿನಿಯು ಸ್ನಾನಮಾಡಿ ಕಾಮನಪ್ರತಿಮೆಯನ್ನು ಶ್ರೀ ಹರಿಯ ನಾಮಗಳಿಂದ ಪೂಜಿಸಬೇಕು. ಕಾಮಾಯನಮಃ ಎಂದು ಪಾದಗಳನ್ನೂ, ಮೋಹಕಾರಿಣೇನಮಃ ಎಂದು ಮೊಣಕಾಲನ್ನೂ, ಕಂದರ್ಪನಿಧಯೇನಮಃ ಎಂದು ಸೊಂಟವನ್ನೂ, ಸೌಖ್ಯ ಸಮುದ್ರಾಯನಮಃ ಎಂದು ಹೊಕ್ಕಳು, ಶಿವಾಯನಮಃ ಎಂದು ಹೊಟ್ಟೆ, ಹೃದಯೇಶಾಯನಮಃ ಎಂದು ಎದೆ, ಆಹ್ಲಾದಕಾರಿಣೇ ಎಂದು ಹೃದಯ, ಉತ್ಕಂಠಾಯ ಎಂದು ಕೊರಳು, ಪುಷ್ಪಚಾಪಾಯ ಎಂದು ಎಡಪಾರ್ಶ್ವ, ಪುಷ್ಪಬಾಣಾಯ ಎಂದು ಬಲಭಾಗ, ಮಾನಸಾಯ ಎಂದು ಕಿರೀಟ, ವಿಲೋಲಾಯ ಎಂದು ಕೂದಲು, ಸರ್ವಾತ್ಮನೇ ನಮಃ ಎಂದು ಕಾಮನ ಸರ್ವಾಂಗವನ್ನೂ ಪೂಜಿಸಬೇಕು.

**ಗದಿನೇ ಪೀತ ವಸ್ತ್ರಾಯ ಶಂಖಚಕ್ರ ಧರಾಯಚ ।**
**ನಮೋ ನಾರಾಯಣಾಯೇತಿ ಕಾಮದೇವಾತ್ಮನೇ ನಮಃ ॥**

ಎಂದು ಕಾಮನ ಅಂತರ್ಯಾಮಿಯಾದ ಪೀತಾಂಬರವನ್ನು ಧರಿಸಿ ಶಂಖ, ಚಕ್ರ, ಗದಾಪದ್ಮಗಳನ್ನು ಕೈಯಲ್ಲಿ ಹಿಡಿದ ನಾರಾಯಣನಿಗೆ ನಮಸ್ಕರಿಸಿ ಪ್ರಾರ್ಥನೆ ಮಾಡಬೇಕು. ಹೀಗೆ ಮನ್ಮಥ ರೂಪಿಯಾದ ಶ್ರೀ ಹರಿಯನ್ನು ಗಂಧ, ಹೂವಿನ ಹಾರ, ಧೂಪ, ದೀಪ, ನೈವೇದ್ಯಗಳಿಂದ ಕಾಮಿನಿಯು ಪೂಜಿಸಿ ಬ್ರಾಹ್ಮಣಪೂಜೆಯನ್ನು ಮಾಡಬೇಕು. ತುಪ್ಪದ ಪಾತ್ರೆಯೊಡನೆ ಅಕ್ಕಿ ತುಂಬಿದ ಪಾತ್ರೆಯನ್ನು ಮಾಧವನು ಪ್ರೀತನಾಗಲಿ ಎಂದು ದಾನಕೊಡಬೇಕು. ಯಥೇಚ್ಛ ಭೋಜನಮಾಡಿಸಿ ಅವನು ಅಪೇಕ್ಷಿಸಿದ್ದನ್ನೆಲ್ಲ ಕೊಟ್ಟು ಆತ್ಮ ನಿವೇದನೆಯನ್ನು ಮಾಡಬೇಕು. ಹೀಗೆ ರವಿವಾರದಿಂದ ಷುರುಮಾಡಿ ಹದಿಮೂರು ತಿಂಗಳು ಕಾಲ ಈ ವ್ರತವನ್ನು ನಡೆಸಬೇಕು. ಅನಂತರ ಶೈಯ್ಯಾದಾನ, ದೀಪ, ಪಾದರಕ್ಷೆ, ಕೊಡೆ, ಆಸನ ಉಂಗುರ, ಉಡುದಾರ, ವಸ್ತ್ರ, ಬಳೆ, ಮುಂತಾದವುಗಳನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ ದಾನ ಮಾಡಬೇಕು.

ತಾಮ್ರದ ತಟ್ಟೆಯಲ್ಲಿ ಬೆಲ್ಲತುಂಬಿದ ಕುಂಭವನ್ನಿಟ್ಟು ಅದರ ಮೇಲೆ ರತಿ, ಕಾಮರಮೂರ್ತಿಗಳನ್ನು ಕೂಡಿಸಿ ಕಬ್ಬಿನ ಜಲ್ಲೆಯನ್ನು, ಕಂಚಿನ ಪಾತ್ರೆಯನ್ನೂ, ಕೈಯಲ್ಲಿ ಕೊಡಬೇಕು. ಅನಂತರ ಆ ಎರಡೂ ಪ್ರತಿಮೆಗಳನ್ನು ಹಿಂಡುವ ಹಸುವಿನೊಂದಿಗೆ ದಾನಕೊಡಬೇಕು. ಬ್ರಾಹ್ಮಣನು 'ಕೈದಂಕಸ್ಯಾದಾತ್' ಎಂಬ

ವೇದಮಂತ್ರಗಳನ್ನು ಉಚ್ಚರಿಸಿ ಕಾಮನಮೂರ್ತಿಯನ್ನು ಸ್ವೀಕರಿಸಬೇಕು. ಅನಂತರ ಆ ಬ್ರಾಹ್ಮಣನನ್ನು ನಮಸ್ಕರಿಸಿ ಮನೆಗೆ ಬೀಳ್ಕೊಟ್ಟು ತಾನು ದಾನ ಕೊಟ್ಟ ಶಯ್ಯಾಸನಗಳನ್ನೆಲ್ಲ ಮನೆಗೆ ಕಳಿಸಿಕೊಡಬೇಕು. ಮನೆಗೆ ಬಂದವರನ್ನು ವಿಹಾರದಿಂದ ಆನಂದಪಡಿಸಬೇಕು.

ರವಿವಾರ ಬಂದ ಅತಿಥಿಗಳನ್ನು ಪೂಜಿಸಬೇಕು. ಹೀಗೆ ಹದಿಮೂರು ತಿಂಗಳವರೆಗೆ ಬಂದ ಅತಿಥಿಗಳನ್ನು ಇಷ್ಟಾನುಸಾರ ತೃಪ್ತಿಪಡಿಸಬೇಕು. ಆ ಪ್ರಿಯಕರನು ಪರ ಊರಿಗೆ ಹೋದರೆ ಅವನ ಅಪ್ಪಣೆಯಿಂದ ರೂಪವಂತನಾದ ಮತ್ತೊಬ್ಬ ಅಭ್ಯಾಗತನನ್ನು ಸೇವಿಸಬೇಕು. ಹೀಗೆ ಐವತ್ತೆಂಟು ವಾರ ತನ್ನ ಶಕ್ತ್ಯಾನುಸಾರ ಈ ವ್ರತವನ್ನು ಮಾಡಬೇಕು. ಇದರಿಂದ ವೇಶ್ಯೆಯರಿಗೆ ಯಾವ ಅಧರ್ಮವೂ ಪಾಪವೂ ತಟ್ಟುವದಿಲ್ಲ. ಈ ವ್ರತವನ್ನು ಆಚರಿಸಿದ ಮಂಗಳಾಂಗೆಯರು ದೇವಪೂಜಿತರಾಗಿ, ವಿಷ್ಣುವಿನ ಪರಮಾನುಗ್ರಹ ಪಡೆದು, ದೇವಲೋಕದಲ್ಲಿ ವಾಸಿಸುವರು. ಹೀಗೆ ದಾಲ್ಭ್ಯ ಋಷಿಯು ಆ ಅಂಗನೆಯರಿಗೆ ಈ ವ್ರತವನ್ನು ಉಪದೇಶಿಸಿ ತನ್ನ ಸ್ಥಳಕ್ಕೆ ತೆರಳಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತೊಂದನೆಯ ಅಧ್ಯಾಯ ಮುಗಿದುದು*

—○—

## ಅಶೂನ್ಯಶಯನ ದ್ವಿತಿಯಾವ್ರತ

**ಅಧ್ಯಾಯ - ೭೨**

ಬ್ರಹ್ಮಾ ಉವಾಚ :

**ಮೋಹಾದ್ವಾಪಿ ಮದಾದ್ವಾಪಿ ಯಃಪರಸ್ತ್ರೀಂ ಸಮಾಶ್ರಯೇತ್ ।**
**ತಸ್ಯಾಪಿ ನಿಷ್ಕೃತಿಂ ದೇವ ವದ ಸರ್ವಕೃಪಾಕರ ॥**

ಎಲ್ಲರಲ್ಲೂ ದಯೆತೋರುವ ಓ ದೇವಾ. ಮೋಹದಿಂದಲೋ, ಮದದಿಂದಲೋ ಪರಸ್ತ್ರೀ ಸಮಾಗಮವನ್ನು ಮಾಡತಕ್ಕವನಿಗೆ ಪ್ರಾಯಶ್ಚಿತ್ತವಾವುದು? ಪುರುಷನಿಗಾಗಲೀ ಸ್ತ್ರೀಯರಿಗಾಗಲೀ, ವಿಯೋಗ, ರೋಗ, ಭಯ, ದುಃಖ ಇವು ಯಾವುವೂ ಆಗದೇ ಇರಬೇಕಾದರೆ ಏನು ಮಾಡಬೇಕು ಹೇಳು ?

**ಶಿವ ಅಂದದ್ದು :-** ಶ್ರಾವಣಮಾಸ ಕೃಷ್ಣಪಕ್ಷದಲ್ಲಿ ದ್ವಿತೀಯಾದಿನ ನಾರಾಯಣನು ಲಕ್ಷ್ಮೀಸಹಿತನಾಗಿ ಕ್ಷೀರಸಮುದ್ರದಲ್ಲಿ ವಾಸಿಸುತ್ತಾನೆ. ಅಂದು ಗೋವಿಂದನನ್ನು ಆರಾಧಿಸಿ ಗೋದಾನ, ಹಿರಣ್ಯದಾನಗಳನ್ನು ಮಾಡಿದರೆ ಮಹಾಫಲ ಉಂಟು. ಈ ದ್ವಿತೀಯಾತಿಥಿಗೆ ಅಶೂನ್ಯಶಯನ ದ್ವಿತಿಯಾ ಎಂದು ಹೆಸರು. ಆ ದಿನದಲ್ಲಿ ಶ್ರೀಹರಿಯನ್ನು ಮುಂದಿನ ಮಂತ್ರಗಳಿಂದ ಶಾಸ್ತ್ರೋಕ್ತವಾಗಿ ಪೂಜಿಸಬೇಕು.

**ಶ್ರೀವತ್ಸಧಾರಿನ್ ಶ್ರೀಕಾಂತ ಶ್ರೀಧಾಮನ್ ಶ್ರೀಪತೇಽವ್ಯಯ ।**
**ಗ್ರಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾದಿ ಕಾಮದಂ ॥**

ಅಗ್ನಯೋ ಮಾಪ್ರಣಶ್ಯಂತು ದೇವತಾಃ ಪುರುಷೋತ್ತಮ ।
ಪಿತರೋ ಮಾ ಪ್ರಣಶ್ಯಂತು ಮಾಽಸ್ತುದಾಂಪತ್ಯ ಭೇದನಂ ॥

ಲಕ್ಷ್ಮ್ಯಾ ವಿಯುಜ್ಯತೇ ದೇವ ನಕದಾಚಿದ್ಯಥಾ ಭವಾನ್ ।
ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿಯುಜ್ಯತಾಂ ॥

ಲಕ್ಷ್ಮ್ಯಾ ನ ಶೂನ್ಯೋ ವರದ ಶಯ್ಯಾಂ ತ್ವಂ ಶಯನಂ ಗತಃ ।
ಶಯ್ಯಾ ಮಮಾಪ್ಯಶೂನ್ಯಾಽಸ್ತು ತಥೈವ ಮಧುಸೂದನ ॥

ವಕ್ಷಸ್ಥಳದಲ್ಲಿ ಲಕ್ಷ್ಮಿಯ ಲಾಂಛನವುಳ್ಳ ಶ್ರೀಕಾಂತನೇ, ನಮ್ಮ ದಾಂಪತ್ಯ ಜೀವನವು ಎಂದೂ ನಾಶವಾಗದೇ ಧರ್ಮಾರ್ಥಕಾಮಗಳು ಸಿದ್ಧಿಸಲಿ. ಔಪಾಸನಾದಿ ಅಗ್ನಿಗಳು ನನ್ನಿಂದ ದೂರ ಸರಿಯದೇ ಇರಲಿ. ಪಿತೃಗಳು ನಮ್ಮ ಕೈಬಿಡದಿರಲಿ. ನಮ್ಮ ದಾಂಪತ್ಯ ಜೀವನಕ್ಕೆ ಎಂದೂ ವಿಚ್ಛೇದನೆ ಬಾರದಿರಲಿ. ಲಕ್ಷ್ಮೀದೇವಿಗೂ ನಿನಗೂ ಎಂದೂ ವಿಯೋಗವೇ ಇಲ್ಲ. ಅದರಂತೆ ನಮ್ಮಿಬ್ಬರು ದಂಪತಿಗಳಲ್ಲಿ ಎಂದೂ ವಿಯೋಗವು ಬಾರದಿರಲಿ. ನಿನ್ನ ಶಯನವು ಲಕ್ಷ್ಮಿಯಿಂದ ಎಂದೂ ಶೂನ್ಯವಾಗುವದಿಲ್ಲ. ಅದರಂತೆ ನನ್ನ ಶಯನವು ಎಂದೂ ಶೂನ್ಯವಾಗದಿರಲಿ.'' ಹೀಗೆ ಪ್ರಾರ್ಥಿಸಿ ಶ್ರೀಹರಿಗೆ ಪ್ರೀತಿಯಾಗುವಂತೆ ಪ್ರಾರ್ಥನೆಮಾಡಿ ಮಂಗಳವಾದ್ಯಗಳನ್ನು ಮೊಳಗಿಸಬೇಕು. ಅಷ್ಟು ಶಕ್ತಿ ಇಲ್ಲದಿದ್ದರೆ ಗಂಟೆಯನ್ನು ಬಾರಿಸಬೇಕು. ರಾತ್ರಿ ಎಣ್ಣೆ, ಉಪ್ಪು, ಖಾರಬಿಟ್ಟು ಭೋಜನಮಾಡಬೇಕು. ಮರುದಿನ ಪ್ರಾತಃಕಾಲ ಲಕ್ಷ್ಮೀನಾರಾಯಣರ ಮೂರ್ತಿ ಸಹಿತವಾಗಿ ಶಯ್ಯಾದಾನ, ದೀಪದಾನಗಳನ್ನೂ ಅನ್ನಪಾತ್ರೆಯೊಂದಿಗೆ ದಾನಮಾಡಬೇಕು. ಪಾದುಕೆ, ಚಾಮರ, ಆಸನ, ಹಣ್ಣು, ಆಭರಣ, ಧಾನ್ಯ, ವಸ್ತ್ರ ಮುಂತಾದ ಗೃಹೋಪಯುಕ್ತ ವಸ್ತುಗಳನ್ನು ದಾನ ಮಾಡಬೇಕು. ಯಥಾಶಕ್ತಿ ದಂಪತಿ ಭೋಜನಮಾಡಿಸಿ ಚಿನ್ನದ ಪ್ರತಿಮೆಯನ್ನು ಸಲಕರಣೆಗಳೊಂದಿಗೆ ಜಲಕುಂಭ ಸಹಿತವಾಗಿ ದಾನಮಾಡಬೇಕು. ಈ ಅಶೂನ್ಯಶಯನವ್ರತವನ್ನು ಆಚರಿಸುವದರಿಂದ ಪತಿಪತ್ನಿಯರಿಗೆ ಎಂದೂ ವಿಯೋಗ ಉಂಟಾಗುವದಿಲ್ಲ. ವೈರೂಪ್ಯ, ವೈರಸ್ಯ, ವ್ಯಾಧಿ, ವ್ಯಥೆಗಳಲ್ಲಿ ಒಂದೂ ಒದಗುವದಿಲ್ಲ. ಸೂರ್ಯ, ಚಂದ್ರರಿರುವರೆಗೆ ಈ ವ್ರತ ಮಾಡಿದ ಸತಿಯ ಮಾಂಗಲ್ಯಕ್ಕೆ ಚ್ಯುತಿ ಇಲ್ಲ. ಪಶು, ಪುತ್ರ, ರತ್ನ ಸಂಪದಕ್ಕೆ ಕೊರತೆ ಆಗುವದಿಲ್ಲ. ಈ ವ್ರತವನ್ನು ಆಚರಿಸಿದರೆ ಏಳು ಸಾವಿರದ ಏಳನೂರು ಕಲ್ಪಕಾಲ ವಿಷ್ಣುಲೋಕದಲ್ಲಿ ಮಾನ್ಯತೆ ಪಡೆಯುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಅಂಗಾರಕ ವ್ರತದ ಪ್ರಭಾವ ಮತ್ತೆ ಪರಿಣಾಮ | ಅಧ್ಯಾಯ - ೭೩

**ಈಶ್ವರ ಉವಾಚ**

**ಶೃಣು ಚಾನ್ಯದ್ಭವಿಷ್ಯಂ ಯದ್ರೂಪ ಸಂಪದ್ವಿಧಾಯಕಂ ।**
**ಭವಿಷ್ಯತಿ ಯುಗೇ ತಸ್ಮಿನ್ ದ್ವಾಪರಾಂತೇ ಪಿತಾಮಹ ।**
**ಪಿಪ್ಪಲಾದಸ್ಯ ಸಂವಾದೋ ಯುಧಿಷ್ಠರ ಪುರಸ್ಸರೈಃ ॥**

ಪಿತಾಮಹನೇ, ಸೌಂದರ್ಯ ಮತ್ತು ಸಂಪತ್ತು ಎರಡನ್ನೂ ಕೊಡುವ ಒಂದು ವ್ರತವು ಮುಂದೆ ಭವಿಷ್ಯಕಾಲದಲ್ಲಿ ರೂಪಗೊಳ್ಳಲಿದೆ. ದ್ವಾಪರಯುಗದ ಕೊನೆಯ ಭಾಗದಲ್ಲಿ ಪಿಪ್ಪಲಾದ ಎಂಬ ಮಹರ್ಷಿಗೂ ಯುಧಿಷ್ಠಿರನಿಗೂ ಒಂದು ಸಂವಾದ ನಡೆಯುವದು. ನೈಮಿಷಾರಣ್ಯದಲ್ಲಿ ಪಿಪ್ಪಲಾದ ಎಂಬ ಮಹಾಮುನಿಯು ವಾಸವಾಗಿದ್ದನು. ಧರ್ಮಮೂರ್ತಿಯಾದ ಆ ತಪೋಧನನ ಬಳಿಗೆ ಧರ್ಮಪುತ್ರನಾದ ಧರ್ಮರಾಜನು ಬಂದು ಒಂದು ಪ್ರಶ್ನೆ ಕೇಳಿದನು.

**ಧರ್ಮರಾಜ :-** ಆರೋಗ್ಯ, ಐಶ್ವರ್ಯ, ಧರ್ಮಬುದ್ಧಿ, ಸದ್ಗತಿ, ಶಿವಭಕ್ತಿ, ವಿಷ್ಣುಭಕ್ತಿ, ಹುಟ್ಟಲು ಉಪಾಯವಾವುದು? ಒಟ್ಟಾರೆ ಒಂದೂ ಕುಂದುಕೊರತೆ ಇಲ್ಲದಂತೆ ಯಾವುದೂ ಊನ-ಹೀನವಾಗದಂತೆ ಜೀವನವು ಸುಖ-ಶಾಂತಿ ಸಂತಸಗಳಿಂದ ಒಡಗೂಡುವಂತಾಗಿ ಮುಂದೆ ಸದ್ಗತಿಯಾಗುವಂತೆ ಮಾಡುವ ಯಾವುದಾದರೂ ಒಂದು ವ್ರತವಿದ್ದರೆ ತಿಳಿಸಿರಿ.

**ಪಿಪ್ಪಲಾದ :-** ಮಹಾರಾಜನೇ, ನೀನು ಪ್ರಶ್ನೆ ಮಾಡಿದ್ದು ಒಳ್ಳೆಯದಾಯಿತು. ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರರೂಪವಾಗಿ ಅಂಗಾರಕವ್ರತವೆಂಬ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಅದರ ಹಿನ್ನೆಲೆಯಲ್ಲಿ ಒಂದು ಇತಿಹಾಸವುಂಟು. ಶುಕ್ರಾಚಾರ್ಯ ಹಾಗೂ ವಿರೋಚನರ ಸಂವಾದರೂಪವಾಗಿ ಅದನ್ನು ನಿನಗೆ ತಿಳಿಸುತ್ತೇನೆ ಕೇಳು.

ಪ್ರಹ್ಲಾದನ ಮಗನಾದ ವಿರೋಚನನಿಗೆ ಹದಿನೆಂಟರ ಹರೆಯು. ರೂಪದಲ್ಲಿ ಅವನಿಗೆ ಎಣೆಯಿಲ್ಲ. ಎದುರೂ ಇಲ್ಲ. ಯಾರಿಗೂ ಇರದ ಚೆಲುವು. ಕಣ್ಣುಕುಕ್ಕುವ ಕಾಂತಿ ಮಿಂಚುವ ಮೈ, ಮಿನುಗುವ ಬಣ್ಣ. ಥಳಥಳಿಸುವ ಕಣ್ಣು. ಅವನ ಈ ಅದ್ಭುತ ಹರೆಯದ ಸಿರಿಯ ಸೊಬಗನ್ನು ಕಂಡು ದೈತ್ಯಗುರು ಶುಕ್ರಾಚಾರ್ಯರು ನಕ್ಕು ''ವಿರೋಚನನೇ, ನಿನಗೆ ಕಲ್ಯಾಣವಾಗಲಿ'' ಎಂದು ಹರಿಸಿದರು. ಆಗ ವಿರೋಚನನು ಶುಕ್ರಾಚಾರ್ಯರಿಗೆ ''ನೀವು ನನ್ನನ್ನು ನೋಡಿ ನಕ್ಕಿದ್ದೇಕೆ ? ಮತ್ತು ನನ್ನನ್ನು ನೋಡಿ ಸರಿ ಒಳ್ಳೆಯದು ಎಂದು ಗೋಣುಹಾಕಿ ಸಾಧು-ಸಾಧು ಎಂದು ಹೊಗಳಿದಿರಿ. ಇದಕ್ಕಾದರೂ ಕಾರಣವೇನು ?'' ಎಂದೂ ಕೇಳಿದನು. ಆಗ ವಾಗ್ಮಿಗಳಾದ ಶುಕ್ರಾಚಾರ್ಯರು ಹೀಗೆ ಉತ್ತರ ಹೇಳಿದರು.

''ವ್ರತದ ಮಹಿಮೆಯನ್ನು ನೋಡಿ ನನಗೆ ನಗೆ ಬಂದಿತು. ಹಿಂದಿನ ಒಂದು ಸಂದರ್ಭವು ನನಗೆ ನೆನಪಾಯಿತು. ದಕ್ಷಯಜ್ಞದ ಪ್ರಸಂಗ. ಪರಮೇಶ್ವರನ ಭಯಂಕರ ಕೋಪಾಟೋಪ. ಮುಖವೆಲ್ಲವೂ ಕೋಪದಿಂದ ಕೆಂಪು ಕೆಂಡ. ಹಣೆ ತುಂಬ ಬೆವರಿನ ಹನಿ. ಆ ಹಣೆಯಿಂದ ಒಮ್ಮೆಲೇ ಹೊಮ್ಮಿ ಬಂದ ವೀರಭದ್ರನ ಅವತಾರ. ಅವನಿಗೆ ಬೆಂಕಿಯಂತೆ ಉರಿಯುವ ಕಣ್ಣು. ಸಾವಿರ ಸಂಖ್ಯೆಯಲ್ಲಿ ಕೈಕಾಲುಗಳು, ಬೆಂಕಿಯ ಮೊಟ್ಟೆಯಂತೆ ದಂದಹಿಸುವ ಉಗ್ರ ರೂಪ. ಅವನ ಉಗ್ರ ತೇಜವು ಅತಲ, ವಿತಲ, ಸುತಲ, ರಸಾತಲ, ತಲಾತಲ, ಪಾತಾಲಾದಿ, ಕೆಳಗಿನ ಏಳು ಲೋಕಗಳನ್ನು ಭೇದಿಸಿತು. ಏಳು, ಸಾಗರದ ನೀರು ರಾಶಿಯಲ್ಲಿ ಕತಕತ ಕುದಿತ. ನೋಡಿದಲ್ಲೆಲ್ಲ ಉರಿ. ಆ ವೀರಭದ್ರನು ದಕ್ಷ ಪ್ರಜಾಪತಿಯ ಯಜ್ಞವನ್ನು ಧ್ವಂಸಮಾಡಿ ಮೂರು ಲೋಕಗಳನ್ನು ದಹಿಸತೊಡಗಿದನು.

ಆಗ ಶಂಕರನು ಅವನನ್ನು ತಡೆದು ''ವೀರಭದ್ರ ಈಗ ನೀನು ದಕ್ಷನ ಯಜ್ಞವನ್ನು ಸಂಪೂರ್ಣವಾಗಿ ನಾಶಮಾಡಿದ್ದು ಸಾಕು. ಈಗ ಉಳಿದ ಲೋಕಗಳೂ ನಿನ್ನ ತೇಜಸ್ಸಿನಿಂದ ಸುಡತೊಡಗಿವೆ. ಇದನ್ನು ಇಲ್ಲಿಗೇ ನಿಲ್ಲಿಸು. ಎಲ್ಲ ಗ್ರಹಗಳಿಗೂ ನೀನು ಪ್ರಪ್ರಥಮನಾಗು. ನಿನ್ನನ್ನು ಸೇವಿಸಿದವರಿಗೆಲ್ಲ ಶಾಂತಿ ಸಂತೋಷಗಳನ್ನು ಕೊಡು. ನನ್ನ ವರದಿಂದ ನೀನು ಸೌಮ್ಯರೂಪದಿಂದ ಜನರ ಕಣ್ಣಿಗೆ ಗೋಚರನಾಗು. ಎಲ್ಲರೂ ನಿನ್ನನ್ನು ಪೂಜಿಸಲಿ. ದೇವಲೋಕದಲ್ಲಿ ನಿನ್ನ ರೂಪವು ಅದ್ವಿತೀಯವೆನಿಸುವದು. ನಿನ್ನ ನಾಮವು ಅಂಗಾರಕ ಎಂದು ಪ್ರಸಿದ್ಧಿಯಾಗುವದು. ಚತುರ್ಥಿತಿಥಿಯಂದು ನಿನ್ನನ್ನು ಪೂಜೆಮಾಡಿದವರಿಗೆ ಅಪರೂಪವಾದ ರೂಪ, ಅಖಂಡ ಆರೋಗ್ಯ, ಅಪರಿಮಿತ ಐಶ್ವರ್ಯಗಳು ಲಭಿಸುವವು.'' ಪರಮೇಶ್ವರನ ಅಪ್ಪಣೆಗೆ ತಲೆಬಾಗಿ ಉರಿಯುವ ವೀರಭದ್ರನು ಒಮ್ಮೆಲೇ ಶಾಂತನಾದನು ಮತ್ತು ಶಿವನ ವರಬಲದಿಂದ ಸೌಮ್ಯವಾದ ಗ್ರಹದ ರೂಪವನ್ನು ತಾಳಿದನು. ಒಂದು ದಿನ ಒಬ್ಬ ಶೂದ್ರನು ಗ್ರಹರೂಪದರ್ಶಿ ವೀರಭದ್ರನನ್ನು ಭಕ್ತಿಯಿಂದ ಪೂಜೆಮಾಡಿ ಅರ್ಘ್ಯವನ್ನು ಕೊಡುತ್ತಿದ್ದನು. ಭಕ್ತಿಯುಕ್ತವಾದ ಆ ಪೂಜಾವಿಧಾನವನ್ನು ನೀನು ಕಣ್ಣಿಟ್ಟು ನೋಡಿದೆ. ಆ ಅಂಗಾರಕಗ್ರಹದ ಪೂಜಾದರ್ಶನದ ಪ್ರಭಾವದಿಂದ ಒಮ್ಮೆಲೇ ನಿನ್ನ ಶರೀರದಲ್ಲಿ ಅಪೂರ್ವವಾದ ಕಾಂತಿ ಹೊರ ಹೊಮ್ಮಿತು. ದೇವಲೋಕ ದುರ್ಲಭವಾದ ಸೌಂದರ್ಯವು ಸೂಸತೊಡಗಿತು. ಕಣ್ಣು ಕೋರೈಸುವ ನಿನ್ನ ಬಣ್ಣ ಹಾಗೂ ದೇಹದ ಕಾಂತಿ ಕಿರಣಗಳನ್ನು ಕಂಡು ದೇವದಾನವರೆಲ್ಲರೂ ನಿನ್ನನ್ನು ವಿರೋಚನ ಎಂದು ಕರೆದರು. ನೀನು ಇಲ್ಲಿ ನಿಂತರೆ ನಿನ್ನ ದೇಹದ ಕಾಂತಿಯು ಆಗೋ ಅಲ್ಲಿ ದೂರದ ವರೆಗೂ ಹರಡಿ ಹೊಳೆಯುತ್ತದೆ.

ಓರ್ವ ಶೂದ್ರನು ಮಾಡಿದ ಅಂಗಾರಕ ಗ್ರಹದಪೂಜೆಯನ್ನು ನೋಡಿದ ಮಾತ್ರಕ್ಕೆ ನಿನ್ನ ಮೈಯೆಲ್ಲ ಎಂಥ ಅಪೂರ್ವವಾದ ಚೆಲುವು ಚಿಮ್ಮಿ, ಕಾಂತಿ ಹೊಮ್ಮಿದಂತಾಯಿತಲ್ಲ ! ಎಂದು ಆಶ್ಚರ್ಯವಾಯಿತು. ಆದುದರಿಂದಲೇ ನಾನು ಸಾಧು. ಸಾಧು ಎಂದು ನಿನ್ನನ್ನು ಪ್ರಶಂಸಿಸಿ ಮಾತನಾಡಿದೆ. ಆ ಅಂಗಾರಕ ಗ್ರಹದ

ಪೂಜೆಯನ್ನು ಕೇವಲ ನೋಡಿದ್ದರಿಂದಲೇ ಇಷ್ಟು ಕಾಂತಿ ಬಂದರೆ, ಸ್ವಯಂ ಪೂಜೆ ಮಾಡಿದರೆ ಎಂಥ ಸೌಂದರ್ಯ-ಸೌಭಾಗ್ಯಗಳು ಪ್ರಾಪ್ತವಾಗಬೇಡ !' ವಿರೋಚನ ಆ ಶೂದ್ರನು ಮಾಡಿದ ಅಂಗಾರಕಪೂಜೆ ಹಾಗೂ ಗೋದಾನಾದಿಗಳನ್ನು ನೋಡಿದ್ದರ ಫಲವಾಗಿ ನೀನು ಈಗ ದೈತ್ಯರಾಜನಾದ ಪ್ರಹ್ಲಾದನ ಹೊಟ್ಟೆಯಿಂದ ಹುಟ್ಟಿಬಂದೆ.''ತಪಸ್ಸಿದ್ಧರಾದ ದಿವ್ಯದೃಷ್ಟಿಯ ಶುಕ್ರಾಚಾರ್ಯರ ಈ ಮಾತುಗಳನ್ನು ಕೇಳಿ ಪ್ರಹ್ಲಾದನ ಪುತ್ರ ವಿರೋಚನನಿಗೂ ಪರಮಾಶ್ಚರ್ಯ. ತನ್ನ ಈ ಅದ್ಭುತ ಕಥೆ ಅವನಿಗೂ ಗೊತ್ತಿರಲಿಲ್ಲ. ತನ್ನ ಅಸಾಧಾರಣವಾದ ರೂಪ, ಶ್ರೀ ಸೌಭಾಗ್ಯಗಳ ಹೇತು ಹಿನ್ನೆಲೆಗಳು ಈವರೆಗೂ ಅವನಿಗೆ ತಿಳಿದಿರಲಿಲ್ಲ. ವಿಸ್ಮಯಭರಿತನಾಗಿ ಅವನು ತನ್ನ ಗುರುವನ್ನು ಪ್ರಶ್ನಿಸಿದನು.

**ವಿರೋಚನ :-** ಸ್ವಾಮಿ, ಹೀಗೋ ಸಮಚಾರ, ಪೂಜೆ ಮಾಡಿದ್ದನ್ನು ನೋಡಿ ನನಗೆ ಇಷ್ಟು ಸೌಂದರ್ಯ, ಸೌಭಾಗ್ಯಗಳು ಪ್ರಾಪ್ತವಾದವೇ ? ಹಾಗಾದರೆ ಅದು ಯಾವವ್ರತ ? ಅದರ ಮಹಿಮೆ ಏನು ? ಅದನ್ನು ಮಾಡುವ ವಿಧಾನವಾವುದು ? ಇದೆಲ್ಲವನ್ನು ನನಗೆ ಸರಿಯಾಗಿ ವಿವರವಾಗಿ ತಿಳಿಸಿರಿ.

**ಶುಕ್ರಾಚಾರ್ಯ :-** ಮಂಗಳವಾರ ಚತುರ್ಥಿತಿಥಿ ಬಂದಾಗ ಈ ವ್ರತವನ್ನು ಪ್ರಾರಂಭಿಸಬೇಕು. ಪದ್ಮರಾಗ ಎಂಬ ಕೆಂಪು ಮಣಿಯನ್ನು ಬೆರಳಿನಲ್ಲಿ ಅಥವಾ ತಲೆಯ ಮೇಲೆ ಇಟ್ಟುಕೊಂಡು ಮೃತ್ತಿಕಾ ಸ್ನಾನಮಾಡಿ 'ಅಗ್ನಿ ಮೂರ್ಧಾದಿವಃ' ಎಂಬ ಮಂತ್ರವನ್ನು ಉತ್ತರಕ್ಕೆ ಮುಖಮಾಡಿ ಕುಳಿತು ಜಪಿಸಬೇಕು. ಶೂದ್ರನು ವ್ರತಮಾಡುವವನಿದ್ದರೆ ಮೌನದಿಂದಲೇ ಅಂಗಾರಕನ ಧ್ಯಾನಮಾಡಬೇಕು. ಸೂರ್ಯಾಸ್ತವಾದ ಬಳಿಕ ಅಂಗಳವನ್ನು ಗೋಮಯದಿಂದ ಸಾರಿಸಿ ರಂಗವಲ್ಲಿ ಹಾಕಿ ಅಷ್ಟದಳ ಪದ್ಮವನ್ನು ಬರೆಯಬೇಕು. ಅದರ ನಾಲ್ಕೂ ಕಡೆ ಹೂ, ಹಾರ, ಅಕ್ಷತೆಗಳನ್ನೂ ಏರಿಸಬೇಕು. ಅಕ್ಕಿಕಾಳು ಹಾಕಿ ಪದ್ಮರಾಗ ಮಣಿಗಳನ್ನು ಒಳಗೆ ಇರಿಸಿ ಆ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಕಲಶಗಳನ್ನು ಸ್ಥಾಪನೆಮಾಡಬೇಕು. ನಟ್ಟನಡುವೆ ತುಪ್ಪ ತುಂಬಿದ ಬಂಗಾರದ ಪಾತ್ರೆಯಲ್ಲಿ ಅಂಗುಷ್ಠ ಪ್ರಮಾಣದ ಒಂದು ಬಂಗಾರದ ಪ್ರತಿಮೆಯನ್ನುಮಾಡಿ ಕೂಡಿಸಬೇಕು. ಅದನ್ನು ಜಿತೇಂದ್ರಿಯನೂ ಯಜ್ಞಕಾರ್ಯಗಳಲ್ಲಿ ಅಭಿಜ್ಞನೂ ಕುಟುಂಬಿಯೂ ಆದ ಸದಾಚಾರಿ ಬ್ರಾಹ್ಮಣನಿಗೆ ಮಂತ್ರ ಹೇಳಿ ದಾನಕೊಡಬೇಕು. ಅದರಂತೆ ಚಿನ್ನದ ಕೊಂಬು, ಬೆಳ್ಳಿಯ ಗೊರಸು, ಹಿಂಡುವ ಪಾತ್ರೆ, ಹೊದಿಸಿದ ಬಟ್ಟೆ ಸಹಿತವಾಗಿ ಕರುವಿನಿಂದ ಒಡಗೂಡಿದ ಕಪಿಲ ಗೋವನ್ನೂ, ಹೊಂಬಣ್ಣದ ಎತ್ತನ್ನೂ, ಧನ-ಧಾನ್ಯಗಳನ್ನೂ ಏಳು ವಸ್ತ್ರಗಳನ್ನೂ ದಾನ ಮಾಡಬೇಕು. ದಾನ ಮಾಡುವಾಗ

**''ಭೂಮಿಪುತ್ರ ಮಹಾಭಾಗ ಸ್ವೇದೋದ್ಭವ ಪಿನಾಕಿನಃ''**
**ರೂಪಾರ್ಥೀ ತ್ವಾಂ ಪ್ರಪನ್ನೋऽಹಂ ಗ್ರಹಾಣಾರ್ಘ್ಯಂ ನಮೋಸ್ತುತೇ''**

ಮಹಾನುಭಾವ ಭೂಮಿಪುತ್ರ, ಅಂಗಾರಕನೇ, ನೀನು ಮಹಾದೇವರ ಬೆವರಿನಿಂದ ಉದಿಸಿರುವೆ. ಸೌಂದರ್ಯದ ಅಪೇಕ್ಷೆಯಿಂದ ನಾನು ನಿನಗೆ ಶರಣು ಬಂದಿದ್ದೇನೆ.

ನಾನು ಕೊಟ್ಟ ಪೂಜೆಯನ್ನು ನೀನು ಸ್ವೀಕರಿಸು. ನಿನಗೆ ನನ್ನ ವಂದನೆ. ನನಗೆ ಅನುಗ್ರಹಮಾಡು. ಎಂಬ ಮಂತ್ರವನ್ನು ಹೇಳಬೇಕು. ಯಥಾಶಕ್ತಿ ಶಯ್ಯಾದಾನ, ಗೋದಾನ, ವೃಷಭದಾನ ಅಂಗಾರಕ ಮೂರ್ತಿದಾನ, ಮುಂತಾದವುಗಳನ್ನು ನಡೆಸಬೇಕು. ತಾನು ತನ್ನ ಮನೆಯಲ್ಲಿ ಸಂಸಾರಕ್ಕಾಗಿ ಬಳಸುವ ಪಾತ್ರೆ-ಪರಡಿ ಸಾಮಗ್ರಿ ಸಲಕರಣೆಗಳನ್ನು ನೋಡಿಕೊಂಡು ಅವೆಲ್ಲವೂ ಬ್ರಾಹ್ಮಣ ಕುಟುಂಬದ ಸಂಸಾರಕ್ಕೆ ಉಪಯುಕ್ತ ಎಂದು ತಿಳಿದು ಅವನ್ನೆಲ್ಲ ಹೊಸದು ಮಾಡಿಸಿ ಸದ್ಗುಣಿಯಾದ ಬ್ರಾಹ್ಮಣನಿಗೆ ದಾನಕೊಡಬೇಕು. ಹಗಲು ಊಟಮಾಡದೇ, ರಾತ್ರೀಕಾಲದಲ್ಲಿ ಮಾತ್ರ ಬರೀ ತುಪ್ಪ ಹಾಕಿಕೊಂಡು ಊಟ ಮಾಡಬೇಕು. ಉಪ್ಪು, ಖಾರ ಬಿಟ್ಟು ಉಳಿದ ಸೌಮ್ಯ ಆಹಾರವನ್ನು ತೆಗೆದುಕೊಳ್ಳಬೇಕು. ಹೀಗೆ ಈ ಅಂಗಾರಕವ್ರತವನ್ನು ಎಂಟುಸಲ ಕನಿಷ್ಠ ನಾಲ್ಕು ಸಲವಾದರೂ ಮಾಡಿದರೆ ಅವನಿಗೆ ಪ್ರತಿಯೊಂದು ಜನ್ಮದಲ್ಲಿಯೂ ಜನರು ಅಸೂಯೆಪಡುವಷ್ಟು, ರೂಪ, ಇನ್ನೊಬ್ಬರು ಆಶೆಬಡುವಷ್ಟು ಸೌಭಾಗ್ಯಗಳು ಪ್ರಾಪ್ತವಾಗುವವು. ಶಿವ ಅಥವಾ ವಿಷ್ಣುವಿನ ಭಕ್ತನಾಗಿ ಸಪ್ತದ್ವೀಪಗಳ ಸಾಮ್ರಾಜ್ಯ ಸುಖವನ್ನು ಅವನು ಇಲ್ಲಿ ಇರುವಷ್ಟು ದಿನ ಅನುಭೋಗಿಸುವನು. ಮುಂದೆ ಏಳು ಸಾವಿರಕಲ್ಪ ರುದ್ರಲೋಕದಲ್ಲಿ ಅವನು ಮಾನ್ಯವಾಗಿ ವಾಸಮಾಡುವನು. ಆದುದರಿಂದ ದೈತ್ಯಕುಲ ದೊರೆಯಾದ ವಿರೋಚನನೇ, ನೀನು ಈ ವ್ರತವನ್ನು ಆಚರಿಸು.'' ಹೀಗೆ ಹೇಳಿದ ಶುಕ್ರಾಚಾರ್ಯರು ಅಲ್ಲಿಂದ ಹೊರಟುಹೋದರು. ಗುರುವಿನ ಆಜ್ಞೆಯಂತೆ ವಿರೋಚನನು ಯಥಾಸಾಂಗವಾಗಿ ಅಂಗಾರಕವ್ರತವನ್ನು ಅನುಷ್ಠಾನ ಮಾಡಿದನು.

**ಈಶ್ವರ** :- ಈ ವೃತ್ತಾಂತವನ್ನೆಲ್ಲ ಪಿಪ್ಪಲಾದ ಮುನಿಯು ಧರ್ಮರಾಜನಿಗೆ ತಿಳಿಸಿ ಹೇಳಿದ್ದನ್ನು ಕೇಳಿ. ಅವನಿಗೆ ಪರಮಾನಂದವಾಯಿತು. ಧರ್ಮನಿಷ್ಠನಾದ ಆ ಪಾಂಡುನಂದನನು ಪಿಪ್ಪಲಾದ ಮುನಿಯು ಹೇಳಿದಂತೆ ಈ ಅಂಗಾರಕವ್ರತವನ್ನು ತಾನೂ ಆನಂದದಿಂದ ನೆರವೇರಿಸಿ ದುರ್ಲಭವಾದ ಪುಣ್ಯವನ್ನೂ ಫಲವನ್ನೂ ಪಡೆದನು. ಈ ವ್ರತದ ಮಹಿಮೆ ಹಾಗೂ ವಿಧಿ-ವಿಧಾನಗಳನ್ನು ಶ್ರದ್ಧೆಯಿಂದ ಕೇಳಿದವರಿಗೆ ಪರಮಾತ್ಮನು ಸಿದ್ಧಿಯನ್ನು ಒದಗಿಸುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಶಾಂತಿಗಾಗಿ ಗುರುಶುಕ್ರವ್ರತ

**ಅಧ್ಯಾಯ - ೭೪**

**ಪಿಪ್ಪಲಾದ ಉವಾಚ :**

**ಅಥಾತಃ ಶ್ರುಣು ಭೂಪಾಲ ಪ್ರತಿಶುಕ್ರಂ ಪ್ರಶಾಂತಯೇ ।**
**ಯಾತ್ರಾರಂಭೇಽವಸಾನೇ ಚ ತಥಾ ಶುಕ್ರೋದಯೇತ್ವಿಹ ॥**

**ಪಿಪ್ಪಲಾದ** - ರಾಜನೇ, ಇನ್ನು ಮೇಲೆ ಯಾತ್ರೆಯನ್ನು ಪ್ರಾರಂಭಿಸುವಾಗ ಮತ್ತು ಕೊನೆಯಲ್ಲೂ ಮತ್ತು ಶುಕ್ರೋದಯ ಕಾಲದಲ್ಲಿಯೂ ಶಾಂತಿಗೋಸ್ಕರ ಶುಕ್ರನನ್ನು ಉದ್ದೇಶಿಸಿ ಮಾಡಬೇಕಾದ ಪೂಜಾವಿಧಾನವನ್ನು ಹೇಳುತ್ತೇನೆ. ಬೆಳ್ಳಿ, ಬಂಗಾರ ಅಥವಾ ಕಂಚಿನ ಪಾತ್ರೆಯಲ್ಲಿ ಅಕ್ಕಿ ತುಂಬಿ ಅದರಲ್ಲಿ ಬಿಳಿ ಹೂಗಳನ್ನು ಇರಿಸಿ ಬೆಳ್ಳಿಯ ಶುಕ್ರನ ಪ್ರತಿಮೆಯನ್ನು ಮಾಡಿಸಿ ಇಡಬೇಕು. ಅದಕ್ಕೆ ಮುತ್ತಿನ ಅಲಂಕಾರಮಾಡಬೇಕು. ಅದನ್ನು ಸಾಮವೇದ ಪಂಡಿತನಾದ ಬ್ರಾಹ್ಮಣನಿಗೆ-

**ನಮಸ್ತೇ ಸರ್ವಲೋಕೇಶ ನಮಸ್ತೇ ಭೃಗುನಂದನ ।**
**ಕವೇ ಸರ್ವಾರ್ಥ ಸಿದ್ಧ್ಯರ್ಥಂ ಗೃಹಾಣಾಽರ್ಘ್ಯಂ ನಮೋಽಸ್ತು ತೇ ।।೮।।**

ಸರ್ವಲೋಕಗಳಿಗೂ ಒಡೆಯನಾದ ಭೃಗುಪುತ್ರ ಶುಕ್ರಾಚಾರ್ಯರೇ, ನಿಮಗೆ ನಮಸ್ಕಾರ. ನಮ್ಮ ಅಭೀಷ್ಟಗಳ ಸಿದ್ಧಿಗಾಗಿ ನಿಮಗೆ ಈ ಅರ್ಘ್ಯವನ್ನು ಕೊಡುತ್ತಿದ್ದೇನೆ. ಇದನ್ನು ಸ್ವೀಕರಿಸಿ ಅನುಗ್ರಹಿಸಿರಿ. ನಿಮಗೆ ನಮ್ಮ ವಂದನೆ. ಹೀಗೆ ಶುಕ್ರೋದಯ ಕಾಲದಲ್ಲಿಯೂ ಯಾತ್ರಾಪ್ರಸಂಗದಲ್ಲಿಯೂ ಶುಕ್ರಪೂಜೆ ಮಾಡಿದವನು ಇಹದಲ್ಲಿ ಇಷ್ಟಾರ್ಥ, ಪರದಲ್ಲಿ ವಿಷ್ಣುಲೋಕವನ್ನು ಪಡೆಯುತ್ತಾನೆ. ಈ ಶುಕ್ರನ ಪೂಜೆಯಲ್ಲಿ ಹೂಮಾಲೆ ಹಾಕಿ, ಒಡೆ, ಪೂರಿ, ಇಡ್ಲಿ, ಹೋಳಿಗೆ, ಕಡಬು ಮುಂತಾದ ಪಕ್ವಾನ್ನಗಳನ್ನು ಜನರಿಗೆ ಭೋಜನಮಾಡಿಸಿ ದಾನದಕ್ಷಿಣೆಯನ್ನಿಟ್ಟು ಚೆನ್ನಾಗಿ ನೆರವೇರಿಸಿದರೆ, ಸಕಲ ಕಾಮನೆಗಳು ಸಿದ್ಧಿಸುವವು. ಇದನ್ನು ಮೂರು ಸಾರಿ ನೆರವೇರಿಸಬೇಕು. ಇದರಂತೆ ಬ್ರಹಸ್ಪತಿಯ ಪೂಜೆಯೂ ಇರುತ್ತದೆ. ದೇವತೆಗಳ ಪುರೋಹಿತರಾದ ಬೃಹಸ್ಪತಿಯ ಬಂಗಾರದ ಪ್ರತಿಮೆಯನ್ನು ಮಾಡಿಸಿ ಅದನ್ನು ಚಿನ್ನದಪಾತ್ರೆಯಲ್ಲಿ ಇಡಬೇಕು. ಯಜಮಾನನು ಪಂಚಗವ್ಯ, ಸಾಸಿವೆ, ಅರಳೆಣ್ಣೆ ಕೂಡಿದ ನೀರಿನಲ್ಲಿ ಸ್ನಾನಮಾಡಿ ಹಳದಿಬಟ್ಟೆಯುಟ್ಟುಕೊಂಡು ಚಂದನವನ್ನು ಧರಿಸಿ ತುಪ್ಪದಿಂದ ಹೋಮಮಾಡಬೇಕು. ಅನಂತರ ಆ ಚಿನ್ನದ ಮೂರ್ತಿಯನ್ನು ಹಸುವಿನೊಂದಿಗೆ ದಾನಮಾಡಬೇಕು. ಆ ಬಳಿಕ ಕೈಮುಗಿದು ದೇವಗುರುವನ್ನು ಈ ಮಂತ್ರದಿಂದ ಪ್ರಾರ್ಥಿಸಬೇಕು.

**ನಮಸ್ತೇಽಂಗಿರಸಾಂ ನಾಥ ವಾಕ್ಪತೇ ಚ ಬೃಹಸ್ಪತೇ ।**
**ಕ್ರೂರಗ್ರಹೈಃ ಪೀಡಿತಾನಾಮಮೃತಾಯ ನಮೋನಮಃ**

ಆ ಅಂಗಿರಸಮುನಿಯ ವಂಶದವರಿಗೆಲ್ಲ ಹಿರಿಯನಾದ ಮತ್ತು ವಾಣಿಯ ಅಧಿದೇವತೆಯಾದ ಬೃಹಸ್ಪತಿಯೇ, ನಿನಗೆ ನಮಸ್ಕಾರ. ಕ್ರೂರ ಗ್ರಹಗಳ ಬಾಧೆಯಿಂದ ಬಳಲುವವರಿಗೆ ನಿನ್ನ ಕರುಣೆಯು ಅಮೃತ ಸೇಚನಮಾಡುತ್ತದೆ. ಇಂಥ ನಿನಗೆ ನಮ್ಮ ಮತ್ತೆ ಮತ್ತೆ ನಮಸ್ಕಾರ.'' ಹೀಗೆ ಸಂಕ್ರಮಣಕಾಲ ಯಾತ್ರಾ ಪ್ರಸಂಗ ಹಾಗೂ ಮಂಗಳಕಾರ್ಯಗಳಲ್ಲಿಯೂ ಈ ಬೃಹಸ್ಪತ್ಯಾಚಾರ್ಯರ ಪೂಜೆ ಮಾಡುವವರ ಕಾಮನೆಗಳು ಪೂರ್ಣವಾಗುವವು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು

—o—

## ಕಲ್ಯಾಣ ಸಪ್ತಮೀವ್ರತ

ಅಧ್ಯಾಯ - ೭೫

**ಬ್ರಹ್ಮ ಉವಾಚ :**

**ಭಗವನ್ ಭವಸಂಸಾರ ಸಾಗರೋತ್ತಾರಕಾರಕ ।**
**ಕಂಚಿದ್ವ್ರತಂ ಸಮಾಚಕ್ಷ್ವ ಸ್ವರ್ಗಾऽರೋಗ್ಯ ಸುಖಪ್ರದಂ ॥**

**ಬ್ರಹ್ಮ** :- ಸದ್ಗುಣಿಯಾದ ಶಿವನೇ, ಸ್ವರ್ಗ, ಆರೋಗ್ಯ ಮತ್ತು ಸೌಖ್ಯವನ್ನು ಕೊಡುವ ಒಂದು ವ್ರತವನ್ನು ನನಗೆ ಹೇಳು. ಸಂಸಾರಸಾಗರದಿಂದ ಮಾನವರನ್ನು ಪಾರುಮಾಡುವ ಪ್ರಭು ಪರಮೇಶ್ವರ ನೀನೆ ಅಲ್ಲವೆ ?

**ಈಶ್ವರ** :- ಸೂರ್ಯ ಸಂಬಂಧಿಯಾದ **ಕಲ್ಯಾಣ ಸಪ್ತಮಿ** ಎಂಬ ವ್ರತವನ್ನು ಮತ್ತು ಪಾಪ ಪರಿಹಾರಕವಾದ **ವಿಶೋಕ ಸಪ್ತಮಿ ಫಲಸಪ್ತಮಿ** ಎಂಬ ವ್ರತಗಳನ್ನು ಹೇಳುತ್ತೇನೆ ಕೇಳು, ಅದರಂತೆ ಶರ್ಕರಾನವಮಿ, ಕಮಲ ಸಪ್ತಮಿ, ಮಂದಾರ ಸಪ್ತಮಿ, ಶುಭಸಪ್ತಮಿ, ಮುಂತಾದ ಅನಂತಫಲಗಳನ್ನು ಈಯುವ ಅನೇಕ ವ್ರತಗಳು ಇರುತ್ತವೆ. ಅವುಗಳ ವಿಧಾನವನ್ನು ಕ್ರಮವಾಗಿ ತಿಳಿಸುತ್ತೇನೆ. ರವಿವಾರ ಕೂಡಿದ ಯಾವದೇ ಶುಕ್ಲ ಪಕ್ಷ ಸಪ್ತಮಿ ತಿಥಿಗೆ ಕಲ್ಯಾಣಿ ಎಂದು ಅಥವಾ ವಿಜಯಾ ಎಂದು ಕರೆಯುವರು. ಆ ದಿನ ಗೋಕ್ಷೀರ ಮಿಶ್ರಿತವಾದ ನೀರಿನಲ್ಲಿಯೇ ಪ್ರಾತಃ ಕಾಲದಲ್ಲಿಯೇ ಸ್ನಾನಮಾಡಿ ಬಿಳಿಬಟ್ಟೆಯನ್ನು ಧರಿಸಬೇಕು. ಅನಂತರ ಪೂರ್ವಕ್ಕೆ ಮುಖಮಾಡಿ ಹೂ ಮತ್ತು ಅಕ್ಷತೆಗಳಿಂದ ಅಷ್ಟದಳ ಪದ್ಮವನ್ನು ಬರೆಯಿಸಿ ನಟ್ಟನಡುವೆ ದುಂಡಗಿನ ಕರಣಿಕೆಯನ್ನು ನಿರ್ಮಿಸಬೇಕು. ಎಲ್ಲ ಕಡೆಗೂ ಸೂರ್ಯನನ್ನು ಕ್ರಮವಾಗಿ ವಿನ್ಯಾಸಮಾಡಬೇಕು. ಒಂದೊಂದು ದಿಕ್ಕಿನಲ್ಲಿ ಒಂದೊಂದು ಸೂರ್ಯನ ಹೆಸರನ್ನು **'ಙ ನಮಃ'** ಶಬ್ದ ಸಹಿತವಾಗಿ ಬರೆಯಬೇಕು. ಪೂರ್ವ ದಿಕ್ಕಿನಲ್ಲಿ 'ತಪನಾಯ ನಮಃ' ಆಗ್ನೇಯದಲ್ಲಿ 'ಮಾರ್ತಂಡಾಯ ನಮಃ' ದಕ್ಷಿಣದಲ್ಲಿ 'ದಿವಾಕರಾಯ ನಮಃ' ನೈಋತ್ಯದಲ್ಲಿ 'ವಿಧಾತ್ರೇ ನಮಃ' ಪಶ್ಚಿಮದಲ್ಲಿ 'ವರುಣಾಯ ನಮಃ' ವಾಯವ್ಯದಲ್ಲಿ 'ಭಾಸ್ಕರಾಯ ನಮಃ' ಉತ್ತರದಲ್ಲಿ 'ವಿಕರ್ತಾಯ ನಮಃ' ಈಶಾನ್ಯದಲ್ಲಿ 'ರವಯೇ ನಮಃ' ಎಂದು ನಮಸ್ಕಾರ

ಪೂರ್ವಕವಾಗಿ ಎಂಟು ದಿಕ್ಕಿನ ಎಂಟು ದಳಗಳಲ್ಲಿ ಸೂರ್ಯದೇವನ ಒಂದೊಂದು ರೂಪವನ್ನು ವಿನ್ಯಾಸ ಮಾಡಬೇಕು. ''ಆದೌ ಅಂತೇಚ ಮಧ್ಯೇಚ ನಮೋಸ್ತು ಪರಮಾತ್ಮನೇ'' ಎಂದು ತುದಿ ಮೊದಲು ಮಧ್ಯಗಳಲ್ಲಿ ಪರಮಾತ್ಮನಿಗೆ ನಮಃ ಎಂದು ಪೂಜಿಸಬೇಕು. ಬಿಳಿಬಟ್ಟೆ, ಹಣ್ಣುಹಂಪಲ ಭಕ್ಷ್ಯ, ಭೋಜ್ಯ, ಹೂ, ಹಣ್ಣು ಗಂಧ, ಧೂಪ, ದೀಪಗಳಿಂದ ಸೂರ್ಯನನ್ನು ನೆಲದ ಮೇಲೆ ಬರೆದು ಭಕ್ತಿಯಿಂದ ಪೂಜಿಸಿ. ಬೆಲ್ಲ, ಉಪ್ಪು, ನೈವೇದ್ಯ ತೋರಿಸಬೇಕು. ಅನಂತರ ವ್ಯಾಹೃತಿ ಮಂತ್ರಹೇಳಿ ಬ್ರಾಹ್ಮಣರನ್ನು ಪೂಜಿಸಿ, ಹಾಲು, ಬೆಲ್ಲ, ತುಪ್ಪ, ಎಳ್ಳು, ತುಂಬಿದ ಪಾತ್ರಗಳನ್ನು ಯಥಾಶಕ್ತಿ ಬಂಗಾರ ಇಟ್ಟುಬ್ರಾಹ್ಮಣರಿಗೆ ದಾನಕೊಡಬೇಕು. ಹೀಗೆ ನಿಯಮದಿಂದ ಮಲಗಿ, ಸ್ನಾನ-ಜಪ ತಪಗಳನ್ನು ಮುಗಿಸಿ ಬ್ರಾಹ್ಮಣರೊಡನೆ ತುಪ್ಪ, ಪಾಯಸ, ಮುಖ್ಯವಾಗಿ ಊಟ ಮಾಡಬೇಕು. ತುಪ್ಪದ ಪಾತ್ರೆ ನೀರಿನ ಕಲಶ ಸಹಿತವಾಗಿ ವೇದ ಪಾರಂಗತ ಬ್ರಾಹ್ಮಣರಿಗೆ ವಿಪುಲ ದಕ್ಷಿಣೆಯನ್ನು ದಾನಮಾಡಬೇಕು. ''ಪ್ರೀಯತಾಂ ಅತ್ರ ಭಗವಾನ್ ಪರಮಾತ್ಮಾ ದಿವಾಕರಃ'' ಸೂರ್ಯರೂಪಿ ಪರಮಾತ್ಮನು ಈ ಕರ್ಮದಿಂದ ಸಂತುಷ್ಟನಾಗಲಿ ಎಂದು ಪ್ರಾರ್ಥಿಸಬೇಕು. ಹೀಗೆ ಹದಿಮೂರು ತಿಂಗಳ ಈ **ಕಲ್ಯಾಣ ಸಪ್ತಮೀ** ವ್ರತವನ್ನುಮಾಡಿ ಕೊನೆಗೆ ಚೆನ್ನಾಗಿ ಹಿಂಡುವ ಹದಿಮೂರು ಹಸುಗಳನ್ನು ಬಟ್ಟೆ ಬಂಗಾರಗಳಿಂದ ಅಲಂಕರಿಸಿ ದಾನಮಾಡಬೇಕು. ಕೊನೆಗೆ ಒಂದು ಗೋದಾನವನ್ನಾದರೂ ಮಾಡಬೇಕು. ಈ ವ್ರತದ ಅನುಷ್ಠಾನದಿಂದ ಇಹದಲ್ಲಿ ಆರೋಗ್ಯ, ಸ್ವರ್ಗದಲ್ಲಿ ಸೌಭಾಗ್ಯ ಪ್ರಾಪ್ತವಾಗುವವು. ಇದನ್ನು ಓದಿ ಕೇಳಿದವರ ಪಾಪ ಪರಿಹಾರವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತೈದನೆಯ ಅಧ್ಯಾಯ ಮುಗಿದುದು*



## ವಿಶೋಕ ಸಪ್ತಮಿವ್ರತ

ಅಧ್ಯಾಯ - ೭೬

**''ವಿಶೋಕ ಸಪ್ತಮೀಂ ತದ್ವದ್ವಕ್ಷ್ಯಾಮಿ ಮುನಿಪುಂಗವ ।**
**ಯಾಮುಪೋಷ್ಯ ನರಃ ಶೋಕಂ ನ ಕದಾಚಿದಿಹಾಶ್ನುತೇ ॥**

**ಈಶ್ವರ :-** ಓ ಮುನಿವರ್ಯಾ, ವಿಶೋಕಸಪ್ತಮೀ ವ್ರತವನ್ನು ಇನ್ನು ಮೇಲೆ ನಿನಗೆ ಹೇಳುತ್ತೇನೆ. ಈ ವ್ರತದಲ್ಲಿ ಉಪವಾಸವಿದ್ದು ವಿಧಿಪೂರ್ವಕವಾಗಿ ಪೂಜೆಯನ್ನು ನೇರವೇರಿಸಿದ ಆ ಮನುಷ್ಯನಿಗೆ ಎಂದೂ ಶೋಕವು ಬರುವದೇ ಇಲ್ಲ. ಮಾಘ ಶುಕ್ಲ ಷಷ್ಠೀ ದಿನ ಕರೀ ಎಳ್ಳಿನಿಂದ ಸ್ನಾನಮಾಡಿ, ಚಿಗಳಿಯನ್ನು ಭಕ್ಷಿಸಿ ಉಪವಾಸವಿದ್ದು ಈ ವ್ರತವನ್ನು ಮಾಡಬೇಕು. ಈ ವ್ರತವು ಮುಗಿಯುವವರೆಗೆ ಬ್ರಹ್ಮಚರ್ಯ ಅಂಗೀಕರಿಸಬೇಕು. ಮರುದಿನ ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಿ ನಿತ್ಯಾನುಷ್ಠಾನ ಜಪ-ತಪಗಳನ್ನು ಮುಗಿಸಿ ಒಂದು ಬಂಗಾರದ ಕಮಲವನ್ನು ಸೂರ್ಯನ ಪೂಜೆಗಾಗಿ ಸಿದ್ಧಪಡಿಸಬೇಕು. ಕರವೀರಪುಷ್ಪದಿಂದ ಸೂರ್ಯನನ್ನು ಅರ್ಚಿಸಬೇಕು.

**"ಯಥಾ ವಿಶೋಕಂ ಭುವನಂ ತ್ವಯ್ಯೈವಾದಿತ್ಯಸರ್ವದಾ ।**
**ತಥಾ ವಿಶೋಕತಾ ಮೇಸ್ತು ತ್ವದ್‌ಭಕ್ತಿಃ ಪ್ರತಿಜನ್ಮನಿ " ॥**

"ಆದಿತ್ಯ ದೇವನೇ, ಪ್ರಪಂಚದ ದುಃಖವೆಲ್ಲವೂ ನಿನ್ನೊಬ್ಬನಿಂದಲೇ ನಶಿಸಲ್ಪಡುತ್ತದೆ. ಹಾಗೆ ನನ್ನ ದುಃಖವನ್ನು ದಯಮಾಡಿ ನಾಶಪಡಿಸು. ನನಗೆ ಯಾವಾಗಲೂ ದುಃಖವಿಲ್ಲದೆ ಸಂತಸವೇ ಇರಲಿ. ಜನ್ಮಜನ್ಮಾಂತರಗಳಲ್ಲಿಯೂ ನಿನ್ನಲ್ಲಿ ನನಗೆ ಭಕ್ತಿ ಅವಿಚ್ಛಿನ್ನವಾಗಿರಲಿ " ಷಷ್ಠೀದಿನ ಹೀಗೆ ಸೂರ್ಯನ ಪೂಜೆಮಾಡಿ ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಬೇಕು. ಗೋಮೂತ್ರ ಪ್ರಾಶನ ಮಾಡಿ ಮಲಗಬೇಕು. ಮರುದಿನ ಬ್ರಾಹ್ಮಣರಿಗೆ ತೃಪ್ತಿಯಾಗುವವರೆಗೆ ಇಚ್ಛಾಭೋಜನ ಮಾಡಿಸಿ ಆ ಬೆಲ್ಲದ ಪಾತ್ರೆ ಸಹಿತವಾಗಿ ಬಂಗಾರದ ಕಮಲವನ್ನು ಎರಡು ಕೆಂಪು ವಸ್ತ್ರಗಳನ್ನು ದ್ವಿಜರಿಗೆ ದಾನ ಮಾಡಬೇಕು. ಸಪ್ತಮಿ ದಿನ ಉಪ್ಪು, ಎಣ್ಣೆ, ವರ್ಜ್ಯ ಮಾಡಿ ಭೋಜನ ಮಾಡಬೇಕು. ಇಡೀ ದಿನ ಮೌನದಿಂದಲೇ ಇರಬೇಕು. ಐಶ್ವರ್ಯವನ್ನು ಬಯಸುವವರು ಪುರಾಣ ಶ್ರವಣ ಮಾಡಬೇಕು. ಮರುವರ್ಷ ಮಾಘ ಶುಕ್ಲ ಸಪ್ತಮೀ ತಿಥಿ ಬರುವವರೆಗೆ ಅಂದರೆ ಒಂದು ವರ್ಷಕಾಲ ಇದೇ ಕ್ರಮದಿಂದ ಶುಕ್ಲ ಕೃಷ್ಣಪಕ್ಷದ ಪ್ರತಿಯಂದು ಸಪ್ತಮೀ ತಿಥಿಯಂದು ಈ ವ್ರತವನ್ನು ಮಾಡುತ್ತಲೇ ಇರಬೇಕು.

ವ್ರತದ ಕೊನೆಗೆ ಬಂಗಾರದ ಕಮಲ ಸಹಿತವಾಗಿ ಕಲಶವನ್ನೂ ದಿಂಬು ಹೊದಿಕೆ ಮೇಲ್ಹಾಸು ಸಹಿತವಾದ ಹಾಸಿಗೆಯನ್ನೂ ಹಾಲುಹಿಂಡುವ ಹಸುವನ್ನೂ ದಾನ ಮಾಡಬೇಕು. ಭೂರಿ ಭೋಜನಮಾಡಿಸಬೇಕು. ಈ ರೀತಿಯಿಂದ ವಿಶೋಕ ಸಪ್ತಮೀ ವ್ರತವನ್ನು ನಡೆಸುವವರು ಯಾವ ಜನ್ಮದಲ್ಲಿಯೂ ದುಃಖ ಕಾಣುವುದಿಲ್ಲ. ಬೇನೆ ಬೀಳುವುದಿಲ್ಲ. ಬಯಸಿದ ಮನೋರಥಗಳೆಲ್ಲ ಕೂಡಲೇ ಈಡೇರುವವು. ನಿಷ್ಕಾಮ ಬುದ್ಧಿಯಿಂದ ಈ ವ್ರತಮಾಡುವವರು ಸಾಯುಜ್ಯ ಮೋಕ್ಷವನ್ನು ಹೊಂದುವರು. ಇದನ್ನು ಓದಿದವರೂ ಕೇಳಿದವರೂ ಇಂದ್ರಲೋಕವನ್ನು ಹೊಂದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿದುದು*

—o—

## ಫಲಸಪ್ತಮೀವ್ರತ

## ಅಧ್ಯಾಯ - ೭೭

**ಅನ್ಯಾಮಪಿ ಪ್ರವಕ್ಷ್ಯಾಮಿ ನಾಮ್ನಾತು ಫಲಸಪ್ತಮೀಂ ।**
**ಯಾಮುಪೋಷ್ಯ ನರಃ ಪಾಪಾದ್ವಿಮುಕ್ತಃ ಸ್ವರ್ಗಭಾಗ್ಭವೇತ್ ॥**

**ಈಶ್ವರ** :- ಫಲಸಪ್ತಮಿ ಎಂಬ ಇನ್ನೂ ಒಂದು ವ್ರತವಿದೆ. ಉಪವಾಸವಿದ್ದು ಅದನ್ನು ಆಚರಿಸಿದ ಮನುಷ್ಯನಿಗೆ ಎಲ್ಲ ಪಾಪಪರಿಹಾರ ಮತ್ತು ಸ್ವರ್ಗಭೋಗ. ಮಂಗಳಕರವಾದ ಮಾರ್ಗಶೀರ್ಷಮಾಸ ಸಪ್ತಮೀದಿನದಂದು ಇದನ್ನು ಆಚರಿಸಬೇಕು. ಬಂಗಾರದ ತಾವರೆಯನ್ನು ಮಾಡಿಸಿ ಸಕ್ಕರೆಯೊಡನೆ

ಅದನ್ನು ಕುಟುಂಬಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು. ಒಂದು ಮಾಸಿತೂಕ ಬಂಗಾರದಿಂದ ಸೂರ್ಯನ ಮೂರ್ತಿಮಾಡಿಸಿ ''ಸೂರ್ಯೋಮೇಪ್ರೀಯತಾಂ'' ಎಂದು ಹೇಳಿ ಮಧ್ಯಾನ್ಹದಲ್ಲಿ ಅದನ್ನು ದಾನಕೊಡಬೇಕು. ಬ್ರಾಹ್ಮಣರನ್ನು ಅಷ್ಟಮಿಯ ದಿನ ಪೂಜೆ ಮಾಡಿ ಭೋಜನಮಾಡಿಸಿ ತಾನು ಕೇವಲ ಹಾಲು ಮಾತ್ರ ಸ್ವೀಕರಿಸಿ ದೇವರಲ್ಲಿ ಈ ವ್ರತದ ಫಲವನ್ನು ಸಮರ್ಪಿಸಬೇಕು. ಹೀಗೆ ಕೃಷ್ಣಪಕ್ಷ ಸಪ್ತಮೀವರೆಗೆ ಪ್ರತಿ ದಿನವೂ ಉಪವಾಸಮಾಡಿ ಇದೇ ಕ್ರಮದಿಂದ ಸಕ್ಕರೆಯ ಪಾತ್ರೆ, ಸುವರ್ಣ ಕಮಲ, ವಸ್ತ್ರ ಪುಷ್ಪಗಳನ್ನು ಬ್ರಾಹ್ಮಣರಿಗೆ ದಾನಕೊಡಬೇಕು. ಪ್ರತಿದಿನವು ಒಂದೊಂದು ತರಹದ ಹಣ್ಣುಗಳನ್ನು ದಾನಕೊಟ್ಟು ಕೊನೆಯ ದಿನ ಬಂಗಾರದ ಹಣ್ಣನ್ನು ದಾನ ಮಾಡಬೇಕು. ಉಭಯ ಪಕ್ಷಗಳ ಸಪ್ತಮೀ ತಿಥಿಯಲ್ಲಿ ಇದೇ ಕ್ರಮದಿಂದ ಒಂದು ವರುಷದವರೆಗೆ ಈ ವ್ರತವನ್ನು ಆಚರಿಸಬೇಕು. ಪ್ರತಿ ಸಪ್ತಮೀಯಂದು ಮುಂದೆ ಹೇಳಿದಂತೆ ಒಂದೊಂದು ಸೂರ್ಯನ ರೂಪವನ್ನು ಧ್ಯಾನ, ಗಾನ, ಭಜನ, ಮಾಡಬೇಕು. ಭಾನು, ಅರ್ಕ, ರವಿ, ಬ್ರಹ್ಮ, ಸೂರ್ಯ, ಶಕ್ರ, ಹರಿ, ಶಿವ, ಶ್ರೀಮಾನ್‌ವಿಭಾವಸು, ತ್ವಷ್ಟ, ವರುಣ, ಎಂದು ಈ ಹನ್ನೆರಡು ಆ ರವಿ ರೂಪಗಳನ್ನು ಕ್ರಮವಾಗಿ ಒಂದೊಂದು ಸಪ್ತಮೀಯಂದು ಕೀರ್ತಿಸಬೇಕು. ವ್ರತದ ಸಮಾಪ್ತಿ ಕಾಲದಲ್ಲಿ ಬ್ರಾಹ್ಮಣದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ ಹೊಂದಾವರೆ ಹಾಗೂ ಶರ್ಕರಾಕಲಶವನ್ನು ದಾನಕೊಡಬೇಕು.

**ಯಥಾ ನ ವಿಫಲಾಃ ಕಾಮಾಃ ತ್ವದ್‌ಭಕ್ತಾನಾಂ ಸದಾ ರವೇ**
**ತಥಾನಂತ ಫಲಾವಾಪ್ತಿರಸ್ತು ಮೇ ಸಪ್ತ ಜನ್ಮಸು ॥**

''ರವಿದೇವನೇ, ನಿನ್ನ ಭಕ್ತರ ಮನೋರಥಗಳು ಎಂದೂ ವಿಫಲವಾಗುವದಿಲ್ಲ. ಅದರಂತೆ ನಾನೂ ನಿನ್ನ ಭಕ್ತ. ನನಗೆ ನಿನ್ನಿಂದ ಮುಂದಿನ ಏಳುಜನ್ಮಗಳಲ್ಲಿ ಅನಂತ ಫಲಪ್ರಾಪ್ತಿಯೂ ಆಗಲಿ.'' ಎಂದು ಪ್ರಾರ್ಥಿಸಬೇಕು. ಈ ವ್ರತವನ್ನು ಮಾಡುವವರ ಸುರಾಪಾನಾದಿ ಪಾಪಗಳೂ ಕೂಡ ಪರಿಹಾರವಾಗಿ ಸೂರ್ಯಲೋಕದಲ್ಲಿ ಪೂಜ್ಯಸ್ಥಾನವು ದೊರಕುತ್ತದೆ. ಅವರ ರೋಗಗಳೆಲ್ಲ ಪರಿಹಾರವಾಗಿ ಹಿಂದುಮುಂದಿನ ೩೧ ತಲೆಮಾರಿನ ವಂಶಜರೆಲ್ಲರೂ ಉದ್ಧಾರವನ್ನು ಹೊಂದುವರು. ಇದನ್ನು ಹೇಳಿ ಕೇಳಿದವರಿಗೆ ಕಲ್ಯಾಣವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು*

—o—

ಶರ್ಕರಾ ಸಪ್ತಮೀವ್ರತ | ಅಧ್ಯಾಯ - ೭೮

**ಶರ್ಕರಾಸಪ್ತಮೀಂ ವಕ್ಷ್ಯೇ ತದ್ವತ್ಕಲ್ಮಷನಾಶಿನೀಂ ।**
**ಆಯುರಾರೋಗ್ಯಮೈಶ್ವರ್ಯಂ ಯಯಾऽನಂತಂ ಪ್ರಜಾಯತೇ ॥**

**ಈಶ್ವರಾ** :- ಶರ್ಕರಾಸಪ್ತಮಿ ದಿವಸಶರ್ಕರಾ ಸಪ್ತಮಿವ್ರತವನ್ನು ಹೇಳುತ್ತೇನೆ. ಇದು ಪಾಪನಾಶಕ. ಇದರಿಂದ ಆಯುಷ್ಯ ಆರೋಗ್ಯ, ಐಶ್ವರ್ಯ ಎಲ್ಲವೂ ಮಿತಿಮೀರಿ ದೊರಕುತ್ತವೆ. ವೈಶಾಖ ಶುಕ್ಲಪಕ್ಷ ಸಪ್ತಮಿ ಮುಂಜಾವು ಬಿಳಿ ಎಳ್ಳು ಕೂಡಿದ ನೀರಿನಿಂದ ಸ್ನಾನ, ಬಿಳಿಗಂಧ, ಲೇಪನ, ಬಿಳಿಪುಷ್ಪ ಧಾರಣಮಾಡಿ ನೆಲದ ಮೇಲೆ ಕುಂಕುಮದಿಂದ ಒಂದು ಕಮಲವನ್ನು ಸ್ಥಂಡಿಲಮೇಲೆ ಬರೆಯಬೇಕು. ನಮಃಸವಿತ್ರಾ ಎಂದು ಗಂಧ ಏರಿಸಿ ಧೂಪ ತೋರಿಸಿ, ದೀಪ ಬೆಳಗಬೇಕು. ಒಂದು ಜಲ ಪೂರ್ಣವಾದ ಕೊಡ ತುಂಬಿ ಇಟ್ಟು, ಅದರ ಮೇಲೆ ಸಕ್ಕರೆ ತುಂಬಿದ ಪಾತ್ರೆಯನ್ನು ಇರಿಸಿ, ಬಿಳಿ ಗಂಧ, ಬಿಳಿ ಬಟ್ಟೆಗಳಿಂದ ಅಲಂಕರಿಸಿ ಅದರಲ್ಲಿ ಚಿನ್ನವನ್ನು ಹಾಕಿ ಈ ಮಂತ್ರದಿಂದ ಪೂಜಿಸಬೇಕು.

**ವಿಶ್ವವೇದಮಯೋ ಯಸ್ಮಾದ್ವೇದವಾದೀತಿ ಪಠ್ಯಸೇ ।**
**ಸರ್ವಸ್ಯಾಮೃತಮೇವ ತ್ವಮತಃ ಶಾಂತಿಂ ಪ್ರಯಚ್ಛ ಮೇ ॥**

"ಓ ದೇವಾ, ನೀನು ಸರ್ವವೇದಸ್ವರೂಪನು. ನಿನ್ನನ್ನು ವೇದವಾದಿಯೆಂದು ಹೇಳುತ್ತಾರೆ. ಎಲ್ಲ ಜಗತ್ತಿಗೂ ಅಮೃತಪ್ರಾಯನು ನೀನು. ಆದಕಾರಣ ನನಗೆ ಶಾಂತಿಯನ್ನು ನೀಡು." ಅನಂತರ ಪಂಚಗವ್ಯವನ್ನು ಕುಡಿದು ಸೂರ್ಯಸೂಕ್ತವನ್ನು ಪಾರಾಯಣಮಾಡುತ್ತ ಆ ಕುಂಭದ ಬಳಿಯಲ್ಲಿಯೇ ಕುಳಿತು ಪುರಾಣವನ್ನು ಕೇಳಬೇಕು. ಅಂದು ರಾತ್ರಿ ಅಲ್ಲಿಯೇ ನೆಲದ ಮೇಲೆ ಮಲಗಬೇಕು. ಹೀಗೆ ಹಗಲು ರಾತ್ರಿ ಪೂಜೆ, ಧ್ಯಾನ, ಶ್ರವಣ, ಸ್ಮರಣಗೈಯುತ್ತ ಅಷ್ಟಮಿದಿನ ನಿತ್ಯ ಕರ್ಮಾನುಷ್ಠಾನಗಳನ್ನುಮಾಡಿ ಅಲ್ಲಿಯೇ ಎಲ್ಲ ಪದಾರ್ಥಗಳನ್ನು ದಾನ ಕೊಡಬೇಕು. ಸಕ್ಕರೆ, ತುಪ್ಪ, ಪಾಯಸ ಮೊದಲಾದ ಮೃಷ್ಟಾನ್ನ ಪರಮಾನ್ನಗಳಿಂದ ಬ್ರಾಹ್ಮಣರ ಭೋಜನಮಾಡಿಸಿ, ತಾನೂ ಕೂಡ ಮೌನದಿಂದ ಎಣ್ಣೆ, ತುಪ್ಪ ಬಿಟ್ಟು ಊಟ ಮಾಡಬೇಕು. ಹೀಗೆ ಪ್ರತಿ ತಿಂಗಳವೂ ಇದೇ ವಿಧಿಯಿಂದ ವ್ರತವನ್ನು ಆಚರಿಸಿ ಕೊನೆಗೆ ಶಯ್ಯಾದಾನ, ಗೋದಾನ, ಶಕ್ತಿ ಇದ್ದರೆ, ಗ್ರಹದಾನ, ಸುವರ್ಣದಾನ, ಚಿನ್ನದ ಅಶ್ವದಾನ ಮುಂತಾದವುಗಳನ್ನು ನೆರವೇರಿಸಬೇಕು. ಹಿಂದೆ ಸೂರ್ಯನು ಅಮೃತ ಕುಡಿಯುವಾಗ ಅವನ ಬಾಯಿಯಿಂದ ಕೆಲವು ಅಮೃತ ಹನಿಗಳು ನೆಲದ ಮೇಲೆ ಬಿದ್ದವು. ಆ ಅಮೃತಬಿಂದುಗಳೇ ಮೊಳಕೆ ಒಡೆದು ಭತ್ತ, ಹೆಸರು, ಕಬ್ಬು, ರೂಪ ತಾಳಿದವು. ಆದುದರಿಂದ ಆ ಕಬ್ಬಿನಿಂದ ಉತ್ಪನ್ನವಾಗುವ ಶರ್ಕರೆಯು ಅತ್ಯಂತ ಶ್ರೇಷ್ಠ ಪವಿತ್ರ. ಅದೇ ಭೂಲೋಕದ ಅಮೃತ. ಸೂರ್ಯನಿಗೆ ಇಷ್ಟ. ಹವ್ಯಕವ್ಯಗಳಲ್ಲಿ ಉಪಯೋಗಿಸಲು ಇದು ಪರಮಪವಿತ್ರ. ಈ ಶರ್ಕರಾಸಪ್ತಮಿ ಅನುಷ್ಠಾನದಿಂದ

ಅಶ್ವಮೇಧದಫಲ. ಸರ್ವದೋಷ ಪರಿಹಾರ. ಪಿತೃಪೌತ್ರ ಸಂತಾನ ಅಭಿವೃದ್ಧಿ. ಪರತ್ರ ಸದ್ಗತಿ. ಒಂದು ಕಲ್ಪಕಾಲ ಸ್ವರ್ಗವಾಸ. ಕೊನೆಗೆ ಪರಮ ಪದಪ್ರಾಪ್ತಿ. ಇದನ್ನು ಹೇಳಿ ಕೇಳಿದವರಿಗೆ ಸೂರ್ಯಲೋಕದಲ್ಲಿ ಮನ್ನಣೆ. ಸುರಸುಂದರಿಯರ ಒಲವು. ಪ್ರೇಮದಿಂದ ದೇವತಾಸ್ತ್ರೀಯರ ಕೈಯಿಂದ ಕೊರಳಿಗೆ ಹಾರ.

ಇತಿ ಮತ್ಸ್ಯ ಮಹಾಪುರಾಣದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

—o—

## ಕಮಲ ಸಪ್ತಮೀವ್ರತ

**ಅಧ್ಯಾಯ - ೭೯**

**ಅತಃ ಪರಂ ಪ್ರವಕ್ಷ್ಯಾಮಿ ತದ್ವತ್ಕಮಲಸಪ್ತಮೀಂ ।**
**ಯಸ್ಯಾಃ ಸಂಕೀರ್ತನಾದೇವ ಸಂತುಷ್ಯತಿ ದಿವಾಕರಃ ॥**

**ಈಶ್ವರ :-** ಇನ್ನು ಮುಂದೆ **ಕಮಲ ಸಪ್ತಮೀ ವ್ರತ**ವನ್ನು ಹೇಳುವೆನು, ಇದರ ಕೀರ್ತನ ಮಾತ್ರದಿಂದಲೇ ಸೂರ್ಯನು ಸಂತೋಷಪಡುತ್ತಾನೆ. ಚೈತ್ರ ಶುಕ್ಲ ಸಪ್ತಮಿ ಬಿಳಿ ಸಾಸಿವೆ ಹಚ್ಚಿಕೊಂಡು ಸ್ನಾನಮಾಡಿ ಬಂಗಾರದ ಎಳ್ಳಿನ ಪಾತ್ರೆಯಲ್ಲಿ ಕಮಲವನ್ನು ಬರೆದು ಜೋಡಿ ವಸ್ತ್ರಹೊದಿಸಿ ಹೂ, ಗಂಧ ಏರಿಸಿ ಮಧ್ಯಾಹ್ನ ಕಾಲದಲ್ಲಿ ಕುಂಕುಮ ಸಹಿತವಾಗಿ ಬ್ರಾಹ್ಮಣನಿಗೆ ದಾನಕೊಡಬೇಕು. ದಾನಮಾಡುವಾಗ

**ನಮಃ ಕಮಲಹಸ್ತಾಯ ನಮಸ್ತೇ ವಿಶ್ವಧಾರಿಣೇ**
**ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಸ್ತುತೇ ।**

''ಕಮಲಹಸ್ತನಿಗೆ ನಮಸ್ಕಾರ. ವಿಶ್ವಧಾರಕನಾದ ನಿನಗೆ ನಮಸ್ಕಾರ. ಹಗಲಿನಲ್ಲಿ ಬೆಳಗುವವನಿಗೆ ನಮಸ್ಕಾರ. ಬೆಳಕನ್ನು ಕೊಡತಕ್ಕವನೇ ನಿನಗೆ ನಮಸ್ಕಾರ'' ಎಂದು ಪ್ರಾರ್ಥಿಸಬೇಕು. ರಾತ್ರಿ ದೇವರಧ್ಯಾನಮಾಡುತ್ತ ಜಾಗರಣೆ ಮಾಡಬೇಕು. ಅಷ್ಟಮಿಯ ದಿನ ತನ್ನ ಯೋಗ್ಯತೆಗೆ ಅನುಸಾರವಾಗಿ ವಿಪ್ರರಿಗೆ ಊಟ ಮಾಡಿಸಿ ಮಾಂಸ ತೈಲ ವರ್ಜ್ಯವಾದ ಭೋಜನವನ್ನು ತಾನೂ ಮಾಡಬೇಕು. ಹೀಗೆ ಒಂದು ವರ್ಷದವರೆಗೆ ಪ್ರತಿ ಶುಕ್ಲ ಪಕ್ಷ ಸಪ್ತಮಿಯಂದು ಜಿಪುಣತನಮಾಡದೆ, ವಿಧಿಪೂರ್ವಕವಾಗಿ ಈ ವ್ರತವನ್ನುಮಾಡಬೇಕು. ಕೊನೆಗೆ ಹೊಂದಾವರೆ ಸಹಿತ ಹಾಸಿಗೆ, ಹಾಲು ಹಿಂಡುವ ಹಸು, ಪಾತ್ರೆ ಅಲಂಕಾರ ಸಹಿತವಾಗಿ ದಾನ ಮಾಡಬೇಕು. ಹೀಗೆ ಕಮಲಸಪ್ತಮಿ ವ್ರತವನ್ನುಮಾಡುವವರಿಗೆ ಅಪಾರಸಂಪತ್ತು ಸೂರ್ಯಲೋಕಸತ್ಕಾರ ಲಭ್ಯವಾಗುವವು. ಪ್ರತಿಯೊಂದು ಕಲ್ಪದಲ್ಲಿ ಒಂದೊಂದು ಲೋಕದಂತೆ ಏಳುದಿವ್ಯಲೋಕಗಳಿಗೆಹೋಗಿ ಅಪ್ಸರೆಯೊಡನೆ ಸುಖಾನುಭೋಗಗಳನ್ನು ಮಾಡಿ, ಕೊನೆಗೆ ಉತ್ತಮಗತಿಹೊಂದುವರು. ಈ ಕಮಲಸಪ್ತಮೀ ವ್ರತವನ್ನು ಓದಿ, ಕೇಳಿ, ಹೇಳಿ ಹೆರವರಿಗೆ ಬೋಧಿಸಿದವರಿಗೆ ಶಾಶ್ವತ, ಸಂಪದ, ಸದಾ ಸಂತೋಷ, ಗಂಧರ್ವಲೋಕ ಪ್ರಾಪ್ತಿ.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು

—o—

**ಈಶ್ವರ ಉವಾಚ**

**ಅಥಾತಃ ಸಂಪ್ರವಕ್ಷ್ಯಾಮಿ ಸರ್ವಪಾಪ ಪ್ರಣಾಶಿನೀಂ ।**
**ಸರ್ವಕಾಮಪ್ರದಾಂ ರಮ್ಯಾಂ ನಾಮ್ನಾಮಂದಾರಸಪ್ತಮೀಂ ॥**

**ಈಶ್ವರ** :- ಇನ್ನು ಮುಂದೆ ಎಲ್ಲ ಜನರ ಎಲ್ಲ ಪಾಪಗಳನ್ನು ಪರಿಹರಿಸಿ,ಎಲ್ಲರ ಇಷ್ಟಾರ್ಥಗಳನ್ನು ಸಲ್ಲಿಸುವ ಮಂದಾರಸಪ್ತಮಿ ಎಂಬ ಒಂದು ದಿವ್ಯವಾದ ವ್ರತವನ್ನು ಹೇಳುತ್ತೇನೆ. ಮಾಘ ಶುಕ್ಲ ಪಂಚಮಿಯ ದಿನದಂದು ಅಲ್ಪಾಹಾರ ತೆಗೆದುಕೊಂಡು ಷಷ್ಠೀದಿನ ಪೂರ್ಣ ಉಪವಾಸಮಾಡಬೇಕು. ರಾತ್ರಿ ಪಾರಿಜಾತ ಕುಸುಮವನ್ನು ಪ್ರಾಶನ ಮಾಡಿ, ಮರುದಿನ ಯಥಾಶಕ್ತಿ ದ್ವಿಜರ ಭೋಜನ ಮಾಡಿಸಬೇಕು. ಎಂಟು ಪಾರಿಜಾತ ಹೂಗಳನ್ನು ಮತ್ತು ಕೈಯಲ್ಲಿ ಕಮಲಹಿಡಿದ ಒಂದು ಗಂಡು ಪ್ರತಿಮೆಯನ್ನೂ ಮಾಡಿಸಬೇಕು. ತಾಮ್ರಪಾತ್ರದಲ್ಲಿ ಕರಿಎಳ್ಳಿನಿಂದ ಎಂಟು ಎಸಳಿನ ಕಮಲವನ್ನು ರಚಿಸಿ ಒಂದೊಂದು ದಳದ ಮೇಲೆ ಸೂರ್ಯನ ಹೆಸರಿನಿಂದ ಒಂದೊಂದು ಚಿನ್ನದ ಮಂದಾರದ ಹೂಗಳನ್ನು ಏರಿಸಬೇಕು.

'ಭಾಸ್ಕರಾಯನಮಃ' ಎಂದು ಪೂರ್ವದಿಕ್ಕಿನ ಎಸಳಿನ ಮೇಲೆ ಬಂಗಾರದ ಕುಸುಮವನ್ನು ಅರ್ಪಿಸಬೇಕು. 'ಅರ್ಕಾಯನಮಃ' ಎಂದು ದಕ್ಷಿಣದಲ್ಲಿ, 'ಆರ್ಯಮಣೇನಮಃ' ಎಂದು ನೈಋತ್ಯದಲ್ಲಿ 'ವೇದಧಾಮ್ನೇನಮಃ' ಎಂದು ಪಶ್ಚಿಮದಲ್ಲಿ, 'ಚಂಡಭಾನವೇನಮಃ' ಎಂದು ವಾಯವ್ಯದಲ್ಲಿ, 'ಪೂಷ್ಣೇನಮಃ' ಎಂದು ಉತ್ತರದಲ್ಲಿ, 'ಆನಂದಾಯನಮಃ' ಎಂದು ಈಶಾನ್ಯದಲ್ಲಿ ಪುಷ್ಪವನ್ನು ಅರ್ಚಿಸಿ ಪೂಜೆಮಾಡಬೇಕು. 'ಸರ್ವಾತ್ಮನೇನಮಃ' ಎಂದು ಕರಣಿಕಾಗ್ರದಲ್ಲಿ ಪುರುಷವಿಗ್ರಹವನ್ನು ಸ್ಥಾಪಿಸಬೇಕು. ಅದಕ್ಕೆ ಬಿಳಿಬಟ್ಟೆಗಳನ್ನು ಹೊದಿಸಿ ಹೂ, ಹಣ್ಣು, ಭಕ್ಷ್ಯ, ಭೋಜ್ಯಗಳನ್ನು ದೇವರಿಗೆ ಸಮರ್ಪಿಸಿ, ವಿಧಿಪೂರ್ವಕವಾಗಿ ಪೂಜೆಗೈದು ಅವೆಲ್ಲವನ್ನೂ ಭೂಸುರರಿಗೆ ದಾನಕೊಡಬೇಕು. ಅನಂತರ ಬ್ರಹ್ಮಭೋಜನಮಾಡಿಸಿ ಯಜಮಾನನು ಎಣ್ಣೆ, ಉಪ್ಪು ವರ್ಜಿಸಿ ಊಟ ಮಾಡಬೇಕು. ಈ ವಿಧಾನದಿಂದ ಒಂದು ವರ್ಷದವರೆಗೆ ಪ್ರತಿತಿಂಗಳು ಈ ಸಪ್ತಮೀ ವ್ರತವನ್ನುಮಾಡಿ ಕೊನೆಗೆ ಸುವರ್ಣಪ್ರತಿಮೆ ಮುಂತಾದವುಗಳನ್ನು ಕಲಶದ ಮೇಲೆ ಇಟ್ಟು ಆಕಳು ಕರುಸಹಿತವಾಗಿ ದಾನ ಮಾಡಬೇಕು.

**ನಮೋ ಮಂದಾರನಾಥಾಯ ಮಂದಾರಭವನಾಯ ಚ ।**
**ತ್ವಂ ರವೇ ತಾರಯಸ್ವಾಸ್ಮಾನ್ ಸಂಸಾರಭಯಸಾಗರಾತ್ ॥**

''ಮಂದಾರ ಕುಸುಮದ ಅಧಿದೇವತೆಗೂ ಮಂದಾರಪುಷ್ಪದಲ್ಲಿ ವಾಸಿಸುವವನಿಗೂ ನಮಸ್ಕಾರ. ಓ ! ಸೂರ್ಯದೇವ, ಸಂಸಾರವೆಂಬ ಸಾಗರದಿಂದ ನಮ್ಮನ್ನು ಪಾರುಮಾಡು. ಹೀಗೆ ದೇವರನ್ನು ಪ್ರಾರ್ಥಿಸಿ ಈ ವ್ರತವನ್ನು ಮಾಡುವ ಮನುಷ್ಯನು ಒಂದು ಕಲ್ಪಕಾಲ ಸ್ವರ್ಗದಲ್ಲಿ ಸಂತೋಷಪಡುವನು. ಇದನ್ನು ಓದುವವರೂ ಕೇಳುವವರೂ ಪಾಪಮುಕ್ತರಾಗುತ್ತಾರೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತನೆಯ ಅಧ್ಯಾಯ ಮುಗಿದುದು*

**ಶ್ರೀ ಭಗವಾನ್ ಉವಾಚ**

**ಅಥಾನ್ಯಾಮಪಿ ವಕ್ಷ್ಯಾಮಿ ಶೋಭನಾಂ ಶುಭಸಪ್ತಮೀಂ ।**
**ಯಾಮುಪೋಷ್ಯ ನರೋ ರೋಗ ಶೋಕ ದುಃಖೈಃ ಪ್ರಮುಚ್ಯತೇ ॥**

**ಭಗವಂತ :-** ಮುಂದೆ ಶುಭಸಪ್ತಮಿ ಎಂಬ ಮತ್ತೊಂದು ಮಂಗಳಕರವಾದ ವ್ರತವನ್ನು ಹೇಳುತ್ತೇನೆ. ಇದನ್ನು ನೆರವೇರಿಸಿ ಉಪವಾಸವಿರತಕ್ಕವನು ರೋಗ, ಶೋಕ, ದುಃಖ ಇವುಗಳಿಂದ ಬಿಡುಗಡೆ ಹೊಂದುತ್ತಾನೆ.

ಪುಣ್ಯಕರವಾದ ಆಶ್ವೀನಶುದ್ಧ ಸಪ್ತಮಿ ಬೆಳಿಗ್ಗೆ ಸ್ನಾನ, ಜಪ, ಅನ್ಹಿಕಗಳನ್ನು ಮುಗಿಸಿಕೊಂಡು ಹಿರಿಯರ ಆಶೀರ್ವಾದ ಪಡೆದು ಈ ವ್ರತವನ್ನು ಆರಂಭಿಸಬೇಕು. ಗೋಪೂಜೆಮಾಡಿ ಕಪಿಲಧೇನುವನ್ನು ''ನಮಾಮಿಸೂರ್ಯಸಂಭೂತಿಮ್, ಕಪಿಲಾಮ್ ಸರ್ವಸಿದ್ಧಯೇ'' ಎಂದು ಪ್ರಾರ್ಥನೆ ಮಾಡಬೇಕು. ಅನಂತರ ಮಧ್ಯಾಹ್ನ ಕಾಲದಲ್ಲಿ ತುಪ್ಪ, ಪಾಯಸ, ಬೆಲ್ಲ ಬಗೆಬಗೆಯ ಹಣ್ಣು ಹಂಪಲ, ಭಕ್ಷ್ಯ ಭೋಜ್ಯಗಳನ್ನು ಎಳ್ಳುತುಂಬಿದ ತಾಮ್ರದ ಪಾತ್ರೆಯನ್ನು ಬಂಗಾರದ ಒಂದು ಎತ್ತನ್ನು 'ಅರ್ಯಮಾಪ್ರೀಯತಾಂ' ಸೂರ್ಯನುಪ್ರೀತನಾಗಲಿ ಎಂದು ಹೇಳಿ ದಾನಮಾಡಬೇಕು. ಪಂಚಗವ್ಯ ಪ್ರಾಶನ ಮಾಡಿ ನೆಲದ ಮೇಲೆ ಮಲಗಬೇಕು. ಮರುದಿನ ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಿ ಒಂದುಜೋಡಿ ವಸ್ತ್ರ, ಬಂಗಾರದ ಎತ್ತು, ಆಕಳುಗಳ ಪ್ರತಿಮೆಗಳನ್ನು ದಾನಕೊಡಬೇಕು. ವರ್ಷದಕೊನೆಯಲ್ಲಿ ಸುಸಜ್ಜಿತವಾದ ಹಾಸಿಗೆ, ಕಬ್ಬು ಬೆಲ್ಲ ಸಂಸಾರಕ್ಕೆ ಬೇಕಾಗುವ ಪಾತ್ರೆಗಳು, ಆಸನ, ಎಳ್ಳಿನ ತಾಮ್ರಪಾತ್ರೆ ಮುಂತಾದವುಗಳನ್ನೂ ''ವಿಶ್ವಾತ್ಮಾಪ್ರೀಯತಾಂ'' ವಿಶ್ವಾಂತರ್ಯಾಮಿಯು ಪ್ರೀತನಾಗಲಿ ಎಂದಂದು ವೇದ ವಿದ್ವಾಂಸನಿಗೆ ದಾನ ಕೊಡಬೇಕು. ಈ ಕ್ರಮದಿಂದ ಈ ಶುಭಸಪ್ತಮೀ ವ್ರತವನ್ನು ಆಚರಿಸುವವರಿಗೆ ಪ್ರತಿ ಜನ್ಮದಲ್ಲಿಯೂ ಇಲ್ಲಿ ಕೀರ್ತಿ ಸಂಪತ್ತು. ಮೇಲೆ ಕಲ್ಪಕಾಲದವರೆಗೆ ಸ್ವರ್ಗವಾಸ, ಪುನಃ ಕಲ್ಪಾದಿಯಲ್ಲಿ ಜನ್ಮತಳೆದು ಸಪ್ತದ್ವೀಪಗಳ ಆಧಿಪತ್ಯ. ಇದರ ಅನುಷ್ಠಾನದಿಂದ ಭ್ರೂಣಹತ್ಯೆ ನೂರಕ್ಕೆ ಮಿಕ್ಕಿರಲಿ, ಬ್ರಹ್ಮಹತ್ಯೆ ಸಾವಿರವಿರಲಿ. ಎಲ್ಲವೂ ಪರಿಹಾರವಾಗುವುವು. ಇದನ್ನು ಓದುವವರು, ಒಂದುಮುಹೂರ್ತ ವಾದರೂ ಕೇಳುವವರು, ಇದರ ವಿಧಾನವನ್ನು ನೋಡುವವರು ಸರ್ವಪಾಪ ಮುಕ್ತರಾಗಿ ವಿದ್ಯಾಧರಲೋಕದ ಆಧಿಪತ್ಯವನ್ನು ಪಡೆಯುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೊಂದನೆಯ ಅಧ್ಯಾಯ ಮುಗಿದುದು*

—o—

## ವಿಶೋಕದ್ವಾದಶೀವ್ರತ

ಅಧ್ಯಾಯ - ೮೨

ಮನು-

**ಕಿಮಭೀಷ್ಟವಿಯೋಗ ಶೋಕಸಂಘಾದಲಮುದ್ಧರ್ತುಮುಪೋಷಣಂ ವ್ರತಂವಾ।**
**ವಿಭವೋದ್ಭವಕಾರಿ ಭೂತಲೇsಸ್ಮಿನ್ ಭವಭೀತೇರಪಿ ಸೂದನಂ ಚ ಪುಂಸಃ।**

**ಮನು** :- ಇಷ್ಟ ಜನರ ವಿಯೋಗ ಹಾಗೂ ದುಃಖಪರಂಪರೆಗಳಿಂದ ಜನರನ್ನು ಪಾರುಮಾಡಬಲ್ಲ ವ್ರತವು ಇದೆಯೇ ? ಉಪೋಷಣ ಉಂಟೇ, ಈ ಭೂಲೋಕದಲ್ಲಿ ಸಂಸಾರದ ಭಯಾಪಾಯಗಳನ್ನು ಕಳೆದು ವೈಭವವನ್ನು ತಂದುಕೊಡುವ ಉಪಾಯ ಯಾವುದು ? ತಿಳಿಸಿರಿ.

**ಮತ್ಸ್ಯ** :- ನಿನ್ನ ಪ್ರಶ್ನೆ ಜಗತ್ತಿಗೇ ಹಿತಕರ. ಇದಕ್ಕೆ ನಾನು ಹೇಳಲಿರುವ ಉತ್ತರ ದೇವತೆಗಳಿಗೂ ಗೊತ್ತಿಲ್ಲ. ನಿನ್ನ ಭಕ್ತಿಯನ್ನು ಅನುಲಕ್ಷಿಸಿ ದೇವಗುಹ್ಯವಾದ ಆ ವ್ರತವನ್ನು ನಿನಗೆ ಬಿತ್ತರಿಸುವೆನು ಕೇಳು. ಅಶ್ವಿನ ಮಾಸದಲ್ಲಿ ವಿಶೋಕದ್ವಾದಶೀ ವ್ರತವನ್ನು ಆಚರಿಸಬೇಕು. ಶುಕ್ಲ ಪಕ್ಷದ ದಶಮಿ ಒಂದೇ ಹೊತ್ತು ಊಟ ಮಾಡಿ ಈ ವ್ರತವನ್ನು ಪ್ರಾರಂಭಿಸಬೇಕು. ''ಏಕಾದಶಿ ಉಪವಾಸಮಾಡಿ ದ್ವಾದಶಿ ಪ್ರಾತಃಕಾಲದಲ್ಲಿ ಲಕ್ಷ್ಮೀನಾರಾಯಣರನ್ನು ಶಾಸ್ತ್ರೋಕ್ತವಾಗಿ ಪೂಜಿಸಿ, ಪಾರಣೆ ಮಾಡುವೆನು,'' ಎಂದು ಸಂಕಲ್ಪಗೈದು ದಶಮಿರಾತ್ರಿ ಶಯನಮಾಡಬೇಕು. ಮರುದಿನ ಬೆಳಗ್ಗೆ ಎದ್ದು, ಪಂಚಗವ್ಯೋದಕದಿಂದ ಸ್ನಾನಮಾಡಿ ಕಮಲ ಪುಷ್ಪಗಳಿಂದ ಶ್ರೀ ಹರಿಯನ್ನು ಪೂಜಿಸಬೇಕು.

'ವಿಶೋಕಾಯನಮಃ' ಎಂದು ವಿಷ್ಣುವಿನ ಪಾದಗಳನ್ನು 'ವರದಾಯನಮಃ' ಎಂದು ಮೊಣಕಾಲುಗಳನ್ನು, 'ಶ್ರೀಶಾಯನಮಃ' ಎಂದು ಮಂಡಿ, 'ಜಲಶಾಯಿನೇನಮಃ' ಎಂದು ತೊಡೆ, 'ಕಂದರ್ಪಾಯನಮಃ' ಎಂದು ಗುದಸ್ಥಲ, 'ಮಾಧವಾಯನಮಃ' ಎಂದು ಸೊಂಟ. 'ದಾಮೋದರಾಯ' ಹೊಟ್ಟೆ, 'ವಿಪುಲಾಯ' ಪಾರ್ಶ್ವ, 'ಪದ್ಮನಾಭಾಯ' ನಾಭಿ, 'ಮನ್ಮಥಾಯ' ಹೃದಯ, 'ಶ್ರೀಧರಾಯ' ಎಂದು ಎದೆ, 'ಮಧುಸೂಧನಾಯನಮಃ' ಎಂದು ಕೈ **ಚಕ್ರಿಣೇ** ಎಂದು ಎಡತೋಳು **'ಗದಿನೇನಮಃ'** ಎಂದು ಬಲತೋಳು, 'ವೈಕುಂಠಾಯ' ಎಂದು ಕೊರಳು, 'ಯಜ್ಞ ಮುಖಾಯ' ಮುಖ, 'ಅಶೋಕನಿಧಯೇ' ಎಂದು ಮೂಗು, 'ವಾಸುದೇವಾಯ' ಎಂದು ಕಣ್ಣು 'ಹರಯೇನಮಃ' ಎಂದು ಹುಬ್ಬು, 'ಮಾಧವಾಯ' ಎಂದು ಮುಂಗುರುಳು, 'ವಿಶ್ವರೂಪಿಣೇ ನಮಃ' ಎಂದು ಕಿರೀಟವನ್ನು ಹೂಗಳಿಂದ ಅರ್ಪಿಸಬೇಕು. ಕೊನೆಗೆ 'ಸರ್ವಾತ್ಮನೇನಮಃ' ಎಂದು ತಲೆಯನ್ನು ಪೂಜಿಸಬೇಕು. ಹೀಗೆ ನಮಃ ಶಬ್ದಪೂರ್ವಕವಾಗಿ ದೇವರ ಒಂದೊಂದು ಹೆಸರು ಹೇಳಿ ಒಂದೊಂದು

ಅವಯವ ಮುಟ್ಟಿ ಹೂ ಏರಿಸಿ, ಗಂಧ ಬಳಿದು, ಹಾರಹಾಕಿ ಗೋವಿಂದನನ್ನು ಪೂಜಿಸಬೇಕು. ಅನಂತರ ಸ್ಥಂಡಿಲಮಂಡಲಗಳನ್ನು ಮಾಡಬೇಕು, ಸ್ಥಂಡಿಲವು ಚೌಕಾಗಿ ಒಂದು ಮೊಳ ಅಳತೆಯದು ಇದ್ದು ಉತ್ತರಕ್ಕೆ ಇಳುಕಲಿರಬೇಕು. ಸುತ್ತಲೂ ಮೂರು ಅಂಗುಲ ಎತ್ತರ, ಎರಡು ಅಂಗುಲ ಅಗಲ, ಮೆಟ್ಟಲುಗಳ್ನು ನಿರ್ಮಿಸಬೇಕು. ಸ್ಥಂಡಿಲದ ಮೇಲ್ಗಡೆಯ ಗೋಡೆ ಎಂಟು ಅಂಗುಲ ಇರಬೇಕು. ಒಂದು ಮೊರದಲ್ಲಿ ನದೀತೀರದ ಮರಳಿನಿಂದ ಲಕ್ಷ್ಮಿಯ ಪ್ರತಿಮೆಯನ್ನು ಮಾಡಿ ಆ ಸ್ಥಂಡಿಲದಲ್ಲಿಟ್ಟು ಈ ಕೆಳಗಿನ ಮಂತ್ರದಿಂದ ದೇವಿಯನ್ನು ಪೂಜಿಸಬೇಕು.

**ನಮೋ ದೇವ್ಯೈನಮಃ ಶಾಂತ್ಯೈನಮೋ ಲಕ್ಷ್ಮ್ಯೈನಮಃ ಶ್ರಿಯ್ಯೈ ।**
**ನಮಃಪುಷ್ಟ್ಯೈ ನಮಃಸ್ತುಷ್ಯೈ ಹೃಷ್ಟ್ಯೈವ್ಯಷ್ಟ್ಯೈನಮೋನಮಃ !**
**ವಿಶೋಕಾ ದುಃಖನಾಶಾಯ ವಿಶೋಕಾ ವರದಾಸ್ತು ಮೇ**
**ವಿಶೋಕಾಚಾಸ್ತು ಸಂಪತ್ತ್ಯೈ ವಿಶೋಕಾಸರ್ವಸಿದ್ಧಯೇ ।**

''ದೇವಿಗೆ ನಮಸ್ಕಾರ, ಶಾಂತಿಗೆ ನಮಸ್ಕಾರ, ಲಕ್ಷ್ಮಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ, ಪುಷ್ಟಿಗೆ ನಮಸ್ಕಾರ, ತುಷ್ಟಿಗೆ ನಮಸ್ಕಾರ, ವೃಷ್ಟಿಗೂ, ಹೃಷ್ಟಿಗೂ ನಮಸ್ಕಾರ, ನಮಸ್ಕಾರ. ಶೋಕರಹಿತಳಾದ ಲಕ್ಷ್ಮಿಯು ನನ್ನ ದುಃಖವನ್ನು ನಾಶಪಡಿಸಲಿ. ನನಗೆ ವರವನ್ನು ಅನುಗ್ರಹಿಸಲಿ, ಸಂಪತ್ತನ್ನು ಕರುಣಿಸಲಿ, ಸರ್ವಸಿದ್ಧಿಗಳನ್ನೂ ದಯೆಗೈಯಲಿ.'' ಅನಂತರ ಲಕ್ಷ್ಮೀದೇವಿಯನ್ನು ಬರೆದ ಮೊರವನ್ನು ಬಿಳಿಯಬಟ್ಟೆಯಿಂದ ಹೊದಿಸಿ ಹಣ್ಣು ಹಾಗೂ ಬಂಗಾರದ ಕಮಲದಿಂದ ಪೂಜಿಸಬೇಕು. ಈ ವ್ರತವನ್ನು ಆಚರಿಸುವಾಗ ಯಜಮಾನನು ತೀರ್ಥಪ್ರಾಶನದ ಹೊರತು ಏನನ್ನೂ ತಿನ್ನಬಾರದು. ಕುಡಿಯಬಾರದು. ಅಂದು ರಾತ್ರಿ ಜಾಗರಣೆಮಾಡಿ ದೇವಗುಣಗಾನ ರೂಪವಾದ, ಗಾಯನ, ನರ್ತನ ಸೇವೆ ಮುಂತಾದವು ಗಳನ್ನು ನಡೆಸಬೇಕು. ಮರುದಿನ ಪ್ರಾತಃಕಾಲದಲ್ಲಿಯೇ ದಂಪತಿಪೂಜೆ ಬ್ರಹ್ಮಭೋಜನಗಳನ್ನು ಮಾಡಿ ತಾನೂ ಅವರ ಅಪ್ಪಣೆಯಿಂದ ಪುರಾಣ ಶ್ರವಣ ಮಾಡಬೇಕು.''

''ಅಂದಿನ ರಾತ್ರಿ ಗೀತ ವಾದ್ಯ ನೃತ್ಯೋತ್ಸವವನ್ನು ನಡೆಸಬೇಕು. ಮರುದಿನ ಪ್ರಾತಃಕಾಲದಲ್ಲಿ ಎದ್ದು ಬ್ರಾಹ್ಮಣರ ಮನೆಗೆ ಹೋಗಿ ದಂಪತಿಗಳು ಇನ್ನೂ ಹಾಸಿಗೆಯ ಮೇಲೆ ಇರುವಾಗಲೇ ಗಂಧ ಪುಷ್ಪ ವಸ್ತ್ರಗಳಿಂದ ಪೂಜೆಮಾಡಿ ''ನಮೋಸ್ತುಜಲಶಾಯಿನೇ'' ಸಮುದ್ರಶಾಯಿಯಾದ ಶ್ರೀ ಹರಿಗೆ ನಮಸ್ಕಾರ ಎಂದು ಅಂತರ್ಯಾಮಿ ಪರಮಾತ್ಮನನ್ನು ಪೂಜಿಸಿ ದಂಪತಿಪೂಜೆಮಾಡಬೇಕು. ಅವರಿಗೆ ಭೋಜನಕ್ಕೆಬರಲು ಆಮಂತ್ರಣ ಕೊಟ್ಟು ಮೃಷ್ಟಾನ್ನ ಭೋಜನ ಮಾಡಿಸಿ, ಪುರಾಣಶ್ರವಣಮಾಡಬೇಕು. ಮತ್ತು ಆ ದಂಪತಿಗಳಿಗೆ ಸುಸಜ್ಜಿತವಾದ ಹಾಸಿಗೆಯನ್ನು ಕೊಟ್ಟು ಮೇಲೆ ಬೆಲ್ಲದ ಆಕಳವನ್ನೂ ಕೊಡಬೇಕು. ಆ ಬೆಲ್ಲದ ಹಸುವನ್ನು ಕೊಡುವಾಗ

"ಯಥಾ ದೇವೇನ ರಹಿತಾ ನ ಲಕ್ಷ್ಮೀರ್ಜಾಯತೇಕ್ವಚಿತ್ ।
ತಥಾ ವಿಶೋಕತಾಮೇಽಸ್ತು ಭಕ್ತಿರಗ್ರ್ಯಾ ಚ ಕೇಶವೇ "

ಎಂಬ ಮಂತ್ರವನ್ನು ಹೇಳಿ ಲಕ್ಷ್ಮೀದೇವಿಯನ್ನು ಸ್ಥಾಪಿಸಿ ಮೊರವನ್ನು ದಾನಕೊಡಬೇಕು. ಈ ವ್ರತ ಮಾಡಿದವರಿಗೆ ಐಶ್ವರ್ಯ ಪ್ರಾಪ್ತಿಯಾಗುವದು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೆರಡನೆಯ ಅಧ್ಯಾಯ ಮುಗಿದುದು



## ಗುಡಧೇನು ದಾನವಿಧಾನ

ಅಧ್ಯಾಯ - ೮೩

**ಮನುರುವಾಚ**

"ಗುಡಧೇನು ವಿಧಾನಸ್ಯ ಯದ್ರೂಪ ಮಿಹಯತ್ಫಲಂ ।
ತದಿದಾನೀಂ ಪ್ರವಕ್ಷ್ಯಾಮಿ ಸರ್ವಪಾಪ ವಿನಾಶನಂ ॥

**ಮನುಚಕ್ರವರ್ತಿ:-** ಓ ಜಗದೀಶ್ವರಾ ! ಬೆಲ್ಲದಹಸುವನ್ನು ಯಾವ ರೂಪದಿಂದ ಮಾಡಬೇಕು ? ಅದರಿಂದ ಬರುವ ಫಲವಾವುದು ? ಅದನ್ನು ಯಾವ ಮಂತ್ರದಿಂದ ದಾನಮಾಡಬೇಕು ತಿಳಿಸು.

**ಮತ್ಸ್ಯ :-** ಗುಡಧೇನುವಿನ ಅಂದರೆ ಬೆಲ್ಲದಹಸು. ಅದನ್ನು ಮಾಡುವ ವಿಧಾನವನ್ನೂ ಅದರಿಂದ ಬರುವ ಫಲವನ್ನೂ ತಿಳಿಸುತ್ತೇನೆ. ನೆಲವನ್ನು ಗೋಮಯದಿಂದ ಸಾರಿಸಿ, ದರ್ಭೆಗಳನ್ನು ಹರಿವಿ, ನಾಲ್ಕುಮೊಳಉದ್ದದ ಕೃಷ್ಣಾಜಿನವನ್ನು ಪೂರ್ವಾಭಿಮುಖವಾಗಿ ಹಾಸಬೇಕು. ಇನ್ನೊಂದು ಚಿಕ್ಕ ಕೃಷ್ಣಾಜಿನವನ್ನು ಅಲ್ಲಿಯೇ ಹಾಕಿ ಪೂರ್ವಕ್ಕೆ ಮುಖ ಪಶ್ಚಿಮಕ್ಕೆ ಕಾಲು ಇರುವ ಒಂದು ಬೆಲ್ಲದ ಆಕಳನ್ನೂ ಕರುವನ್ನೂ ಮಾಡಬೇಕು. ಆಕಳು ನಾಲ್ಕು ಭಾರ ತೂಕದ ಬೆಲ್ಲದ್ದು. ಕರು ಒಂದು ಭಾರದ್ದು. ಹಸು ಮತ್ತು ಕರುಗಳಿಗೆ ತುಪ್ಪದ ಮುಖ. ಅಂದರೆ ಮುಖಕ್ಕೆ ತುಪ್ಪವನ್ನು ಸವರಬೇಕು. ಕಿವಿಯಲ್ಲಿ ಚಿಪ್ಪು, ಕಣ್ಣಿಗೆ ಮುತ್ತು, ಕಾಲಿಗೆ ಕಬ್ಬಿನ ಶಿಬಿಕೆ, ಮೇಲೆ ತೆಳುಬಟ್ಟೆಯ ಹೊದಿಕೆ, ಬಿಳಿದಾರದ ನರಗಳು, ಬಿಳಿಕಂಬಳಿಯ ತುಂಡಿನಿಂದ ಗಂಗೆದೊಗಲು, ತಾಮ್ರದ ಕೆನ್ನೆ, ಬಿಳಿಚಾಮರದಿಂದ ಕೂದಲು, ಹವಳದಿಂದ ಹುಬ್ಬು, ಬೆಣ್ಣೆಯಿಂದ ಮೊಲೆ, ರೇಶ್ಮೆಯಿಂದ ಬಾಲ, ನೀಲರತ್ನದಿಂದ ಕಣ್ಣು ನಿರ್ಮಿಸಬೇಕು. ಅವುಗಳ ಕೊಂಬುಗಳಿಗೂ ಚಿನ್ನದ ಒಡವೆ, ಗೊರಸುಗಳಿಗೆ ಬೆಳ್ಳಿಯ ಆಭರಣ, ಮೂಗಿನಲ್ಲಿ ಗಂಧದ ಬುಲಾಕು. ಎದುರು ಬಗೆಬಗೆಯ ಹಣ್ಣು ಹಂಪಲ ಇಟ್ಟು, ಧೂಪದೀಪಗಳಿಂದ ಅರ್ಚಿಸಬೇಕು. ಅನಂತರ

ಯಾಲಕ್ಷ್ಮೀಃ ಸರ್ವಭೂತಾನಾಂ ಯಾ ಚದೇವೇಷ್ವವಸ್ಥಿತಾ ।
ಧೇನುರೂಪೇಣ ಸಾದೇವೀ ಮಮಶಾಂತಿಂ ಪ್ರಯಚ್ಛತು ॥

"ಯಾರು ಸರ್ವ ಪ್ರಾಣಿಗಳಿಗೂ ಸಂಪತ್ಸ್ವರೂಪಳೋ, ಯಾರು ದೇವತೆಗಳಲ್ಲಿ ನೆಲೆಸಿರುವಳೋ, ಆ ದೇವಿಯು ನನಗೆ ಹಸುವಿನ ರೂಪದಿಂದ

ಶಾಂತಿಯನ್ನು ನೀಡಲಿ. ಈಶ್ವರನ ದೇಹದಲ್ಲಿ ರುದ್ರಾಣೀರೂಪದಿಂದ, ವಿಷ್ಣುವಿನ ವಕ್ಷಸ್ಥಳದಲ್ಲಿ ಲಕ್ಷ್ಮೀ ಎಂಬ ಹೆಸರಿನಿಂದ, ಅಗ್ನಿಯಪಕ್ಕದಲಿ ಸ್ವಾಹೆಯಾಗಿ, ಚತುರ್ಮುಖ ಬ್ರಹ್ಮದೇವರ ಆತ್ಮಶ್ರೀಯಾಗಿ, ಕುಬೇರನ ಧನಲಕ್ಷ್ಮೀಯಾಗಿ, ಲೋಕಪಾಲಕರ ಶಾಂತಿಯಾಗಿ, ಪಿತೃಗಳ ಸ್ವಧಾ, ದೇವತೆಗಳ ಸ್ವಾಹಾ ಆಗಿ, ಎಲ್ಲರ ಪಾಪಗಳನ್ನು ಪರಿಹರಿಸುವ ಗೋರೂಪಿಣಿಯಾದ ಲಕ್ಷ್ಮೀದೇವಿಯೇ ನೀನು ನನಗೆ ಶಾಂತಿಯನ್ನು ಕೊಡು.'' ಈ ಮಂತ್ರದಿಂದ ಆ ಬೆಲ್ಲದಹಸುವನ್ನು ಪ್ರಾರ್ಥಿಸಿ ಅದನ್ನು ಬ್ರಾಹ್ಮಣನಿಗೆ ದಾನಕೊಡಬೇಕು. ಎಲ್ಲ ಕಡೆಗೂ ಗೋದಾನ ಮಾಡುವಾಗ ಇದೇ ಮಂತ್ರವಿಧಾನವನ್ನು ಅನುಸರಿಸಬೇಕು.

ಹತ್ತು ಬಗೆಯ ಗೋದಾನಗಳು ಪಾಪ ಪರಿಹಾರಕವೆಂದು ಪ್ರಸಿದ್ಧವಾಗಿವೆ. ನಿಜವಾದ ಹಸುವನ್ನೇ ದಾನಕೊಡುವದು ಸರ್ವಶ್ರೇಷ್ಠ ಮತ್ತು ಮಹಾಪುಣ್ಯಕರ. ಅದಿಲ್ಲದಿದ್ದರೆ ಬೆಲ್ಲ, ಎಳ್ಳು, ಸಕ್ಕರೆ ಮುಂತಾಗಿ ಬೇರೆ ಬೇರೆ ಪದಾರ್ಥಗಳಿಂದ ಹಸುವನ್ನು ನಿರ್ಮಿಸಿ ದಾನಕೊಡಬೇಕು. ಹೀಗೆ ಕಲ್ಪಿತಧೇನು ನಿಜಧೇನು ಕೂಡಿ ಹತ್ತು ಬಗೆಯ ಧೇನುಗಳನ್ನು ಯೋಗ್ಯತಾನುಗುಣವಾಗಿ ದಾನಮಾಡಬಹುದು.

ಗುಡಧೇನು ಎಂದರೆ ಬೆಲ್ಲದಿಂದ ಮಾಡಿದ ಆಕಳು, ತುಪ್ಪದ ಆಕಳು, ಎಳ್ಳಿನ ಆಕಳು, ನೀರಿನಹಸು, ಜೇನಿನಗೋವು, ಸಕ್ಕರೆಯಹಸು, ಮೊಸರಿನಹಸು, ರಸಧೇನು ಹೀಗೆ ಒಂಬತ್ತು ಬಗೆಯ ಹಸುಗಳನ್ನು ತಯಾರಿಸಿ ದಾನಕೊಡಬೇಕು. ಹತ್ತನೆಯದೇ ಸ್ವರೂಪಧೇನು. ಅರ್ಥಾತ್ ನಿಜವಾದ ಆಕಳು. ಈ ಹತ್ತು ವಿಧವಾದ ಹಸುಗಳಲ್ಲದೇ ಬೆಣ್ಣೆ, ರತ್ನಗಳಿಂದಲೂ ಅವುಗಳನ್ನು ರಚಿಸಿ ದಾನಕೊಡಬಹುದು.

ದಾನಗಳಲ್ಲೆಲ್ಲ ಈ ಹತ್ತೂ ಬಗೆಯ ಗೋದಾನವು ಶ್ರೇಷ್ಠವಾಗಿದೆ. ವ್ರತಗಳಲ್ಲಿ ವಿಶೋಕದ್ವಾದಶೀವ್ರತವು ಶ್ರೇಷ್ಠವಾಗಿದೆ. ಈ ವಿಶೋಕದ್ವಾದಶೀ ವ್ರತದ ಒಂದು ಅಂಗವಾದುದರಿಂದಲೇ ಈ ಗುಡಧೇನು ಎಂದರೆ ಬೆಲ್ಲದ ಹಸುವಿನ ದಾನಕ್ಕೆ ಇಷ್ಟು ಪ್ರಾಶಸ್ತ್ಯ. ಗ್ರಹಣ, ಉತ್ತರಾಯಣ, ದಕ್ಷಿಣಾಯನ, ವಿಷುವಕಾಲ, ವ್ಯತೀಪಾತ ಹುಣ್ಣಿಮೆ, ಅಮಾವಾಸ್ಯೆ ಮುಂತಾದ ಪರ್ವಕಾಲಪುಣ್ಯಕಾಲಗಳಲ್ಲಿ ಗುಡಧೇನು ಮುಂತಾದ ಧೇನುಗಳನ್ನು ದಾನಮಾಡಬೇಕು. ಗುಡಧೇನು ದಾನಸಹಿತವಾಗಿ ಈ ವಿಶೋಕದ್ವಾದಶೀವ್ರತದ ಅನುಷ್ಠಾನದಿಂದ ಮನುಷ್ಯರು ಇಹದಲ್ಲಿ ಆರೋಗ್ಯ, ಸೌಭಾಗ್ಯ, ಆಯುಷ್ಯ, ಐಶ್ವರ್ಯಗಳನ್ನುಪಡೆಯುವುದಲ್ಲದೇ ಮರಣಾನಂತರ ವೈಕುಂಠಲೋಕವನ್ನು ಸೇರುವರು. ಇದನ್ನು ಆಚರಿಸಿದವರಿಗೆ ಎಂದೂ ದಾರಿದ್ರ್ಯ ಬರುವುದಿಲ್ಲ. ಹೆಣ್ಣುಮಕ್ಕಳೂ ಕೂಡ ಏಕಾದಶೀ ಉಪವಾಸವಿದ್ದು ರಾತ್ರಿ ದೇವರನ್ನು ಹೊಗಳಿ ಹಾಡಬೇಕು. ತಣಿದು ಕುಣಿಯಬೇಕು. ಭಕ್ತಿಯಿಂದ ಗಾನ ಮಾಡಬೇಕು. ಅಂದರೆ ಅವರಿಗೂ ಮೇಲೆ ಹೇಳಿದ ಫಲ ದೊರಕುತ್ತವೆ. ಹೀಗೆ ಹರಿಯ ಪೂಜಾ ರೂಪ ಈ ವ್ರತದ ದರ್ಶನ, ಶ್ರವಣ, ಪಾರಾಯಣ, ಸ್ವಯಮಾಚರಣಾದಿಗಳಿಂದ ಇಂದ್ರಲೋಕದಲ್ಲಿ ಒಂದು ಕಲ್ಪಕಾಲ ಸುಖವಾಸ ದೊರಕುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತಮೂರನೆಯ ಅಧ್ಯಾಯ ಮುಗಿದುದು*

## ಹತ್ತುವಿಧ ಗೋದಾನದಂತೆ ಹತ್ತುವಿಧ ಮೇರುದಾನಗಳ ವಿವರಣೆ

**ಅಧ್ಯಾಯ - ೮೪**

**ನಾರದ ಉವಾಚ**

**"ಭಗವನ್ ಶ್ರೋತುಮಿಚ್ಛಾಮಿ ದಾನಮಾಹಾತ್ಮ್ಯಮುತ್ತಮಂ ।**
**ಯದಕ್ಷಯಂ ಪರೇಲೋಕೇ ದೇವರ್ಷಿಗಣಪೂಜಿತಮ್ ॥**

**ನಾರದ:-** ಪೂಜ್ಯನೇ, ಅತ್ಯುತ್ತಮವಾದ ದಾನದ ಮಹಿಮೆಯನ್ನು ಕೇಳಬಯಸುತ್ತೇನೆ ಅಂಥ ದಾನವನ್ನು ದೇವತೆಗಳೂ ಮನ್ನಿಸುತ್ತಾರೆ. ಋಷಿಗಳು ಪೂಜಿಸುತ್ತಾರೆ. ಪರಲೋಕದಲ್ಲಿಯೂ ಅಕ್ಷಯಫಲ. ಅಂಥ ಶ್ರೇಷ್ಠದಾನದ ಮಹಿಮಾ ಶ್ರವಣವನ್ನು ಮಾಡಲಿಚ್ಛಿಸುತ್ತೇವೆ.

**ಮಹಾದೇವ :-** ಹಸುವಿನ ದಾನವು ಹತ್ತು ಬಗೆಯಾಗಿ ಇರುವಂತೆ ಮೇರು ದಾನವೂ ಹತ್ತು ತೆರನಾಗಿದೆ. ಚಿನ್ನ, ಬೆಳ್ಳಿ, ಧಾನ್ಯ, ಬೆಲ್ಲ ಮುಂತಾದವುಗಳಿಂದ ಮೇರು ಶೈಲಗಳನ್ನು ನಿರ್ಮಿಸಿ ದಾನನೀಡುವ ವಿಧಾನವನ್ನು ಹೇಳುವೆನು ಕೇಳು. (೧) ಧಾನ್ಯಶೈಲ (೨) ಲಮಾಶೈಲ ಅಥವಾ ಲವಣ ಶೈಲ (೩) (ಬೆಲ್ಲದ ಬೆಟ್ಟ) ಗುಡಾಚಲ (೪) ಹೇಮಪರ್ವತ (೫) ತಿಲಶೈಲ (೬) ಕಾರ್ಪಾಸಕಾನನ (೭) ಘೃತಗಿರಿ (೮) ರತ್ನಪರ್ವತ (೯) ರಜತಾದ್ರಿ (೧೦) ಶರ್ಕರಾಶೈಲ ಹೀಗೆ ಹತ್ತು ಬಗೆಯಾಗಿ ಶೈಲಗಳನ್ನು ಬೇರೆ ಬೇರೆ ವಸ್ತುಗಳಿಂದ ನಿರ್ಮಿಸಿ ದಾನಕೊಡಬೇಕು.

ಇವುಗಳ ದಾನ ಕಾಲವೆಂದರೆ ಗ್ರಹಣ, ಸಂಕ್ರಮಣ, ಶುಕ್ಲಪಕ್ಷದ ತೃತೀಯಾ ದ್ವಾದಶೀ, ಹುಣ್ಣಿಮೆ, ಯಜ್ಞಕಾಲ, ವಿಷುವಕಾಲ, ವ್ಯತೀಪಾತ, ಕ್ಷಯತಿಥಿ, ಶುಭ ನಕ್ಷತ್ರ ದಿನಗಳು. ದೇವಾಲಯ, ಪುಣ್ಯತೀರ್ಥ, ಹಸುಕಟ್ಟುವಕೊಟ್ಟಿಗೆ ಮುಂತಾದ ಸ್ಥಾನಗಳು ಈ ಶೈಲದಾನಕ್ಕೂ ಈ ಶೈಲವಿಧಾನಕ್ಕೂ ಪ್ರಶಸ್ತವಾದ ಸ್ಥಳಗಳಾಗಿವೆ. ತೀರ್ಥ, ಕ್ಷೇತ್ರ, ದೇವಾಲಯ, ಗೋಷ್ಠ ಮುಂತಾದ ಪುಣ್ಯಸ್ಥಳಗಳಲ್ಲಿ ಪೂರ್ವಕ್ಕೆ ಅಥವಾ ಉತ್ತರಕ್ಕೆ ಮುಖಮಾಡಿ ಮಂಟಪಹಾಕಬೇಕು. ಆ ಸ್ಥಳವನ್ನೆಲ್ಲ ಗೋಮಯದಿಂದ ಸಾರಿಸಿ, ದರ್ಭೆಗಳನ್ನು ಹರಡಿ, ನಟ್ಟನಡುವೆ ಬೆಟ್ಟವನ್ನು ರಚಿಸಬೇಕು. ಅದರ ಸುತ್ತಲೂ ಚಿಕ್ಕವಿಷ್ಕಂಭ ಪರ್ವತಗಳನ್ನು ನಿರ್ಮಿಸಬೇಕು. ಈ ಪರ್ವತಗಳು ಉತ್ತಮ, ಮಧ್ಯಮ, ಅಧಮ ಎಂದು ಮೂರು ತೆರನಾಗಿವೆ. ಸಾವಿರ ಕೊಳಗಧಾನ್ಯದಿಂದ ಮಾಡಿದ ಪರ್ವತವು ಉತ್ತಮ. ೫೦೦ ಕೊಳಗದಿಂದ ಮಾಡಿದ್ದು ಮಧ್ಯಮ. ೫೦ ರಿಂದ ಮಾಡಿದ ಪರ್ವತ ಕಡಿಮೆ ಅಧಮ ಅಥವಾ ಕನಿಷ್ಠ.

ಹೀಗೆ ತಮ್ಮ ಯೋಗ್ಯತಾನುಗುಣವಾಗಿ ಭತ್ತದಿಂದ ಮಧ್ಯದಲ್ಲಿ ಮೇರುಗಿರಿಯನ್ನು ರಚಿಸಿ ಅದರ ಶಿಖರದಲ್ಲಿ ಮೂರು ಚಿನ್ನದ ಮರಗಳನ್ನು ನೆಡಬೇಕು. ಅದರ ಪೂರ್ವಭಾಗದಲ್ಲಿ ಮುತ್ತು, ವಜ್ರ, ದಕ್ಷಿಣದಲ್ಲಿ ಗೋಮೇಧ, ಪುಷ್ಪರಾಗ, ಪಶ್ಚಿಮಕ್ಕೆ ಇಂದ್ರನೀಲ, ಮತ್ತು ಗರುಡನೀಲ, ಉತ್ತರದಲ್ಲಿ ವೈಢೂರ್ಯ,

ಕಮಲ, ಸುತ್ತಲೂ ಶ್ರೀಗಂಧ, ಹವಳ, ಗಿಡಬಳ್ಳಿ, ಶಿಂಪು, ಕೋಡುಗಲ್ಲು ಹಾಗೂ ಸಾನುಕಾನುಗಳನ್ನು ನಿರ್ಮಿಸಬೇಕು. ಬಗೆಬಗೆಯ ಹೊನ್ನಿನ ಹಕ್ಕಿಗಳನ್ನು ಗಿರಿಮರಗಳ ಮೇಲೆ ಕೆತ್ತಿ ಇಡಬೇಕು. ಅದರ ತೊಪ್ಪಲ ಭಾಗವೆಲ್ಲವೂ ಬೆಳ್ಳಿಯ ಭಾಗವಾಗಿರಬೇಕು. ಗಿರಿಝುರಿಯಂತೆ ತುಪ್ಪದಪ್ರವಾಹ. ಮೇಘಮಾಲೆಯಂತೆ ಬಗೆಬಗೆಯ ವಸ್ತ್ರಗಳನ್ನು ಹೊದಿಸಿ ಹರಿಹರ ಬ್ರಹ್ಮಾದಿದೇವತೆಗಳ ಚಿನ್ನದ ಪ್ರತಿಮೆಗಳನ್ನು ಮಾಡಿಸಿ ಅಲ್ಲಿ ಇರಿಸಬೇಕು. ಇಂದ್ರಾದಿ ಅಷ್ಟದಿಕ್ಪಾಲಕರನ್ನು ಎಂಟೂ ದಿಕ್ಕುಗಳಲ್ಲಿ ಸ್ಥಾಪಿಸಬೇಕು. ಅದರ ಮೇಲೆ ಬಗೆಬಗೆಯ ಹಣ್ಣು, ಹೂ, ಗಂಧ ಹಾಗೂ ಪಂಚರಂಗಿ ಮೇಲುಗಟ್ಟನ್ನು ಕಟ್ಟಿ ಮೇರುಪರ್ವತವನ್ನು ಸಿದ್ಧಗೊಳಿಸಬೇಕು.

ಹೀಗೆ ಮೇರುಪರ್ವತವನ್ನು ಸಿದ್ಧಗೊಳಿಸಿದ ಬಳಿಕ ಅದರ ನಾಲ್ಕೂ ನಿಟ್ಟುಗಳಲ್ಲಿ ಗಂಧ ಪುಷ್ಪಗಳಿಂದ ಅಲಂಕೃತವಾದ ಚಿಕ್ಕಚಿಕ್ಕಉಪಗಿರಿಗಳನ್ನು ನಿರ್ಮಿಸಬೇಕು. ಪೂರ್ವ ದಿಕ್ಕಿನಲ್ಲಿ ಯವಧಾನ್ಯದಿಂದ ಮಂದರಪರ್ವತವನ್ನೂ, ದಕ್ಷಿಣಕ್ಕೆ ಗೋಧಿಯ ರಾಶಿಯಿಂದ ಗಂಧಮಾದನ ಪರ್ವತವನ್ನೂ, ಪಶ್ಚಿಮಕ್ಕೆ ತಿಲಶೈಲವನ್ನೂ, ಉತ್ತರಕ್ಕೆ ಸುಪಾರ್ಶ್ವಗಿರಿಯನ್ನೂ ನಿರ್ಮಿಸಿ ಅವುಗಳಿಗೆಲ್ಲ ವಸ್ತ್ರ ಹೊದಿಸಿ ಹೂಮಾಲೆ ಮುಡಿಸಿ ಅಲಂಕರಿಸಬೇಕು. ಅವುಗಳಲ್ಲಿ ಶ್ರೀಹರಿಯ ಬಂಗಾರದ ಪ್ರತಿಮೆಗಳನ್ನು ಇಟ್ಟು ಅಲ್ಲಲ್ಲಿ ಹಾಲು, ಮೊಸರು, ತುಪ್ಪ, ಜೇನುತುಪ್ಪಗಳಿಂದ ಚಿಕ್ಕ ಚಿಕ್ಕ ಸರೋವರ, ತೊರೆ, ಝುರಿಗಳು ಕಂಗೊಳಿಸುವಂತೆ ಮಾಡಬೇಕು. ವೇದಪುರಾಣಜ್ಞಾನಿಗಳಾದ ನಾಲ್ಕು ಬ್ರಾಹ್ಮಣರು ಪೂರ್ವ ದಿಕ್ಕಿನಲ್ಲಿ ಒಂದು ಮೊಳ ಅಳತೆಯ ಅಗ್ನಿಕುಂಡವನ್ನು ನಿರ್ಮಿಸಿ ಎಳ್ಳು, ಅಕ್ಕಿಕಾಳು, ತುಪ್ಪ, ಸಮಿತ್ತು, ದರ್ಭೆಗಳಿಂದ ಹೋಮಮಾಡಬೇಕು. ಪರ್ವತಗಳ ಆವಾಹನ ಕ್ರಮವನ್ನು ಹೇಳುತ್ತೇನೆ ಕೇಳು. ಬಳಿಕ ಯಜಮಾನನು ಉಪವಾಸ ವಿರಬೇಕು. ಅಶಕ್ತನಾಗಿದ್ದರೆ ಹಗಲು ಉಪೋಷಣವಿದ್ದು ರಾತ್ರಿ ಭೋಜನಮಾಡಬಹುದು.

**ನಾರದ** :- ಎಲ್ಲಾ ಪರ್ವತಗಳ ರಚನೆಯ ಕ್ರಮವನ್ನು ಅವುಗಳ ದಾನಮಂತ್ರಗಳನ್ನು ಅದರಿಂದ ಬರುವ ಪುಣ್ಯಫಲವನ್ನೂ ಹೇಳುತ್ತೇನೆ ಕೇಳು.

**''ಅನ್ನಂ ಬ್ರಹ್ಮಯತಃ ಪ್ರೋಕ್ತಮನ್ನೇ ಪ್ರಾಣಾಃಪ್ರತಿಷ್ಠಿತಾಃ ॥**
**ಅನ್ನಾದ್ ಭವಂತಿ ಭೂತಾನಿ ಜಗದನ್ನೇನ ವರ್ತತೇ ॥**

**ಅನ್ನಮೇವತತೋ ಲಕ್ಷ್ಮೀರನ್ನಮೇವಜನಾರ್ದನಃ**
**ಧಾನ್ಯಪರ್ವತರೂಪೇಣ ಪಾಹಿತಸ್ಮಾನ್ನಗೋತ್ತಮ ॥**

ಅನ್ನವೇಬ್ರಹ್ಮ ಎಂದು ಹೇಳಲಾಗಿದೆ. ಪ್ರಾಣಿಗಳು ಬದುಕಿದ್ದು ಅದರಿಂದಲೇ. ''ಅದ್ಯತೆಇತಿಅನ್ನಂ'' ಉಪಜೀವಿಸಲ್ಪಡುತ್ತದೆ ಎಂದು ಪ್ರಾಣಾಧಾರವಾದ ಬ್ರಹ್ಮವನ್ನು ಅನ್ನವೆಂದು ಕರೆಯುತ್ತಾರೆ. ಆ ಅನ್ನಬ್ರಹ್ಮದಿಂದಲೇ ಎಲ್ಲ ಪ್ರಾಣಿಗಳು ಹುಟ್ಟುತ್ತವೆ. ಅದನ್ನು ಆಧರಿಸಿಯೇ ಬೆಳೆಯುತ್ತವೆ. ಬಾಳುತ್ತವೆ. ಜೀವಿಸುತ್ತವೆ. ಆದುದರಿಂದ ಈ ಜಗತ್ತಿನಲ್ಲಿ ಶ್ರೀ ಹರಿಯೇ ನಿಜವಾದ ಅನ್ನ ಎನಿಸುತ್ತಾನೆ. ಅವನ ಸನ್ನಿಧಾನದಿಂದಲೇ

**ಲೌಕಿಕ** ಅನ್ನವು ಜನರ ಪ್ರಾಣಾಧಾರವಾಗಿದೆ. ಅಂಥ ಅನ್ನದ ಮೂಲರೂಪವಾದ ಧಾನ್ಯಗಳಿಂದ ನಿರ್ಮಾಣಗೊಂಡ ಪರ್ವತಶ್ರೇಷ್ಠವೇ, ನನ್ನನ್ನು ರಕ್ಷಿಸು'' ಎಂದು ಪ್ರಾರ್ಥನೆಮಾಡಿ ಧಾನ್ಯ ಪರ್ವತವನ್ನು ದಾನಕೊಡಬೇಕು. ಹೀಗೆ ಧಾನ್ಯಶೈಲವನ್ನು ವಿಧಿಪೂರ್ವಕವಾಗಿ ದಾನಕೊಡುವವನು ಒಂದುನೂರು ಮನ್ವಂತರಕಾಲ ದೇವಲೋಕದಲ್ಲಿ ಮಾನ್ಯತೆ ಪಡೆಯುವನು.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು



## ಲವಣಪರ್ವತದ ದಾನವಿಧಿ

ಅಧ್ಯಾಯ - ೮೫

**ಈಶ್ವರ ಉವಾಚ**

**ಅಥಾತಃ ಸಂಪ್ರವಕ್ಷ್ಯಾಮಿ ಲವಣಾಚಲಮುತ್ತಮಂ**
**ಯತ್ಪ್ರದಾನಾನ್ನರೋ ಲೋಕಾನಾಪ್ನೋತಿ ಶಿವಸಂಯುತಾನ್**

**ಈಶ್ವರ :-** ಇನ್ನು ಮುಂದೆ ಲವಣಪರ್ವತದ ದಿವ್ಯದಾನದ ವಿಧಿಯನ್ನು ತಿಳಿಸುತ್ತೇನೆ ಕೇಳು. ಈ ಲವಣಾಚಲ ದಾನದಿಂದ ಮಾನವನು ಶಿವನ ಶಾಶ್ವತ ಸನ್ನಿಧಾನದಿಂದ ಶೋಭಿಸುವ ದಿವ್ಯಗತಿಯನ್ನು ಪಡೆಯುತ್ತಾನೆ. ಹದಿನಾರು ಕೊಳಗ ಉಪ್ಪಿನಿಂದ ನಿರ್ಮಿತವಾದ ಲವಣ ಪರ್ವತವು ಉತ್ತಮವು. ಎಂಟು ಕೊಳಗ ಉಪ್ಪಿನಿಂದ ಮಧ್ಯಮ. ನಾಲ್ಕು ಕೊಳಗದಿಂದ ಅಧಮ. ದ್ರವ್ಯದ ಅನುಕೂಲತೆ ಇಲ್ಲದವರು ತಮ್ಮ ಯೋಗ್ಯತೆಗೆ ತಕ್ಕಂತೆ ಒಂದು ಕೊಳಗ ಉಪ್ಪನ್ನಾದರೂ ಉಪಯೋಗಿಸಿ ಪರ್ವತವನ್ನು ರಚಿಸಬೇಕು. ಅದರ ಕಾಲುಭಾಗದಷ್ಟು ಪ್ರಮಾಣದಲ್ಲಿ ಉಪಪರ್ವತಗಳನ್ನು ನಿರ್ಮಿಸಬೇಕು. ಹೀಗೆ ಹೇಳಿದಂತೆ ಬ್ರಹ್ಮಾದಿ ದೇವತೆಗಳನ್ನು ಸ್ಥಾಪನೆಮಾಡಿ ಲೋಕಪಾಲಕರ ಚಿನ್ನದಮೂರ್ತಿಗಳನ್ನು ಮಾಡಿಸಿ ಇಡಬೇಕು. ಸರೋವರ, ಕಾಮದೇವ, ಪುಷ್ಪಾಲಂಕಾರ ಎಲ್ಲವೂ ಹಿಂದೆ ಹೇಳಿದಂತೆ ಇರಬೇಕು. ರಾತ್ರಿ ಜಾಗರಣ ಮಾಡಬೇಕು. ಈ ಮುಂದೆ ಹೇಳಿದ ಮಂತ್ರಗಳನ್ನು ಉಚ್ಚರಿಸಿ ಪ್ರಾರ್ಥಿಸಬೇಕು.

**ಯಸ್ಮಾದನ್ನರಸಾಸ್ಸರ್ವೇ ನೋತ್ಕಟಾಲವಣಂವಿನಾ ।**
**ಪ್ರಿಯಂ ಚ ಶಿವಯೋರ್ನಿತ್ಯಂ ತಸ್ಮಾಚ್ಛಾಂತಿಂ ಪ್ರಯಚ್ಛಮೇ ॥**
**ವಿಷ್ಣುದೇಹ ಸಮುದ್ಭೂತಂ ಸ್ಯಾದಾರೋಗ್ಯಸ್ಯ ವರ್ಧನಂ ।**
**ತಸ್ಮಾತ್ಪರ್ವತ ರೂಪೇಣ ಪಾಹಿಸಂಸಾರಸಾಗರಾತ್ ॥**

ಉಪ್ಪು ಸೌಭಾಗ್ಯ ಸರೋವರದಲ್ಲಿ ಉನ್ನತವಾಯಿತು. ಇಂಥ ಲವಣದ ಪರ್ವತವನ್ನು ನಾನು ದಾನಮಾಡುತ್ತೇನೆ. ಉಪ್ಪು ಇಲ್ಲದಿದ್ದರೆ ಯಾವ ರಸಕ್ಕೂ ರುಚಿ ಇಲ್ಲ. ಹರಿಯಿಂದ ಹುಟ್ಟಿದ್ದರಿಂದ ಇದು ಆರೋಗ್ಯದಾಯಕವಾಗಿದೆ.

**ತ್ವಂ ಸರ್ವ ದೇವಗಣ ಶುಭಧಾಮನಿಧೇವಿಧೇಹಿ ।**
**ಚಾಸ್ಮದ್ಗೃಹೇಷ್ವಶುಭಪರ್ವತನಾಶಮಾಶು ॥**

**ಕ್ಷೇಮಂ ವಿಧತ್ಸ್ವಕುರು ಶಾಂತಿಮನುತ್ತಮಾಂನಃ ।**
**ಸಂಪೂಜಿತಃ ಪರಮಭಕ್ತಿಮತಾಮಯಾಹಿ ॥**

ಎಲ್ಲದೇವತೆಗಳ ನಿಧಿ ಹಾಗೂ ನೆಲೆಯಾದ ಮೇರುಪರ್ವತವೇ, ನೀನು ಅಮರನಾಗಿರುವಿ. ನಮ್ಮ ಮನೆಯಲ್ಲಿರುವ ಅಶುಭ ಪರ್ವತವನ್ನು ಬೇಗ ಹೋಗಲಾಡಿಸು. ನಮಗೆಲ್ಲ ಕಲ್ಯಾಣವನ್ನುಂಟುಮಾಡು. ಶಾಂತಿಯನ್ನು ಕರುಣಿಸು. ಲೋಕಪಾಲಕರಿಗೂ ವಿಷ್ಣು, ರುದ್ರ, ಆದಿತ್ಯ, ವಸು, ಬ್ರಹ್ಮ, ಸೂರ್ಯ ಮುಂತಾದವರಿಗೆಲ್ಲ ನೀನು ನಿಲ್ದಾಣನಾಗಿರುವೆ. ಶಿವನೂ, ಸುರರೂ, ಸುರನಾರಿಯರೂ ನಿನ್ನನ್ನು ಬಿಟ್ಟು ಇರುವದಿಲ್ಲ. ಆದುದರಿಂದ ನೀನು ನನ್ನನ್ನು ಈ ದುಃಖಪೂರ್ಣವಾದ ಸಂಸಾರವೆಂಬ ಸಮುದ್ರದಿಂದ ಪಾರುಮಾಡು.''

ಇದೇ ರೀತಿಯಾಗಿ ಉಪಪರ್ವತಗಳನ್ನೂ ಮುಂದೆ ಹೇಳಿದಂತೆ ಪ್ರಾರ್ಥಿಸಬೇಕು. ''ಚೈತ್ರರಥ ಎಂಬ ವನದೊಡನೆ ಭದ್ರಾಶ್ವ ವರ್ಷದಲ್ಲಿ ಪ್ರಕಾಶಿಸುವ ಮಂದರಪರ್ವತವೇ ನನಗೆ ಶೀಘ್ರವಾಗಿ ತುಷ್ಟಿಯನ್ನು ಕೊಡು. ಜಂಬೂದ್ವೀಪದಲ್ಲಿ ಅತಿಶ್ರೇಷ್ಠವಾದ ಗಂಧಮಾದನಗಿರಿಯೇ, ನನಗೆ ಶಾಶ್ವತ ಕೀರ್ತಿಯನ್ನು ದಯಪಾಲಿಸು. ವೈಭ್ರಾಜ ವನದೊಂದಿಗೆ ಕೇತುಮಾಲವರ್ಷದಲ್ಲಿ ಮೆರೆಯುವ ತಿಲಾಚಲವೇ ಬಂಗಾರದ ಅಶ್ವತ್ಥ ಗಿಡದಿಂದ ಕೂಡಿದ ನೀನು ನನಗೆ ಸ್ಥಿರವಾದ ಪುಷ್ಟಿಯನ್ನು ಅನುಗ್ರಹಿಸು. ಉತ್ತರಕುರುವರ್ಷದಲ್ಲಿ ಸಾವಿತ್ರ ವನದೊಂದಿಗೆ ವಿರಾಜಿಸುವ ಸುಪಾರ್ಶ್ವಪರ್ವತವೇ ನನಗೆ ನಿತ್ಯವೂ ಅಕ್ಷಯ ಸಂಪದವನ್ನು ಅನುಗ್ರಹಿಸು.''

ಹೀಗೆ ಎಲ್ಲ ಗಿರಿಗಳನ್ನು ಪ್ರಾರ್ಥಿಸಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ನಡುವಿರುವ ಮೇರುಪರ್ವತವನ್ನು ಗುರುಗಳಿಗೂ, ಉಪಗಿರಿಗಳನ್ನು ಉಳಿದ ಋತ್ವಿಜರಿಗೂ ದಾನಕೊಡಬೇಕು. ಇದರಲ್ಲಿ ಗೋದಾನವು ಅತಿ ಮುಖ್ಯ. ಇಪ್ಪತ್ತುನಾಕು, ಎಂಟು, ಹತ್ತು, ಏಳು ಕೊನೆಗೆ ಐದು ಹಸುಗಳನ್ನಾದರೂ ಹಿಂಡುವ ಪಾತ್ರೆ ಮತ್ತು ಕರುಸಹಿತ ದಾನಕೊಡಬೇಕು. ಎಲ್ಲ ಪರ್ವತಗಳ ದಾನ ಕೊಡುವಾಗಲೂ ಇದೇ ಕ್ರಮವನ್ನು ಅನುಸರಿಸಬೇಕು. ಪೂಜೆಯ ಮಂತ್ರ ಹಾಗೂ ಸಾಮಗ್ರಿ ಮತ್ತು ವಿಧಿವಿಧಾನಗಳು ಹೀಗೆಯೆ. ಈ ಎಲ್ಲ ದಾನ ವಿಧಾನಗಳಲ್ಲಿ ಬ್ರಹ್ಮಾದಿದೇವತೆಗಳಿಗೆ ಅವರವರ ಮಂತ್ರಗಳಿಂದಲೇ ವ್ರತವನ್ನು ಕೈಕೊಂಡವನು ಹೋಮ ಮಾಡಬೇಕು. ಆದುದರಿಂದ ಪಾರ್ವತೀ ಪರಮೇಶ್ವರರಿಗೆ ಇದು ಪ್ರಿಯವಾಗಿದೆ. ಎಲ್ಲೈ ಲವಣರಸವೇ, ನನಗೆ ಶಾಂತಿಯನ್ನು ನೀಡು. ನೀನು ವಿಷ್ಣುವಿನ ದೇಹದಿಂದ ಉತ್ಪನ್ನನಾಗಿರುವೆ. ಜನರ ಆರೋಗ್ಯವು ಬೆಳೆಯುವದು ನಿನ್ನಿಂದ. ಪರ್ವತರೂಪದಿಂದ ಇರುವ ನೀನು ಸಂಸಾರಸಾಗರದಿಂದ ನಮ್ಮನ್ನು ಕಾಪಾಡು.'' ಈ ವಿಧಾನದಿಂದ ಲವಣಪರ್ವತವನ್ನು ದಾನಕೊಡುವವನು ಒಂದು ಕಲ್ಪಕಾಲ ಪರ್ಯಂತ ಪಾರ್ವತೀಲೋಕದಲ್ಲಿ ವಾಸಮಾಡಿ ಅನಂತರ ದಿವ್ಯಗತಿಯನ್ನು ಹೊಂದುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೈದನೆಯ ಅಧ್ಯಾಯ ಮುಗಿದುದು*

—o—

## ಬೆಲ್ಲದಬೆಟ್ಟದ ದಾನವಿಧಿ

ಅಧ್ಯಾಯ - ೮೬

**ಈಶ್ವರ ಉವಾಚ**

**"ಅಥಃಪರಂ ಪ್ರವಕ್ಷ್ಯಾಮಿ ಗುಡಪರ್ವತ ಮುತ್ತಮಮ್ ।**
**ಯತ್ ಪ್ರದಾನಾತ್ ನರಃ ಸ್ವರ್ಗಮಾಪ್ನೋತಿ ಸುರಪೂಜಿತಃ ॥ "**

**ಈಶ್ವರ** :- ಇನ್ನು ಮುಂದೆ ಬೆಲ್ಲದ ಬೆಟ್ಟವನ್ನು ದಾನಮಾಡುವ ವಿಧಾನವನ್ನು ನಿಮಗೆ ತಿಳಿಸಿ ಹೇಳುತ್ತೇನೆ. ಈ ಗುಡಪರ್ವತ ದಾನದಿಂದ ಮಾನವರು ದೇವಮಾನ್ಯರಾಗಿ ಸ್ವರ್ಗಲೋಕವನ್ನು ಹೊಂದುವರು. ಹತ್ತು ಭಾರಗಳ ತೂಕವುಳ್ಳಷ್ಟು ಬೆಲ್ಲದಿಂದ ನಿರ್ಮಿಸಿದ ಪರ್ವತವು ಉತ್ತಮ. ಐದುಭಾರ ಬೆಲ್ಲದಿಂದ ರಚಿತವಾದ ಬೆಲ್ಲದ ಬೆಟ್ಟವು ಮಧ್ಯಮ. ಮೂರುಭಾರ ತೂಗುವಷ್ಟು ಬೆಲ್ಲದಿಂದ ಮಾಡಿದ ಗುಡಶೈಲವು ಕನಿಷ್ಠ. ಬಡತನದಲ್ಲಿರುವವರು ಇದರ ಅರ್ಧ ಭಾರ ತೂಕದ ಬೆಲ್ಲದಿಂದ ಗುಡಪರ್ವತವನ್ನು ನಿರ್ಮಿಸಿ ದಾನಮಾಡಬಹುದು. (ಒಂದು ಪಲ ಎಂದರೆ ಸುಮಾರು ಮೂರು ತೊಲ, ಇಂಥ ಎರಡು ಸಾವಿರ ಫಲಗಳ ತೂಕಕ್ಕೆ ಒಂದು ಭಾರ ಎನ್ನುವರು.)

ಹಿಂದೆ ಲವಣಾಚಲ ವಿಧಾನದಲ್ಲಿ ಹೇಳಿದಂತೆಯೇ ವಿಧಿಪೂರ್ವಕವಾಗಿ ಬೆಲ್ಲದ ಬೆಟ್ಟವನ್ನುರಚಿಸಿ ಪೂಜೆಮಾಡಿ ಬಂಗಾರದಮರಗಳನ್ನು ಅಲ್ಲಲ್ಲಿ ನೆಟ್ಟು ದೇವತೆಗಳನ್ನು ಪೂಜಿಸಬೇಕು. ಸುತ್ತು ನಾಲ್ಕು ಕಡೆಗೂ ಆ ಮುಖ್ಯ ಗುಡಪರ್ವತದ ಕಾಲುಭಾಗ ಅಳತೆಯ ಚಿಕ್ಕಚಿಕ್ಕವಿಷ್ಕಂಭ ಪರ್ವತಗಳನ್ನೂ, ಸರೋವರ, ವನ ದೇವತೆ ಮುಂತಾದವುಗಳನ್ನೂ ಹಿಂದಿನಂತೆಯೇ ನಿರ್ಮಿಸಬೇಕು ಮತ್ತು ಧಾನ್ಯ ಪರ್ವತಕ್ಕೆ ಮಾಡಿದಂತೆ ಹೋಮ, ಜಾಗರಣ, ಉಪೋಷಣ, ಲೋಕಪಾಲಕರ ನಿವೇಶನ ಮುಂತಾದವುಗಳನ್ನೆಲ್ಲ ಯಥಾಪ್ರಕಾರ ನಡೆಸಬೇಕು ಮತ್ತು ಈ ಮುಂದಿನ ಮಂತ್ರಹೇಳಿ ಪ್ರಾರ್ಥನೆಯನ್ನು ಸಲ್ಲಿಸಬೇಕು.

**ಯಥಾ ದೇವೇಷು ವಿಶ್ವಾತ್ಮಾ ಪ್ರವರೋಽಯಂ ಜನಾರ್ದನಃ ।**
**ಸಾಮವೇದಸ್ತು ವೇದಾನಾಂ ಮಹಾದೇವಸ್ತು ಯೋಗಿನಾಂ ॥**

**ಪ್ರಣವಃ ಸರ್ವ ಮಂತ್ರಾಣಾಂ ನಾರೀಣಾಂ ಪಾರ್ವತೀ ಯಥಾ ।**
**ತಥಾ ರಸಾನಾಂ ಪ್ರವರಃ ಸದೈವೇಕ್ಷುರಸೋ ಮತಃ ॥**

**ಮಮ ತಸ್ಮಾತ್ಪರಾಂ ಲಕ್ಷ್ಮೀಂ ಗುಡಪರ್ವತ ದೇಹಿವೈ ।**
**ಯಸ್ಮಾತ್ಸೌಭಾಗ್ಯದಾಯಿನ್ಯಾ ಭ್ರಾತಾ ತ್ವಂ ಗುಡಪರ್ವತ ।**
**ನಿವಾಸಶ್ಚಾಪಿ ಪಾರ್ವತ್ಯಾಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥**

ದೇವತೆಗಳಲ್ಲಿ ಜನಾರ್ದನ ಶ್ರೇಷ್ಠ, ವೇದಗಳಲ್ಲಿ ಸಾಮವೇದ, ಮಹಿಳೆಯರಲ್ಲಿ ಪಾರ್ವತಿಯೂ ಸರ್ವಶ್ರೇಷ್ಠಳು ಎಂದು ಪ್ರಸಿದ್ಧಳಾಗಿದ್ದಾಳೆ. ಎಲೈ ಬೆಲ್ಲದ ಬೆಟ್ಟವೆ, ಸೌಭಾಗ್ಯ ನೀಡುವ ಪಾರ್ವತಿ ದೇವಿಗೆ ನೀನು ಸೋದರನೂ, ನಿವಾಸಭೂತನೂ ಆಗಿರುವೆ. ಆದುದರಿಂದ ನನಗೆ ನೀನು ಸಂಪದವನ್ನೂ, ಸಂತಸವನ್ನೂ, ಸೌಭಾಗ್ಯವನ್ನೂ, ಶಾಂತಿಯನ್ನು ಕರುಣಿಸು.'' ಹೀಗೆ ಪ್ರಾರ್ಥನೆಯನ್ನು ಸಲ್ಲಿಸಿ ಈ ಗುಡಾಚಲ ದಾನದವಿಧಿಯನ್ನು ಪೂರ್ಣಗೊಳಿಸಬೇಕು. ಹೀಗೆ ವಿಧಿಪೂರ್ವಕವಾಗಿ ಬೆಲ್ಲದಬೆಟ್ಟವನ್ನು ದಾನಕೊಡುವವನು ಪಾರ್ವತೀದೇವಿಯ ಲೋಕದಲ್ಲಿ ಗಂಧರ್ವಪೂಜ್ಯನಾಗಿ ವಾಸಮಾಡುವನು. ಅನಂತರ ನೂರುಕಲ್ಪಕಾಲ ಸಪ್ತದ್ವೀಪಗಳ ಒಡೆಯನಾಗುವನು. ಪೂರ್ಣಾಯುಷ್ಯ, ಪೂರ್ತಿಆರೋಗ್ಯ ಹಾಗೂ ಸಂಪೂರ್ಣಸೌಭಾಗ್ಯವನ್ನು ಪಡೆದು ಶತ್ರುಗಳಿಗೆ ಅಜಿಂಕ್ಯನಾಗುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತಾರನೆಯ ಅಧ್ಯಾಯ ಮುಗಿದುದು*

—o—

## ಬಂಗಾರಬೆಟ್ಟದ ದಾನವಿಧಿ

**ಅಧ್ಯಾಯ - ೮೭**

**ಈಶ್ವರ ಉವಾಚ**

**''ಅಥ ಪಾಪಹರಂ ವಕ್ಷ್ಯೇ ಸುವರ್ಣಾಚಲಮುತ್ತಮಂ ।**
**ಯಸ್ಯಪ್ರದಾನಾದ್ಭವನಂ ವೈರಿಂಚಂ ಯಾತಿ ಮಾನವಃ ॥''**

**ಈಶ್ವರ :-** ಇನ್ನು ಮೇಲೆ ಪಾಪಗಳನ್ನೆಲ್ಲ ಪರಿಹರಿಸುವ ಬಂಗಾರಬೆಟ್ಟದ ದಾನದ ದಿವ್ಯವಿಧಿಯನ್ನು ಹೇಳುತ್ತೇನೆ. ಈ ಸುವರ್ಣಾಚಲ ದಾನದಿಂದ ಮಾನವರು ಬ್ರಹ್ಮಲೋಕವನ್ನು ಪಡೆಯುವರು. ಸಾವಿರಪಲತೂಕದ ಚಿನ್ನದಿಂದಾದ ಪರ್ವತವು ಉತ್ತಮ. ಐದುನೂರು ಪಲದಿಂದಾದದ್ದು ಮಧ್ಯಮ. ಅದರ ಅರ್ಧದಿಂದಾದರೆ ಅಧಮ. ಕಡುಬಡವನಾಗಿದ್ದರೆ ತನ್ನ ಶಕ್ತಿಗೆ ಅನುಸಾರವಾಗಿ ಒಂದು ಪಲ ಅಂದರೆ ಸುಮಾರು ಮೂರು ತೊಲ ಬಂಗಾರದ ಬೆಟ್ಟಮಾಡಿ ದಾನಕೊಡಬೇಕು. ಶಕ್ತಿ ಇದ್ದವರು ಜಿಪುಣತನ ಮಾಡಬಾರದು.

**ಮುನಿ ಪುಂಗವ :-** ಧ್ಯಾನ ಪರ್ವತದಂತೆಯೇ ಈ ಚಿನ್ನದ ಶೈಲವನ್ನು ಮಾಡುವಾಗ ಅದೇ ಮಂತ್ರ, ತಂತ್ರ, ವಿಧಾನಗಳನ್ನು ಅನುಸರಿಸಬೇಕು. ಸುತ್ತಲೂ ಕಾಲುಭಾಗದ ಚಿಕ್ಕ ಚಿಕ್ಕ ವಿಷ್ಕಂಭ ಪರ್ವತಗಳನ್ನು ರಚಿಸಿ ಅದೆಲ್ಲವನ್ನೂ ಋತ್ವಿಜರಿಗೆ ದಾನ ಕೊಡಬೇಕು.

**''ನಮಸ್ತೇ ಬ್ರಹ್ಮಬೀಜಾಯ ಬ್ರಹ್ಮಗರ್ಭಾಯ ತೇನಮಃ ।**
**ಯಸ್ಮಾದನಂತಫಲದಸ್ತಸ್ಮಾತ್ಪಾಹಿ ಶಿಲೋಚ್ಚಯ ॥**

**ಯಸ್ಮಾದಗ್ನೇರಪತ್ಯಂ ತ್ವಂಯಸ್ಮಾತ್ಪುಣ್ಯಂಜಗತ್ಪತೇ ।**
**ಹೇಮಪರ್ವತ ರೂಪೇಣ ತಸ್ಮಾತ್ಪಾಹಿ ನರೋತ್ತಮ ॥**

ಎಲೈ, ಸುವರ್ಣಶೈಲವೇ ನಿನ್ನಲ್ಲಿ ಭಗವಂತನ ಸನ್ನಿಧಾನವಿದೆ. ಲಕ್ಷ್ಮೀದೇವಿಯ ಸನ್ನಿಧಾನವೂ ಇದೆ. ಆ ಭಗವತ್ಸನ್ನಿಧಾನವಿದ್ದುದರಿಂದಲೇ ಭೂಮಂಡಲದಲ್ಲಿ ನಿನಗೆ ಅಷ್ಟು ಬೆಲೆ ಮತ್ತು ಮನ್ನಣೆಗಳು ಇವೆ. ಜ್ಞಾನಪ್ರಸಾರಕ್ಕೂ ಉಳಿದ ಭಗವತ್ಪ್ರೀತಿಕಾರಕವಾದ ವ್ಯಾಪಾರಗಳಿಗೂ ನೀನೇ ಮೂಲಾಧಾರ. ನಿನ್ನಿಂದ ಬೇಕಾದಷ್ಟು ಫಲಪುಣ್ಯಪ್ರಯೋಜನಗಳನ್ನು ಪಡೆಯ ಬಹುದು. ನೀನು ಅಗ್ನಿಯಿಂದ ಹುಟ್ಟಿರುವಿಯಷ್ಟೆ! ನೀನು ಇಷ್ಟು ಪರಮಪವಿತ್ರ ಪದಾರ್ಥ ಎಂದು ಗಣಿಸಲ್ಪಡುವದಕ್ಕೆ ಇದೇ ಕಾರಣ. ಈ ಬಂಗಾರಬೆಟ್ಟದ ರೂಪದಿಂದ ನನ್ನನ್ನು ರಕ್ಷಿಸು.'' ಈ ವಿಧಿಯಿಂದ ಸುವರ್ಣಪರ್ವತವನ್ನು ಮಾಡಿ ದಾನನೀಡಿದವರು ಆನಂದಪೂರ್ಣವಾದ ಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಒಂದು ನೂರು ಕಲ್ಪ ವಾಸವಾಗಿದ್ದು ಅನಂತರ ಮೋಕ್ಷವನ್ನು ಐದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೇಳನೆಯ ಅಧ್ಯಾಯವು ಮುಗಿದುದು*



## ಎಳ್ಳಿನಪರ್ವತದ ದಾನವಿಧಿ

**ಅಧ್ಯಾಯ - ೮೮**

**ಈಶ್ವರ ಉವಾಚ**

**''ಅತಃಪರಂ ಪ್ರವಕ್ಷ್ಯಾಮಿ ತಿಲಶೈಲಂವಿಧಾನತಃ ॥**
**ಯತ್ಪ್ರದಾನಾನ್ನರೋ ಯಾತಿ ವಿಷ್ಣುಲೋಕಂ ಸನಾತನಂ ॥''**

**ಈಶ್ವರ** :- ಇನ್ನು ಮುಂದೆ ಎಳ್ಳಿನಪರ್ವತದ ದಾನದ ವಿಧಾನವನ್ನು ಹೇಳುವೆನು. ಈ ತಿಲಶೈಲ ದಾನದಿಂದ ಮಾನವನು ಸನಾತನವಾದ ವಿಷ್ಣುಲೋಕವನ್ನು ಹೊಂದುತ್ತಾನೆ. ಹತ್ತು ಕೊಳಗ ಎಳ್ಳಿನಿಂದ ಮಾಡಿದ ತಿಲ ಪರ್ವತವು ಉತ್ತಮ. ಐದು ಕೊಳಗ ಎಳ್ಳಿನಿಂದ ಮಾಡಿದ್ದು ಮಧ್ಯಮ. ಮೂರು ಕೊಳಗಗಳಿಂದ ಮಾಡಿದ್ದು ಕನಿಷ್ಠ. ಹಿಂದಿನಂತೆಯೇ ಮಂತ್ರ ತಂತ್ರ ವಿಧಿವಿಧಾನಗಳನ್ನೆಲ್ಲ ಅನುಸರಿಸಿ ಮಾಡಬೇಕು. ಈ ಎಳ್ಳಿನ ಪರ್ವತವನ್ನು ದಾನಕೊಡುವಾಗ ಮುಂದೆ ಹೇಳಿದ ಮಂತ್ರವನ್ನು ಉಚ್ಚರಿಸಬೇಕು.

**''ಯಸ್ಮಾನ್ಮಧುವಧೇ ವಿಷ್ಣೋರ್ದೇಹಸ್ವೇದ ಸಮುದ್ಭವಾಃ ।**
**ತಿಲಾಃಕುಶಾಶ್ಚ ಮಾಷಾಶ್ಚತಸ್ಮಾಚ್ಛಾಂತ್ಯೈ ಭವಂತ್ವಿಹ ॥**

**ಹವ್ಯೇ ಕವ್ಯೇ ಚ ಯಸ್ಮಾಚ್ಚ ತಿಲಾಏವಾಭಿರಕ್ಷಣಂ ।**
**ಭವಾದುದ್ಧರ ಶೈಲೇಂದ್ರ ತಿಲಾಚಲ ನಮೋಸ್ತುತೇ ॥''**

ಮಧುನಾಮಕನಾದ ದೈತ್ಯನನ್ನು ಶ್ರೀ ಹರಿಯು ಸಂಹಾರಮಾಡುವಾಗ ಅವನ ದೇಹದ ಬೆವರಿನ ಹನಿಗಳಿಂದ ಎಳ್ಳು, ದರ್ಭೆ, ಉದ್ದುಗಳು ಹುಟ್ಟಿರುತ್ತವೆ.

ಆದುದರಿಂದ ಅವು ಅತ್ಯಂತ ಪವಿತ್ರವಾಗಿವೆ. ದೇವತೆಗಳನ್ನು ಉದ್ದೇಶಿಸಿ ಮಾಡುವ ಹವ್ಯಕಾರ್ಯಗಳಲ್ಲಿಯೂ, ಪಿತೃಗಳನ್ನು ಉದ್ದೇಶಿಸಿ ಮಾಡುವ ಕವ್ಯ ಕಾರ್ಯಗಳಲ್ಲಿಯೂ ಎಳ್ಳು ಅತ್ಯಂತ ಆವಶ್ಯಕವಾಗಿದೆ. ದೇವತಾ ಪಿತೃಕಾರ್ಯಗಳನ್ನು ಸಾಂಗವಾಗಿ ಪೂರೈಸಿ ಯಜಮಾನನನ್ನು ರಕ್ಷಿಸಲು ಎಳ್ಳುಗಳ ಆವಶ್ಯಕತೆ ಇದೆ. ಆದುದರಿಂದ ಶೈಲಪತಿಯಾದ ತಿಲಪರ್ವತವೇ, ನಾನು ನಿನ್ನನ್ನು ನಮಸ್ಕರಿಸುವೆ. ಸಂಸಾರದಿಂದ ನನ್ನನ್ನು ನೀನು ಉದ್ಧರಿಸು.'' ಹೀಗೆ ಪ್ರಾರ್ಥನೆ ಮಾಡಿ ತಿಲಪರ್ವತವನ್ನು ದಾನಮಾಡಿದವನು ಎಂದೂ ತಿರುಗಿಬಾರದ ವಿಷ್ಣುಪದವನ್ನು ಮುಂದೆ ಹೊಂದುವನು. ಈಗ ಬದುಕಿದ್ದಾಗಲೂ ದೀರ್ಘಾಯುಷ್ಯವನ್ನು ಹೊಂದಿ ಮಕ್ಕಳು ಮೊಮ್ಮಕ್ಕಳೊಂದಿಗೆ ಸುಖದಿಂದ ಜೀವಿಸುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ಹತ್ತಿಯಪರ್ವತದ ದಾನ

**ಅಧ್ಯಾಯ - ೮೯**

**ಈಶ್ವರ ಉವಾಚ**

**ಅಥಾತಃ ಸಂಪ್ರವಕ್ಷ್ಯಾಮಿ ಕಾರ್ಪಾಸಾಚಲಮುತ್ತಮಂ ।**
**ಯತ್ಪ್ರದಾನಾನ್ನರೋ ನಿತ್ಯಮಾಪ್ನೋತಿಪರಮಂಪದಂ ॥**

**ಈಶ್ವರ :-** ಇನ್ನು ಮುಂದೆ ದಾನಮಾತ್ರದಿಂದ ದಿವ್ಯಪದವನ್ನು ಕೊಡುವ ಹತ್ತಿಯಬೆಟ್ಟದ ದಾನವಿಧಿಯನ್ನು ಹೇಳುತ್ತೇನೆ. ಇಪ್ಪತ್ತು ಭಾರಗಳಿಂದ ರಚಿಸಿದ ಹತ್ತಿಯ ಪರ್ವತ ಉತ್ತಮ. ಹತ್ತು ಭಾರಗಳಿಂದಾದರೆ ಮಧ್ಯಮ. ಐದು ಭಾರಗಳಿಂದಾದರೆ ಅಧಮ. ಎಂಥ ಬಡವನಾದರೂ ಒಂದು ಭಾರ ತೂಕ ಹತ್ತಿಯನ್ನಾದರೂ ಪರ್ವತಾಕಾರವಾಗಿ ಒತ್ತಿಟ್ಟುಮಾಡಿ ದಾನನೀಡಬೇಕು. ಉಳಿದೆಲ್ಲ ಮಂತ್ರ ತಂತ್ರಗಳು ಹಿಂದಿನಂತೆ. ದಾನದ ಮಂತ್ರದಲ್ಲಿ ಮಾತ್ರ ತುಸು ಬದಲು.

**''ತ್ವಮೇವಾಽವರಣಂ ಯಸ್ಮಾಲ್ಲೋಕಾನಾಮಿಹ ಸರ್ವದಾ ।**
**ಕಾರ್ಪಾಸಾದ್ರೇ ನಮಸ್ತುಭ್ಯಮಘೌಘಧ್ವಂಸನೋಭವ ॥''**

ಜಗತ್ತಿನಲ್ಲಿಯ ಜನರಿಗೆಲ್ಲ ಹತ್ತಿಯೇ ಆವರಣ. ಅರ್ಥಾತ್ ಇದರಿಂದ ನಿರ್ಮಿತವಾದ ಬಟ್ಟೆಗಳಿಂದಲೇ ಎಲ್ಲರ ಮರ್ಯಾದೆಯ ರಕ್ಷಣೆ. ಆದುದರಿಂದ ಎಲೈ ಹತ್ತಿಯಪರ್ವತವೇ, ನಿನಗೆ ನಮಿಸುವೆ. ನನ್ನ ಪಾಪಗಳ ಗುಂಪನ್ನೆಲ್ಲ ನಾಶಪಡಿಸು.'' ಹೀಗೆ ಹತ್ತಿಯ ಪರ್ವತವನ್ನು ಮಹಾದೇವರ ಸನ್ನಿಧಾನದಲ್ಲಿ ದಾನಕೊಟ್ಟವನು ಒಂದು ಕಲ್ಪಕಾಲಮುಂದೆ ರುದ್ರಲೋಕದಲ್ಲಿ ವಾಸಿಸುವನು. ಇಲ್ಲಿರುವವರೆಗೆ ರಾಜ್ಯ ಸುಖ ಹೊಂದುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ತುಪ್ಪದಬೆಟ್ಟದ ದಾನ

ಅಧ್ಯಾಯ - ೯೦

**ಈಶ್ವರ ಉವಾಚ**

**"ಅತಃ ಪರಂ ಪ್ರವಕ್ಷ್ಯಾಮಿ ಘೃತಾಚಲಮನುತ್ತಮಂ ।**
**ತೇಜೋಽಮೃತಮಯಂ ದಿವ್ಯಂಮಹಾಪಾತಕನಾಶನಂ ॥"**

**ಈಶ್ವರ** :- ಇದರ ಮುಂದೆ ತೋಜೋರೂಪವಾದ ಅಮೃತಮಯವಾದ ಘೃತಾಚಲದದಾನವಿಧಿಯನ್ನು ಹೇಳುತ್ತೇನೆ. ಈ ತುಪ್ಪದಪರ್ವತದ ಪ್ರದಾನವು ಪಂಚಮಹಾಪಾತಕಗಳನ್ನು ನಾಶಪಡಿಸಿ ಸ್ವರ್ಗಸುಖವನ್ನು ನೀಡುವ ಅತ್ಯುತ್ತಮ ವ್ರತವಾಗಿರುತ್ತದೆ. ಇಪ್ಪತ್ತು ಕೊಡ ತುಪ್ಪದಿಂದ ಮಾಡಿದ ಘೃತದ ಗಿರಿಯು ಉತ್ತಮ. ಹತ್ತು ಕೊಡದಿಂದ ಮಾಡಿದ್ದು ಮಧ್ಯಮ. ಐದು ಕೊಡದಿಂದ ಮಾಡಿದ್ದು ಕನಿಷ್ಠ. ಅತ್ಯಂತ ದಟ್ಟ ದರಿದ್ರನಾಗಿದ್ದರೆ ಕನಿಷ್ಠ ಎರಡು ಕೊಡ ತುಪ್ಪದಿಂದಾದರೂ ಘೃತಪರ್ವತವನ್ನು ಮಾಡಿ ವಿಧಿಪೂರ್ವಕವಾಗಿ ದಾನ ಕೊಡಬೇಕು.

ನಾಲ್ಕು ಕಡೆಗೂ ಸುತ್ತಲೂ ಹಿಂದೆ ಹೇಳಿದಂತೆ ವಿಷ್ಕಂಭಪರ್ವತಗಳನ್ನು ಕಾಲುಭಾಗ ತುಪ್ಪದಿಂದ ಮಾಡಬೇಕು. ಆ ತುಪ್ಪದ ಕೊಡಗಳ ಮೇಲೆ ಅಕ್ಕಿ ತುಂಬಿದ ಪಾತ್ರೆಗಳನ್ನಿಟ್ಟು ಗಂಧ, ಪುಷ್ಪ, ಬಿಳಿಬಟ್ಟೆ, ಕಬ್ಬು, ಹಣ್ಣು ಮುಂತಾದವುಗಳನ್ನೆಲ್ಲ ಅಲಂಕರಿಸಿ ಇಡಬೇಕು. ಹಿಂದಿನ ಧಾನ್ಯಪರ್ವತದ ದಾನವಿಧಿಯಲ್ಲಿ ಹೇಳಿದಂತೆ ವಿಧಿಪೂರ್ವಕವಾಗಿ ದೇವತಾ ಪ್ರತಿಷ್ಠಾಪನ, ಹೋಮ, ದೇವರಪೂಜೆ ಮುಂತಾದವುಗಳನ್ನು ನಡೆಸಬೇಕು. ಮರುದಿನ ಮುಂಜಾನೆ ಆ ತುಪ್ಪದಬೆಟ್ಟವನ್ನು ಮುಖ್ಯ ಆಚಾರ್ಯನಿಗೂ, ಉಳಿದ ನಾಲ್ಕು ಉಪಪರ್ವತಗಳನ್ನು, ಉಳಿದ ಋತ್ವಿಜರಿಗೂ ದಾನಕೊಡಬೇಕು.

**ಸಂಯೋಗಾದ್ಘೃತಮುತ್ಪನ್ನಂ ಯಸ್ಮಾದಮೃತತೇಜಸೋಃ ।**
**ತಸ್ಮಾದ್ಘೃತಾರ್ಚಿರ್ವಿಶ್ವಾತ್ಮಾ ಪ್ರೀಯತಾಮತ್ರಶಂಕರಃ ॥**

ಅಮೃತ ಮತ್ತು ತೇಜಸ್ಸುಗಳ ಸಂಯೋಗದಿಂದ ಹುಟ್ಟದೆ ಈ ತುಪ್ಪ. ತುಪ್ಪದ ಒಳಗಿರುವ ಸತ್ವವೆಂದರೆ ಸಾಕ್ಷಾತ್ ಶಿವನೇ ಆಗಿದ್ದಾನೆ. ಸರ್ವಾಂತರ್ಯಾಮಿಯಾದ ಅಂಥ ಶಂಕರನು ಈ ಘೃತಾಚಲದಾನದಿಂದ ಪ್ರೀತನಾಗಲಿ." ಈ ಮಂತ್ರ ಹೇಳಿ ವಿಧಿಪೂರ್ವಕವಾಗಿ ಘೃತಾಚಲವನ್ನು ದಾನಕೊಟ್ಟ ಮನುಷ್ಯನು ಮಹಾಪಾಪಿಯಾದರೂ ಪುನೀತನಾಗಿ ಶಿವಲೋಕವನ್ನು ಹೊಂದುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ರತ್ನಾಚಲ ದಾನವಿಧಿ

**ಅಧ್ಯಾಯ - ೯೧**

**ಈಶ್ವರ ಉವಾಚ**

**ಅತಃಪರಂ ಪ್ರವಕ್ಷ್ಯಾಮಿ ರತ್ನಾಚಲಮನುತ್ತಮಂ ।**
**ಮುಕ್ತಾಫಲಸಹಸ್ರೇಣ ಪರ್ವತಃ ಸ್ಯಾದನುತ್ತಮಃ ॥**

**ಈಶ್ವರ** :- ಇದಾದ ಬಳಿಕ ರತ್ನಪರ್ವತದ ದಾನದವಿಧಿ. ಸಾವಿರ ಮುತ್ತುಗಳಿಂದ ನಿರ್ಮಿಸಿದ ರತ್ನಪರ್ವತ ಉತ್ತಮ, ಐನೂರರಿಂದ ಮಧ್ಯಮ, ಮುನ್ನೂರಿಂದ ರಚಿತವಾದರೆ ಅಧಮ. ಇದರ ನಾಲ್ಕುಕಡೆ ಬಗೆಬಗೆಯ ರತ್ನಗಳಿಂದ ವಿಷ್ಕಂಭಗಿರಿಗಳರಚನೆಯಾಗಬೇಕು. ಪೂರ್ವ ದಿಕ್ಕಿನಲ್ಲಿ ವಜ್ರ, ಗೋಮೇಧಗಳಿಂದ, ದಕ್ಷಿಣದಲ್ಲಿ ಇಂದ್ರನೀಲ ಪದ್ಮರಾಗಗಳಿಂದ, ಪಶ್ಚಿಮಕ್ಕೆ ಹವಳ ವೈಢೂರ್ಯಗಳಿಂದ ಉತ್ತರದ ನಿಟ್ಟಿನಲ್ಲಿ ಚಿನ್ನ ಹಾಗೂ ಕೆಂಪು ಹರಳುಗಳಿಂದ ಮುಖ್ಯಬೆಟ್ಟದಕಾಲುಭಾಗ ಅಳತೆಯುಳ್ಳ ನಾಲ್ಕುಪುಟ್ಟಬೆಟ್ಟಗಳನ್ನು ನಿರ್ಮಿಸಬೇಕು. ಧಾನ್ಯಪರ್ವತದಲ್ಲಿ ಹೇಳಿದಂತೆ ಎಲ್ಲ ವಿಧಿವಿಧಾನಗಳನ್ನು ಅನುಸರಿಸಿ ಪೂಜೆಮಾಡಿ ಪ್ರಾತಃಕಾಲದಲ್ಲಿ ಮುಂದಿನ ಮಂತ್ರದಿಂದ ಆಚಾರ್ಯರಿಗೆ ಆ ಮಣಿಶೈಲವನ್ನು ದಾನಕೊಡಬೇಕು.

**''ಯಸ್ಮಾದ್ರತ್ನಪ್ರದಾನೇನ ತುಷ್ಟಿಂ ಪ್ರಕುರುತೇ ಹರಿಃ ।**
**ಸದಾರತ್ನಪ್ರದಾನೇನ ತಸ್ಮಾನ್ನಃ ಪಾಹಿಪರ್ವತ ॥**
**ಯದಾ ದೇವಗಣಾಃ ಸರ್ವೇ ಸರ್ವರತ್ನೇಷ್ವವಸ್ಥಿತಾಃ**
**ತ್ವಂಚರತ್ನಮಯೋ ನಿತ್ಯಂ ನಮಸ್ತೇಽಸ್ತು ಸದಾಚಲ ''**

''ರತ್ನದಾನದಿಂದ ಶ್ರೀ ಹರಿಗೆ ಪ್ರೀತಿ, ಎಲೈ ಪರ್ವತವೇ, ನಿನ್ನ ದಾನದಿಂದ ನಮಗೆ ನಿರಂತರವೂ ರತ್ನಗಳು ದೊರಕುವಂತಾಗಲಿ, ರತ್ನಗಳಲ್ಲೆಲ್ಲ ದೇವತಾ ಸನ್ನಿಧಾನ ಇರುವುದು. ರತ್ನಮಯವಾದ ಪರ್ವತವೇ ನಿನಗೆ ನಮಸ್ಕಾರ. ನೀನು ನಮ್ಮನ್ನು ರಕ್ಷಿಸು.'' ಹೀಗೆ ಹೇಳಿ ರತ್ನಶೈಲವನ್ನು ದಾನಮಾಡುವವನು ದೇವೇಂದ್ರನಿಂದ ಪೂಜಿತನಾಗಿ ವಿಷ್ಣುಲೋಕದಲ್ಲಿ ವಾಸಮಾಡುವನು. ಈ ಲೋಕದಲ್ಲಿ ಅವನು ಮಾಡಿದ ಬ್ರಹ್ಮಹತ್ಯಾದಿ ಮಹಾಪಾತಕಗಳೂ ಕೂಡ ಪರಿಹಾರವಾಗುವವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೊಂದನೆಯ ಅಧ್ಯಾಯ ಮುಗಿದುದು*

—o—

ಬೆಳ್ಳಿಯಬೆಟ್ಟದ ದಾನ

ಅಧ್ಯಾಯ - ೯೨

**ಈಶ್ವರ ಉವಾಚ**

**ಪಿತೃಣಾಂ ವಲ್ಲಭೋ ಯಸ್ಮಾದ್ಧರೀಂದ್ರಾಣಾಂಶಿವಸ್ಯಚ ।**
**ಪಾಹಿ ರಜತ ತಸ್ಮಾತ್ತ್ವಂ ಶೋಕಸಂಸಾರಸಾಗರಾತ್ ॥**

"ಬೆಳ್ಳಿ ಪಿತೃಗಳಿಗೆ ಅತ್ಯಂತ ಪ್ರಿಯ, ಶ್ರೀ ಹರಿಗೂ, ಶಿವನಿಗೂ, ದೇವೇಂದ್ರನಿಗೂ ಅದು ಇಷ್ಟವಾದುದು. ಸರ್ವಪ್ರಿಯವಾದ ರಜತವೇ, ನನ್ನನ್ನು ಸಂಸಾರಸಾಗರದಿಂದ ದಾಟಿಸಿ ಕಾಪಾಡು " ಎಂದು ಪ್ರಾರ್ಥನಾಮಂತ್ರವನ್ನು ಹೇಳಿ ಬೆಳ್ಳಿಯಬೆಟ್ಟವನ್ನು ದಾನಮಾಡಬೇಕು. ಇದರ ವಿಧಿ ವಿಧಾನಗಳೆಲ್ಲವೂ ಹಿಂದಿನಂತೆಯೇ.

ಉತ್ತಮ ಕಲ್ಪ ಹತ್ತು ಸಾವಿರ ಪಲ ಎಂದರೆ ಸುಮಾರು ಮೂವತ್ತು ಸಾವಿರ ತೊಲ ಬೆಳ್ಳಿಯಿಂದಮಾಡಿದ ರಜತಾಚಲ. ಇದರ ಅರ್ಧದಿಂದ ಮಧ್ಯಮ. ಇದರ ಕಾಲುಭಾಗದಿಂದ ಮಾಡಿದರೆ ಕನಿಷ್ಠ. ಈ ಬೆಳ್ಳಿಯಬೆಟ್ಟದ ತಪ್ಪಲು ಪ್ರದೇಶಗಳನ್ನೆಲ್ಲ ಚಿನ್ನದ ತಗಡಿನಿಂದ ಹೊದಿಸಿ ಬ್ರಹ್ಮ-ವಿಷ್ಣು-ಸೂರ್ಯರನ್ನು ಸ್ಥಾಪಿಸಬೇಕು. ಉಳಿದ ಪರ್ವತಗಳಲ್ಲಿ ಬೆಳ್ಳಿಯಿಂದಮಾಡಬೇಕೆಂದು ಹೇಳಿದ ಸ್ಥಾನಗಳನ್ನೆಲ್ಲ ಈ ರಜತಾದ್ರಿ ವಿಧಾನದಲ್ಲಿ ಬಂಗಾರದಿಂದಮಾಡಿರಿಸಬೇಕು. ಹೋಮ, ಉಪವಾಸ, ಜಾಗರ, ಪೂಜೆ ಮುಂತಾದವುಗಳನ್ನೆಲ್ಲ ಯಥಾವಿಧಿಯಿಂದಮಾಡಿ ಮರುದಿನ ಪ್ರಾತಃಕಾಲದಲ್ಲಿ ಈ ರಜತಾದ್ರಿಯನ್ನೂ, ಉಳಿದ ಉಪಪರ್ವತಗಳನ್ನೂ ಆಚಾರ್ಯರಿಗೂ, ಋತ್ವಿಜರಿಗೂ ದಾನಮಾಡಬೇಕು. ಇದರಿಂದ ಹತ್ತುಸಾವಿರಗೋದಾನದಪುಣ್ಯ, ಗಂಧರ್ವರಿಂದ ಗೌರವ, ಚಂದ್ರಲೋಕದಲ್ಲಿ ಶಾಶ್ವತ ನಿವಾಸ ಪ್ರಾಪ್ತವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಸಕ್ಕರೆಯಗುಡ್ಡದ ಪ್ರದಾನವಿಧಿ

ಅಧ್ಯಾಯ - ೯೩

**ಈಶ್ವರ ಉವಾಚ**

**''ಸೌಭಾಗ್ಯಾಮೃತಸಾರೋಽಯಂ ಪರ್ವತಃ ಶರ್ಕರಾಮಯಃ ।**
**ತಸ್ಮಾದಾನಂದಕಾರೀ ತ್ವಂಭವಶೈಲೇಂದ್ರ ಸರ್ವದಾ ॥**

**ಅಮೃತಂ ಪಿಬತಾಂ ಯೇ ತು ನಿಪ್ಪೇತುರ್ಭುವಿಶೀಕರಾಃ ।**
**ದೇವಾನಾಂ ತತ್ಸಮುತ್ಥಸ್ತ್ವಂ ಪಾಹಿನಃಶರ್ಕರಾಚಲ ॥''**

**ಈಶ್ವರ** :- ''ಈ ಸಕ್ಕರೆಯಗುಡ್ಡವು ಸೌಭಾಗ್ಯರೂಪವಾದ ಅಮೃತದ ಸಾರರೂಪವಾಗಿದೆ. ಆದುದರಿಂದಲೇ ಎಲೈ ಶರ್ಕರಾಚಲವೇ, ನೀನು ನಮಗೆ ಸದಾಕಾಲವೂ ಸಂತಸವನ್ನು ನೀಡು. ಹಿಂದೆ ದೇವತೆಗಳು ಅಮೃತವನ್ನು ಪ್ರಾಶನ ಮಾಡುವಾಗ ನೆಲದಲ್ಲಿ ತಟಕಿಕ್ಕಿದ್ದ ಆ ಅಮೃತದ ಹನಿಗಳಿಂದಲೇ ಸಕ್ಕರೆಯ ಮಧುರವಾದ ಸತ್ವಭಾಗವು ರೂಪಗೊಂಡು ಮುಂದೆ ಕಾಮದೇವನ ಬಿಲ್ಲಾದ ಕಬ್ಬಿನ ಜಲ್ಲೆಯಿಂದ ಪೂರ್ಣ ಸಕ್ಕರೆಯಾಗಿ ಅದು ಹೊರಹೊಮ್ಮಿತು. ಇಂಥ ಶರ್ಕರೆಯ ರಾಶಿರೂಪವಾದ ಶರ್ಕರಾಶೈಲವೇ, ನನ್ನನ್ನು ಭವಸಾಗರದಿಂದ ಪಾರುಗೊಳಿಸು'' ಎಂದು ಶರ್ಕರಾಚಲವನ್ನು ದಾನಮಾಡುವಾಗ ಮಂತ್ರಹೇಳಬೇಕು. ಇದರ ರಚನೆ ಪೂಜೆ ಮಂತ್ರ ತಂತ್ರಗಳನ್ನೆಲ್ಲ ಧಾನ್ಯ ಪರ್ವತಾದಿ ದಾನ ಪ್ರಕರಣದಲ್ಲಿ ಹೇಳಿದಂತೆಯೇ.

ಈ ಸಕ್ಕರೆಯ ಬೆಟ್ಟವನ್ನು ಎಂಟು, ನಾಲ್ಕು, ಎರಡು ಭಾರತೂಕದ ಸಕ್ಕರೆಯಿಂದ ಉತ್ತಮ, ಮಧ್ಯಮ, ಕನಿಷ್ಠ, ಕಲ್ಪದಲ್ಲಿ ಯಥಾಶಕ್ತಿ ರಚಿಸಿ, ಉತ್ತಮ ಕಾಲುಭಾಗ ಪ್ರಮಾಣದಲ್ಲಿ ಉಪಪರ್ವತಗಳನ್ನೂ ನಿರ್ಮಿಸಿ, ನಡುವಿನ ಸಕ್ಕರೆ ಗುಡ್ಡದ ಮೇಲೆ ಮೂರುಬಂಗಾರದ ಮರಗಳನ್ನು ನೆಡಬೇಕು. ಉಪಪರ್ವತಗಳ ಶಿಖರಗಳ ಮೇಲೆ ಮಂದಾರ, ಕಲ್ಪವೃಕ್ಷ, ಪಾರಿಜಾತ ಎಂಬ ಮೂರು ಚಿನ್ನದ ಮರಗಳನ್ನು ನೆಡಬೇಕು. ಪೂರ್ವ-ಪಶ್ಚಿಮ ದಿಕ್ಕುಗಳಲ್ಲಿ ಸಂತಾನ, ಹರಿಚಂದನ ಎಂಬ ಗಿಡಗಳನ್ನು ಹಚ್ಚಬೇಕು.

ಈ ಎಲ್ಲ ಸಾಧನ ಸಲಕರಣೆಗಳಿಂದ ಸಜ್ಜುಗೊಂಡ ಸಕ್ಕರೆಯಶೈಲವನ್ನು ಯಥೋಕ್ತ, ಆವಾಹನ, ಹೋಮ, ಹವನ, ಪೂಜಾದಿ ವಿಧಾನಗಳ ನಂತರ ಆಚಾರ್ಯರಿಗೆ ದಾನಕೊಡಬೇಕು. ಉಪಪರ್ವತಗಳನ್ನು ಋತ್ವಿಜರಿಗೆ ದಾನವಾಗಿ ನೀಡಬೇಕು. ಅನಂತರ ಭಕ್ತಿಯಿಂದ ಬ್ರಾಹ್ಮಣ ಭೋಜನಮಾಡಿಸಿ ಅವರ ಅಪ್ಪಣೆಯಿಂದ ತಾನೂ ಉಪ್ಪು, ಖಾರ ಬಿಟ್ಟು ಭೋಜನಮಾಡಬೇಕು. ಈ ಶರ್ಕರಾಚಲದ ನಿರ್ಮಾಣಕಾರ್ಯದಲ್ಲಿ ಉಪಯೋಗಿಸಿದ ಪದಾರ್ಥಗಳನ್ನೆಲ್ಲ ಬ್ರಾಹ್ಮಣರ ಮನೆಗೆ ಕಳಿಸಿ ಕೊಡಬೇಕು. ಹೀಗೆ ವಿಧಿಪೂರ್ವಕವಾಗಿ ಶರ್ಕರಾಶೈಲವನ್ನು ದಾನಮಾಡುವ ಮನುಜನು ಸರ್ವಪಾಪಗಳಿಂದ ಮುಕ್ತನಾಗಿ ಶ್ರೀ ಹರಿಯ

ಅಪ್ಪಣೆಯಿಂದ ದಿವ್ಯವಿಮಾನದಲ್ಲಿ ಸಂಚರಿಸುವನು. ಅನೇಕ ಜನ್ಮಗಳಲ್ಲಿ ಸಪ್ತದ್ವೀಪವತಿಯಾದ ಭೂಮಿಗೆಲ್ಲ ಅಧಿಪತಿಯಾಗಿ ಆಯುರಾರೋಗ್ಯ ಸಂಪದಗಳನ್ನು ಪಡೆದು ಕೊನೆಯಲ್ಲಿ ಪರಮಪದವನ್ನು ಹೊಂದುವನು.

**ಈಶ್ವರ** :- ಹಿಂದೆ ಬೃಹತ್ಕಲ್ಪದಲ್ಲಿ ಧರ್ಮಮೂರ್ತಿ ಎಂಬ ದೊರೆಯಿದ್ದನು. ದೇವೇಂದ್ರನಿಗೂ ಅವನಿಗೂ ಒಳ್ಳೆ ಸಖ್ಯ. ದೇವತಾ ಪಕ್ಷಪಾತದಿಂದ ಅವನು ಸುರವೈರಿಗಳಾದ ಸಾವಿರಾರು ದೈತ್ಯರನ್ನು ಸಂಹರಿಸಿದನು. ಸೂರ್ಯಚಂದ್ರರಿಗಿಂತ ಮಿಗಿಲಾಗಿತ್ತು ಅವನ ಕಾಯಕಾಂತಿ, ಕಾಮರೂಪಿಯಾದ ಅವನನ್ನು ಕಂಡ ಕೂಡಲೇ ವೈರಿಗಳೆಲ್ಲರೂ ಹತಪ್ರಭರಾಗುತ್ತಿದ್ದರು. ಜೀವನದಲ್ಲಿ ಸೋಲು ಎಂದರೆ ಏನು ಎಂಬುದೇ ಅವನಿಗೆ ಗೊತ್ತಿರಲಿಲ್ಲ. ಅವನ ಮಡದಿ ಭಾನುಮತಿ. ರೂಪದಲ್ಲಿ ಸಾಕ್ಷಾತ್ ಲಕ್ಷ್ಮೀ. ಸುರಲೋಕ ಸುಂದರಿಯರ ಸೌಂದರ್ಯವನ್ನೆಲ್ಲ ನಿವಾಳಿಸುವಂತಿತ್ತು ಅವಳ ಚೆಲುವು. ಈ ಪಟ್ಟದರಸಿ ದೊರೆಗೆ ಪ್ರಾಣಕ್ಕಿಂತ ಪ್ರಿಯೆ. ಹತ್ತುಸಾವಿರ ಹೆಂಗಳೆಯರಲ್ಲಿ ಎದ್ದು ತೋರುತ್ತಿದ್ದಳು ಆ ರೂಪರಾಣಿ. ಮಹಾರಾಜನ ಪಟ್ಟದರಸಿಯಾದಂತೆ ಹೃದಯದರಸಿಯೂ ಆಗಿದ್ದಳು ಆ ಭಾನುಮತಿ.

ಒಂದುದಿನ ರಾಜನ ಒಡ್ಡೋಲಗದಲ್ಲಿ ಸಾವಿರಾರು ಜನ ಸಾಮಂತರಾಜರು ಈ ಸಾರ್ವಭೌಮವನ್ನು ಓಲೈಸುತ್ತಿದ್ದಾರೆ. ಅಗ್ರಪೀಠದಲ್ಲಿ ಕುಲಗುರು ವಸಿಷ್ಠರು. ಅವರ ಸುತ್ತಲೂ ಅನೇಕ ಬ್ರಹ್ಮರ್ಷಿಗಳು. ಆಚೆಗೆ ಆಸ್ಥಾನಪಂಡಿತರು, ಅವರ ಪಕ್ಕದಲ್ಲಿಯೇ ರಾಜಕವಿಗಳು ಮಂಡಿಸಿದ್ದರು. ಈ ಸಂದರ್ಭದಲ್ಲಿ ಮಹಾರಾಜನು ರಾಜಗುರು ವಶಿಷ್ಠರಿಗೆ ವಿನಯದಿಂದ ವಂದಿಸಿ ಬಾಗಿ ಪ್ರಶ್ನೆ ಕೇಳಿದ- ''ಗುರುಗಳೇ, ಲಕ್ಷ್ಮೀದೇವಿಯು ನನ್ನ ಮೇಲೆ ಸುಪ್ರಸನ್ನಳಾಗಿ ಯಾವಾಗಲೂ ಸೌಭಾಗ್ಯ ವೃಷ್ಟಿಯನ್ನೇ ಕರೆಯುತ್ತಿದ್ದಾಳೆ. ಇದಕ್ಕೆ ಏನು ಕಾರಣ ? ಮತ್ತು ನನ್ನ ದೇಹದಿಂದ ಯಾವಾಗಲೂ ದಿವ್ಯಕಾಂತಿ ಹೊರಹೊಮ್ಮಿ ಸೊಗಸನಾಂತು ಸೂಸುತ್ತದೆ. ಇದಕ್ಕಾದರೂ ಏನು ಕಾರಣ ? ಈ ಜನ್ಮದಲ್ಲಿಯಂತೂ ನಾನು ಅಂಥ ಮಹಾಪುಣ್ಯಕಾರ್ಯ ವಿಶೇಷವನ್ನು ಮಾಡಿದ್ದು ನೆನಪಿಲ್ಲ. ಇಂಥ ಅಪರೂಪವಾದ ಸೌಂದರ್ಯ ಸೌಭಾಗ್ಯಗಳು ದೇವತಾನುಗ್ರಹವಿಲ್ಲದೇ ದೊರಕಲಾರವು. ಅಂಥ ದೇವತಾನು ಗ್ರಹವಾಗಲು ನಾನು ಹಿಂದೆ ಏನು ಮಾಡಿದ್ದೇನೆ ? ತಿಳಿಸಿರಿ.

**ವಸಿಷ್ಠ** :- ಹಿಂದೆ ಲೀಲಾವತೀ ಎಂಬ ವೇಶ್ಯಾಂಗನೆ ಇದ್ದಳು. ಅವಳು ಮಹಾಶಿವಭಕ್ತೆ. ನಿಯಮನಿಷ್ಠೆ. ವ್ರತಪರಾಯಣೆ. ಹಿರಿಯರ ಅಪ್ಪಣೆಯಂತೆ ಅವಳು ಶಾಸ್ತ್ರೋಕ್ತವಿಧಿವಿಧಾನಗಳಿಂದ ಚಿನ್ನದಮರ ಮುಂತಾದವುಗಳೊಂದಿಗೆ ಉಪ್ಪಿನ ಬೆಟ್ಟವನ್ನು ಗುರುಗಳಿಗೆ ಚತುರ್ದಶಿಯದಿನ ದಾನಕೊಟ್ಟಳು. ಆ ವೇಶ್ಯೆಯ ಮನೆಯಲ್ಲಿ ಶೌಂಡ ಎಂಬ ಹೆಸರಿನ ಶೂದ್ರ ಪರಿಚಾರಕನಿದ್ದ. ಚಿನ್ನದ ಕೆಲಸಗಳಲ್ಲಿ ಪಳಗಿದ ಶೌಂಡನು ಲವಣಾಚಲದಾನವಿಧಿಗೆ ಬೇಕಾದ ಬಂಗಾರದ ದೇವತಾಮೂರ್ತಿಗಳನ್ನೂ ಮರ ಮುಂತಾದ ಸಲಕರಣೆಗಳನ್ನೂ ಅತ್ಯಂತ ಶ್ರದ್ಧೆಯಿಂದ ಮಾಡಿಕೊಡುತ್ತಿದ್ದನು. ಅದಕ್ಕಾಗಿ ಕೂಲಿಯನ್ನು ತೆಗೆದುಕೊಳ್ಳುತ್ತಿದ್ದಿಲ್ಲ. ಅವನ ಮಡದಿಯಾದರೂ ಪತಿಯ

ಈ ಪುಕ್ಕಟೆ ಕಾರ್ಯದಲ್ಲಿ ಧರ್ಮಬುದ್ಧಿಯಿಂದ ನೆರವಾಗುತ್ತಿದ್ದಳು. ಗಂಡ ಮಾಡಿಟ್ಟ ಚಿನ್ನದ ಪ್ರತಿಮೆ ಗಿಡ ಮುಂತಾದವುಗಳನ್ನೆಲ್ಲ ಭಕ್ತಿಯಿಂದ ಆ ಭಾಮಿನಿಯು ಬೆಳಗಿ ಒರೆಸಿ ಓರಣವಾಗಿ ಇಡುತ್ತಿದ್ದಳು. ಗಣಿಕೆ ಲೀಲಾವತಿಯು ಈ ಶೌಂಡ ದಂಪತಿಗಳ ಸಹಕಾರದಿಂದ ಗುರುಶುಶ್ರೂಷೆಮಾಡಿ ಲವಣಾಚಲಾದಿ ದಾನಗಳನ್ನೂ ವಿಧ್ಯುಕ್ತವಾಗಿ ನೆರವೇರಿಸಿದಳು. ಕೆಲಕಾಲ ಉರುಳಿದ ಬಳಿಕ ಆ ಲೀಲಾವತಿಯು ಮರಣ ಹೊಂದಿದಳು. ಶೈಲದಾನದ ಪ್ರಭಾವದಿಂದ ಆ ಬೆಲೆವೆಣ್ಣು ಭವಾನೀಪತಿಯ ಕೈಲಾಸಪರ್ವತವನ್ನು ಸೇರಿದಳು.

ಮುಂದೆ ನಿರಪೇಕ್ಷ ಬುದ್ಧಿಯಿಂದ ದೇವತಾಮೂರ್ತಿಗಳನ್ನು ಮಾಡಿಕೊಟ್ಟ ಆ ಅಕ್ಕಸಾಲಿಗ ಶೌಂಡನೂ ಕಾಲಪ್ರಾಪ್ತವಾಗಿ ಮರಣಹೊಂದಿದನು. ಯಾವಜ್ಜನ್ಮ ಒಂದು ಕಾಸನ್ನೂ ಕೂಲಿಯಾಗಿ ತೆಗೆದುಕೊಳ್ಳದೇ ಭಕ್ತಿಯಿಂದ ಉಚಿತವಾಗಿಯೇ ದೇವತಾ ಪ್ರತಿಮಾದಿಗಳನ್ನು ಮಾಡಿಕೊಟ್ಟಿದ್ದರ ಪುಣ್ಯದಿಂದ ಜನ್ಮಾಂತರದಲ್ಲಿ ಮಹಾರಾಜನಾಗಿ ಜನಿಸಿದ್ದಾನೆ. ಆ ಪುಣ್ಯಾತ್ಮನಾದ ದೊರೆಯೇ ನೀನು. ನಿನ್ನ ದೇಹದಲ್ಲಿ ಈಗ ಉಕ್ಕುವ ಈ ಸಾವಿರ ಸೂರ್ಯರಿಗೆ ಸಮನಾದ ತೇಜಸ್ಸಿಗೂ ಈ ನಿನ್ನ ಭಾಗ್ಯ ಸಂಪದಗಳಿಗೂ ನಿನ್ನ ಜನ್ಮಾಂತರದ ದೇವತಾರಾಧನೆ, ನಿಶ್ಶುಲ್ಕ ಪ್ರತಿಮಾದಿ ವಿಧಾನಗಳೇ ಕಾರಣ. ಆ ಜನ್ಮದಲ್ಲಿ ನಿನಗೆ ಈ ಉಚಿತ ಧರ್ಮಕಾರ್ಯದಲ್ಲಿ ನೆರವಾದ ಶೌಂಡನ ಮಡದಿಯೇ ಭಾನುಮತಿಯಾಗಿ ಹುಟ್ಟಿ ಈಗ ನಿನ್ನ ಮಹಾರಾಣಿ ಯಾಗಿದ್ದಾಳೆ. ಲವಣಾಚಲದಾನಕಾರ್ಯದಲ್ಲಿ ಭಕ್ತಿಯಿಂದ ಸಹಕಾರ ನೀಡಿದ್ದರ ಫಲವಾಗಿ ನೀವಿಬ್ಬರೂ ಸೌಭಾಗ್ಯ ಸಂಪತ್ತು ಸೌಂದರ್ಯಗಳಿಂದ ಸಮೃದ್ಧರಾದ ರಾಜದಂಪತಿಗಳಾಗಿ ಜನಿಸಿದ್ದೀರಿ. ಲವಣಾಚಲದಲ್ಲಿ ಇರಿಸಬೇಕಾದ ಚಿನ್ನದಮೂರ್ತಿ ಹಾಗೂ ಕಲ್ಪವೃಕ್ಷಾದಿಗಳನ್ನು ಬೆಳಗಿಟ್ಟದ್ದರಿಂದ ಇವಳಿಗೆ ಇಂಥ ಮಾನುಷ ದುರ್ಲಭವಾದ ಚೆಲುವಿಕೆ ಪ್ರಾಪ್ತವಾಗಿದೆ. ನಿನಗೆ ಸಪ್ತದ್ವೀಪಾಧಿಪತ್ಯ ಲಭಿಸಿದೆ. ನಿಮ್ಮಿಬ್ಬರಿಗೂ ಈಗ ದೊರೆಯುತ್ತಲಿರುವ ನಿತ್ಯಶ್ರೀ, ನಿರಂತರ ಗೆಲವು, ಸಂಪೂರ್ಣ ಆರೋಗ್ಯ, ಸೌಭಾಗ್ಯಗಳೆಲ್ಲ ಅದರಿಂದಲೇ ದೊರಕಿವೆ. ಹೀಗೇ ಮುಂದೆ ಜನ್ಮಜನ್ಮಾಂತರಗಳಲ್ಲಿ ದೊರಕಬೇಕೆಂದರೆ ಶಾಸ್ತ್ರೋಕ್ತ ವಿಧಿಯಿಂದ ಧಾನ್ಯಪರ್ವತವೇ ಮೊದಲಾದ ಶೈಲದಾನಗಳನ್ನು ಮಾಡು.'' ಈ ರೀತಿ ವಸಿಷ್ಠರ ನುಡಿಗಳನ್ನು ಕೇಳಿ ರಾಜನು ಹರುಷಗೊಂಡು ಅವರ ಅಪ್ಪಣೆಯಂತೆ ಧಾನ್ಯಾಚಲ, ಗುಡಾಚಲ, ಹೇಮಾಚಲ ಮುಂತಾದ ನೂರಾರು ದಾನಗಳನ್ನು ಮಾಡಿದನು. ಅದರಿಂದ ಅವನು ದೇವಪೂಜ್ಯನಾಗಿ ವಿಷ್ಣುಲೋಕವನ್ನು ಹೊಂದಿದನು. ದರಿದ್ರರು ಈ ವ್ರತವನ್ನು ಮಾಡಿದರೆ, ಕಣ್ಣಿನಿಂದ ನೋಡಿದರೆ, ಆ ಶೈಲಗಳನ್ನು ಕೈಯಿಂದ ಮುಟ್ಟಿದರೆ ಕೊನೆಗೆ ಈ ವಿಧಾನವನ್ನು ಕಿವಿಯಿಂದ ಕೇಳಿದರೆ, ಓದಿದರೆ, ಹೇಳಿದರೆ, ಸಕಲ ಪಾಪ ಪರಿಹಾರವಾಗಿ ಸ್ವರ್ಗವನ್ನೈದುವರು. ಇದನ್ನು ಪಾರಾಯಣಮಾಡುವದರಿಂದ ದುಸ್ವಪ್ನ ನಾಶವಾಗುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತ್ರೊಂಬತ್ತಮೂರನೆಯ ಅಧ್ಯಾಯ ಮುಗಿದುದು*

**ಸೂತ ಉವಾಚ**

**"ವೈಶಂಪಾಯನಮಾಸೀನಮಪೃಚ್ಛತ್ ಶೌನಕಃಪುರಾ ।**
**ಸರ್ವಕಾಮಾಪ್ತಯೇ ನಿತ್ಯಂಕಥಂ ಶಾಂತಿಕಪೌಷ್ಟಿಕಮ್ ॥**

**ಸೂತ** :- ಪೂರ್ವ ಕಾಲದಲ್ಲಿ ಒಂದು ದಿನ ವೈಶಂಪಾಯನರು ವಿರಾಮವಾಗಿ ಕುಳಿತುಕೊಂಡಾಗ ಶೌನಕ ಮುನಿಗಳು ಬಂದು ಪ್ರಶ್ನೆ ಕೇಳಿದರು - "ಪೂಜ್ಯರೇ, ಜನರಿಗೆ ನಿತ್ಯವೂ ಶಾಂತಿ ಸಂತಸಗಳು ದೊರೆತು ಸರ್ವ ಮನೋರಥಗಳು ಪೂರ್ಣವಾಗಬೇಕಾದರೆ ಯಾವ ವ್ರತವನ್ನು ಅನುಷ್ಠಾನ ಮಾಡಬೇಕು ತಿಳಿಸಿರಿ.

**ವೈಶಂಪಾಯನ** :- ಶಾಂತಿ, ಸಂತಸ, ಆಯುಷ್ಯ, ಆರೋಗ್ಯ ಭಾಗ್ಯಾದಿಗಳನ್ನು ಪಡೆಯಬೇಕೆಂದಿದ್ದರೆ ಗೃಹಯಜ್ಞವನ್ನು ವಿಧಿಪೂರ್ವಕವಾಗಿ ನೆರವೇರಿಸಬೇಕು. ಅದರ ವಿಧಾನವನ್ನು ತಿಳಿಸುತ್ತೇನೆ ಕೇಳು. ಶ್ರುತಿ, ಸ್ಮೃತಿ, ಪುರಾಣ ಧರ್ಮಶಾಸ್ತ್ರಗಳಲ್ಲಿ ವಿಸ್ತಾರವಾಗಿ ನಿರೂಪಿಸಿದ ಗ್ರಹಶಾಂತಿ ವಿಧಾನವನ್ನು ಸಂಕ್ಷಿಪ್ತವಾಗಿ ಕ್ರೋಡೀಕರಿಸಿ ತಿಳಿಸುವದೇ ನನ್ನ ನಿರೂಪಣೆಯ ಗುರಿಯಾಗಿದೆ. ಜ್ಯೋತಿರ್ವಿದರು ಹೇಳಿದ ಶುಭದಿನದಂದು ಅವರ ಆಶೀರ್ವಾದ ಪಡೆದು ಗ್ರಹಗಳನ್ನೂ, ಗ್ರಹದೇವತೆಗಳನ್ನೂ ಆವಾಹಿಸಿ ಹೋಮಮಾಡಬೇಕು. ವೇದ ಪುರಾಣ ವಿದ್ವಾಂಸರು ಮೂರುಬಗೆಯಾದ ಗ್ರಹಯಜ್ಞದ ವಿಧಾನವನ್ನು ಹೇಳುತ್ತಾರೆ. ಹತ್ತುಸಾವಿರಹೋಮ, ಲಕ್ಷಹೋಮ, ಕೋಟಿಹೋಮ. ಹೀಗೆ ಹೋಮ ಭೇದದಿಂದ ಈ ಗ್ರಹಯಜ್ಞವು ಮೂರು ಪ್ರಕಾರದ್ದಿರುತ್ತವೆ. ಇವುಗಳಲ್ಲಿ ಹತ್ತುಸಾವಿರಹೋಮವುಳ್ಳದ್ದೇ ನವಗ್ರಹಯಜ್ಞ ಎನಿಸುವದು. ವೇದ ಪುರಾಣಗಳಲ್ಲಿ ನವಗ್ರಹಯಜ್ಞದ ಅನುಷ್ಠಾನ ಕ್ರಮವನ್ನು ಹೀಗೆ ವಿವರಿಸಿದ್ದಾರೆ.

ಹೋಮಕುಂಡದ ಈಶಾನ್ಯದಿಕ್ಕಿನಲ್ಲಿ ಎರಡು ಗೇಣು ಅಗಲ, ಒಂದು ಗೇಣು ಎತ್ತರವಾದ ಚೌಕೋನ ಆಕಾರದ ಎರಡು ಅಂತಸ್ತಿನ ಒಂದು ಕಟ್ಟೆ ಅಥವಾ ವೇದಿಕೆಯನ್ನು ದೇವತಾಸ್ಥಾಪನೆಗಾಗಿ ಉತ್ತರಾಭಿಮುಖವಾಗಿ ನಿರ್ಮಿಸಬೇಕು. ಅದರ ಮೇಲೆ ಅಗ್ನಿಸ್ಥಾಪನೆಮಾಡಿ ಮೂವತ್ತೆರಡು ದೇವತೆಗಳನ್ನು ಆವಾಹಿಸಬೇಕು. ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು ಎಂಬ ನವಗ್ರಹಗಳನ್ನು ಲೋಕಹಿತಾರ್ಥವಾಗಿ ವೇದಿಕೆಯಮೇಲೆ ಅಕ್ಕಿಯನ್ನು ಹರಡಿ ಅದರ ಮೇಲೆ ಈ ಕ್ರಮದಲ್ಲಿ ಸ್ಥಾಪಿಸಬೇಕು. ನಟ್ಟನಡುವೆ ಸೂರ್ಯ, ಬಲಬದಿಯಲ್ಲಿ ಮಂಗಳ, ಉತ್ತರದಲ್ಲಿ ಗುರು, ಆಗ್ನೇಯದಲ್ಲಿ ಬುಧ, ಪೂರ್ವದಲ್ಲಿ ಶುಕ್ರ, ನೈಋತ್ಯದಲ್ಲಿ ಚಂದ್ರ, ಪಶ್ಚಿಮದಲ್ಲಿ ಶನಿ, ವಾಯವ್ಯದಲ್ಲಿ ರಾಹು, ಈಶಾನ್ಯದಲ್ಲಿ ಕೇತು. ಈ ನವಗ್ರಹಗಳಿಗೆ ಒಂದೊಂದು ಅಧಿದೇವತೆಗಳು ಇರುತ್ತಾರೆ. ಸೂರ್ಯನಿಗೆ

ಶಿವ, ಚಂದ್ರನಿಗೆ ಪಾರ್ವತಿ, ಮಂಗಳನಿಗೆ ಸ್ಕಂದ, ಬುಧನಿಗೆ ವಿಷ್ಣು, ಗುರುವಿಗೆ ಬ್ರಹ್ಮ, ಶುಕ್ರನಿಗೆ ಇಂದ್ರ, ಶನಿಗೆ ಯಮ, ರಾಹುವಿಗೆ ಕಾಲ, ಕೇತುವಿಗೆ ಚಿತ್ರಗುಪ್ತ ಹೀಗೆ ಅಧಿದೇವತೆಗಳು ಆಗಿದ್ದಾರೆ.

ಅಗ್ನಿ, ಜಲ, ಭೂಮಿ, ವಿಷ್ಣು, ಇಂದ್ರ, ಐಂದ್ರಿ, ಪ್ರಜಾಪತಿ, ಸರ್ಪ, ಬ್ರಹ್ಮ ಇವರು ಕ್ರಮವಾಗಿ ನವಗ್ರಹಗಳ ಪ್ರತ್ಯಧಿದೇವತೆಗಳು. ವಿನಾಯಕ, ದುರ್ಗಾ, ವಾಯು, ಆಕಾಶ ಮತ್ತು ಅಶ್ವಿನೀ ದೇವತೆಗಳನ್ನು ವ್ಯಾಹೃತಿ ಮಂತ್ರಗಳಿಂದ ಆವಾಹನ ಮಾಡಬೇಕು. ಸೂರ್ಯನೂ ಅಂಗಾರಕನೂ ಕೆಂಪು ಬಣ್ಣದವರು, ಚಂದ್ರ, ಶುಕ್ರರು ಬಿಳಿಯಬಣ್ಣದವರು. ಬುಧನೂ, ಬೃಹಸ್ಪತಿಯೂ ಪಿಂಗಳವರ್ಣದವರು. ಶನಿ ಮತ್ತು ರಾಹುಗಳು ಕಪ್ಪುಬಣ್ಣದವರು. ಕೇತುವು ಧೂಮ್ರ ವರ್ಣದವನು. ಆಯಾ ಗ್ರಹಗಳ ಬಣ್ಣವನ್ನುಹೋಲುವ ವಸ್ತ್ರಗಳನ್ನೂ ಧರಿಸಿ ಪುಷ್ಪಗಳನ್ನೂ ಏರಿಸಬೇಕು. ಒಳ್ಳೆಯ ಪರಿಮಳವನ್ನೀವ ಧೂಪವನ್ನುಹಾಕಿ ಮೇಲ್ಗಡೆಯಲ್ಲಿ ಅಂದವಾದ ಮೇಲ್ಗಟ್ಟನ್ನು ಕಟ್ಟಿ ಫಲಪುಷ್ಪಗಳನ್ನು ಸಮರ್ಪಿಸಬೇಕು. ಸೂರ್ಯನಿಗೆ ಬೆಲ್ಲದ ಅನ್ನ, ಚಂದ್ರನಿಗೆ ತುಪ್ಪ ಪಾಯಸ. ಮಂಗಳನಿಗೆ ಗೋದಿಯ ಪುರಿ, ಬುಧನಿಗೆ ಹಾಲು ಅನ್ನ, ಗುರುವಿಗೆ ಮೊಸರನ್ನ, ಶುಕ್ರನಿಗೆ ಬೆಲ್ಲದನ್ನ, ಶನಿಗೆ ಚಿಗಳಿ, ರಾಹುವಿಗೆ ಆಡಿನ ಮಾಂಸ, ಕೇತುವಿಗೆ ಚಿತ್ರಾನ್ನವೇ ಪ್ರಧಾನವಾದ ವಿವಿಧ ಭಕ್ಷ್ಯ - ಭೋಜ್ಯಗಳನ್ನು ನೈವೇದ್ಯಕೊಟ್ಟು ಪೂಜೆಮಾಡಬೇಕು. ಈಶಾನ್ಯದಲ್ಲಿ ಬಿರುಕು ತೂತುಗಳಿಲ್ಲದ ಕಲಶದಲ್ಲಿ ಐದುರತ್ನಗಳನ್ನು ಹಾಕಿ ಸ್ಥಾಪನೆಮಾಡಿ, ಮೇಲೆ ಮೊಸರು ಹಚ್ಚಿ, ಅಕ್ಷತೆಹಾಕಿ, ಮಾವಿನ ತಳಿರುಗಳಿಂದ ಅಲಂಕರಿಸಿ, ಜೋಡಿವಸ್ತ್ರಗಳನ್ನು ಹೊದಿಸಿ, ಅದರಲ್ಲಿ ವರುಣನನ್ನೂ, ಗಂಗಾದಿ ತೀರ್ಥಗಳನ್ನೂ, ಸಮುದ್ರ ಸರೋವರಗಳನ್ನೂ ಆವಾಹನ ಮಾಡಬೇಕು. ನದಿಗಳ ಸಂಗಮ ಮತ್ತು ಹಸು ನಿಲ್ಲುವ ತಾಣಗಳಿಂದ ಮೃತ್ತಿಕೆಯನ್ನು ತಂದು ಯಜಮಾನನ ಸ್ನಾನಕ್ಕಾಗಿ ಆ ಕಲಶದಲ್ಲಿರಿಸಬೇಕು.

**ಸರ್ವೇ ಸಮುದ್ರಾಃ ಸರಿತಃ ಸರಾಂಸಿ ಚಭುವಿಸ್ಥಿತಾಃ ॥**
**ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ**

ಭೂಮಿಯಲ್ಲಿರುವ ಎಲ್ಲ ಸಮುದ್ರಗಳು, ನದಿಗಳು, ಸರೋವರಗಳು ಮತ್ತು ಹೊಳೆಗಳು ಬರಲಿ. ಅವು ಯಜಮಾನನ ಪಾಪಗಳನ್ನು ಕಳೆಯಲಿ.'' ಹೀಗೆ ತೀರ್ಥಗಳನ್ನು ದೇವತೆಗಳನ್ನು ಆವಾಹನಮಾಡಿ ತುಪ್ಪ, ಗೋದಿ, ನೆಲ್ಲು, ಎಳ್ಳುಗಳಿಂದಲೂ, ಯಕ್ಕೆ, ಮುತ್ತಲ, ಬನ್ನಿ, ಉತ್ತರಾಣಿ, ಬಸರಿ, ಅತ್ತಿ, ದರ್ಭೆ ಮುಂತಾದ ಸಮಿಧೆಗಳಿಂದಲೂ ಹೋಮಮಾಡಬೇಕು. ಜೇನುತುಪ್ಪ, ತುಪ್ಪ, ಮೊಸರುಗಳಿಂದ ಈ ಎಲ್ಲ ಸಮಿಧೆಗಳನ್ನು ನೂರೆಂಟು ಅಥವಾ ಇಪ್ಪತ್ತೆಂಟು ಸಂಖ್ಯೆಯಲ್ಲಿ ಹೋಮಿಸಬೇಕು. ಸಮಿಧೆಗಳು ಒಂದು ಗೇಣು ಉದ್ದ ಇರಬೇಕು. ಅದರಲ್ಲಿ ಅಂಕುರ ಮೊಳಕೆ, ಅಥವಾ ಟೊಂಗೆ, ಎಲೆ ಯಾವದೂ ಇರಕೂಡದು. ಹೋಮದ ಆಹುತಿಗಳಲ್ಲಿ ಮೊದಲಿನ ಹತ್ತು ಆಹುತಿಗಳನ್ನು ತುಪ್ಪಬೆರೆಸಿ ಆ ಆ ದೇವತೆಗಳ ಮಂತ್ರಗಳಿಂದ ಹೋಮಮಾಡಬೇಕು. ಪೂರ್ವ ಅಥವಾ

ಉತ್ತರಾಭಿಮುಖವಾಗಿ ಈ ಹೋಮಕಾರ್ಯವನ್ನು ನೆರವೇರಿಸಬೇಕು. ಪ್ರತಿದೇವತೆಗೂ ವಿಹಿತವಾದ ಮಂತ್ರಗಳನ್ನು ಉಚ್ಚರಿಸಿ ಚರುಹೋಮವನ್ನು ಶಾಸ್ತ್ರೋಕ್ತವಾಗಿಮಾಡಿ ಅನಂತರ ಆಜ್ಯದಿಂದ ಹೋಮಮಾಡಬೇಕು.

**''ಆಕೃಷ್ಣ''** ಎಂಬ ಮಂತ್ರದಿಂದ ಸೂರ್ಯನಿಗೆ ಆಹುತಿ ಕೊಡಬೇಕು. ಚಂದ್ರನಿಗೆ **''ಆಪ್ಯಾಯಸ್ವ''** ಎಂಬ ಮಂತ್ರದಿಂದ, ಮಂಗಳನಿಗೆ **''ಅಗ್ನಿರ್ಮೂರ್ಧಾನಂ ದಿವಃ''** ಮಂತ್ರದಿಂದ ಆಹುತಿ. ಇದರಂತೆ ಬುಧನಿಗೆ **''ಅಗ್ನೇವಿವಸ್ವದುಷಸ''** ಗುರುವಿಗೆ **''ಬೃಹಸ್ಪತೇಪರಿದೀಯಾರಥೇನ''** ಶುಕ್ರನಿಗೆ **''ಶುಕ್ರಂತೇಅನ್ಯತ್''** ಶನಿಗೆ **''ಶಂನೋದೇವಿ''** ಎಂಬ ಮಂತ್ರದಿಂದ ರಾಹುವಿಗೆ **''ಕಯಾನಶ್ಚಿತ್ರಆಭೂವತ್''** ಕೇತುವಿಗೆ **''ಕೇತುಂಕೃಣ್ವನ್ನಸಿ''** ಎಂಬ ಮಂತ್ರದಿಂದ ಆಜ್ಯಾಹುತಿಗಳನ್ನು ನೀಡಬೇಕು. ಇದರಂತೆ **''ಆಪೋರಾಜಾ''** ಶಿವನಮಂತ್ರ. **''ಆಪೋಹಿಷ್ಠಾ''** ಪಾರ್ವತಿಯದು. **'ಸ್ಯೋನಾ '** ಎಂಬುದು ಸ್ಕಂದನನ್ನು ಉದ್ದೇಶಿಸಿ ಹೇಳಬೇಕಾದ ಮಂತ್ರ.

ಹೀಗೆಯೇ ಒಂದೊಂದು ಮಂತ್ರದಿಂದ ಒಂದೊಂದು ದೇವತೆಗೆ ಆವಾಹನ ಹಾಗೂ ಆಹುತಿ ಎರಡೂ ನಡೆಯಬೇಕು. 'ಇದಂವಿಷ್ಣುಃ' ಎಂಬ ಮಂತ್ರದಿಂದ ವಿಷ್ಣು, 'ತಮೀಶಾ' ಮಂತ್ರದಿಂದ ಬ್ರಹ್ಮ, 'ಇಂದ್ರಮಿದ್ದೇವಾತಾತ' ದಿಂದ ಇಂದ್ರನನ್ನು ಕುರಿತು ಹೋಮಮಾಡಬೇಕು. ಇದರಂತೆ ಯಮನಿಗೆ 'ಆಯಂಗೌಃ'ಎಂಬ ಮಂತ್ರದಿಂದ, ಕಾಲನಿಗೆ 'ಬ್ರಹ್ಮಜಜ್ಞಾನಂ' ಚಿತ್ರಗುಪ್ತನಿಗೆ 'ಅಜ್ಞಾತಂ' ಅಗ್ನಿಗೆ 'ಅಗ್ನಿಂದೂತಂ ವೃಣೀಮಹೇ' ವರುಣನಿಗೆ 'ಉದುತ್ತಮಂ ವರುಣಂ' ಭೂದೇವಿಗೆ 'ಪೃಥಿವ್ಯಂತರಿಕ್ಷಂ' ವಿಷ್ಣುವಿಗೆ 'ಸಹಸ್ರ ಶೀರ್ಷಾಪುರುಷಃ' ಇಂದ್ರನಿಗೆ 'ಇಂದ್ರಾಯೇಂದೋ' ಮರುತ್ವತ' ದೇವಿಗೆ 'ಉತ್ತಾನಪರ್ಣೇ ಸುಭಗೇ' ಪ್ರಜಾಪತಿಗೆ 'ಪ್ರಜಾಪತಿಃ' ಸರ್ಪಗಳಿಗೆ 'ನಮೋಽಸ್ತು ಸರ್ಪೇಭ್ಯಃ' ಬ್ರಹ್ಮನಿಗೆ 'ಏವ ಬ್ರಹ್ಮಾಯ ಋತ್ವಿಗ್ಭ್ಯಃ' ಗಣಪತಿಗೆ 'ಅನೂನಂ' ದುರ್ಗಾದೇವಿಗೆ 'ಜಾತವೇದಸಂ ಸುನವಾಮ' ಆಕಾಶಾಭಿಮಾನಿಗೆ 'ಆದಿಪ್ರತ್ನಸ್ಯರೇತಸಃ' ವಾಯುವಿಗೆ 'ಕ್ರಾಣಾಶಿಶುರ್ಮಹೀನಾಂಚ' ಅಶ್ವಿನಿದೇವತೆಗಳಿಗೆ 'ಏಷೋಉಷಾಅಪೂರ್ವ್ಯಾಃ' ಎಂಬ ಮಂತ್ರದಿಂದ ಆಹುತಿ ನೀಡಿ ಕೊನೆಗೆ 'ಮೂರ್ಧಾನಂ ದಿವಃ' ಎಂಬ ಮಂತ್ರದಿಂದ ಪೂರ್ಣಾಹುತಿಯನ್ನು ಕೊಡಬೇಕು. ಹೀಗೆ ಹೋಮ ಮುಗಿದ ಬಳಿಕ ಹೂಹಾರ ಹೊನ್ನಿನಹಾರಗಳಿಂದ ಅಲಂಕೃತರಾದ ನಾಲ್ಕು ಬ್ರಾಹ್ಮಣರು ಮಂಗಳವಾದ್ಯಗಳನ್ನು ಮೊಳಗಿಸುತ್ತ ಅದೇ ಕುಂಭೋದಕದಿಂದ ಯಜಮಾನನಿಗೆ ಸ್ನಾನಮಾಡಿಸಬೇಕು. ಆಗ

''ಸುರಾಸ್ತ್ವಾಮಭಿಷಿಂಚಂತು ಬ್ರಹ್ಮವಿಷ್ಣುಮಹೇಶ್ವರಾಃ
ವಾಸುದೇವೋ ಜಗನ್ನಾಥಸ್ತಥಾ ಸಂಕರ್ಷಣೋಽಚ್ಯುತಃ
ಪ್ರದ್ಯುಮ್ನಶ್ಚಾನಿರುದ್ಧಶ್ಚ ಭವಂತು ವಿಜಯಾಯತೇ ॥''

ಬ್ರಹ್ಮ - ವಿಷ್ಣು -ಮಹೇಶ್ವರ ಮುಂತಾದ ದೇವತೆಗಳು ನಿನಗೆ ಸ್ನಾನಮಾಡಿಸಲಿ. ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧಾದಿ ಚತುರ್ಮೂರ್ತ್ಯಾಕತ್ಮನಾದ ಜಗದೀಶ ಶ್ರೀ ಹರಿಯು ನಿನಗೆ ಗೆಲುವನ್ನು ತಂದುಕೊಡಲಿ ಮತ್ತು ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ರುದ್ರ, ಬ್ರಹ್ಮ, ಆದಿಶೇಷ ಮುಂತಾದ ದಿಕ್ಪಾಲಕರೂ, ನವಗ್ರಹಗಳೂ ಸಪ್ತಮಾತೃಕೆಯರೂ ಸರ್ವದೇವ ದಾನವರೂ ಯಕ್ಷರಕ್ಷ ಮುನಿಗೋರತ್ನೌಷಧಿಗಳೂ ನಿನಗೆ ಮಂಗಳಸ್ನಾನವನ್ನು ಮಾಡಿಸಲಿ '' ಎಂದು ಹೇಳಿ ಪರಿಮಳ ದ್ರವ್ಯಮಿಶ್ರಿತ ಜಲದಿಂದ ಸ್ನಾನಮಾಡಿಸಬೇಕು. ಅನಂತರ ಯಜಮಾನನು ಬಿಳಿ ಬಟ್ಟೆ ಉಟ್ಟು, ಬಿಳಿಗಂಧ ಲೇಪಿಸಿಕೊಂಡು, ಭಾರ್ಯೆಯೊಡನೆ ಋತ್ವಿಜರನ್ನು ಪೂಜಿಸಿ ದಕ್ಷಿಣೆಯನ್ನಿತ್ತು ಸತ್ಕರಿಸಬೇಕು. ನವಗ್ರಹಗಳ ಪ್ರಸನ್ನತೆಗಾಗಿ ಸೂರ್ಯನಿಗೆ ಕಪಿಲಗೋ, ಚಂದ್ರನಿಗೆ ಶಂಖ, ಮಂಗಳನಿಗೆ ಕೆಂಪು ಎತ್ತು, ಬುಧನಿಗೆ ಬಂಗಾರ, ಗುರುವಿಗೆ ಜೋಡು ಪೀತಾಂಬರ, ಶುಕ್ರನಿಗೆ ಬಿಳಿಯ ಕುದುರೆ, ಶನಿಗೆ ಕಪ್ಪುಹಸು, ರಾಹುವಿಗೆ ಕಬ್ಬಿಣದಪಾತ್ರೆ, ಕೇತುವಿಗೆ ಹೋತು ಅತ್ಯಂತ ಪ್ರೀತಿಯ ವಸ್ತು. ಈ ಪದಾರ್ಥಗಳನ್ನು ಈ ಒಂಭತ್ತು ಗ್ರಹಗಳ ಪ್ರೀತಿಗಾಗಿ ಬ್ರಾಹ್ಮಣರಿಗೆ ದಾನ ನೀಡಬೇಕು. ದಕ್ಷಿಣೆ ಮಾತ್ರ ಬಂಗಾರದ ರೂಪದಲ್ಲಿರಬೇಕು. ಎಲ್ಲ ಗ್ರಹಗಳಿಗೂ ಗೋದಾನದಿಂದ ಪರಮಪ್ರೀತಿ. ಸುವರ್ಣದಾನದಿಂದ ಸಂತಸ. ಆ ಗೋದಾನದ ಸಂದರ್ಭದಲ್ಲಿ

**''ಕಪಿಲೇ ಸರ್ವದೇವಾನಾಂ ಪೂಜನೀಯಾಽಸಿ ರೋಹಿಣೀ**
**ತೀರ್ಥದೇವಮಯೀ ಯಸ್ಮಾದತಃ ಶಾಂತಿಂಪ್ರಯಚ್ಛಮೇ ॥''**

ಎಂದು ಮಂತ್ರ ಹೇಳಬೇಕು.

ಶಂಖವನ್ನು ದಾನ ಕೊಡುವಾಗ -

**ಪುಣ್ಯಸ್ತ್ವಂ ಶಂಖ ಪುಣ್ಯಾನಾಂ ಮಂಗಲಾನಾಂ ಚ ಮಂಗಲಮ್ ।**
**ವಿಷ್ಣುನಾ ವಿಧೃತಶ್ಚಾಸಿ ತತಃಶಾಂತಿಂಪ್ರಯಚ್ಛ ಮೇ ॥**

ಎಂಬ ಮಂತ್ರವನ್ನು ಹೇಳಬೇಕು.

**ಹಿರಣ್ಯಗರ್ಭ ಗರ್ಭಸ್ತ್ವಂ ಹೇಮಬೀಜಂ ವಿಭಾವಸೋ ।**
**ಅನಂತಪುಣ್ಯ ಫಲದಮತಃ ಶಾಂತಿಂ ಪ್ರಯಚ್ಛ ಮೇ ॥**

ಎಂಬ ಮಂತ್ರ ಹೇಳಿ ಸುವರ್ಣ ದಾನ ಮಾಡಬೇಕು.

ಹೀಗೆ ಆ ಮಂತ್ರ ಹೇಳಿ ಆ ಆ ಪದಾರ್ಥಗಳನ್ನು ದಾನ ನೀಡಬೇಕು.

**ಪೀತವಸ್ತ್ರಯುಗಂ ಯಸ್ಮಾದ್ವಾಸುದೇವಸ್ಯ ವಲ್ಲಭಂ**
**ಪ್ರದಾನಾತ್ತಸ್ಯ ಮೇ ವಿಷ್ಣೋ ಹ್ಯತಃ ಶಾಂತಿಂ ಪ್ರಯಚ್ಛ ಮೇ ॥**

ಎಂಬುದು ಪೀತಾಂಬರ ದಾನಮಂತ್ರ.

**ವಿಷ್ಣುಸ್ತ್ವಮಶ್ವರೂಪೇಣ ಯಸ್ಮಾದಮೃತ ಸಂಭವಮ್ ।**
**ಚಂದ್ರಾರ್ಕವಾಹನೋ ನಿತ್ಯಮತಃ ಶಾಂತಿ ಪ್ರಯಚ್ಛ ಮೇ ॥**

ಇದು ಕುದುರೆದಾನದಮಂತ್ರ.

**ಯಸ್ಮಾದಾಯಾಸ ಕರ್ಮಾಣಿ ತವಾಧೀನಾನಿ ಸರ್ವದಾ ।**
**ಲಾಂಗಲಾದ್ಯಾಯುಧಾದೀನಿ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥**

ಕಬ್ಬಿಣವನ್ನು ಪ್ರದಾನ ಮಾಡುವಾಗ ಈ ಮಂತ್ರ ಹೇಳಬೇಕು.

**ಯಸ್ಮಾತ್ತ್ವಂ ಸರ್ವಯಜ್ಞಾನಾಮಂಗತ್ವೇನ ವ್ಯವಸ್ಥಿತಃ ।**
**ಯಾನಂ ವಿಭಾವಸೋರ್ನಿತ್ಯಮತಃ ಶಾಂತಿಂ ಪ್ರಯಚ್ಛಮೇ ॥**

ಎಂಬುದು ಆಡುದಾನಕೊಡುವಾಗ ಹೇಳಬೇಕಾದ ಮಂತ್ರ.

**ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।**
**ಯಸ್ಮಾತ್ತಸ್ಮಾಚ್ಛ್ರಿಯೋ ಮೇ ಸ್ಯಾದಿಹ ಲೋಕೇಪರತ್ರ ಚ ॥**

ಎಂದು ಧೇನು ದಾನದಮಂತ್ರ

**ಯಥಾ ಭೂಮಿ ಪ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ।**
**ದಾನಾನ್ಯನ್ಯಾನಿ ಮೇ ಶಾಂತಿರ್ಭೂಮಿದಾನಾದ್ಭವತ್ವಿಹ ॥**

ಎಂದು ಭೂದಾನ ಮಾಡುವಾಗ ಮಂತ್ರಹೇಳಬೇಕು. ಇದರಂತೆ ರತ್ನದಾನ ಶಯ್ಯಾದಾನ ಮುಂತಾದವುಗಳಿಗೆ ವಿಹಿತವಾದ ತತ್ತನ್ಮಂತ್ರಗಳನ್ನು ಹೇಳಿ ದಾನ ಮಾಡಬೇಕು. ಈ ವಿಷಯದಲ್ಲಿ ಜಿಪುಣತನ ಅನರ್ಥಾವಹ. ಈ ಎಲ್ಲ ವಿಧಿವಿಧಾನ ಪೂರ್ವಕವಾಗಿ ದಾನವಿತ್ತು ಗಂಧ ಪುಷ್ಪಾಕ್ಷತೆ, ಸುವರ್ಣ, ವಸ್ತ್ರ, ರತ್ನ, ಧೂಪ, ದೀಪ, ನೈವೇದ್ಯ ಮುಂತಾದ ಯಥಾಶಕ್ತಿ ಸಂಪಾದಿತ ದ್ರವ್ಯಗಳಿಂದ ನವಗ್ರಹದೇವತೆಗಳನ್ನು ಪೂಜೆಗೈಯ್ಯುವವನು ಇಹದಲ್ಲಿ ಸರ್ವಾಭೀಷ್ಟಗಳನ್ನು ಪಡೆದು ಪರದಲ್ಲಿ ಸ್ವರ್ಗವನ್ನು ಹೊಂದುತ್ತಾನೆ. ಬಡತನವಿರಲಿ, ಒಡೆತನವಿರಲಿ, ತಮಗೆ ವಿಪರೀತವಾಗಿ ಕಾಡುವ ಗ್ರಹಗಳನ್ನು ವಿಶೇಷವಾಗಿ ಆರಾಧಿಸಬೇಕು. ಉಳಿದ ಗ್ರಹಗಳನ್ನೂ ಅರ್ಚಿಸಬೇಕು.

**ಗ್ರಹಾ ಗಾವೋ ನರೇಂದ್ರಾಶ್ಚ ಬ್ರಾಹ್ಮಣಾಶ್ಚವಿಶೇಷತಃ ।**
**ಪೂಜಿತಾಃ ಪೂಜಯಂತ್ಯೇತೇ ನಿರ್ದಹಂತ್ಯವಮಾನಿತಾಃ ॥**

ನವಗ್ರಹಗಳೂ ಹಸು, ರಾಜ ಬ್ರಾಹ್ಮಣರು ಪೂಜಿಸಿದರೆ ಪ್ರಸನ್ನರಾಗಿ ತಮ್ಮನ್ನು ಪೂಜಿಸುವವರು ಜಗದ್ವಂದ್ಯರಾಗುವಂತೆ ಮಾಡುತ್ತವೆ. ಪೂಜೆಮಾಡದೇ ಅವಮಾನಿಸಿದರೆ ಮಾತ್ರ ಸುಟ್ಟುಹಾಕುತ್ತವೆ.

ಆದುದರಿಂದ ನವಗ್ರಹ ಶಾಂತಿಮಾಡಿ ಅವುಗಳನ್ನು ಪೂಜಿಸಬೇಕು.

**ಯಥಾ ಬಾಣಪ್ರಹಾರಾಣಾಂ ಕವಚಂ ಭವತಿವಾರಣಂ**
**ತದ್ವದ್ದೈವೋಪಘಾತಾನಾಂ ಶಾಂತಿರ್ಭವತಿವಾರಣಮ್ ॥**

ಕವಚವು ಬಾಣ ಪ್ರಹಾರದಿಂದ ದೇಹವನ್ನು ರಕ್ಷಿಸುವಂತೆ ಶಾಂತಿಕರ್ಮವು ದೈವಿಕ ಪೀಡೆಗಳಿಂದ ಮಾನವರನ್ನು ಯಾವುದೇ ಭಯಾಪಾಯಗಳು ತಗಲದಂತೆ ರಕ್ಷಿಸುವದು. ಆದರೆ ಈ ಗ್ರಹಯಜ್ಞದಲ್ಲಿ ದಕ್ಷಿಣೆ ಮುಖ್ಯ. ಒಬ್ಬ ಬ್ರಾಹ್ಮಣನಿಗಾದರೂ ಸಂತೋಷವಾಗುವಂತೆ ದಕ್ಷಿಣೆಯಿತ್ತು ಸತ್ಕರಿಸಬೇಕು. ನವಗ್ರಹಯಜ್ಞದಲ್ಲಿ ಹತ್ತುಸಾವಿರ ಹೋಮಉಂಟು. ವಿವಾಹ ಉತ್ಸವ, ಹೋಮ, ದೇವಾಲಯ ಪ್ರತಿಷ್ಠೆ ಮತ್ತು ಅನಿಷ್ಟ ಪರಿಹಾರಕ ಶಾಂತಿಕರ್ಮ ಮುಂತಾದವುಗಳಲ್ಲಿ ಹತ್ತು ಸಾವಿರ ಸಂಖ್ಯೆಯಲ್ಲಿ ಹೋಮಮಾಡಬೇಕೆಂದು ಶಾಸ್ತ್ರದಲ್ಲಿ ವಿಧಾನ ಮಾಡಿದ್ದಾರೆ. ಇದಕ್ಕಿಂತ ಲಕ್ಷ ಹೋಮವು ಪ್ರಶಸ್ತ ಮತ್ತು ಇಷ್ಟಾರ್ಥಪ್ರದ. ಪಿತೃಗಳಿಗೆ ಪ್ರಿಯ. ದೇವತಾಪ್ರಸಾದಕ. ಮಾನವರಿಗೆ ಭೋಗಭಾಗ್ಯಪ್ರದ. ಈ ಲಕ್ಷಹೋಮದ ವಿಧಿವಿಧಾನಗಳು ಹೀಗಿವೆ. ಗ್ರಹಬಲ, ತಾರಾಬಲ ಪ್ರಶಸ್ತವಾಗಿರುವ ಶುಭಮುಹೂರ್ತದಲ್ಲಿ ವೇದಕೋವಿದರ ಆಶೀರ್ವಾದ ಪಡೆದು ಯಜಮಾನನು ತನ್ನ ಮನೆ ಅಥವಾ ದೇವಸ್ಥಾನದ ಈಶಾನ್ಯ ಅಥವಾ ಪೂರ್ವ ಇಲ್ಲವೆ ಉತ್ತರ ದಿಕ್ಕಿನಲ್ಲಿ ಯಜ್ಞಮಂಟಪವನ್ನು ನಿರ್ಮಿಸಬೇಕು.

ಮಂಟಪದೊಳಗಡೆ ಈಶಾನ್ಯ ನಿಟ್ಟಿನಲ್ಲಿ ಎರಡು ಮೊಳ ಅಗಲ, ನಾಲ್ಕು ಮೊಳ ಉದ್ದವಾದ ಯೋನಿ ಮುಖವುಳ್ಳ ಅಗ್ನಿಕುಂಡವನ್ನು ನಿರ್ಮಿಸಬೇಕು. ಅದರ ಮೂರು ಮೇಖಲೆ ಅಥವಾ ಸುತ್ತುಗಟ್ಟುಗಳು ನಾಲ್ಕು ಬೆರಳು ಅಗಲವೂ ಅಷ್ಟೇ ಎತ್ತರವೂ ಆಗಿ ಈಶಾನ್ಯಕ್ಕೆ ಇಳುಕಲಾಗಿರಬೇಕು. ಈ ಅಗ್ನಿಕುಂಡದ ಈಶಾನ್ಯಕ್ಕೆ ಮೂರುಗೇಣು ಉದ್ದಳತೆಯುಳ್ಳ ಮತ್ತು ಈಶಾನ್ಯನಿಟ್ಟಿಗೆ ಇಳುಕಲಾದ ಮೂರು ಅಂಗುಲ ಎತ್ತರದ ಮೂರು ಅಂತಸ್ತಿನ ಒಂದು ಸ್ಥಂಡಿಲವನ್ನು ದೇವತಾಪ್ರತಿಷ್ಠೆಗಾಗಿ ನಿರ್ಮಿಸಬೇಕು. ಈ ಸ್ಥಂಡಿಲದ ಮೇಲುಗಡೆ ಹತ್ತು ಅಂಗುಲ ಎತ್ತರದ ಒಂದು ಗೋಡೆಯನ್ನುಹಾಕಿ ಆ ಸ್ಥಂಡಿಲದಲ್ಲಿ ಸ್ಥಂಡಿಲದ ಹೂ, ಹಾಗೂ ಅಕ್ಕಿ ಕಾಳುಗಳಿಂದ ಕ್ರಮವಾಗಿ ದೇವತೆಗಳನ್ನು ಆವಾಹಿಸಬೇಕು. ಈ ಎಲ್ಲ ದೇವತೆ ಹಾಗೂ ಪ್ರತ್ಯಧಿದೇವತೆಗಳನ್ನು ಸೂರ್ಯನಿಗೆ ಅಭಿಮುಖವಾಗಿಯೇ ಪ್ರತಿಷ್ಠಾಪಿಸಬೇಕು.

ಐಶ್ವರ್ಯವನ್ನು ಬಯಸುವವರು ಗರುಡನನ್ನು,

**''ಸಾಮಧ್ವನಿ ಶರೀರಸ್ತ್ವಂ ವಾಹನಂ ಪರಮೇಷ್ಠಿನಃ ।**
**ವಿಷಪಾಪಹರೋ ನಿತ್ಯಮತಃ ಶಾಂತಿಂಪ್ರಯಚ್ಛನಃ ॥**

ಎಂಬ ಮಂತ್ರದಿಂದ ಆವಾಹಿಸಿ ಪೂಜಿಸಬೇಕು. ಹಿಂದಿನಂತೆ ಕಲಶಸ್ಥಾಪನೆ ಆವಾಹನಾದಿಗಳನ್ನುಮಾಡಿ ಒಂದು ಲಕ್ಷ ತುಪ್ಪದ ಹೋಮವನ್ನು, ಸಮಿಧಾ ಹೋಮವನ್ನೂ ನೆರವೇರಿಸಬೇಕು. ಅನಂತರ ವಸ್ವಾದಿ ದೇವತೋದ್ದೇಶಕವಾದ ಸಂಸ್ರಾವಹೋಮಕ್ಕಾಗಿ ಕುಂಭದಿಂದ ತುಪ್ಪವನ್ನು ಧಾರಾಕಾರವಾಗಿ ಅಗ್ನಿಯಲ್ಲಿ

ಸುರಿಯಬೇಕು. ಹಸಿಯ ಅತ್ತಿಯ ಮರದಿಂದ ತೂತು ಬಿರುಕುಗಳಿಲ್ಲದ ತೋಳುದ್ದ ದರ್ವಿಯನ್ನುಮಾಡಿ ಎರಡು ಕಂಬಗಳ ಮೇಲೆ ತುಪ್ಪದ ಬಿಂದಿಗೆಯಿರಿಸಿ ಆ ದರ್ವಿಯ ಮುಖಾಂತರ ಆಜ್ಯಧಾರೆಯನ್ನು ಅಗ್ನಿಯಲ್ಲಿ ಸುರಿಯಬೇಕು. ಈ ಕಾಲದಲ್ಲಿ ಅಗ್ನಿಸೂಕ್ತ, ವಿಷ್ಣು, ರುದ್ರ ಮತ್ತು ಸೋಮಸೂಕ್ತಗಳನ್ನೂ ಹಾಗೂ ಮಹಾವೈಶ್ವಾನರ ಮತ್ತು ಜ್ಯೇಷ್ಠಸಾಮಸೂಕ್ತಗಳನ್ನೂ ಜಪಿಸಬೇಕು. ಹಿಂದಿನಂತೆ ಋತ್ವಿಜರು ಯಜಮಾನನಿಗೆ ಸ್ನಾನಮಾಡಿಸಿ ಸ್ವಸ್ತಿವಾಚನ ಹೇಳಬೇಕು. ಅವರೆಲ್ಲರಿಗೂ ಯಜಮಾನನು ಪ್ರಸನ್ನ ಮನಸ್ಸಿನಿಂದ ಬೇರೆಬೇರೆಯಾಗಿ ದಕ್ಷಿಣೆಯನ್ನು ಕೊಡಬೇಕು.

ಹತ್ತು ಸಾವಿರ ಹೋಮದ ನವಗ್ರಹಯಜ್ಞದಲ್ಲಿ ವೇದಪಾರಂಗತರಾದ ಶಾಂತ ಪ್ರಕೃತಿಯ ನಾಲ್ಕು ಜನ ಋತ್ವಿಜರೂ, ಲಕ್ಷಹೋಮದಲ್ಲಿ ಹದಿನೆಂಟು ಜನ ಋತ್ವಿಜರೂ ಇರಬೇಕು. ಯಜಮಾನನು ಕಡುಬಡವನಾಗಿದ್ದರೆ ಕನಿಷ್ಠ ನಾಲ್ಕು ಜನರಾದರೂ ನಿರ್ಮತ್ಸರರಾದ ವೇದಮೂರ್ತಿ ಋತ್ವಿಜರೂ ಇರಬೇಕು. ನವಗ್ರಹ ಹೋಮಕ್ಕಿಂತ ಲಕ್ಷ ಹೋಮದಲ್ಲಿ ಎಲ್ಲವೂ ಹತ್ತು ಪಟ್ಟು ಹೆಚ್ಚಾಗಿರುವದು. ಭಕ್ಷ್ಯ, ಭೋಜ್ಯ, ಭೂಷಣ, ಬಂಗಾರ, ಬಟ್ಟೆ, ಬಳೆ, ಕುಂಡಲ ಪವಿತ್ರ, ಶಯ್ಯಾ, ಕಂಠಸೂತ್ರ ಮುಂತಾದವುಗಳನ್ನು ಯಥಾ ಶಕ್ತಿ ದಾನನೀಡಬೇಕು. ಯೋಗ್ಯತೆ ಯಿದ್ದವರು ದ್ರವ್ಯಲೋಭದಿಂದ ದಕ್ಷಿಣಾದಾನದಲ್ಲಿ ಸಂಕೋಚ ಮಾಡಬಾರದು. ಅನ್ನದಾನವನ್ನೂ ವಿಶೇಷ ಪ್ರಮಾಣದಲ್ಲಿ ನಡೆಸಬೇಕು. ಅದರಿಂದ ಯಜಮಾನನಿಗೆ ಸಂಪತ್ತು. ಯಜ್ಞದಲ್ಲಿ ಅನ್ನದಾನವಿಲ್ಲದಿದ್ದರೆ ದುರ್ಭಿಕ್ಷವಾಗುವದು.

**ಅನ್ನಹೀನೋ ದಹೇದ್ರಾಷ್ಟ್ರಂ ಮಂತ್ರಹೀನಸ್ತು ಋತ್ವಿಜಃ ।**
**ಯಷ್ಟಾರಂ ದಕ್ಷಿಣಾಹೀನಃ ನಾಸ್ತಿಯಜ್ಞ ಸಮೋರಿಪುಃ ॥**

ಯಜ್ಞದಲ್ಲಿ ಅನ್ನದಾನವಿಲ್ಲದಿದ್ದರೆ ರಾಷ್ಟ್ರಕ್ಕೇ ಅನಿಷ್ಟ. ಮಂತ್ರಪಠಣವು ಸರಿಯಾಗಿ ಇಲ್ಲದಿದ್ದರೆ ಋತ್ವಿಜರಿಗೆ ಅನಿಷ್ಟ. ದಕ್ಷಿಣೆಯನ್ನು ಲೋಪಮಾಡಿದರೆ ಯಜಮಾನನಿಗೆ ಘಾತಕ. ಹೀಗೆ ಎಲ್ಲಿಯಾದರೂ ಒಂದೆಡೆ ಲೋಪವಾದರೆ ಯಜ್ಞವು ಒಂದು ವೈರಿಯೆನಿಸುವದು. ಆದುದರಿಂದ ಬಡವರು ಲಕ್ಷ ಹೋಮ ಮಾಡುವ ಸಾಹಸಕ್ಕೆ ಹೋಗಬಾರದು. ಯಾಕಂದರೆ ಅದರಲ್ಲಿ ಕ್ರಿಯಾಲೋಪವಾದರೆ ಅನಿಷ್ಟವಾಗುವದು. ಆದರೆ ಸಿರಿವಂತನಾದ ಮನುಷ್ಯನು ಮಾತ್ರ ತನ್ನ ಯೋಗ್ಯತೆಗೆ ಅನುಗುಣವಾಗಿ ಲಕ್ಷ ಹೋಮವನ್ನು ವಿಸ್ತರಿಸಿ ವಿಧಿಪೂರ್ವಕವಾಗಿ ವೈಭವದಿಂದ ಮಾಡಬೇಕು. ಶಾಸ್ತ್ರೋಕ್ತವಾಗಿಮಾಡಿದ ಈ ಲಕ್ಷಹೋಮದಿಂದ ಸಕಲ ಇಷ್ಟಾರ್ಥಗಳೂ ಪೂರ್ಣವಾಗುವವು. ಈ ರೀತಿಯಾಗಿ ನವಗ್ರಹಹೋಮ ಮಾಡಿದವನು ನೂರುಕಲ್ಪಕಾಲಶಿವಲೋಕದಲ್ಲಿದ್ದು, ವಸುಆದಿತ್ಯಾದಿ ದೇವತೆಗಳಿಂದ ಪೂಜ್ಯನಾಗಿ, ಕೊನೆಗೆ ಮೋಕ್ಷವನ್ನು ಪಡೆಯುವನು. ಈ ಹೋಮದಿಂದ ಮನುಷ್ಯರ ಐಹಿಕ ಕಾಮನೆಗಳೆಲ್ಲವೂ ಈಡೇರುವವು. ಇದರಂತೆ ಕೋಟಿ ಹೋಮವು ಲಕ್ಷ

ಹೋಮಕ್ಕಿಂತ ನೂರುಪಟ್ಟು ಮಿಗಿಲಾದದ್ದು. ಈ ಪ್ರಮಾಣದಲ್ಲಿಯೇ ದಾನ, ದಕ್ಷಿಣೆ, ಆಹುತಿ, ಸಾಧನ ಸಾಮಗ್ರಿ ಎಲ್ಲವೂ ಇದರಲ್ಲಿ ಹೆಚ್ಚಾಗುವದು. ಕೋಟಿಹೋಮದಲ್ಲಿ ದೇವತಾವಾಹನ, ವಿಸರ್ಜನಹೋಮ, ಹವನ, ಸ್ನಾನ, ದಾನಗಳಿಗೆಲ್ಲ ಹಿಂದೆ ಹೇಳಿದ ಮಂತ್ರಗಳನ್ನೇ ಹೇಳಬೇಕು. ಆದರೆ ಅಗ್ನಿಕುಂಡ, ಯಜ್ಞಮಂಟಪ ಹಾಗೂ ವೇದಿಕಾರಚನೆಗಳಲ್ಲಿ ಮಾತ್ರ ವಿಶೇಷವುಂಟು. ಕೋಟಿ ಹೋಮದಲ್ಲಿ ಹೋಮ ಕುಂಡವು ನಾಲ್ಕು ಮೊಳ ಉದ್ದ, ನಾಲ್ಕು ಮೊಳ ಅಗಲವಾಗಿ ಚಚ್ಚೌಕಾಗಿರಬೇಕು. ಎರಡು ಕಡೆ ಯೋನಿ ಮುಖಗಳನ್ನು ನಿರ್ಮಿಸಬೇಕು. ಎರಡಂಗುಲ ಎತ್ತರದ ಒಂದು ಮೇಖಲೆ, ಮೂರಂಗುಲ ಎತ್ತರದ ಇನ್ನೊಂದು ಮೇಖಲೆ, ನಾಕಂಗುಲ ಎತ್ತರದ ಮಗದೊಂದು ಮೇಖಲೆ ಹೀಗೆ ಸುತ್ತುಗಟ್ಟುಗಳನ್ನು ರಚಿಸಬೇಕು. ಕೋಟಿ ಹೋಮದಲ್ಲಿ ದೇವತಾ ಪ್ರತಿಷ್ಠೆಗಾಗಿ ನಾಲ್ಕು ಗೇಣು ಅಗಲವಾದ ಮೂರು ಅಂತಸ್ತಿನ ಚಚ್ಚೌಕ ವೇದಿಕೆಯನ್ನು ಹಿಂದೆ ಹೇಳಿದ ಪ್ರಮಾಣದ ವಪ್ರ (ಅಂತಸ್ತು) ವಿಶಿಷ್ಟವಾಗಿ ನಿರ್ಮಿಸಬೇಕು.

ಯಜ್ಞಮಂಟಪವು ಹದಿನಾರು ಮೊಳ ಉದ್ದಗಲವುಳ್ಳದ್ದಿರಬೇಕು. ನಾಲ್ಕು ಬಾಗಿಲುಗಳನ್ನು ಇರಿಸಬೇಕು. ಪೂರ್ವದಿಕ್ಕಿನಲ್ಲಿ ಋಗ್ವೇದಿಗೂ ದಕ್ಷಿಣದಲ್ಲಿ ಯಜುರ್ವೇದಿ, ಪಶ್ಚಿಮದಲ್ಲಿ ಸಾಮವೇದಿ, ಉತ್ತರದಲ್ಲಿ ಅಥರ್ವವೇದಿ ಪುರೋಹಿತರನ್ನು ಆಸನಕೊಟ್ಟು ಕೂಡಿಸಬೇಕು. ಹೋಮಕಾರ್ಯಕ್ಕೆ ವೇದ ವೇದಾಂಗ ವಿಜ್ಞರಾದ ಎಂಟು ಜನ ವಿದ್ವಾಂಸರನ್ನು ನಿಯಮಿಸಬೇಕು. ಹೀಗೆ ಕೋಟಿ ಯಜ್ಞದಲ್ಲಿ ಹನ್ನೆರಡುಜನ ಬ್ರಾಹ್ಮಣರನ್ನು ಋತ್ವಿಜರೆಂದು ವರಿಸಬೇಕು. ಅವರನ್ನೆಲ್ಲ ಗಂಧ ಹಚ್ಚಿ, ಹೂ, ಏರಿಸಿ, ಬಟ್ಟೆ ಉಡಿಸಿ, ಆಭರಣ ತೊಡಿಸಿ, ಅಲಂಕರಿಸಿ ಪೂಜಿಸಬೇಕು.

ಋಗ್ವೇದಿಯು ರಾತ್ರಿಸೂಕ್ತ, ಪವಮಾನಸೂಕ್ತ, ಸುಮಂಗಲಸೂಕ್ತ, ಶಾಂತಿ ಮಂತ್ರಗಳನ್ನು ಹೇಳಬೇಕು. ಯಜುರ್ವೇದಿಯ ಶಕ್ತಿ, ಇಂದ್ರ, ಚಂದ್ರ, ಸೂಕ್ತಗಳನ್ನೂ ಕೂಷ್ಮಾಂಡಸೂಕ್ತ ಮತ್ತು ಶಾಂತಿಮಂತ್ರವನ್ನೂ ಪಾರಾಯಣ ಮಾಡಬೇಕು. ಸಾಮವೇದಿಯು ಸುವರ್ಣಸಾಮ, ವೈರಾಜಸಾಮ, ಅಗ್ನೇಯಸಾಮ, ರುದ್ರಸಂಹಿತಾಸಾಮ, ಜ್ಯೇಷ್ಠಸಾಮ, ಶಾಂತಿಮಂತ್ರಗಳನ್ನು ಜಪಿಸಬೇಕು. ಅಥರ್ವಣವೇದಿಯು ಶಾಂತಿಸೂಕ್ತ, ಸೌರಸೂಕ್ತ, ಶಾಕುನಮಂತ್ರ, ಪೌಷ್ಟಿಕಮಂತ್ರ ಮಹಾರಾಜ್ಯಮಂತ್ರಗಳನ್ನೂ ಹೇಳಬೇಕು. ಐದು ಅಥವಾ ಏಳು ಹೋತೃಗಳು ಹಿಂದೆ ಹೇಳಿದ ರೀತಿಯಲ್ಲಿ ಹೋಮಕಾರ್ಯವನ್ನು ನೆರವೇರಿಸುವರು. ಸ್ನಾನ, ದಾನಗಳಲ್ಲಿಯೂ ಇವೇ ಮಂತ್ರಗಳನ್ನು ಪಠಿಸುವರು.

ವಸುಗಳನ್ನುದ್ದೇಶಿಸಿ ಮಾಡುವ ಸಂಸ್ರಾವ ಹೋಮವು ಲಕ್ಷಹೋಮದಲ್ಲಿ ಮಾತ್ರ ಇಲ್ಲಿ ಇಲ್ಲ. ಹೀಗೆ ಕೋಟಿ ಹೋಮಮಾಡಿದವನು ಶ್ರೀವಿಷ್ಣುವಿನ ಸನ್ನಿಧಿಯನ್ನು ಸೇರುವನು. ಹೀಗೆ ಗ್ರಹಯಜ್ಞವು ಹತ್ತುಸಾವಿರ ಹೋಮ ಲಕ್ಷಹೋಮ ಕೋಟಿಹೋಮಗಳದ್ದೆಂದು ಮೂರು ತೆರನಾಗಿದೆ. ಈ ಮೂರು

ಪದ್ಧತಿಗಳನ್ನು ಪಠಿಸಿಶ್ರವಣಮಾಡಿದವನಿಗೆ ಪಾಪಪರಿಹಾರ ಮತ್ತು ಇಂದ್ರಪದ ಲಾಭ. ಕೋಟಿಹೋಮಮಾಡಿದರೆ ಒಂದು ಸಾವಿರದ ಹದಿನೆಂಟು ಅಶ್ವಮೇಧ ಯಾಗಗಳ ಪುಣ್ಯವು ಪ್ರಾಪ್ತವಾಗುವದು. ಸಾವಿರಾರು ಬ್ರಹ್ಮಹತ್ಯಾ ಕೋಟ್ಯಾವಧಿ ಭ್ರೂಣ ಹತ್ಯಾದಿಗಳಿಂದ ಬರುವ ಪಾತಕಗಳೆಲ್ಲವು ಈ ಕೋಟಿ ಹೋಮಗಳಿಂದ ಪರಿಹಾರವಾಗುವವು ಎಂದು ಸಾಕ್ಷಾತ್ ಪರಮೇಶ್ವರನೇ ಹೇಳಿದ್ದಾನೆ.

## ವಶೀಕರಣ ಹೋಮ ಮತ್ತು ಆಭಿಚಾರಿಕ ಹೋಮ

ವಶೀಕರಣಕ್ಕಾಗಿಮಾಡುವ ಯಜ್ಞ ಮತ್ತು ಆಭಿಚಾರಿಕಯಜ್ಞ ಹಾಗೂ ಭೂತೋಚ್ಚಾಟನಯಜ್ಞ ಮುಂತಾದ ಕಾಮ್ಯಕರ್ಮಗಳನ್ನು ಮಾಡುವ ಮೊದಲು ಇಲ್ಲಿ ಹಿಂದೆ ಹೇಳಿದ ಆಯುತಹೋಮ ಅರ್ಥಾತ್ ಹತ್ತುಸಾವಿರ ಹೋಮದ ನವಗ್ರಹಯಜ್ಞವನ್ನು ವಿಧಿಪೂರ್ವಕವಾಗಿ ಪೂರ್ವೋಕ್ತಕ್ರಮದಿಂದ ಮಾಡಬೇಕು ಇಲ್ಲದಿದ್ದರೆ ಅವು ಫಲಪ್ರದವಾಗುವದಿಲ್ಲ.

ಭೂತೋಚ್ಚಾಟನ ಹಾಗೂ ವಶೀಕರಣಯಜ್ಞಗಳಲ್ಲಿ ಅಗ್ನಿಕುಂಡವು ಒಂದು ಮೊಳ ಅಳತೆಯುಳ್ಳದ್ದಾಗಿ ದುಂಡಗೆ ಇರಬೇಕು. ಅದಕ್ಕೆ ಮೂರು ಮೇಖಲೆಗಳೂ ಒಂದು ಯೋನಿಮುಖವೂ ಇರುವದು. ಅವಶ್ಯಕ ಮುತ್ತಲಗಿಡದ ಸಮಿಧೆಗಳನ್ನು ಈ ಕಾರ್ಯಕ್ಕೆ ಉಪಯೋಗಿಸಬೇಕು. ಗೋರೋಚನ, ಶ್ರೀಗಂಧ, ಕೇಸರಹಾಕಿದ ನೀರನ್ನು ಅವುಗಳಿಗೆ ಚಿಮುಕಿಸಬೇಕು. ಬಿಲ್ವಪತ್ರ, ಕಮಲ, ಜೇನುತುಪ್ಪ ಮತ್ತು ತುಪ್ಪಗಳಿಂದ ''ಸುಮಿತ್ರಯಾನ ಅಪ ಔಷಧಯಃ'' ಎಂಬ ಮಂತ್ರಹೇಳಿ ಹತ್ತು ಸಾವಿರ ಆಹುತಿಗಳನ್ನು ಕೊಟ್ಟು ಹೋಮ ಮಾಡಬೇಕು. ಈ ಕಾಮ್ಯಕರ್ಮಗಳಲ್ಲಿ ದೇವತಾಸ್ಥಾಪನೆಯಾಗಲಿ, ಕುಂಭದಿಂದ ಅಭಿಷೇಕವಾಗಲಿ ಇರುವದಿಲ್ಲ. ಎಲ್ಲ ವಿಧವಾದ ಗಿಡಮೂಲಿಕಾರಸವನ್ನು ಬೆರೆಸಿದ ನೀರಿನಿಂದ ಯಜಮಾನನು ಮೊದಲು ಸ್ನಾನಮಾಡಿ ಶುಭ್ರವಾದ ವಸ್ತ್ರವನ್ನು ಧರಿಸಬೇಕು. ಬ್ರಾಹ್ಮಣರಿಗೆ ಬಂಗಾರದ ಕಂಠಾಭರಣಗಳನ್ನೂ ವಸ್ತ್ರಾಭರಣಗಳಿಂದ ಅಲಂಕೃತವಾದ ಬೆಳ್ಳಗಿನ ಗೋವುಗಳನ್ನೂ ದಾನನೀಡಬೇಕು. ಈ ವಶೀಕರಣ ಹೋಮದಿಂದ ಯಾರಿಗೂ ವಶರಾಗದಿರುವ ವೈರಿಗಳೆಲ್ಲರೂ ಕೈವಶರಾಗುವರು. ಪಾತಕಗಳೆಲ್ಲವೂ ಪರಿಹಾರವಾಗುವವು.

ಶತ್ರುನಾಶ, ಮಾಟ, ಮೋಡಿ ಮುಂತಾದ ಅಭಿಚಾರಕರ್ಮಗಳ ಹೋಮವು ತ್ರಿಕೋಣಾಕಾರವಾಗಿ ಎರಡು ಮೇಖಲೆ ಮತ್ತು ಕೋಣಾಕಾರದ ಒಂದು ಯೋನಿಮುಖವುಳ್ಳದ್ದಾಗಿರುವದು. ಎಲ್ಲ ಬದಿಗಳಲ್ಲಿ ಒಂದೊಂದು ಮೊಳದ ವಿಸ್ತಾರವುಳ್ಳ ಈ ಹೋಮಕುಂಡದಲ್ಲಿ ಕೆಂಪುಬಣ್ಣದ ಹೂ, ಗಂಧ, ರುಮಾಲ, ಪಂಚೆಗಳನ್ನು ಧರಿಸಿದ ಬ್ರಾಹ್ಮಣರು ನಿವೀತಿಯಾಗಿ ಯಜ್ಞೋಪವೀತವನ್ನು ಧರಿಸಿ ಈ ಅಭಿಚಾರಿಕ ಯಜ್ಞಗಳನ್ನು ನೆರವೇರಿಸುವರು. ಮೂರುಪಾತ್ರೆಗಳಲ್ಲಿ ಕಾಗೆಯ ರಕ್ತವನ್ನು ತುಂಬಿ ಇಟ್ಟುಕೊಂಡು ಗಿಡಗದ ಮೂಳೆ, ರಕ್ತದಿಂದ ಮಿಶ್ರವಾದ ಸಮಿಧೆಗಳನ್ನು ಆ ನೆತ್ತರಿನ ಪಾತ್ರೆಗಳಲ್ಲಿ ಎದ್ದಿ ತಲೆ ಕೆದರಿಕೊಂಡು, ವೈರಿಗಳಿಗೆ ಅನಿಷ್ಟವನ್ನು ಕೋರಿ,

ಎಡಗೈಯಿಂದ ಹೋಮಮಾಡುವರು. ಶತ್ರುವಿನ ಆಕಾರವನ್ನು ನಿರ್ಮಿಸಿ ''ದುರ್ಮಿತ್ರಿಯಾ ತಸ್ಮೈ ಸಂತುಹುಂ ಫಟ್'', ಎಂಬ ಸೇನಾಧಿಕಾರಮಂತ್ರದಿಂದ ಚೂರಿಯನ್ನು ಅಭಿಮಂತ್ರಿಸಿ ವೈರಿಯ ಆಕೃತಿಯ ಒಂದೊಂದೇ ಅಂಗಗಳನ್ನು ಕತ್ತರಿಸಿ ಅಗ್ನಿಕುಂಡದಲ್ಲಿ ಹಾಕಬೇಕು. ಇದರಿಂದ ಶತ್ರು ಸಂಹಾರವಾಗುವನು. ಶ್ರೋತ್ರಿಯರಾದ ಬ್ರಾಹ್ಮಣರು ಇಂಥ ಆಭಿಚಾರಿಕ ಹೋಮಗಳನ್ನು ಮಾಡಿಸಬಾರದು.

ಈ ತರಹದ ಅಭಿಚಾರಿಕ ಕರ್ಮಗಳು ಮಾನವರಿಗೆ ಐಹಿಕ ಫಲಗಳನ್ನು ಕೊಟ್ಟರೂ ಪಾರತ್ರಿಕ ಪ್ರಯೋಜನವು ಮಾತ್ರ ಇವುಗಳಿಂದ ಕಿಂಚಿದಪಿ ಬರುವದಿಲ್ಲ. ಐಹಿಕ, ಆಮುಷ್ಮಿಕ ಉಭಯ ವಿಧವಾದ ಶ್ರೇಯಸ್ಸನ್ನು ಅಪೇಕ್ಷಿಸುವವರು ನವಗ್ರಹ ಶಾಂತಿಕರ್ಮವನ್ನು ಮಾತ್ರ ಮಾಡಬೇಕು. ಹಿಂದೆ ಹೇಳಿದ ಹತ್ತುಸಾವಿರ, ಒಂದು ಲಕ್ಷ, ಒಂದುಕೋಟಿ ಹೋಮಗಳುಳ್ಳ ಗ್ರಹಯಜ್ಞಗಳ ಮೂರು ಪ್ರಕಾರಗಳನ್ನು ನಿಷ್ಕಾಮಬುದ್ಧಿಯಿಂದ ಹರಿ ಪ್ರೀತಿಯಾಗಲಿ ಎಂದು ಮಾಡುವವರು ಶ್ರೀಹರಿಯ ಸಾನ್ನಿಧ್ಯವನ್ನು ಹೊಂದುವರು. ಮರಳಿ ಹುಟ್ಟುವದಿಲ್ಲ. ಈ ಗ್ರಹಯಜ್ಞದ ವಿಧಾನವನ್ನು ಹೇಳಿದವರಿಗೂ, ಕೇಳಿದವರಿಗೂ ಗ್ರಹಗಳ ಬಾಧೆ ಉಂಟಾಗುವುದಿಲ್ಲ. ಬಂಧುಬಳಗದಲ್ಲಿ ಪ್ರಾಣಹಾನಿಯಾಗುವುದಿಲ್ಲ. ಈ ಗ್ರಹಯಜ್ಞ ಶಾಂತಿಯಮಂತ್ರ, ತಂತ್ರಗಳನ್ನು ನಿರ್ದೇಶಿಸಿ ಬರೆದ ಪುಸ್ತಕವು ಯಾರ ಮನೆಯಲ್ಲಿರುವದೋ ಆ ಮನೆಯ ಮಕ್ಕಳಿಗೆ ಬಾಲಗ್ರಹಾದಿಪೀಡೆಗಳು ಮತ್ತು ಯಾವುದೇ ವಿಧವಾದ ರೋಗ-ರುಜಿನ, ಬಂಧನ-ಭಯ, ಅಪಾಯಗಳು ಸಂಭವಿಸುವದಿಲ್ಲ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು*



## ನವಗ್ರಹಗಳ ರೂಪ ಸ್ವರೂಪ ನಿರೂಪಣೆ | ಅಧ್ಯಾಯ - ೯೫

**ಶಿವ ಉವಾಚ**

**ಪದ್ಮಾಸನಃ ಪದ್ಮಕರಃ ಪದ್ಮಗರ್ಭಸಮದ್ಯುತಿಃ ।**
**ಸಪ್ತಾಶ್ವಃ ಸಪ್ತರಜ್ಜುಶ್ಚ ದ್ವಿಭುಜಃ ಸ್ಯಾತ್ಸದಾ ರವಿಃ ॥**

**ಪರಮೇಶ್ವರ :-** ಸೂರ್ಯನು ಕಮಲಾಸನ. ಅವನ ಕೆಳಗೆ ಕಮಲ. ಕೈಗಳಲ್ಲಿ ಬೇರೆ ಕಮಲಗಳು. ಕಮಲಕೋಶದಂತೆ ಇದೆ ಅವನ ಕಾಯಕಾಂತಿ. ಅವನ ತೇರಿಗೆ ಹೂಡಿದ ಕುದುರೆಗಳು ಏಳು, ಹಗ್ಗಗಳಿಂದ ಅವುಗಳನ್ನು ಕಟ್ಟಿದೆ. ಅವನಿಗೆ ಎರಡು ಕೈಗಳು. ಇದು ರವಿಯ ರೂಪ. ವರವನ್ನು ಕರುಣಿಸುವ ಚಂದ್ರನು ಧವಲಮೂರ್ತಿ. ಅವನ ಬಣ್ಣ ಬಿಳಿ. ಉಟ್ಟ ಬಟ್ಟೆ ಶ್ವೇತಾಂಬರ. ಹತ್ತಿದ ಕುದುರೆಯು ಬೆಳ್ಳಗೆ, ಏರಿದ ರಥದ ಬಣ್ಣವೂ ಬೆಳ್ಳಗೆ. ಎರಡು ತೋಳು. ಒಂದು ಕೈಯಲ್ಲಿ ಗದೆ. ಇನ್ನೊಂದು ಕೈ ವರದ ಮುದ್ರೆಯುಳ್ಳದ್ದು. ಹೀಗೆ ಚಂದ್ರನ ಮೂರ್ತಿಯನ್ನು ರೂಪಿಸಿದೆ. ವರ ನೀಡುವ ಮಂಗಳನು ಕೆಂಬಣ್ಣದ ಬಟ್ಟೆ , ಹೊಂಬಣ್ಣದ ಮಾಲೆ ಧರಿಸಿರುವನು. ತನ್ನ ನಾಲ್ಕು ಕೈಗಳಲ್ಲಿ ಶಕ್ತಿ, ಶೂಲ, ಗದಾ, ಎಂಬ ಆಯುಧಗಳನ್ನು ಧರಿಸಿ

ನಾಲ್ಕನೇ ಕೈಯಿಂದ ವರವನ್ನು ಕರುಣಿಸುವನು. ಅವನ ಕೂದಲು ಮಾತ್ರ ಬೆಳ್ಳಗೆ. ಬುಧನ ಮೈಬಣ್ಣ ಬೆಟ್ಟದಾವರೆಯಂತೆ. ಅವನು ಉಟ್ಟ ಬಟ್ಟೆ ಪೀತಾಂಬರ, ಮುಡಿದ ಮಾಲೆಯೂ ಅದೇ ಬಣ್ಣದ್ದು. ಸಿಂಹದ ಮೇಲೆ ಕುಳಿತುಕೊಂಡ ಬುಧನು ತನ್ನ ಮೂರು ಕೈಗಳಲ್ಲಿ ಕತ್ತಿ, ಗುರಾಣಿ, ಗದೆಗಳನ್ನು ಹಿಡಿದು, ನಾಲ್ಕನೇ ಕೈಯಿಂದ ವರದಮುದ್ರೆಯನ್ನು ತೋರಿಸುತ್ತಿದ್ದಾನೆ. ದೇವತೆಗಳಿಗೂ ಗುರುವಾದ ಬೃಹಸ್ಪತಿಯ ಬಣ್ಣ ಹಳದಿ. ನಾಲ್ಕು ಕೈಗಳಲ್ಲಿ ದಂಡ, ಜಪಮಾಲೆ, ಕಮಂಡಲುಗಳನ್ನು ಧರಿಸಿ ವರದಮುದ್ರೆಯಿಂದ ಶೋಭಿಸುತ್ತಿದ್ದಾನೆ.

ದೈತ್ಯಗುರು ಶುಕ್ರನ ಬಣ್ಣ ಮಾತ್ರ ಬಿಳುಪು. ಉಳಿದುದೆಲ್ಲವೂ ಬುಧನಂತೆಯೇ. ಸೂರ್ಯನ ಮಗನಾದ ಶನಿಯ ಬಣ್ಣ ಇಂದ್ರನೀಲಮಣಿಯಂತೆ ಕಂಗೊಳಿಸುವದು. ಹದ್ದಿನ ಮೇಲೆ ಏರಿದ ಅವನ ಕೈಗಳಲ್ಲಿ ಬಿಲ್ಲು, ಬಾಣ, ತ್ರಿಶೂಲಗಳು, ಶೋಭಿಸುತ್ತಿದ್ದು ವರವನ್ನು ಕರುಣಿಸುವ ಶನಿಯ ಆಕೃತಿಯನ್ನು ರೇಖಿಸಬೇಕು. ರಾಹುವಿನ ಮುಖ ಮಾತ್ರ ಕ್ರೂರ. ಕರಿಬಣ್ಣದ ಸಿಂಹವು ಅವನ ಆಸನ. ಖಡ್ಗ, ಢಾಲು, ತ್ರಿಶೂಲ, ಹಾಗೂ ವರದಮುದ್ರೆಗಳಿಂದ ಒಪ್ಪುವ ನಾಲ್ಕು ಕೈಗಳನ್ನು ರಾಹುವಿನ ಆಕಾರಕ್ಕೆ ಮಾಡಬೇಕು. ಕೇತುಗಳು ಮಾತ್ರ ಬಹುರೂಪಿಗಳು. ಹೊಗೆಯಬಣ್ಣ, ಹದ್ದಿನಆಸನ. ವಿಕಾರವಾದ ಮುಖ. ಕೈಯಲ್ಲಿ ಗದೆ. ಇನ್ನೊಂದು ಕೈಯಲ್ಲಿ ವರದಮುದ್ರೆ. ಈ ಎಲ್ಲ ಗ್ರಹಗಳೂ ಲೋಕಕ್ಕೆ ಹಿತವನ್ನುಂಟು ಮಾಡುವವು. ಒಂದು ಬೆರಳಿನ ಎತ್ತರದ ಆಕಾರದಲ್ಲಿ ಈ ನವಗ್ರಹಗಳ ಪ್ರತಿಮೆಗಳನ್ನು ನಿರ್ಮಿಸಿ ಎಲ್ಲ ಪ್ರತಿಮೆಗಳಿಗೂ ತಲೆಯಮೇಲೆ ಕಿರೀಟಗಳನ್ನು ಇರಿಸಬೇಕು. ಪ್ರತಿಯೊಂದು ಗ್ರಹದ ಸ್ತೋತ್ರವನ್ನು ನೂರೆಂಟು ಸಲ ಜಪಿಸಬೇಕು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೈದನೆಯ ಅಧ್ಯಾಯ ಮುಗಿದುದು*

—o—

ನಾರದ ಉವಾಚ

**ಭಗವನ್ ಭೂತಭವ್ಯೇಶ ತಥಾಽನ್ಯದಪಿಯಚ್ಛ್ರುತಂ**
**ಭುಕ್ತಿಮುಕ್ತಿಫಲಾಯಾಲಂ ತತ್ಸರ್ವಂ ವಕ್ತುಮರ್ಹಸಿ ॥**

**ನಾರದ :-** ಭೂತ ಭವಿಷ್ಯಾದಿ ಕಾಲನಿಯಾಮಕನಾದ ಭಗವಂತನೇ, ಸ್ವರ್ಗ ಮೋಕ್ಷಾದಿ ಫಲವನ್ನೂ ಕೊಡಬಲ್ಲ ಬೇರೆ ಯಾವದಾದರೂ ಒಂದು ವ್ರತವನ್ನು ನೀನು ಕೇಳಿದ್ದರೆ ನಮಗಾಗಿ ಹೇಳು.'' ನಾರದರ ಈ ಪ್ರಶ್ನೆಯನ್ನು ಕೇಳಿ ಮಹಾದೇವನು ಇಂತು ಉತ್ತರಿಸಿದನು.

**ಮಹಾದೇವ :-** ಓ ನಾರದ ! ಇಗೋ, ಈ ನಂದಿಕೇಶ್ವರನು ಸಕಲಶಾಸ್ತ್ರ ಸಾಹಿತ್ಯಗಳಲ್ಲಿ ಪಾರಂಗತ. ಗಣಂಗಳಿಗೆಲ್ಲ ಅಧಿಪತಿ. ಸಾಕ್ಷಾತ್‌ಧರ್ಮಸ್ವರೂಪನೇ ಇವನು. ಎತ್ತಿನ ರೂಪದಿಂದಿರುವ ಈ ಗಣಾಧಿಪನಿಗೆ **ನಂದೀ** ಎಂದು ಹೆಸರು. ತಪಸ್ಸನ್ನುಮಾಡಿ ಇವನು ನನ್ನ ಸಮಾನ ಎನಿಸಿ ಈಶ್ವರ ಎನಿಸಿದ್ದಾನೆ. ಆದುದರಿಂದಲೇ ಇವನಿಗೆ ನಂದಿಕೇಶ್ವರ ಎಂದು ಹೆಸರಾಗಿದೆ. ವೃಷಭರೂಪಿಯಾದ ಇವನು ಸಾಕ್ಷಾತ್ ಧರ್ಮರೂಪಿಯೇ. ಆದುದರಿಂದ ಇವನ ಹೆಸರೇ ಧರ್ಮಕ್ಕೆ ಬಂದು **ವೃಷ** ಎಂದರೆ ಧರ್ಮ ಎಂದು ಪ್ರಸಿದ್ಧಿಯಾಗಿದೆ. ವೇದಶಾಸ್ತ್ರ ಪುರಾಣಗಳನ್ನು ಇವನೂ ನನ್ನಂತೆಯೇ ಚೆನ್ನಾಗಿ ತಿಳಿದಿದ್ದು ನನ್ನಂತೆಯೇ ಎಲ್ಲವನ್ನೂ ವಿವರಿಸಬಲ್ಲ. ಇನ್ನು ಮಾಹೇಶ್ವರಧರ್ಮಗಳನ್ನೆಲ್ಲ ಇವನೇ ನಿಮಗೆ ಬಿತ್ತರಿಸುವನು.'' ಹೀಗೆ ಹೇಳಿ ದೇವಾಧಿದೇವತೆಗಳಿಗೆಲ್ಲ ಅಧೀಶ್ವರನಾದ ಪರಮೇಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಅನಂತರ ನಾರದ ಮುನಿಯು ಅಲ್ಲಿಯೇ ಕುಳಿತ ನಂದಿಕೇಶ್ವರನಿಗೆ ಜಿಜ್ಞಾಸೆಯಿಂದ ''ನಂದೀಕೇಶ್ವರನೇ, ಶಿವನು ನಿನಗೆ ಅಪ್ಪಣೆಯಿತ್ತಿದ್ದಾನೆ. ಆದುದರಿಂದ ನೀನು ನನಗೆ ಮಾಹೇಶ್ವರ ವ್ರತವನ್ನು ನಿರೂಪಿಸು.'' ಎಂದು ಪ್ರಶ್ನೆಮಾಡಿದನು. ಆಗ ನಂದಿಕೇಶ್ವರನು ಹೇಳಲು ಉಪಕ್ರಮಿಸಿದನು.

**ನಂದಿಕೇಶ್ವರ :-** ಬ್ರಹ್ಮಜ್ಞಾನಿಯಾದ ನಾರದ, ಶಿವನ ಆಣತಿಯನ್ನು ಶಿರಸಾ ವಹಿಸಿ ಮಹೇಶ್ವರವ್ರತವನ್ನು ಹೇಳುತ್ತೇನೆ. ಚಿತ್ತವಿಟ್ಟು ಶ್ರವಣಮಾಡು. ಶಿವ ಚತುರ್ದಶೀ ವ್ರತವು ಮೂರು ಲೋಕಗಳಲ್ಲಿಯೇ ವಿಖ್ಯಾತವಾಗಿದೆ. ಮಾರ್ಗಶೀರ್ಷ ಮಾಸದ ಶುಕ್ಲಪಕ್ಷ ತ್ರಯೋದಶೀ ದಿನ ಒಪ್ಪೊತ್ತು ಊಟಮಾಡಿ ದೇವ ದೇವೋತ್ತಮನಾದ ಪರಮೇಶ್ವರನನ್ನು ಪ್ರಾರ್ಥಿಸಬೇಕು. ''ಸ್ವಾಮಿ, ನಾನು ನಿನಗೆ ಶರಣು ಬಂದಿದ್ದೇನೆ. ಚತುರ್ದಶಿದಿನ ಉಪವಾಸಗೈದು ಮಂಗಳಮೂರ್ತಿಯಾದ ನಿನ್ನನ್ನು ಭಕ್ತಿಯಿಂದ ಪೂಜೆ ಮಾಡುವೆನು. ಬಂಗಾರದ

ಎತ್ತನ್ನು ದಾನ ನೀಡುವೆನು. ಮರುದಿನ ಪಾರಣೆ ಮಾಡುವೆನು.'' ಹೀಗೆ ಸಂಕಲ್ಪ ಮಾಡಿ ಮಲಗಿ ಮರುದಿನ ಬೆಳಿಗ್ಗೆ ಎದ್ದು ಸ್ನಾನ, ಸಂಧ್ಯೆ, ಜಪ ಆಹ್ನಿಕಾದಿಗಳನ್ನು ಮಾಡಿ ಮುಗಿಸಿ ಪಾರ್ವತೀ ಸಹಿತನಾದ ಪರಮೇಶ್ವರನನ್ನು ಬೆಳ್ದಾವರೆ ಹೂಗಳನ್ನು ಏರಿಸಿ ಗಂಧ ಲೇಪಿಸಿ ಪೂಜಿಸಬೇಕು.

'ಶಿವಾಯನಮಃ' ಶಿವನಿಗೆ ನಮಸ್ಕಾರ ಎಂದು ಅಂದು ಪಾದಗಳಿಗೆ ವಂದಿಸಿ ಹೂವನ್ನು ಅರ್ಪಿಸಬೇಕು. ಇದರಂತೆಯೇ ಮುಂದೆ 'ಸರ್ವಾತ್ಮನೇ ನಮಃ' ಎಂದು ತಲೆ, 'ತ್ರಿನೇತ್ರಾಯನಮಃ' ಎಂದು ಕಣ್ಣು 'ಹರೆಯೇನಮಃ' ಎಂದು ಹಣೆ, 'ಚಂದ್ರಮುಖಾಯನಮಃ' ಎಂದು ಮುಖ, 'ಶ್ರೀಕಂಠಾಯನಮಃ' ಎಂದು ಕೊರಳು, 'ಸದ್ಯೋಜಾತಾಯನಮಃ' ಎಂದು ಕಿವಿ, 'ವಾಮದೇವಾಯನಮಃ' ಎಂದು ತೋಳು, 'ಅಘೋರಹೃದಯಾಯನಮಃ' ಎಂದು ಎದೆ, 'ತತ್ಪುರುಷಾಯನಮಃ' ಎಂದು ಸ್ತನ, 'ಈಶಾನಾಯನಮಃ' ಎಂದು ಉದರ, 'ಅನಂತಧರ್ಮಾಯನಮಃ' ಎಂದು ಪಾರ್ಶ್ವ, 'ಜ್ಞಾನಭೂತಾಯನಮಃ' ಎಂದು ನಡು, 'ಅನಂತವೈರಾಗ್ಯ ಸಿಂಹಾಯ ನಮಃ' ಎಂದು ತೊಡೆ, 'ಅಪರಿಮಿತೈಶ್ವರ್ಯನಾಥಾಯನಮಃ' ಎಂದು ಮೊಣಕಾಲು, 'ಆಕಾಶಸ್ವರೂಪಾಯನಮಃ' ಹಿಮ್ಮಡಿ, 'ವ್ಯೋಮಕೇಶಾಯನಮಃ' ಎಂದು ಕೂದಲು, 'ಆತ್ಮ ರೂಪಾಯನಮಃ' ಎಂದು ಪೃಷ್ಠ, ಹೀಗೆ ಹೂಗಳನ್ನು ಸಮರ್ಪಿಸಿ ಪೂಜಿಸಬೇಕು. ಅನಂತರ 'ಪುಷ್ಟೈನಮಃ' ಎಂದು 'ತುಷ್ಟ್ಯೈನಮಃ' ಎಂದೂ ಸ್ತುತಿಸಿ ಪಾರ್ವತಿಯನ್ನೂ ಪುಷ್ಪಾರ್ಪಣ ಪೂರ್ವಕವಾಗಿ ಪೂಜಿಸಬೇಕು.

ಅನಂತರ ಜಲಕುಂಭ ಸಹಿತವಾಗಿ ಬಂಗಾರದ ಎತ್ತನ್ನು ಉದಕುಂಭ ಭಕ್ಷ್ಯಭೋಜ್ಯ ಮತ್ತು ಪಂಚರತ್ನಗಳೊಡನೆ ಬ್ರಾಹ್ಮಣರಿಗೆ ದಾನನೀಡಬೇಕು. 'ಪ್ರೀಯತಾಂ ದೇವದೇವೇಶಃ' ದೇವತೆಗಳ ಒಡೆಯನಾದ ಮಹಾದೇವನು ಪ್ರೀತನಾಗಲಿ ಎಂದು ಪ್ರಾರ್ಥಿಸಿ ಯೋಗ್ಯರಾದ ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸಿ ವಸ್ತ್ರಾಭರಣಗಳನ್ನು ಕೊಟ್ಟು ತೃಪ್ತಿ ಪಡಿಸಬೇಕು. ಸ್ವಯಂ ಯಜಮಾನನು ಮೊಸರು ಬೆರೆಸಿದ ತುಪ್ಪವನ್ನು ಪ್ರಾಶನಮಾಡಿ ಉತ್ತರದಿಕ್ಕಿಗೆ ತಲೆಯಿಟ್ಟು ಮಲಗಬೇಕು. ಹುಣ್ಣಿಮೆಯ ದಿನ ಬ್ರಾಹ್ಮಣರನ್ನು ಪೂಜಿಸಿ ಮೌನದಿಂದ ಭೋಜನ ಮಾಡಬೇಕು. ಇದರಂತೆಯೇ ಕೃಷ್ಣಪಕ್ಷ ಚತುರ್ದಶೀ ದಿನವೂ ಇತರ ಚತುರ್ದಶೀ ತಿಥಿಗಳಲ್ಲಿಯೂ ಪರಮೇಶ್ವರನ ಪೂಜೆಯನ್ನು ನೆರವೇರಿಸಬೇಕು. ಆದರೆ ಮಾಸಭೇದದಿಂದ ಪೂಜೆಯ ಕ್ರಮದಲ್ಲಿಯೂ ತುಸು ವ್ಯತ್ಯಾಸವುಂಟು. ಅದನ್ನು ನಿರೂಪಿಸುತ್ತೇನೆ. ಕೇಳು.

ಮಾರ್ಗಶೀರ್ಷ ಮಾಸದಲ್ಲಿ 'ಶಂಕರಾಯನಮಃ ಶಂಕರಂ ತ್ವಾಂ ಶರಣಂ ಗತಃ' ಎಂದು ಪ್ರಾರ್ಥಿಸಿ ಪೂಜಿಸಬೇಕು. ಪುಷ್ಯಮಾಸದಲ್ಲಿ 'ಕರವೀರಾಯನಮಃ' ಮಾಘದಲ್ಲಿ 'ತ್ರ್ಯಂಬಕಾಯನಮಃ', ಫಾಲ್ಗುಣದಲ್ಲಿ 'ಮಹೇಶ್ವರಾಯನಮಃ' ಚೈತ್ರದಲ್ಲಿ 'ಮಹಾದೇವಾಯನಮಃ', ವೈಶಾಖದಲ್ಲಿ 'ಸ್ಥಾಣವೇನಮಃ', ಜ್ಯೇಷ್ಠದಲ್ಲಿ 'ಪಶುಪತಯೇನಮಃ', ಆಷಾಢದಲ್ಲಿ 'ಶಂಭವೇನಮಃ', ಶ್ರಾವಣದಲ್ಲಿ

'ಪರಮಾನಂದಾಯನಮಃ', ಭಾದ್ರಪದದಲ್ಲಿ 'ಸೋಮಾರ್ಧಧಾರಿಣೇನಮಃ', ಆಶ್ವೀನದಲ್ಲಿ 'ಭೀಮಾಯನಮಃ', ಕಾರ್ತಿಕದಲ್ಲಿ 'ಪರಮೇಶ್ವರಾಯನಮಃ' ಎಂದು ಒಂದೊಂದು ತಿಂಗಳಿನಲ್ಲಿ ಒಂದೊಂದು ಹೆಸರಿನಿಂದ ಶಿವನನ್ನು ಪೂಜಿಸಬೇಕು. ಪ್ರತಿ ತಿಂಗಳ ಚತುರ್ದಶೀದಿನ ಮುಂದಿನ ವಸ್ತುಗಳಲ್ಲಿ ಒಂದನ್ನು ಕ್ರಮವಾಗಿ ಪ್ರಾಶನ ಮಾಡಬೇಕು. ಗೋಮೂತ್ರ, ಗೋಮಯ, ಗೋಕ್ಷೀರ, ಗೋಘೃತ, ಗೋವಿನದೇ ಮೊಸರು, ತುಪ್ಪ, ದರ್ಭೋದಕ, ಪಂಚಗವ್ಯ, ಬಿಲ್ವಪತ್ರ, ಪಚ್ಚಕರ್ಪೂರ ಅಗರುಗಂಧ, ಅಕ್ಕಿಕಾಳು ಮತ್ತು ಕರಿಯಎಳ್ಳು ಈ ಹನ್ನೆರಡು ಪದಾರ್ಥಗಳನ್ನು ಒಂದೊಂದು ತಿಂಗಳಿನ ಶುಕ್ಲಕೃಷ್ಣ ಚತುರ್ದಶೀದಿನ ಪ್ರಾಶನಮಾಡಬೇಕು. ಇದರಂತೆ ಪಾರಿಜಾತ, ಇರುವಂತಿಗೆ, ಉಮ್ಮತ್ತಿ, ಲಕ್ಕಿ, ಅಶೋಕ, ಮಲ್ಲಿಗೆ, ಪಾದ, ಎಕ್ಕೆ, ಕದಂಬ, ನೂರೆಲೆಯ ತಾವರೆ ಮತ್ತು ಕನ್ನೈದಿಲೆ ಈ ಹನ್ನೆರಡು ಬಗೆಯ ಹೂಗಳನ್ನು ಮಾರ್ಗಶಿರಾದಿ ಮಾಸಗಳಲ್ಲಿ ಕ್ರಮವಾಗಿ ಶಿವನಿಗೆ ಅರ್ಪಿಸಬೇಕು. ಕಾರ್ತಿಕಮಾಸದಲ್ಲಿ ವಿವಿಧ ಭಕ್ಷ್ಯ-ಭೋಜ್ಯ, ಗಂಧ-ಪುಷ್ಪ ವಸ್ತ್ರಾದಿಗಳಿಂದ ಬ್ರಾಹ್ಮಣರನ್ನು ಆರಾಧಿಸಬೇಕು. ವೇದೋಕ್ತವಿಧಿಯಿಂದ ಕಪ್ಪುಎತ್ತನ್ನು ದೇವರ ಹೆಸರಿನಿಂದ ಬಿಟ್ಟು ಬಂಗಾರದಿಂದ ಪಾರ್ವತೀಪರಮೇಶ್ವರರ ಪ್ರತಿಮೆಗಳನ್ನು ಮಾಡಿಸಿ ಬ್ರಾಹ್ಮಣರಿಗೆ ಗೋದಾನ ಮಾಡಬೇಕು. ಅದರೊಟ್ಟಿಗೆ ಎತ್ತೂ ಇರಬೇಕು. ಎಂಟು ಮುತ್ತು, ಬಿಳಿಬಟ್ಟೆ, ಸಪರಿಕರ ಹಾಸಿಗೆ, ಅಕ್ಕಿ ತುಂಬಿದ ತಾಮ್ರಪಾತ್ರೆಯ ಮೇಲಿರಿಸಿದ ಪೂರ್ಣಕುಂಭ ಮುಂತಾದವುಗಳನ್ನೆಲ್ಲ ವೇದವೇದಾಂತ ವಿದ್ವಾಂಸನಾದ ಸದಾಚಾರಿಯಾದ ಆಚಾರ್ಯನಿಗೆ ದಾನಕೊಡಬೇಕು. ದಾನವನ್ನು ತೆಗೆದುಕೊಳ್ಳುವ ಮನುಷ್ಯನು ಅಂಗಹೀನನಾಗಿರಬಾರದು. ಜ್ಯೇಷ್ಠಸಾಮವನ್ನು ಅರಿತು ನವವಿಧವ್ರತಗಳನ್ನೆಲ್ಲ ಆಚರಿಸುತ್ತಿರಬೇಕು. ಇಂಥ ತತ್ವಜ್ಞಾನಿಯಾದ ಆಚಾರ್ಯದಂಪತಿಗಳನ್ನು ಪುಷ್ಪ, ವಸ್ತ್ರಾಲಂಕಾರಗಳಿಂದ ಪೂಜಿಸಿ ದಾನ ನೀಡಬೇಕು. ಇಂಥ ಆಚಾರ್ಯನಿರದಿದ್ದರೆ ಬೇರೆ ಬ್ರಾಹ್ಮಣನಿಗೆ ದಾನ ಕೊಡಬೇಕು.

ಈ ರೀತಿಯಾಗಿ ಶಿವ ಚತುರ್ದಶೀವ್ರತವನ್ನು ಅನುಷ್ಠಾನಮಾಡಿದವರ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ಪರಿಹಾರವಾಗಿ ಆಯುಷ್ಯ, ಆರೋಗ್ಯ ಐಶ್ವರ್ಯ, ಸಂತಾನ ಸುಖಭೋಗಗಳೆಲ್ಲವೂ ಅವರಿಗೆ ಪ್ರಾಪ್ತವಾಗುವವು. ಮುಂದೆ ಸಾವಿರ ಅಶ್ವಮೇಧಯಾಗಮಾಡಿದ ಪುಣ್ಯವೂ ಅವನಿಗೆ ಪ್ರಾಪ್ತವಾಗಿ ದೇವತ್ವವನ್ನು ಹೊಂದುವನು. ಗಣಾಧಿಪತಿಯಾಗಿ ಅನಂತಕಾಲ ಸ್ವರ್ಗ ಹಾಗೂ ಈಶ್ವರ ಸನ್ನಿಧಾನದಲ್ಲಿ ವಾಸಿಸಿ ಸುಖಿಸುವನು. ಈ ಶಿವಚತುರ್ದಶೀವ್ರತದ ಮಹಿಮೆ ಹೇಳಲು ಬ್ರಹ್ಮಾದಿ ದೇವತೆಗಳಿಗೂ ಸಾಧ್ಯವಿಲ್ಲ. ಈ ವ್ರತದವಿಧಾನವನ್ನು ಪಠಿಸುವ ಸ್ಮರಿಸುವ ಶ್ರವಣಮಾಡುವ ಮನುಷ್ಯರೂ, ಪತಿಯ ಅಪ್ಪಣೆಪಡೆದು ಇದನ್ನು ಆಚರಿಸುವ ಸ್ತ್ರೀಯರೂ ಪರಮೇಶ್ವರನ ಪ್ರಸಾದದಿಂದ ಕೈಲಾಸ ಸೇರುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತಾರನೆಯ ಅಧ್ಯಾಯ ಮುಗಿದುದು*

—o—

## ಫಲತ್ಯಾಗದ ಮಹಿಮೆ

ಅಧ್ಯಾಯ - ೯೭

**ನಂದಿಕೇಶ್ವರ ಉವಾಚ**

**ಫಲತ್ಯಾಗಸ್ಯ ಮಾಹಾತ್ಮ್ಯಂ ಯದ್ಭವೇಚ್ಛೃಣು ನಾರದ ।**
**ಯದಕ್ಷಯಂ ಪರೇಲೋಕೇ ಸರ್ವಕಾಮ ಫಲಪ್ರದಮ್ ॥**

**ನಂದಿಕೇಶ್ವರ** :- ನಾರದ, ಹಣ್ಣುಗಳನ್ನು ದಾನಮಾಡುವದರಿಂದ ಪರಲೋಕದಲ್ಲಿ ಸವಾರ್ಥಗಳೂ ಸಿದ್ಧಿಸುವವು. ಅಕ್ಷಯ ಪುಣ್ಯವೂ ಲಭಿಸುವದು. ಆ ಫಲದಾನದ ಮಹಿಮೆಯನ್ನು ಹೇಳುತ್ತೇನೆ ಕೇಳು. ಶುಭಕರವಾದ ಮಾರ್ಗಶೀರ್ಷ ಮಾಸದಲ್ಲಿ ಶುಕ್ಲಪಕ್ಷದ ತದಿಗೆ, ಅಷ್ಟಮಿ, ದ್ವಾದಶೀ ಅಥವಾ ಚತುರ್ದಶೀ ದಿನಗಳಲ್ಲಿ ಬ್ರಾಹ್ಮಣರ ಅಪ್ಪಣೆಪಡೆದು ಈ ಫಲದಾನದ ವ್ರತವನ್ನು ಆರಂಭಿಸಬೇಕು. ಎಲ್ಲ ಮಾಸಗಳಲ್ಲಿಯೂ ಪಾಯಸಭೋಜನದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಯಥಾಶಕ್ತಿ ದಕ್ಷಿಣೆಯನ್ನು ನೀಡಬೇಕು. ಧಾನ್ಯಗಳಲ್ಲಿ ಒಂದು, ಹಣ್ಣುಗಳಲ್ಲಿ ಒಂದು, ಕಂದಮೂಲಗಳಲ್ಲಿ ಒಂದು, ಭಕ್ಷ್ಯವಸ್ತು ಒಂದು ವರ್ಷದವರೆಗೆ ತಿನ್ನುವುದಿಲ್ಲ ಎಂದು ಪ್ರತಿಜ್ಞೆಮಾಡಿ ಅದರಂತೆ ಫಲತ್ಯಾಗ, ಧಾನ್ಯತ್ಯಾಗ ಮೂಲತ್ಯಾಗಗಳನ್ನು ಮಾಡಬೇಕು.

ಬೂದಿಗುಂಬಳ, ಮಾದಲ, ಬದನೆ, ಹಲಸು, ಅಂಬಟೆ,ಬಳುವಲ, ಕಮರಿಗೆ ಕಿರಿಗುಂಬಳ, ಬಿಲ್ವ, ಅರಳಿ, ಎಲಚಿ, ನಿಂಬೆ, ಬಾಳೆ, ಕುಂಬಳ, ದಾಳಿಂಬೆ ಮುಂತಾದ ಹದಿನಾರುಜಾತಿಯ ಫಲಗಳನ್ನು ಯಥಾಶಕ್ತಿ ಚಿನ್ನದಿಂದ ಮಾಡಿಸಬೇಕು. ಮೂಲಂಗಿ, ನೆಲ್ಲಿ, ಕಂಕೋಲ, ಕಮರಿಕೆ, ನೇರಿಳೆ, ಹುಣಿಸೆ, ಏಲಕ್ಕಿ, ಬಿದಿರುಕಳಲೆ, ತುಂಡೀರ, ದ್ರಾಕ್ಷಿ, ಬನ್ನಿ, ಅತ್ತಿ, ನಿಂಬೆ, ಬಾಳೆ, ಹೆಗ್ಗುಳ್ಳ, ಕಿರಿಗುಳ್ಳ ಈ ಬಗೆಯ ಹದಿನಾರುಫಲಗಳನ್ನು ತನ್ನ ಯೋಗ್ಯತೆಗೆ ತಕ್ಕಂತೆ ಬೆಳ್ಳಿಯಿಂದ ಮಾಡಿಸಬೇಕು. ತಾಲಫಲ, ಅಗಸ್ತಿಫಲ, ಹುಳೀಬೇಲ, ಶಿವನೀಕಾಯಿ, ಹಿಪ್ಪೆಯಕಾಯಿ, ಮಾವಿನಕಾಯಿ, ಬೂರುಗದಕಾಯಿ, ಏರುವಂಗದಕಾಯಿ, ಚೂರ್ಣಗಡ್ಡೆ, ರಕ್ತಾಲುವೆಂಬಗಡ್ಡೆ, ಉಮ್ಮತ್ತಿಕಾಯಿ, ಕಕ್ಕೆರಿಕಾಯಿ, ಹೆಸರು, ಆಲದಹಣ್ಣು, ಪಡವಲಕಾಯಿ, ಅವರೆ ಈ ಹದಿನಾರುಗಳನ್ನೂ ಯಥಾಶಕ್ತಿ ತಾಮ್ರದಿಂದ ಮಾಡಿಸಬೇಕು.

ಧಾನ್ಯದ ಮೇಲೆ ಜಲಪೂರ್ಣವಾದ ಎರಡು ಕಲಶಗಳನ್ನು ಇರಿಸಿ ವಸ್ತ್ರದಿಂದ ಅಲಂಕರಿಸಬೇಕು. ಹಿಂದೆ ಹೇಳಿದಂತೆ ಸಕಲಪರಿಕರ ಸಹಿತವಾದ ಹಾಸಿಗೆ ಹಾಗೂ ಒಂದುಜತೆ ಪಂಚೆಯನ್ನೂ ಸಿದ್ಧಪಡಿಸಬೇಕು. ಭಕ್ಷ್ಯಗಳನ್ನು ತುಂಬಿದ ಮೂರು ಪಾತ್ರೆಗಳು ವೃಷಭ, ರುದ್ರ, ಯಮ, ಇವರ ಪ್ರತಿಮೆಗಳು. ಇವೆಲ್ಲವನ್ನೂ ಶಾಂತನೂ ಕುಟುಂಬಿಯೂ, ಸಪತ್ನೀಕನೂ ಆದ ಬ್ರಾಹ್ಮಣನಿಗೆ ಶುಭದಿವಸದಲ್ಲಿ ಸತ್ಕಾರಪೂರ್ವಕವಾಗಿ ದಾನಕೊಡಬೇಕು. ಇದರ ಸಂಗಡವೇ ಕರೆಯುವ ಹಸುವನ್ನೂ

ಸಹ ಕೊಡಬೇಕು. ಶಿವನ ಜೊತೆಗೆ ಅವನಂತೆ ಫಲವನ್ನು ಕೊಡುವ ಯಮಧರ್ಮನ ಪ್ರತಿಮೆಯನ್ನೂ ಮಾಡಿಸಿ ಶಿವ ಪ್ರತಿಮೆಯೊಡನೆ ''ಉಭೌಸ್ಯಾತಾಂ ವರಪ್ರದೌ '' ಇವರಿಬ್ಬರೂ ಶಿವಯಮರು ನನಗೆ ವರವನ್ನು ಕರುಣಿಸಲಿ ಎಂದು ಪ್ರಾರ್ಥಿಸಿ ದಾನಮಾಡಬೇಕು.

**ಯಥಾ ಭೇದಂ ನ ಪಶ್ಯಾಮಿ ಶಿವವಿಷ್ಣುವಿಧಾತೃಷು ।**
**ತಥಾ ಮಮಾಸ್ತು ವಿಶ್ವಾತ್ಮಾ ಶಂಕರಃಶಂಕರಃ ಸದಾ ॥**

ಈಶ್ವರ, ಸೂರ್ಯ, ವಿಷ್ಣು, ಬ್ರಹ್ಮ ಇವರಲ್ಲಿ ನನಗೆ ಭೇದ ಬುದ್ಧಿಯಿಲ್ಲ. ಆದಕಾರಣ ಸರ್ವರೂಪಿಯಾದ ಶಂಕರನು ಯಾವಾಗಲೂ ನನಗೆ ಶುಭವನ್ನು ಕೊಡಲಿ. ಹೀಗೆ ಪ್ರಾರ್ಥಿಸಿ ಪ್ರತಿಮೆ, ಪಾತ್ರೆ, ಗೋವು, ಮುಂತಾದವುಗಳನ್ನೆಲ್ಲ ಬ್ರಾಹ್ಮಣದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಸಿಂಗರಿಸಿ ದಾನಕೊಡಬೇಕು. ಶಕ್ತಿಯಿದ್ದವರು ಶಯ್ಯಾದಾನವನ್ನು ಮಾಡಬೇಕು. ಯೋಗ್ಯತೆ ಇಲ್ಲದಿದ್ದವರು ಮೇಲೆ ಹೇಳಿದ ಹಣ್ಣುಗಳನ್ನು ವಿಧಿಪೂರ್ವಕವಾಗಿ ದಾನಮಾಡಬೇಕು. ಶಿವ ಯಮರ ಬಂಗಾರದ ಮೂರ್ತಿಗಳನ್ನು ಜಲಕುಂಭದೊಡನೆ ದಾನಕೊಡಬೇಕು. ಅನಂತರ ಯಥಾಶಕ್ತಿ ಬ್ರಾಹ್ಮಣ ಭೋಜನಮಾಡಿಸಿ ನಂತರ ತಾನೂ ಕೂಡ ಎಣ್ಣೆಯನ್ನು ವರ್ಜಿಸಿ ಮೌನದಿಂದ ಭೋಜನ ಮಾಡಬೇಕು. ಈ ಸರ್ವಫಲತ್ಯಾಗ ಎಂಬ ವ್ರತವು ಎಲ್ಲ ಭಗವದ್ಭಕ್ತರಿಗೂ, ಯೋಗಿಗಳಿಗೂ, ಸ್ತ್ರೀಯರಿಗೂ, ಅತ್ಯಂತ ಫಲಪ್ರದವಾಗಿದೆ. ಹಣ್ಣುಗಳನ್ನೂ ಚಿನ್ನದಿಂದ ಮಾಡಿಸುವ ಯೋಗ್ಯತೆ ಇಲ್ಲದವರು ಬೆಳ್ಳಿ ಅಥವಾ ತಾಮ್ರದಿಂದ ಮಾಡಿಸಿ ದಾನಕೊಟ್ಟರೆ ಅನಂತಕಾಲದ ವರೆಗೆ ರುದ್ರಲೋಕ, ಇಂದ್ರಲೋಕ ಮೊದಲಾದ ದಿವ್ಯಲೋಕಗಳಲ್ಲಿ ವಾಸಮಾಡುವರು. ಈ ವ್ರತದ ವಿಧಾನವನ್ನು ಓದಿದವರು, ಕೇಳಿ ತಿಳಿದವರೂ, ಪಾಪಮುಕ್ತರಾಗಿ ವಿಷ್ಣುವಿನ ಸಾನ್ನಿಧ್ಯವನ್ನು ಪಡೆಯುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೇಳನೆಯ ಅಧ್ಯಾಯ ಮುಗಿದುದು*

—o—

## ಆರೋಗ್ಯಕರವಾದ ಆದಿತ್ಯವ್ರತ

ಅಧ್ಯಾಯ - ೯೮

**"ಯದಾರೋಗ್ಯಕರಂ ಪುಂಸಾಂ ಯದನಂತಫಲಪ್ರದಂ ।**
**ಯಚ್ಛಾಂತಯೇ ಚ ಮರ್ತ್ಯಾನಾಂ ವದನಂದೀಶ ತದ್ವ್ರತಮ್ ॥**

**ನಾರದ** :- ನಂದೀಶ್ವರ, ಮಾನವರಿಗೆ ಆರೋಗ್ಯವನ್ನು ಅನಂತ ಪುಣ್ಯ ಫಲವನ್ನೂ ಪ್ರದಾನಮಾಡುವ ಶಾಂತಿದಾಯಕವಾದ ಉತ್ತಮ ವ್ರತವು ಯಾವುದಿದೆ ? ನನಗೆ ಹೇಳು.

**ನಂದೀಕೇಶ್ವರ** :- ವಿಶ್ವವ್ಯಾಪಿ ಪರಮಾತ್ಮನ ತೇಜಸ್ಸು ಸೂರ್ಯಚಂದ್ರ ಅಗ್ನಿ ಎಂಬ ಮೂರು ರೂಪಗಳಿಂದ ಈ ಪ್ರಪಂಚವನ್ನು ಬೆಳಗುತ್ತಿದೆ. ಆ ದಿವ್ಯ ತೇಜಸ್ಸನ್ನು ಪೂಜಿಸಿದರೆ ಮಾನವನಿಗೆ ಕ್ಷೇಮ ಆರೋಗ್ಯಗಳು ಪ್ರಾಪ್ತವಾಗುತ್ತವೆ.

ಪ್ರತಿ ಆದಿತ್ಯವಾರದಂದು ಹಗಲು ಉಪವಾಸ ಮಾಡದೆ ರಾತ್ರಿ ಭೋಜನವನ್ನು ಮಾಡಬೇಕು. ರವಿವಾರ ಹಸ್ತಾ ನಕ್ಷತ್ರವು ಕೂಡಿ ಬಂದರೆ ಶನಿವಾರವೇ ಉಪವಾಸ ಮಾಡಬೇಕು. ರವಿವಾರ ರಾತ್ರಿ ಊಟಮಾಡಿ ಬ್ರಾಹ್ಮಣ ಭೋಜನವನ್ನು ಮುಖ್ಯವಾಗಿ ಮಾಡಿಸಿ ಈ ವ್ರತಾಚರಣೆಗೈಯ್ಯಬೇಕು. ರಕ್ತಚಂದನದಿಂದ ಹನ್ನೆರಡು ದಳದಕಮಲವನ್ನು ಬರೆದು ಪೂರ್ವದಿಕ್ಕಿನಲ್ಲಿಸೂರ್ಯನನ್ನು ನಮಸ್ಕರಿಸಿ ವಿನ್ಯಾಸ ಮಾಡಬೇಕು. ಆಗ್ನೇಯದಲ್ಲಿ ದಿವಾಕರ, ದಕ್ಷಿಣದಲ್ಲಿ ವಿವಸ್ವಾನ್, ನೈಋತ್ಯದಲ್ಲಿ ಭಗ, ಪಶ್ಚಿಮದಲ್ಲಿ ವರುಣ, ವಾಯವ್ಯದಲ್ಲಿ ದೇವೇಂದ್ರ, ಉತ್ತರದಲ್ಲಿ ಆದಿತ್ಯ, ಈಶಾನ್ಯದಲ್ಲಿ ಶಾಂತ ಎಂಬ ದೇವತೆಗಳನ್ನು ರೂಪಿಸಿ ಆವಾಹಿಸಬೇಕು. ಕರ್ಣಿಕೆಯ ಪೂರ್ವ ನಿಟ್ಟಿನಲ್ಲಿ ಸೂರ್ಯನ ಕುದುರೆಗಳನ್ನು ಬರೆಯಬೇಕು. ದಕ್ಷಿಣದಲ್ಲಿ ಆರ್ಯಮ, ಪಶ್ಚಿಮದಲ್ಲಿ ಮಾರ್ತಂಡ, ಉತ್ತರದಲ್ಲಿ ರವಿ, ಕರ್ಣಿಕೆಯ ನಟ್ಟನಡುವೆ ಭಾಸ್ಕರ ಎಂಬ ಸೂರ್ಯನ ವಿವಿಧ ರೂಪಗಳನ್ನು ಸ್ಥಾಪನೆಗೈಯ್ಯಬೇಕು. ಹೀಗೆ ರಕ್ತಚಂದನದಿಂದ ಬಿಡಿಸಿದ ತಾವರೆಯಲ್ಲಿ ಸೂರ್ಯನನ್ನು ಆವಾಹಿಸಿ ಸ್ಥಾಪಿಸಿದ ಬಳಿಕ ಕೆಂಪುಹೂ, ಕೆಂಪುಗಂಧಗಳನ್ನು ಸಮರ್ಪಿಸಿ ಮುಂದಿನ ಮಂತ್ರ ಹೇಳಿ ಅರ್ಘ್ಯವನ್ನು ಸೂರ್ಯನಿಗೆ ಕೊಡಬೇಕು.

**ಕಾಲಾತ್ಮಾ ಸರ್ವಭೂತಾತ್ಮಾ ವೇದಾತ್ಮಾ ಸರ್ವತೋಮುಖಃ ।**
**ಯಸ್ಮಾದಗ್ನೀಂದ್ರರೂಪಸ್ತ್ವಮತಃ ಪಾಹಿದಿವಾಕರ ॥**

**ಅಗ್ನಿಮೀಳೆ ನಮಸ್ತುಭ್ಯಮಿಷೇತ್ವೋರ್ಜೇ ಚ ಭಾಸ್ಕರ ।**
**ಅಗ್ನ ಆಯಾಹಿ ವರದ ನಮಸ್ತೇ ಜ್ಯೋತಿಷಾಂಪತೇ ॥**

ದಿವಾಕರನೇ, ನೀನು ಕಾಲನಿಯಾಮಕ, ಸರ್ವಭೂತಗಳ ಜೀವಾಧಾರನೂ ವೇದಪ್ರತಿಪಾದ್ಯನೂ ಆಗಿರುವೆ. ಎಲ್ಲೆಡೆಗೂ ಕಾಂತಿಯಿಂದ ಬೆಳಗುವ ನೀನು

ಅಗ್ನಿ, ಇಂದ್ರ ಮುಂತಾದ ರೂಪಗಳಿಂದ ಬೆಳಗುವೆ. 'ಅಗ್ನಿಮೀಳೆ' ಎಂಬ ಯಗ್ವೇದ ಮಂತ್ರದಿಂದ ನಿನ್ನನ್ನು ನಾನು ನಮಿಸುತ್ತೇನೆ **'ಇಷೇತ್ವೋರ್ಜೇತ್ವಾ'** ಎಂಬ ಯಜುರ್ವೇದ ಮಂತ್ರದಿಂದಲೂ ನೀನೇ ಪ್ರತಿಪಾದ್ಯನಾಗಿರುವೆ. 'ಅಗ್ನಆಯಾಹಿ' ಎಂಬ ಸಾಮವೇದ ಮಂತ್ರವೂ ಕೂಡ ನಿನ್ನ ಸ್ತೋತ್ರ ರೂಪವೇ ಆಗಿದೆ. ಈ ಎಲ್ಲ ತೇಜೋರೂಪಗಳ ಅಧೀಶ್ವರನಾದ ಸೂರ್ಯದೇವ ನಿನಗೆ ನಮಸ್ಕಾರ.'' ಈ ಮಂತ್ರದಿಂದ ಅರ್ಘ್ಯಪ್ರದಾನಮಾಡಿ ಉದ್ವಾಸನಗೈದು ರಾತ್ರಿ ಎಣ್ಣೆಬಿಟ್ಟು ಊಟ ಮಾಡಬೇಕು. ಹೀಗೆ ಒಂದು ವರ್ಷ ವ್ರತಗೈದು ಕೊನೆಗೆ ಸುಂದರವಾದ ಒಂದು ಹೊಂದಾವರೆಯನ್ನೂ ಎರಡುಕೈಯುಳ್ಳ ಸೂರ್ಯನ ಚಿನ್ನದ ಪ್ರತಿಮೆಯನ್ನೂ ಮಾಡಿಸಬೇಕು. ವಸ್ತ್ರಾಭರಣಗಳಿಂದ ಅಲಂಕೃತವಾದ ಕರುಸಹಿತಗೋವನ್ನು ದಾನಮಾಡಬೇಕು. ಬೆಲ್ಲದ ಮೇಲೆ ತಾಮ್ರ ಪಾತ್ರೆಯಿಟ್ಟು ಅದರಲ್ಲಿ ಕಮಲ ಹಾಗೂ ಪುರುಷರನ್ನು ಇರಿಸಿ ದಾನ ನೀಡಬೇಕು. ದಾನ ಸ್ವೀಕರಿಸುವ ಬ್ರಾಹ್ಮಣನು ಸ್ವಯಂ ತಾನು ಇಂಥ ಅನೇಕ ದಾನ ಮಾಡಿದವನಿರಬೇಕು.

**''ನಮೋ ನಮಃ ಪಾಪ ವಿನಾಶಾಯ ವಿಶ್ವಾತ್ಮನೇ ಸಪ್ತತುರಂಗಮಾಯ ॥**
**ಸಾಮರ್ಗ್ಯಜುರ್ಧಾಮ ನಿಧೇ ವಿಧಾತ್ರೇ ಭವಾಬ್ಧಿ ಪೋತಾಯ ಜಗತ್ಸವಿತ್ರೇ''**

ಪಾಪಪರಿಹಾರಕನೂ ವಿಶ್ವಾತ್ಮಕನೂ, ಏಳುಕುದುರೆಹೂಡಿದ ರಥಾರೂಢನೂ, ಋಗ್ ಯಜು, ಸಾಮ ಎಂಬ ಮೂರು ವೇದಗಳ ನಿಧಿಯೂ, ಸಂಸಾರಸಮುದ್ರದಿಂದ ಪಾರುಮಾಡುವ ನೌಕೆಯಂತಿರುವ ಜಗತ್ಕಾರಣನಾದ ಸೂರ್ಯದೇವನಿಗೆ ನಮಸ್ಕಾರ'' ಎಂದು ವಂದಿಸಬೇಕು. ಹೀಗೆ ಒಂದು ವರ್ಷದ ವರೆಗೆ ವ್ರತವನ್ನುಮಾಡುವ ಮನುಷ್ಯನು ಸರ್ವಪಾಪಗಳಿಂದ ಮುಕ್ತನಾಗಿ ದೇವತೆಗಳಿಂದ ಸತ್ಕೃತನಾಗಿ ಸೂರ್ಯಮಂಡಲವನ್ನು ಐದುತ್ತಾನೆ. ರಾಜ್ಯಭ್ರಷ್ಟನಾದ ಅರಸನು ಈ ವ್ರತಮಾಡಿದರೆ ಅವನ ಭಯಾಪಾಯಗಳೆಲ್ಲ ತೊಲಗಿ, ಮರಳಿ ಹುಟ್ಟಿ ಸಪ್ತದ್ವೀಪಗಳ ಅಧಿಪತಿಯಾಗಿ ಮೆರೆಯುವನು. ಈ ವ್ರತವನ್ನು ಆಚರಿಸುವ ಮಹಿಳೆಯೂ ದೇವಪೂಜ್ಯಳಾಗಿ ಸೂರ್ಯಲೋಕವನ್ನು ಸೇರುವಳು. ಈ ವ್ರತವನ್ನು ಓದಿದವರೂ, ಕೇಳಿದವರೂ ಇದಕ್ಕೆ ಸಮ್ಮತಿ ಸೂಚಿಸುವವರೂ ಇಂದ್ರಲೋಕವನ್ನು ಹೊಂದುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೆಂಟನೆಯ ಅಧ್ಯಾಯ ಮುಗಿದುದು*



**ನಂದಿಕೇಶ್ವರ ಉವಾಚ**

**ಅಥಾನ್ಯದಪಿವಕ್ಷ್ಯಾಮಿ ಸಂಕ್ರಾಂತ್ಯುದ್ಯಾಪನೇ ಫಲಂ**
**ಯದಕ್ಷಯಂ ಪರೇಲೋಕೇ ಸರ್ವಕಾಮ ಫಲಪ್ರದಮ್ ॥**

**ನಂದಿಕೇಶ್ವರ** :- ಸೂರ್ಯ ಸಂಕ್ರಮಣದ ಉದ್ಯಾಪನವ್ರತದಿಂದ ಬರುವ ಫಲವನ್ನು ಹೇಳುತ್ತೇನೆ. ಇದು ಪರಲೋಕದಲ್ಲಿ ಅಕ್ಷಯ ಫಲವನ್ನೀಯುವದಲ್ಲದೇ ಇಹದಲ್ಲಿ ಸಕಲ ಅಭೀಷ್ಟಗಳನ್ನೂ ಪ್ರದಾನ ಮಾಡುವದು.

ಉತ್ತರಾಯಣ, ದಕ್ಷಿಣಾಯನ, ವಿಷುವಕಾಲಗಳಲ್ಲಿ ಈ ಸಂಕ್ರಾಂತಿ ವ್ರತವನ್ನು ಆಚರಿಸಬೇಕು. ಮೊದಲು ದಿನ ಒಪ್ಪೊತ್ತು ಊಟಮಾಡಿ ಸಂಕ್ರಮಣದ ದಿನ ಪ್ರಾತಃ ಕಾಲದಲ್ಲಿ ಹಲ್ಲುಜ್ಜಿಕೊಂಡು ಎಳ್ಳು ಹಚ್ಚಿಕೊಂಡು ಸ್ನಾನ ಮಾಡಬೇಕು. ಸಂಕ್ರಾಂತಿ ದಿನ ನೆಲದ ಮೇಲೆ ಕೆಂಪುಗಂಧದಿಂದ ಎಂಟು ಎಸಳಿನ ಕಮಲವನ್ನು ಬರೆದು ಅದರಲ್ಲಿ ರವಿಯನ್ನು ಆವಾಹಿಸಬೇಕು. ಕರ್ಣಿಕೆಯಲ್ಲಿ ಸೂರ್ಯ, ಪೂರ್ವಕ್ಕೆ ''ಆದಿತ್ಯಾಯ ನಮಃ'' ಎಂದು ಪ್ರಾರ್ಥಿಸಿ ಆವಾಹಿಸಬೇಕು. ಆಗ್ನೇಯದಲ್ಲಿ ''ಉಷ್ಣಕಿರಣಾಯ ನಮಃ'' ದಕ್ಷಿಣದಲ್ಲಿ ''ಋಙ್ಮಂಡಲಾಯ ನಮಃ'' ನೈಋತ್ಯದಲ್ಲಿ ''ಸವಿತ್ರೇ ನಮಃ'' ಪಶ್ಚಿಮದಲ್ಲಿ ''ತಪನಾಯ ನಮಃ'' ವಾಯವ್ಯದಲ್ಲಿ ''ಭಗಾಯ ನಮಃ'' ಉತ್ತರದಲ್ಲಿ ''ಮಾರ್ತಂಡಾಯ ನಮಃ'' ಈಶಾನ್ಯದಲ್ಲಿ ''ವಿಷ್ಣವೇ ನಮಃ'' ಎಂದು ಪ್ರಾರ್ಥಿಸಿ ಆವಾಹನೆಮಾಡಿ ಗಂಧಪುಷ್ಪಗಳನ್ನು ಅರ್ಪಿಸಿ ವಿವಿಧ ಭಕ್ಷ್ಯ ಭೋಜ್ಯ ನೈವೇದ್ಯವಿತ್ತು ಪೂಜಿಸಬೇಕು. ಪೂರ್ಣಕುಂಭ, ತುಪ್ಪತುಂಬಿದಪಾತ್ರೆ, ಬಂಗಾರದ ಕಮಲವನ್ನು ಯಥಾ ಶಕ್ತಿ ಬ್ರಾಹ್ಮಣನಿಗೆ ದಾನಕೊಡಬೇಕು. ಹೂ, ಹಾಕಿದ ಗಂಧೋದಕದಿಂದ ಸೂರ್ಯನಿಗೆ

**ವಿಶ್ವಾಯ ವಿಶ್ವರೂಪಾಯ ವಿಶ್ವಧಾಮ್ನೇ ಸ್ವಯಂಭುವೇ ॥**
**ನಮೋನಂತ ನಮೋಧಾತ್ರೇ ಋಕ್‌ಸಾಮಯಜುಷಾಂಪತೇ ''**

ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

ಹೀಗೆ ಪ್ರತಿ ತಿಂಗಳು ವ್ರತಮಾಡಿ ವರ್ಷದ ಕೊನೆಗೆ ತುಪ್ಪದಿಂದಲೂ, ಪಾಯಸದಿಂದಲೂ, ಹೋಮಮಾಡಿ ಅಗ್ನಿಯನ್ನು ಸಂತೋಷಪಡಿಸಬೇಕು. ಭೋಜನದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ಅನಂತರ ಗೋದಾನ ಸಹಿತವಾಗಿ ರತ್ನ ಸಮೇತವಾದ ಹನ್ನೆರಡು ಕುಂಭಗಳನ್ನು ಚಿನ್ನದ ಕಮಲಗಳೊಂದಿಗೆ ದಾನವೀಯಬೇಕು. ವಸ್ತ್ರಾಲಂಕಾರಗಳಿಂದ ಭೂಷಿತವಾದ ಎಂಟು ಅಥವಾ ಏಳು ಕನಿಷ್ಠ ನಾಲ್ಕು ಸವತ್ಸ ಗೋವುಗಳನ್ನು ದಾನ ನೀಡಬೇಕು. ಅತಿದರಿದ್ರನಾಗಿದ್ದರೆ

ಒಂದಾದರೂ ಕಪಿಲಗೋವನ್ನು ಹಿಂಡುವ ಪಾತ್ರೆ ಹಾಗೂ ಕರುವಿನೊಂದಿಗೆ ದಾನಕೊಡಬೇಕು. ಆದಿಶೇಷನು ಭೂಮಂಡಲವನ್ನು ಹೊತ್ತು ನಿಂತಿರುವ ಭೂಮಿಯ ಒಂದು ಪ್ರತಿಮೆಯನ್ನು ಬಂಗಾರ ಬೆಳ್ಳಿ ಅಥವಾ ತಾಮ್ರ ಕೊನೆಗೆ ಹಿಟ್ಟಿನಿಂದಾದರೂ ಮಾಡಿಸಿ ಸೂರ್ಯನ ಮೂರ್ತಿಯೊಂದಿಗೆ ದಾನಕೊಡಬೇಕು.

ಈ ಸಂಕ್ರಾಂತಿ ವ್ರತದ ವಿಧಾನದಿಂದ ಮನುಷ್ಯನು ಆಚಂದ್ರಾರ್ಕ ಗಂಧರ್ವ ಪೂಜಿತನಾಗಿ ಸ್ವರ್ಗದಲ್ಲಿ ವಾಸಿಸುವನು. ಪುಣ್ಯಕರ್ಮವೆಲ್ಲ ಕ್ಷೀಣವಾದ ಬಳಿಕ ಮತ್ತೆ ಜನಿಸಿ ಸುಂದರ ಮಡದಿ ಮಕ್ಕಳೊಂದಿಗೆ ಒಡಗೂಡಿ ಸಪ್ತದ್ವೀಪಗಳ ಅಧಿಪತಿಯೆನಿಸುವನು. ಇದನ್ನು ಭಕ್ತಿಯಿಂದ ಓದಿ ಕೇಳಿದವರು ಇಂದ್ರ ಮಂದಿರದಲ್ಲಿ ಮಾನ್ಯತೆಯನ್ನು ಪಡೆಯುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿದುದು*



ವಿಷ್ಣು ವ್ರತ

**ಅಧ್ಯಾಯ - ೧೦೦**

**ನಂದಿಕೇಶ್ವರ ಉವಾಚ**

**ಶೃಣು ನಾರದವಕ್ಷ್ಯಾಮಿ ವಿಷ್ಣೋರ್ವ್ರತ ಮನುತ್ತಮಮ್ ।**
**ವಿಭೂತಿದ್ವಾದಶೀ ನಾಮಸರ್ವದೇವನಮಸ್ಕೃತಮ್ ॥**

**ನಂದಿಕೇಶ್ವರ** :- ನಾರದನೇ,ಅತ್ಯುತ್ತಮವಾದ ವಿಷ್ಣುವ್ರತವನ್ನು ಹೇಳುತ್ತೇನೆ ಕೇಳು. ಇದಕ್ಕೆ **ವಿಭೂತಿ ದ್ವಾದಶೀವ್ರತ** ಎಂದು ಹೆಸರು. ಎಲ್ಲ ದೇವತೆಗಳೂ ಈ ದಿವ್ಯವ್ರತಕ್ಕೆ ಹಣೆಮಣಿದಿದ್ದಾರೆ. ಕಾರ್ತಿಕ, ಚೈತ್ರ, ವೈಶಾಖ, ಮಾರ್ಗಶೀರ್ಷ, ಫಾಲ್ಗುಣ ಅಥವಾ ಆಷಾಢ ಮಾಸಗಳ ಶುಕ್ಲಪಕ್ಷ ದಶಮೀದಿನ ಈ ವಿಷ್ಣು ವ್ರತವನ್ನು ಪ್ರಾರಂಭಿಸಬೇಕು. ಅಂದು ಮಧ್ಯಾಹ್ನ ಮಿತಭೋಜನಮಾಡಿ ಸಾಯಂಕಾಲ ಸಂಧ್ಯಾವಂದನೆಯಾದ ಬಳಿಕ ಈ ವ್ರತದ ಸಂಕಲ್ಪ ಗೈಯ್ಯಬೇಕು.

**ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯಜನಾರ್ದನಂ ।**
**ದ್ವಾದಶ್ಯಾಂ ದ್ವಿಜಸಂಯುಕ್ತಃ ಕರಿಷ್ಯೇ ಭೋಜನಂವಿಭೋ ।**
**ತದವಿಘ್ನೇನ ಮೇಯಾತು ಸಫಲಂ ಸ್ಯಾಚ್ಚ ಕೇಶವ ॥**

ಏಕಾದಶಿ ದಿನ ನಿರಾಹಾರದಿಂದ ಪೂರ್ಣ ಉಪವಾಸವಿದ್ದು ಶ್ರೀ ಹರಿಯನ್ನು ಪೂಜಿಸಿ ದ್ವಾದಶಿ ಬ್ರಾಹ್ಮಣರಿಂದ ಒಡಗೂಡಿ ಭೋಜನ ಮಾಡುವೆನು. ಈ ವ್ರತವು ನಿರ್ವಿಘ್ನವಾಗಿ ನಡೆದು ಅದು ನಿನ್ನ ದಯೆಯಿಂದ ನನಗೆ ಫಲವನ್ನು ನೀಡಲಿ'' ಎಂದು ಪ್ರಾರ್ಥಿಸಬೇಕು. ಮತ್ತು ಮಲಗುವಾಗ ''ನಮೋನಾರಾಯಣಾಯ '' ಎಂದು ಧ್ಯಾನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಬಿಳಿ ಬಣ್ಣದ ಗಂಧ ಪುಷ್ಪಗಳಿಂದ ಶ್ರೀ ಹರಿಯನ್ನು ಪೂಜಿಸಬೇಕು.

| | | |
|---|---|---|
| ವಿಭೂತಯೇನಮಃ | ಎರಡೂ ಕಾಲುಗಳನ್ನು | ಪೂಜಿಸಬೇಕು. |
| ಅಶೋಕಾಯ ನಮಃ | ಮೊಣಕಾಲು | " |
| ಶಿವಾಯನಮಃ | ತೊಡೆ | " |
| ವಿಶ್ವಮೂರ್ತಯೇ ನಮಃ | ಸೊಂಟ | " |
| ಕಂದರ್ಪಾಯ ನಮಃ | ಮೇಢ್ರಾವಯವ | " |
| ಆದಿತ್ಯಾಯ ನಮಃ | ಕೈ | " |
| ದಾಮೋದರಾಯ ನಮಃ | ಹೊಟ್ಟೆ | " |
| ವಾಸುದೇವಾಯ ನಮಃ | ಸ್ವರ | " |
| ಮಾಧವಾಯ ನಮಃ | ಎದೆ | " |
| ಉತ್ಕಂಠಿನೇನಮಃ | ಕೊರಳು | " |
| ಶ್ರೀಧರಾಯ ನಮಃ | ಬೆನ್ನು | " |
| ಕೇಶವಾಯ ನಮಃ | ಕೂದಲು | " |
| ಶಾಂರ್ಙ್ಗಧರಾಯ ನಮಃ | ಬೆನ್ನು | " |
| ವರದಾಯನಮಃ | ಕಿವಿ | " |
| ಶಂಖಚಕ್ರಗದಾಧರಾಯ ನಮಃ | ಕೈ | " |

ಪರಬ್ರಹ್ಮ ಸ್ವರೂಪಿಣೇ
ಸರ್ವಾತ್ಮನೇ ತೇ ನಮಃ ಎಂದು ತಲೆಯನ್ನೂ ಹೂ ಏರಿಸಿ ಪೂಜಿಸಬೇಕು.

ಬಂಗಾರದ ನೈದಿಲೆ (ರಾತ್ರಿಕಮಲ) ಮತ್ತು ಮಿಾನಗಳನ್ನು ಜಲಕುಂಭದಲ್ಲಿ ಇಟ್ಟು ಮುಂಭಾಗದಲ್ಲಿ ಇರಿಸಬೇಕು. ಅದರ ಬಳಿಯಲ್ಲಿ ಎಳ್ಳು ಬೆಲ್ಲ ತುಂಬಿದ ಪಾತ್ರೆಯಲ್ಲಿ ಇರಿಸಿ ಬಿಳಿಯಬಟ್ಟೆಯನ್ನು ಧರಿಸಬೇಕು. ರಾತ್ರಿಯಲ್ಲಿ ಪುರಾಣ ಮಹಾಭಾರತಾದಿ ಕತೆಗಳನ್ನು ಕೇಳುತ್ತ ಜಾಗರಣಗೈಯಬೇಕು. ಮರುದಿನ ಪ್ರಾತಃಕಾಲದಲ್ಲಿ ಚಿನ್ನದ ಮೀನಮೂರ್ತಿ ಹಾಗೂ ನೈದಿಲೆಗಳನ್ನು ಜಲಕುಂಭ ಸಹಿತವಾಗಿ ಕುಟುಂಬಿಯಾದ ಬ್ರಾಹ್ಮಣನಿಗೆ ದಾನ ಕೊಡಬೇಕು.

**ಯಥಾ ನ ಮುಚ್ಯಸೇದೇವ ಸದಾ ಸರ್ವವಿಭೂತಿಭಿಃ ।**
**ತಥಾಮಾಮುದ್ಧರಾಶೇಷದುಃಖಸಂಸಾರಕರ್ದಮಾತ್ ॥**

''ಸ್ವಾಮಿ, ಸಕಲೈಶ್ವರ್ಯ ಸಂಪನ್ನನಾದ ನಿನಗೆ ಆ ಸಂಪದಗಳಿಂದ ವಿಯೋಗವೇ ಇಲ್ಲ. ಸಂಸಾರದ ದುಃಖದ ಕೆಸರಿನಲ್ಲಿ ಬಿದ್ದು ಒದ್ದಾಡುತ್ತಿರುವ ನನ್ನನ್ನು ನೀನು ಉದ್ಧಾರಮಾಡು'' ಎಂದು ಪ್ರಾರ್ಥಿಸಬೇಕು. ಹೀಗೆ ಶ್ರೀಹರಿಯ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶು, ರಾಮ, ಕೃಷ್ಣ, ಬುದ್ಧ, ಕಲ್ಕಿ ಮುಂತಾದ ಹತ್ತೂ ಅವತಾರಗಳ ಮತ್ತು ವೇದವ್ಯಾಸ ದತ್ತಾತ್ರೆಯ ಮೊದಲಾದ ಹನ್ನೆರಡು ರೂಪಗಳ ಮೂರ್ತಿಗಳನ್ನು ಮಾಡಿಸಿ ಪ್ರತಿ ತಿಂಗಳಿಗೊಂದಂತೆ ನೈದಿಲೆಯೊಡನೆ ವರ್ಷಪೂರ್ತಿಯಾಗುವವರೆಗೆ ದಾನಕೊಡಬೇಕು. ಈ ವ್ರತಾಚರಣೆಯ ಕಾಲದಲ್ಲಿ ವೇದ ವಿದ್ವೇಷಿಗಳಾದ ಪಾಖಂಡಿಗಳ ಸಂಪರ್ಕವನ್ನು

ಮಾತ್ರ ಸರ್ವಥಾ ಮಾಡಕೂಡದು. ಹೀಗೆ ಹನ್ನೆರಡು ದ್ವಾದಶೀವ್ರತಗಳನ್ನುಮಾಡಿ ಕೊನೆಗೆ ವರ್ಷಾಂತ್ಯದಲ್ಲಿ ಉಪ್ಪಿನ ಬೆಟ್ಟದೊಡನೆ ಗುರುವಿಗೆ ಹಾಸಿಗೆಯನ್ನು ದಾನ ನೀಡಬೇಕು. ಗೋದಾನವನ್ನು, ಯೋಗ್ಯತೆ ಇದ್ದರೆ ಗ್ರಾಮದಾನ, ಭೂದಾನ, ಗೃಹದಾನಗಳನ್ನೂ ನೆರವೇರಿಸಬೇಕು. ಉಳಿದ ಬ್ರಾಹ್ಮಣರಿಗೆ ಅನ್ನದಾನ ಶಕ್ತ್ಯಾನುಸಾರ ದಕ್ಷಿಣಾ ಸುವರ್ಣರತ್ನಾದಿದಾನಗಳನ್ನುಮಾಡಿ ಸಂತೋಷ ಪಡಿಸಬೇಕು. ಶ್ರೀಹರಿಯಲ್ಲಿ ಅತ್ಯಂತ ಭಕ್ತಿಯಿದ್ದರೂ ದರಿದ್ರನಾಗಿದ್ದರೆ ಕೇವಲ ಹೂಗಳನ್ನು ಏರಿಸುತ್ತ ಬರೀ ಪುಷ್ಪಾರ್ಚನವಿಧಿಯಿಂದಲೇ ಎರಡುವರ್ಷ ಈ ವ್ರತವನ್ನು ನಡೆಸಬೇಕು. ಈ ವಿಧಾನದಿಂದ ವಿಭೂತಿದ್ವಾದಶೀವ್ರತವನ್ನು ಆಚರಿಸುವವರ ಪಾಪ ಪರಿಹಾರವಾಗಿ ನೂರು ತಲೆಮಾರಿನ ಪಿತೃಗಳೆಲ್ಲರೂ ಉದ್ಧಾರ ಹೊಂದುವರು, ಚಿರಕಾಲ ಸ್ವರ್ಗದಲ್ಲಿ ವಾಸಿಸುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರನೆಯ ಅಧ್ಯಾಯ ಮುಗಿದುದು*



## ವಿಭೂತಿದ್ವಾದಶೀ ವ್ರತ

**ಅಧ್ಯಾಯ - ೧೦೧**

### ನಂದಿಕೇಶ್ವರ ಉವಾಚ

**ಪುರಾರಥಂತರೇಕಲ್ಪೇ ರಾಜಾಸೀತ್ಪುಷ್ಪವಾಹನಃ**
**ನಾಮ್ನಾಲೋಕೇಷು ವಿಖ್ಯಾತ ಸ್ತೇಜಸಾಸೂರ್ಯಸನ್ನಿಭಃ ॥**

ಹಿಂದೆ ರಥಂತರಕಲ್ಪದಲ್ಲಿ ಪುಷ್ಪವಾಹನ ಎಂಬ ಅರಸನಿದ್ದ. ಅವನ ಕಾಂತಿ ಸೂರ್ಯಸಮ. ಅವನ ಕೀರ್ತಿ ಲೋಕವಿಖ್ಯಾತ. ಚತುರ್ಮುಖ ಬ್ರಹ್ಮದೇವ ಅವನ ತಪಸ್ಸಿಗೆ ಒಲಿದು ಬಂಗಾರದ ಕಮಲವೊಂದನ್ನು ಆ ರಾಜನಿಗೆ ದಯಪಾಲಿಸಿದ್ದ. ಬ್ರಹ್ಮದತ್ತವಾದ ಆ ಕಮಲದಮೇಲೆ ಕುಳಿತು ಮನಬಂದಲ್ಲಿ ಸಂಚಾರಮಾಡ ಬಹುದಾಗಿತ್ತು. ದೇವಲೋಕ ನರಲೋಕ ಪಾತಾಳಲೋಕಗಳಲ್ಲಿ ತನ್ನ ಇಷ್ಟಬಂದ ದೇಶ, ದ್ವೀಪ, ಪುರಾರಾಮಗಳಿಗೆ ಆ ಅರಸನು ಹೋಗಿ ಬರುತ್ತಿದ್ದ. ಬ್ರಹ್ಮದೇವರು ಕೊಟ್ಟ ಆ ಪುಷ್ಕರ ಅರ್ಥಾತ್ ಕಮಲದಿಂದ ಪುಷ್ಪವಾಹನ ಮಹಾರಾಜನು ತ್ರಿಲೋಕ ಸಂಚಾರಮಾಡಿ ಮೆರೆದಿದ್ದರಿಂದ ಅವನು ಆಳಿದ ಆ ಏಳನೆಯ ದ್ವೀಪವು ಪುಷ್ಕರದ್ವೀಪ ಎಂದು ಹೆಸರಾಯಿತು. ಬ್ರಹ್ಮದೇವರು ಕೊಟ್ಟ ಕಮಲಪುಷ್ಪವು ಅವನ ವಾಹನವಾಗಿ ಬೇಕಾದ ದೇಶಾಂತರ, ಲೋಕಾಂತರಗಳಿಗೆಲ್ಲ ಕರೆದೊಯ್ಯು-ತ್ತಿದ್ದುದರಿಂದ ಅವನಿಗೆ ಪುಷ್ಪವಾಹನ ಎಂಬ ಹೆಸರು ಬಂದಿತ್ತು. ಅವನ ಮಡದಿಯ ಹೆಸರು ಲಾವಣ್ಯವತಿ ಹೆಸರಿಗೆ ತಕ್ಕಂತೆ ಅವಳು ಸೌಂದರ್ಯದ ಬುಗ್ಗೆ. ಅಂಗನಾಮಣಿ ಆಗಿದ್ದಳು. ಪಾರ್ವತಿಯಂತೆ ಪತಿಪ್ರಿಯತಮೆಯಾದ ಅವಳಿಗೆ ಧರ್ಮಾತ್ಮನಾದ ಪುಷ್ಪವಾಹನನಿಂದ ಹತ್ತು ಸಾವಿರಜನ ಶೂರಧೀರರಾದ ಮಕ್ಕಳು ಜನಿಸಿದರು. ಹೀಗೆ ಬಯಸಿದ ಭಾಗ್ಯ, ಬೇಡಿದ ಸುಖ, ಮೆಚ್ಚಿನ ಮಡದಿ,

ವಿನಯಶೀಲರಾದ ಮಕ್ಕಳು, ನಿರಂಕುಶ ಅಧಿಕಾರ, ಧರ್ಮಬುದ್ಧಿ ಮುಂತಾದವೆಲ್ಲವೂ ಅವನಿಗೆ ಅನಾಯಾಸವಾಗಿ ಮೇಳವಿಸಿ ಬಂದಿದ್ದರಿಂದ ಅವನ ಹೃದಯದಲ್ಲಿ ಹಿಗ್ಗು ಗರಿಗೆದರಿತ್ತು. ಹೆಮ್ಮೆ ಹೊಮ್ಮಿತ್ತು. ಒಂದು ದಿನ ಅವನ ಆಸ್ಥಾನಕ್ಕೆ ಮುನಿಶ್ರೇಷ್ಠ ಪ್ರಾಚೇತಸರು ಆಗಮಿಸಿದರು. ಮಹಾರಾಜನು ಆ ಮುನಿಪುಂಗವರಿಗೆ ಸ್ವಾಗತ - ಸತ್ಕಾರಮಾಡಿ ಆದರಾತಿಥ್ಯನೀಡಿ ಕೈಮುಗಿದು ಇಂತು ಬಿನ್ನವಿಸಿದನು.

**ರಾಜ** :- ಮುನಿಪುಂಗವರೇ, ದೇವಮಾನವರೆಲ್ಲರೂ ಹೊಗಳುವಂಥ ಐಶ್ವರ್ಯ ನನಗಿದೆ. ಸೌಂದರ್ಯದಲ್ಲಿ ಅಮರಾವತಿಯ ಅಂಗನೆಯರೆಲ್ಲರಿಗಿಂತ ಮಿಗಿಲಾದ ಮಡದಿಯು ನನಗಿದ್ದಾಳೆ. ನಾನು ಮಾಡಿದ ಅಲ್ಪ ತಪಸ್ಸಿಗೆ ಒಲಿದು ಸುಪ್ರಸನ್ನನಾಗಿ ಬ್ರಹ್ಮದೇವನು ನನಗೆ ಒಂದು ಕಮಲಗೃಹವನ್ನು ಕರುಣಿಸಿದ್ದಾನೆ. ಈ ಕಮಲ ಭವನದಲ್ಲಿ ಮಂತ್ರಿ - ಪರಿವಾರ, ಚತುರಂಗಸೈನ್ಯ-ಸಮೇತರಾಗಿ ನೂರಾರು ರಾಜರು ಪ್ರವೇಶಮಾಡಿದರೂ ಗೊತ್ತಾಗುವದಿಲ್ಲ. ಅಷ್ಟು ವಿಶಾಲವಾಗಿದೆ ಆ ಕಮಲಭವನ. ಇಂಥ ಅಪಾರ ಐಶ್ವರ್ಯ, ಅಪರೂಪ ಹೆಂಡತಿ, ವಿಶ್ವವಿಶಾಲವಾದ ಕಮಲಗೃಹ ಇದೆಲ್ಲವೂ ನನಗೆ ಬರಲು ಕಾರಣವೇನು ? ಜನ್ಮಾಂತರದಲ್ಲಿ ನಾನು ಯಾವ ಸುಕೃತ ವಿಶೇಷವನ್ನು ಮಾಡಿದ್ದೆ ? ನನ್ನ ಮಡದಿ ಮಕ್ಕಳು ಹಿಂದಿನ ಜನ್ಮದಲ್ಲಿ ಯಾವ ಮಹತ್ತರವಾದ ಪುಣ್ಯಮಾಡಿದ್ದರು ? ಇಷ್ಟೆಲ್ಲ ಶುಭ, ಸತ್ಫಲ ದೊರಕಲು ಮುಖ್ಯ ಕಾರಣವೇನು ? ನನಗೆ ತಿಳಿಸಬೇಕು.''

ಆಗ ಪ್ರಾಚೇತಸ ಮುನಿಗಳು ಮಹಾರಾಜನ ಮುಖವನ್ನು ಮತ್ತೊಮ್ಮೆ ನಿಟ್ಟಿಸಿ ನೋಡಿ ರೋಮಾಂಚಕಾರಿಯಾದ ಅವನ ಜನ್ಮಾಂತರದ ವೃತ್ತಾಂತವನ್ನು ಅರಿತು ಹೇಳತೊಡಗಿದರು.

**ಪ್ರಾಚೇತಸ** :- ರಾಜನೆ, ನೀನು ಕಳೆದ ಜನ್ಮದಲ್ಲಿ ಘೋರವಾದ ಬೇಡರ ಕುಲದಲ್ಲಿ ಹುಟ್ಟಿದ್ದೆ. ಅನುದಿನವೂ ಪಾಪಕಾರ್ಯಗಳನ್ನು ಮಾಡುತ್ತಿದ್ದೆ. ನಿನ್ನ ದೇಹವು ವಿದ್ರೂಪ. ಅವಯವಗಳ ಸಂಧಿಗಳು ಒರಟೊರಟು. ಉಟ್ಟ ಬಟ್ಟೆ ಚಿಂದಿ ಚೂರು. ನೀನು ನೆಲೆಸಿದ ತಾಣದ ಸುತ್ತಲೂ ದುರ್ಗಂಧವು ಇಡಿಗಿತ್ತು. ಅಕ್ಕಪಕ್ಕದಲ್ಲಿ ಹಾವು, ಚೇಳುಗಳು ಹರಿದಾಡುತ್ತಿದ್ದವು. ತಾಯಿ ತಂದೆಗಳು ಎಂದೋ ತೀರಿಕೊಂಡಿದ್ದರು. ಬೇರೆ ಬಂಧುಗಳಾರೂ ಇಲ್ಲ. ಉಳಿದ ಬಂಧು - ಬಳಗ ಇಷ್ಟಮಿತ್ರ ಯಾರೂ ಇರಲಿಲ್ಲ. ಈಗ ನಿನಗೆ ಅತ್ಯಂತ ಪ್ರೀತ್ಯಾಸ್ಪದಗಳಾದ ಈ ಹೆಂಡತಿಯೂ ಆಗ ವಿರೋಧಿಯಾಗಿದ್ದಳು. ಆಗ ಒಂದು ಸಾರಿ ದೇಶದಲ್ಲೆಲ್ಲ ಭಯಂಕರ ಕ್ಷಾಮ. ಆ ಬರಗಾಲದಲ್ಲಿ ಜನರಿಗೆ ತಿನ್ನಲು ಅನ್ನ, ಕುಡಿಯಲು ನೀರು,, ಯಾವುದೂ ದೊರಕುತ್ತಿಲ್ಲ. ಕಿರಾತನಾದ ನೀನಾದರೂ ಹಸಿವೆಯಿಂದ ಕಂಗಾಲಾಗಿ ಆಹಾರವನ್ನು ಹುಡುಕುತ್ತ ನಡೆದೆ.

ಕಾಳು-ಕಡ್ಡಿ, ಹಣ್ಣು-ಹಂಪಲು, ಗೆಡ್ಡೆ-ಗೆಣಸು, ಮೀನು, ಮಾಂಸ ಮುಂತಾದುದಾವದೂ ನಿನಗೆ ದೊರಕಲಿಲ್ಲ. ಹೀಗೆ ಆಹಾರ ಅರಸುತ್ತ ನೀನು ಕಾಡುಮೇಡುಗಳಲ್ಲಿ ಅಲೆಯುತ್ತಿರುವಾಗ ನಿನ್ನ ಕಣ್ಣಿಗೆ ಒಂದು ಸರೋವರವು ಬಿತ್ತು. ಆ

ಸರೋವರದ ತುಂಬ ಬಿರಿದ ತಾವರೆಗಳು. ತಡಿಯಲ್ಲಿ ಹಸುರು-ಕುಸುರು. ನೀರಿನಂಚಿನಗುಂಟ ಕಸರು-ಕೆಸರು. ಆ ಕೊಳದ ತಳದಲ್ಲಿ ಕಳಕಳಿಸುವ ತುಂಬು ತಾವರೆಯ ಹೂಗಳನ್ನು ಬೊಗಸೆ ತುಂಬ ಕಿತ್ತುಕೊಂಡು ವೈದಿಶ ಎಂಬ ನಗರಕ್ಕೆ ನೀನು ತೆರಳಿದೆ. ಕೈಯಲ್ಲಿಯ ಕಮಲಪುಷ್ಪಗಳನ್ನು ಮಾರಿ ಹಣಗಳಿಸಬೇಕೆಂದು ಇಡೀ ಊರು ತುಂಬ ನೀನು ಅಲೆದಾಡಿದೆ. ಆದರೆ ನಿನ್ನ ಕೈಯಲ್ಲಿಯ ಆ ಕಮಲ-ಕುಸುಮಗಳನ್ನು ಕೊಳ್ಳುವವರು ಯಾರೂ ನಿನ್ನ ಕಣ್ಣಿಗೆ ಬೀಳಲಿಲ್ಲ. ನಗರದ ಓಣಿ ಕೇರಿಗಳಲ್ಲೆಲ್ಲ ಅಂಡಲೆದು ನೀನು ದಣಿದೆ. ಬಾಯಾರಿ ಬಳಲಿ ಬೆಂಡಾದೆ. ಹಸಿವೆಯಿಂದ ಕಸಿವಿಸಿಗೊಂಡೆ.

ನಿನ್ನೊಡನೆ ನಿನ್ನ ಪತ್ನಿಯಾದರೂ ಹಾದಿಬೀದಿಗಳಲ್ಲಿ ಅಲೆದಾಡಿ ಶ್ರಾಂತಳಾಗಿದ್ದಳು. ಕೊನೆಗೆ ನೀವಿಬ್ಬರೂ ಬೇಸತ್ತು ಯಾವುದೋ ಒಂದು ಮನೆಯ ಅಂಗಳದಲ್ಲಿ ಕುಳಿತುಕೊಂಡಿದ್ದಿರಿ. ರಾತ್ರಿಯ ಕಾಲ. ನಿಶ್ಯಬ್ಧ, ನೀರವತೆ. ಎಲ್ಲಿಂದಲೋ ಒಂದು ಮಂಗಳಧ್ವನಿ ದೂರದಿಂದ ತೂರಿ ಬಂದಿತು, ನೀವು ಆ ಧ್ವನಿಯನ್ನು ಹುಡುಕಿಕೊಂಡು ಅದು ಬರುವ ನಿಟ್ಟಿಗೇ ನಡೆದಿರಿ, ಅಲ್ಲಿ ಒಂದು ಮಂಗಳಮಂಟಪ. ಅದರ ಮಧ್ಯದಲ್ಲಿ ವಿಷ್ಣುವಿನ ದಿವ್ಯ ಪ್ರತಿಮೆ. ಅನಂಗವತಿ ಎಂಬ ವೇಶ್ಯೆಯ **ವಿಭೂತಿ ದ್ವಾದಶೀ ವ್ರತಾ**ಚರಣೆಯ ಸಂಭ್ರಮ. ಅಂದು ಮಾಘ ಶುದ್ಧ ದ್ವಾದಶಿ. ಶ್ರೀ ವಿಷ್ಣುವಿನ ಮಂಗಳಮೂರ್ತಿಯನ್ನು ಅಲಂಕರಿಸಿದ್ದಾಳೆ ಆ ವೇಶ್ಯೆ. ಉಪ್ಪಿನಬೆಟ್ಟವನ್ನೂ, ಬಂಗಾರದಕಲ್ಪವೃಕ್ಷವನ್ನೂ, ದಿಂಬು-ಮೇಲ್ಹಾಸುಗಳಿಂದ ಕೂಡಿದ ಹಾಸಿಗೆಯನ್ನೂ ಗುರುವಿಗೆ ಆ ವೇಶ್ಯಾಂಗನೆಯು ದಾನನೀಡುತ್ತಿದ್ದಳು. ಆಗ ನಿಮ್ಮ ಮನಸ್ಸಿನಲ್ಲಿ ಒಂದು ಹೊಸ ವಿಚಾರ. '' ಈ ಊರೆಲ್ಲ ಅಲೆದರೂ ನಮ್ಮ ಈ ಕಮಲಕುಸುಮಗಳನ್ನು ಕೊಳ್ಳುವವರು ಕಾಣಲಿಲ್ಲ. ಅವರಿವರಿಗೆ ಕೊಡುವದಕ್ಕಿಂತ ಇಲ್ಲಿ ಇರುವ ಶ್ರೀ ಮಹಾವಿಷ್ಣುವಿಗೆ ಅರ್ಪಣೆ ಮಾಡಿದರೆ ಹೂಗಳು ಸಾರ್ಥಕ. ನಮ್ಮ ಬದುಕೂ ಸಫಲ.''

ಹೀಗೆ ಸದ್ಬುದ್ಧಿ ಹುಟ್ಟಿದ ನೀವಿಬ್ಬರೂ ದಂಪತಿಗಳೂ ನಿಮ್ಮ ಬೊಗಸೆಯಲ್ಲಿರುವ ತುಂಬುತಾವರೆ ಹೂಗಳನ್ನೆಲ್ಲ ಮಂಟಪದ ಮಧ್ಯದಲ್ಲಿ ಮಂಡಿಸಿದ ಮಹಾವಿಷ್ಣುವಿನ ಪ್ರತಿಮೆಗೆ ಅರ್ಪಿಸಿದಿರಿ. ಆ ಉಪ್ಪಿನಬೆಟ್ಟದ ಮೇಲೆಯೂ ಒಂದು ಸುಂದರವಾದ ಹೊಂದಾವರೆಯನ್ನು ಏರಿಸಿದಿರಿ. ಹಾಸಿಗೆ ಮೇಲೆ ಹೂವನ್ನು ಇಟ್ಟಿರಿ. ಅನಂಗವತಿ ಎಂಬ ಆ ಅಂಗನಾಮಣಿಯು ನೀವು ಸಕಾಲದಲ್ಲಿ ತಂದು ಅರ್ಪಿಸಿದ ಹಿಡಿಹಿಡಿ ಹೊಂದಾವರೆ ಹೂಗಳನ್ನು ಕಂಡು ಸಂತಸಗೊಂಡು ನಿಮಗೆ ಮುನ್ನೂರು ಬಂಗಾರದ ನಾಣ್ಯ, ಮುನ್ನೂರು ಬೆಳ್ಳಿಯ ನಾಣ್ಯ ಕೊಡಲು ಸೇವಕನಿಗೆ ಆಜ್ಞೆ ಇತ್ತಳು. ಆದರೆ ನಿಮ್ಮಿಬ್ಬರಲ್ಲಿ ಆಗ ನಿಜವಾದ ಭಕ್ತಿಭಾವದ ಉದಯವಾಗಿದ್ದಿತು. ಮನದಆಳದಲ್ಲಿ ವೈರಾಗ್ಯದ ಭಾವಉದಿಸಿ ನಿಂತಿತ್ತು. ಭಗವಂತನಿಗೆ ನೀವಾಗಿ ತಂದು ಅರ್ಪಿಸಿದ ಹೂಗಳಿಗೆ ಬದಲಾಗಿ ಹಣ ತೆಗೆದುಕೊಳ್ಳಲು ನಿಮಗೆ ಮನಸ್ಸಾಗಲಿಲ್ಲ. ಆ ಅನಂಗವತಿಯ ತೊತ್ತುಗಳು ಬೆಳ್ಳಿ-ಬಂಗಾರದ ನಾಣ್ಯಗಳನ್ನು ತಂದುಕೊಟ್ಟರೂ ನೀವು ತೆಗೆದುಕೊಳ್ಳಲಿಲ್ಲ. ಇದರಿಂದ ಆ ಬೆಲೆವೆಣ್ಣಿಗೆ ನಿಮ್ಮ ಬಗೆಗೆ ಇನ್ನೂ ಹೆಚ್ಚಿನ ಆತ್ಮೀಯ ಭಾವನೆಯು ಹುಟ್ಟಿತು.

ಆಗ ಅವಳು ನಿಮ್ಮ ಎದುರು ಎಲೆಬಡಿಸಿ ಬಗೆಬಗೆಯ ಭಕ್ಷ್ಯ-ಭೋಜ್ಯ, ಪಕ್ವಾನ್ನ-ಮೃಷ್ಟಾನ್ನಗಳನ್ನೆಲ್ಲ ತಂದು ಬಡಿಸಿ '' ದಯವಿಟ್ಟು ಸ್ವೀಕರಿಸಿರಿ '' ಎಂದು ಬಿನ್ನವಿಸಿದಳು. ಆದರೆ ನೀವು ಅದಕ್ಕೂ ಒಪ್ಪದೆ ಮಂಗಳಾಂಗಿ, ನೀನು ಇಂದು ಉಪವಾಸವಿರುವೆ. ನಿನ್ನನ್ನು ಬಿಟ್ಟು ನಾವು ಹೇಗೆ ಊಟ ಮಾಡೋಣ ? ನಿನ್ನ ಸಹವಾಸದಿಂದ ನಾವೂ ಇಂದು ಉಪವಾಸ ಮಾಡುತ್ತೇವೆ. ಮುಂದೆ ಪ್ರಸಂಗ ಬಂದಾಗ ಭೋಜನವನ್ನೂ ಮಾಡುವೆವು. ಆದರೆ ಈಗ ಮಾತ್ರ ನಮಗೆ ಉಪವಾಸವೇ ಹಿತಕರ ಎಂದು ತೋರುತ್ತಿದೆ. ನಾವಿಬ್ಬರೂ ಹುಟ್ಟಿದಾಗಿನಿಂದ ದುಷ್ಟರೇ. ಮಹಾಪಾಪಿಷ್ಠರೇ. ನಾವು ಮಾಡುವದು ಯಾವಾಗಲೂ ಕೆಟ್ಟ ಕೆಲಸವೇ. ಇಂಥ ನಾವು ನಿನ್ನ ಸಹವಾಸದಿಂದ ಇಂದು ಉಪವಾಸಗೈದು ರಾತ್ರಿ ಜಾಗರಣೆಮಾಡಿ ನಮ್ಮ ಪಾಪವನ್ನು ಕಳೆದುಕೊಳ್ಳುತ್ತೇವೆ'' ಎಂದು ಹೇಳಿ ಅದರಂತೆ ಉಪವಾಸವಿದ್ದು ರಾತ್ರಿ ಜಾಗರ ಮಾಡಿದಿರಿ. ಹೀಗೆ ಎಲ್ಲರೂ ಅವಳ ಸಹವಾಸದಿಂದ ಉಪವಾಸಗೈದು ಅನಂತರ ಜಾಗರಣೆಮಾಡಿದಿರಿ. ಮರುದಿನ ಪ್ರಾತಃಕಾಲದಲ್ಲಿ ಅನಂಗವತಿಯು ದಿವ್ಯವಾದ ಸಪರಿಕರ ಶಯ್ಯಾದಾನ ಮಾಡಿ ಉಪ್ಪಿನ ಬೆಟ್ಟವನ್ನೂ ದಾನ ನೀಡಿದಳು. ಗುರುಗಳಿಗೆ ಗ್ರಾಮಗಳನ್ನು ಜಹಗೀರಿ ಹಾಕಿಕೊಟ್ಟಳು. ವಸ್ತ್ರಾಲಂಕಾರಗಳಿಂದ ಅಲಂಕರಿಸಿ ಹನ್ನೆರಡು ಹಸುಗಳನ್ನು ದಾನಮಾಡಿದಳು. ಅನಂತರ ಭಕ್ತಿಯಿಂದ ಬ್ರಾಹ್ಮಣಭೋಜನ ಮಾಡಿಸಿ ಬಳಿಕ ಆಪ್ತರೂ-ಮಿತ್ರರೂ, ಊನರೂ- ದೀನರೂ, ಅಂಗವಿಕಲರೂ-ಕುರುಡರೂ ಮೊದಲಾದವರಿಗೆಲ್ಲ ಯಥೇಷ್ಟಭೋಜನ ಮಾಡಿಸಿದಳು. ಇದಾದ ಬಳಿಕ ಆ ಬೇಡರ ದಂಪತಿಗಳಾದ ನಿಮ್ಮನ್ನು ಅತ್ಯಾದರಗಳಿಂದ ಪೂಜಿಸಿ ನಿಮ್ಮ ಸ್ಥಾನಕ್ಕೆ ಕಳುಹಿಸಿಕೊಟ್ಟಳು.

ಅನಂಗವತಿಯ ಪೂಜೆಯನ್ನು ಸ್ವೀಕರಿಸಿದ ಆ ಬೇಡನೇ ನೀನು. ಈಗ ನಿನ್ನ ಹೆಂಡತಿಯಾಗಿರುವವಳು ಆಗ ನಿನ್ನ ಮಡದಿಯಾಗಿದ್ದಳು. ಕಮಲಪುಷ್ಪಗಳಿಂದ ಶ್ರೀಹರಿಗೆ ಭಕ್ತಿಯಿಂದ ಏರಿಸಿ ಪೂಜೆಮಾಡಿದ ಪ್ರಭಾವದಿಂದ ನೀನು ಈಗ ಚಕ್ರವರ್ತಿ ಆಗಿರುವೆ. ನಿನ್ನ ಆ ಸತ್ವಗುಣದ ಮಹಿಮೆಗಳಿಂದ ನಿನ್ನ ಕಷ್ಟಗಳೆಲ್ಲ ಅಳಿದಿವೆ. ಪಾಪಗಳೆಲ್ಲ ಕಳೆದಿವೆ. ಇದರಿಂದಾಗಿ ನಿನಗೆ ಅತ್ಯಲ್ಪ ತಪಸ್ಸಿನಿಂದಲೇ ಕಮಲಗೃಹವೂ ದೊರಕಿದೆ. ಆದರಿಂದ ನೀನು ಕಾಮಚಾರಿಯಾಗಿ ಈ ಕಮಲಗೃಹದ ಪ್ರಭಾವದಿಂದ ಬೇಕಾದಲ್ಲಿ ಸಂಚರಿಸಬಹುದು. ಬ್ರಹ್ಮದೇವರೂ, ಶ್ರೀಹರಿಯೂ ನಿನ್ನ ಮೇಲೆ ಸುಪ್ರಸನ್ನರಾಗಿದ್ದಾರೆ. ಆ ಅನಂಗವತಿ ಎಂಬ ವೇಶ್ಯಾ ಸ್ತ್ರೀಯು ವಿಭೂತಿ ದ್ವಾದಶೀವ್ರತದ ಆಚರಣೆಯ ಪ್ರಭಾವದಿಂದ ಕಾಮನ ಮಡದಿಯಾಗಿದ್ದಾಳೆ. ರತಿದೇವಿಯ ಸವತಿ ಎನಿಸಿಕೊಂಡ ಅವಳಿಗೆ ಪ್ರೀತಿ ಎಂಬ ಹೆಸರು ಬಂದಿತು. ಎಲ್ಲ ಜನರಿಗೂ ಸಂತಸವನ್ನು ಬೀರುವ ಅವಳನ್ನು ದೇವತೆಗಳೆಲ್ಲರೂ ಆದರಿಸುತ್ತಲಿರುವರು. ರಾಜಶ್ರೇಷ್ಠನೇ ! ಆದುದರಿಂದ ನೀನು ಆ ನಿನ್ನ ಕಮಲ ಗೃಹವನ್ನು ಇಲ್ಲಿಯೇ ನೆಲದ ಮೇಲೆ ಇಟ್ಟು ಬಿಟ್ಟು ಗಂಗಾತಟಾಕದಲ್ಲಿ ವಿಭೂತಿ ದ್ವಾದಶೀವ್ರತವನ್ನು ಆಚರಿಸು. ಇದರಿಂದ ನಿನಗಾದರೂ ಮೋಕ್ಷವು ದೊರಕುವದು.

**ನಂದಿಕೇಶ್ವರ :-** ಪ್ರಚೇತಸ ಮುನಿಯು ಪುಷ್ಪವಾಹನ ಮಹಾರಾಜನಿಗೆ ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಅದರಂತೆ ಆ ಮಹಾರಾಜನಾದರೂ ಪ್ರಾಚೇತಸ ಮುನಿಯು ಹೇಳಿದಕ್ರಮದಲ್ಲಿ ವಿಭೂತಿದ್ವಾದಶೀವ್ರತವನ್ನು ಆಚರಣಮಾಡಿ ಸದ್ಗತಿಯನ್ನು ಹೊಂದಿದನು. ಈ ವ್ರತವನ್ನು ಮಾಡಬೇಕೆನ್ನುವವರು ಹನ್ನೆರಡು ದ್ವಾದಶೀತಿಥಿಗಳಲ್ಲಿ ಕಮಲನಾಭನಾದ ಶ್ರೀ ಹರಿಗೆ ಕಮಲಪುಷ್ಪಗಳನ್ನು ಅರ್ಚಿಸಿ ಅರ್ಚನೆ ಮಾಡಬೇಕು. ಬ್ರಾಹ್ಮಣರಿಗೆ ಯಥಾಶಕ್ತಿ ದಾನ-ದಕ್ಷಿಣೆಗಳನ್ನು ನೀಡಬೇಕು. ಇದರಿಂದ ಶ್ರೀ ಕೇಶವನು ಸುಪ್ರೀತನಾಗುವನು. ಪಾಪರಾಶಿಗಳನ್ನೆಲ್ಲ ಕಳೆಯುವ ಈ ವಿಭೂತಿದ್ವಾದಶೀವ್ರತದ ಮಹಿಮೆಯನ್ನು ಭಕ್ತಿಯಿಂದ ಪಠಿಸಿದವರು, ಶ್ರವಣ ಮಾಡಿದವರು, ಇನ್ನೊಬ್ಬರನ್ನು ಇದಕ್ಕಾಗಿ ಪ್ರೇರೇಪಿಸಿದವರೂ ಅನಂತಕಾಲದವರೆಗೆ ದೇವಲೋಕದಲ್ಲಿ ಸುಖದಿಂದ ವಾಸಮಾಡುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಒಂದನೆಯ ಅಧ್ಯಾಯ ಮುಗಿದುದು*



## ಅರವತ್ತು ವ್ರತಗಳ ವಿಧಾನ — ಅಧ್ಯಾಯ - ೧೦೨

**ನಂದೀಕೇಶ್ವರ ಉವಾಚ**

**ಅಥಾಥಃ ಸಂಪ್ರವಕ್ಷ್ಯಾಮಿ ವ್ರತಷಷ್ಠಿಮನುತ್ತಮಾಮ್**
**ರುದ್ರೇಣಾಭಿಹಿತಾಂ ದಿವ್ಯಾಂ ಮಹಾಪಾತಕನಾಶಿನೀಮ್ ॥**

**ನಂದಿಕೇಶ್ವರ :-** ಇನ್ನು ಮುಂದೆ ಸರ್ವಶ್ರೇಷ್ಠವಾದ ಅರವತ್ತು ವ್ರತಗಳ ವಿಧಿವಿಧಾನವನ್ನು ಹೇಳುತ್ತೇನೆ. ಸಾಕ್ಷಾತ್‌ರುದ್ರದೇವರೇ ಇದನ್ನು ನಿರೂಪಿಸಿದ್ದರಿಂದ ಇದು ಸರ್ವಪಾಪ ನಾಶಕವೂ ಆಗಿದೆ.

### ದೇವವ್ರತ

ಒಂದು ವರ್ಷದವರೆಗೆ ಒಪ್ಪೊತ್ತೇ ಊಟ. ಅದು ಕೂಡ ರಾತ್ರಿಯಲ್ಲಿ. ಹಗಲೆಲ್ಲಾ ಉಪವಾಸ. ಹೀಗೆ ಒಂದು ವರ್ಷಪೂರ್ತಿಮಾಡಿ ಕೊನೆಗೆ ಕುಟುಂಬ ಎಂದರೆ ಹೆಂಡಿರು ಮಕ್ಕಳುಗಳುಳ್ಳ ತುಂಬ ಸಂಸಾರಿಯಾದ ಬ್ರಾಹ್ಮಣನಿಗೆ ಒಂದು ಹಸು, ಹೊನ್ನಿನ ಚಕ್ರ, ತ್ರಿಶೂಲ, ಹಾಗೂ ಒಂದು ಜತೆ ವಸ್ತ್ರಗಳನ್ನು ದಾನಕೊಡಬೇಕು. ಇದಕ್ಕೆ ದೇವವ್ರತ ಎಂದು ಹೆಸರು. ಇದರಿಂದ ಶಿವಲೋಕದಲ್ಲಿ ನಮ್ಮೆಲ್ಲರೊಡನೆ ವಾಸ, ಉಲ್ಲಾಸ, ಆನಂದ.

### ರುದ್ರವ್ರತ

ಒಂದು ವರ್ಷಕಾಲ ಏಕ ಭೋಜನ. ಅಂದರೆ ಹಗಲಾಗಲಿ ರಾತ್ರಿಯಾಗಲಿ ಒಂದೇ ಸಲ ಊಟ ಮಾಡಿ ದೇವರ ಧ್ಯಾನ ಮಾಡುವದು. ವರ್ಷದ ಕೊನೆಗೆ ಬಂಗಾರದ ಬಸವಣ್ಣ ಮತ್ತು ಶಿವನ ಪ್ರತಿಮೆಗಳನ್ನು ಎಳ್ಳಿನ ಆಕಳಿನೊಂದಿಗೆ ದಾನ

ಆಗ ಅವಳು ನಿಮ್ಮ ಎದುರು ಎಲೆಬಡಿಸಿ ಬಗೆಬಗೆಯ ಭಕ್ಷ್ಯ-ಭೋಜ್ಯ, ಪಕ್ವಾನ್ನ-ಮೃಷ್ಟಾನ್ನಗಳನ್ನೆಲ್ಲ ತಂದು ಬಡಿಸಿ '' ದಯವಿಟ್ಟು ಸ್ವೀಕರಿಸಿರಿ '' ಎಂದು ಬಿನ್ನವಿಸಿದಳು. ಆದರೆ ನೀವು ಅದಕ್ಕೂ ಒಪ್ಪದೆ ಮಂಗಳಾಂಗಿ, ನೀನು ಇಂದು ಉಪವಾಸವಿರುವೆ. ನಿನ್ನನ್ನು ಬಿಟ್ಟು ನಾವು ಹೇಗೆ ಊಟ ಮಾಡೋಣ ? ನಿನ್ನ ಸಹವಾಸದಿಂದ ನಾವೂ ಇಂದು ಉಪವಾಸ ಮಾಡುತ್ತೇವೆ. ಮುಂದೆ ಪ್ರಸಂಗ ಬಂದಾಗ ಭೋಜನವನ್ನೂ ಮಾಡುವೆವು. ಆದರೆ ಈಗ ಮಾತ್ರ ನಮಗೆ ಉಪವಾಸವೇ ಹಿತಕರ ಎಂದು ತೋರುತ್ತಿದೆ. ನಾವಿಬ್ಬರೂ ಹುಟ್ಟಿದಾಗಿನಿಂದ ದುಷ್ಟರೇ. ಮಹಾಪಾಪಿಷ್ಠರೇ. ನಾವು ಮಾಡುವದು ಯಾವಾಗಲೂ ಕೆಟ್ಟ ಕೆಲಸವೇ. ಇಂಥ ನಾವು ನಿನ್ನ ಸಹವಾಸದಿಂದ ಇಂದು ಉಪವಾಸಗೈದು ರಾತ್ರಿ ಜಾಗರಣೆಮಾಡಿ ನಮ್ಮ ಪಾಪವನ್ನು ಕಳೆದುಕೊಳ್ಳುತ್ತೇವೆ'' ಎಂದು ಹೇಳಿ ಅದರಂತೆ ಉಪವಾಸವಿದ್ದು ರಾತ್ರಿ ಜಾಗರ ಮಾಡಿದಿರಿ. ಹೀಗೆ ಎಲ್ಲರೂ ಅವಳ ಸಹವಾಸದಿಂದ ಉಪವಾಸಗೈದು ಅನಂತರ ಜಾಗರಣೆಮಾಡಿದಿರಿ. ಮರುದಿನ ಪ್ರಾತಃಕಾಲದಲ್ಲಿ ಅನಂಗವತಿಯು ದಿವ್ಯವಾದ ಸಪರಿಕರ ಶಯ್ಯಾದಾನ ಮಾಡಿ ಉಪ್ಪಿನ ಬೆಟ್ಟವನ್ನೂ ದಾನ ನೀಡಿದಳು. ಗುರುಗಳಿಗೆ ಗ್ರಾಮಗಳನ್ನು ಜಹಗೀರಿ ಹಾಕಿಕೊಟ್ಟಳು. ವಸ್ತ್ರಾಲಂಕಾರಗಳಿಂದ ಅಲಂಕರಿಸಿ ಹನ್ನೆರಡು ಹಸುಗಳನ್ನು ದಾನಮಾಡಿದಳು. ಅನಂತರ ಭಕ್ತಿಯಿಂದ ಬ್ರಾಹ್ಮಣಭೋಜನ ಮಾಡಿಸಿ ಬಳಿಕ ಆಪ್ತರೂ-ಮಿತ್ರರೂ, ಊನರೂ- ದೀನರೂ, ಅಂಗವಿಕಲರೂ-ಕುರುಡರೂ ಮೊದಲಾದವರಿಗೆಲ್ಲ ಯಥೇಷ್ಟಭೋಜನ ಮಾಡಿಸಿದಳು. ಇದಾದ ಬಳಿಕ ಆ ಬೇಡರ ದಂಪತಿಗಳಾದ ನಿಮ್ಮನ್ನು ಅತ್ಯಾದರಗಳಿಂದ ಪೂಜಿಸಿ ನಿಮ್ಮ ಸ್ಥಾನಕ್ಕೆ ಕಳುಹಿಸಿಕೊಟ್ಟಳು.

ಅನಂಗವತಿಯ ಪೂಜೆಯನ್ನು ಸ್ವೀಕರಿಸಿದ ಆ ಬೇಡನೇ ನೀನು. ಈಗ ನಿನ್ನ ಹೆಂಡತಿಯಾಗಿರುವವಳು ಆಗ ನಿನ್ನ ಮಡದಿಯಾಗಿದ್ದಳು. ಕಮಲಪುಷ್ಪಗಳಿಂದ ಶ್ರೀಹರಿಗೆ ಭಕ್ತಿಯಿಂದ ಏರಿಸಿ ಪೂಜೆಮಾಡಿದ ಪ್ರಭಾವದಿಂದ ನೀನು ಈಗ ಚಕ್ರವರ್ತಿ ಆಗಿರುವೆ. ನಿನ್ನ ಆ ಸತ್ವಗುಣದ ಮಹಿಮೆಗಳಿಂದ ನಿನ್ನ ಕಷ್ಟಗಳೆಲ್ಲ ಅಳಿದಿವೆ. ಪಾಪಗಳೆಲ್ಲ ಕಳೆದಿವೆ. ಇದರಿಂದಾಗಿ ನಿನಗೆ ಅತ್ಯಲ್ಪ ತಪಸ್ಸಿನಿಂದಲೇ ಕಮಲಗೃಹವೂ ದೊರಕಿದೆ. ಆದರಿಂದ ನೀನು ಕಾಮಚಾರಿಯಾಗಿ ಈ ಕಮಲಗೃಹದ ಪ್ರಭಾವದಿಂದ ಬೇಕಾದಲ್ಲಿ ಸಂಚರಿಸಬಹುದು. ಬ್ರಹ್ಮದೇವರೂ, ಶ್ರೀಹರಿಯೂ ನಿನ್ನ ಮೇಲೆ ಸುಪ್ರಸನ್ನರಾಗಿದ್ದಾರೆ. ಆ ಅನಂಗವತಿ ಎಂಬ ವೇಶ್ಯಾ ಸ್ತ್ರೀಯು ವಿಭೂತಿ ದ್ವಾದಶೀವ್ರತದ ಆಚರಣೆಯ ಪ್ರಭಾವದಿಂದ ಕಾಮನ ಮಡದಿಯಾಗಿದ್ದಾಳೆ. ರತಿದೇವಿಯ ಸವತಿ ಎನಿಸಿಕೊಂಡ ಅವಳಿಗೆ ಪ್ರೀತಿ ಎಂಬ ಹೆಸರು ಬಂದಿತು. ಎಲ್ಲ ಜನರಿಗೂ ಸಂತಸವನ್ನು ಬೀರುವ ಅವಳನ್ನು ದೇವತೆಗಳೆಲ್ಲರೂ ಆದರಿಸುತ್ತಲಿರುವರು. ರಾಜಶ್ರೇಷ್ಠನೇ ! ಆದುದರಿಂದ ನೀನು ಆ ನಿನ್ನ ಕಮಲ ಗೃಹವನ್ನು ಇಲ್ಲಿಯೇ ನೆಲದ ಮೇಲೆ ಇಟ್ಟು ಬಿಟ್ಟು ಗಂಗಾತಟಾಕದಲ್ಲಿ ವಿಭೂತಿ ದ್ವಾದಶೀವ್ರತವನ್ನು ಆಚರಿಸು. ಇದರಿಂದ ನಿನಗಾದರೂ ಮೋಕ್ಷವು ದೊರಕುವದು.

**ನಂದಿಕೇಶ್ವರ :-** ಪ್ರಚೇತಸ ಮುನಿಯು ಪುಷ್ಪವಾಹನ ಮಹಾರಾಜನಿಗೆ ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಅದರಂತೆ ಆ ಮಹಾರಾಜನಾದರೂ ಪ್ರಾಚೇತಸ ಮುನಿಯು ಹೇಳಿದಕ್ರಮದಲ್ಲಿ ವಿಭೂತಿದ್ವಾದಶೀವ್ರತವನ್ನು ಆಚರಣಮಾಡಿ ಸದ್ಗತಿಯನ್ನು ಹೊಂದಿದನು. ಈ ವ್ರತವನ್ನು ಮಾಡಬೇಕೆನ್ನುವವರು ಹನ್ನೆರಡು ದ್ವಾದಶೀತಿಥಿಗಳಲ್ಲಿ ಕಮಲನಾಭನಾದ ಶ್ರೀ ಹರಿಗೆ ಕಮಲಪುಷ್ಪಗಳನ್ನು ಅರ್ಚಿಸಿ ಅರ್ಚನೆ ಮಾಡಬೇಕು. ಬ್ರಾಹ್ಮಣರಿಗೆ ಯಥಾಶಕ್ತಿ ದಾನ-ದಕ್ಷಿಣೆಗಳನ್ನು ನೀಡಬೇಕು. ಇದರಿಂದ ಶ್ರೀ ಕೇಶವನು ಸುಪ್ರೀತನಾಗುವನು. ಪಾಪರಾಶಿಗಳನ್ನೆಲ್ಲ ಕಳೆಯುವ ಈ ವಿಭೂತಿದ್ವಾದಶೀವ್ರತದ ಮಹಿಮೆಯನ್ನು ಭಕ್ತಿಯಿಂದ ಪಠಿಸಿದವರು, ಶ್ರವಣ ಮಾಡಿದವರು, ಇನ್ನೊಬ್ಬರನ್ನು ಇದಕ್ಕಾಗಿ ಪ್ರೇರೇಪಿಸಿದವರೂ ಅನಂತಕಾಲದವರೆಗೆ ದೇವಲೋಕದಲ್ಲಿ ಸುಖದಿಂದ ವಾಸಮಾಡುವರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಒಂದನೆಯ ಅಧ್ಯಾಯ ಮುಗಿದುದು*



## ಅರವತ್ತು ವ್ರತಗಳ ವಿಧಾನ

ಅಧ್ಯಾಯ - ೧೦೨

ನಂದೀಕೇಶ್ವರ ಉವಾಚ

**ಅಥಾಥಃ ಸಂಪ್ರವಕ್ಷ್ಯಾಮಿ ವ್ರತಷಷ್ಠಿಮನುತ್ತಮಾಮ್**
**ರುದ್ರೇಣಾಭಿಹಿತಾಂ ದಿವ್ಯಾಂ ಮಹಾಪಾತಕನಾಶಿನೀಮ್ ॥**

**ನಂದಿಕೇಶ್ವರ :-** ಇನ್ನು ಮುಂದೆ ಸರ್ವಶ್ರೇಷ್ಠವಾದ ಅರವತ್ತು ವ್ರತಗಳ ವಿಧಿವಿಧಾನವನ್ನು ಹೇಳುತ್ತೇನೆ. ಸಾಕ್ಷಾತ್‌ರುದ್ರದೇವರೇ ಇದನ್ನು ನಿರೂಪಿಸಿದ್ದರಿಂದ ಇದು ಸರ್ವಪಾಪ ನಾಶಕವೂ ಆಗಿದೆ.

### ದೇವವ್ರತ

ಒಂದು ವರ್ಷದವರೆಗೆ ಒಪ್ಪೊತ್ತೇ ಊಟ. ಅದು ಕೂಡ ರಾತ್ರಿಯಲ್ಲಿ. ಹಗಲೆಲ್ಲಾ ಉಪವಾಸ. ಹೀಗೆ ಒಂದು ವರ್ಷಪೂರ್ತಿಮಾಡಿ ಕೊನೆಗೆ ಕುಟುಂಬ ಎಂದರೆ ಹೆಂಡಿರು ಮಕ್ಕಳುಗಳುಳ್ಳ ತುಂಬ ಸಂಸಾರಿಯಾದ ಬ್ರಾಹ್ಮಣನಿಗೆ ಒಂದು ಹಸು, ಹೊನ್ನಿನ ಚಕ್ರ, ತ್ರಿಶೂಲ, ಹಾಗೂ ಒಂದು ಜತೆ ವಸ್ತ್ರಗಳನ್ನು ದಾನಕೊಡಬೇಕು. ಇದಕ್ಕೆ ದೇವವ್ರತ ಎಂದು ಹೆಸರು. ಇದರಿಂದ ಶಿವಲೋಕದಲ್ಲಿ ನಮ್ಮೆಲ್ಲರೊಡನೆ ವಾಸ, ಉಲ್ಲಾಸ, ಆನಂದ.

### ರುದ್ರವ್ರತ

ಒಂದು ವರ್ಷಕಾಲ ಏಕ ಭೋಜನ. ಅಂದರೆ ಹಗಲಾಗಲಿ ರಾತ್ರಿಯಾಗಲಿ ಒಂದೇ ಸಲ ಊಟ ಮಾಡಿ ದೇವರ ಧ್ಯಾನ ಮಾಡುವದು. ವರ್ಷದ ಕೊನೆಗೆ ಬಂಗಾರದ ಬಸವಣ್ಣ ಮತ್ತು ಶಿವನ ಪ್ರತಿಮೆಗಳನ್ನು ಎಳ್ಳಿನ ಆಕಳಿನೊಂದಿಗೆ ದಾನ

ನೀಡಬೇಕು. ಇದರಿಂದ ನಿರಂತರ ಶಿವ ಸಾನ್ನಿಧ್ಯ ದೊರಕುವದು. ಇದು ರುದ್ರವ್ರತ .ಸರ್ವ ಪಾಪ ಪರಿಹಾರಕ. ಸಕಲ ದುಃಖ ಶಾಮಕ.

## ಲೀಲಾವ್ರತ

ಒಂದು ದಿನ ಉಪವಾಸ. ಮಾರನೆಯ ದಿನ ಪಾರಣೆ. ಅದೂ ಕೂಡ ರಾತ್ರಿ ವೇಳೆಯಲ್ಲಿ. ಹೀಗೆ ಧಾರಣೆ ಪಾರಣೆ ಮಾಡುತ್ತ ಒಂದು ವರ್ಷ ಕಳೆಯಬೇಕು. ಅನಂತರ ಚಿನ್ನದ ಕಮಲ, (ನೈದಿಲೆ) ಸಕ್ಕರೆಯ ಪಾತ್ರೆ, ಮತ್ತು ಒಂದು ಎತ್ತನ್ನೂ ದಾನ ನೀಡಬೇಕು. ಇದರಿಂದ ವಿಷ್ಣುಲೋಕ ಪ್ರಾಪ್ತಿ.

## ಪ್ರೀತಿವ್ರತ

ಆಷಾಢ ಮಾಸದಿಂದ ನಾಲ್ಕು ತಿಂಗಳ ಚಾತುರ್ಮಾಸ್ಯ ಕಾಲದಲ್ಲಿ ಅಭ್ಯಂಗ ಸ್ನಾನ ಎಂದರೆ ಎಣ್ಣೆ ಹಚ್ಚಿ ಎರೆದುಕೊಳ್ಳದೇ ಇರುವದು. ಮತ್ತು ಒಂದು ಕುಟುಂಬಕ್ಕೆ ಪ್ರತಿನಿತ್ಯ ಊಟಕ್ಕೆ ಬೇಕಾಗುವಷ್ಟು ಬೇಳೆಕಾಳು, ಎಣ್ಣೆ, ತುಪ್ಪ, ಹಾಲು ಮೊಸರು, ತರಕಾರಿ, ಮಸಾಲೆ ಮುಂತಾದವುಗಳನ್ನೆಲ್ಲ ಕೊಡಬೇಕು. ಇದರಿಂದ ಜನರ ಪ್ರೀತಿಯಾಗುವದು. ಮತ್ತು ಶ್ರೀ ಹರಿಯ ಸಾನ್ನಿಧ್ಯ ಲಾಭ. ಇದು ಪ್ರೀತಿವ್ರತ.

## ಗೌರೀ ವ್ರತ

ವಸಂತ ಋತುವಿನಲ್ಲಿ ಹಾಲು, ಮೊಸರು, ತುಪ್ಪ, ಬೆಲ್ಲ, ಸಕ್ಕರೆಗಳನ್ನು ಬಿಟ್ಟು ಪ್ರತಿದಿನ ಬ್ರಾಹ್ಮಣ ದಂಪತಿಗಳನ್ನು ಕರೆದು ಭೋಜನ ಮಾಡಿಸಬೇಕು. ತಾನು ತಿನ್ನದೇ ಬಿಟ್ಟ ಪದಾರ್ಥಗಳನ್ನೆಲ್ಲ ತುಂಬಿ ಪಾತ್ರೆಗಳನ್ನು ತೆಳುವಾದ ಬಟ್ಟೆಗಳೊಡನೆ ದಾನ ನೀಡಬೇಕು. ಗೌರೀ 'ಮೇಪ್ರೀಯತಾಮ್' ಎಂದು ಗೌರೀದೇವಿಯನ್ನು ಪೂಜಿಸಬೇಕು. ಇದರಿಂದ ಪಾರ್ವತೀ ಲೋಕ ಪ್ರಾಪ್ತಿ.

## ಕಾಮ ವ್ರತ

ಪುಷ್ಯ ಶುಕ್ಲ ತ್ರಯೋದಶಿಯಿಂದ ಚೈತ್ರ ಶುದ್ಧ ತ್ರಯೋದಶಿವರೆಗೆ ಹಗಲು ಉಪವಾಸವಿದ್ದು ರಾತ್ರಿ ಊಟ ಮಾಡಬೇಕು. ಕೊನೆಗೆ ಹತ್ತು ಅಂಗುಲ ಎತ್ತರದ ಬಂಗಾರದ ಅಶೋಕಗಿಡವನ್ನು ಮಾಡಿಸಿ ಕಬ್ಬು, ವಸ್ತ್ರ ಸಹಿತವಾಗಿ ಬ್ರಾಹ್ಮಣನಿಗೆ ದಾನ ಕೊಡಬೇಕು. '' ಪ್ರದ್ಯುಮ್ನಃ ಪ್ರೀಯತಾಮ್ '' ಎಂದು ಪ್ರಾರ್ಥಿಸಬೇಕು. ಇದರಿಂದ ಒಂದು ಕಲ್ಪಕಾಲ ವಿಷ್ಣುಲೋಕ ನಿವಾಸ. ಇದರ ಹೆಸರು ಕಾಮ ವ್ರತ

## ಶಂಕರ ವ್ರತ

ಆಷಾಢ, ಶ್ರಾವಣ, ಭಾದ್ರಪದ ಈ ನಾಲ್ಕುತಿಂಗಳು ಕೈಕಾಲುಗಳ ಉಗುರು ತೆಗೆಯಬಾರದು. ಬದನೇಕಾಯಿ, ಜೇನುತುಪ್ಪ, ತುಪ್ಪ ತಿನ್ನಬಾರದು. ಹೀಗೆ ಆಷಾಢ ಹುಣ್ಣಿಮೆಯಿಂದ ಕಾರ್ತಿಕ ಹುಣ್ಣಿಮೆವರೆಗೆ ವ್ರತಮಾಡಿ ಪೌರ್ಣಿಮೆಯ ದಿನ ಬಂಗಾರದ ಬದನೆಕಾಯಿ ಮಾಡಿಸಿ ಬ್ರಾಹ್ಮಣರಿಗೆ ತುಪ್ಪದ ತಪ್ಪೇಲಿ, ಜೇನುತುಪ್ಪದ ಪಾತ್ರೆಯೊಂದಿಗೆ ದಾನ ಕೊಡಬೇಕು. ಇದು ಶಂಕರ ವ್ರತ. ಇದರ ಫಲ ಶಿವಲೋಕ ನಿವಾಸ.

## ಸೌಭಾಗ್ಯ ವ್ರತ

ಫಾಲ್ಗುಣ ಮಾಸದಿಂದ ಷುರುವು ಮಾಡಿ ಪ್ರತಿ ತಿಂಗಳಿನ ಶುಕ್ಲಪಕ್ಷ, ಕೃಷ್ಣಪಕ್ಷಗಳ ತದಿಗೆ ತಿಥಿಗಳಲ್ಲಿ ಉಪ್ಪನ್ನು ವರ್ಜಿಸಿ ಊಟ ಮಾಡಬೇಕು. ವರ್ಷದ ಕೊನೆಗೆ '' ಭವಾನೀ ಪ್ರೀಯತಾಮ್ ಎಂದು ಪ್ರಾರ್ಥಿಸಿ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ ಭೋಜನ ಮಾಡಿಸಬೇಕು. ಸಂಸಾರಕ್ಕೆ ಬೇಕಾಗುವ ಸಲಕರಣೆಗಳನ್ನೆಲ್ಲ ಇರಿಸಿ ಸುಸಜ್ಜಿತವಾದ ಹಾಸಿಗೆಯನ್ನು ಒಂದು ಕೋಣೆಯಲ್ಲಿ ಇಟ್ಟು ''ಪಾರ್ವತಿಯು ಪ್ರೀತಳಾಗಲಿ'' ಎಂದು ಬ್ರಾಹ್ಮಣರಿಗೆ ಇಡೀ ಮನೆಯನ್ನೇ ದಾನ ಕೊಡಬೇಕು. ಇದು ಸೌಭಾಗ್ಯ ವ್ರತ. ಇದರಿಂದ ಒಂದು ಕಲ್ಪಕಾಲದವರೆಗೆ ಗೌರೀ ಲೋಕದಲ್ಲಿ ವಾಸಲಾಭ.

## ಸೌಮ್ಯ ವ್ರತ

ಹೇಮಂತ ಋತು ಮತ್ತು ಶಿಶಿರ ಋತು ಎಂದರೆ ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ, ಈ ನಾಲ್ಕು ತಿಂಗಳು ಮುತ್ತೈದೆಯು ಹೂಗಳನ್ನು ಮುಡಿಯಬಾರದು. ಫಾಲ್ಗುಣ ಹುಣ್ಣಿಮೆಯ ದಿನ ಮೂರು ಬಂಗಾರದ ಹೂಗಳನ್ನು ಮಾಡಿಸಿ ''ಶಿವಕೇಶವೌ ಪ್ರೀಯೇತಾಂ'' ಹರಿಹರರು ಸಂತುಷ್ಟರಾಗಲಿ ಎಂದು ಪ್ರಾರ್ಥಿಸಿ ಮಧ್ಯಾಹ್ನಕಾಲದಲ್ಲಿ ದಾನ ಕೊಡಬೇಕು. ಇದು ಸೌಮ್ಯ ವ್ರತ.

## ಸಾರಸ್ವತ ವ್ರತ

ಪ್ರತಿದಿನ ಪ್ರಾತಃಕಾಲ ಹಾಗೂ ಸಂಧ್ಯಾಕಾಲಗಳಲ್ಲಿ ಮೌನದಿಂದ ಇದ್ದು ದೇವರ ಧ್ಯಾನಮಾಡಬೇಕು. ಹೀಗೆ ಒಂದು ವರ್ಷದವರೆಗೆ ದಿನದ ಎರಡೂ ಸಂಧ್ಯೆ ಎಂದರೆ ಮುಂಜಾವು ಅರುಣೋದಯದಿಂದ ಸೂರ್ಯೋದಯದವರೆಗೆ, ಸಂಜೆ ಸೂರ್ಯಾಸ್ತದಿಂದ ಕತ್ತಲಾಗುವವರೆಗೆ ಮೌನಧ್ಯಾನವನ್ನು ಆಚರಿಸಿ ವರ್ಷದ ಕೊನೆಗೆ ತುಪ್ಪ ತುಂಬಿದ ಕೊಡವನ್ನೂ ಎರಡೂ ವಸ್ತ್ರಗಳನ್ನು ಒಂದು ಗಂಟೆಯನ್ನೂ ಎಳ್ಳಿನೊಂದಿಗೆ ಬ್ರಾಹ್ಮಣರಿಗೆ ದಾನ ಕೊಡಬೇಕು. ಇಗು ಸಾರಸ್ವತ ವ್ರತ. ಇದರಿಂದ ಸೌಂದರ್ಯ ಪಾಂಡಿತ್ಯ ಎರಡೂ ಲಭ್ಯವಾಗುವವು. ಕೊನೆಗೆ ಸರಸ್ವತಿ ಸಾನ್ನಿಧ್ಯವು ದೊರಕುವದು.

## ಸಂಪದ್ವ್ರತ

ಒಂದು ವರ್ಷದವರೆಗೆ ಪ್ರತಿತಿಂಗಳಿನ ಎರಡೂ ಪಂಚಮೀ ತಿಥಿಗಳಲ್ಲಿ ಉಪವಾಸವಿದ್ದು ಲಕ್ಷ್ಮೀ ಪೂಜೆಯನ್ನು ಮಾಡಬೇಕು. ವರ್ಷದ ಕೊನೆಗೆ ಒಂದು ಹಸು ಹಾಗೂ ಹೊನ್ನಿನ ಕಮಲವನ್ನು ದಾನ ಕೊಡಬೇಕು. ಇದು ಸಂಪದ್ವ್ರತ. ಇದರ ಆಚರಣೆಯಿಂದ ಪ್ರತಿಯೊಂದು ಜನ್ಮದಲ್ಲಿಯೂ ಮನುಷ್ಯನು ಶ್ರೀಮಂತನಾಗಿಯೇ ಹುಟ್ಟುವನು. ಸರ್ವಪಾಪಪರಿಹಾರ ಹಾಗೂ ವಿಷ್ಣು ಸಾಯುಜ್ಯವೂ ಇದರ ಫಲಗಳಾಗಿವೆ.

## ಆಯುರ್ವ್ರತ

ಹರಿ ಮತ್ತು ಹರ ದೇವತೆಗಳ ಮುಂದೆ ತಪ್ಪದೆ ಸಾರಿಸಿ ನಿತ್ಯ ರಂಗೋಲಿ ಹಾಕಬೇಕು. ವರ್ಷದ ಕೊನೆಗೆ ಒಂದು ನೀರಿನ ಕೊಡ ಹಾಗೂ ಒಂದು ಹಸುವನ್ನು

ದಾನ ನೀಡಬೇಕು. ಈ ಆಯುರ್ವ್ರತದಿಂದ ಇಷ್ಟಾರ್ಥ ಪ್ರಾಪ್ತಿ ಇರುವವರೆಗೆ. ಕೈಲಾಸಪ್ರಾಪ್ತಿ ಸತ್ತ ಬಳಿಕ.

## ಕೀರ್ತಿವ್ರತ

ಒಂದು ವರ್ಷದವರೆಗೆ ಒಂದೇ ಹೊತ್ತು ಊಟ. ಭೋಜನ ಕಾಲದಲ್ಲಿ ಸಂಪೂರ್ಣ ಮೌನ. ಪ್ರತಿದಿನ ಅಶ್ವತ್ಥ ವೃಕ್ಷ, ಸೂರ್ಯ ಹಾಗೂ ಗಂಗಾನದಿ ಈ ಮೂರಕ್ಕೆ ನಮಸ್ಕಾರ. ಎಂದೂ ಯಾರ ಮೇಲೂ ಮತ್ಸರಪಡದೇ ಇರುವದು. ವರ್ಷದ ಕೊನೆಗೆ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ ಮೂರು ಆಕಳುಗಳನ್ನು ಒಂದು ಚಿನ್ನದ ಹಸುವನ್ನೂ ದಾನ ಕೊಡಬೇಕು. ಇದು ಕೀರ್ತಿ ವ್ರತ ಇದರಿಂದ ಕೀರ್ತಿ ಐಶ್ವರ್ಯ ಉಭಯ ಪ್ರಾಪ್ತಿ.

## ಸಾಮವ್ರತ

ಗೋಮಯದಿಂದ ಸಾರಿಸಿ ಒಂದು ಮಂಡಲವನ್ನು ರಚಿಸಬೇಕು. ಅದರಲ್ಲಿ ಒಂದು ಚಿಕ್ಕ ಮಂಟಪವನ್ನು ಕಟ್ಟಿ ಹರಿ ಅಥವಾ ಹರರನ್ನು ಸ್ಥಾಪಿಸಿ, ಗಂಧ ಪುಷ್ಪಾಕ್ಷತೆಗಳಿಂದ ಅಲಂಕರಿಸಿ ಪೂಜಿಸಬೇಕು. ಪ್ರತಿದಿನವೂ ತಪ್ಪದೆ ತುಪ್ಪದಿಂದ ಅಭಿಷೇಕ ಮಾಡಬೇಕು. ವರ್ಷದ ಕೊನೆಗೆ ಬಂಗಾರದ ಎಂಟು ಬೆರಳು ಎತ್ತರವಾದ ಕಮಲಪುಷ್ಪವನ್ನು ಎಳ್ಳಿನಿಂದ ರಚಿಸಿದ ಆಕಳದೊಂದಿಗೆ ಸಾಮವೇದ ಪಾರಂಗತನಾದ ಬ್ರಾಹ್ಮಣನಿಗೆ ದಾನ ನೀಡಬೇಕು. ಇದನ್ನು ಸಾಮ ವ್ರತ ಎಂದು ಕರೆಯುವರು. ಇದರಿಂದ ಮಹೇಶ್ವರ ಲೋಕದಲ್ಲಿ ಮಾನ ಮರ್ಯಾದೆ.

## ವೀರ ವ್ರತ

ನವಮಿ ದಿನ ಒಪ್ಪತ್ತು ಊಟ, ಯಥಾಶಕ್ತಿ ಕನ್ಯಾಮಣಿಗಳಿಗೆ ಭೋಜನ. ಆಸನ ಕೊಟ್ಟು ಕೂಡಿಸಿ ಆದರೋಪಚಾರಮಾಡಿ ಜರಿ ಅಂಚಿನ ಕುಪ್ಪಸವನ್ನೂ ಸೀರೆಯನ್ನೂ ದಾನಕೊಡಬೇಕು. ಒಬ್ಬ ಬ್ರಾಹ್ಮಣನಿಗೆ ಬಂಗಾರದ ಸಿಂಹಮಾಡಿ ದಾನ ಮಾಡಬೇಕು. ಇದು ವೀರ ವ್ರತ. ಸ್ತ್ರಿ ಪುರುಷರಿಬ್ಬರಿಗೂ ಸುಖದಾಯಕ. ಜನ್ಮ-ಜನ್ಮಾಂತರಗಳಲ್ಲಿ ಶೂರನೂ, ಸುಂದರನೂ, ಶತ್ರುನಾಶಕನೂ ಆಗಿ ಜನಿಸುವನು.

## ಪಿತೃ ವ್ರತ

ಪ್ರತಿ ಹುಣ್ಣಿಮೆ ಹಾಗೂ ಅಮಾವಾಸ್ಯಾದಿ ದಿನಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿ ಹಿಂಡುವ ಐದು ಆಕಳುಗಳನ್ನೂ ಪೀತಾಂಬರ ಮತ್ತು ನೀರಿನ ಕೊಡಗಳನ್ನೂ ದಾನ ಕೊಡಬೇಕು. ಇದು ಪಿತೃ ವ್ರತ. ಇದರಿಂದ ನೂರು ತಲೆಯ ಪಿತೃಗಳ ಉದ್ಧಾರ. ಜನ್ಮಾಂತರದಲ್ಲಿ ಕುಬೇರನ ಐಶ್ವರ್ಯ. ಕೊನೆಗೆ ವಿಷ್ಣುಲೋಕ.

## ಆನಂದ ವ್ರತ

ಚೈತ್ರ ವೈಶಾಖ ಜೇಷ್ಠ ಆಷಾಢ ಈ ನಾಕು ತಿಂಗಳಲ್ಲಿ ದಾರಿಯಲ್ಲಿ ಅರವಟ್ಟಿಗೆಯನ್ನಿಟ್ಟು ಬಂದವರಿಗೆಲ್ಲ ಕುಡಿಯಲು ನೀರನ್ನು ನೀಡುವದು, ವ್ರತದ

ಕೊನೆಗೆ ಅನ್ನ ವಸ್ತ್ರ ಸಹಿತವಾಗಿ ಒಂದು ಹಂಡೆಯನ್ನೂ ಎಳ್ಳು ತುಂಬಿದ ಪಾತ್ರೆಯನ್ನೂ ಕಿಂಚಿತ್ ಸುವರ್ಣವನ್ನೂ ದಾನ ಕೊಡಬೇಕು. ಇದರಿಂದ ಬ್ರಹ್ಮಲೋಕದಲ್ಲಿ ಮುಂದೆ ಗೌರವ. ಇಲ್ಲಿ ರಾಜ್ಯೈಶ್ವರ್ಯ ಪ್ರಾಪ್ತಿ. ಇದು ಆನಂದ ವ್ರತ.

## ಧೃತಿ ವ್ರತ

ಪ್ರತಿದಿನ ದೇವರಿಗೆ ಪಂಚಾಮೃತದಿಂದ ಅಭಿಷೇಕಮಾಡಿ ಅಥವಾ ಮಾಡಿಸಿ ವರ್ಷದ ಕೊನೆಗೆ ಒಂದು ಹಸುವನ್ನೂ ಶಂಖವನ್ನೂ ಪಂಚಾಮೃತವನ್ನೂ ಬ್ರಾಹ್ಮಣನಿಗೆ ದಾನ ನೀಡಬೇಕು. ಈ ಧೃತಿ ವ್ರತದಿಂದ ಕಲ್ಪಾಂತದಲ್ಲಿ ರಾಜ್ಯ ಪ್ರಾಪ್ತಿ ಕೊನೆಗೆ ಶಿವಸಾನಿಧ್ಯ.

## ಅಹಿಂಸಾವ್ರತ

ಕಾಯಿಪಲ್ಲೆಗಳಿಗೂ ಜೀವವಿರುವದರಿಂದ ಶಾಕಾಹಾರಿ ಮನುಷ್ಯನು ಒಂದು ವರ್ಷದ ಮಟ್ಟಿಗಾದರೂ ಅದನ್ನು ತೊರೆದು ಗೋದಾನ ಬಂಗಾರದ ಚಿಗರೆದಾನ ಮಾಡಬೇಕು. ಇದು ಅಹಿಂಸಾ ವ್ರತ. ಇದರಿಂದ ಅಶ್ವಮೇಧಯಾಗದ ಫಲ.

## ಸೂರ್ಯವ್ರತ

ಮಾಘ ಮಾಸದಲ್ಲಿ ಪ್ರತಿದಿನ ಮುಂಜಾವಿನ ನಸುಕಿನಲ್ಲಿಯೇ ಎದ್ದು ಸ್ನಾನ ಮಾಡಿ ಯಥಾಶಕ್ತಿ ದಂಪತಿಭೋಜನ ಮಾಡಿಸಬೇಕು. ಅವರನ್ನು ವಸ್ತ್ರಾಭರಣಗಳಿಂದ ಪೂಜಿಸಬೇಕು. ಇದು ಸೂರ್ಯವ್ರತ. ಇದರಿಂದ ಸೂರ್ಯಲೋಕ ನಿವಾಸ.

## ಶ್ರೀಹರಿವ್ರತ

ಆಷಾಢದಿಂದ ಮೊದಲಾಗುವ ಚಾತುರ್ಮಾಸ್ಯ ನಾಲ್ಕು ತಿಂಗಳುಗಳಲ್ಲಿ ಪ್ರತಿ ದಿನವು ನಸುಕಿನಲ್ಲಿಯೇ ಸ್ನಾನ ಮಾಡಿ ಶ್ರೀ ವಿಷ್ಣುವಿನ ಪೂಜೆ ಮಾಡಬೇಕು. ಕಾರ್ತಿಕ ಹುಣ್ಣಿಮೆಯ ದಿನ ಬ್ರಾಹ್ಮಣ ಭೋಜನ ಮಾಡಿಸಿ ಗೋದಾನವನ್ನು ಕೊಡಬೇಕು. ಇದು ವಿಷ್ಣುವ್ರತ. ಇದರಿಂದ ವಿಷ್ಣು ಸಾನ್ನಿಧ್ಯ ಪ್ರಾಪ್ತಿ.

## ಶೀಲವ್ರತ

ಉತ್ತರಾಯಣ ಅಥವಾ ದಕ್ಷಿಣಾಯನ ಪೂರ್ತಿ ಆರು ತಿಂಗಳವರೆಗೆ ಹೂವನ್ನು ಮುಡಿಯಬಾರದು, ತುಪ್ಪವನ್ನು ತಿನ್ನಬಾರದು. ವ್ರತದ ಕೊನೆಗೆ ಗಟ್ಟಿತುಪ್ಪದಿಂದ ಒಂದು ಹಸುವಿನ ಆಕಾರವನ್ನು ನಿರ್ಮಿಸಿ ಆ ಘೃತಧೇನುವನ್ನೂ ಹೂವಿನ ಮಾಲೆಯನ್ನೂ, ತುಪ್ಪವನ್ನೂ, ಪಾಯಸವನ್ನೂ ಬ್ರಾಹ್ಮಣನಿಗೆ ದಾನ ನೀಡಬೇಕು. ಇದಕ್ಕೆ ಶೀಲವ್ರತ ಎಂದು ಹೆಸರು. ಇದರಿಂದ ಒಳ್ಳೆ ಆರೋಗ್ಯ ಸೌಭಾಗ್ಯ ಇಹದಲ್ಲಿ, ಶಿವಸಾನ್ನಿಧ್ಯ ಪರದಲ್ಲಿ ಲಭಿಸುವವು.

## ದೀಪ್ತಿವ್ರತ

ಒಂದು ವರ್ಷಕಾಲ ಪ್ರತಿನಿತ್ಯ ಸಾಯಂಕಾಲದ ಹೊತ್ತಿನಲ್ಲಿ ದೇವರ ಎದುರು ದೀಪವನ್ನು ಹಚ್ಚಬೇಕು. ಒಂದು ವರ್ಷ ಊಟದಲ್ಲಿ ಎಣ್ಣೆಯನ್ನು ಉಪಯೋಗಿಸ ಬಾರದು. ವರ್ಷದ ಕೊನೆಗೆ ದೀಪ ಹಚ್ಚುವ ನೀಲಾಂಜನಗಳನ್ನೂ ಬಂಗಾರದ ಚಕ್ರ

ತ್ರಿಶೂಲ ಹಾಗೂ ಒಂದು ಪಂಚೆಯನ್ನೂ ದಾನ ಕೊಡಬೇಕು. ಇದರಿಂದ ಈ ಲೋಕದಲ್ಲಿ ಬದುಕಿ ಇರುವವರೆಗೆ ಮುಖದಲ್ಲಿ ದಿವ್ಯ ತೇಜಸ್ಸು ಮಿಂಚಾಡುವದು. ಮುಂದೆ ರುದ್ರಲೋಕ ಪ್ರಾಪ್ತಿಯಾಗುವದು. ಇದು ರುದ್ರವ್ರತ.

## ಶಿವ ವ್ರತ

ಕಾರ್ತೀಕ ಮಾಸದಿಂದ ಆರಂಭಿಸಿ ಪ್ರತಿಯೊಂದು ತದಿಗೆಯ ದಿನ ಗೋಮೂತ್ರ ಪ್ರಾಶನ ಮಾಡಿ ಅಕ್ಕಿಯ ಗಂಜಿಯನ್ನು ಹಗಲು ಕುಡಿದು ರಾತ್ರಿ ಊಟ ಮಾಡಬೇಕು. ವರ್ಷದ ಕೊನೆಗೆ ಗೋದಾನವನ್ನೂ ನೀಡಬೇಕು. ಇದರಿಂದ ಇಹದಲ್ಲಿ ಭೂಲೋಕ ರಾಜ್ಯ. ಪರದಲ್ಲಿ ಗೌರೀಲೋಕವಾಸ. ಇದು ಶುಭಪ್ರದವಾದ ಶಂಭುವ್ರತ.

## ದೃಢ ವ್ರತ

ಚೈತ್ರ ಮಾಸದಲ್ಲಿ ಮೈಗೆ ಸುಗಂಧಲೇಪನವನ್ನು ಹಚ್ಚಿಕೊಳ್ಳಬಾರದು. ಬ್ರಾಹ್ಮಣನಿಗೆ ಗಂಧದ ಭರಣಿ ಒಂದು ಜತೆ ಪಂಚೆ ದಾನ ಮಾಡಬೇಕು. ಈ ದೃಢ ವ್ರತದಿಂದ ವರುಣಲೋಕ ಪ್ರಾಪ್ತಿ.

## ಕಾಂತಿವ್ರತ

ವೈಶಾಖ ಮಾಸದಲ್ಲಿ ಹೂವನ್ನು ಮುಡಿಯಬಾರದು. ಉಪ್ಪನ್ನು ತಿನ್ನಬಾರದು. ಹಸುವನ್ನು ದಾನಕೊಡಬೇಕು. ಈ ಕಾಂತಿವ್ರತದ ಫಲ ಎರಡು. ಅವನಿಯಲ್ಲಿ ಅರಸೊತ್ತಿಗೆ. ಮರಣಾನಂತರ ಒಂದು ಕಲ್ಪಕಾಲ ವಿಷ್ಣುಲೋಕದಲ್ಲಿ ಸುಖಾನುಭವ.

## ಬ್ರಹ್ಮವ್ರತ

ಮೂರು ದಿನ ಎಳ್ಳಿನಿಂದ ಹೋಮಮಾಡಿ ಬ್ರಾಹ್ಮಣನಿಗೆ ಎಳ್ಳು ಹಾಗೂ ದಕ್ಷಿಣೆಗಳನ್ನು ಕೊಟ್ಟು ಮೃಷ್ಟಾನ್ನ ಭೋಜನದಿಂದ ತೃಪ್ತಿಪಡಿಸಬೇಕು. ದ್ವಿಜದಂಪತಿಗಳನ್ನೂ ಬಟ್ಟೆಕೊಟ್ಟು, ಮಾಲೆಮುಡಿಸಿ, ಆಭರಣತೊಡಿಸಿ, ಅಲಂಕರಿಸಿ ಒಂಭತ್ತು ತೊಲಕ್ಕೆ ಕಡಿಮೆಯಲ್ಲದಷ್ಟು ಚಿನ್ನದಿಂದ ಬ್ರಹ್ಮಾಂಡದ ಆಕಾರ ನಿರ್ಮಿಸಿ "ವಿಶ್ವಾತ್ಮಾ ಪ್ರೀಯತಾಂ" ಎಂದು ಹೇಳಿ ದಾನಕೊಡಬೇಕು. ಇದು ಬ್ರಹ್ಮವ್ರತ. ಇದನ್ನು ಆಚರಿಸಿದವನು ಮರಳಿ ಹುಟ್ಟುವದಿಲ್ಲ. ಮುಕ್ತಿಯಲ್ಲಿ ಶಾಶ್ವತ ಆನಂದವನ್ನು ಪಡೆಯುವನು.

## ಧೇನುವ್ರತ

ಕರುವನ್ನು ಈಯುತ್ತಲಿರುವ ಗೋವಿಗೆ ಉಭಯಮುಖಿ ಗೋ ಎನ್ನುವರು. ಒಂದು ದಿನ ಬರೀ ಹಾಲಿನ ಮೇಲೆ ಇದ್ದು ಕೆಚ್ಚಲದಿಂದ ಕರು ಹೊರಬರುತ್ತಲಿರುವ ಹಸುವನ್ನು ಬಂಗಾರದ ಆಭರಣಗಳಿಂದ ಅಲಂಕರಿಸಿ ದಾನ ಕೊಡುವವನು ದಿವ್ಯ ಗತಿಯನ್ನು ಪಡೆಯುವನು. ಈ ಧೇನುವ್ರತ ಮಾಡಿದವನಿಗೆ ಪುನರ್ಜನ್ಮವಿಲ್ಲ.

## ಕಲ್ಪವ್ರತ

ಮೂರು ದಿನ ಬರೀ ಹಾಲಿನ ಮೇಲೆ ಇದ್ದು ಕನಿಷ್ಠ ಮೂರು ತೊಲ ಚಿನ್ನದಿಂದ ಕಲ್ಪವೃಕ್ಷ ಮಾಡಿಸಿ ಅಕ್ಕಿ ಸಹಿತ ದಾನ ಮಾಡಬೇಕು. ಈ ಕಲ್ಪವ್ರತಕ್ಕೆ ಫಲ ಬ್ರಹ್ಮ ಸಾನ್ನಿಧ್ಯ.

## ಭೀಮವ್ರತ

ಒಂದು ತಿಂಗಳು ಉಪವಾಸವಿದ್ದು ಶುಭಲಕ್ಷಣಗಳಿಂದ ಕೂಡಿದ ಗೋವನ್ನು ಬ್ರಾಹ್ಮಣನಿಗೆ ದಾನ ನೀಡುವವನು ವಿಷ್ಣುಲೋಕ ಸೇರುವನು.

## ಧರಾವ್ರತ

ಕೇವಲ ಹಾಲಿನ ಆಹಾರ. ಕನಿಷ್ಠ ಅರವತ್ತು ತೊಲ ಚಿನ್ನದಿಂದ ಭೂಮಂಡಲವನ್ನು ರಚಿಸಿ ದಾನ ಕೊಡಬೇಕು. ಈ ಧರಾವ್ರತದ ಪುಣ್ಯದಿಂದ ಏಳು ಸಾವಿರ ಕಲ್ಪ ರುದ್ರಲೋಕದಲ್ಲಿ ಮನ್ನಣೆ ಪಡೆಯುವನು.

## ಮಹಾವ್ರತ

ಮಾಘ ಮಾಸ ಅಥವಾ ಚೈತ್ರಮಾಸದ ತದಿಗೆಯ ದಿನ ಬರೀ ಬೆಲ್ಲವನ್ನು ತಿಂದು ಬೆಲ್ಲದಿಂದ ಮಾಡಿದ ಆಕಳವನ್ನು ದಾನ ಕೊಡಬೇಕು. ಇದರಿಂದ ಮುಂದೆ ಗೌರೀಲೋಕದಲ್ಲಿ ಗೌರವ. ಇಲ್ಲಿ ಪರಮಾನಂದ. ಇದು ಮಹಾವ್ರತ.

## ಪ್ರಭಾವ್ರತ

ಹದಿನೈದು ದಿನ ಉಪವಾಸ. ಅನಂತರ ಪಾರಣೆಯ ದಿನ ಎರಡು ಕಪಿಲ ಧೇನುಗಳ ದಾನ. ಇದರಿಂದ ಕಲ್ಪದ ಕೊನೆಯಲ್ಲಿ ಕುಬೇರ ಪದವಿ. ಬ್ರಹ್ಮಲೋಕದಲ್ಲಿ ಸುರರಿಂದ ಮನ್ನಣೆ. ಇದೆಲ್ಲ ಪ್ರಭಾವ್ರತದ ಪ್ರಭಾವ.

## ಪ್ರಾಪ್ತಿವ್ರತ

ಇಡೀ ವರ್ಷ ಒಪ್ಪತ್ತು ಊಟ. ವರ್ಷಾಂತ್ಯದಲ್ಲಿ ಭೂರಿಭೋಜನ. ಜಲಕುಂಭದಾನ ಈ ಪ್ರಾಪ್ತಿವ್ರತದ ಫಲ ಶಿವಲೋಕದಲ್ಲಿ ಶಾಶ್ವತ ವಾಸ.

## ಸುಗತಿ ವ್ರತ

ಪ್ರತಿ ಅಷ್ಟಮಿ ಹಗಲು ಉಪೋಷಣ. ರಾತ್ರಿ ಭೋಜನ. ವರ್ಷದ ಕೊನೆಗೆ ಭೂರಿಭೋಜನ. ಫಲ ಇಂದ್ರಲೋಕ ಪ್ರಾಪ್ತಿ.

## ವೈಶ್ವಾನರ ವ್ರತ

ವರ್ಷಋತುವಿನಿಂದ ಶಿಶಿರ ಋತುವಿನವರೆಗೆ. ಅರ್ಥಾತ್ ಶ್ರಾವಣದಿಂದ ಫಾಲ್ಗುಣದ ವರೆಗೆ ಎಂಟುತಿಂಗಳಕಾಲ ಕುಟುಂಬಿ ಬ್ರಾಹ್ಮಣನ ಮನೆಗೆ ಹತ್ತುವಷ್ಟು ಕಟ್ಟಿಗೆ ಇದ್ದಲಿ, ಕುಳ್ಳು ಮುಂತಾದ ಉರುವಲುವನ್ನು ಕೊಡುವದು. ಕೊನೆಗೆ ಗಟ್ಟಿಯಾದ ತುಪ್ಪದಲ್ಲಿ ಆಕಳಿನ ಆಕಾರವನ್ನು ಕೊರೆದು ಅಥವಾ ಬರೆದು ಅಲಂಕರಿಸಿ ದಾನ ಮಾಡಬೇಕು. ಆ ವೈಶ್ವಾನರ ವ್ರತದಿಂದ ಪಾಪ ಪರಿಹಾರ. ಬ್ರಹ್ಮಪ್ರಾಪ್ತಿ.

## ಕೃಷ್ಣವ್ರತ

ಏಕಾದಶಿಯಲ್ಲಿ ಸಾಯಂಕಾಲದವರೆಗೆ ದೇವರ ಪೂಜೆ ಧ್ಯಾನ, ಗಾನ, ಭಜನೆಗಳನ್ನು ಮಾಡಿ ದೇವರ ತೀರ್ಥ ಮಾತ್ರ ಆಹಾರವಾಗಿ ತೆಗೆದುಕೊಂಡು ಇರಬೇಕು. ಹೀಗೆ ಪ್ರತಿ ಏಕಾದಶಿಯೂ ಉಪೋಷಣ ಮತ್ತು ಹರಿಯ ಉಪಾಸನೆಯನ್ನು ಮಾಡುತ್ತ

ಬಂಗಾರದಿಂದ ಸುದರ್ಶನ ಚಕ್ರವನ್ನು ಮಾಡಿಸಿ ದಾನ ಕೊಡಬೇಕು. ಈ ಕೃಷ್ಣವ್ರತದಿಂದ ಕಲ್ಪಾಂತ ಕಾಲದಲ್ಲಿ ಅರಸೊತ್ತಿಗೆ. ಅನಂತರ ವಿಷ್ಣುಲೋಕ.

## ದೇವೀವ್ರತ

ಪ್ರತಿ ದಿನವೂ ಬರೀ ಪಾಯಸ ಮಾತ್ರ ತಿಂದು ಇರುವದು. ಹೀಗೆ ಪೂರ್ತಿ ಒಂದು ವರ್ಷದವರೆಗೆ ಪ್ರಾಶನ ಮಾಡಿ ವ್ರತಸಮಾಪ್ತಿಯ ದಿನ ಜೋಡು ಹಸುಗಳನ್ನು ದಾನ ಕೊಡಬೇಕು. ಈ ದೇವೀವ್ರತದ ಆಚರಣೆಯಿಂದ ಲಕ್ಷ್ಮೀಲೋಕ ಲಾಭ.

## ಭಾನುವ್ರತ

ಪ್ರತಿ ಸಪ್ತಮೀ ದಿನದಂದು ಹಗಲು ಊಟ ವರ್ಜ್ಯ. ರಾತ್ರಿ ಮಾತ್ರ ಭೋಜನ. ವರ್ಷ ಕೊನೆಗೊಂಡಾಗ ಹಾಲು ಹಿಂಡುವ ಹಸುವಿನ ದಾನ. ಇದೇ ಭಾನುವ್ರತ. ಇದರಿಂದ ಸೂರ್ಯಲೋಕ ಪ್ರಾಪ್ತಿ.

## ವಿನಾಯಕ ವ್ರತ

ಎಲ್ಲ ಚತುರ್ಥಿ ತಿಥಿಗಳಲ್ಲಿ ಹಗಲು ನಿಶ್ಚಕ್ರ ನಿರಾಹಾರ. ರಾತ್ರಿ ಮಾತ್ರ ಭೋಜನ. ಒಂದು ವತ್ಸರ ಪೂರ್ತಿಯಾದ ಬಳಿಕ ಚಿನ್ನದ ಆನೆಯ ದಾನ. ಇದು ವಿನಾಯಕ ವ್ರತ. ಇದರ ಫಲ ಶಿವಲೋಕ ನಿವಾಸ.

## ಫಲವ್ರತ

ಚಾತುರ್ಮಾಸ್ಯ ನಾಲ್ಕು ತಿಂಗಳಲ್ಲಿ ಹಣ್ಣು ಹಂಪಲುಗಳನ್ನು ತಿನ್ನಬಾರದು. ಕಾರ್ತೀಕಮಾಸದಲ್ಲಿ ಬಂಗಾರದಿಂದ ಮಾಡಿದ ಹಣ್ಣುಗಳನ್ನೂ, ಎರಡೂ ಆಕಳುಗಳನ್ನೂ ದಾನ ನೀಡಬೇಕು. ಈ ಫಲವ್ರತದಿಂದ ವಿಷ್ಣುಲೋಕ ಲಾಭ.

## ಸೌರವ್ರತ

ಸಪ್ತಮೀ ಸಪ್ತಮೀ ಉಪವಾಸ. ವರ್ಷದ ಕೊನೆಗೆ ಬಂಗಾರದ ಕಮಲ ಅನ್ನದುಂಬಿದ ಪಾತ್ರೆ ಯಥಾಶಕ್ತಿ ಹಸುಗಳನ್ನೂ ದಾನ ಕೊಡಬೇಕು. ಈ ಸೌರವ್ರತದಿಂದ ಸೂರ್ಯಲೋಕ ಪ್ರಾಪ್ತಿ.

## ವಿಷ್ಣು ವ್ರತ

ವರ್ಷದಲ್ಲಿ ಬರುವ ಹನ್ನೆರಡು ಕೃಷ್ಣಪಕ್ಷ ಏಕಾದಶೀ ಹನ್ನೆರಡು ಶುಕ್ಲಪಕ್ಷ ಏಕಾದಶೀ ತಿಥಿಗಳಲ್ಲಿ ಉಪವಾಸಮಾಡಿ ದ್ವಾದಶೀ ಪಾರಣೆಮಾಡಿ ಯಥಾಶಕ್ತಿ ಹಸು, ಹಣ, ಬಟ್ಟೆ, ಬಂಗಾರಗಳನ್ನು ದಾನ ಕೊಟ್ಟು ಬ್ರಾಹ್ಮಣರನ್ನು ಪೂಜಿಸಬೇಕು. ಇದು ವಿಷ್ಣುವ್ರತ. ಇದರಿಂದ ಪರಮ ಪದ ಪ್ರಾಪ್ತಿ.

## ವೃಷ ವ್ರತ

ಕಾರ್ತೀಕ ಮಾಸದಲ್ಲಿ ಗೂಳಿಯನ್ನು ಬಿಟ್ಟು ಹಗಲು ಉಪವಾಸ ಮಾಡಿ ರಾತ್ರಿ ಭೋಜನ ಮಾಡಬೇಕು. ಈ ವೃಷವ್ರತದಿಂದ ಮಹಾದೇವರ ಸಾನ್ನಿಧ್ಯ ಲಾಭವಾಗುವದು.

## ಪ್ರಾಜಾಪತ್ಯ ವ್ರತ

ಪ್ರಾಜಾಪತ್ಯ ಕೃಚ್ಛ್ರ ಎಂಬ ವ್ರತವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಬೇಕು. ಮೂರು ದಿನ ಹಗಲು ಮಾತ್ರ ಊಟ. ಮುಂದಿನ ಮೂರುದಿನ ರಾತ್ರಿ ಮಾತ್ರಊಟ. ಅದರ ಮುಂದಿನ ಮೂರುದಿನ ಏನಾದರೂ ತಾನಾಗಿ ದೊರೆತರೆ ಮಾತ್ರ ಊಟ. ಕೊನೆಯ ಮೂರುದಿನ ಪೂರ್ಣ ಉಪವಾಸ. ಹೀಗೆ ಈ ಕ್ರಮದಿಂದ ಮಾಡುವ ವ್ರತಕ್ಕೆ ಪ್ರಾಜಾಪತ್ಯಕೃಚ್ಛ್ರವ್ರತಎನ್ನುತ್ತಾರೆ. ಈ ವ್ರತವನ್ನು ಯಥಾಶಕ್ತಿ ಬ್ರಾಹ್ಮಣಭೋಜನ ಮಾಡಿಸಿ ಗೋದಾನ ಕೊಟ್ಟು ಆಚರಿಸುವವರು ಶಂಕರನ ಸಾನ್ನಿಧ್ಯವನ್ನು ಸೇರುವರು.

## ತ್ರ್ಯಂಬಕ ವ್ರತ

ಪ್ರತಿ ಚತುರ್ದಶಿ ದಿನ ಹಗಲು ಉಪೋಷಣ. ರಾತ್ರಿ ಮಾತ್ರ ಭೋಜನ. ವ್ರತ ಸಮಾಪ್ತಿಯಲ್ಲಿ ವರ್ಷಾಂತ್ಯದಲ್ಲಿ ಧೇನುದಾನ. ಇದರ ಫಲ ಕೈಲಾಸ ಪ್ರವೇಶ.

## ಘೃತ ವ್ರತ

ಏಳು ದಿನ ಉಪವಾಸ. ಮರುದಿನ ಪಾರಣೆ. ಕೊನೆಯ ದಿನ ಬ್ರಾಹ್ಮಣರಿಗೆ ತುಪ್ಪ ತುಂಬಿದ ಕೊಡ ದಾನ. ಬ್ರಹ್ಮಲೋಕ ಪ್ರಾಪ್ತಿಯೇ ಈ ಘೃತವ್ರತದ ಫಲ.

## ಇಂದ್ರ ವ್ರತ

ಮಳೆಗಾಲದಲ್ಲಿ ಆವರಣವಿಲ್ಲದೆ ಬಟ್ಟಬಯಲಿನಲ್ಲಿ ಮಲಗುವದು. ಚೆನ್ನಾಗಿ ಹಾಲು ಹಿಂಡುವ ಹಸುವನ್ನು ದಾನ ಮಾಡುವದೇ ಇಂದ್ರವ್ರತ. ಇದರಿಂದ ಶಾಶ್ವತವಾದ ಇಂದ್ರಲೋಕ ನಿವಾಸ.

## ಶ್ರೇಯೋ ವ್ರತ

ತದಿಗೆಯ ದಿನ ಬೆಂಕಿಯಲ್ಲಿ ಬೇಯಿಸದೆ ಇರುವ ಪದಾರ್ಥಗಳನ್ನು ಮಾತ್ರ ತಿನ್ನುತ್ತ ವರ್ಷದ ಕೊನೆಗೆ ಆಕಳ ದಾನ ಮಾಡುವವನು ಶಂಕರನ ಸನ್ನಿಧಿಯನ್ನು ಸೇರುವನು. ಇಹಪರ ಎರಡೂ ಕಡೆಗೂ ಪುಣ್ಯಫಲ ಪ್ರದಾನ ಮಾಡುವ ಇದಕ್ಕೆ ಶ್ರೇಯೋವ್ರತ ಎಂದು ಹೆಸರು.

## ಅಶ್ವ ವ್ರತ

ಕನಿಷ್ಠ ಆರು ತೊಲೆಯ ಒಂದು ಚಿನ್ನದ ತೇರನ್ನು ಮಾಡಿಸಿ ಅದಕ್ಕೆ ಜೊತೆ ಕುದುರೆಯನ್ನೂ ಮಾಡಿಸಿ ದಾನ ಕೊಟ್ಟರೆ ಅವನು ನೂರು ಕಲ್ಪಕಾಲ ಸ್ವರ್ಗದಲ್ಲಿ ವಾಸಿಸುವನು. ಅನಂತರ ಅವನಿಗೆ ಕುಬೇರನ ಪದವಿ ದೊರಕುವದು. ಇದರ ಹೆಸರು ಅಶ್ವವ್ರತ.

## ಗಜ ವ್ರತ

ಉಪವಾಸವಿದ್ದು ಎರಡು ಆನೆಗಳನ್ನು ಕಟ್ಟಿದ ಚಿನ್ನದ ತೇರನ್ನು ದಾನ ಮಾಡಿಸಿದರೆ ಒಂದು ಕಲ್ಪಕಾಲ ಸತ್ಯಲೋಕವಾಸ. ಇದಕ್ಕೆ ಗಜವ್ರತ ಎಂದು ಹೆಸರು.

## ಸುಖವ್ರತ

ಈ ವ್ರತವು ಮುಗಿದ ಬಳಿಕ ಉಪವಾಸವನ್ನೂ ಕೂಡ ಮಾಡಿ ಗೋದಾನ ಮಾಡಿದರೆ ಯಕ್ಷರ ಅಧಿಪತ್ಯವು ದೊರಕುವದು. ಇದೇ ಸುಖವ್ರತ.

## ವರುಣವ್ರತ

ರಾತ್ರಿಯೆಲ್ಲ ನೀರಲ್ಲಿ ನಿಂತು ಬೆಳಗಾದ ಬಳಿಕ ಗೋದಾನ ಮಾಡಿದರೆ ವರುಣ ಲೋಕಪ್ರಾಪ್ತಿ.

## ಚಂದ್ರವ್ರತ

ಚಾಂದ್ರಾಯಣ ವ್ರತವನ್ನು ಮಾಡಿ ಬಂಗಾರದ ಚಂದ್ರನ ಪ್ರತಿಮೆಯನ್ನು ದಾನ ಕೊಡಬೇಕು. ಇದಕ್ಕೆ ಚಂದ್ರವ್ರತ ಎನ್ನುವರು. ಇದರಿಂದ ಚಂದ್ರಲೋಕ ನಿವಾಸ.

## ರುದ್ರ ವ್ರತ

ಜ್ಯೇಷ್ಠಮಾಸ ಅಷ್ಟಮೀ ಚತುರ್ದಶಿ ದಿನಗಳಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಧ್ಯಾನವನ್ನು ಹಗಲುಹೊತ್ತು ಪೂರ್ತಿಮಾಡಬೇಕು. ಸಾಯಂಕಾಲದಲ್ಲಿ ಪಂಚಾಮೃತವನ್ನು ಒದಗಿಸುವ ಆಕಳು ದಾನ ಮಾಡಿದರೆ ಅವನಿಗೆ ಸ್ವರ್ಗಪ್ರಾಪ್ತಿ. ಇದಕ್ಕೆ ರುದ್ರವ್ರತ ಎಂದು ಹೆಸರು.

## ಭವಾನೀ ವ್ರತ

ವರ್ಷದ ಎಲ್ಲ ತೃತೀಯಾ ದಿನಗಳಲ್ಲಿ ಮಹಾದೇವರ ಗುಡಿಗಳಲ್ಲಿ ಮೇಲುಗಟ್ಟನ್ನು ಕಟ್ಟುತ್ತ ವರ್ಷಪೂರ್ತಿಯಾದ ಬಳಿಕ ಗೋದಾನ ಮಾಡುವವರು ಶಿವನ ಸಾನ್ನಿಧ್ಯವನ್ನು ಪಡೆಯುತ್ತಾರೆ. ಇದರ ಹೆಸರು ಭವಾನೀ ವ್ರತ.

## ಪವನ ವ್ರತ

ಮಾಘಮಾಸದ ಸಪ್ತಮೀ ದಿನ ಇಡೀ ರಾತ್ರಿಯೆಲ್ಲ ಒದ್ದೆ ಬಟ್ಟೆಯಲ್ಲಿದ್ದು ಮರುದಿನ ಗೋದಾನ ಮಾಡುವವನು ಒಂದು ಕಲ್ಪಕಾಲ ಸ್ವರ್ಗದಲ್ಲಿ ವಾಸಿಸಿ ಮತ್ತೆ ರಾಜನಾಗಿ ಜನಿಸುವನು. ಇದಕ್ಕೆ ಪವನವ್ರತ ಎಂದು ಹೆಸರು.

## ಧಾಮ ವ್ರತ

ಫಾಲ್ಗುಣ ಶುಕ್ಲಪಕ್ಷ ದ್ವಾದಶಿಯಿಂದ ಮೂರು ದಿನ ಉಪವಾಸ. ಹುಣ್ಣಿಮೆಯ ತಿಥಿಯಲ್ಲಿ ಒಳ್ಳೆ ಗೃಹದಾನ ಮಾಡಿದರೆ ಸೂರ್ಯಲೋಕವು ಪ್ರಾಪ್ತವಾಗುವದು.

## ದೇವೇಂದ್ರ ವ್ರತ

ಇಡೀ ದಿನ ಉಪವಾಸವಿದ್ದು ಪ್ರಾತಃ, ಮಧ್ಯಾಹ್ನ, ಸಂಜೆ ಈ ತ್ರಿಕಾಲಗಳಲ್ಲಿಯೂ ಬ್ರಾಹ್ಮಣದಂಪತಿಗಳನ್ನು ಪೂಜೆಮಾಡಿ ಭೋಜನದಿಂದ ತೃಪ್ತಿಪಡಿಸಿ, ಭೂಷಣಗಳಿಂದ ಅಲಂಕರಿಸಿ ಗೋದಾನವನ್ನು ನೀಡಬೇಕು. ಇದರಿಂದ ಮೋಕ್ಷವು ದೊರಕುವದು.

## ಸೋಮ ವ್ರತ

ಶುಕ್ಲ ಪಕ್ಷದ ಬಿದಿಗೆ ದಿನಗಳಲ್ಲಿ ಉಪ್ಪು ತುಂಬಿದ ಪಾತ್ರೆಯನ್ನು ದಾನಮಾಡಿ ಸಂವತ್ಸರದ ಕೊನೆಯಲ್ಲಿ ಹಿಂಡುವ ಹಸುವನ್ನು ದಾನ ಕೊಡುವವನು ಕೈಲಾಸದಲ್ಲಿ ನೆಲೆಸುವನು. ಕಲ್ಪಾಂತದಲ್ಲಿ ಕುಬೇರನಾಗುವನು.

## ಮಹೇಶ್ವರವ್ರತ

ಪ್ರತಿ ತಿಂಗಳಿನ ಪ್ರಾರಂಭದ ಪ್ರತಿಪದೆ ಅಥವಾ ಪಾಡ್ಯ ತಿಥಿಯಂದು ಒಂದು ಹೊತ್ತು ಮಾತ್ರ ಊಟಮಾಡಿ ಒಂದು ವರ್ಷದ ಬಳಿಕ ಗೋರೋಚನ ಬಣ್ಣದ ಗೋವನ್ನು ದಾನ ನೀಡುವವನು ಅಗ್ನಿಲೋಕವನ್ನು ಹೊಂದುವನು. ಇದು ಮಹೇಶ್ವರವ್ರತವೆಂದು ಪ್ರಸಿದ್ಧವಾಗಿದೆ.

## ವಿಶ್ವವ್ರತ

ದಶಮೀ ದಿನ ಒಂದೇ ಹೊತ್ತು ಊಟ. ವರ್ಷದ ಕೊನೆಯಲ್ಲಿ ಹತ್ತು ಹಸುಗಳ ದಾನ ಮತ್ತು ಅಷ್ಟದಿಕ್ಪಾಲಕರಿಂದ ಕೂಡಿದ ಬಂಗಾರದ ಭೂಮಂಡಲದ ಪಟವನ್ನು ನಿರ್ಮಿಸಿ ದಾನಕೊಡಬೇಕು. ಈ ವಿಶ್ವವ್ರತವನ್ನು ಆಚರಿಸಿದವನು ಬ್ರಹ್ಮಾಂಡಕ್ಕೆ ಅಧಿಪತಿಯಾಗುವನು. ಅತ್ಯಂತ ಶ್ರೇಷ್ಠವಾದ ಈ ಅರವತ್ತು ವ್ರತಗಳ ವಿಧಿ, ವಿಧಾನ, ಪುಣ್ಯ, ಫಲ, ಪ್ರಯೋಜನ, ಪ್ರಭಾವಗಳನ್ನು ಯಾರು ಓದುವರೋ ಯಾರು ಕೇಳುವರೋ ಅವರೆಲ್ಲರೂ ನೂರು ಮನ್ವಂತರಗಳಷ್ಟು ಕಾಲ ಗಂಧರ್ವಲೋಕಕ್ಕೆ ಅಧಿಪತಿಗಳಾಗುವರು.

**ನಾರದ** :- ಪುಣ್ಯಕರವಾದ ಈ ಷಷ್ಠೀ ಅಂದರೆ ಅರವತ್ತು ವ್ರತಗಳ ವಿಧಾನವನ್ನೂ ಮಾಹಾತ್ಮ್ಯವನ್ನೂ ನಾನು ನಿನಗೆ ಹೇಳಿದೆನು. ಇದು ವಿಶ್ವಕ್ಕೆಲ್ಲ ಕ್ಷೇಮಕರ. ಇದನ್ನು ಕೇಳಬೇಕೆಂದು ನಿನಗೆ ಕುತೂಹಲ ಇದ್ದುದರಿಂದ ನಿನಗೆ ಹೇಳಿದ್ದೇನೆ. ಇಷ್ಟ ವಿಷಯವನ್ನು ಪ್ರಿಯ ಜನರಿಗೆ ಹೇಳದೇ ಮತ್ತಾರಿಗೆ ಹೇಳಬೇಕು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರೆರಡನೆಯ ಅಧ್ಯಾಯ ಮುಗಿದುದು*

—o—

**ನಂದಿಕೇಶ್ವರ ಉವಾಚ**

**''ನೈರ್ಮಲ್ಯಂ ಭಾವ ಶುದ್ಧಿಶ್ಚ ವಿನಾಸ್ನಾನಂನ ವಿದ್ಯತೇ ।**
**ತಸ್ಮಾನ್ಮನೋ ವಿಶುದ್ಧ್ಯರ್ಥಂ ಸ್ನಾನಮಾದೌ ವಿಧೀಯತೇ ॥**

**ನಂದಿಕೇಶ್ವರ** :- ಸ್ನಾನವಿಲ್ಲದೇ ನಿರ್ಮಲತೆ ಇಲ್ಲ. ಮತ್ತು ಭಾವ ಶುದ್ಧಿಯೂ ಉಂಟಾಗುವದಿಲ್ಲ; ಆದುದರಿಂದ ಮನಸ್ಸಿನ ಶುದ್ಧಿಗಾಗಿ ಮೊಟ್ಟ ಮೊದಲು ಸ್ನಾನದ ವಿಧಿಯನ್ನು ಹೇಳುತ್ತೇನೆ. ಪ್ರಾತಃಕಾಲದಲ್ಲಿ ಎಲ್ಲರೂ ಸ್ನಾನಮಾಡತಕ್ಕದ್ದು. ನದಿ, ಕೆರೆ, ಇಳಿಯುವ ಬಾವಿ ಮುಂತಾದ ಜಲಾಶಯಗಳಲ್ಲಿ ಅವಗಾಹನ ಮಾಡಿ ಅಂದರೆ ಮುಳುಗುಹಾಕಿ ಸ್ನಾನಮಾಡುವದು ಉತ್ತಮಪಕ್ಷ. ಇಂಥ ಜಲಾಶಯಗಳು ಇಲ್ಲದಿದ್ದರೆ ಬಾವಿಯಿಂದ ಸೇದಿದ ನೀರಿನಿಂದಾದರೂ ಸ್ನಾನಮಾಡಬೇಕು. ಸ್ನಾನಮಾಡುವ ನೀರನ್ನು ''ಓಂ ನಮೋ ನಾರಾಯಣಾಯ'' ಎಂಬ ಮೂಲ ಮಂತ್ರದಿಂದ ಅಭಿಮಂತ್ರಣಗೈದು ತೀರ್ಥವನ್ನಾಗಿ ಕಲ್ಪಿಸಬೇಕು. ನದೀ ಮುಂತಾದ ಜಲಾಶಯ ಗಳಲ್ಲಿ ಕೈಯಲ್ಲಿ ಪವಿತ್ರ ಧರಿಸಿ ಆಚಮನ ಮಾಡಿ ತನ್ನ ಸುತ್ತಲೂ ನಾಕುಮೊಳದ ಒಂದು ಪರಿಧಿಯನ್ನು ಬೆರಳಿನಿಂದಲೇ ನಿರ್ಮಿಸಿ ಗಂಗೆಯನ್ನು ಆವಾಹನ ಮಾಡಬೇಕು.

**''ವಿಷ್ಣೋಃ ಪಾದಪ್ರಸೂತಾಸಿ ವೈಷ್ಣವೀ ವಿಷ್ಣು ದೇವತಾ ।**
**ಪಾಹಿನಸ್ತ್ವೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ॥**

**ತಿಸ್ರಃ ಕೊಟ್ಯೋಽರ್ಧಕೋಟೀ ಚ ತೀರ್ಥಾಣಾಂ ವಾಯುರಬ್ರವೀತ್ ।**
**ದಿವಿಭುವ್ಯಂತರಿಕ್ಷೇ ಚತಾನಿತೇಸಂತಿ ಜಾಹ್ನವಿ ॥**

**ನಂದಿನೀತ್ಯೇವ ತೆ ನಾಮದೇವೇಷು ನಲಿನೀತಿಚ ।**
**ದಕ್ಷಾಪೃಥ್ವೀಚ ವಿಹಗಾ ವಿಶ್ವಕಾಯಾಽಮೃತಾ ಶಿವಾ ॥**

**ವಿದ್ಯಾಧರೀ ಸುಪ್ರಶಾಂತಾ ತಥಾ ವಿಶ್ವಪ್ರಸಾದಿನೀ।**
**ಕ್ಷೇಮಾ ಚ ಜಾಹ್ನವೀಚೈವ ಶಾಂತಾಶಾಂತಿಪ್ರದಾಯಿನೀ ॥**

**ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಪ್ರಕೀರ್ತಯೇತ್ ।**
**ಭವೇತ್ಸನ್ನಿಹಿತಾ ತತ್ರ ಗಂಗಾತ್ರಿಪಥಗಾಮಿನೀ ॥**

''ಎಲೌ, ಗಂಗೆ, ನೀನು ವಿಷ್ಣುವಿನ ಪಾದದಿಂದ ಹುಟ್ಟಿರುವೆ. ವಿಷ್ಣುವಿನ ಭಕ್ತಳಾಗಿರುವೆ. ವಿಷ್ಣುವೇ ನಿನ್ನ ಅಧಿದೇವತೆ. ಆದುದರಿಂದ ಜನ್ಮಮರಣ

ರೂಪವಾದ ಈ ಸಂಸಾರಕ್ಕೆ ಕಾರಣಭೂತವಾದ ಪಾಪವು ಬಾರದಂತೆ ನಮ್ಮನ್ನು ರಕ್ಷಿಸು. ಸ್ವರ್ಗ, ಭೂಮಿ ಮತ್ತು ಅಂತರಿಕ್ಷಗಳಲ್ಲಿ ಒಟ್ಟು ಸೇರಿ ಮೂರುವರೆ ಕೋಟಿ ಪುಣ್ಯ ತೀರ್ಥಗಳು ಎಂದು ವಾಯು ಪುರಾಣದಲ್ಲಿ ಹೇಳಿದೆ. ಅವೆಲ್ಲ ತೀರ್ಥಗಳು ನಿನ್ನಲ್ಲಿ ಸನ್ನಿಹಿತವಾಗಿರುತ್ತವೆ. ನಿನಗೆ ನಂದಿನಿ ಎಂದು ಆನಂದದಾಯಕವಾದ ಹೆಸರು ಇರುತ್ತದೆ. ದೇವತೆಗಳು ನಿನಗೆ ನಲಿನಿ ಎಂದು ಕರೆಯುತ್ತಾರೆ. ಇವಲ್ಲದೆ ದಕ್ಷಾ, ಪೃಥ್ವೀ, ವಿಹಗಾ, ವಿಶ್ವಕಾಯಾ, ಅಮೃತಾ, ಶಿವಾ, ವಿದ್ಯಾಧರೀ, ಸುಪ್ರಶಾಂತಾ, ವಿಶ್ವಪ್ರಸಾದಿನಿ, ಕ್ಷೇಮಾ, ಶಾಂತಾ, ಜಾನ್ಹವಿ, ಶಾಂತಿದಾಯನಿ ಎಂದು ಅನೇಕ ಹೆಸರುಗಳುಳ್ಳ ನೀನು ನಮ್ಮನ್ನು ರಕ್ಷಿಸು.'' ಗಂಗೆಯ ಪುಣ್ಯಕರವಾದ ಈ ನಾಮಗಳನ್ನು ಸ್ಮರಿಸಿದರೆ ಸ್ನಾನಮಾಡುವ ನೀರಿನಲ್ಲಿಯೇ ಆ ಗಂಗಾಮಾತೆಯು ಸ್ವಯಂ ಸನ್ನಿಹಿತಳಾಗುವಳು.

''ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ
ಮೃತ್ತಿಕೇ ಹರಮೇ ಪಾಪಂಯನ್ಮಯಾ ದುಷ್ಕೃತಂಕೃತಮ್ ।

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ
ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತಾ ।

ಆರುಹ್ಯ ಮಮಗಾತ್ರಾಣಿ ಸರ್ವಂಪಾಪಂಪ್ರಚೋದಯ
ಮೃತ್ತಿಕೇ ದೇಹಿನಃ ಪುಷ್ಟಿಂತ್ವಯಿ ಸರ್ವಂಪ್ರತಿಷ್ಠಿತಂ
ನಮಸ್ತೇ ಸರ್ವಲೋಕಾನಾಂ ಪ್ರಭವಾರಣಿ ಸುವ್ರತೇ ॥''

''ಭೂದೇವಿ, ರಥ, ಕುದುರೆ ಮುಂತಾದ ಚೇತನಾಚೇತನವಸ್ತುಗಳೆಲ್ಲ ಹರಿದಾಡಿ ಓಡಾಡುವ ನಿನ್ನ ಮೈ ಮೇಲೆ ಸಾಕ್ಷಾತ್ ಶ್ರೀಹರಿಯೂ ಕೂಡ ದಶಾವತಾರಗಳನ್ನೆತ್ತಿ ಓಡಾಡಿ ನಡೆದಾಡಿದ್ದಾನೆ. ಅನೇಕ ಬಾಹುಗಳುಳ್ಳ ಸಾಕ್ಷಾತ್ ಶ್ರೀಹರಿಯು ವರಾಹ ರೂಪದಿಂದ ನಿನ್ನನ್ನು ರಸಾತಳದಿಂದ ಮೇಲಕ್ಕೆ ಎತ್ತಿತಂದು ಉದ್ಧರಿಸಿದ್ದಾನೆ. ನಿನ್ನಲ್ಲಿಯ ಮಣ್ಣು ಬ್ರಹ್ಮದೇವರ ಒಂದು ದಿವ್ಯಕಾಣಿಕೆ. ಆ ಮಣ್ಣಿನಲ್ಲಿಯೇ ಈ ಸೃಷ್ಟಿಯೆಲ್ಲ ಅರಳಿದೆ. ನಾನೀಗ ನಿನ್ನನ್ನು ಮೈತುಂಬಲೇಪಿಸಿಕೊಳ್ಳುವೆ. ನನ್ನ ದೇಹದ ಮೇಲೆ ನೀನು ಏರಿ ಒಳಗಿನ ದೋಷಗಳನ್ನೆಲ್ಲ ಪರಿಹರಿಸು. ಚರಾಚರಾತ್ಮಕವಾದ ಈ ಜಗತ್ತೆಲ್ಲ ನಿನ್ನನ್ನೇ ಆಶ್ರಯಿಸಿದೆ. ಅಗ್ನಿಗೆ ಅರಣಿಯಂತೆ ನೀನು ಸರ್ವಲೋಕಗಳಿಗೂ ಉತ್ಪತ್ತಿ ಸ್ಥಾನಳಾಗಿರುವಿ. ಸುಶೀಲಳೇ, ನಿನಗೆ ನಮಸ್ಕಾರ.'' ಹೀಗೆ ಹೇಳಿ ಸ್ನಾನ ಮಾಡಿ, ಮಡಿ ಬಟ್ಟೆ ಉಟ್ಟು, ಆಚಮನ ಮಾಡಬೇಕು. ಮೈ ಮೇಲೆ ಬಿಳಿ ಪಂಚೆಯನ್ನು ಹೊದ್ದುಕೊಂಡು ಮೂರು ಲೋಕದ ಪ್ರಾಣಿಗಳೆಲ್ಲರ ಪ್ರೀತಿಗಾಗಿ ತರ್ಪಣಬಿಡಬೇಕು.

''ದೇವ, ಋಷಿ, ನಾಗ, ಗಂಧರ್ವ, ಅಪ್ಸರ, ಅಸುರ, ಸರ್ಪ, ಗರುಡ, ಮರ, ಮರಿ, ಪಕ್ಷಿ, ಜಲಚರ, ಖೇಚರ, ವಾಯುಚರ, ಪ್ರಾಣಿ, ಧರ್ಮಜೀವಿ ಮುಂತಾದ ಎಲ್ಲಬಗೆಯ ಜೀವಜಂತುಗಳು ತೃಪ್ತರಾಗಲಿ'' ಎಂಬ ಉದ್ದೇಶದಿಂದ ಈ ನೀರನ್ನು

ಕೊಡುತ್ತೇನೆ. ಎಂದು ಹೇಳಿ ನೀರು ಕೊಡಬೇಕು. ಅನಂತರ ನಿವೀತಿಯಾಗಬೇಕು. ದೇವತೆಗಳಿಗೆ ಉಪವೀತಿಯಾಗಿಯೂ ಋಷಿಮುನಿಗಳಿಗೆ ನಿವೀತಿಯಾಗಿಯೂ ತರ್ಪಣಕೊಡಬೇಕು. ''ಸನಕ, ಸನಂದ, ಸನಾತನ, ಕಪಿಲ, ವೇಢು, ಪಂಚಶಿಖ, ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಶಿಷ್ಠ, ಭೃಗು, ನಾರದ ಮುಂತಾದ ಎಲ್ಲ ದೇವರ್ಷಿಗಳೂ, ಬ್ರಹ್ಮರ್ಷಿಗಳೂ ನಾನು ಈಗ ಕೊಡುವ ನೀರಿನಿಂದ ತೃಪ್ತರಾಗಲಿ'' ಎಂದು ಹೇಳಿ ತರ್ಪಣವನ್ನು ಬಿಡಬೇಕು.

ಅನಂತರ ಜನಿವಾರವನ್ನು ಅಪಸವ್ಯ ಎಂದರೆ ಬಲಹೆಗಲಿನ ಮೇಲೆ ಹಾಯಿಸಿ ದೇಹದ ಎಡಬದಿಗೆ ಜೋತುಬಿಟ್ಟು ಎಡದ ಮಂಡಿಯನ್ನು ನೆಲದ ಮೇಲೆ ಊರಿ ಅಗ್ನಿಷ್ವಾತ್ತ, ಸೌಮ್ಯ, ಹವಿಷ್ಮಂತ ಊಷ್ಮಪ, ಸುಕಾಲ, ಬರ್ಹಿಷದ ಮುಂತಾದ ಪಿತೃಗಳು ತೃಪ್ತರಾಗಲಿ ಎಂದು ಎಳ್ಳು, ಗಂಧ, ಸಹಿತವಾದ ನೀರನ್ನು ಬಿಡಬೇಕು.

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥**

'ಧರ್ಮರಾಜ, ಮೃತ್ಯು, ಆತಂಕ, ವೈವಸ್ವತ, ಕಾಲ, ಸರ್ವಭೂತಕ್ಷಯ, ಔದುಂಬರ, ನೀಲ, ವೃಕೋದರ, ದಧ್ನ, ಪರಮೇಷ್ಠೀ, ಚಿತ್ರ, ಚಿತ್ರಗುಪ್ತ ಮುಂತಾದ ಹಲವಾರು ಹೆಸರುಗಳುಳ್ಳ ಯಮಧರ್ಮನಿಗೆ ನಮಸ್ಕಾರ ' ಎಂದು ಭಕ್ತಿಯಿಂದ ವಂದಿಸಿ ಬೆರಳಿಗೆ ದರ್ಭೆಯ ಉಂಗುರವಿಟ್ಟು ಶಾಸ್ತ್ರೋಕ್ತವಾದ ರೀತಿಯಲ್ಲಿ ಪಿತೃಗಳಿಗೆ ಅಪಸವ್ಯದಿಂದ ನೀರುಬಿಟ್ಟು ತರ್ಪಣಕೊಡಬೇಕು. ತಂದೆಕಡೆಯ ಹಾಗೂ ತಾಯಿಕಡೆಯ ಪಿತೃಗಳನ್ನು ಅವರವರ ಹೆಸರು ಗೋತ್ರಗಳನ್ನು ಉಚ್ಚರಿಸಿ 'ತೃಪ್ಯಂತು ತೃಪ್ಯಂತು' ಎಂದು ಮೂರಾವರ್ತಿ ಹೇಳಿ ನೀರು ಬಿಡಬೇಕು. ಅನಂತರ ಈ ಕೆಳಗಿನ ಮಂತ್ರವನ್ನು ಉಚ್ಚರಿಸಬೇಕು.

**''ಯೇಽಬಾಂಧವಾ ಬಾಂಧವಾ ವಾಯೇಽನ್ಯಜನ್ಮನಿ ಬಾಂಧವಾಃ**
**ತೇ ತೃಪ್ತಿಮಖಿಲಾಂ ಯಾಂತುಯಶ್ಚಾಸ್ಮತ್ತೋಽಭಿವಾಂಛತಿ ॥**

ಬಂಧುಬಳಗಳಾಗಲಿ ಆಗದಿರಲಿ ಅಥವಾ ಜನ್ಮಾಂತರದ ಬಂಧುಗಳೇ ಆಗಿರಲಿ ನಮ್ಮಿಂದ ತರ್ಪಣವನ್ನು ಅಪೇಕ್ಷಿಸುವ ಯಾರೇ ಇದ್ದರೂ ನನ್ನ ಈ ಜಲಾಂಜಲಿಯಿಂದ ತೃಪ್ತರಾಗಲಿ '' ಎಂದು ಹೇಳಿ ನೀರು ಬಿಡಬೇಕು.

---

ಜನಿವಾರವನ್ನು ಯಜ್ಞೋಪವೀತಿ, ನಿವೀತಿ, ಪ್ರಾಚೀನಾವೀತಿ ಎಂದು ಮೂರು ವಿಧವಾಗಿ ಧರಿಸುವ ಕ್ರಮವುಂಟು. ಎಡಭುಜದ ಮೇಲೆ ಜನಿವಾರ ಹಾಯಿಸಿ ಬಲತೋಳು ಬಲಹೊಟ್ಟೆಯ ಕಡೆಗೆ ವಾಲುವಂತೆ ಧರಿಸುವದು ಯಜ್ಞೋಪವೀತಿ, ಯಾವಾಗಲೂ ಅದನ್ನು ಇದೇ ರೀತಿಯಾಗಿಯೇ ಧರಿಸುವರು. ದೇವತೆಗಳಿಗೆ ತರ್ಪಣವನ್ನು ಹೀಗೆಯೇ ಕೊಡಬೇಕು. ಇದಕ್ಕೆ ವಿಪರೀತವಾಗಿ ಎಂದರೆ ಬಲಹೆಗಲಿನ ಮೇಲೆ ಜನಿವಾರದ ಎಳೆಗಳನ್ನು ಹಾಕಿ ಎಡತೋಳು ಮತ್ತು ಎಡಹೊಟ್ಟೆಯ ಕಡೆಗೆ ಜೋತಾಡುವಂತೆ ಧರಿಸಿದರೆ ಪ್ರಾಚೀನಾವೀತಿ ಅಥವಾ ಅಪಸವ್ಯ ಎನಿಸುವದು. ಶ್ರಾದ್ಧಾದಿಗಳನ್ನು ಹೀಗೆ ಅಪಸವ್ಯದಿಂದಲೇ ಮಾಡಬೇಕು. ಯಾವ ಬಾಹುಗಳತ್ತ ವಾಲದೇ ನೇರವಾಗಿ ಕೊರಳಿನಲ್ಲಿ ಹಾರದಂತೆ ಹಾಕಿಕೊಂಡರೆ ನಿವೀತಿ. ಋಷಿಗಳಿಗೆ ನಿವೀತಿಯಾಗಿಯೇ ತರ್ಪಣಕೊಡಬೇಕು.

''ನಮಸ್ತೇ ವಿಷ್ಣುರೂಪಾಯ ನಮೋವಿಷ್ಣುಮುಖಾಯ ಚ ।
ಸಹಸ್ರರಶ್ಮಯೇನಿತ್ಯಂ ನಮಸ್ತೇಸರ್ವತೇಜಸೇ ॥

ದಿವಾಕರನಮಸ್ತೇಸ್ತು ಪ್ರಭಾಕರ ನಮೋಸ್ತುತೇ ।
ಸತ್ಯದೇವ ನಮಸ್ತೇಸ್ತು ಪ್ರಸೀದಮಮಭಾಸ್ಕರ ॥

ಹೀಗೆ ಪಠಿಸಿ ಸೂರ್ಯದೇವನನ್ನು ವಂದಿಸಿ ಮೂರುಸಲ ನಿಂತಲ್ಲಿಯೇ ಪ್ರದಕ್ಷಿಣೆಹಾಕಿ ಬ್ರಾಹ್ಮಣ, ಹಸು, ಬಂಗಾರಗಳನ್ನು ಸ್ಪರ್ಶಮಾಡಿ ದೇವರ ಗುಡಿಗೆ ಹೋಗಬೇಕು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಮೂರನೆಯ ಅಧ್ಯಾಯ ಮುಗಿದುದು*



## ಪ್ರಯಾಗ ಕ್ಷೇತ್ರದ ಮಾಹಾತ್ಮೆ

ಅಧ್ಯಾಯ - ೧೦೪

**ನಂದಿಕೇಶ್ವರ ಉವಾಚ**

ಅಥ ಪರಂ ಪ್ರವಕ್ಷ್ಯಾಮಿ ಪ್ರಯಾಗಸ್ಯೋಪವರ್ಣನಂ ।
ಮಾರ್ಕಂಡೇಯೇನ ಕಥಿತಂ ಯತ್ಪುರಾ ಪಾಂಡುಸೂನವೇ॥ ॥೧॥

**ನಂದಿಕೇಶ್ವರ** :- ಇನ್ನು ಮುಂದೆ ಪ್ರಯಾಗ ಕ್ಷೇತ್ರದ ಮಹಾತ್ಮ್ಯವನ್ನು ವರ್ಣಿಸುವೆನು. ಇದನ್ನು ಪೂರ್ವದಲ್ಲಿ ಮಾರ್ಕಂಡೇಯರು ಧರ್ಮರಾಜನಿಗೆ ಹೇಳಿದ್ದರು.

ಮಹಾಭಾರತದ ಸಂಗ್ರಾಮವು ಮುಗಿದ ಬಳಿಕ ಧರ್ಮರಾಜನಿಗೆ ರಾಜ್ಯವೇನೋ ಲಭಿಸಿತು. ಆದರೆ ಆ ಮಹಾಯುದ್ಧದಲ್ಲಿ ನಡೆದ ಹಿಂಸೆ ಹಾಗೂ ಬಂಧು ಬಳಗದವರ ಮರಣವನ್ನು ನೆನೆದು ಅವನಿಗೆ ಬಹಳ ದುಃಖವಾಯಿತು. ಸೋದರರಾದ ಕೌರವರ ನಿಧನ ದುಃಖದಿಂದ ಮರಗಿ ಸೊರಗ ತೊಡಗಿದನು. ಚಿಂತೆ ಅವನ ಅಂತರಂಗವನ್ನು ಕೊರೆಯುತ್ತಿತ್ತು. ''ದುರ್ಯೋಧನ ಹನ್ನೊಂದು ಅಕ್ಷೋಹಿಣೀ ಸೈನ್ಯಕ್ಕೆ ಅಧಿಪತಿ ಯಾಗಿದ್ದರೂ ತನ್ನ ನೂರು ಜನ ಸಹೋದರರು ಮತ್ತು ಭೀಷ್ಮ ದ್ರೋಣ ಕರ್ಣ ಮುಂತಾದ ಮಹಾರಥಿಕ ವೀರವೃಂದ ಸಹಿತವಾಗಿಯೇ ಹತನಾದನು. ಮಹಾಶೂರರಾದ ಅಸಂಖ್ಯ ರಾಜಮಹಾರಾಜರೂ ಸಾವನ್ನಪ್ಪಿದರು. ಇಷ್ಟೆಲ್ಲ ಬಂಧು, ಮಿತ್ರ, ಗುರು, ಹಿರಿಯರನ್ನು ಕೊಂದು ಗಳಿಸಿದ ಈ ರಾಜ್ಯ, ಈ ಭೋಗ, ಈ ಐಶ್ವರ್ಯಗಳನ್ನೆಲ್ಲ ತೆಗೆದುಕೊಂಡು ಏನು ಮಾಡುವದು ! ನಮ್ಮ ಈ ಸ್ವಾರ್ಥ ಬುದ್ಧಿಗೆ ಧಿಕ್ಕಾರವಿರಲಿ. ಇಷ್ಟೆಲ್ಲ ಆತ್ಮೀಯರನ್ನು ಕೊಂದು ನಾವು ಬದುಕಿಯಾದರೂ ಏನು ಪ್ರಯೋಜನ ! '' ಎಂದು ಧರ್ಮರಾಜನು ವಿಲಪಿಸಿ ಮೂರ್ಛೆಹೋದನು. ಕೆಲ ಹೊತ್ತಿನ ಮೇಲೆ ಮತ್ತೆ ಚೇತರಿಸಿಕೊಂಡು ಎದ್ದು ವಿಚಾರಿಸಿದನು. '' ಈ ನಾನು ಮಾಡಿದ ಈ ಬಂಧು ಹತ್ಯಾಪಾಪಕ್ಕೆ ಯಾವ

ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿ ! ಯಾವ ನಿಯಮವ್ರತಗಳನ್ನು ಅನುಷ್ಠಾನ ಮಾಡಲಿ ? ಯಾವ ತೀರ್ಥಯಾತ್ರೆ ಕೈಕೊಳ್ಳಲಿ ? ಇದನ್ನು ಕೇಳುವದಾದರೂ ಯಾರನ್ನು ? ಶ್ರೀಕೃಷ್ಣನನ್ನು ಕೇಳಬೇಕೆಂದರೆ ಈ ಸಂಹಾರ ಸತ್ರಕ್ಕೆಲ್ಲ ಅವನೇ ಸೂತ್ರಧಾರ. ಅವನಿಂದಲೇ ಈ ಮಹಾಭಾರತದ ಹಿಂಸಾಕಾಂಡ ನಡೆದದ್ದು. ಅವನನ್ನೆಂತು ಕೇಳುವದು ?

ಧೃತರಾಷ್ಟ್ರನನ್ನು ಕೇಳಬೇಕೆಂದರೆ ಅವನ ನೂರು ಮಕ್ಕಳನ್ನೆಲ್ಲ ನಾವೇ ಕೊಂದು ಹಾಕಿದ್ದೇವೆ.'' ಹೀಗೆ ಶೋಕ ಸಂತಾಪ ಚಿಂತೆಗಳಿಂದ ಆಕ್ರಾಂತನಾಗಿ ಧರ್ಮರಾಜನು ರೋದಿಸುವದನ್ನು ಕಂಡು ಉಳಿದ ಭೀಮಾರ್ಜುನ, ನಕುಲ, ಸಹದೇವಾದಿ ಪಾಂಡವರೂ ಅಳತೊಡಗಿದರು. ಕುಂತಿ, ದ್ರೌಪದೀ ಮುಂತಾದ ಪಾಂಡವ ಮಹಿಳೆಯರೂ ತಮ್ಮ ತಮ್ಮ ಪುತ್ರ ಬಂಧು ಬಳಗದವರನ್ನು ನೆನೆದು ನೆಲದ ಮೇಲೆ ಬಿದ್ದು ವಿಲಪಿಸಹತ್ತಿದರು.

ಪಾಂಡವ ಕುಟುಂಬದ ಈ ದುಃಖ ಪ್ರಲಾಪದ ಸಮಾಚಾರ ಕಾಶಿಯಲ್ಲಿರುವ ಮಾರ್ಕಂಡೇಯ ಋಷಿಗಳ ಕಿವಿಗೆ ಬಿದ್ದಿತು. ಕೂಡಲೇ ಅವರು ಕಾಶೀಕ್ಷೇತ್ರದಿಂದ ಹಸ್ತಿನಾವತಿಯಲ್ಲಿಯ ಪಾಂಡವರ ಅರಮನೆಗೆ ದಯಮಾಡಿಸಿ ಮಹಾದ್ವಾರದ ಬಳಿಗೆ ಬಂದು ನಿಂತರು. ದ್ವಾರಪಾಲಕನು ಈ ಸಮಾಚಾರವನ್ನು ತಿಳಿಸಿದ ಕೂಡಲೇ ಧರ್ಮರಾಜನು ಸ್ವಯಂ ಎದ್ದು ಮಹಾ ಮುನಿಗಳ ಸ್ವಾಗತಕ್ಕಾಗಿ ಬಾಗಿಲಬಳಿ ಬಂದು ವಿನಯದಿಂದ ವಂದಿಸಿ ಸ್ವಾಗತನೀಡಿ ನುಡಿದನು. ''ಮಹಾ ಮುನಿಗಳಿಗೆ ಸುಸ್ವಾಗತ. ಮಹಾನುಭಾವರಿಗೆ ವಂದನೆ. ಇಂದು ತಮ್ಮ ಆಗಮನದಿಂದ ನಮ್ಮೆಲ್ಲರ ಜನ್ಮವು ಸಾರ್ಥಕ. ನಮ್ಮ ಕುಲವೇ ಇಂದು ಉದ್ಧೃತ. ನಮ್ಮ ಹಿಂದಿನ ಪಿತೃಗಳೆಲ್ಲರೂ ಇಂದು ತುಷ್ಟರು. ತಮ್ಮ ದರ್ಶನದಿಂದ ನಮ್ಮ ಜೀವನವೇ ಪಾವನ.''

**ನಂದಿಕೇಶ್ವರ** :- ಹೀಗೆ ನುಡಿದು ಮಹಾತ್ಮನಾದ ಧರ್ಮರಾಜನು ಮಾರ್ಕಂಡೇಯ ಮಹಾಮುನಿಗಳನ್ನು ಸಿಂಹಾಸನದ ಮೇಲೆ ಕೂಡಿಸಿ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಸತ್ಕರಿಸಿದನು. ಇದರಿಂದ ಅತ್ಯಂತ ಪರಿತುಷ್ಟನಾದ ಆ ಋಷಿಪುಂಗವನು '' ರಾಜನೇ, ನೀನು ಏಕೆ ಶೋಕಮಾಡುತ್ತಲಿರುವೆ ? ನಿನಗೆ ಬಂದ ಬಾಧೆ ಏನು ? ನೀನೇಕೆ ಇಷ್ಟು ಪರಿ ಹಲಬುತ್ತಲಿರುವಿ ? ಇದೆಲ್ಲವನ್ನೂ ನನಗೆ ಬೇಗ ಹೇಳು. ನಿನಗೆ ಬಂದ ಕಷ್ಟನಷ್ಟಗಳನ್ನೂ ಕೇಡುಪೀಡೆಗಳನ್ನೂ ನನಗೆ ಕೂಡಲೇ ತಿಳಿಸು'' ಎಂದು ಹೇಳಿದರು.

**ಧರ್ಮರಾಜ** :- ಪೂಜ್ಯರೇ, ಕೌರವರಿಂದ ರಾಜ್ಯವನ್ನು ತೆಗೆದುಕೊಳ್ಳಲಿಕ್ಕಾಗಿ ನಾವು ನಡೆಸಿದ ಯುದ್ಧ. ಅದರಲ್ಲಿ ಆದ ಹಿಂಸೆ, ಬಂಧುಬಳಗದವ ಸಾವು, ನೋವು, ಸರ್ವನಾಶ ಮುಂತಾದವುಗಳನ್ನೆಲ್ಲ ನೋಡಿ ನನಗೆ ಸಂತಾಪವಾಗಿ ಅಂತರಂಗವನ್ನೆಲ್ಲ ಸುಡುತ್ತಲಿದೆ.

**ಮಾರ್ಕಂಡೇಯ** :- ಮಹಾರಾಜ, ಕ್ಷತ್ರಿಯಧರ್ಮದ ವ್ಯವಸ್ಥೆ ಹೀಗಿದೆ ಕೇಳು. ರಣರಂಗದಲ್ಲಿ ಹೋರಾಡುವದು ಕ್ಷತ್ರಿಯನ ಕರ್ತವ್ಯ. ಆ ಕರ್ತವ್ಯ

ಕರ್ಮವನ್ನು ಅವನು ಸ್ವಧರ್ಮ ಎಂದು ನೆರವೇರಿಸುವಾಗ ಅನಿವಾರ್ಯವಾಗಿ ಹಿಂಸೆ, ಹತ್ಯೆಗಳುಂಟಾದರೂ ಅದರಿಂದ ಅವನಿಗೆ ಪಾಪಲೇಪವಿಲ್ಲ. ಸಾಮಾನ್ಯ ಕ್ಷತ್ರಿಯನಿಗೆ ಯುದ್ಧದಲ್ಲಿಯ ಹಿಂಸೆಯಿಂದ ಪಾಪವಿಲ್ಲದ ಮೇಲೆ ಶ್ರೀಕೃಷ್ಣನ ಆದೇಶದಿಂದ ದುಷ್ಟ ನಿಗ್ರಹಕ್ಕಾಗಿ ಭಗವದ್ವೇಷಿಗಳನ್ನು ಹಿಂಸಿಸಿ ಸಂಹರಿಸಿದ ನಿಮಗಂತೂ ಪಾಪದ ಪ್ರಸಕ್ತಿಯೇ ಇಲ್ಲ. ಇದೊಂದು ಸ್ವಧರ್ಮಾ-ಚರಣೆ ಮಾತ್ರ. ಇದು ಪಾಪ ಎಂಬ ವಿಚಾರವನ್ನೇ ಮನಸ್ಸಿನಿಂದ ತೆಗೆದುಹಾಕು.''

ಆಗ ಧರ್ಮರಾಜನು ವಿನಯದಿಂದ ಮಹಾಮುನಿಗಳಿಗೆ ಬಾಗಿ ವಂದಿಸಿ ''ಪೂಜ್ಯರೇ, ಹಾಗಾದರೆ ಮಾನವನ ಸಕಲ ವಿಧವಾದ ಪಾಪಗಳೂ ಪರಿಹಾರವಾಗಲು ಏನಾದರೂ ಉಪಾಯವಿದ್ದರೆ ತಿಳಿಸಿರಿ. ನೀವು ಮೂರುಲೋಕದ ವಿಷಯಗಳನ್ನೆಲ್ಲ ಅರಿತವರು. ಪಾಪ ಪರಿಹಾರದ ಮಾರ್ಗವನ್ನು ತಮ್ಮ ಮುಖದಿಂದಲೇ ಕೇಳಬೇಕೆಂದು ನನಗೆ ಆಸೆ. ಸಂಗ್ರಹವಾಗಿ ತಿಳಿಸಿರಿ.'' ಎಂದು ಪ್ರಶ್ನೆಮಾಡಿದನು. ಧರ್ಮರಾಜನ ಈ ಪ್ರಶ್ನೆಗೆ ಮಾರ್ಕಂಡೇಯ ಮಹರ್ಷಿಗಳು ''ಶೂರನಾದ ಅರಸನೇ, ಸರ್ವ ಪಾಪಗಳನ್ನೂ ಪರಿಹರಿಸುವ ಒಂದೇ ಒಂದಾದ ಉಪಾಯವೆಂದರೆ ಪ್ರಯಾಗ ಕ್ಷೇತ್ರಯಾತ್ರೆ. ಪುಣ್ಯಜೀವಿಗಳಾದ ಮಾನವರು ಪ್ರಯಾಗಕ್ಷೇತ್ರಕ್ಕೆ ಪ್ರಯಾಣ ಮಾಡಿದರೆ ಸರ್ವವಿಧವಾದ ಪಾತಕಗಳೂ ನಾಶವಾಗುವವು'' ಎಂದು ಹೇಳಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾ ನಾಲ್ಕನೆಯ ಅಧ್ಯಾಯ ಮುಗಿದುದು*



## ಪ್ರಯಾಗ ಮಾಹಾತ್ಮೆ

**ಅಧ್ಯಾಯ - ೧೦೫**

**ಯುಧಿಷ್ಠರ ಉವಾಚ**

**''ಭಗವನ್ ಶ್ರೋತುಮಿಚ್ಛಾಮಿ ಪುರಾಕಲ್ಪೇಯಥಾಸ್ಥಿತಮ್**
**ಬ್ರಹ್ಮಣಾ ದೇವಮುಖ್ಯೇನ ಯಥಾವತ್ಕಥಿತಂ ಮುನೇ ॥''**

ಯುಧಿಷ್ಠಿರ - ದೇವಗಣದಲ್ಲಿ ಅತ್ಯಂತ ಪ್ರಮುಖರಾದ ಬ್ರಹ್ಮದೇವರು ನಿರೂಪಿಸಿದ ಪೂರ್ವಕಲ್ಪದ ಯಥಾವತ್ ವೃತ್ತಾಂತವನ್ನು ತಮ್ಮಿಂದ ಕೇಳಬೇಕೆಂದು ಬಯಸಿದ್ದೇನೆ. ದಯವಿಟ್ಟು ತಿಳಿಸಬೇಕು. ಪ್ರಯಾಗಕ್ಷೇತ್ರದ ಯಾತ್ರೆಯನ್ನು ಹೇಗೆ ಮಾಡಬೇಕು ? ಅದರಿಂದ ಬರುವ ಫಲವೇನು ? ಅಲ್ಲಿ ಸ್ನಾನಮಾಡುದರಿಂದ ಎಂಥ ಪುಣ್ಯ ? ಅಲ್ಲಿ ಮರಣ ಹೊಂದಿದವರಿಗೆ ಯಾವ ಗತಿಯಾಗುವದು ? ಅಲ್ಲಿಯೇ ವಾಸ ಮಾಡುವವರಿಗೆ ಎಂಥ ಫಲವುಂಟಾಗುವದು ? ಇದೆಲ್ಲವನ್ನೂ ಕೇಳಬೇಕೆಂದು ನನಗೆ ಕುತೂಹಲ. ತಾವು ನಿರೂಪಿಸಬೇಕು.

**ಮಾರ್ಕಂಡೇಯ** :- ಹಿಂದೆ ಬ್ರಹ್ಮದೇವರು ಬ್ರಹ್ಮವೃಂದದ ಎದುರು ಪ್ರಯಾಗ ಮಹಿಮೆಯನ್ನು ಹೇಳುವಾಗ ನಾನೂ ಕೇಳಿದೆನು. ಅದನ್ನೇ ನಿನಗೆ ಈಗ

ತಿಳಿಸುತ್ತೇನೆ ಕೇಳು. ಪ್ರಯಾಗತೀರ್ಥದಿಂದ ಪ್ರತಿಷ್ಠಾನತೀರ್ಥದವರೆಗೂ ಪ್ರಯಾಗ ಪಟ್ಟಣದಿಂದ ವಾಸುಕಿಹ್ರದದವರೆಗೂ ಇರುವ ಪ್ರದೇಶಕ್ಕೆ ಪ್ರಜಾಪತಿಕ್ಷೇತ್ರ ಎನ್ನುವರು. ಅಲ್ಲಿ ಕಂಬಲ, ಅಶ್ವತರ ಎಂಬ ಹಾವುಗಳು ಹರಿದಾಡುತ್ತವೆ. ಹರವಾದ ವಿಪುಲಬೇರು ಬಡ್ಡೆಗಳುಳ್ಳ ಒಂದು ಪುನ್ನಾಗವೃಕ್ಷವೂ ಇದೆ ಅಲ್ಲಿ. ಇಲ್ಲಿ ಸ್ನಾನ ಮಾಡಿದವರು ಸ್ವರ್ಗವನ್ನು ಹೊಂದುವರು. ಇಲ್ಲಿ ಮೃತರಾದವರಿಗೆ ಮತ್ತೆ ಹುಟ್ಟುಇಲ್ಲ. ಬ್ರಹ್ಮಾದಿ ದೇವತೆಗಳೆಲ್ಲರೂ ಇಲ್ಲಿ ಈ ಕ್ಷೇತ್ರವನ್ನು ರಕ್ಷಿಸುತ್ತಿರುವರು. ಈ ಪ್ರಜಾಪತಿಕ್ಷೇತ್ರದಲ್ಲಿ ರಾಶಿರಾಶಿ ಪಾಪಗಳನ್ನು ಪರಿಹರಿಸುವ ಅಸಂಖ್ಯ ತೀರ್ಥಗಳು ಇರುತ್ತವೆ. ನೂರಾರು ವರ್ಷಗಳಾದರೂ ಆ ಎಲ್ಲ ತೀರ್ಥಗಳ ಮಹಿಮೆಯನ್ನು ಬಣ್ಣಿಸಲು ಸಾಧ್ಯವಿಲ್ಲ. ಆದರೂ ಈ ಪ್ರಯಾಗಕ್ಷೇತ್ರದ ಮಹಿಮೆಯನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ ಕೇಳು.

ಅರವತ್ತು ಸಾವಿರ ಬಿಲ್ಲಾಳುಗಳು ನಿಂತು ಈ ದೇವಗಂಗೆಯನ್ನು ಇಲ್ಲಿ ಕಾಯುತ್ತಿರುವರು. ಏಳು ಕುದುರೆಗಳು ಕೂಡಿ ಎಳೆಯುವ ಹೊಂದೇರಿನಲ್ಲಿ ಕುಳಿತು ಸೂರ್ಯದೇವನು ಯಮುನಾನದಿಯನ್ನು ಇಲ್ಲಿ ರಕ್ಷಿಸುತ್ತಿದ್ದಾನೆ. ಇದರಂತೆ ದೇವೇಂದ್ರನೂ, ವಿಷ್ಣುವೂ ಈ ಕ್ಷೇತ್ರಪಾಲಕರಾಗಿದ್ದಾರೆ. ಕೈಯಲ್ಲಿ ತ್ರಿಶೂಲ ಹಿಡಿದು ಶಂಕರನು ಇಲ್ಲಿಯ ಅಕ್ಷಯಪಟವನ್ನು ಕಾಯುತ್ತಿದ್ದಾನೆ. ಕೆಟ್ಟಕೆಲಸ,ಮಾಡುವ ಮಹಾಪಾಪಿಗಳಿಗೆ ಈ ಪ್ರಯಾಗ ಕ್ಷೇತ್ರದಲ್ಲಿ ಪ್ರವೇಶವೇ ದೊರಕುವದಿಲ್ಲ. ಕಿಂಚಿತ್ ಪಾಪಮಾಡಿದ ಜನರ ಪಾಪಗಳೆಲ್ಲವೂ ಈ ತೀರ್ಥದ ಸ್ಮರಣೆಯಿಂದಲೇ ನಾಶವಾಗುತ್ತವೆ. ಈ ತೀರ್ಥದ ಕೇವಲ ನೋಟವೇ ಸಾಕು ಪಾಪ ಪರಿಹಾರಕ್ಕೆ. ಇದರ ಹೆಸರನ್ನು ಉಚ್ಚರಿಸಿದರಂತೂ ಪಾಪಗಳೆಲ್ಲವೂ ಹೇಳಿಹೆಸರಿಲ್ಲದೇ ಹೊರಟು ಹೋಗುವವು. ಈ ತೀರ್ಥದ ತಡಿಯಡಿಯ ಮಣ್ಣನ್ನು ಮೈಗೆ ಬಳಿದುಕೊಂಡರೆ ಕಲುಷರಾಶಿಯೆಲ್ಲವೂ ಕರಗಿಹೋಗುವದು. ಈ ಪ್ರಯಾಗಕ್ಷೇತ್ರದ ಪಂಚಕುಂಡಗಳ ನಟ್ಟನಡುವೆ ಭಾಗೀರಥಿಯು ಶೋಭಿಸುವಳು. ಸಾವಿರಾರು ಯೋಜನ ದೂರದಲ್ಲಿದ್ದವರು ಗಂಗೆಯನ್ನು ನೆನೆದರೇ ಸಾಕು. ಅವರು ಎಷ್ಟೇ ಪಾಪ ಮಾಡಿದ್ದರೂ ದಿವ್ಯಗತಿಯನ್ನು ಹೊಂದುವರು.

ಗಂಗೆಯ ನಾಮೋಚ್ಚಾರಣೆಮಾಡಿದಮಾತ್ರಕ್ಕೆ ಬೆಟ್ಟದಷ್ಟಿದ್ದರೂ ಪಾಪರಾಶಿಗಳೆಲ್ಲ ಸುಟ್ಟುಹೋಗುವವು. ಅವಳನ್ನು ಕಂಡಮಾತ್ರಕ್ಕೆ ಕಲ್ಯಾಣವಾಗುವದು. ಅವಳಲ್ಲಿ ಮುಳುಗುಹಾಕಿ ಸ್ನಾನಮಾಡಿ ನೀರು ಕುಡಿದರಂತೂ ಹಿಂದು ಮುಂದೆ ಏಳುಕುಲ ಉದ್ಧಾರ. ಸತ್ಯವನ್ನು ನುಡಿಯುವ, ಧರ್ಮಮಾರ್ಗದಲ್ಲಿ ನಡೆಯುವ ಕೋಪವನ್ನು ಗೆದ್ದ, ಅಹಿಂಸಾವ್ರತದಿಂದ ಇದ್ದ, ಗೋ ಬ್ರಾಹ್ಮಣರಿಗೆ ಹಿತಮಾಡುವ, ತತ್ವಜ್ಞಾನವುಳ್ಳ ಮನುಷ್ಯನು ಗಂಗಾ ಯಮುನಾ ಸಂಗಮತೀರ್ಥದಲ್ಲಿ ಸ್ನಾನಮಾಡಿದರೆ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಅವನು ಅಪೇಕ್ಷಿಸಿದ ಕಾಮನೆಗಳೆಲ್ಲವೂ ಪೂರ್ಣವಾಗುತ್ತವೆ. ಸಕಲ ದೇವತೆಗಳೂ ಕೂಡಿ ರಕ್ಷಿಸುತ್ತಲಿರುವ ಈ ಪ್ರಯಾಗತೀರ್ಥಕ್ಕೆ ಬಂದು ಬ್ರಹ್ಮಚಾರಿಯು ಒಂದು ತಿಂಗಳವರೆಗೆ ವಾಸಿಸಬೇಕು.

ಪಿತೃಗಳಿಗೂ, ದೇವತೆಗಳಿಗೂ ಈ ತೀರ್ಥದ ಜಲದಿಂದ ತರ್ಪಣಕೊಡಬೇಕು. ಅದರಿಂದ ಎಲ್ಲಿಯೇ ಹೋದರೂ, ಯಾವ ಜನ್ಮದಲ್ಲಿಯೇ ಹುಟ್ಟಿದ್ದರೂ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವವು.

ಸೂರ್ಯಪುತ್ರಿಯಾದ ಯಮುನೆಯು ನದೀರೂಪದಿಂದ ಈ ಕ್ಷೇತ್ರದಲ್ಲಿ ಗಂಗೆಯೊಂದಿಗೆ ಸಂಗಮಸಿ ಮೂರುಲೋಕಗಳಲ್ಲಿ ಪ್ರಸಿದ್ಧಳಾಗಿದ್ದಾಳೆ. ಪೂಜ್ಯನಾದ ಪರಮೇಶ್ವರನು ಇಲ್ಲಿ ಅನುದಿನವೂ ಪ್ರತ್ಯಕ್ಷನಾಗಿ ನೆಲೆಸಿದ್ದಾನೆ. ಪವಿತ್ರವಾದ ಈ ಪ್ರಯಾಗಕ್ಷೇತ್ರನಿವಾಸವು ಮಾನವರಿಗೆ ಲಭಿಸುವದು ಕಷ್ಟ. ದೇವತೆಗಳು ಗಂಧರ್ವ, ಋಷಿ, ಸಿದ್ಧ, ಚಾರಣ ಮುಂತಾದವರೆಲ್ಲರೂ ಹಿಂದೆ ಈ ಸಂಗಮ ತೀರ್ಥದಲ್ಲಿ ಸ್ನಾನಪಾನಾದಿಗಳನ್ನು ಮಾಡಿದ್ದರಿಂದಲೇ ಈಗ ಸ್ವರ್ಗ ಸುಖವನ್ನು ಅನುಭವಿಸುತ್ತಿದ್ದಾರೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಒಂದುನೂರೈದನೆಯ ಅಧ್ಯಾಯ ಮುಗಿದುದು*



## ಪ್ರಯಾಗ ಮಹಾತ್ಮೆ

**ಅಧ್ಯಾಯ - ೧೦೬**

**ಮಾರ್ಕಂಡೇಯ ಉವಾಚ**

**''ಶ್ರುಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ಚ ।**
**ಯಚ್ಛ್ರುತ್ವಾ ಸರ್ವಪಾಪೇಭ್ಯೋಮುಚ್ಯತೇನಾತ್ರಸಂಶಯಃ ॥''**

**ಮಾರ್ಕಂಡೇಯ :-** ಧರ್ಮರಾಜ, ಪ್ರಯಾಗಕ್ಷೇತ್ರದ ಮಹಿಮೆ ಇಷ್ಟಕ್ಕೇ ಮುಗಿದಿಲ್ಲ. ಇನ್ನೂ ಉಂಟು. ಹೇಳುತ್ತೇನೆ ಕೇಳು. ಈ ಕ್ಷೇತ್ರ ಮಾಹಾತ್ಮ್ಯದ ಶ್ರವಣದಿಂದ ಸಕಲ ಪಾಪಗಳೂ ತೊಲಗಿ ಹೋಗುತ್ತವೆ. ಇದರಲ್ಲಿ ಸಂಶಯವೇ ಇಲ್ಲ. ಉಲ್ಬಣರೋಗದಿಂದ ಬಳಲುವವರಿಗೂ, ದರಿದ್ರರಿಗೂ, ದೃಢನಿಶ್ಚಯವುಳ್ಳವರಿಗೂ ದೇಹತ್ಯಾಗ ಮಾಡಲಿಕ್ಕೆ ಈ ಸ್ಥಳವು ಅತ್ಯಂತ ಯೋಗ್ಯವಾಗಿದೆ. ಗಂಗಾ, ಯಮುನಾ ನದಿಗಳ ಸಂಗಮಸ್ಥಳದಲ್ಲಿ ಪ್ರಾಣಬಿಟ್ಟ ರೋಗಿ, ಅನಾಥ, ಅಥವಾ ಮುದುಕರು ಸೂರ್ಯನಂತೆ ಹೊಳೆಯುವ ಬಂಗಾರದ ವಿಮಾನಗಳಲ್ಲಿ ಕುಳಿತು ಅಪ್ಸರೆಯರೊಂದಿಗೆ ಸ್ವರ್ಗಸುಖವನ್ನು ಅನುಭವಿಸುವರು. ಅವರ ಮನೋರಥಗಳೆಲ್ಲವೂ ಪೂರ್ಣವಾಗುವವು. ಬಗೆ ಬಗೆಯ ಹರಳು, ರತ್ನಕೆತ್ತಿ ಕಟ್ಟಿದ ವಿಮಾನದಲ್ಲಿ ಸುರಪುರದ ಪ್ರಯಾಣ, ವಿಹಾರಮಂದಿರಗಳಲ್ಲಿ ಅಪ್ಸರಾಂಗನೆಯರ ದಿವ್ಯಸಂಗೀತ, ನೃತ್ಯ, ವಿಲಾಸಗಳನ್ನು ನೋಡುತ್ತ ಬಯಸಿದ ಭೋಗಸುಖಗಳನ್ನು ಅನುಭವಿಸುವರು.

ಅವರ ಪೂರ್ವಜನ್ಮದ ವೃತ್ತಾಂತಗಳೆಲ್ಲವೂ ಮರೆತುಹೋಗುವಷ್ಟು ಕಾಲ ಸ್ವರ್ಗದಲ್ಲಿ ಸಕಲವಿಧವಾದ ದೇವಭೋಗಭಾಗ್ಯಗಳನ್ನು ಯಥೇಚ್ಛವಾಗಿ ಅನುಭವಿಸಿ ಕೊನೆಗೆ ಪುಣ್ಯವೆಲ್ಲ ಕ್ಷೀಣವಾದ ಬಳಿಕ ಮತ್ತೆ ನೆಲಕ್ಕೆ ಇಳಿದು ಬರುವರು. ಮುತ್ತು,

ರತ್ನ, ಹೊನ್ನು, ಹೊಲಮನೆ ಮತ್ತು ಸರ್ವಪ್ರಕಾರದ ಭಾಗ್ಯ, ಭೋಗ, ವೈಭವಗಳಿಂದ ಒಡಗೂಡಿದ ಒಳ್ಳೇ ಸಿರಿವಂತರ ಮನೆಯಲ್ಲಿಯೇ ಹುಟ್ಟುವರು. ಜನ್ಮಾಂತರದ ಸಂಸ್ಕಾರಬಲದಿಂದ ಅದೇ ಪ್ರಯಾಗಕ್ಷೇತ್ರವನ್ನು ಸ್ಮರಿಸಿಕೊಂಡು ಮತ್ತೆ ಗಂಗಾ ಯಮುನಾ ಸಂಗಮಸ್ಥಳಕ್ಕೆ ಬರುವರು. ಅದರ ಸ್ನಾನಪಾನದಿಂದ ಮತ್ತೆ ಅವರಿಗೆ ಇನ್ನೂ ಹೆಚ್ಚಿನ ಸದ್ಗತಿಯಾಗುವದು. ಅಲ್ಲಿ ಸಾಕ್ಷಾತ್ತಾಗಿ ಹೋಗಿ ಸ್ನಾನಮಾಡಲಿಕ್ಕೆ ಆಗದಿದ್ದವರು ಇದ್ದಲ್ಲಿ ಕಾಡು, ನಾಡು, ಬೀಡು, ದೇಶ, ವಿದೇಶ, ಮನೆ, ಬಯಲು, ಜೇಡಿ ಎಲ್ಲಿಯೇ ಇರಲಿ, ಸಾಯುವಾಗ ಪ್ರಯಾಗಕ್ಷೇತ್ರವನ್ನು ಸ್ಮರಿಸಿದರೆ ಬ್ರಹ್ಮಲೋಕವನ್ನು ಪಡೆಯುತ್ತಾನೆ. ಇದು ಋಷಿಗಳ ಮತ.

ಈ ಸಂಗಮಸ್ಥಳದಲ್ಲಿ ಗೋದಾನ, ಭೂದಾನ, ಬಂಗಾರ, ಮಣಿ, ಮುತ್ತು ಮುಂತಾದವುಗಳನ್ನು ದಾನವಾಗಿ ಸ್ವೀಕರಿಸಿದವರು ಅವುಗಳನ್ನು ವಿವಾಹ, ಉಪನಯನ, ಅಥವಾ ದೇವತಾಕಾರ್ಯ, ಪಿತೃಕಾರ್ಯಗಳಲ್ಲಿ ತಿರುಗಿ ಬೇರೊಬ್ಬರಿಗೆ ದಾನಕೊಟ್ಟುಬಿಡಬೇಕು. ಅಂದರೆ ಅವನ ತೀರ್ಥಯಾತ್ರೆಯು ಸಾರ್ಥಕವಾಗುವದು. ಪುಣ್ಯತೀರ್ಥ ಪುಣ್ಯಕ್ಷೇತ್ರಗಳಲ್ಲಿ ದಾನವನ್ನು ಎಂದೂ ಸ್ವೀಕರಿಸಬಾರದು. ಅನಿವಾರ್ಯವಾಗಿ ಸ್ವೀಕರಿಸಿದರೆ ಅದನ್ನು ಯೋಗ್ಯ ಸಂದರ್ಭದಲ್ಲಿ ಯೋಗ್ಯ ವ್ಯಕ್ತಿಗೆ ದಾನಕೊಟ್ಟುಬಿಡಬೇಕು. ಈ ಸಂಗಮ ಕ್ಷೇತ್ರದಲ್ಲಿ ಚಿನ್ನದ ಕೊಂಬು, ಬೆಳ್ಳಿಯ ಗೊರಸು, ರೇಷಿಮೆಯ ಬಟ್ಟೆ ಉಡಿಸಿ, ತೊಡಿಸಿ, ಅಲಂಕರಿಸಿದ ಕಪಿಲಗೋವನ್ನು ವೇದಪಾರಂಗತನೂ ಧರ್ಮಿಷ್ಠನೂ ಆದ ಬ್ರಾಹ್ಮಣನಿಗೆ ವಸ್ತ್ರಾಭರಣಗಳೊಂದಿಗೆ ದಾನನೀಡಬೇಕು. ಆ ಹಸುವಿನ ಮೈಯಲ್ಲಿದ್ದ ಕೂದಲಿನಷ್ಟು ಸಾವಿರ ವರ್ಷ ಅವನು ಸ್ವರ್ಗಲೋಕದಲ್ಲಿ ನೆಲೆಸಿ ನಲಿಯುವನು. ಹಾಲುಹಿಂಡದ ಹಿಂಡು ಹಸುಗಳನ್ನು ದಾನಕೊಡುವದಕ್ಕಿಂತ ಚೆನ್ನಾಗಿ ಹಿಂಡುವ ಒಂದು ಹಸುವನ್ನು ದಾನ ಕೊಟ್ಟರೂ ಸಾಕು. ಆ ಒಂದೇ ಹಸು ಇವನನ್ನು ಸಕುಟುಂಬ ಸಪರಿವಾರ ಸ್ವರ್ಗಕ್ಕೆ ಕರೆದೊಯ್ಯಲಿಕ್ಕೆ ಸಮರ್ಥವಾಗುತ್ತದೆ. ಸರ್ವದಾನಗಳಲ್ಲಿ ಗೋದಾನವು ಶ್ರೇಷ್ಠ. ಸರ್ವಕ್ಷೇತ್ರಗಳಲ್ಲಿ ಪ್ರಯಾಗವು ಶ್ರೇಷ್ಠ. ಈ ಶ್ರೇಷ್ಠತೀರ್ಥದಲ್ಲಿ ಶ್ರೇಷ್ಠ ಗೋದಾನಮಾಡುವದು ಸರ್ವಶ್ರೇಷ್ಠ. ಪರಮಪುಣ್ಯ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಒಂದುನೂರರಾರನೆಯ ಅಧ್ಯಾಯ ಮುಗಿದುದು*

—o—

**ಯುದಿಷ್ಠರ ಉವಾಚ**

**ಯಥಾಯಥಾಪ್ರಯಾಗಸ್ಯ ಮಾಹಾತ್ಮ್ಯಂ ಕಥ್ಯತೇ ತ್ವಯಾ**
**ತಥಾ ತಥಾ ಪ್ರಮುಚ್ಯೇಽಹಂ ಸರ್ವಪಾಪೈರ್ನ ಸಂಶಯಃ ॥**

**ಧರ್ಮರಾಜ** :- ನೀವು ಪ್ರಯಾಗದ ಮಹಿಮೆಯನ್ನು ಹೇಳಿ ಹೇಳಿದಂತೆ ನಾನು ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಿದ್ದೇನೆ. ಪೂಜ್ಯರೇ, ಪ್ರಯಾಗಕ್ಕೆ ಹೋಗಬೇಕಾದ ವಿಧಿ ಏನು! ಅಲ್ಲಿ ಮಾಡಬೇಕಾದ ಧರ್ಮಕಾರ್ಯಗಳ ವಿಧಾನವೇನು ? ಇದೆಲ್ಲವನ್ನು ಮಹಾಮುನಿಗಳಾದ ತಾವು ನನಗೆ ತಿಳಿಸಿಕೊಡಿರಿ.

**ಮಾರ್ಕಂಡೇಯ** :- ನಾನು ಋಷಿಗಳ ಬಾಯಿಂದ ಕೇಳಿದಂತೆ ಪ್ರಯಾಗ ಯಾತ್ರೆಯ ವಿಧಾನವನ್ನು ತಿಳಿಸುತ್ತೇನೆ ಕೇಳು. ಈ ಯಾತ್ರೆಯನ್ನು ಎತ್ತು, ಕುದುರೆ, ಗಾಡಿ ಮುಂತಾದ ವಾಹನಗಳನ್ನು ಏರಿಕೊಂಡು ಮಾಡಬಾರದು. ವಾಹನಾರೂಢನಾಗಿ ಯಾತ್ರೆ ಮಾಡಿದರೆ ಬರುವ ದೋಷಗಳನ್ನು ಹೇಳುತ್ತೇನೆ. ಆಲಿಸು.

ಎತ್ತುಗಳ ಮೇಲೆ ಹತ್ತಿ ಅಥವಾ ಅವುಗಳನ್ನು ಚಕ್ಕಡಿಗೆ ಹೂಡಿ ಪ್ರಯಾಗ ಯಾತ್ರೆ ಮಾಡುವವರು ನರಕಕ್ಕೆ ಹೋಗುತ್ತಾರೆ. ಹಸು, ಎತ್ತು, ಕುದುರೆ ಮುಂತಾದ ಪ್ರಾಣಿಗಳನ್ನು ಹತ್ತಿ ಹೊಡೆದು ಓಡಿಸಿ, ನಡೆಸಿ, ಹಿಂಸೆಮಾಡಿ ಈ ಕ್ಷೇತ್ರಕ್ಕೆ ಬಂದರೆ ಅವರು ಕೊಟ್ಟ ನೀರನ್ನು ಪಿತೃಗಳು ಸ್ವೀಕರಿಸುವದಿಲ್ಲ. ಇಂಥ ಮಹಾಯಾತ್ರೆಗಳಿಗೆ ಪಾದಚಾರಿಗಳಾಗಿಯೇ ನಡೆದು ಬರಬೇಕು. ನಿರುಪದ್ರವಿ ಪ್ರಾಣಿಗಳಾದ ಎತ್ತು, ಹೇಸರಗತ್ತೆ, ಕುದುರೆ ಮುಂತಾದ ಪ್ರಾಣಿಗಳಮೇಲೆ ಭಾರಹಾಕಿ, ಹಿಂಸಿಸಿ, ಪ್ರಯಾಣಮಾಡಿದರೆ ಅದನ್ನು ದೇವತೆಗಳೂ, ಪಿತೃಗಳೂ, ಗಂಗೆಯಮುನೆಯರೂ ಎಂದೂ ಮೆಚ್ಚಲಾರರು. ಅಂಥವರ ತೀರ್ಥಯಾತ್ರೆಗಳೆಲ್ಲವೂ ವ್ಯರ್ಥವಾಗಿ ಹೋಗುವವು. ಆದುದರಿಂದ ಯಾತ್ರೆಯನ್ನು ವಾಹನವೇರಿ ಮಾಡದೇ ಕಾಲ್ನಡಿಗೆಯಿಂದಲೇ ಮಾಡುವದು ವಿಹಿತ. ಮತ್ತು ಪುಣ್ಯಪ್ರದ.

ಈ ಪ್ರಯಾಗಯಾತ್ರೆಯನ್ನು ಒಂಟಿಯಾಗಿ ಮಾಡದೆ ಹೆಂಡಿರು, ಮಕ್ಕಳನ್ನು ಕರೆದುಕೊಂಡೇ ಹೋಗಬೇಕು. ಅವರಿಗೂ ಗಂಗಾಯಮುನಾಸಂಗಮದಲ್ಲಿಸ್ನಾನ ಮತ್ತು ಜಲಪಾನಗಳು ದೊರಕುವಂಥ ವ್ಯವಸ್ಥೆ ಮಾಡಬೇಕು. ಅವರ ಕೈಯಿಂದಲೂ ಬ್ರಾಹ್ಮಣರಿಗೆ ದಾನಕೊಡಿಸಬೇಕು. ಈ ಸಂಗಮಕ್ಷೇತ್ರದಲ್ಲಿ ತನ್ನ ಯೋಗ್ಯತಾನು ಗುಣವಾಗಿ ವಿಶೇಷ ದಾನಧರ್ಮಗಳನ್ನು ನಡೆಸಬೇಕು. ಅವನಿಗೆ ಕಲ್ಪ ಸ್ವರ್ಗಸುಖ.

ಈ ಪ್ರಯಾಗಕ್ಷೇತ್ರದಲ್ಲಿ ಶಾಸ್ತ್ರೋಕ್ತ ವಿಧಿಯಿಂದ ಕನ್ಯಾದಾನ ಮಾಡಿ ಕೊಟ್ಟರೆ ಅವನಿಗೆ ಎಂದಿಗೂ ನರಕದರ್ಶನವೇ ಆಗುವುದಿಲ್ಲ. ಪ್ರಯಾಗದಲ್ಲಿರುವ ಅಕ್ಷಯ

ವಟ ಎಂಬ ಹೆಸರಿನ ಆಲದಮರದಲ್ಲಿ ಹನ್ನೊಂದು ರುದ್ರರೂ, ಹನ್ನೆರಡು ಆದಿತ್ಯರೂ, ದೇದೀಪ್ಯಮಾನರಾಗಿ ಇರುತ್ತಾರೆ. ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವೂ ಸುಟ್ಟುಹೋದರೂ ಈ ಅಕ್ಷಯ ವಟದ ಬಡ್ಡೆಗೆ ಬಿಸಿ ಕೂಡ ತಾಕಿರುವದಿಲ್ಲ. ಈ ವಟ ವೃಕ್ಷದ ಕೆಳಗೆ ಮರಣಹೊಂದಿದವರು ರುದ್ರಲೋಕಕ್ಕೆ ಹೋಗುತ್ತಾರೆ. ಪ್ರಳಯಕಾಲದಲ್ಲಿ ಪ್ರಪಂಚವೆಲ್ಲ ನೀರಿನಲ್ಲಿ ಮುಳುಗಿಹೋದಾಗ ವಿಷ್ಣು ಈ ಕ್ಷೇತ್ರದಲ್ಲಿ ಮತ್ತೆ ಮತ್ತೆ ಯಜ್ಞಮಾಡುತ್ತ ಇಲ್ಲಿಯೇ ನೆಲೆಸಿರುತ್ತಾನೆ.

ಬ್ರಹ್ಮಾದಿ ದೇವತೆಗಳೂ ಋಷಿ, ಸಿದ್ಧ, ಚಾರಣ, ಲೋಕಪಾಲ, ಸಾಧ್ಯ, ಮತ್ತು ಎಲ್ಲ ಪಿತೃಗಳೂ ದೇವತೆಗಳೂ ಹಾಗೂ ಸನಕ್ಕುಮಾರ ಮೊದಲಾದ ಮಹರ್ಷಿಗಳೂ, ಅಂಗೀರಸ ಮುಂತಾದ ಬ್ರಹರ್ಷಿಗಳೂ, ಸಾಕ್ಷಾತ್ ವಿಷ್ಣುವೂ ಇಲ್ಲಿ ವಾಸಿಸಿರುತ್ತಾರೆ. ಇದು ಭೂದೇವಿಯ ಜಘನ ಎನಿಸಿದೆ. ಇಷ್ಟು ಪವಿತ್ರವಾದ ತೀರ್ಥ ಬೇರೆ ಇಲ್ಲ. ಇದರ ಸಮಾಚಾರ ಕೇಳಲಿ, ಇದರ ಹೆಸರು ಹೇಳಲಿ, ಇಲ್ಲಿಯ ಮಣ್ಣನ್ನು ಮೈಗೆ ಲೇಪಿಸಲಿ ಸಾಕು. ಮನುಷ್ಯನ ಪಾಪ ಎಲ್ಲವೂ ಓಡಿಹೋಗುವವು. ಇಲ್ಲಿ ಒಮ್ಮೆ ಮಾಡಿದ ಸ್ನಾನ ಅಶ್ವಮೇಧಯಾಗಕ್ಕೆ ಸಮಾನ. ಯಾರೇ ಹೇಳಿದರೂ, ಎಷ್ಟೇ ವಿಘ್ನ ಬಂದರೂ, ಪ್ರಯಾಗ ಯಾತ್ರೆಯ ಸಂಕಲ್ಪವನ್ನು ಕೈಬಿಡಬಾರದು. ಅರವತ್ತು ಕೋಟಿ ಕ್ಷೇತ್ರಗಳೂ, ಹತ್ತುಸಾವಿರತೀರ್ಥಗಳೂ ಇಲ್ಲಿ ಸದಾ ಸನ್ನಿಹಿತ. ಮಹಾಯೋಗಿಯು ಸತ್ಯನಾಮಕವಾದ ಪರಮಾತ್ಮನಲ್ಲಿ ದೃಢವಾಗಿ ಮನಸ್ಸನ್ನು ಇಟ್ಟು ತನ್ನ ದಿವ್ಯಜ್ಞಾನದಿಂದ, ಭಗವಂತನ ಸತತ ಚಿಂತನೆಯಿಂದ ಎಂಥ ಗತಿಯನ್ನು ಹೊಂದುವನೋ ಅಂಥ ಗತಿಯನ್ನು ಸಾಮಾನ್ಯ ಮನುಷ್ಯನೂ ಈ ಗಂಗಾಯಮುನಾ ಸ್ನಾನಮಾತ್ರದಿಂದ ಪಡೆಯುವವನು.

ಈ ಪ್ರಯಾಗಯಾತ್ರೆಯನ್ನು ಮಾಡದವರು ಬದುಕಿದರೂ ಸತ್ತಂತೆ. ಇದರ ದರ್ಶನಮಾತ್ರದಿಂದಲೇ ಪಾಪಗಳಿಂದ ಮುಕ್ತಿ. ಯಮುನಾ ತೀರದಲ್ಲಿರುವ ಮಹಾದೇವನ ದಿವ್ಯಮೂರ್ತಿಯನ್ನು ದರ್ಶನ ಮಾಡಿಕೊಂಡರೆ ಹಿಂದು ಮುಂದಿನ ಹತ್ತು ತಲೆಮಾರಿನ ವಂಶಿಗರೆಲ್ಲರ ಉದ್ಧಾರ. ಸ್ನಾನಮಾಡಿದರೆ ಅಶ್ವಮೇಧದ ಫಲ. ಸ್ವರ್ಗಲೋಕದಲ್ಲಿ ಶಾಶ್ವತವಾಸ. ಗಂಗಾನದಿಯ ಪೂರ್ವಭಾಗದಲ್ಲಿ ಸಮುದ್ರ ಕೂಪ ಮತ್ತು ಪ್ರತಿಷ್ಠಾನ ಎಂಬ ತೀರ್ಥಗಳಿವೆ. ಅಲ್ಲಿ ಬ್ರಹ್ಮಚರ್ಯ ವ್ರತದಿಂದ ಮೂರುದಿನ ಇದ್ದು ಸ್ನಾನಮಾಡಿದರೆ ಅಶ್ವಮೇಧಯಜ್ಞ ಮಾಡಿದಪುಣ್ಯ. ಪ್ರತಿಷ್ಠಾನ ತೀರ್ಥದ ಉತ್ತರಕ್ಕೆ ಗಂಗಾನದಿಯ ಪೂರ್ವ ದಿಕ್ಕಿನಲ್ಲಿ ಹಂಸಪ್ರಪತನ ಎಂಬ ಪುಣ್ಯತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧದ ಫಲ. ಆಚಂದ್ರಾರ್ಕ ಸ್ವರ್ಗವಾಸ. ಊರ್ವಶೀರಮಣ ಎಂಬ ತೀರ್ಥದಲ್ಲಿ ಪ್ರಾಣಬಿಡುವವನು ಅರವತ್ತುಸಾವಿರದ ಆರುನೂರು ವರ್ಷ ಪಿತೃಗಳೊಡನೆ ಸ್ವರ್ಗಸುಖವನ್ನು ಅನುಭವಿಸುವನು. ಆ ಪುಣ್ಯವೆಲ್ಲ ತೀರಿದ ಬಳಿಕ ಸ್ವರ್ಗದಿಂದ ಅವನು ನೆಲಕ್ಕೆ ಬಿದ್ದರೂ ಮಹಾರಾಜನಾಗಿಯೇ ಜನಿಸುವನು. ಊರ್ವಶಿಯಂಥ ಸುಂದರ ಸ್ತ್ರೀಯರನ್ನು ಮದುವೆಯಾಗಿ ಸುಖ ವಿಲಾಸಗಳನ್ನು ಅನುಭವಿಸಿ ಮತ್ತೆ ಪ್ರಯಾಗ ತೀರ್ಥಕ್ಕೆ ಪ್ರಯಾಣಿಸುವನು.

ಈ ಸಂಗಮ ತೀರ್ಥದಲ್ಲಿ ಒಂದು ತಿಂಗಳು ವಾಸಮಾಡಿ, ಒಪ್ಪತ್ತು ಊಟ ಮಾಡುತ್ತ ಸ್ನಾನ, ದಾನ, ಪಾನ, ಪೂಜನಗಳನ್ನು ಮಾಡಿದರೆ ಸಮುದ್ರಪರ್ಯಂತ ಭೂಮಿಗೆಲ್ಲ ಸಾರ್ವಭೌಮನಾಗುವನು. ರೂಪವತಿಯಾದ ಅನೇಕ ರಮಣಿಯರೊಂದಿಗೆ ವಿಹರಿಸಿ, ದಾನಧರ್ಮ ಮಾಡಿ, ಮಹಾದಾನಿ ಎಂದು ಹೆಸರುವಾಸಿಯಾಗಿ, ಬೇಕುಬೇಕಾದ ಸುಖ-ಸೌಭಾಗ್ಯಗಳನ್ನೆಲ್ಲ ಅನುಭವಿಸಿ, ಮತ್ತೆ ಪ್ರಯಾಗತೀರ್ಥಕ್ಕೆ ಹೋಗುವನು. ಇಲ್ಲಿಯ ಸಂಧ್ಯಾವಟ ಎಂಬ ರಮ್ಯ ತೀರ್ಥದಲ್ಲಿ ಸ್ನಾನ, ಸಂಧ್ಯೆ, ಜಪತಪಗಳನ್ನು ಮಾಡುವವನಿಗೆ ಬ್ರಹ್ಮಲೋಕಪ್ರಾಪ್ತಿ. ಕೋಟಿತೀರ್ಥದಲ್ಲಿ ಪ್ರಾಣಬಿಡುವವನು ಕೋಟಿವರ್ಷ ಸ್ವರ್ಗದಲ್ಲಿ ಮನ್ನಣೆ ಪಡೆಯವನು. ವಾಸುಕಿಹ್ರದದ ಉತ್ತರದಲ್ಲಿ ಭೋಗವತಿ ಮತ್ತು ದಶಾಶ್ವಮೇಧ ಎಂಬ ಪುಣ್ಯತೀರ್ಥದಲ್ಲಿ ಸ್ನಾನಮಾಡಿದರೆ ವಿಪುಲ ಐಶ್ವರ್ಯ, ಅಪರೂಪ ಸೌಂದರ್ಯ ಅಪಾರ ಸಾಮರ್ಥ್ಯವು ಪ್ರಾಪ್ತವಾಗುವದಲ್ಲದೆ ಅಶ್ವಮೇಧಯಜ್ಞ ಮಾಡಿದ ಪುಣ್ಯವು ಪ್ರಾಪ್ತವಾಗುವದು. ಗಂಗಾನದಿಯು ಹರಿಯುವ ಪ್ರದೇಶವೆಲ್ಲವೂ ಕುರುಕ್ಷೇತ್ರಕ್ಕೆ ಸಮ. ಅದು ವಿಂಧ್ಯತೀರ್ಥದೊಡನೆ ಸಂಗಮಿಸಿದಲ್ಲಿ ಕುರುಕ್ಷೇತ್ರಕ್ಕಿಂತ ಹತ್ತುಪಟ್ಟು ಪವಿತ್ರ.

ಗಂಗೆ ಹರಿದದ್ದೆಲ್ಲ ಸಿದ್ಧಕ್ಷೇತ್ರ. ಗಂಗಾನದಿಯು ನೆಲದಲ್ಲಿ ನರರನ್ನೂ, ಪಾತಾಳದಲ್ಲಿ ಹಾವುಗಳನ್ನೂ, ಸ್ವರ್ಗದಲ್ಲಿ ದೇವತೆಗಳನ್ನೂ ಉದ್ಧರಿಸುವದರಿಂದ ಅದಕ್ಕೆ ತ್ರಿಪಥಗಾ ಎಂದರೆ ಮೂರು ಲೋಕಗಳ ಮಾರ್ಗಗಳಲ್ಲಿ ಹರಿದು ಮೂರು ಲೋಕಗಳ ಜನರನ್ನೂ ಪಾವನಗೈಯುವವಳು ಎಂಬ ಹೆಸರು ಬಂದಿದೆ. ಮರಣ ಹೊಂದಿದ ಮಾನವನ ಮೂಳೆಗಳನ್ನು ಗಂಗೆಯಲ್ಲಿ ಹಾಕಬೇಕು. ಎಷ್ಟು ಮೂಳೆಗಳು ಗಂಗೆಯ ನೀರಿನಲ್ಲಿ ಬೀಳುವವೋ ಅಷ್ಟು ಸಾವಿರ ವರ್ಷ ಅವನು ಸ್ವರ್ಗಲೋಕದಲ್ಲಿ ದೇವತೆಗಳಿಂದ ಮನ್ನಣೆ ಪಡೆಯುವನು. ಹೀಗೆ ಗಂಗೆಯು ನದಿಗಳಲ್ಲಿ ಶ್ರೇಷ್ಠ, ತೀರ್ಥಗಳಲ್ಲಿ ಸರ್ವೋತ್ಕೃಷ್ಟ. ಮಹಾಮಹಾಪಾಪಿಗಳಿಗೆಲ್ಲ ಮೋಕ್ಷವನ್ನು ಕರುಣಿಸುವ ಪುಣ್ಯತೀರ್ಥವೆಂದರೆ ಗಂಗೆಯೊಂದೇ.

ಬರೀ ಗಂಗೆಯ ನೀರು ಬೇಕಾದಲ್ಲಿ ದೊರಕಬಹುದು. ಆದರೆ ಗಂಗಾದ್ವಾರ, ಪ್ರಯಾಗ, ಗಂಗಾಸಾಗರಸಂಗಮ ಈ ಮೂರು ಕಡೆಗಳಲ್ಲಿ ಮಾತ್ರ ಗಂಗೆಯ ಸ್ನಾನ-ಪಾನಾದಿಗಳು ದೊರಕುವದು ಬಹು ದುರ್ಲಭ. ಈ ಮೂರು ಸ್ಥಳಗಳಲ್ಲಿ ಸ್ನಾನ ಮಾಡಿದರೆ ಸ್ವರ್ಗ. ಮರಣ ಹೊಂದಿದರೆ ಮೋಕ್ಷ. ಕೆಟ್ಟ ಬುದ್ಧಿ, ದುಷ್ಟ ಮನಸ್ಸು, ಘೋರ ಪಾಪಕೃತ್ಯ ಇವುಗಳಿಂದ ಸಂಭ್ರಾಂತರಾಗಿ ಗತಿಗೆಟ್ಟ ಮಾನವರಿಗೆ ಗಂಗೆಯ ಹೊರತು ಬೇರೆ ಗತಿ ಇಲ್ಲ. ಹರಿಯ ಅಡಿಯಿಂದ ಹುಟ್ಟಿ, ಶಿವನ ಜಡೆಯಿಂದ ಜರಿದು ಬಿದ್ದು ಈ ಗಂಗೆ ಮಂಗಳಗಳಲ್ಲಿ ಮಂಗಳ, ಪವಿತ್ರಗಳಲ್ಲಿ ಅತಿ ಪವಿತ್ರ.

ಕೃತಯುಗದಲ್ಲಿ ನೈಮಿಷಕ್ಷೇತ್ರ. ತ್ರೇತಾಯುಗದಲ್ಲಿ ಪುಷ್ಕರ, ದ್ವಾಪರ ಯುಗದಲ್ಲಿ ಕುರುಕ್ಷೇತ್ರವು, ಪಾಪಪರಿಹಾರಕವಾದ ಪವಿತ್ರಕ್ಷೇತ್ರವೆಂದು ಪ್ರಸಿದ್ಧವಾಗಿವೆ. ಆದರೆ ಕಲಿಯುಗದಲ್ಲಿ ಮಾತ್ರ ಗಂಗಾನದಿಯೇ ಸರ್ವ ಪಾಪ ಪರಿಹಾರಿಕವಾದ ತಾರಕತೀರ್ಥವೆನಿಸಿದೆ. ಗಂಗಾನದಿಯನ್ನೇ ಸೇವಿಸಬೇಕು. ಅದರಲ್ಲಿಯೂ ವಿಶೇಷವಾಗಿ

ಪ್ರಯಾಗಕ್ಷೇತ್ರಕ್ಕೆ ಹೋಗಿ ಸ್ನಾನ-ದಾನಾದಿಗಳನ್ನು ಮಾಡಬೇಕು. ಈ ಭಯಂಕರವಾದ ಕಲಿಯುಗದಲ್ಲಿ ಸಂಸಾರದಿಂದ ಪಾರಾಗಲು ಗಂಗೆಯ ಹೊರತು ಬೇರೆ ಉಪಾಯವೇ ಇಲ್ಲ. ಸಂಸಾರ ರೋಗಕ್ಕೆ ಗಂಗೆಯೊಂದೇ ದಿವ್ಯ ಔಷಧ.

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾರೇಳನೆಯ ಅಧ್ಯಾಯ ಮುಗಿದುದು

—o—

## ಪ್ರಯಾಗ ಮಹಾತ್ಮೆ

ಅಧ್ಯಾಯ - ೧೦೮

**ಮಾರ್ಕಂಡೇಯ ಉವಾಚ**

"ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।
ಯಚ್ಛ್ರುತ್ವಾ ಸರ್ವಪಾಪೇಭ್ಯೋಮುಚ್ಯತೇ ನಾತ್ರ ಸಂಶಯಃ ॥

**ಮಾರ್ಕಂಡೇಯ** :- ರಾಜನೆ, ಪ್ರಯಾಗ ಕ್ಷೇತ್ರದ ಮಾಹಾತ್ಮ್ಯವನ್ನು ಶ್ರವಣ ಮಾಡಿದ ಮಾತ್ರಕ್ಕೆ ಸಮಸ್ತ ಪಾಪಗಳೂ ಪರಿಹಾರವಾಗುತ್ತವೆ. ಅಂಥ ಆ ದಿವ್ಯ ಕ್ಷೇತ್ರದ ಮಹಿಮೆಯನ್ನು ಇನ್ನೂ ಹೇಳುತ್ತೇನೆ ಕೇಳು. ಗಂಗೆಯ ಉತ್ತರದಲ್ಲಿ ಮಾನಸ ಎಂಬ ತೀರ್ಥ. ಅಲ್ಲಿ ಮೂರು ರಾತ್ರಿ ಉಪವಾಸ, ಮೂರು ಹಗಲು, ಸ್ನಾನಾಪಾನಗಳನ್ನು ಮಾಡಿದರೆ ಗೋದಾನ ಭೂದಾನ ಹಿರಣ್ಯದಾನಗಳ ಪುಣ್ಯವೆಲ್ಲ ಬರುವದು.

ತಿಳಿದಾಗಲಿ ತಿಳಿಯದೇ ಆಗಲಿ ಗಂಗೆಯಲ್ಲಿ ಬಿದ್ದು ಮರಣ ಹೊಂದಿದರೆ ಅನೇಕ ಸಹಸ್ರ ವರ್ಷಸ್ವರ್ಗಭೋಗ. ಅಪ್ಸರೆಯೊಡನೆ ಒಡನಾಟ. ದಿವ್ಯವಿಮಾನ ಸಂಚಾರ. ಪುಣ್ಯಸವೆದು ಭೂಮಿಗೆ ಬಂದ ಬಳಿಕವೂ ಮಣಿಮುತ್ತು ಬಂಗಾರ ಭಾಗ್ಯ ಸಮೃದ್ಧವಾದ ಸತ್ಕುಲದಲ್ಲಿ ಜನನ. ಸುಖಾನುಭವ. ಅರವತ್ತೂ ಸಾವಿರ ತೀರ್ಥಗಳೂ ಅರವತ್ತು ಕೋಟಿ ನದಿಗಳೂ ಮಾಘಮಾಸದಲ್ಲಿ ಈ ಸಂಗಮದ ರಂಗದಲ್ಲಿ ಬಂದು ಸೇರುವವು.

ಗಂಗಾ ಯಮುನೆಯರ ಮಧ್ಯದೇಶದಲ್ಲಿ ದಕ್ಷಿಣಾ, ಗಾರ್ಹಪತ್ಯ, ಆಹವನೀಯ, ಸಭ್ಯ, ಮತ್ತು ಆವಸಥ್ಯ ಎಂಬ ಪಂಚಾಗ್ನಿ ಸಾಧನಮಾಡಿ ತಪಂಗೈಯ್ಯುವವನೂ ರೋಗರಹಿತನಾಗಿ ಅಪೂರ್ವ ಸೌಂದರ್ಯದಿಂದ ಶೋಭಿಸುವನು. ಮತ್ತು ತನ್ನ ದೇಹದಲ್ಲಿರುವ ಕೂದಲುಗಳಷ್ಟು ಕಾಲ ಸ್ವರ್ಗಲೋಕದಲ್ಲಿ ಸುಖವಸತಿ ಮಾಡುವನು. ಪುಣ್ಯವೆಲ್ಲ ಕ್ಷೀಣವಾದ ಬಳಿಕ ಮತ್ತೆ ನೆಲಕ್ಕೆ ಉರುಳಿ ಜಂಬೂದ್ವೀಪದ ಅಧಿಪತಿಯಾಗಿ ಜನಿಸುವನು. ಚಂದ್ರಗ್ರಹಣ ಕಾಲದಲ್ಲಿ ಈ ಸಂಗಮದ ಮಧ್ಯದಲ್ಲಿ ದೇಹತ್ಯಾಗ ಮಾಡಿದವನು ಪಾಪಮುಕ್ತನಾಗಿ ಚಂದ್ರಲೋಕ ಸೇರುವನು. ಅನಂತರ ಅರವತ್ತುಸಾವಿರವರ್ಷ ಇಂದ್ರಲೋಕದಲ್ಲಿ ಸುರವೃಂದದಿಂದ ಸತ್ಕಾರಗೊಂಡು ವಾಸಿಸುವನು. ಪುಣ್ಯರಾಶಿಯೆಲ್ಲ ಸವೆದ ಬಳಿಕ ಭೂಮಿಗೆ ಬಂದು

ಇಲ್ಲಿಯೂ ಸಕಲಭೋಗಭಾಗ್ಯಸಂಪನ್ನವಾದ ಸುಖಜೀವನವನ್ನೇ ಬಾಳುವನು. ಪ್ರಯಾಗದಲ್ಲಿ ಶೀರ್ಷಾಸನದಲ್ಲಿ ತಪಸ್ಸು ಮಾಡಿದರೆ ಒಂದು ಲಕ್ಷ ವರ್ಷ ಸ್ವರ್ಗದಲ್ಲಿ ಸುರಪೂಜಿತನಾಗಿ ನೆಲೆಸುವನು. ಮರಳಿ ನೆಲಕ್ಕೆ ಬಂದ ಬಳಿಕಾದರೂ ಅಗ್ನಿಹೋತ್ರಿಯಾಗಿ ಜನಿಸಿ ಬಗೆಬಗೆಯ ಭೋಗಾನುಭೋಗಗಳನ್ನೆಲ್ಲ ಅನುಭವಿಸಿ ಕೊನೆಗೆ ಇದೇ ತೀರ್ಥಕ್ಕೆ ಪುನಃ ಪ್ರಯಾಣಿಸುವನು. ತನ್ನ ದೇಹವನ್ನು ಈ ಕ್ಷೇತ್ರದಲ್ಲಿ ಖಂಡತುಂಡಾಗಿ ಕಡಿದು ಕತ್ತರಿಸಿ ಪಕ್ಷಿಗಳಿಗೆ ಆಹಾರವಾಗಿ ನೀಡುವ ಮಹಾ ಸಾಹಸಿಗೂ ಇಲ್ಲಿ ವಿಶೇಷ ಪುಣ್ಯ ಫಲವುಂಟು. ಅದನ್ನು ಹೇಳುತ್ತೇನೆ ಕೇಳು.

ಒಂದು ಲಕ್ಷ ವರ್ಷ ಚಂದ್ರಲೋಕದಲ್ಲಿ ಅವನು, ಪೂಜಿತನಾಗಿ ವಾಸಿಸುವನು. ಅಲ್ಲಿಂದ ಭೂಲೋಕಕ್ಕೆ ಇಳಿದು ಬಂದು ಮಹಾರಾಜನಾಗಿ ಮೆರೆಯುವನು. ಗುಣವಂತನೂ ರೂಪಸಂಪನ್ನನೂ ಮಹಾಪಂಡಿತನೂ ಆಗಿ ಇಷ್ಟಭೋಗಗಳನ್ನೆಲ್ಲ ಅನುಭವಿಸಿ ಮತ್ತೆ ಆ ಪ್ರಯಾಗಕ್ಷೇತ್ರಕ್ಕೆ ಬಂದು ತೀರ್ಥಸ್ನಾನಮಾಡಿ ಪುನೀತನಾಗುವನು. ಈ ಪ್ರಯಾಗದ ದಕ್ಷಿಣದಲ್ಲಿ ಯಮುನೆಯ ಉತ್ತರದಲ್ಲಿ ಋಣ ಮೋಚನ, ಎಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸವಿದ್ದರೆ ದೇವಋಣ, ಋಷಿಋಣ ಮುಂತಾದ ಎಲ್ಲ ಋಣಗಳೂ ತೀರುವವು. ನಿರಂತರ ಋಣಮುಕ್ತನಾಗಿ ಸ್ವರ್ಗಲೋಕವನ್ನು ಸೇರುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರೆಂಟನೆಯ ಅಧ್ಯಾಯ ಮುಗಿದುದು*



## ಪ್ರಯಾಗ ಮಾಹಾತ್ಮೆ

**ಅಧ್ಯಾಯ - ೧೦೯**

**ಯುಧಿಷ್ಠಿರ ಉವಾಚ**

**ಏತಚ್ಛ್ರುತ್ವಾ ಪ್ರಯಾಗಸ್ಯಯತ್ತ್ವಯಾಪರಿಕೀರ್ತಿತಮ್ !**
**ವಿಶುದ್ಧಂಮೇಽದ್ಯ ಹೃದಯಂಪ್ರಯಾಗಸ್ಯತುಕೀರ್ತನಾತ್ ॥**

ಪೂಜ್ಯರೇ, ತಾವು ನಿರೂಪಿಸಿದ ಪ್ರಯಾಗಕ್ಷೇತ್ರದ ಮಹಿಮೆಯನ್ನು ಕೇಳಿ ಮತ್ತು ಪ್ರಯಾಗಕ್ಷೇತ್ರದ ನಾಮಕೀರ್ತನೆ ಗೈದು ನನ್ನ ಹೃದಯವು ಪರಿಶುದ್ಧವಾಗಿದೆ. ಆ ಕ್ಷೇತ್ರದಲ್ಲಿ ಪ್ರಾಯೋಪವೇಶನ ಎಂದರೆ ಸಾಯುವವರೆಗೆ ಉಪವಾಸವಿರುವ ವ್ರತವನ್ನು ಆಚರಿಸಿದರೆ ಎಂಥ ಫಲ ಬರುವುದು ತಿಳಿಸಿರಿ.

**ಮಾರ್ಕಂಡೇಯ :-** ರಾಜನೇ, ಪ್ರಯಾಗದಲ್ಲಿ ಪ್ರಾಯೋಪವೇಶ ಮಾಡಿದವನಿಗೆ ಆರೋಗ್ಯ ಐಶ್ವರ್ಯಗಳಲ್ಲದೇ ಹೆಜ್ಜೆಹೆಜ್ಜೆಗೆ ಅಶ್ವಮೇಧಯಜ್ಞ ಮಾಡಿದ ಫಲವು ಲಭಿಸುವದು. ಅವನ ಹಿಂದು ಮುಂದಿನ ಹತ್ತು ತಲೆಮಾರಿನವರೆಲ್ಲರೂ ಉದ್ಧೃತರಾಗುವರು.

**ಯುದಿಷ್ಠರ :-** ಧರ್ಮದ ಮರ್ಮವನ್ನು ಅರಿತ ಪೂಜ್ಯಮುನಿಗಳೇ, ಈ ಗಂಗಾ-ಯಮುನಾ ಸಂಗಮದಲ್ಲಿ ಸ್ನಾನಪಾನಗಳನ್ನು ಅಲ್ಪಾಯಾಸದಿಂದ ಸಾಧಿಸಬಹುದು.

ಆದರೆ ಅಶ್ವಮೇಧಯಾಗವು ಮಾತ್ರ ಬಹುಶ್ರಮ ಸಾಧ್ಯ. ಬಹುವ್ಯಯ ಸಾಧ್ಯ. ಆ ಯಾಗದ ಫಲ ಇಷ್ಟ ಅಲ್ಪಶ್ರಮ ಸಾಧ್ಯವಾದ ಸಂಗಮ ಸ್ನಾನದಿಂದ ಲಭಿಸುವ ಬಗೆ ಹೇಗೆ ತಿಳಿಸಿರಿ.

**ಮಾರ್ಕಂಡೇಯ :-** ವೀರರಾಜನೇ, ಬ್ರಹ್ಮದೇವರು ಹಿಂದೆ ಋಷಿಗಳ ಎದುರು ಹೇಳಿದ್ದನ್ನೇ ನೀನು ಮಾಡಿದ ಪ್ರಶ್ನೆಗೆ ಉತ್ತರ ರೂಪವಾಗಿ ಹೇಳುತ್ತೇನೆ ಕೇಳು.

ಪ್ರಯಾಗಕ್ಷೇತ್ರವು ಐದು ಯೋಜನ ವಿಸ್ತಾರವಿದ್ದು ಮಂಡಲಾಕಾರವಾಗಿದೆ. ಇದರ ಪರಿಸರ ಪ್ರದೇಶವೆಲ್ಲವೂ ಪುಣ್ಯಭೂಮಿ. ಪಾವನಕ್ಷೇತ್ರ. ಗಂಗೆಯತರಂಗ ಸಂಘಗಳ ಸಂಗದಿಂದ ಇಲ್ಲಿಯ ನೆಲವೆಲ್ಲವೂ ಜಲವೆಲ್ಲವೂ ಪರಮ ಪವಿತ್ರ ತೀರ್ಥ ಕ್ಷೇತ್ರಗಳಾಗಿವೆ. ಇಲ್ಲಿ ಕಾಲಿರಿಸಿದ ಮಾತ್ರಕ್ಕೆ ಹೆಜ್ಜೆಹೆಜ್ಜೆಗೆ ಅಶ್ವಮೇಧಯಾಗ ಮಾಡಿದ ಪುಣ್ಯಫಲವು ಪ್ರಾಪ್ತವಾಗುವದು ಎಂದು ಸಾಕ್ಷಾತ್ ಬ್ರಹ್ಮದೇವರೇ ಹೇಳಿದ್ದಾರೆ. ಬ್ರಹ್ಮದೇವರ ಮಾತು ಎಂದೂ ಹುಸಿಯಾಗುವುದಿಲ್ಲ. ಇದನ್ನು ಅರಿತು ಮಾನವರು ಯಾವಾಗಲೂ ಈ ಪ್ರಯಾಗಕ್ಷೇತ್ರದಲ್ಲಿ ಗಂಗಾಯಮುನಾ ಸಂಗಮದಲ್ಲಿ ಸ್ನಾನ, ಪಾನ, ದಾನ, ಜಪ, ತಪ ಮುಂತಾದವುಗಳನ್ನು ಸಾಧ್ಯವಾದಷ್ಟು ಸಾಧಿಸಬೇಕು. ಇದರಿಂದ ಹದಿನಾಕು ತಲೆಯ ಪಿತೃಗಳು ಉದ್ಧೃತರಾಗುವರು. ದುರ್ಭಾಗ್ಯದ ಮನುಜರಿಗೆ ಈ ಕ್ಷೇತ್ರಸೇವೆಯಲ್ಲಿ ಮನಸ್ಸೇ ಹುಟ್ಟುವುದಿಲ್ಲ. ದೇವತೆಗಳು ಸ್ವಯಂ ನಿಂತು ಕಾಯುತ್ತಿರುವ ಈ ಪುಣ್ಯಭೂಮಿಗೆ ಶ್ರದ್ಧೆಯಿಲ್ಲದೆ ನಾಸ್ತಿಕರು ಎಂದೂ ಪ್ರವೇಶಿಸುವದೇ ಇಲ್ಲ.

**ಧರ್ಮರಾಜ :-** ಮೋಹ, ಮಮತೆ, ಲೋಭ, ಕಾಮ, ಕ್ರೋಧ ಮುಂತಾದ ವಿಕಾರವಶರಾದ ಜನರಿಗೂ ಮತ್ತು ಧರ್ಮಾಧರ್ಮ ವಿಚಾರಮಾಡದೇ ಎಲ್ಲ ಬಗೆಯ ವಸ್ತುಗಳನ್ನು ಮಾರಾಟಮಾಡುವ ವ್ಯಾಪಾರಿ ವರ್ಗಕ್ಕೂ ಈ ಪ್ರಯಾಗ ಕ್ಷೇತ್ರವಾಸದಿಂದ ಏನಾದರೂ ಸದ್ಗತಿ ಅಥವಾ ಪುಣ್ಯಫಲವುಂಟೋ ? ತಿಳಿಸಿರಿ.

**ಮಾರ್ಕಂಡೇಯ :-** ರಾಜನೇ, ಎಲ್ಲ ಪಾಪಗಳನ್ನು ಪರಿಹರಿಸುವ ಒಂದು ರಹಸ್ಯ ವಿಷಯವನ್ನು ಹೇಳುತ್ತೇನೆ ಕೇಳು. ಜಿತೇಂದ್ರಿಯನಾಗಿ ಒಂದು ತಿಂಗಳ ಈ ಗಂಗಾ ಯಮುನಾ ಸಂಗಮತೀರ್ಥದಲ್ಲಿ ಸ್ನಾನಮಾಡುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ಸದ್ಗತಿಯನ್ನು ಪಡೆಯುತ್ತಾನೆ. ಪ್ರಯಾಗ ಸ್ನಾನದಿಂದ, ಪುಣ್ಯವಂತರಿಗೆ ಮಾತ್ರ ಫಲ ಎಂದು ನಿಯಮವಿಲ್ಲ.ಪಾಪಿಷ್ಠರಿಗೂ ಸಂಗಮಸ್ನಾನದಿಂದ ಮಹಾಪ್ರಯೋಜನ ಉಂಟು. ಪುಣ್ಯವಂತರಿಗಿಂತ ಪಾಪಿಷ್ಠರಿಗೇ ಈ ಮಹಾಕ್ಷೇತ್ರದ ಉಪಯೋಗವು ಹೆಚ್ಚು ಇದೆ.

ವಿಶ್ವಾಸಘಾತ ಮಾಡಿದಂಥ ಮಹಾಪಾತಕಿಗಳು ಮೊದಲು ಪ್ರಯಾಗ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಭಿಕ್ಷೆಬೇಡಬೇಕು. ಸಂಗಮದಲ್ಲಿ ಮೂರು ಸಾರಿ ಸ್ನಾನಮಾಡಬೇಕು. ಹೀಗೆ ಮೂರು ತಿಂಗಳ ಈ ಕ್ಷೇತ್ರದಲ್ಲಿ ವಾಸಮಾಡಿದರೆ ಸರ್ವಪಾಪಗಳೂ ಪರಿಹಾರವಾಗುವವು. ಉದ್ದೇಶ ಪೂರ್ವಕವಾಗಿ ಪ್ರಯಾಗಯಾತ್ರೆ ಮಾಡಿದವರಿಗೆ ಪುಣ್ಯ ಫಲಪ್ರಾಪ್ತಿಯಾಗುವದು, ಆಶ್ಚರ್ಯದ ವಿಷಯವೇನಲ್ಲ. ಆದರೆ ಕಾರ್ಯಾಂತರ ವಶದಿಂದ ಇಚ್ಛೆ ಇಲ್ಲದೆ ಅನಿರೀಕ್ಷಿತವಾಗಿ ಪ್ರಯಾಗ ಕ್ಷೇತ್ರ ಗಮನ, ಅಲ್ಲಿ ಸ್ನಾನ ಪಾನಾದಿಗಳೂ ಅನಿರೀಕ್ಷಿತವಾಗಿ ಲಭಿಸಿದರೂ ಕೂಡ ಮಹಾಪ್ರಯೋಜನ

ಉಂಟು. ಇಂಥ ಆಕಸ್ಮಿಕ ಯಾತ್ರೆಯಿಂದ ಪಾತಕಗಳೆಲ್ಲವೂ ನಾಶವಾಗಿ ಸಂಗಮಸ್ನಾನ ಮತ್ತು ಜಲಪಾನಗಳಿಂದ ಅವನ ಮನೋರಥಗಳೆಲ್ಲವೂ ಸಿದ್ಧಿಸುವವು. ಮುಂದೆ ಸ್ವರ್ಗಲೋಕದಲ್ಲಿಯೂ ಮಾನ್ಯತೆಯನ್ನು ಪಡೆಯುವನು. ಈ ಪ್ರಯಾಗ ಮಹಿಮೆಯನ್ನು ಚನ್ನಾಗಿ ತಿಳಿದವರು ನಿತ್ಯ ಸುಖಿಗಳಾಗುವರು. ಅವರ ಪಿತೃಗಳಿಗೆಲ್ಲ ನಿರಂತರ ನರಕವಾಸವು ತಪ್ಪಿಹೋಗುವದು. ಇದು ನಿಜವಾದ ಸನಾತನಧರ್ಮದ ರಹಸ್ಯ. ಇದನ್ನು ಕೇಳಿದ್ದರಿಂದ ನಿನ್ನ ಕುಲವು ಉದ್ಧಾರವಾಯಿತು.

**ಧರ್ಮರಾಜ :-** ಪೂಜ್ಯರಾದ ಧರ್ಮಾತ್ಮರೇ, ಇಂದು ನನ್ನ ಜನ್ಮ ಸಾರ್ಥಕ. ನಿಮ್ಮ ದರ್ಶನದಿಂದಲೇ ನಾನು ಅನುಗ್ರಹೀತನಾದೆನು. ತಮ್ಮ ಉಪದೇಶ ಶ್ರವಣದಿಂದ ನನ್ನ ಪಾಪಗಳೆಲ್ಲವೂ ತೊಳೆದು ಹೋಗಿವೆ. ಇನ್ನು ಯಮುನಾ ನದಿಯಲ್ಲಿ ಸ್ನಾನಪಾನಾದಿಗಳನ್ನು ಮಾಡುವದರಿಂದ ಎಂಥ ಪುಣ್ಯವು ಪ್ರಾಪ್ತ ವಾಗುತ್ತದೆ ? ಈ ವಿಷಯದಲ್ಲಿ ನೀವು ಕಂಡದ್ದೇನು ? ಕೇಳಿದ್ದೇನು ? ತಿಳಿಸಿರಿ.

**ಮಾರ್ಕಂಡೇಯ :-** ಸೂರ್ಯನ ಮಗಳಾದ ಯಮುನೆಯು ಮೂರು ಲೋಕದಲ್ಲಿಯೇ ಪ್ರಖ್ಯಾತಳು, ಪ್ರಯಾಗಕ್ಷೇತ್ರದಲ್ಲಿ ನದೀರೂಪಳಾಗಿ ಹರಿಯುತ್ತಿದ್ದಾಳೆ. ಗಂಗೆಯು ಉದ್ಭವಿಸಿದ ಹಿಮಾಲಯ ಪರ್ವತದಿಂದಲೇ ಯಮುನೆಯು ಉದಿಸಿ ಹರಿದುಹೊಮ್ಮಿ ಬಂದಿದ್ದಾಳೆ. ಈ ಯಮುನೆಯಲ್ಲಿ ಸ್ನಾನ ಮಾಡಿದರೆ ಶ್ರೇಯಸ್ಸು. ಇದರ ನೀರನ್ನು ಕುಡಿದರೆ ಕೈವಲ್ಯ. ಇದನ್ನು ಸ್ತುತಿಸಿದರೆ ಪುಣ್ಯ. ನೋಡಿದರೆ ಮಂಗಳ. ಧನಧಾನ್ಯತ್ಯಾಗ ಮಾಡಿದರೆ ಸದ್ಗತಿ. ತೀರ್ಥವೆಂದು ಈ ಪವಿತ್ರ ಉದಕವನ್ನು ಪ್ರಾಶನಮಾಡಿದರೆ ಏಳುತಲೆಗಳವರೆಗಿನ ಹಿಂದಿನ ಪಿತೃಗಳ ಉದ್ಧಾರ.

ಈ ಯಮುನೆಯ ಬಲದಂಡೆಯಲ್ಲಿ ಅಗ್ನಿತೀರ್ಥ, ಎಡೆದಂಡೆಯಲ್ಲಿ ಧರ್ಮರಾಜ ತೀರ್ಥ ಇವುಗಳಲ್ಲಿ ಸ್ನಾನದಿಂದ ಸ್ವರ್ಗ, ಮರಣದಿಂದ ಮೋಕ್ಷ.

ಇದರ ಉತ್ತರದಿಕ್ಕಿನಲ್ಲಿ ಆದಿತ್ಯತೀರ್ಥ. ಇದಕ್ಕೆ ನಿರಂಜನತೀರ್ಥವೆಂದೂ ಹೆಸರುಂಟು. ಇಂದ್ರಾದಿ ದೇವತೆಗಳು ಮಹಾಮಹಾಜ್ಞಾನಿಗಳೂ ಅನುದಿನವೂ ಆ ಆದಿತ್ಯತೀರ್ಥದಲ್ಲಿ ಮುಳುಗು ಹಾಕಿ ದೇವತಾರ್ಚನೆಯನ್ನು ನೆರವೇರಿಸುವರು. ಈ ಯಮುನೆಯ ತೀರದಲ್ಲಿ ಇನ್ನೂ ಸಾವಿರಾರು ತೀರ್ಥಗಳು ಇರುತ್ತವೆ. ಇವೆಲ್ಲವೂ ಪಾಪನಾಶಕ. ಸ್ವರ್ಗಪ್ರಾಪಕ. ಇವುಗಳಲ್ಲೆಲ್ಲ ಕುಂತಿಪುತ್ರನೇ, ನೀನು ಹೋಗಿ ಸ್ನಾನಮಾಡು. ಅದರಿಂದ ನಿನ್ನ ಮನದ ಕೊಳೆ ಎಲ್ಲವೂ ತೊಳೆದು ಹೋಗುವದು. ಗಂಗೆಯಮುನೆ ಎರಡೂ ನದಿಗಳಲ್ಲಿ ಸ್ನಾನ ಪಾನಾದಿಗಳಿಂದ ಸಮಾನವಾದ ಪುಣ್ಯವು ಬರುವದು. ಆದರೆ ಯಮುನೆಗಿಂತ ಗಂಗೆ ಹಿರಿಯಳು ಆದುದರಿಂದ ಅವಳಿಗೆ ಲೋಕದಲ್ಲಿ ಮಾನ-ಮನ್ನಣೆ ಹೆಚ್ಚು, ಪ್ರತಿದಿನ ಬೆಳಿಗ್ಗೆ ಎದ್ದು ಈ ಪ್ರಯಾಗದ ಮಹಿಮೆಯನ್ನು ಹೇಳಿದವನೂ, ಕೇಳಿದವನೂ ಸಕಲ ವಿಧವಾದ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ ಮತ್ತು ಸ್ವರ್ಗವನ್ನು ಪಡೆಯುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರೊಂಬತ್ತನೆಯ ಅಧ್ಯಾಯ ಮುಗಿದುದು*

—o—

**ಮಾರ್ಕಂಡೇಯ ಉವಾಚ**

**ಶ್ರುತಂ ಮೇಬ್ರಹ್ಮಣಾ ಪ್ರೋಕ್ತಂಪುರಾಣೇಬ್ರಹ್ಮಸಂಭವೇ ।**
**ತೀರ್ಥಾನಾಂ ತು ಸಹಸ್ರಾಣಿ ಶತಾನಿ ನಿಯುತಾನಿ ಚ ॥**

**ಮಾರ್ಕಂಡೇಯ :-** ಈ ಪ್ರಯಾಗಮಂಡಲದಲ್ಲಿ ಕೋಟಿಕೋಟಿ ತೀರ್ಥಗಳು ಇವೆಯೆಂದು ಬ್ರಹ್ಮನು ಬ್ರಹ್ಮಪುರಾಣದಲ್ಲಿ ಹೇಳಿದ್ದಾನೆಂದು ಕೇಳಿದ್ದೇನೆ. ಈ ಎಲ್ಲ ತೀರ್ಥಗಳೂ ಪುಣ್ಯಕರ. ಪವಿತ್ರಮ. ಸದ್ಗತಿದಾಯಕ. ಅದರಲ್ಲಿಯೂ ಸೋಮತೀರ್ಥವು ಅತ್ಯಂತ ಪವಿತ್ರ ಮತ್ತು ಪಾಪ ಪ್ರಣಾಶಕ. ಸ್ನಾನಮಾತ್ರದಿಂದ ನೂರಾರು ತಲೆಮಾರಿನ ಪಿತೃಗಳನ್ನು ಉದ್ಧರಿಸಬಲ್ಲದು. ನೀನು ಅದರಲ್ಲಿ ಸ್ನಾನಮಾಡು.

**ಧರ್ಮರಾಜ :-** ಭೂಮಿಯಲ್ಲಿ ನೈಮಿಷಕ್ಷೇತ್ರ, ಅಂತರಿಕ್ಷದಲ್ಲಿ ಪುಷ್ಕರ ಕ್ಷೇತ್ರಗಳು ಪ್ರಸಿದ್ಧವಾಗಿವೆ. ಈ ಕುರುಕ್ಷೇತ್ರವಂತೂ ಮೂರು ಲೋಕಗಳಲ್ಲಿಯೇ ಪ್ರಖ್ಯಾತವಾಗಿದೆ. ಅವೆಲ್ಲವನ್ನೂ ಬಿಟ್ಟು ಕೇವಲ ಪ್ರಯಾಗಕ್ಷೇತ್ರವನ್ನೇ ನೀವೇಕೆ ಇಷ್ಟು ಪ್ರಶಂಸಿಸುವಿರಿ ? ಇದರಲ್ಲಿ ವೈಶಿಷ್ಟ್ಯ ವಿಷಯದಲ್ಲಿ ಸಂದೇಹ ನಿವಾರಣೆಯಾಗಿ ಶ್ರದ್ಧೆ ಹುಟ್ಟುವಂತೆ ಏನಾದರೂ ಹೇಳಿರಿ. ಅಲ್ಪಾಯಾಸದಿಂದ ಕೇವಲಸ್ನಾನಪಾನಗಳಿಂದ ಇಲ್ಲಿ ದಿವ್ಯಭೋಗಪ್ರಾಪ್ತಿಯೆಂದು ಹೇಳುವಿರಿ. ಇದು ಹೇಗೆ ? ನೀವು ನೋಡಿ ಕೇಳಿದ ವಿಷಯವನ್ನು ನಮಗೆ ಅರುಹಬೇಕು.

**ಮಾರ್ಕಂಡೇಯ :-** ತೀರ್ಥಗಳ ವಿಷಯದಲ್ಲಿ ಶ್ರದ್ಧೆ ಮುಖ್ಯ. ಈ ಪ್ರಯಾಗದ ಮಹಿಮೆಯನ್ನು ನಾನು ಪ್ರತ್ಯಕ್ಷ ಕಂಡು ನಿನಗೆ ಹೇಳುತ್ತೇನೆ. ಪ್ರತ್ಯಕ್ಷ ಕಂಡದ್ದರ ಮೇಲೆ ಶ್ರದ್ಧೆಯಿಲ್ಲವೆಂದು ಹೇಳಬಾರದು. ದೇವದ್ವಿಜತೀರ್ಥಗಳ ವಿಷಯದಲ್ಲಿ ಶ್ರದ್ಧೆ ಇಲ್ಲದವನು ಅಮಂಗಲ, ಅಶುಚಿ, ದುರ್ಬುದ್ಧಿಯುಳ್ಳವ. ಮಹಾಪಾಪಿ. ಆದುದರಿಂದ ನೀನು ಶ್ರದ್ಧೆಯಿಂದ ಕೇಳು. ನಾನು ಪ್ರತ್ಯಕ್ಷ ಕಣ್ಣಿನಿಂದ ಕಂಡದ್ದನ್ನೂ, ಕಿವಿಯಿಂದ ಕೇಳಿದ್ದನ್ನೂ ಹೇಳುತ್ತೇನೆ. ಶ್ರದ್ಧಾಳು ಮನುಷ್ಯನು ಶಾಸ್ತ್ರವನ್ನೇ ಪ್ರಮಾಣವೆಂದು ನಂಬುವನು. ಶಾಸ್ತ್ರ ಹೇಳಿದ್ದರಿಂದ ಇಂದ್ರಿಯಾತೀತ ವಸ್ತು ವಿಷಯಗಳನ್ನೂ ಕೂಡ ಪ್ರಮಾಣ ಎಂದು ಒಪ್ಪುವನು ಮತ್ತು ತಾನು ನಂಬಿದ ಆ ಶಾಸ್ತ್ರಾನುಸಾರವಾಗಿ ನಡೆದು ಯೋಗಸಿದ್ಧಿಯನ್ನು ಪಡೆದು ಸದ್ಗತಿ ಹೊಂದುವನು. ಶ್ರದ್ಧೆಯಿಲ್ಲದವರಿಗೆ ಯೋಗಸಿದ್ಧಿ ಯಾಗುವದೇ ಇಲ್ಲ. ಯೋಗಸಿದ್ಧಿಯಾಗಬೇಕಾದರೆ ಸಾವಿರಾರು ಧರ್ಮಕಾರ್ಯಗಳನ್ನು ನೆರವೇರಿಸಬೇಕು. ತನ್ನಲ್ಲಿದ್ದ ಮುತ್ತು, ರತ್ನ, ಐಶ್ವರ್ಯ, ಸರ್ವಸ್ವವನ್ನೂ ಬ್ರಾಹ್ಮಣರಿಗೆ ದಾನ ಕೊಟ್ಟರೂ ಯೋಗಸಿದ್ಧಿಯಾಗುವದಿಲ್ಲ. ಆದರೆ ಪ್ರಯಾಗ ಮರಣದಿಂದ ಇಂಥ ಯೋಗಸಿದ್ಧಿಯು ತಾನಾಗಿ ಆಗುವದು. ಇದರ ರಹಸ್ಯವನ್ನು ಹೇಳುತ್ತೇನೆ ಕೇಳು.

ಬ್ರಹ್ಮ ಸರ್ವತ್ರ ವ್ಯಾಪ್ತ. ಯಾರು ಎಲ್ಲಿಯೇ ಯಾರಿಗೇ ಪೂಜೆ ಸಲ್ಲಿಸಿದರೂ ಅದು ಹೋಗಿ ಕೊನೆಗೆ ಪರಬ್ರಹ್ಮನಿಗೇ ಸೇರುವದು. ಹಾಗೇ ಎಲ್ಲ ತೀರ್ಥಕ್ಷೇತ್ರಗಳಲ್ಲಿ ಪ್ರಯಾಗವನ್ನು ಅನುಸಂಧಾನ ಮಾಡಿಯೇ ಸ್ನಾನಮಾಡಬೇಕು. ಎಲ್ಲ ತೀರ್ಥಕ್ಷೇತ್ರಗಳಲ್ಲಿ ಪ್ರಯಾಗವನ್ನು ಅನುಸಂಧಾನ ಮಾಡಿಯೇ ಎಲ್ಲ ತೀರ್ಥಗಳಿಗೆ ಮಾಡಿದ ಪೂಜೆಯೂ ತೀರ್ಥರಾಜನಾದ ಪ್ರಯಾಗಕ್ಷೇತ್ರಕ್ಕೆ ಸಲ್ಲುವದು. ಬ್ರಹ್ಮದೇವರೂ ಕೂಡ ಪ್ರತಿನಿತ್ಯವೂ ಈ ಪ್ರಯಾಗಕ್ಷೇತ್ರವನ್ನು ಸ್ಮರಿಸುತ್ತಾರೆ. ಈ ಪ್ರಯಾಗಯಾತ್ರೆ ಮಾಡಿದರೆ ಸಾಕು, ಮಾನವರು ಮತ್ತೇನನ್ನೂ ಮಾಡಬೇಕಿಲ್ಲ.

ದೇವತಾಸ್ವರೂಪವನ್ನು ಪಡೆದವನು ಮನುಷ್ಯತ್ವವನ್ನು ಹೊಂದಲಿಕ್ಕೆ ಎಂದಾದರೂ ಇಚ್ಛಿಸುವನೇ ! ಹಾಗೆ ಉತ್ತಮೋತ್ತಮವಾದ ಪ್ರಯಾಗತೀರ್ಥಕ್ಕೆ ಹೋದವರು ಚಿಕ್ಕಪುಟ್ಟತೀರ್ಥಗಳಿಗೆ ಹೋಗಲು ಮನಸ್ಸನ್ನೇ ಮಾಡುವದಿಲ್ಲ. ಈ ದೃಷ್ಟಾಂತದಿಂದಲೇ ನಿನಗೆ ಪ್ರಯಾಗ ಮಹಾತ್ಮ್ಯದ ವೈಶಿಷ್ಟ್ಯದ ಅರಿವು ಪೂರ್ಣವಾಗಿ ಆಗಿರಲಿಕ್ಕೆ ಸಾಕು. ಇಷ್ಟು ಪುಣ್ಯಕರವಾದ ತೀರ್ಥವಿಲ್ಲ. ಇಷ್ಟು ಪವಿತ್ರವಾದ ಕ್ಷೇತ್ರವಿಲ್ಲ. ಆದುದರಿಂದಲೇ ನಾನು ನಿನಗೆ ಈ ಕ್ಷೇತ್ರದ ಬಗೆಗೆ ಇಷ್ಟೊಂದು ಹೇಳಿದ್ದೇನೆ.

**ಧರ್ಮರಾಜ :-** ಸ್ವಾಮಿ, ತಾವು ಹೇಳಿದ್ದು ಕೇಳಿ ನನಗೆ ಇನ್ನೂ ಆಶ್ಚರ್ಯವೇ ಆಗುತ್ತಿದೆ. ಯಜ್ಞ ಯಾಗ ದಾನ ಧರ್ಮಾದಿ ಸತ್ಕರ್ಮಗಳಿಂದ ದೊರಕದ ಯಾವ ಫಲವು ಈ ಪ್ರಯಾಗ ಸ್ನಾನಪಾನಾದಿಗಳಿಂದ ಲಭಿಸಲಿಕ್ಕುಂಟು? ಇದರ ಅಸಾಧಾರಣ ವೈಶಿಷ್ಟ್ಯವೇನು ?

**ಮಾರ್ಕಂಡೇಯ :-** ಶಾಸ್ತ್ರ, ಬ್ರಾಹ್ಮಣ, ಅಗ್ನಿ, ಗೋ, ಬಂಗಾರ, ನೀರು, ಹೆಣ್ಣು, ತಾಯಿ, ತಂದೆಯರನ್ನು ನಿಂದಿಸುವವರು ನರಾಧಮರೇ ಸರಿ. ಅವರಿಗೆ ಸದ್ಗತಿಯಿಲ್ಲ. ಆದುದರಿಂದ ಶಾಸ್ತ್ರನಿಂದೆ ಸಲ್ಲದು. ಅದರಲ್ಲಿ ಹೇಳಿದ್ದೆಲ್ಲ ಪ್ರಮಾಣ ಎಂದು ನಂಬಬೇಕು. ಕರ್ಮಕಾಂಡವೂ ಶಾಸ್ತ್ರೋಕ್ತವಾದುದೇ. ಆದರೆ ದಾನಧರ್ಮಾದಿ ಪುಣ್ಯಕರ್ಮಗಳಿಂದ ಸ್ವರ್ಗಸುಖ ದೊರೆತರೂ ಆ ಪುಣ್ಯಸವೆದ ಕೂಡಲೇ ಮತ್ತೆ ಮರಳಿ ಭೂಮಿಗೆ ಬರಬೇಕಾಗುವದು. ಆದುದರಿಂದ ಪುನರ್ಜನ್ಮಕ್ಕೆ ಕಾರಣವಾಗುವ ಕರ್ಮಗಳು ಉಪಯೋಗವಿಲ್ಲ. ಮಾನವನು ಮರಳಿ ಹುಟ್ಟದಂತಾಗಬೇಕಾದರೆ ಯೋಗಸಿದ್ಧಿಯು ಅತ್ಯಾವಶ್ಯಕ. ಆ ಯೋಗಸಿದ್ಧಿ ಮತ್ತು ಪರಮಾತ್ಮನ ದಿವ್ಯಜ್ಞಾನಗಳು ಉಳಿದ ಕರ್ಮಗಳಿಗಿಂತ ಪ್ರಯಾಗಸ್ನಾನ ಅಲ್ಲಿ ಭಗವತ್ಪೂಜನದಿಂದ ತ್ವರಿತವಾಗಿ ಉಂಟಾಗುವವು. ಆ ಯೋಗಸಿದ್ಧಿಯಿಂದ ಭಗವದಪರೋಕ್ಷವಾಗಿ ಮಾನವನ ಜನನ ಮರಣ ಜಾಲವು ಕಡಿದು ಮೋಕ್ಷ ಪ್ರಾಪ್ತಿಯಾಗುವದು. ಆದುದರಿಂದಲೇ ನಾನು ದಾನ ಧರ್ಮಾದಿ ಇತರ ಕರ್ಮಗಳಿಗಿಂತ ಪ್ರಯಾಗಸ್ನಾನವೇ ಪ್ರಧಾನ ಎಂದು ಹೇಳಿದ್ದು. ಇದನ್ನೆಲ್ಲ ಸಾಕ್ಷಾತ್ ಸೂರ್ಯದೇವನು ಹೇಳಿದ್ದನ್ನೇ ನಾನು ನಿನಗೆ ತಿಳಿಸಿದ್ದೇನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಹತ್ತನೆಯ ಅಧ್ಯಾಯ ಮುಗಿದುದು*

—೦—

**ಮಾರ್ಕಂಡೇಯ ಉವಾಚ**

**"ಶೃಣುರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।**
**ನೈಮಿಷಂ ಪುಷ್ಕರಂ ಚೈವ ಗೋತೀರ್ಥಂ ಸಿಂಧುಸಾಗರಂ ॥**

**ಮಾರ್ಕಂಡೇಯ :-** ಓ! ರಾಜಾ, ಪ್ರಯಾಗತೀರ್ಥದ ಮಾಹಾತ್ಮ್ಯವನ್ನು ಇನ್ನೂ ಹೇಳುವೆನು ಕೇಳು. ನೈಮಿಷಪುಷ್ಕರ, ಗೋತೀರ್ಥ, ಸಿಂಧುಸಾಗರ, ಗಯೆ, ಚೈತ್ರಕ, ಗಂಗಾಸಾಗರ, ಇಂತಹ ಎಷ್ಟೋ ಪುಣ್ಯ ಕ್ಷೇತ್ರಗಳೂ ಪರ್ವತಗಳೂ ಪುರಾಣಗಳಲ್ಲಿ ಹೇಳಿರುವ ಹತ್ತು ಸಾವಿರ ತೀರ್ಥಗಳೂ ಇನ್ನುಳಿದ ಮೂವತ್ತು ಕೋಟಿಕ್ಷೇತ್ರಗಳೂ ಪ್ರಯಾಗದಲ್ಲಿ ಸದಾಸನ್ನಿಹಿತವಾಗಿರುತ್ತವೆ. ಎಂದು ಜ್ಞಾನಿಗಳು ಹೇಳಿರುತ್ತಾರೆ.

ಈ ಪ್ರಯಾಗಕ್ಷೇತ್ರದಲ್ಲಿ ಇರುವ ಮೂರು ಅಗ್ನಿಕುಂಡಗಳ ಮಧ್ಯದಿಂದ ದೇವಗಂಗೆಯು ಹೊಮ್ಮಿ ಹರಿದಿದ್ದಾಳೆ. ಇದೇ ಸ್ಥಳದಲ್ಲಿ ತ್ರಿಲೋಕ ವಿಖ್ಯಾತಳಾದ ಯಮುನಾನದಿಯು ಗಂಗೆಯೊಡನೆ ಸಂಗಮಿಸುತ್ತಾಳೆ. ಗಂಗಾಯಮುನಾ ನದಿಗಳ ಮಧ್ಯದಲ್ಲಿರುವ ಪ್ರಯಾಗಕ್ಷೇತ್ರವು ಭೂದೇವಿಯ ಜಘನಭಾಗ ಎಂದು ಕರೆಯಲ್ಪಡುತ್ತದೆ. ಸ್ವರ್ಗ, ಭೂಮಿ, ಅಂತರಿಕ್ಷಗಳಲ್ಲಿ ಇರುವ ಒಟ್ಟು ಮೂರುವರೆಕೋಟಿ ತೀರ್ಥಗಳು ಪ್ರಯಾಗಕ್ಷೇತ್ರದ ಒಂದು ಅಂಶಕ್ಕೂ ಸಮವಾಗಲಾರವು ಎಂದು ವಾಯುಪುರಾಣದಲ್ಲಿ ಹೇಳಿದೆ. ಪ್ರಯಾಗಕ್ಷೇತ್ರದ ಕಂಬಲಅಶ್ವತರ ಎಂಬ ಸರ್ಪಗಳು ನೆಲಸಿದ ಪವಿತ್ರವಾದ ಸ್ಥಳವು ಬ್ರಹ್ಮದೇವರ ಆವಾಸಸ್ಥಾನ ಎನಿಸಿದೆ. ಭೋಗವತಿ ಎಂಬ ಕ್ಷೇತ್ರವು ಬ್ರಹ್ಮನ ಯಜ್ಞವೇದಿಕೆ. ಅಲ್ಲಿ ವೇದಗಳೂ ಯಜ್ಞಗಳೂ ಆಕಾರಧರಿಸಿ, ಬ್ರಹ್ಮದೇವನನ್ನು ಓಲೈಸುತ್ತವೆ. ದೇವತೆಗಳೂ, ಚಕ್ರವರ್ತಿಗಳೂ, ಋಷಿಗಳೂ ಈ ಸ್ಥಳದಲ್ಲಿ ಯಜ್ಞಯಾಗಗಳನ್ನು ನೆರವೇರಿಸುತ್ತಾರೆ.

ಮೂರುಲೋಕಗಳಲ್ಲಿ ಪ್ರಯಾಗಕ್ಕಿಂತ ಪುಣ್ಯಕರವಾದ ಬೇರೆ ಕ್ಷೇತ್ರಗಳಿಲ್ಲ ಗಂಗೆಗಿಂತ ಮಿಗಿಲಾದ ತೀರ್ಥವಿಲ್ಲ. ಪ್ರಯಾಗದಲ್ಲಿದ್ದ ಎಲ್ಲ ಸ್ಥಳವೂ ಪುಣ್ಯಕ್ಷೇತ್ರ. ಗಂಗೆ ಇದ್ದಲ್ಲಿ ಎಲ್ಲ ಜಲ ಪುಣ್ಯತೀರ್ಥ. ಗಂಗಾತೀರವೆಲ್ಲವೂ ಸಿದ್ಧಿಕ್ಷೇತ್ರ ಎಂದು ಭಾವಿಸಬೇಕು. ಇದೇ ಸತ್ಯ, ಸಜ್ಜನರಾದ ಆಪ್ತಮಿತ್ರರಿಗೂ, ಸೇವೆಮಾಡುವ ಶಿಷ್ಯರಿಗೂ ಈ ಪ್ರಯಾಗ ಮಾಹಾತ್ಮ್ಯವನ್ನು ರಹಸ್ಯವಾಗಿ ತಿಳಿಸಬೇಕು. ಇದನ್ನು ತಿಳಿಸಿದರೆ ಜನ್ಮ ಸಫಲ. ಇದರ ಜ್ಞಾನದಿಂದಲೇ ಪುಣ್ಯ ಸ್ವರ್ಗಸುಖ. ಈ ಪ್ರಯಾಗ ಮಾಹಾತ್ಮ್ಯವನ್ನು ಶುಚಿರ್ಭೂತನಾಗಿ ಕೇಳುವವನಿಗೆ ಜನ್ಮಾಂತರದ ಸ್ಮೃತಿ ಸ್ವರ್ಗಸುಖಲಭಿಸುವವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರ ಹನ್ನೊಂದನೆಯ ಅಧ್ಯಾಯ ಮುಗಿದುದು*

—o—

**ಯುಧಿಷ್ಠಿರ ಉವಾಚ**

**ಕಥಂ ಸರ್ವಮಿದಂ ಪ್ರೋಕ್ತಂ ಪ್ರಯಾಗಸ್ಯಮಹಾಮುನೇ!**
**ಏತನ್ನಃ ಸರ್ವಮಾಖ್ಯಾಹಿ ಯಥಾಹಿಮಮ ತಾರಯೇತ್ ॥**

**ಧರ್ಮರಾಜ** :- ಮಹಾಮುನಿಗಳೇ, ತಾವು ಹಿಂದೆ ಹೇಳಿದ ಎಲ್ಲ ಪುಣ್ಯಫಲಗಳು ಪ್ರಯಾಗ ಸ್ನಾನಮಾತ್ರದಿಂದ ದೊರಕುವ ಬಗೆ ಹೇಗೆ? ಅದು ನನ್ನನ್ನು ಸಂಸಾರ ಸಾಗರದಿಂದ ದಾಟಿಸುವದು ಎಂತು ? ಇದೆಲ್ಲವನ್ನೂ ನನಗೆ ತಿಳಿಸಿ ಹೇಳಬೇಕು?

**ಮಾರ್ಕಂಡೇಯ** :- ಧರ್ಮರಾಜನೇ, ಈ ಪ್ರಯಾಗಕ್ಷೇತ್ರದಲ್ಲಿ ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳೂ ದೇವರಾಜನಾದ ಮಹೇಂದ್ರನೂ ವಾಸಿಸುತ್ತಾರೆ. ಈ ಚರಾಚರ ಪ್ರಪಂಚವನ್ನೆಲ್ಲ ಬ್ರಹ್ಮದೇವ ನಿರ್ಮಿಸುತ್ತಾನೆ. ವಿಷ್ಣುವು ರಕ್ಷಿಸುತ್ತಾನೆ. ಪ್ರಳಯಕಾಲದಲ್ಲಿ ರುದ್ರನು ಇದೆಲ್ಲವನ್ನೂ ಸಂಹರಿಸುತ್ತಾನೆ. ಪ್ರಳಯಕಾಲದಲ್ಲಿ ಪ್ರಪಂಚವೆಲ್ಲ ಪ್ರಣಷ್ಟವಾದರೂ ಪ್ರಯಾಗಕ್ಷೇತ್ರಕ್ಕೆ ಮಾತ್ರ ಪ್ರಣಾಶವಿಲ್ಲ.

ಜಗದೊಡೆಯನಾದ ಶ್ರೀ ಹರಿಯು ಈ ಕ್ಷೇತ್ರವನ್ನು ತನ್ನ ಅಮೃತದೃಷ್ಟಿಯಿಂದ ನೋಡುತ್ತಲಿರುತ್ತಾನೆ. ಆ ಪ್ರಳಯಕಾಲದಲ್ಲಿ ಭಗವಂತನ ಆ ಅಮೃತದೃಷ್ಟಿಗೆ ಪಾತ್ರರಾದವರೆಲ್ಲರೂ ಅಂದರೆ ಸಪ್ತಋಷಿಗಳೂ ಮನುಮಹಾರಾಜ ಮುಂತಾದವರಂತೆ ಆ ಮಹಾವಿಪ್ಲವಕ್ಕೆ ಸಾಕ್ಷಿಗಳಾಗಿ ಬದುಕಿ ಉಳಿಯುವದುಂಟು.

**ಧರ್ಮರಾಜ** :- ಪ್ರಳಯಕಾಲದಲ್ಲಿ ಈ ಪ್ರಯಾಗಕ್ಷೇತ್ರವೂ ಮತ್ತು ಜಗತ್ತಿನಲ್ಲಿಯೇ ಶ್ರೇಷ್ಠ ಮಹಾತ್ಮರಾದ ಆ ಬ್ರಹ್ಮರ್ಷಿಗಳೂ ವಿನಾಶವಿಲ್ಲದೆ ಬದುಕಿ ಉಳಿಯಲು ಕಾರಣವೇನು ?

**ಮಾರ್ಕಂಡೇಯ** :- ಈ ಪ್ರಯಾಗಕ್ಷೇತ್ರದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರುದೇವತೆಗಳು ವಾಸಿಸುವರೆಂದು ಈ ಮೊದಲೇ ಹೇಳಿದ್ದೇನೆ. ಅದರ ನಿಜವಾದ ಕಾರಣವನ್ನು ಹೇಳುತ್ತೇನೆ ಕೇಳು. ಈ ಪ್ರಯಾಗಕ್ಷೇತ್ರವು ಐದು ಯೋಜನ ವಿಶಾಲವಾಗಿ ಮಂಡಾಲಾಕಾರವಾಗಿ ಇರುತ್ತದೆ. ದೇವತೆಗಳು ಪಾಪ ನಿವಾರಣೆ ಮಾಡಿ, ಈ ಪ್ರಯಾಗ ಮಂಡಲವನ್ನು ಸಂರಕ್ಷಿಸುವದಕ್ಕಾಗಿ ನಿತ್ಯ ಪ್ರಹರಿಗಳಂತೆ ಸದಾಜಾಗರೂಕರಾಗಿ, ಇಲ್ಲಿ ನಿಂತು ಕೊಂಡಿರುತ್ತಾರೆ. ಇಲ್ಲಿಯ ಪ್ರತಿಷ್ಠಾನ ತೀರ್ಥದ ಉತ್ತರಭಾಗದಲ್ಲಿ ಬ್ರಹ್ಮದೇವರು ಯಜ್ಞಮಾಡುವ ನಿಮಿತ್ತದಿಂದ ನೆಲೆಸಿದ್ದಾನೆ. ಸಾಕ್ಷಾತ್‌ವಿಷ್ಣುವು ವೇಣೀಮಾಧವರೂಪದಿಂದ ನಿಂತಿರುತ್ತಾನೆ. ಮಹಾದೇವನು ಮಾಹೇಶ್ವರ ಎಂಬ ವಟವೃಕ್ಷದ ರೂಪದಿಂದ ಇಲ್ಲಿ ನಿಂತಿದ್ದಾನೆ.

ಭಗವದಾಜ್ಞೆಯಿಂದ ಉಳಿದ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಬ್ರಹ್ಮರ್ಷಿಗಳೂ ಇಲ್ಲಿ ಪಾಪಕರ್ಮಗಳು ಆಗದಂತೆ, ಈ ಪ್ರಯಾಗ ಮಂಡಲವನ್ನು ರಕ್ಷಿಸುತ್ತಾರೆ. ಈ ಕ್ಷೇತ್ರದಲ್ಲಿ ಹೋಮ, ಹವನ, ಜಪ, ತಪ, ದೇವಕಾರ್ಯ, ಪಿತೃಕಾರ್ಯ ಮಾಡುವವರಿಗೆ ಪಾಪಲೇಪವಾಗುವದಿಲ್ಲ. ಅವರಿಗೆಂದೂ ನರಕ ದರ್ಶನವಾಗುವದಿಲ್ಲ. ಹರಿಹರಬ್ರಹ್ಮ ಈ ತ್ರಿಮೂರ್ತಿಗಳು ಈ ದಿವ್ಯಸ್ಥಳಗಳನ್ನು ಪ್ರಳಯಕಾಲದವರೆಗೂ ಅನಂತರವೂ ಇದ್ದು ರಕ್ಷಿಸುತ್ತಾರ. ಹೀಗೆ ತ್ರಿಮೂರ್ತಿಗಳೆಲ್ಲರೂ ನಿತ್ಯ ಸನ್ನಿಹಿತರಾಗಿ ಈ ಪ್ರಯಾಗಕ್ಷೇತ್ರವನ್ನು ರಕ್ಷಿಸುತ್ತಾರೆ. ಆದುದರಿಂದಲೇ ಇದಕ್ಕೆ ಪ್ರಯಾಗಕ್ಷೇತ್ರ, ಪ್ರಜಾಪತಿಕ್ಷೇತ್ರ ಎಂದು ಹೆಸರು ಬಂದಿದೆ. ಆದುದರಿಂದ ಧರ್ಮರಾಜನೆ, ನೀನು ಮೊದಲು ಈ ಪ್ರಯಾಗಕ್ಷೇತ್ರ ಯಾತ್ರೆಯನ್ನುಮಾಡಿ ಅನಂತರ ಧರ್ಮದಿಂದ ರಾಜ್ಯಶಾಸನವನ್ನು ಮಾಡು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಹನ್ನೆರಡನೆಯ ಅಧ್ಯಾಯ ಮುಗಿದುದು*



## ಪ್ರಯಾಗ ಮಾಹಾತ್ಮೆ

**ಅಧ್ಯಾಯ - ೧೧೩**

### ನಂದಿಕೇಶ್ವರ ಉವಾಚ

**ಭ್ರಾತೃಭಿಃ ಸಹಿತಾಃ ಸರ್ವೇದ್ರೌಪದ್ಯಾಸಹಭಾರ್ಯಯಾ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಗುರೂನ್‌ದೇವಾನತರ್ಪಯನ್ ॥**

**ನಂದಿಕೇಶ್ವರ** :- ಧರ್ಮರಾಜನು ಮಾರ್ಕಂಡೇಯ ಮಹಾಮುನಿಗಳು ಹೇಳಿದ ಪ್ರಯಾಗಕ್ಷೇತ್ರದ ಮಹಿಮೆಯನ್ನು ಕೇಳಿ ಪರಮಸಂತುಷ್ಟನಾದನು. ಸಹೋದರರಾದ ಪಾಂಡವರು ಮತ್ತು ಮಡದಿಯಾದ ದ್ರೌಪದಿಯೊಡನೆ ಗುರು ಹಿರಿಯರಿಗೂ ಬ್ರಾಹ್ಮಣೋತ್ತಮರಿಗೂ ನಮಸ್ಕರಿಸಿ ಪೂಜಿಸಿ ಎಲ್ಲರನ್ನೂ ತೃಪ್ತಿಪಡಿಸಿದರು. ಅದೇ ಕಾಲದಲ್ಲಿ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನು ಅಲ್ಲಿಗೆ ದಯಮಾಡಿಸಿದನು. ಪಾಂಡವರೆಲ್ಲರೂ ತಕ್ಷಣ ಎದ್ದು ನಿಂತು, ಆ ಸ್ವಾಮಿಯನ್ನು ಎದುರುಗೊಂಡು ಸ್ವಾಗತಮಾಡಿ, ಸತ್ಕಾರಗೈದು ಬರಮಾಡಿಕೊಂಡರು. ಭಗವಾನ್ ಶ್ರೀಕೃಷ್ಣನೂ ಉಳಿದ ಮಹಾಮಹರ್ಷಿಗಳೂ ಕೂಡಿ ಧರ್ಮರಾಜನಿಗೆ ಧರ್ಮಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಗೈದರು. ಅನಂತರ ಮಾರ್ಕಂಡೇಯ ಮಹರ್ಷಿಗಳು ಪಾಂಡವರಿಗೆಲ್ಲ ಶುಭಾಶೀರ್ವಾದಮಾಡಿ ತಮ್ಮ ಆಶ್ರಮಕ್ಕೆ ತೆರಳಿದರು. ಇತ್ತ ಧರ್ಮರಾಜನಾದರೂ ತನ್ನ ಸಹೋದರರೊಂದಿಗೆ ಜ್ಞಾನಿಗಳಿಗೆ ದಾನಧರ್ಮಗಳನ್ನೆಲ್ಲ ನೀಡಿ ಪುಣ್ಯ ಕರ್ಮಗಳನ್ನೆಲ್ಲಮಾಡಿ ಶ್ರೀ ಕೃಷ್ಣನ ಹಾಗೂ ಗುರು ಹಿರಿಯರ ಆದೇಶದಂತೆ ನ್ಯಾಯಸಮ್ಮತವಾಗಿ ರಾಜ್ಯವನ್ನು ಆಳುತ್ತ ಧರ್ಮಚಕ್ರ ಪ್ರವರ್ತಕನಾಗಿ ಇದ್ದನು. ಪ್ರಯಾಗಕ್ಷೇತ್ರದ ಈ ದಿವ್ಯವಾದ ಮಹಾಮಹಿಮೆಯನ್ನು ಶ್ರದ್ಧೆಯಿಂದ ಪಠಿಸುವವರೂ ಮತ್ತು ಪ್ರತಿದಿನ

ಪ್ರಾತಃಕಾಲದಲ್ಲಿ ಪ್ರಯಾಗವನ್ನು ಸ್ಮರಿಸುವವರೂ ಸರ್ವಪಾಪಗಳಿಂದ ಬಿಡುಗಡೆ ಹೊಂದಿ ರುದ್ರಲೋಕವನ್ನು ಹೊಂದುತ್ತಾರೆ.

**ವಾಸುದೇವ** - ಮಹಾರಾಜ, ನೀನು ನಿಶ್ಚಿಂತನಾಗಿ ಪ್ರಯಾಗಕ್ಷೇತ್ರದಲ್ಲಿ ನಿಂತು ಜಪ ತಪ ಹೋಮ ಹವನಾದಿ ಪುಣ್ಯಕರ್ಮಗಳನ್ನುಮಾಡು. ನಿತ್ಯದಲ್ಲಿಯೂ ಪ್ರಯಾಗವನ್ನು ನೆನಿಸು. ಇದರಿಂದ ನಿನಗೆ ಸದ್ಗತಿಯಾಗುವದರಲ್ಲಿ ಸಂದೇಹವಿಲ್ಲ. ಇದು ನನ್ನ ಆಜ್ಞೆ. ಪ್ರಯಾಗ ಕ್ಷೇತ್ರದಲ್ಲಿಯೇ ವಾಸಿಸಬೇಕು. ಅದು ಆಗದಿದ್ದರೆ ಒಮ್ಮೆ ಪ್ರಯಾಗಯಾತ್ರೆಯನ್ನಾದರೂ ಮಾಡಿ ಬರಬೇಕು. ಇದರಿಂದ ಮಾನವನ ದುರಿತಗಳೆಲ್ಲ ದೂರವಾಗಿ ಅವನು ರುದ್ರಲೋಕವನ್ನು ಪಡೆಯುವನು. ಈ ತೀರ್ಥಯಾತ್ರೆಯ ಪುಣ್ಯಫಲ ದೊರಕಬೇಕಾದರೆ ಮೊದಲು ಅಹಂಕಾರವನ್ನು ಬಿಡಬೇಕು. ದೇವರು ಕೊಟ್ಟದ್ದರಲ್ಲಿಯೇ ತೃಪ್ತನಾಗಿ ವಿಹಿತ ಕರ್ಮಾನುಷ್ಠಾನ ಮಾಡುತ್ತ ಜಿತೇಂದ್ರಿಯನಾಗಿ ಶುಚಿರ್ಭೂತನಾಗಿ ದೇವತಾರಾಧನೆ ಮಾಡುತ್ತಲಿರಬೇಕು. ಕಾಮಕ್ರೋಧಗಳನ್ನು ಬಿಡಬೇಕು. ಸತ್ಯವನ್ನು ನುಡಿಯಬೇಕು. ಸತ್ಯನಿಷ್ಠನಾಗಿ ನಡೆಯಬೇಕು. ಪ್ರಾಣಿಗಳ ಮೇಲೆ ದಯಾಪೂರ್ಣನಾಗಿರಬೇಕು. ಪರೋಪಕಾರವನ್ನು ಮಾಡಬೇಕು. ಅಂದರೆ ಮಾತ್ರ ತೀರ್ಥಯಾತ್ರೆಯು ಸಫಲವಾಗುವದು.

ಮಹಾತ್ಮರಾದ ಋಷಿಗಳು ನಿರಂತರವೂ ಯಜ್ಞಯಾಗಾದಿಗಳನ್ನು ಮಾನವರು ಅವಶ್ಯವಾಗಿ ಮಾಡಬೇಕೆಂದು ಹೇಳುತ್ತಾರೆ. ಆದರೆ ಸಾಮಾನ್ಯ ಮನುಷ್ಯರಿಗೆ ಅಷ್ಟೆಲ್ಲ ಯಜ್ಞಯಾಗಗಳನ್ನು ಮಾಡುವದು ಸಾಧ್ಯವಾಗುವದಿಲ್ಲ. ಯಜ್ಞಗಳು ಬಹುವಿಧವಾಗಿವೆ. ಅವುಗಳನ್ನು ಮಾಡಬೇಕಾದರೆ ವಿಪುಲ ಸಾಧನಸಲಕರಣೆಗಳು ಬೇಕು. ಆ ಎಲ್ಲ ಸಾಧನ ಸಾಮಗ್ರಿಕಲಾಪವನ್ನು ಸಜ್ಜುಗೊಳಿಸಿಕೊಂಡು ಯಜ್ಞಯಾಗಾದಿಗಳನ್ನು ವಿಧಿಪೂರ್ವಕವಾಗಿ ಯಥಾಸಾಂಗ ನೆರವೇರಿಸುವದು ರಾಜಮಹಾರಾಜರಾದವರಿಗೆ ಮಾತ್ರ ಸಾಧ್ಯ. ಇಲ್ಲವೇ ಲಕ್ಷಾಧೀಶಕೋಟ್ಯಾಧೀಶರಾದ ಸಿರಿವಂತರಿಗೆ ಶಕ್ಯ. ಆದರೆ ದರಿದ್ರ್ಯಗೂ, ಪಾಮರರೂ, ಸಿರಿವಂತರೂ ಎಲ್ಲರೂ ಸಮನಾಗಿಯೇ ಸಾಧಿಸಬಹುದಾದ, ಯಜ್ಞಯಾಗಗಳಿಗೆ ಸಮಾನವಾದ ಪುಣ್ಯಫಲವನ್ನು ನೀಡುವ ವಿಶೇಷ ಕರ್ಮವೊಂದಿದೆ. ಆ ಧರ್ಮಕರ್ಮದ ರಹಸ್ಯವನ್ನು ನಾನಿಂದು ನಿನಗೆ ತಿಳಿಸುತ್ತೇನೆ ಕೇಳು. ಮಹಾಮಹಾಮುನಿಗಳೂ ಇದನ್ನು ಶ್ರೇಷ್ಠವಾದ ಧರ್ಮ ರಹಸ್ಯ ಎಂದು ಕರೆದಿದ್ದಾರೆ. ಪುಣ್ಯತೀರ್ಥಗಳ ಯಾತ್ರೆಯೇ ಈ ಧರ್ಮರಹಸ್ಯ. ದಿವ್ಯತೀರ್ಥಗಳ ಯಥಾಸಾಂಗಯಾತ್ರೆಯು ಯಜ್ಞಯಾಗಗಳಿಗಿಂತ ಮಿಗಿಲಾಗಿದೆ. ಹತ್ತು ಸಾವಿರ ಪುಣ್ಯ ತೀರ್ಥಗಳೂ ಮೂರು ಕೋಟಿ ನದಿಗಳೂ ಮಾಘಮಾಸದಲ್ಲಿ ಗಂಗಾನದಿಗೆ ಬಂದು ಸೇರುತ್ತವೆ. ಆದುದರಿಂದ ಪುಣ್ಯತೀರ್ಥಗಳ ಯಾತ್ರೆಯನ್ನು ಮಾನವರು ಅವಶ್ಯವಾಗಿ ಮಾಡಬೇಕು. ಧರ್ಮರಾಜ, ಧರ್ಮಾತ್ಮನಾದ ನೀನು ಈ ಎಲ್ಲ ಪುಣ್ಯತೀರ್ಥಗಳ ಯಾತ್ರೆಮಾಡಿ ಪುಣ್ಯವನ್ನು ಪಡೆ. ನಿಷ್ಕಂಟಕವಾಗಿ ರಾಜ್ಯವನ್ನು ಆಳು. ನಿಶ್ಚಿಂತನಾಗಿ ಧರ್ಮಕಾರ್ಯವನ್ನು ನೆರವೇರಿಸು. ನಾನಿನ್ನು ಬರುತ್ತೇನೆ. ನೀನು ಮತ್ತೆ ವಿಶೇಷ ಧರ್ಮಕಾರ್ಯಗಳನ್ನು ಕೈಕೊಂಡಾಗ ನಾನು ದರ್ಶನವೀಯುತ್ತೇನೆ.

**ನಂದಿಕೇಶ್ವರ :-** ಮಹಾ ತಪಸ್ವಿಗಳಾದ ಮಾರ್ಕಂಡೇಯ ಮಹರ್ಷಿಗಳು ಧರ್ಮರಾಜನಿಗೆ ಹೀಗೆ ಧರ್ಮೋಪದೇಶಮಾಡಿ ಅಲ್ಲಿಯೇ ಅದೃಶ್ಯರಾದರು. ಅವರು ತೆರಳಿದ ಬಳಿಕ ಧರ್ಮರಾಜನು ಶಾಸ್ತ್ರೋಕ್ತವಾದ ವಿಧಿಯಿಂದ ತನ್ನ ಕುಟುಂಬ ಪರಿವಾರ ಸಮೇತನಾಗಿ ಸ್ನಾನಮಾಡಿ ಕೃತಕೃತ್ಯನಾಗಿ ಶಾಂತಿ ಸಂತಸಗಳನ್ನು ಪಡೆದನು. ದೇವರ್ಷಿಯಾದ ನಾರದ, ನೀನೂ ಪ್ರಯಾಗ ಕ್ಷೇತ್ರಕ್ಕೆ ಹೋಗು. ಆ ಪುಣ್ಯ ತೀರ್ಥದಲ್ಲಿ ಸ್ನಾನಮಾಡಿ ನಿನ್ನ ಜನ್ಮವನ್ನು ಸಾರ್ಥಕಗೊಳಿಸು.

**ಸೂತ** :- ನಂದಿಕೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಕೂಡಲೇ ನಾರದ ಮಹಾಮುನಿಯು ಪ್ರಯಾಗ ಕ್ಷೇತ್ರಕ್ಕೆ ಪಯಣ ಬೆಳೆಸಿದನು. ಆ ಪುಣ್ಯ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿ ಜಪ ಮಾಡಿದನು. ಬ್ರಾಹ್ಮಣೋತ್ತಮರಿಗೆ ದಾನ ಧರ್ಮಗಳನ್ನು ನೀಡಿದನು. ಹೀಗೆ ಪ್ರಯಾಗದ ಪುಣ್ಯಕ್ಷೇತ್ರದ ಪಾವನ ತೀರ್ಥದಲ್ಲಿ ಸ್ನಾನಮಾಡಿ, ದಾನನೀಡಿ, ಭಗವಂತನ ಧ್ಯಾನೋಪಾಸನೆಗೈದು, ಕೃತಾರ್ಥನಾಗಿ ಸ್ವಸ್ಥಾನಕ್ಕೆ ಆ ದೇವಮುನಿ ನಾರದನು ಪ್ರಯಾಣ ಬೆಳೆಸಿದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಹದಿಮೂರನೆಯ ಅಧ್ಯಾಯ ಮುಗಿದುದು*



**ಅಧ್ಯಾಯ - ೧೧೪**

## ಭೂಮಂಡಲದಲ್ಲಿ ಇರುವ ಸಮುದ್ರ, ಪರ್ವತ ನದೀ ದೇಶಗಳು ಎಷ್ಟು? ಅವುಗಳ ಎತ್ತರ ಬಿತ್ತರ, ಉದ್ದ ಅಗಲ ಎಷ್ಟು?

**ಋಷಿಯ ಉವಾಚಃ**

**"ಕತಿ ದ್ವೀಪಾಃ ಸಮುದ್ರಾ ವಾಪರ್ವತಾ ವಾ ಕತಿಪ್ರಭೋ ।**
**ಕಿಯಂತಿಚೈವ ವರ್ಷಾಣಿತೇಷು ನದ್ಯಶ್ಚಕಾಃಸ್ಮೃತಾಃ ॥"**

**ಋಷಿಗಳು** :- ಸೂತಾಚಾರ್ಯ, ಈ ಭೂಮಂಡಲದಲ್ಲಿ ದ್ವೀಪಗಳು ಎಷ್ಟಿವೆ ? ಸಮುದ್ರಗಳು ಎಷ್ಟು? ಪರ್ವತಗಳಿಗೆ ಸಂಖ್ಯೆ ಇದೆಯೆ? ಭರತವರ್ಷ, ಮುಂತಾದ ಭೂಖಂಡಗಳು ಈ ಪೃಥ್ವೀ ಮಂಡಲದಲ್ಲಿ ಎಷ್ಟು ಇರುತ್ತವೆ? ಹಾಗೂ ಈ ತಿರೆಯಲ್ಲಿರುವ ತೊರೆಗಳು ಎಷ್ಟು ? ಯಾವು ಯಾವವು ? ಈ ಭೂಮಂಡಲದ ಅಳತೆ ಎಷ್ಟು? ಲೋಕಾಲೋಕ ಎಂಬ ಪರ್ವತದ ಪ್ರಮಾಣ ಮತ್ತು ವಿಸ್ತಾರ ಎಷ್ಟಿದೆ? ಸೂರ್ಯ ಚಂದ್ರರ ಗತಿ ಸ್ಥಿತಿ ಹೇಗಿದೆ? ಏನು? ಎಂತು? ಇದೆಲ್ಲವನ್ನೂ ಬಲ್ಲ ನೀವು ವಿವರವಾಗಿ ವಿಸ್ತಾರವಾಗಿ ನಮಗೆ ನಿರೂಪಿಸಿರಿ. ಈ ಎಲ್ಲಾ ವಿಷಯವನ್ನು ನಿಮ್ಮ ಮುಖದಿಂದಲೇ ಕೇಳಬೇಕೆಂದು ಬಲವತ್ತರ ಬಯಕೆ ನಮಗೆ.

**ಸೂತ** :- ದ್ವೀಪಗಳು ಒಂದೇ ಎರಡೇ ಸಾವಿರಾರು ! ಆದರೆ ಅವೆಲ್ಲವನ್ನೂ ಮುಖ್ಯವಾಗಿ ಏಳು ದ್ವೀಪಗಳಾಗಿ ವಿಗಂಡಿಸಲಾಗಿದೆ.

ಈ ಭೂಮಂಡಲದ ಎತ್ತರ ಬಿತ್ತರಗಳನ್ನು ಪೂರ್ಣವಾಗಿ ವಿವರಿಸುವದು ಸಾಧ್ಯವಿಲ್ಲ. ಆದರೂ ಸಂಕ್ಷೇಪವಾಗಿ ಈ ಸಪ್ತದ್ವೀಪಗಳ ನೆಲೆ, ನಿಲುವು, ಇರವು,

ಅಳತೆ ಮುಂತಾದವುಗಳನ್ನು, ಸೂರ್ಯ ಚಂದ್ರರ ಸ್ಥಿತಿಗತಿಗಳನ್ನು ಸಾಧ್ಯವಾದಷ್ಟು ತಿಳಿಸುತ್ತೇನೆ. ಈ ಏಳು ನಡುಗಡ್ಡೆಗಳ ಉದ್ದಳತೆಯನ್ನು ಕಣ್ಣಿನಿಂದ ತಿಳಿಯಲು, ಕೈಗಳಿಂದ ಅಳೆಯಲು, ಉಳಿದ ಇಂದ್ರಿಯಗಳಿಂದ ಅರಿಯಲು ಸಾಧ್ಯವಿಲ್ಲ. ಆದ್ದರಿಂದ ಅವುಗಳನ್ನು ಅಪರೋಕ್ಷ ಜ್ಞಾನಿಗಳು ತಮ್ಮ ತರ್ಕದಿಂದ ತೂಗಿ ತಿಳಿದು ನಿರ್ಧರಿಸಿದಂತೆ ನಾನು ನಿಮಗೆ ನಿರೂಪಿಸುತ್ತೇನೆ. ದಿವ್ಯ ದೃಷ್ಟಿಯುಳ್ಳ ಜ್ಞಾನಿಗಳ ತರ್ಕವು ಪ್ರತ್ಯಕ್ಷದಷ್ಟೇ ಪ್ರಮಾಣ ಭೂತವಾದುದು. ಅವರ ಅನುಭಾವದ ನುಡಿ ಹದಿನಾರುಆಣೆ ಸತ್ಯ. ಅಂಥ ಮಹರ್ಷಿಗಳು ಹೇಳಿದ್ದನ್ನೇ ನಾನು ನಿಮಗೆ ವಿವರಿಸುವೆ. ನಾವು ಈಗ ನೆಲೆಸಿರುವ ಈ ಜಂಬೂದ್ವೀಪವು ಆ ಏಳು ದ್ವೀಪಕಲ್ಪಗಳಲ್ಲಿ ಒಂದು. ಇದರ ವ್ಯಾಪ್ತಿ ವೈಶಾಲ್ಯಗಳನ್ನು ತಿಳಿಸುತ್ತೇನೆ. ಕೇಳಿ.

ಈ ಜಂಬೂದ್ವೀಪವು ಒಂದು ಲಕ್ಷ ಯೋಜನೆ ಈ ವಿಸ್ತಾರವಾಗಿದೆ. ಇದರಲ್ಲಿ ಇರುವ ಜನ ಜನಪದಗಳು ಅಸಂಖ್ಯ. ಇಲ್ಲಿರುವ ಮಂಗಳ ಗ್ರಾಮ ಪಟ್ಟಣಗಳಿಗೆ ಲೆಕ್ಕವಿಲ್ಲ. ಸಿದ್ಧಚಾರಣರಿಗೆಲ್ಲ ಇದು ನೆಲವೀಡು. ಅಲ್ಲಲ್ಲಿ ಕಂಗೊಳಿಸುತ್ತಿವೆ ಕಾಡು ನಾಡು ಮೇಡು. ಇಲ್ಲಿಯ ಎತ್ತರವಾದ ಬೆಟ್ಟಗಳಿಂದ ಅನೇಕ ನದಿಗಳು ಹುಟ್ಟಿ ಹೊಮ್ಮಿ-ಧುಮ್ಮಿಕ್ಕಿ ಎಲ್ಲೆಡೆಗೂ ಹರಿದುಹೋಗುವವು. ಇದರಲ್ಲಿ ಏಳು ಕುಲಪರ್ವತಗಳು ಗಡಿಯ ಗಿರಿಗಳಾಗಿ ಪಶ್ಚಿಮದಿಂದ ಪೂರ್ವಕ್ಕೆ ಹಬ್ಬುತ್ತ ಹೋಗಿವೆ. ಪೂರ್ವದಿಂದ ಪಶ್ಚಿಮಕ್ಕೆ ಮೈಚಾಚಿರುವ ಈ ಬೆಟ್ಟ ಮಾಲೆಗಳ ಎರಡೂ ಕಡೆಯ ಅಂಚುಗಳು ಸಮುದ್ರದ ತಡಿಯ ರೇಖೆಯನ್ನು ತೀಡುತ್ತವೆ. ಇದರಲ್ಲಿ ಅತಿ ಎತ್ತರವಾದ ಬಾನುದ್ದ ಬೆಳೆದ ಬೆಟ್ಟವು ಯಾವಾಗಲೂ ಮಂಜಿನಿಂದ ತುಂಬಿರುವದರಿಂದ ಹಿಮಾಚಲ ಎಂಬ ಹೆಸರು ಬಂದಿದೆ. ಅದರ ಮುಗಿಲು ಮುಟ್ಟುವ ಎತ್ತರವಾದ ಶೃಂಗಗಳು ಬಂಗಾರ ಬಣ್ಣದಿಂದ ಹೊಳೆಯುತ್ತಿರುವುದರಿಂದ ಹೇಮಕೂಟ ಎಂದು ಅದಕ್ಕೆ ಅನ್ವರ್ಥಕವಾದ ಹೆಸರು ಬಂದಿದೆ. ನಿಷಧ ಎಂಬ ಮತ್ತೊಂದು ಪರ್ವತವು ನೋಡಲಿಕ್ಕೆ ಬಹು ಅಂದ. ಇದರಂತೆ ಮೇರುಪರ್ವತವೂ ಬಹು ಚಂದ.

ಅದು ಹೊನ್ನಿನ ಆಗರ. ಬಗೆಬಗೆಯ ಬಣ್ಣಗಳಿಂದ ಅದರ ಹೊಳಪು ಕಣ್ಣು ಕೋರೈಸುವದು. ಅದರ ಬಸಿರಿನಲ್ಲಿ ಬರೀ ಬಂಗಾರತುಂಬಿದೆ. ಒಂದು ಮರದ ಆಕಾರದಲ್ಲಿ ಅನುರೂಪ ಪ್ರಮಾಣದಿಂದ ಹಬ್ಬಿ ಹೊಮ್ಮಿ ಬಗೆಬಗೆಯ ಬಣ್ಣಗಳಿಂದ ಕಂಗೊಳಿಸುವ ಈ ಮೇರುಗಿರಿಯು ಬ್ರಹ್ಮದೇವರ ಹೊಕ್ಕಳಿನ ಗಂಟಿನಿಂದ ಉತ್ಪನ್ನವಾಯಿತು. ಇದರ ಪೂರ್ವದ ಮೈ ಬೆಳ್ಳಗೆ ಬ್ರಾಹ್ಮಣರಂತೆ. ದಕ್ಷಿಣ ಭಾಗ ವೈಶ್ಯರಂತೆ ಹೊಂಬಣ್ಣದಿಂದ ಮಿನುಗುತ್ತದೆ. ಪಶ್ಚಿಮ ಭಾಗವು ಶೂದ್ರವರ್ಣದ ಸಂಕೇತವಾಗಿ ಲವಂಗಕಪ್ಪುಬಣ್ಣದಿಂದ ಕೂಡಿದೆ. ಉತ್ತರ ಬದಿಯೂ ಕ್ಷತ್ರಿಯವರ್ಣದ ಸಂಕೇತವಾಗಿ ಕೆಂಬಣ್ಣದಿಂದ ಕಂಗೊಳಿಸುತ್ತದೆ. ಇನ್ನೊಂದು ವರ್ಷ ಪರ್ವತವಾದ ನೀಲಗಿರಿಯು ವೈಢೂರ್ಯ ರತ್ನಗಳಿಂದ ಹಚ್ಚುಹಸುರಾಗಿ ಹೊಳೆಯುತ್ತದೆ. ಬಂಗಾರಬಣ್ಣದ ಶ್ವೇತಪರ್ವತವು ಹಳದಿ ಬಣ್ಣದಿಂದ ಹೊಳಪುಗೂಡಿದೆ.

ನವಿಲುಗರಿಯ ಬಣ್ಣದಿಂದ ಶೃಂಗಪರ್ವತವು ಬಂಗಾರದ ನಿಧಿಯಾಗಿ ಕಂಗೊಳಿಸುತ್ತದೆ. ಈ ವರ್ಷ ಪರ್ವತಗಳು ಒಂದರಿಂದ ಮತ್ತೊಂದು ಒಂಭತ್ತು ಸಾವಿರ ಯೋಜನ ದೂರದಲ್ಲಿ ಇರುತ್ತದೆ. ಜಂಬೂ ದ್ವೀಪದ ನಟ್ಟನಡುವೆ ಇಪ್ಪತ್ತುನಾಲ್ಕು ಸಾವಿರ ಯೋಜನ ವಿಸ್ತಾರಉಳ್ಳ ಇಲಾವೃತ ವರ್ಷ. ಇದರ ನಟ್ಟುನಡುವೆ ಮಹಾಮೇರು ಹೊಗೆ ಇಲ್ಲದ ಬೆಂಕಿಯ ಬೆಟ್ಟದಂತೆ ಬೆಳಗುತ್ತದೆ.

ಈ ಏಳು ವರ್ಷ ಅಥವಾ ಭೂಖಂಡಗಳ ಗಡಿಯನ್ನು ಗುರುತಿಸುವ ಸೀಮಾ ಪರ್ವತಗಳೆಲ್ಲವೂ ದಕ್ಷಿಣೋತ್ತರ ಎರಡು ಸಾವಿರ ಯೋಜನೆ ಹಬ್ಬಿರುತ್ತವೆ. ಈ ಗಡಿಗುಡ್ಡಗಳು, ಜಂಬೂದ್ವೀಪವು ಆಯಾ ಪ್ರದೇಶದಲ್ಲಿ ಎಷ್ಟು ಅಗಲವಾಗಿದೆಯೋ ಅಷ್ಟೇ ಉದ್ದವಾಗಿ ಹಬ್ಬಿರುವವು. ನೀಲ ನಿಷಧ ಪರ್ವತಗಳು ಉದ್ದಳತೆಯಲ್ಲಿ ಸಮವಾಗಿವೆ. ಉಳಿದ ಸೀಮಾ ಶೈಲಗಳು ಇವುಗಳಿಗಿಂತ ಪ್ರಮಾಣದಲ್ಲಿ ಕಡಿಮೆ. ಶ್ವೇತಪರ್ವತವು ಹೇಮಕೂಟ ಪರ್ವತದಷ್ಟು ಇದೆ. ಶೃಂಗವಾನ್ ಪರ್ವತವು ಹಿಮಾಚಲಕ್ಕೆ ಸಮವಾಗಿದೆ. ನಿಷಧ ಪರ್ವತವು ಜಂಬೂದ್ವೀಪದಷ್ಟು ಅಂದರೆ ಒಂದು ಲಕ್ಷ ಯೋಜನ ಉನ್ನತವಾಗಿದೆ. ಹೇಮಕೂಟಪರ್ವತವು ನಿಷಧ ಪರ್ವತಕ್ಕಿಂತ ಹನ್ನೆರಡು ಸಾವಿರ ಯೋಜನ ಕಡಿಮೆ. ಹಿಮಾಲಯವು ಇಪ್ಪತ್ತು ಸಾವಿರದಷ್ಟು ಕಡಿಮೆ. ಅರ್ಥಾತ್ ಹೇಮಕೂಟಗಿರಿ ಪೂರ್ವಪಶ್ಚಿಮ ಎಂಬತ್ತೆಂಟು ಸಾವಿರ ಯೋಜನ, ಹಿಮಾಚಲ ಎಂಬತ್ತು ಸಾವಿರ ಯೋಜನ ಉದ್ದವಾಗಿದೆ. ಈ ಕುಲಪರ್ವತಗಳ ನಡುವಿರುವ ದೇಶಗಳಿಗೆ ವರ್ಷಗಳು ಎಂದು ಹೆಸರಿದೆ. ಈ ವರ್ಷಗಳಲ್ಲಿ ಮತ್ತೆ ಬೇರೆ ಬೇರೆ ದೇಶಪ್ರದೇಶಗಳಿವೆ. ಅವುಗಳಿಗೆ ಲೆಕ್ಕವಿಲ್ಲ. ಆದರೆ ವರ್ಷಗಳ ಸಂಖ್ಯೆ ಏಳು ಮಾತ್ರ. ಈ ವರ್ಷಗಳು ಒಂದಕ್ಕೊಂದು ಬಹು ದೂರದಲ್ಲಿದ್ದು ಅವುಗಳ ನಡುವೆ ದಟ್ಟವಾದ ಬೆಟ್ಟಗಳ ಸಾಲು, ದರಿ, ಕೊಳ್ಳ, ಹೊಳೆ, ಹಳ್ಳ, ಜಲಪಾತ, ನದಿ ಮುಂತಾದವುಗಳು ಅಡ್ಡವಾಗಿರುವದರಿಂದ ಒಂದರಿಂದ ಇನ್ನೊಂದಕ್ಕೆ ಹೋಗುವದು ಅಶಕ್ಯ. ಈ ವರ್ಷ ಹಾಗೂ ಇವುಗಳ ನಡುವಿನ ಗಡಿಯ ಕಾಡುಗಳಲ್ಲಿ ಎಲ್ಲ ತರಹದ ಪ್ರಾಣಿಗಳೂ ವಾಸಿಸುತ್ತವೆ. ಹಿಮಾಲಯ ಪರ್ವತದಿಂದ ಕೂಡಿದ ಈ ವರ್ಷಕ್ಕೆ ಭಾರತವರ್ಷ ಎಂದು ಹೆಸರು.

ಹಿಮಾಲಯ ಪರ್ವತದಿಂದ ಆಚೆಗೆ ಹೇಮಕೂಟ ಪರ್ವತ. ಹಿಮಪರ್ವತದಿಂದ ಹೇಮಕೂಟ ಪರ್ವತದವರೆಗೆ ಮೈಚಾಚಿದ ನಡುವಿನ ಭೂಖಂಡವನ್ನು ಕಿಂಪುರುಷ ಖಂಡ ಎಂದು ಕರೆಯುವರು. ಕಿಂಪುರುಷವರ್ಷದ ಕೊನೆಗೆ ಹೇಮಕೂಟ ಪರ್ವತವು ಬಂಗಾರದ ಶಿಖರಗಳಿಂದ ಮುಗಿಲು ಮುಖಕ್ಕೆ ಮುದ್ದಿಡುತ್ತ ತಲೆಯೆತ್ತಿ ನಿಂತಿದೆ. ಆ ಹೇಮಕೂಟ ಗಿರಿಯಿಂದ ನಿಷಧಪರ್ವತದ ವರೆಗೆ ಇರುವ ಪ್ರದೇಶವು ಹರಿವರ್ಷ. ನಿಷಧಪರ್ವತದಿಂದ ಮೇರುಪರ್ವತದವರೆಗೆ ವ್ಯಾಪಿಸಿದ ಭೂಖಂಡಕ್ಕೆ ಇಲಾವೃತ ವರ್ಷ ಎನ್ನುವರು. ಅದರ ಗಡಿಯಲ್ಲಿ ನೀಲಪರ್ವತವಿದ್ದು, ಅಲ್ಲಿಂದ ಶ್ವೇತ ಪರ್ವತದವರೆಗೆ ರಮ್ಯಕವರ್ಷವೂ ಬಿತ್ತರಿಸಿದೆ. ಶ್ವೇತಪರ್ವತದಿಂದ ಆಚೆ ಶೃಂಗವಂತ ಪರ್ವತದ ವರೆಗೆ ಹಿರಣ್ಮವರ್ಷವು ಪಸರಿಸಿದೆ.

ಇವುಗಳಲ್ಲಿ ದಕ್ಷಿಣೋತ್ತರ ಭೂಖಂಡಗಳಾದ ಭಾರತವರ್ಷ ಮತ್ತು ಕುರು ವರ್ಷಗಳು ಬಿಲ್ಲಿನಾಕಾರದಂತೆ ಬಗ್ಗಿವೆ. ಉಳಿದ ಹಿರಣ್ಮಕ, ರಮ್ಯಕ, ಹರಿವರ್ಷ ಮತ್ತು ಕಿಂಪುರುಷ ವರ್ಷಗಳು ದೀರ್ಘವಾಗಿವೆ. ಈ ಏಳೂ ವರ್ಷಗಳ ನಟ್ಟನಡುವಿನ ಭೂಖಂಡವೇ ಇಲಾವೃತ ವರ್ಷ ಎನಿಸುವದು. ಈ ಇಲಾವೃತ ವರ್ಷದ ನಟ್ಟನಡುವೆ ಮೇರು ಪರ್ವತವು ಮುಗಿಲೆತ್ತರ ಬೆಳೆದು ನಿಂತಿದೆ. ಇಲಾವೃತ ವರ್ಷದ ಮಧ್ಯದಲ್ಲಿರುವ ಮೇರುಪರ್ವತದ ಹಿಂದೆ ನಿಷಧ ಪರ್ವತದವರೆಗೆ ಇರುವ ಭೂಭಾಗಕ್ಕೆ ದಕ್ಷಿಣವೇದಿ ಎನ್ನುವರು. ಮೇರು ಪರ್ವತದ ಮುಂದೆ ನೀಲಪರ್ವತದವರೆಗೆ ಚಾಚಿದ ಭೂಖಂಡಕ್ಕೆ ಉತ್ತರವೇದಿ ಎಂದು ಕರೆಯುವರು. ಇವೆರಡರ ನಡುವೆ ಮೇರು ಪರ್ವತವಿದೆ. ಇಲಾವೃತವರ್ಷದ ಪಶ್ಚಿಮದಲ್ಲಿ ನೀಲಪರ್ವತದ ದಕ್ಷಿಣಕ್ಕೆ ನಿಷಧಗಿರಿಯ ಉತ್ತರ ನಿಟ್ಟಿನಲ್ಲಿ ಮಾಲ್ಯವಂತ ಶೈಲವು ದಕ್ಷಿಣೋತ್ತರವಾಗಿ ಪಸರಿಸಿದೆ. ಅದರ ಉದ್ದಳತೆ ಮೂವತ್ತೆರಡು ಸಾವಿರ ಯೋಜನವಾಗಿದ್ದು, ಎತ್ತರ ಒಂದು ಸಾವಿರ ಯೋಜನದಷ್ಟಿದೆ. ಇದರಂತೆ ಇಳಾವೃತ ವರ್ಷದ ಪೂರ್ವಭಾಗದಲ್ಲಿ ನೀಲಗಿರಿಯ ಅಂಚಿನಿಂದ ನಿಷಧ ಪರ್ವತದ ಪಾದಪ್ರದೇಶದವರೆಗೆ ಮೂವತ್ತೆರಡು ಸಾವಿರ ಉದ್ದವಾದ ಗಂಧಮಾದನ ಗಿರಿಯು ದಕ್ಷಿಣೋತ್ತರವಾಗಿ ಪಸರಿಸಿದೆ. ಈ ಎರಡು ಮಹಾಗಿರಿಗಳಿಂದ ಏರ್ಪಟ್ಟು ಭದ್ರಾಶ್ವ ಮತ್ತು ಕೇತುಮಾಲ ಎಂಬ ವರ್ಷಗಳ ನಡುವೆ ಬಂಗಾರದ ಬೆಟ್ಟವೆಂದು ಹೆಸರಾದ ಮೇರುಪರ್ವತ ಕಂಗೊಳಿಸುವದು.

ಹಿಂದೆ ಹೇಳಿದಂತೆ ಬ್ರಾಹ್ಮಣಾದಿ ನಾಕುವರ್ಣಗಳ ಬೇರೆ ಬೇರೆ ಬಣ್ಣಗಳ ವರ್ಣವೈವಿಧ್ಯದಿಂದ ಕಣ್ಗೆಸೆಯುವ ಈ ಮೇರುಗಿರಿಯು ಎಂಬತ್ತುನಾಕು ಸಾವಿರ ಯೋಜನ ಎತ್ತರವಿದೆ. ನೆಲದಲ್ಲಿ ಹದಿನಾರು ಸಾವಿರ ಯೋಜನ ಆಳ ಹುಗಿದಿದೆ. ಇದರ ವಿಸ್ತಾರ ಇಪ್ಪತ್ತೆಂಟು ಸಾವಿರ ಯೋಜನದಷ್ಟಿದೆ. ಈ ಮೇರು ಪರ್ವತದ ಸುತ್ತುಮುತ್ತು ಸುವರ್ಣಭೂಮಿ ಎಂದು ಹೆಸರಾದ ಅನೇಕ ದಿವ್ಯಭೂಮಿಗಳಿದ್ದು, ಅವುಗಳಲ್ಲಿ ದೇವತೆಗಳೂ ಗಂಧರ್ವರೂ ಅಪ್ಸರೆಯರೂ ಸಂತಸದಿಂದ ವಾಸಿಸುವರು. ಈ ಮೇರುವಿನ ಪೂರ್ವನಿಟ್ಟಿನಲ್ಲಿ ಭದ್ರಾಶ್ವ, ದಕ್ಷಿಣದಲ್ಲಿ ಭಾರತ, ಪಶ್ಚಿಮದಲ್ಲಿ ಕೇತುಮಾಲ, ಉತ್ತರದಲ್ಲಿ ಕುರುವರ್ಷ ಮುಂತಾದ ದೇಶಗಳು ಇರುತ್ತವೆ. ಈ ಮೇರು ಬೆಟ್ಟದ ಮರಿಗಿರಿಗಳಾದ ಮಂದರ, ಗಂಧಮಾದನ, ವಿಪುಲ, ಸುಪಾರ್ಶ್ವ ಪರ್ವತಗಳು ಅದನ್ನು ಆಶ್ರಯಿಸಿ ಬೆಳೆದಿವೆ. ಮಂದರ ಪರ್ವತದ ನಡುನೆತ್ತಿಯ ಮೇಲೆ ಅರುಣೋದಯ ಎಂಬ ಸರೋವರವು ಕಂಗೊಳಿಸುತ್ತದೆ. ಗಂಧಮಾದನಗಿರಿಯಲ್ಲಿ ಮಾನಸಸರೋವರ, ವಿಪುಲಾಚಲದಲ್ಲಿ ಶೀತೋದಕ, ಸುಪಾರ್ಶ್ವಗಿರಿಯಲ್ಲಿ ಭದ್ರೋದಕ ಎಂಬ ಸರೋವರಗಳು ಇರುತ್ತವೆ. ಇದರಂತೆ ಗಂಧಮಾದನ ಬೆಟ್ಟದಲ್ಲಿ ಕದಂಬ ವೃಕ್ಷವೂ, ಮಂದರ ಪರ್ವತದಲ್ಲಿ ನೇರಿಳೆಮರವೂ, ಸುಪಾರ್ಶ್ವದಲ್ಲಿ ಅರಳೆಯ ಗಿಡವೂ, ವಿಪುಲಗಿರಿಯಲ್ಲಿ ಆಲದಮರವೂ, ಶೋಭಿಸುತ್ತವೆ.

ಗಂಧಮಾದನಗಿರಿಯ ಪಶ್ಚಿಮದ ಬದಿಯಲ್ಲಿ ಅಮರಗಂಡಿಕ ಎಂಬ ಒಂದು ಭೂಖಂಡವಿದ್ದು ಅಲ್ಲಿ ನೆಲೆಸುವವರು ಕೇತುಮಾಲರು ಎಂದು ಪ್ರಸಿದ್ಧರಾಗಿದ್ದಾರೆ. ಅತ್ಯಂತ ಪುಣ್ಯವಂತರಾದ ಸ್ತ್ರೀ-ಪುರುಷರಿಗೆ ಮಾತ್ರ ಅಲ್ಲಿ ವಾಸಿಸುವ ಅವಕಾಶವು ದೊರೆಯುವದು. ಅಲ್ಲಿ ಇರುವ ಪುರುಷರು ಅಗ್ನಿಯಂತೆ ತೇಜಸ್ವಿಗಳು, ಸಿಂಹದಂತೆ ಸತ್ವಶಾಲಿಗಳು, ಸ್ತ್ರೀಯರು ಒಳ್ಳೇ ರೂಪವತಿಯರು. ನೈದಿಲೆಯ ಬಣ್ಣ, ಮಿಂಚುವ ಕಣ್ಣು, ನೋಡಿದ ಮಾತ್ರಕ್ಕೆ ಮೋಹ, ಮಮತೆ, ಮೈತ್ರಿಗಳನ್ನು ಮೂಡಿಸುವ ಸೌಂದರ್ಯ. ಅಲ್ಲಿ ಅತಿ ದೊಡ್ಡದಾದ ಒಂದು ಹಲಸಿನ ಮರವಿದ್ದು ಅದರ ರಸಪಾನ ಮಾಡಿ ಹತ್ತು ಸಾವಿರ ವರ್ಷ ಜನರು ಬಾಳಿ ಬೆಳಗುತ್ತಾರೆ.

ಮಾಲ್ಯವಂತ ಪರ್ವತದ ಪೂರ್ವ ನಿಟ್ಟಿನಲ್ಲಿ ಪೂರ್ವಗಂಡಿಕೆ ಎಂಬ ಪ್ರದೇಶವಿದೆ. ಅದನ್ನು ಭದ್ರಾಶ್ವವೆಂದೂ ಕರೆಯುತ್ತಾರೆ. ಮೂವತ್ತೆರಡು ಸಾವಿರಯೋಜನ ವಿಸ್ತಾರವಾದ ಈ ಭೂಖಂಡದಲ್ಲಿ ಭದ್ರಸಾಲ ಎಂಬ ವನದಲ್ಲಿ ಕಾಲಾಮ್ರ ಎಂಬ ಮಾವಿನಮರವು ಇರುವದು. ಆ ಮಾವಿನ ಹಣ್ಣಿನ ರಸವನ್ನು ಕುಡಿದು ಆ ದೇಶದ ಜನರೆಲ್ಲರೂ ನಿತ್ಯಯೌವ್ವನವಂತರಾಗಿ ಮೆರೆಯುತ್ತಿರುವರು. ಅಲ್ಲಿಯ ಸ್ತ್ರೀಪುರುಷರು ತಾವರೆಬಣ್ಣ, ಚಂದ್ರಕಾಂತಿ, ನರಗುಂಪಿನ ಉಸಿರು, ಚೆಲುವಿನ ಮುದ್ದಾದ ಮೈ, ಸೂಸುವ ಕಾಂತಿಗಳಿಂದ ಕಾಮ, ಕಾಮಿನಿಯಂತೆ ಕಮನೀಯತಮರಾಗಿ ಕಂಗೊಳಿಸುವರು. ಅವರ ಆಯುಷ್ಯ ಹತ್ತುಸಾವಿರ ವರ್ಷ.

**ಋಷಿಗಳು :-** ಸೂತ ಮುನಿಯೇ, ಮೇರುಪರ್ವತದ ಪೂರ್ವಪಶ್ಚಿಮ ಭಾಗಗಳಲ್ಲಿರುವ ಭದ್ರಾಶ್ವ ಹಾಗೂ ಕೇತುಮಾಲ ದೇಶಗಳ ವೃತ್ತಾಂತವನ್ನು ನೀವು ವಿವರವಾಗಿ ತಿಳಿಸಿದಿರಿ. ಆದರೆ ಆ ಮೇರುಗಿರಿಯ ಉತ್ತರದಲ್ಲಿರುವ ಬೆಟ್ಟ ಹಾಗೂ ಭೂಖಂಡಗಳ ವಿಷಯವನ್ನೂ ಮತ್ತು ಆ ನೆಲದಲ್ಲಿ ನೆಲೆಸಿದ ನರರ ವೃತ್ತಾಂತವನ್ನೂ ನಮಗೆ ತಿಳಿಸಿರಿ.

**ಸೂತ :-** ಶ್ವೇತಪರ್ವತದ ದಕ್ಷಿಣದಲ್ಲಿ ನೀಲಪರ್ವತದ ಎತ್ತರದಲ್ಲಿ ರಮ್ಯಕವರ್ಷ ಎಂಬ ಭೂಖಂಡವು ಇದೆ. ಇಲ್ಲಿರುವ ಜನರು ಹನ್ನೊಂದು ಸಾವಿರ ವರ್ಷ ಜೀವಿಸುವರು. ಅವರೆಲ್ಲರೂ ಸುಂದರರು ಶ್ವೇತವರ್ಣದವರು ಹಾಗೂ ಸುಸ್ವಭಾವಿಗಳು ಆ ಪುಣ್ಯಜೀವಿಗಳು. ಅಲ್ಲಿರುವ ಆಲದ ಮರದ ಹಣ್ಣಿನ ರಸವನ್ನು ಕುಡಿದು ದುಃಖವಿಲ್ಲದೇ ಆನಂದದಿಂದ ಬಾಳುತ್ತಾರೆ. ಶ್ವೇತಪರ್ವತದ ಉತ್ತರಕ್ಕೆ ಶೃಂಗಪರ್ವತದ ದಕ್ಷಿಣದಲ್ಲಿ ಹಿರಣ್ಯವರ್ಷ ಎಂಬ ಪ್ರದೇಶವು ಹಬ್ಬಿದೆ. ಇಲ್ಲಿ ಹೈರಣ್ವತಿ ಎಂಬ ನದಿಯು ಹರಿಯುತ್ತದೆ. ಇವರ ಆಯುರ್ಮಾನ ಹನ್ನೆರಡು ಸಾವಿರದ ಏಳುನೂರು. ಇಲ್ಲಿಯ ಜನರು ಬಲಿಷ್ಠರು ಶೂರರು, ಸುಖಿಗಳು. ಅವರನ್ನು ನೋಡಿದರೆ ಆನಂದ. ಅವರ ಮೈಬಣ್ಣ ಬೆಳ್ಳಗೆ. ಅಲ್ಲಿ ಬೆಳೆದ ಗಜನಿಂಬೆ ಎಂಬ ಹೆಮ್ಮರದ ಹಣ್ಣಿನರಸವನ್ನು ಕುಡಿದು ಅಲ್ಲಿಯ ಜನರು ಶಾಂತಿ, ಸಂತಸದಿಂದ ಜೀವಿಸುತ್ತಾರೆ.

ಶೃಂಗ ಪರ್ವತಕ್ಕೆ ರನ್ನ, ಹೊನ್ನಿನ ಮೂರು ಶಿಖರಗಳು ಇರುತ್ತವೆ. ಇದರ ಉತ್ತರಕ್ಕೆ ಸಮುದ್ರ ದಂಡೆಯ ದಕ್ಷಿಣದಲ್ಲಿ ವ್ಯಾಪಿಸಿದ ವಿಸ್ತಾರವಾದ ಭೂಭಾಗಕ್ಕೆ

ಕುರುವರ್ಷ ಎನ್ನುವರು. ಅದು ಯೋಗಿಗಳಿಗೂ, ಸಿದ್ಧರಿಗೂ ಆಶ್ರಯವಾದ ಪುಣ್ಯ ಭೂಮಿಯಾಗಿದೆ. ಅಲ್ಲಿರುವ ಮರಗಳ ತುಂಬ ಮಧುರ ಫಲ. ಆ ಮರಗಳು ತನಿವಣ್ಣುಗಳನ್ನು ನೀಡುವದಲ್ಲದೇ ಬಟ್ಟೆ ಆಭರಣಗಳನ್ನೂ ಕೂಡ ನೀಡುತ್ತವೆ. ಅಲ್ಲಿಯ ನದಿಗಳೆಲ್ಲವೂ ಅಮೃತ ತುಂಬಿದ ಹೊಳೆಗಳಾಗಿ ಹರಿಯುತ್ತವೆ. ಅಲ್ಲಿ ಇರುವ ಕ್ಷೀರ ವೃಕ್ಷಗಳು ನಿರಂತರವೂ ಹಾಲು ಮತ್ತು ಷಡ್ರಸಗಳನ್ನೂ ನೀಡುತ್ತವೆ. ಅಲ್ಲಿಯ ನೆಲವೆಲ್ಲವೂ ರತ್ನಖಚಿತ. ಅಲ್ಲಿಯ ಮರುಳು ರಾಶಿಯೆಲ್ಲವೂ ಬಂಗಾರದ ಅಣುಕಣಗಳಿಂದ ಆಗಿದೆ. ಸ್ವರ್ಗಲೋಕದಲ್ಲಿ ಪುಣ್ಯ ತೀರಿದ ಬಳಿಕ ಹೊರಗೆ ಹಾಕಲ್ಪಟ್ಟ ಮಾನವರು ಈ ಕುರುವರ್ಷದಲ್ಲಿ ಜನ್ಮತಾಳುವರು. ಅವರ ಯೌವನವೂ ಎಂದಿಗೂ ಕಳೆಗುಂದುವದಿಲ್ಲ. ಅಲ್ಲಿರುವ ನಾರಿಯರು ಸೌಂದರ್ಯದಲ್ಲಿ ಸುರಸುಂದರಿಯರಿಗೆ ಸಮಾನರಾಗಿರುವರು. ದಾಂಪತ್ಯ ಜೀವನಕ್ಕೆ ಅಲ್ಲಿ ಎಂದೂ ಚ್ಯುತಿ ಇಲ್ಲ. ದಂಪತಿಗಳೀರ್ವರೂ ಒಂದೇ ದಿನ ಹುಟ್ಟುವರು, ಒಂದೇ ದಿನ ಸಾಯುವರು. ಅವರ ರೂಪ ಪರಸ್ಪರ ಅನುರೂಪ. ಗುಣ ಪರಸ್ಪರರಿಗೆ ಅನುಗುಣ. ಚಕ್ರವಾಕದಂಪತಿಗಳಂತೆ ಇಬ್ಬರೂ ಪರಸ್ಪರ ಅನುರಕ್ತರು. ಅಲ್ಲಿಯ ದಂಪತಿಗಳಿಗೆ ಎಂದೂ ರೋಗವಿಲ್ಲ, ವಿಯೋಗವಿಲ್ಲ, ವ್ಯಥೆಯಿಲ್ಲ. ಸದಾತುಷ್ಟಿ, ಸದಾಪುಷ್ಟಿ. ಇವರ ಬದುಕು ಹನ್ನೊಂದು ಸಾವಿರ ಕಾಲದ ಪರಿಮಿತಿಯುಳ್ಳದ್ದು. ಅಲ್ಲಿಯ ಜನರಿಗೆ ತಮ್ಮತಮ್ಮ ಹೆಂಡಂದಿರಲ್ಲಿಯೇ ಸಂಪೂರ್ಣ ಪ್ರೀತಿ ಇರುವದರಿಂದ ಪರಸ್ತ್ರೀ ವ್ಯಾಮೋಹದ ಪ್ರಸಕ್ತಿಯೇ ಅಲ್ಲಿ ಇರುವುದಿಲ್ಲ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಹದಿನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಭರತಖಂಡದ ನದೀ, ಪರ್ವತ, ದೇಶಗಳು ಮತ್ತು ಜಾತಿಜನಾಂಗಗಳು

ಅಧ್ಯಾಯ - ೧೧೫

**ಋಷಿಯ ಉವಾಚ:**

**''ಯದಿದಂ ಭಾರತಂವರ್ಷಂ ಯಸ್ಮಿನ್ ಸ್ವಾಯಂಭುವಾದಯಃ ।**
**ಚತುರ್ದಶೈವ ಮನವಃ ಪ್ರಜಾಸರ್ಗಂ ಸಸರ್ಜಿರೇ ॥**

**ಋಷಿಗಳು** :- ಸ್ವಾಯಂಭುವ ಮೊದಲಾದ ಹದಿನಾಲ್ಕು ಜನ ಮನುಚಕ್ರವರ್ತಿಗಳು ಪ್ರಜಾಸೃಷ್ಟಿಯನ್ನುಮಾಡಿ ರಾಜ್ಯಭಾರವನ್ನು ನಡೆಸಿದುದು ಈ ಭಾರತವರ್ಷದಲ್ಲಿಯೇ ಅಲ್ಲವೇ? ಧರ್ಮವನ್ನು ಬಲ್ಲವನೂ ಮಾತುಗಾರನೂ ಆದ ಎಲೈ ಪೌರಾಣಿಕನೇ, ನಿನ್ನಿಂದ ಇದರ ವಿವರಣೆಯನ್ನು ತಿಳಿದುಕೊಳ್ಳಬೇಕೆಂದು ಬಯಸುತ್ತೇವೆ. ಮುಂದಿನ ವೃತ್ತಾಂತವನ್ನು ತಿಳಿಸು.

**ಸೂತ** :- ಇನ್ನು ಮುಂದೆ ಭಾರತವರ್ಷ ಅಥವಾ ಭರತಖಂಡದ ಪ್ರಜೆಗಳ ವಿಚಾರವನ್ನು ಹೇಳುತ್ತೇನೆ ಕೇಳಿರಿ. ಈ ಪ್ರಜೆಗಳನ್ನು ಪೋಷಿಸುವದರಿಂದ ಮನು ಮಹಾರಾಜನಿಗೆ **ಭರತ** ಎಂಬ ಹೆಸರು ಬಂದಿತು. ಭರತನು ಮೊಟ್ಟ ಮೊದಲು ಮಹಾರಾಜನಾಗಿ ಈ ದೇಶವನ್ನು ಆಳಿದ್ದರಿಂದ ಇದಕ್ಕೆ **ಭಾರತ ವರ್ಷ** ಎಂಬ ಹೆಸರು ಬಂದಿತು. ಭೂಲೋಕದಲ್ಲಿ ಈ ಭರತವರ್ಷವೇ ಕರ್ಮಭೂಮಿ ಎನಿಸಿದೆ. ಇಲ್ಲಿ ಸಾಧನ ಮಾಡಿಕೊಂಡು ಸ್ವರ್ಗವನ್ನೂ ಮೋಕ್ಷವನ್ನೂ ಪಡೆಯಬಹುದು. ಭೂಲೋಕದ ಈ ಭಾಗವನ್ನು ಬಿಟ್ಟರೆ ಬೇರೆ ಯಾವ ಭಾಗದಲ್ಲಿಯೂ ಕರ್ಮಾನುಷ್ಠಾನದ ನಿರ್ಬಂಧವಿಲ್ಲ. ಆದುದರಿಂದಲೇ ಇದಕ್ಕೆ ಕರ್ಮಭೂಮಿ ಸಾಧನಭೂಮಿ ಎಂದು ಹೆಸರು ಬಂದಿದೆ. ಈ ಭಾರತ ವರ್ಷದಲ್ಲಿ ಇಂದ್ರ, ದ್ವೀಪ, ಕಶೇರು, ತಾಮ್ರಪಾಳ, ಗಭಸ್ತಿಮಂತ, ನಾಗದ್ವೀಪ, ಸೌಮ್ಯ, ಗಂಧರ್ವ ಮತ್ತು ವಾರುಣ ಎಂಬ ಎಂಟು ಬೇರೆ ಭೂಖಂಡಗಳು ಇರುತ್ತವೆ.

ಈಗ ನಾವೆಲ್ಲರೂ ವಾಸಮಾಡುತ್ತಿರುವ ಈ ಭಾರತ ಭೂಭಾಗವು ಒಂಭತ್ತನೆ ದ್ವೀಪ. ದಕ್ಷಿಣೋತ್ತರ ಒಂದು ಸಾವಿರ ಯೋಜನ ವಿಸ್ತಾರವಾದ ಈ ನವಮದ್ವೀಪವನ್ನು ಸಮುದ್ರವು ಸುತ್ತುಗಟ್ಟಿದೆ. ಕನ್ಯಾಕುಮಾರಿಯಿಂದ ಗಂಗೆಯ ಉಗಮ ಸ್ಥಾನದವರೆಗೆ ಇದು ವಿಸ್ತರಿಸಿದೆ. ಮೇಲೆ ಈ ದ್ವೀಪವು ಪೂರ್ವ ಪಶ್ಚಿಮ ಹತ್ತು ಸಾವಿರ ಯೋಜನ ಅಗಲವಾಗಿದೆ. ಈ ನಡುಗಡ್ಡೆಯ ಸೀಮಾ ಪ್ರಾಂತಗಳಲ್ಲಿ ಎಲ್ಲ ಕಡೆಗೆ ಮ್ಲೇಚ್ಛರು, ಯವನರು, ಕಿರಾತರೂ ನೆಲೆಸಿದ್ದಾರೆ. ಮಧ್ಯಭಾಗದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಭಿನ್ನ ಭಿನ್ನ ಜಾತಿ ಜನಾಂಗದ ಜನರು ತಮ್ಮ ತಮ್ಮ ಧರ್ಮ, ಕರ್ಮ, ವ್ಯವಹಾರ ಉದ್ಯೋಗಗಳನ್ನು ಮಾಡಿಕೊಂಡು ಜೀವಿಸಿದ್ದಾರೆ. ಜೀವರಾಶಿಗಳ

ಉದ್ಧಾರಕ್ಕಾಗಿ ದೇವರು ವರ್ಣಾಶ್ರಮ ಧರ್ಮಗಳನ್ನು ಏರ್ಪಡಿಸಿದ್ದಾನೆ. ಅದರಂತೆ ನಡೆದು ದೇವತಾರಾಧನೆಮಾಡಿದ ಪುಣ್ಯಜೀವಿಗಳು ಸ್ವರ್ಗ ಮೋಕ್ಷಾದಿ ಫಲಗಳನ್ನು ಪಡೆಯುತ್ತಾರೆ. ಈ ವಿಶಾಲವಾದ ಭೂಖಂಡವನ್ನು ಗೆದ್ದು ಆಳುವವನು ಚಕ್ರವರ್ತಿ ಎಂದು ಕರೆಯಿಸಿಕೊಳ್ಳಲ್ಪಡುತ್ತಾನೆ. ಈ ಭಾರತ ವರ್ಷದಲ್ಲಿ ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ವೃಕ್ಷವಂತ, ವಿಂಧ್ಯ, ಪಾರಿಯಾತ್ರ ಎಂಬ ಏಳು ಕುಲಪರ್ವತಗಳಿವೆ. ಅವುಗಳ ಅಕ್ಕ ಪಕ್ಕದಲ್ಲಿ ಸಹಸ್ರಾರು ಚಿಕ್ಕ, ಪುಟ್ಟ ಬೆಟ್ಟಗಳು ಇರುತ್ತವೆ.

ಆರ್ಯರು ಮ್ಲೇಚ್ಛರು ಈ ಎರಡೂ ಜಾತಿಗಳ ಸಂಪರ್ಕದಿಂದ ಹುಟ್ಟಿದ ಮಿಶ್ರಜಾತಿಯ ಜನರೂ ಇಲ್ಲಿಯ ನಿವಾಸಿಗಳಾಗಿದ್ದಾರೆ. ಈ ದೇಶದಲ್ಲಿ ಗಂಗಾ, ಸಿಂಧು, ಸರಸ್ವತೀ, ಶತದ್ರು, ಚಂದ್ರಭಾಗಾ, ಯಮುನಾ, ಸರಯು, ಐರಾವತಿ, ವಿತಸ್ತಾ, ಬಾಹುದಾ, ಧೌತಪಾಪಾ, ಗೋಮತೀ, ಕುಹೂ, ದೇವಿಕಾ, ವಿಶಾಲಾ, ದೃಷದ್ವತೀ, ಕೌಶಿಕೀ, ನಿಶ್ಚಲಾ, ಗಂಡಕೀ, ಲೌಹಿತಾ ಮತ್ತು ಇಕ್ಷುಗಳೆಂಬ ನದಿಗಳು ಹಿಮಪರ್ವತದಲ್ಲಿ ಹುಟ್ಟಿ ಹರಿಯುತ್ತದೆ. ಜನರು ಇವುಗಳ ನೀರನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುತ್ತಾರೆ.

ವೇದಸ್ಮತಿ, ವೇತ್ರವತಿ, ವೃತಘ್ನಿ, ಸಿಂಧು, ಪರ್ಣಾಶಿ, ಕುಂತಿ, ಅವಂತೀ, ಶಿಪ್ರಾ, ವೇಣುಮತಿ, ವಿದುಷಾ, ಪಾರಾ, ಧನ್ವತೀ ರೂಪಾ, ಮಹತೀ, ನರ್ಮದಾ, ಇವೆಲ್ಲವೂ ಪಾರಿಯಾತ್ರ ಪರ್ವತದಲ್ಲಿ ಹುಟ್ಟುವ ನದಿಗಳು. ಮಂದಾಕಿನಿ, ದಶಾರ್ಣಾ, ಚಿತ್ರಕೊಟೆ, ತಮಸಾ, ಶ್ಯೋನಿ, ಚಿತ್ರೋತ್ಪಲೆ, ವಿಮಲೆ, ಮುಕುಟೆ, ಲಜ್ಜೆ, ಶುನಿ, ಶುಕ್ತಿಮಂತಿ, ಧೂತವಾಹಿನಿ, ಚಂಚಲೆ ಹಾದ್ರಿಕೆ ಎಂಬ ನದಿಗಳು ಋಷ್ಯವಂತ ಪರ್ವತದಲ್ಲಿ ಜನಿಸುತ್ತವೆ. ಇವುಗಳ ನೀರು ಬಹಳ ತಿಳಿಯಾಗಿದೆ. ತಾಪೀ, ಪಯೋಷ್ಣೀ, ನಿರ್ವಿಂದ್ಯೆ, ಕ್ಷಿಪ್ರೆ, ಋಷಭೆ, ವೇಣಿ, ವೈತರಣಿ, ವಿಶ್ವಮಾಲೆ, ಶಿಲೆ, ದುರ್ಗಮೆ, ಮಹಾಗೌರಿ, ತೋಯೆ. ಕುಮುದ್ವತಿ ಇವು ವಿಂಧ್ಯಪರ್ವತದ ತಪ್ಪಲಿನಲ್ಲಿ ಉದ್ಭವಿಸುತ್ತವೆ. ಈ ನದಿಗಳ ನೀರು ತಣ್ಣಗಿದೆ ಹಾಗೂ ಈ ನದಿಗಳು ಪಾಪಹರವಾದವು. ತ್ರಿಭಾಗೆ, ಋಷಿಕುಲ್ಯೆ, ಇಕ್ಷುದೆ, ತ್ರಿದಿವೆ, ಅಚಲೆ ತಾಮ್ರಪರ್ಣೆ, ಮೂಲಿ, ಶರವೆ, ವಿಮಲೆಗಳೆಂಬ ಸುಪ್ರಸಿದ್ಧವಾದ ನದಿಗಳು ಮಹೇಂದ್ರ ಪರ್ವತದಿಂದ ಹೊರಟು ಬಲು ಅಂದವಾಗಿ ಹರಿಯುತ್ತವೆ.

ಉತ್ಪಲಾವತಿ, ಪುಷ್ಪಜೆ, ತಾಮ್ರಪರ್ಣಿ, ಕೃತಮಾಲೆಗಳೆಂಬ ಪುಣ್ಯ ನದಿಗಳು ಮಲಯ ಪರ್ವತದಲ್ಲಿ ಜನಿಸುವವು. ಇವುಗಳ ನೀರು ತಂಪಾಗಿರುವವು. ಗೋದಾವರಿ, ಭೀಮರಥಿ, ಕೃಷ್ಣವೇಣಿ, ತುಂಗಭದ್ರೆ, ಮಂಜಲೆ, ಸುಪ್ರಯೋಗೆ, ವಾಹ್ಯೆ ಮತ್ತು ಕಾವೇರಿಗಳು ದಕ್ಷಿಣ ದೇಶದಲ್ಲಿ ಹರಿಯುವ ನದಿಗಳು ಸಹ್ಯಾದ್ರಿ ತಪ್ಪಲದಲ್ಲಿ ಹುಟ್ಟುತ್ತವೆ. ಕಾಶಿಕಾ, ಸುಕುಮಾರಿ, ಮಂದವಾಹಿನಿ, ಕೃಪಾ ಮತ್ತು ಪಾಲಿನಿ ಎಂಬ ನದಿಗಳು ಶುಕ್ತಿಮಂತ ಪರ್ವತದಲ್ಲಿ ಹುಟ್ಟಿ ದಿಕ್ಕುದಿಕ್ಕುಗಳಲ್ಲಿ ಹರಿದು, ಬೆಟ್ಟ ಬಯಲುಗಳನ್ನು ಕೊರೆದು, ಕಡಲಿನ ಒಡಲನ್ನು ಕೊನೆಗೆ ಸೇರುವವು. ಪಾಪ ಪರಿಹಾರಕವಾದ ಈ ಪವಿತ್ರ ನದಿಗಳಿಗೆ ಸಾವಿರಾರು

ಉಪನದಿಗಳು ಸೇರಿ, ತಾಯಿಯಂತೆ ಜನರನ್ನೆಲ್ಲ ಕಾಪಾಡಿ ಸ್ನಾನ ಮಾಡುವವರಿಗೆಲ್ಲ ಮಂಗಳವನ್ನುಂಟು ಮಾಡುವವು. ಭಾರತ ವರ್ಷದ ಮಧ್ಯದಲ್ಲಿ ಕುರು, ಪಾಂಚಾಲ, ಮತ್ಸ್ಯ, ಕಿರಾತ, ಕುಂತಲ, ಕಾಶಿ, ಕೋಸಲ, ಅವಂತಿ, ಕಲಿಂಗ, ಅಂಧಕ ಮುಂತಾದ ಹಲವಾರು ದೇಶಗಳುಂಟು. ಇವೆಲ್ಲ ಸಹ್ಯಾದ್ರಿ, ಪರ್ವತದ ಮುಂಭಾಗದಲ್ಲಿ ಇರುತ್ತವೆ. ಗೋದಾವರೀ ತೀರದಲ್ಲಿ ಗೋವರ್ಧನ ಮಂದರ, ಗಂಧಮಾದನ ಮುಂತಾದ ಶೈಲಶ್ರೇಣೆಗಳು ಹಬ್ಬಿವೆ. ಭಾರದ್ವಾಜಮುನಿಯು ಶ್ರೀರಾಮ ಚಂದ್ರನಿಗೆ ಸಂತೋಷವನ್ನುಂಟುಮಾಡಬೇಕೆಂದು ಅನೇಕ ಮರ ಹಾಗೂ ಬಳ್ಳಿಗಳನ್ನು ದಿವ್ಯೌಷಧಿಗಳನ್ನೂ ಸ್ವರ್ಗಲೋಕದಿಂದ ಭೂಮಿಗೆ ತಂದು ಬೆಳೆಸಿದ್ದಾನೆ. ಆದುದರಿಂದ ದಿವ್ಯ ವೃಕ್ಷಲತಾ ಪ್ರತಾನಗಳಿಂದ ಕಂಗೊಳಿಸುವ ಈ ದೇಶವು ಪುಷ್ಪವರ ಎಂಬ ಹೆಸರಿನಿಂದ ನಯನಮನೋಹರವಾಗಿದೆ.

ಇವಲ್ಲದೇ ಈ ಭರತಖಂಡದಲ್ಲಿ ಬಾಲ್ಹೀಕ, ಆಭೀರಕ, ಪುರಂಧ್ರ, ಪಲ್ಲವ, ಗಾಂಧಾರ, ಸಿಂಧು, ಸೌವೀರ, ಮದ್ರ ದ್ರುಹ್ಯ, ಪುಲಿಂದ ಎಂಬ ಹೆಸರಿನ ದಶನಾಪಿಕ ಎಂಬ ದೇಶಗಳು ಪ್ರಸಿದ್ಧವಾಗಿವೆ. ಇವಲ್ಲದೇ ಈ ಉತ್ತರ ದಿಕ್ಕಿನಲ್ಲಿ ಪ್ರಸ್ಥಳ, ಲಂಪಾಕ, ಸೇವಿಕೆ, ಜಾಂಗಲ ಎಂಬ ಹೆಸರಿನ ದೇಶಗಳೂ ಉಂಟು. ಪೂರ್ವದಿಕ್ಕಿನಲ್ಲಿ ಅಂಗ, ವಂಗ, ಮಾಲವ, ಪ್ರಾಗ್‌ಜ್ಯೋತಿಷ, ಪುಂಡ್ರ, ವಿದೇಹ, ತಾಮ್ರಲಿಪ್ತ, ಶಾಲ್ವ, ಮಗಧ, ಗೋನರ್ದ ಎಂಬ ದೇಶಗಳಿವೆ. ಈ ದೇಶಗಳಲ್ಲಿ ಭರದ್ವಾಜ ಮಹರ್ಷಿಗಳ ವಂಶದವರಾದ ಬ್ರಾಹ್ಮಣರೂ ಇತರ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಹಾಗೂ ಅತ್ರಿಗೋತ್ರದ ಕೆಲವು ಭೂಸುರ ಕುಲದವರೂ ವಾಸಮಾಡುತ್ತಾರೆ. ಭಾರತ ದೇಶದ ದಕ್ಷಿಣದಲ್ಲಿ ಪಾಂಡ್ಯ, ಕೇರಳ, ಚೋಳ, ನವರಾಷ್ಟ್ರ, ಕಳಿಂಗ, ಕಾರೂಷ, ಸೌರಾಷ್ಟ್ರ, ಆನರ್ತ, ಮುಂತಾದ ದೇಶಗಳಲ್ಲಿ ಅದೇ ಹೆಸರಿನ ಜನರು ವಾಸಿಸುತ್ತಾರೆ. ನರ್ಮದಾ ನದಿಯ ದಕ್ಷಿಣದಲ್ಲಿ ಸೇತುಕ, ಪುಲ್ಯ, ಹೈಷೀಕ, ಆಟವ್ಯ, ಶಬರ, ವೈದರ್ಭ, ತೈತ್ತರಕ, ಕಾರಸ್ಕರ, ವಾಸಿಕ್ಯ, ದಂಡಕ, ವಿಂಧ್ಯ, ಪುಷಿಕ ಜಾತಿ ಜನಾಂಗದ ಜನರು ನೆಲೆಸಿದ್ದಾರೆ. ಉತ್ತರದಲ್ಲಿ ಭಾರುಕಚ್ಛ, ಸಾರಸ್ವತ, ಕಾಚ್ಛೀಕ, ಸಮಾಹೇಯ ಮುಂತಾದ ಜನಾಂಗದ ಜನರು ವಾಸಿಸುತ್ತಾರೆ.

ವಿಂಧ್ಯಪರ್ವತದ ಪ್ರಾಂತದಲ್ಲಿ ಹಲಕೆಲವು ಚಿಕ್ಕ ಪುಟ್ಟ ದೇಶಗಳಿದ್ದು, ಆ ದೇಶದ ಹೆಸರಿನ ಜನಾಂಗದವರೇ ಅಲ್ಲಿ ನೆಲೆ ನಿಂತಿದ್ದಾರೆ. ಮಾಲವ, ಕಾರೂಷ, ಮೇಕಲ, ಉತ್ಕಲ, ಪೌಂಢ್ರ, ದಶಾರ್ಣ, ಭೋಜ, ಕೋಸಲ, ತ್ರೈಪುರ, ವೈದಿಶ, ನೈಷಧ ವೀತಿಹೋತ್ರ, ಆವರತಿ ಮುಂತಾದ ದೇಶದ ಹೆಸರುಗಳ ಮೇಲಿಂದ ಮಾಲವರೂ, ಕಾರೂಷರೂ, ಉತ್ಕಲರೂ, ನೈಷಧರೂ, ಆವಂತಿಗಳೂ ಎಂದು ಆ ಜನರನ್ನು ಕರೆಯಲಾಗುತ್ತದೆ. ಇವರಲ್ಲದೇ ಸರ್ವಗ, ನಿರಾಹಾರ, ಕುಪಥ, ಅಪಥ, ಸಮುದ್ಗಕ, ತ್ರಿಗರ್ತ, ಮಂಡಲ, ಕಿರಾತ ಎಂಬ ಕೆಲವು ಜಾತಿಯ ಜನರೂ ವಿಂಧ್ಯಪರ್ವತವನ್ನು ಆಶ್ರಯಿಸಿ ಅದೇ ಹೆಸರಿನ ನಾಡುಗಳಲ್ಲಿ ನೆಲೆಸಿದ್ದಾರೆ.

## ಕಿಂಪುರುಷ, ಹರಿವರ್ಷಗಳ ವಿವರಣೆ ಮತ್ತು ಜಂಬೂದ್ವೀಪದ ವರ್ಣನೆ

**ಋಷಿಗಳು :-** ಭಾರತ ವರ್ಷದ ವಿಷಯವನ್ನು ವಿವರವಾಗಿ ಕೇಳಿದೆವು. ಇನ್ನು ಮುಂದೆ ಕಿಂಪುರುಷವರ್ಷ, ಹರಿವರ್ಷಗಳ ವೃತ್ತಾಂತವನ್ನು ನಮಗೆ ವಿವರಿಸಿರಿ. ಜಂಬೂಖಂಡದ ಹಾಗೂ ಉಳಿದ ದ್ವೀಪಗಳ ವ್ಯಾಪ್ತಿ ವಿಸ್ತಾರಗಳನ್ನೂ ಅಲ್ಲಿಯ ಜನ, ಜಾತಿ, ದೇಶ, ಮರ, ಮುಂತಾದ ವಿಷಯವನ್ನೂ ವಿವರಿಸಿರಿ.

**ಸೂತ :-** ಜಂಬೂಖಂಡ ಎಂಬುದು ಕಿಂಪುರುಷ ವರ್ಷದ ಒಂದು ವಿಸ್ತಾರವಾದ ಭಾಗ. ಅದೊಂದು ಅಪರ ನಂದನವನ. ಅಲ್ಲಿ ಬದುಕಿದ ಮನುಷ್ಯರ ಆಯುರ್ಮಾನ ಹತ್ತು ಸಾವಿರವರ್ಷ. ಅವರ ಮೈಬಣ್ಣ ಪುಟಕ್ಕೆ ಹಾಕಿದ ಬಂಗಾರದಂತೆ. ಅಲ್ಲಿಯ ನಿವಾಸಿಗಳಾದ ಕಿಂಪುರುಷರು ರೋಗ, ಶೋಕ, ಚಿಂತೆಗಳೆಂದರೆ ಏನೆಂಬುದನ್ನು ಅರಿಯರು. ಅಲ್ಲಿಯ ಹೆಂಗಳೆಯರನ್ನು ನೋಡಿದರೆ ಅಪ್ಸರೆಯರೇ ನಾಚಬೇಕು. ಚಿನ್ನವನ್ನೇ ಕರಗಿಸಿ ಎರಕ ಹೊಯ್ದಂಥ ಮೆರಗು ಅವರ ಮೈಬಣ್ಣ. ಅಲ್ಲಿರುವ ಬಸರೀಗಿಡದ ಹಣ್ಣುಗಳಲ್ಲಿ ಜೇನುತುಂಬಿ ತುಳುಕಾಡುತ್ತದೆ. ಕಿಂಪುರುಷ ದಂಪತಿಗಳು ಆ ಹೆಜ್ಜೇನನ್ನು ಹೀರಿ ರತಿಸುಖದಲ್ಲಿ ಮೈಮರೆಯುತ್ತಾರೆ. ಇದರ ಮುಂದಿನ ಹರಿವರ್ಷದಲ್ಲಿಯೂ ಇದೇತರದ ಸೌಖ್ಯ ಸುಸ್ಥಿತಿ. ಸ್ವರ್ಗಲೋಕದಲ್ಲಿ ಪುಣ್ಯವೆಲ್ಲ ಕ್ಷೀಣವಾದ ಬಳಿಕ ಅಲ್ಲಿಂದ ಜಾರಿಬಿದ್ದವರು ಈ ಹರಿವರ್ಷದಲ್ಲಿ ಪುನರ್ಜನ್ಮ ಪಡೆದು ಬಾಳುವರು. ಅಮೃತದಂತೆ ರುಚಿಯಾದ ಕಬ್ಬಿನ ಹಾಲು ಕುಡಿದು ಹರ್ಷದಿಂದ ಹನ್ನೊಂದು ಸಾವಿರವರ್ಷ ಅವರು ಜೀವಿಸುವರು.

ಜಂಬೂದ್ವೀಪದ ನಟ್ಟನಡುವೆ ಇರುವ ಇಲಾವೃತ ವರ್ಷದಲ್ಲಿ ಸೂರ್ಯನು ತಪಿಸುವದಿಲ್ಲ. ಅಲ್ಲಿಯ ಜನರಿಗೆ ಬಿಸಿಲು ಎಂಬ ಪದಾರ್ಥ ಗೊತ್ತೇ ಇಲ್ಲ. ಅಲ್ಲಿಯ ಬಾನಿನಲ್ಲಿ ಭಾನು ಬೆಳಗುವದಿಲ್ಲ. ಚಂದ್ರ ತೊಳಗುವದಿಲ್ಲ. ಚಿಕ್ಕೆಗಳು ಮಿನುಗುವದಿಲ್ಲ. ಆದರೂ ಅಲ್ಲಿ ಬೆಳಕಿಗೆ ಕೊರತೆ ಇಲ್ಲ. ಅಲ್ಲಿಯ ಜನರೆಲ್ಲರೂ ಕಾಂತಿಪೂರ್ಣರು. ಆ ಜನರ ಕಣ್ಣು, ಬಣ್ಣಗಳೆಲ್ಲವೂ ಕಮಲದಂತೆಯೇ. ಕಮಲದ ನರುಗಂಪು ಅವರ ಮೈತುಂಬ ಗಮಗಮಿಸುತ್ತಿದೆ. ನೇರಳೆಹಣ್ಣಿನ ರಸವನ್ನು ಕುಡಿದು, ಪಟ್ಟೆಪೀತಾಂಬರಗಳನ್ನು ಧರಿಸಿ ಅಲ್ಲಿಯ ಜನರು ಶಾಂತಿ ಸಂತಸಗಳಿಂದ ಪೂರ್ಣರಾಗಿ ಹದಿಮೂರು ಸಾವಿರವರ್ಷಬದುಕುವರು. ದೇವತೆಗಳಂತೆ ಅವರೂ ಕಣ್ಣಿನ ರೆಪ್ಪೆ ಬಡಿಯುವದಿಲ್ಲ. ಅವರ ಮೈಗೆ ಎಂದೂ ಮುಪ್ಪು ಹಿಡಿಯುವದಿಲ್ಲ. ಬದುಕಿರುವವರೆಗೆ ವಿಲಾಸಿ ಜೀವನ ತಪ್ಪುವದಿಲ್ಲ.

ಮೇರು ಪರ್ವತದ ದಕ್ಷಿಣದಲ್ಲಿ ಸುದರ್ಶನ ಎಂಬ ಹೆಸರಿನ ಲಕ್ಷಯೋಜನ ವಿಸ್ತೀರ್ಣವಾದ ಜಂಬೂವೃಕ್ಷ(ನೇರಳೆಗಿಡ) ವೊಂದಿದೆ. ಮುಗಿಲು ಮುಟ್ಟುವ ಆ ಹೆಮ್ಮರದ ಹಣ್ಣುಗಳಿಂದ ಹೊಮ್ಮಿದ ರಸವು ಹೊಳೆಯಾಗಿ ಹರಿಯುತ್ತಿದೆ. ಆ ನದಿಯು ಮೇರುಗಿರಿಯನ್ನು ಪ್ರದಕ್ಷಿಣೆಹಾಕಿಕೊಂಡು ಮತ್ತೆ ಆ ಜಂಬೂ ಗಿಡದಡಿಯಲ್ಲಿಯೇ ಬಂದು ಸೇರುವದು. ಈ ಜಂಬೂರಸವನ್ನು

ಆ ಪ್ರಾಂತದ ಪ್ರಾಣಿಗಳೆಲ್ಲರೂ ಕುಡಿಯುವರು. ಈ ರಸಪ್ರಾಶನದಿಂದ ಅವರಿಗೆಲ್ಲ ಮುಪ್ಪು ತಪ್ಪಿದೆ. ಹಸಿವು, ತೃಷೆ, ದಣಿವು, ನೋವುಗಳಾವುವೂ ಅವರನ್ನು ಸೋಂಕುವುದಿಲ್ಲ. ಆ ನದಿಯ ದಂಡೆಯಲ್ಲಿಯ ಮಣ್ಣೆಲ್ಲವೂ ಚಿನ್ನವೇ ಸರಿ. ಜಂಬೂನದಿಯಿಂದ ಹುಟ್ಟುವದರಿಂದ ಹೊನ್ನಿಗೆ ಜಾಂಬೂನದ ಎಂದು ಹೆಸರು ಬಂದಿದೆ.

ಈ ಹಣ್ಣಿನರಸ ತಟಕಿಕ್ಕಿದಲ್ಲೆಲ್ಲ ಪುಟಕ್ಕಿಕ್ಕಿದ ಚಿನ್ನ. ಅದನ್ನು ದೇವತೆಗಳು ತೆಗೆದುಕೊಂಡು ತಮ್ಮ ದೇಹಾಲಂಕಾರಕ್ಕಾಗಿ ಆಭರಣಗಳನ್ನು ಮಾಡಿಸಿ ಇಟ್ಟುಕೊಳ್ಳುತ್ತಾರೆ. ಸಿದ್ಧರೂ ಚಾರಣರೂ ಈ ಹಣ್ಣುಗಳನ್ನು ತಿಂದು ಇಲ್ಲಿ ಆನಂದದಿಂದ ವಾಸಿಸುವರು. ರಾಕ್ಷಸರು, ಯಕ್ಷರು, ಪಿಶಾಚರು ಹಿಮಾಲಯದಲ್ಲಿ ವಾಸಿಸುವರು. ಹೇಮಕೂಟದಲ್ಲಿ ಗಂಧರ್ವರೂ, ಅಪ್ಸರೆಯರೂ ಮೇರುಗಿರಿಯಲ್ಲಿ ವಾಸುಕಿ ಮೊದಲಾದ ನಾಗಗಳೂ ಮತ್ತು ದೇವತೆಗಳೂ ಕ್ರೀಡಿಸುವರು. ನೀಲಶೈಲದಲ್ಲಿ ಸಿದ್ಧಬ್ರಹ್ಮರ್ಷಿಗಳು, ಶ್ವೇತಪರ್ವತದಲ್ಲಿ ದೈತ್ಯದಾನವರು, ಶೃಂಗವಂತದಲ್ಲಿ ಪಿತೃದೇವತೆಗಳು ಸಂಚಾರ ವಿಹಾರಗೈಯುವರು. ಭಾರತವರ್ಷದ ಇಂದ್ರದ್ವೀಪಾದಿ ನವದ್ವೀಪಗಳಲ್ಲಿ ಎರಡು ಕಾಲಿನ ಮತ್ತು ನಾಕುಕಾಲಿನ ಚರ ಅಚರ ಮುಂತಾಗಿ ನಾನಾವಿಧವಾದ ಪ್ರಾಣಿಗಳೂ ಜೀವಜಂತುಗಳೂ ವಾಸಿಸುತ್ತವೆ. ಹ್ರಾಸವಿಕಾಸ ಹೊಂದುತ್ತವೆ. ಅವು ಇಷ್ಟೇ ಎಂದು ಎಣಿಸಿ ಹೇಳುವದು ಯಾರಿಗೂ ಶಕ್ಯವಿಲ್ಲ. ಈ ಎಲ್ಲ ವಿಷಯದಲ್ಲಿ ಪುರಾಣಗಳೇ ಪರಮಪ್ರಮಾಣವಾಗಿವೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ಒಂದುನೂರಹದಿನೈದನೆಯ ಅಧ್ಯಾಯ ಮುಗಿದುದು*



## ಪುರೂರವರಾಜನ ಅಪರೂಪ ರೂಪ ಮತ್ತು ಸೌಂದರ್ಯ

**ಅಧ್ಯಾಯ - ೧೧೬**

**ಮನುಚಕ್ರವರ್ತಿ ಉವಾಚ**

**''ಚರಿತಂಬುಧಪುತ್ರಸ್ಯ ಜನಾರ್ದನ ಮಯಾಶ್ರುತಮ್ ।**
**ಶ್ರುತಃ ಶ್ರಾದ್ಧವಿಧಿಃ ಪುಣ್ಯಃ ಸರ್ವಪಾಪಪ್ರಣಾಶನಃ ॥**

**ಮನುಚಕ್ರವರ್ತಿ** :- ಜನಾರ್ದನ, ಬುಧನ ಮಗನಾದ ಪುರೂರವನ ಚರಿತ್ರವನ್ನೂ ಪಾಪಗಳನ್ನೆಲ್ಲ ತೊಡೆದುಹಾಕುವ ಶ್ರಾದ್ಧವಿಧಿಯನ್ನೂ ನಾನು ಕೇಳಿದ್ದೇನೆ. ಅದರಂತೆ ಕೃಷ್ಣಾಜಿನಾದಿಗಳ ದಾನಧರ್ಮದ ಫಲವನ್ನೂ ವೃಷೋತ್ಸರ್ಗ ಎಂದರೆ ದೇವರಿಗಾಗಿ ಬಸವ ಬಿಡುವದರಿಂದ ಪ್ರಾಪ್ತವಾಗುವ ಪುಣ್ಯಫಲವನ್ನೂ ಅರಿತಿದ್ದೇನೆ. ಪುರೂರವರಾಜನಿಗೆ ಯಾವ ಪುಣ್ಯದ ಫಲವಾಗಿ ಇಂಥ ಅಪರೂಪ ರೂಪ, ಸರ್ವಶ್ರೇಷ್ಠವಾದ ಸೌಭಾಗ್ಯಗಳು ಒದಗಿ ಬಂದವು? ಮೂರು

ಲೋಕಗಳಲ್ಲಿಯೇ ಮೋಹನಾಂಗರಾದ ನಾಕಲೋಕದ ಸುರಸುಂದರರನ್ನು ತೊರೆದು ಈ ಮಣ್ಣಿನ ಮಗನನ್ನು ಮೆಚ್ಚಿ ಊರ್ವಶಿಯಂಥ ದೇವಾಂಗನೆ ನೆಲಕ್ಕಿಳಿದು ಬರಲು ಕಾರಣವೇನು ? ಇದನ್ನೆಲ್ಲ ಕೇಳಬೇಕೆಂದು ನನಗೆ ಕೌತುಕ. ದಯವಿಟ್ಟು ತಿಳಿಸಬೇಕು.

**ಮತ್ಸ್ಯ** :- ಈ ಪುರೂರವರಾಜನು ಹಿಂದಿನ ಜನ್ಮದಲ್ಲಿ ಮದ್ರದೇಶದ ಮಹಾರಾಜನಾಗಿದ್ದನು. ಅದರ ಹಿಂದಿನ ಜನ್ಮದಲ್ಲಿ ಅವನು ಒಂದು ನದೀತೀರದ ಅಗ್ರಹಾರದಲ್ಲಿ ಬ್ರಾಹ್ಮಣನಾಗಿ ಹುಟ್ಟಿದ್ದನು.

ಆಗ ಅವನು ಏಕಾದಶಿಯ ದಿನ ಉಪವಾಸಮಾಡಿ ದ್ವಾದಶಿಯತಿಥಿಯಂದು ಭಕ್ತಿಯಿಂದ ಶ್ರೀ ಹರಿಯನ್ನು ಪೂಜಿಸುತ್ತಿದ್ದನು. ಅವನು ಪ್ರತಿ ಉಪವಾಸದ ದಿನ ಅಭ್ಯಂಗ ಸ್ನಾನವನ್ನು ತಪ್ಪದೇ ಮಾಡುತ್ತಿದ್ದನು. ಏಕಾದಶೀ ದಿನದಂದು ಎಣ್ಣೆಹಚ್ಚಿ ಎರೆದುಕೊಳ್ಳುವದು ಶಾಸ್ತ್ರ ನಿಷಿದ್ಧವಾಗಿದೆ. ಇದನ್ನು ತಿಳಿದರೂ ಆ ಬ್ರಾಹ್ಮಣನು ದೇಹಕ್ಕೆ ಹಿತ ಎನಿಸುವದು ಎಂಬ ಕಾರಣದಿಂದ ಏಕಾದಶಿ ಉಪವಾಸಮಾಡಿ ಅಭ್ಯಂಜನವನ್ನೂ ಮಾಡುತ್ತಿದ್ದನು. ಈ ಏಕಾದಶಿಯ ಉಪೋಷಣೆ ಮತ್ತು ದ್ವಾದಶೀ ದಿನದ ವಿಷ್ಣು ಪೂಜೆಯ ಪ್ರಭಾವದಿಂದ ಮುಂದಿನ ಜನ್ಮದಲ್ಲಿ ಅವನಿಗೆ ದೊರೆತನ, ಸಿರಿತನ, ಒಡೆತನಗಳು ತಾವಾಗಿ ಒದಗಿ ಬಂದವು. ಆದರೆ ಉಪವಾಸದ ದಿನ ಅಭ್ಯಂಗ ಸ್ನಾನ ಮಾಡಿದ್ದರಿಂದ ಅವನು ರೂಪರಹಿತನಾದನು. ಮುಖದ ಮೇಲಿನ ಕಳೆಕೆಟ್ಟು ಅಂದಗೇಡಿಯಾದನು.

ಮದ್ರದೇಶದ ಮಹಾರಾಜನಾದ ಅವನಲ್ಲಿ ಶೌರ್ಯ, ಧೈರ್ಯ, ಚಾತುರ್ಯ ಮುಂತಾದ ಅರಸರಲ್ಲಿ ಇರಬೇಕಾದ ಉತ್ತಮ ಗುಣಗಳೆಲ್ಲವೂ ಇದ್ದವು. ಆದರೆ ಕುರೂಪಿಯಾದ ಅವನನ್ನು ಕಂಡರೆ ಜನರಿಗೆ ಅಸಹ್ಯ ಎನಿಸುತ್ತಿತ್ತು. ಇದರಿಂದ ಅವನಿಗೆ ಜನಾನುರಾಗವು ಏನಾದರೂ ದೊರಕಲಿಲ್ಲ. ಅವನ ಗುಣಗಳೆಲ್ಲವೂ ವ್ಯರ್ಥವಾದವು. ಇದನ್ನು ತಿಳಿದು ಆ ಭೂಪತಿಗೆ ಬಹಳ ಕೆಡುಕೆನಿಸಿತು. ಆಗ ಅವನು ತಪಸ್ಸುಮಾಡಿ ಸೌಂದರ್ಯವನ್ನು ಪಡೆಯಬೇಕೆಂದು ನಿರ್ಧರಿಸಿದನು. ಸಾಮ್ರಾಜ್ಯ ಶಾಸನದ ಸೂತ್ರವನ್ನು ಮಂತ್ರಿಯ ಕೈಗಿತ್ತು ತಪೋನುಷ್ಠಾನದ ನಿಶ್ಚಯದಿಂದ ಹಿಮಗಿರಿಯ ಕಡೆಗೆ ನಡೆದನು.

ಏಕಾಕಿಯಾಗಿ ಹೈಮಾಚಲ ಯಾತ್ರೆಯನ್ನುಮಾಡಿ ಪೂರೈಸಬೇಕೆಂದು ಧೃಢ ನಿರ್ಧಾರದಿಂದ ಪಾದಚಾರಿಯಾಗಿಯೇ ಹೊರಟನು. ಆ ದೊರೆಗೆ ತನ್ನ ದೇಶದ ಗಡಿಯಡಿಯಲ್ಲಿಯೇ ಐರಾವತಿ ಎಂಬ ನದಿಯು ದೃಗ್ಗೋಚರವಾಯಿತು. ಹಿಮಾಲಯದಿಂದ ಹುಟ್ಟಿ ಮಂಜಿನ ಹೆಬ್ಬಂಡೆಗಳನ್ನು ತಬ್ಬಿ ಉಬ್ಬಿ, ಓಘ, ವೇಗಗಳ ಭೀಷ್ಮಪ್ರವಾಹದಿಂದ ಧುಮ್ಮಿಕ್ಕಿ ಹರಿಯುವ ಆ ತೊರೆಯ ನೀರು ತಂಗದಿರನ ತಿಂಗಳ ಕಾಂತಿಯಂತೆ ತಂಪಾಗಿತ್ತು. ಮಂಜಿನಂತೆ ಅದರ ನೊರೆ ಬೆಳ್ಳಗಿತ್ತು. ಆ ಪುಣ್ಯ ಪಯಸ್ವಿನಿಯನ್ನು ಕಂಡು ಮಹಾರಾಜನಿಗೆ ಸಂತೋಷವಾಯಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಹದಿನಾರನೆಯ ಅಧ್ಯಾಯ ಮುಗಿದುದು*

—o—

## ಮದ್ರರಾಜಕಂಡ ಐರಾವತಿಯ ರುದ್ರರಮಣೀಯ ದೃಶ್ಯ

**ಅಧ್ಯಾಯ - ೧೧೭**

**ಸೂತ ಉವಾಚ**

**ಸ ದದರ್ಶ ನದೀಂ ದಿವ್ಯಾಂ ಪುಣ್ಯಾಂ ಹೈಮವತೀಂ ಶುಭಾಂ ।**
**ಗಂಧರ್ವೈಶ್ಚ ಸಮಾಕೀರ್ಣಾಂ ನಿತ್ಯಂ ಶಕ್ರೇಣ ಸೇವಿತಾಂ ॥**

**ಸೂತ** :- ಮದ್ರಮಹೀಪತಿಯು ಹಿಮಾಚಲದಿಂದ ಹುಟ್ಟಿಹರಿಯುವ ಆ ಪುಣ್ಯ ನದಿಯನ್ನು ನೋಡಿದನು. ಅದರಲ್ಲಿ ಗಂಧರ್ವರೂ ಸ್ನಾನಕ್ಕಾಗಿ ನೆರೆದಿದ್ದರು. ದೇವೇಂದ್ರನು ಅಲ್ಲಿ ಅನುದಿನವೂ ಮೈ ತೊಳೆಯುತ್ತಿದ್ದನು. ಇಂದ್ರನ ಐರಾವತವು ಬಂದು ಅಲ್ಲಿ ನೀರಾಟವಾಡುತ್ತಿತ್ತು. ದಂಡೆಗುಂಟ ಮುನಿಮಹರ್ಷಿಗಳ ಎಲೆವನೆಗಳು. ಅಲೆಗಳ ಮಾಲೆಗಳ ಮೇಲೆ ಓಲಾಡಿ. ತೇಲಾಡುವ ರಾಜಹಂಸಗಳ ರಾಜಿ. ತೀರದ ತುಂಬ ಸಂಧ್ಯಾವಂದನ, ಜಪ, ತಪಗಳಿಗಾಗಿ ಕುಳಿತ ಬ್ರಹ್ಮ ವೃಂದ. ತುಸುದೂರದಲ್ಲಿಯೇ ಗಂಧರ್ವರೊಂದಿಗೆ ಅಪ್ಸರೆಯರ ಜಲಕ್ರೀಡೆ. ತೀರದ ತಾವರೆ ಬನದಲ್ಲಿ ತುಂಬಿಗಳ ಝೇಂಕಾರ. ತೀರನೀರುಗಳಲ್ಲಿ ಸುರಸುಂದರಿಯರ ವಿಹಾರ. ಆ ನದಿಯ ಆಚೆಯ ದಂಡೆಯಲ್ಲಿ ನಿಬಿಡವಾದ ಕಾಡು. ನೀರಿನಂಚಿನಲ್ಲಿ ಬಾಯಾರಿಕೆಯಿಂದ ಬಂದ ಸಿಂಹಗಳ ಗುಂಪು. ದೂರದ ಆ ಬದಿಯಲ್ಲಿ ನೀರು ಹೀರಲು ಬಂದ ಆನೆಗಳ ಹಿಂಡು. ಐರಾವತೀ ನದಿಯ ಭೀಷಣ ಬಂಧುವೂ ರುದ್ರರಮಣೀಯವೂ ಆದ ಈ ದೃಶ್ಯವನ್ನು ಬೆಕ್ಕಸಬರಗಾದ ಮದ್ರದೇಶದ ಮಹಾರಾಜನು ಕೌತುಕಭರಿತ, ಕಣ್ಣುಗಳಿಂದ ನೋಡುತ್ತ ನಿಂತುಕೊಂಡನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಹದಿನೇಳನೆಯ ಅಧ್ಯಾಯ ಮುಗಿದುದು*

—o—

## ಹಿಮಾಲಯದ ರುದ್ರಭದ್ರ ದರ್ಶನ

**ಅಧ್ಯಾಯ - ೧೧೮**

**ಸೂತ ಉವಾಚ**

**"ಆಲೋಕಯನ್ನದೀಂ ಪುಣ್ಯಾಂತತ್ಸಮೀರ ಹೃತಶ್ರಮಃ ।**
**ಸಗಚ್ಛನ್ನೇವ ದದೃಶೇಹಿಮವಂತಂ ಮಹಾಗಿರಿಮ್ ॥**

**ಸೂತ** :- ಆ ನದಿಯನ್ನು ಕಂಡು ಪುರೂರವ ಮಹಾರಾಜನಿಗೆ ಆನಂದವಾಯಿತು. ಅದರ ತಂಗಾಳಿಯಿಂದ ಅವನ ಆಯಾಸವು ಪರಿಹಾರವಾಯಿತು. ಹಾಗೆಯೇ ಮುಂದೆ ಹೋಗುತ್ತ ಅವನು ಹಿಮಪರ್ವತವನ್ನು ನೋಡಿದನು.

ಆಕಾಶದ ಅಂಗಳಕ್ಕೆ ಹೊಂಗಳಸ ಎತ್ತಿದಂತೆ ಕಂಗೊಳಿಸುವ ಬಂಗಾರದ ಶೃಂಗಗಳು. ಎತ್ತರದಿಂದ ಧುಮ್ಮಿಕ್ಕಿ ಧೀಂಕಿಟ್ಟು ಹರಿದು ಮೊರೆಯುವ ಝರಿ. ತೊರೆಗಳು. ಬೆಟ್ಟ ಉಟ್ಟುಕೊಂಡ ಬಟ್ಟೆಯಂತೆ ತೋರುವ ಮೋಡಗಳ ಪಡೆ. ಮೈತುಂಬ ಕರ್ಪೂರವನ್ನು ಬಳಿದುಕೊಂಡಂತಿರುವ ಪುಂಜಪುಂಜ ಮಂಜಿನ ಮಾಲೆ. ಒಂದು ಕಡೆ ಸೂರ್ಯನ ಉರಿಬಿಸಿಲು. ಇನ್ನೊಂದು ಕಡೆ ಎತ್ತಲೂ ಮುತ್ತಿದ ಕತ್ತಲು. ಒಂದೆಡೆ ವಿದ್ಯಾಧರ ದಂಪತಿಗಳ ವಿಹಾರವಿಲಾಸ. ಇನ್ನೊಂದು ಕಡೆ ಕಿನ್ನರ ಸಂಗೀತ. ಮತ್ತೊಂದು ಕಡೆ ಅಪ್ಸರೆಯರೊಂದಿಗೆ ಗಂಧರ್ವರ ಮಧುಪಾನ. ಇಲ್ಲಿ ಹಸರು ಕುಸುರು. ಅಲ್ಲಿ ಬಿರಿದ ಅರಳು. ಆ ಕೊಳ್ಳದಲ್ಲಿ ಹಿಂಡು-ಹಿಂಡಾಗಿ ಅಂಡಲೆಯುವ ಕಾಡಾನೆಯ ತಂಡ. ಈಚೆಯ ನಿಬಿಡವನ. ಶ್ರೇಣಿಯಲ್ಲಿ ಕೆರಳಿದ ಸಿಂಹಗಳ ಹೂಂಕಾರ. ತಪ್ಪಲಿನಲ್ಲಿ ತಾಪಸರ ತಪೋನುಷ್ಠಾನ. ಅಲ್ಲಲ್ಲಿ ಹರಿದಾಡುವ ಹೆಬ್ಬಾವುಗಳು, ಓಡಾಡುವ ಎರಳೆಗಳು. ತಗ್ಗು ಪ್ರದೇಶದಲ್ಲಿ ತಿಳಿನೀರಿನ ಕೊಳ. ಅದರಲ್ಲಿ ಸುಂದರವಾಗಿ ಅರಳಿದ ಹೊಂದಾವರೆಗಳ ನಗೆ. ತೀಡುವ ತಂಗಾಳಿ ತಂಪಿಂಪು ಬೀರುತ್ತಿದೆ. ಆ ಪರ್ವತದ ಇನ್ನೊಂದೆಡೆ ದೇವದಾರುಮರಗಳ ಕೊಂಬೆಗಳು ಮೋಡಗಳನ್ನು ಚುಂಬಿಸುತ್ತವೆ. ಇದರ ಕೆಲವು ಎತ್ತರವಾದ ಶಿಖರಗಳು ಹಿಮಕಿರೀಟಧರಿಸಿ ನಿಂತಿವೆ. ಅವುಗಳಿಂದ ನೂರಾರು ಜಲಪಾತಗಳೂ, ಗಿರಿಝರಿಗಳೂ ಸುರಿದು ಹರಿಯುತ್ತವೆ. ಇಂಥ ರಮಣೀಯವಾದ ಪರ್ವತ ಪ್ರದೇಶವನ್ನು ಕಂಡು, ಸಂತೋಷದಿಂದ ಅಲ್ಲೆಲ್ಲ ಕಡೆಗೂ ಸಂಚರಿಸಿ, ಆ ಮಹಾರಾಜನು ಒಂದು ಸ್ಥಳಕ್ಕೆ ಬಂದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಹದಿನೆಂಟನೆಯ ಅಧ್ಯಾಯ ಮುಗಿದುದು*

—o—

ಆರು ಋತು, ಹನ್ನೆರಡು ತಿಂಗಳು
ಹೂವಿನ ಸುಗ್ಗಿ, ಹರ್ಷದ ಬುಗ್ಗಿ

ಅಧ್ಯಾಯ - ೧೧೯

**ತಸ್ಯೈವ ಪರ್ವತೇಂದ್ರಸ್ಯ ಪ್ರದೇಶಂ ಸುಮನೋಹರಂ ।**
**ಅಗಮ್ಯಂ ಮಾನುಷ್ಯೈರನ್ಯೈರ್ದೈವ ಯೋಗಾದುಪಾಗತಃ ॥**

**ಸೂತ :-** ಶ್ರೀಮದ್ರ್ರದೇಶಾಧಿಪತಿಯಾದ ಪುರೂರವನು ಹಿಮಪರ್ವತದ ರಮಣೀಯವಾದ ಈ ಪ್ರದೇಶಕ್ಕೆ ದೈವಯೋಗದಿಂದ ಬಂದು ಸೇರಿದನು. ಏಕೆಂದರೆ ಸಾಮಾನ್ಯರಾದ ಮನುಷ್ಯರು ಅಲ್ಲಿಗೆ ಪ್ರವೇಶಿಸುವಂತಿರಲಿಲ್ಲ. ಪುಣ್ಯ ಪಯಸ್ವಿನಿಯಾದ ಐರಾವತಿಯು ಉಗಮಹೊಂದುವ ದಿವ್ಯಸ್ಥಳವೇ ಅದಾಗಿದ್ದಿತು. ಆ ಪರ್ವತ ಪ್ರಾಂತದ ಅಂತರಂಗ ಪ್ರದೇಶದಲ್ಲಿಯೂ, ದಿಬ್ಬ, ದಿನ್ನೆ, ತೆಗ್ಗು-ತೆವರು, ಸಾನು-ಕಾನು ಗರಿ-ಕೊರಿ, ಬೆಟ್ಟ-ಬಯಲು, ದಟ್ಟ ಸಾಲುಗಳಲ್ಲಿ ಬೆಳೆದ ಗಿಡಬಳ್ಳಿಗಳಿಗೆ ಲೆಕ್ಕವಿಲ್ಲ. ಸಾಲ, ತಾಳೆ, ಹೊಂಗೆ, ಬೆಟ್ಟದಾವರೆ, ಬೂರಗ, ಆಲ, ಅರಳಿ, ನೆಲ್ಲಿ, ಚೆಲ್ಲಿ, ಅಳಲೆ, ತಾರೆ, ಬಾಳೆ, ಗೋರುಟಿ, ಬಿಲ್ವ, ಬೇಲ, ತೇಗು ಯಲಚಿ, ದಾಳಿಂಬೆ, ಸಂಪಿಗೆ, ಮಲ್ಲಿಗೆ ಗಣಿಗಿಲೆ ಮುಂತಾದ ಹೂ, ಹಣ್ಣಿನಗಿಡಗಳೂ ಅಲ್ಲಲ್ಲಿ ಕಂಗೊಳಿಸುತ್ತಿದ್ದವು.

ಮತ್ತೊಂದು ಕಡೆ ಗುಗ್ಗಳ, ಅಶೋಕ, ಚಿಗಚಿ, ಹೊಂಗೆ, ಹುಣಿಸೆ, ಅರಗು, ವಾಯಡಂಗ, ನೇರಿಳೆ, ಮಾದಳ, ನಿಂಬೆ, ಗೇರು, ಲವಂಗ, ಪಾರಿಜಾತ, ಪಿಪ್ಪಲಿ, ಜಾಜಿವಾತ್ರೆ, ತಕ್ಕೋಲೆ, ದ್ರಾಕ್ಷಿ, ಇರುವಂತಿಗೆ ಮುಂತಾದವುಗಳು ತೊನೆದು ತೂಗುತ್ತಿದ್ದವು. ತುಸುಮುಂದೆ ಹೋದರೆ ಕುಂಬಳ, ಸೋರೆ, ಹಾಗಲ, ಸೌತೆ, ಬದನೆ, ಕಕ್ಕರಿಕೆ, ಪಡವಲ, ಹಲಸು, ಗೆಣಸು, ಮೂಲಂಗಿ, ಕೊತ್ತಂಬರಿ, ಹೆಬ್ಬಿದುರು, ಹಾಲೆಸೊಪ್ಪು ಮುಂತಾದ ತರಕಾರಿಗಳೂ ಕಂದಮೂಲಫಲಗಳೂ ಬಿರುಸಿನಿಂದ ಬೆಳೆದು ನೋಡುವವರ ಬಾಯಲ್ಲಿ ನೀರೂರಿಸುತ್ತಿದ್ದವು. ಒಟ್ಟಿನ ಮೇಲೆ ಆ ಹಿಮಾಲಯ ಪರ್ವತದಲ್ಲಿ ಬೆಳೆಯದ ಧಾನ್ಯ, ಸಸ್ಯ, ತರಕಾರಿ, ಹಣ್ಣು, ಗಡ್ಡೆ, ಗೆಣಸು, ಹೂವು ಮುಂತಾದವುಗಳು ಮೂರುಲೋಕದಲ್ಲಿಯೇ ಬೆಳೆದಿರಲಾರವು. ನೀರು, ನೆಲ, ಎರಡೂ ಸಮೃದ್ಧವಾಗಿದ್ದುದರಿಂದ ಅಲ್ಲಿ ಎಲ್ಲ ತರದ ಹುಲ್ಲು ಹಸಿರು, ಪಯರು, ಬೆಳೆಗಳೂ ಕಸುವುಗೊಂಡು ಭರದಿಂದ ಬೆಳೆದು ನಿಂತಿದ್ದವು. ಅವನ್ನೆಲ್ಲ ಕಂಡು ಪುರೂರವ ರಾಜನಿಗೆ ಪರಮಾನಂದವಾಯಿತು.

ಆ ಹಿಮಾಲಯದ ಶಾಂತವನಾಂತರಾಳದಲ್ಲಿ ಆರೂ ಋತುಗಳೂ ಹನ್ನೆರಡು ತಿಂಗಳೂ ತಮ್ಮ ತಮ್ಮ ಋತುಧರ್ಮವನ್ನು ಪ್ರವರ್ತಿಸುತ್ತಿದ್ದವು. ಅದರಿಂದ ಎಲ್ಲ ಬಗೆಯ ಗಿಡಬಳ್ಳಿಗಳು ಅಲ್ಲಿ ನಿರಂತರವೂ ಕಾತು, ಹೂತು ಹೊಂದಳಿರು ಹಂದರಗಳನ್ನು ಹಬ್ಬಿಸಿ ಸುಂದರವಾಗಿ ಅರಳಿ ನಿಂತು ನೋಡುವ ಕಂಗಳಿಗೆ

ಹಬ್ಬವನ್ನುಂಟುಮಾಡುತ್ತಿದ್ದವು. ಈ ಸಾರ್ವಜನಿಕ ಫಲಪುಷ್ಪ ಸಮೃದ್ಧಿಯನ್ನು ಕಂಡು ಪುರೂರವ ಮಹಾರಾಜನಿಗೆ ಆಶ್ಚರ್ಯವೂ ಆಯಿತು. ಆನಂದವೂ ಆಯಿತು. ಮತ್ತೆ ಆ ಕಾಡಿನಲ್ಲಿ ಇದನ್ನೆಲ್ಲ ನೋಡುತ್ತ ಮುನ್ನಡೆದ ಮಹಾರಾಜನ ಕಣ್ಣಿಗೆ ಗರಿಗೆದರಿ ಕುಣಿವ ನವಿಲು, ಪಂಚಮದ ಇಂಚರದನಿಯಲ್ಲಿ ಕುಕಿಲುವ ಕೋಗಿಲೆ, ಮಧುರ ಧ್ವನಿಗೈವ ಕಲಹಂಸ, ಚಿವ್‌ಗುಟ್ಟುವ ಗುಬ್ಬಚ್ಚಿ, ಕಲಕಲಧ್ವನಿಯಿಂದ ಸಪ್ಪಳ ಮಾಡುವ ಟಿಟ್ಟಭ, ಗೀಜಗ, ಗಿಳಿ, ಚಕ್ರವಾಕ, ಪಾರಿವಾಳ, ಸಾರಿಕಾ, ಕಪಿಂಜಲ, ಭಾರದ್ವಾಜ ಮುಂತಾದ ಬಗೆಬಗೆಯ ಹಕ್ಕಿಪಕ್ಕಿಗಳು ಗೋಚರವಾದವು.

ಇನ್ನೂ ಆ ಕಾಡಿನ ಒಳಗೂಡಿನಲ್ಲಿ ಆ ಪುರೂರವ ಮಹಾರಾಜನು ಪ್ರವೇಶಿಸಿದಾಗ ಸಂಖ್ಯೆ ಇಲ್ಲದಷ್ಟು ಜಿಂಕೆಗಳು, ಲೆಕ್ಕವಿಲ್ಲದಷ್ಟು ಕೋತಿಗಳೂ, ಹೂಂಕರಿಸುವ ಹುಲಿ, ಗುಡುಗುವ ಸಿಂಹ, ಅಬ್ಬರಿಸುವ ಶರಭ, ಕಿರುಚುವ ಕರಡಿ, ಮತ್ತು ಏರಿದ ಆನೆ, ಕಾಡು ಗುದ್ದುವ ಕೋಣ, ಬಾಲ ಬೀಸುವ ಚಮರೀ ಮೃಗ, ಭೂಮಿ ಕೆದರುವ ಕಾಡು ಹಂದಿ ಮುಂತಾದ ಅನೇಕ ಕ್ರೂರ ಪ್ರಾಣಿಗಳು ಹಿಂಡು-ಹಿಂಡಾಗಿ ಅಲ್ಲಿ ಅಂಡಲೆಯುವದು ಕಂಡುಬಂದಿತು. ಆದರೆ ಮಹಾರಾಜನಿಗೆ ಆದ ಅತ್ಯಾಶ್ಚರ್ಯವೆಂದರೆ ಆ ಎಲ್ಲ ಕ್ರೂರಪ್ರಾಣಿಗಳು ಹಿಂಸೆಯನ್ನು ತೊರೆದಿದ್ದು. ಪರಸ್ಪರ ಸೌಹಾರ್ದದಿಂದ ಇದ್ದದ್ದು.

ಆ ಕಾಡಿನಲ್ಲಿ ಯಾವ ಬಲಿಷ್ಠ ಪ್ರಾಣಿಯೂ ದುರ್ಬಲ ಪ್ರಾಣಿಯನ್ನು ಕೊಲ್ಲಲು ಧಾವಿಸುತ್ತಿದ್ದಿಲ್ಲ. ಕ್ರೂರಪ್ರಾಣಿಗಳ ಈ ಶಾಂತಿ ಸೌಹಾರ್ದ ಹಾಗೂ ಅಹಿಂಸಾ ವೃತ್ತಿಗಳ ಕಾರಣವು ಏನಿರಬಹುದು ? ಎಂದು ಕೌತುಕದಿಂದ ಅವನು ಆಚೀಚೆ ಕಣ್ಣು ಹೊರಳಿಸಿದಾಗ ಅಲ್ಲಿ ಮಹಾತ್ಮರಾದ ಅತ್ರಿ ಮುನಿಗಳ ಆಶ್ರಮವು ಅವನ ಕಣ್ಣಿಗೆ ಗೋಚರಿಸಿತು. ಅವರ ಪುಣ್ಯ ಪ್ರಭಾವದಿಂದ ಕ್ರೂರ ಶ್ವಾಪದಗಳೆಲ್ಲವೂ ಹಿಂಸಾಚಾರ ಬಿಟ್ಟಿದ್ದವು. ಮಾಂಸಾಹಾರ ತೊರೆದು ಫಲಾಹಾರ, ಶಾಕಾಹಾರ, ದುಗ್ಧಾಹಾರಗಳನ್ನು ಭಕ್ಷಿಸುತ್ತಿದ್ದವು. ಕುಡಿಯುತ್ತಿದ್ದವು.

ಹಿಮಾಲಯ ಪರ್ವತದ ಶಿಖರದಲ್ಲಿರುವ ಆ ಮುನಿಯ ಆಶ್ರಮವು ಹಲವಾರು ತರದ ಹಣ್ಣು, ಕಾಯಿ, ರೆಂಬೆ, ಕೊಂಬೆ, ತಳಿರು-ಚಿಗುರುಗಳಿಂದ ಸಮೃದ್ಧವಾದ ಗಿಡ-ಬಳ್ಳಿಗಳಿಂದಲೂ ಕಲಕಲ ಮಂಜುಳ ನಿನಾದದೊಂದಿಗೆ ಮೊರೆದು ಮುರಿದು ಸುರಿಯುವ ನದಿಗಳಿಂದಲೂ ಏಕಾಂತ-ಗುಹೆಗಳಿಂದಲೂ ಹಸುರು ಮುರಿಯುವ ಕಾಡುಮೇಡುಗಳಿಂದಲೂ ಪರಮ ರಮಣೀಯವಾಗಿದ್ದಿತು. ಆ ಆಶ್ರಮವನ್ನು ನೋಡಿದ ಮಾತ್ರಕ್ಕೆ ಮಹಾರಾಜನ ಹಸಿವೆ, ಬಾಯಾರಿಕೆಗಳು ಇಂಗಿ ಹೋದವು. ಮಾನವರಿಗೆ ದುರ್ಗಮವಾದ ಆ ಮಹಾಮುನಿಯ ಏಕಾಂತ ಆಶ್ರಮಕ್ಕೆ ಪುರೂರವ ಮಹಾರಾಜನು ಜನ್ಮಾಂತರದ ಸುಕೃತದಿಂದಲೇ ಸಾರಿ ಬಂದಿದ್ದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾ ಹತ್ತೊಂಬತ್ತನೆಯ ಅಧ್ಯಾಯ ಮುಗಿದದು*

—೦—

ಅಧ್ಯಾಯ - ೧೨೦

## ಅತ್ರಿಋಷಿಯು ಸ್ಥಾಪಿಸಿದ ಲಕ್ಷ್ಮೀನಾರಾಯಣಮೂರ್ತಿಗೆ ಪುರೂರವನ ಸೇವೆ.

**ಸೂತಃ ಉವಾಚ**

**ತತ್ರ ಯೌ ತೌ ಮಹಾ ಶೃಂಗೌ ಮಹಾವರ್ಣೌಮಹಾಹಿಮೌ ॥**
**ತೃತೀಯಂತು ತಯೋರ್ಮಧ್ಯೇ ಶೃಂಗಮತ್ಯಂತಮುಚ್ಛ್ರಿತಂ ॥**

**ಸೂತ** :- ಅಲ್ಲಿ ದಟ್ಟವಾದ ಮಂಜಿನಿಂದ ತುಂಬಿ ಶುಭ್ರವರ್ಣದಿಂದ ಪ್ರಕಾಶಿಸುವ ಎರಡು ಶಿಖರಗಳುಂಟೆಂದು ಹೇಳಿದೆನಲ್ಲವೆ ? ಅವುಗಳ ನಡುವೆ ಬಹಳ ಎತ್ತರವಾದ ಮೂರನೆಯ ಶಿಖರವು ಮತ್ತೊಂದಿರುವದು. ಅದು ಬಹಳ ಎತ್ತರ. ಸುಮಾರಾಗಿ ಸೂರ್ಯನಿಗೆ ಹತ್ತಿರ ಹತ್ತಿರ. ಅಲ್ಲಿಯ ಹೆಬ್ಬಂಡೆಗಳಲ್ಲಿ ರವಿರಶ್ಮಿಗಳ ಝಳದಿಂದ ಯಾವಾಗಲೂ ಕಾದು ಕೆಂಡದುಂಡೆಗಳಾಗಿರುತ್ತವೆ. ಅಲ್ಲಿಯವರೆಗೆ ಮೋಡಗಳು ಏರಲಾರವು. ಅದರ ಕೆಳಗಡೆ ಭೂಮಿಗಳಲ್ಲಿ ಹೆಮ್ಮರಗಳು ಗುಂಪು ಗುಂಪಾಗಿ ಬೆಳೆದು ನಿಂತಿರುವವು. ಅಲ್ಲಿ ಒಂದು ಸುಂದರ ಗುಹೆ. ಅದರ ಸುತ್ತಲೂ ಜಾಜಿಯ ಬಳ್ಳಿಗಳು ಬೆಳೆದು ಗುತ್ತಾಗಿ ಹೆಣೆದುಕೊಂಡು ಆ ಗುಹೆಯನ್ನು ಮುಚ್ಚಿಹಾಕಿದ್ದವು.

ಮಹಾರಾಜನು ಅದನ್ನು ಕಂಡು ಕುತೂಹಲದಿಂದ ಒಳಗೆ ಪ್ರವೇಶಿಸಿದನು. ಒಳಗೆ ಕತ್ತಲೆಯು ನೂರಾರು ಮೊಳದಷ್ಟು ವಿಸ್ತಾರವಾದ ಒಳಾಂಗಳದಲ್ಲಿ ಹೆಪ್ಪುಗಟ್ಟಿತ್ತು. ಆ ಕಗ್ಗತ್ತಲೆಯಲ್ಲಿಯೇ ನುಗ್ಗಿ ದಾಟಿಹೋದ ಬಳಿಕ ಬೆಳಕು ಕಂಡಿತು. ಮುಂದೆ ಒಂದು ಯೋಜನ ನಡೆದ ಬಳಿಕ ಒಂದು ತಿಳಿನೀರಿನ ಸರೋವರ. ಅಲ್ಲಿಯ ಕಮಲ ಕನ್ನೈದಿಲೆ ಮುಂತಾದ ಹೂಗಳೂ, ಹಾವಸೆಗಳೂ, ಪಾಚೆಗಳೂ, ಹೊನ್ನರನ್ನದವೇ ಆಗಿದ್ದವು. ಅಲ್ಲಿ ಅರಳಿದ ಕಮಲ ಕುಸುಮಗಳಿಗೆ ಪದ್ಮರಾಗದ ಎಸಳು. ವಜ್ರದ ಕೇಶರ. ಪಚ್ಚೆಯ ಎಲೆಗಳು. ವೈಢೂರ್ಯ ರತ್ನದ ಎಳೆಗಳು, ಹಾಗೂ ದೇಟುಗಳು. ಆ ಸರೋವರದ ದಂಡೆಯ ಮಣ್ಣು ಮಣಿಮಯ. ಮರಳು ಮುಕ್ತಾಮಯ. ಪಚ್ಚೆ, ವಜ್ರ, ಪದ್ಮರಾಗ, ಇಂದ್ರನೀಲ ಮಹಾನೀಲ, ಪುಷ್ಪರಾಗ ಮೊದಲಾದ ನವರತ್ನಗಳು ಆ ಸರೋವರದ ದಂಡೆಗುಂಟ ಚೆಲ್ಲಿದಂತೆ ಎಲ್ಲೆಡೆಗೂ ಚೆಲ್ಲುವರಿದಿದ್ದವು. ಆ ಸರದ ನಟ್ಟ ನಡುವೆ ವೈಢೂರ್ಯರತ್ನದ ಒಂದು ಎಂಟುನೂರು ಮೊಳ ಉದ್ದಗಲವುಳ್ಳ ಚಚ್ಚೌಕ ಕಟ್ಟೆ. ಆ ಕಟ್ಟೆಯ ನಟ್ಟನಡುವೆ ಮತ್ತೊಂದು ಪುಷ್ಕರಣಿ. ಆ ಪುಷ್ಕರಿಣಿಯ ನಟ್ಟನಡುವೆ ಒಂದು ದೇವಾಲಯ. ಆ ದೇವಾಲಯದ ಗೋಡೆ, ಛಾವಣಿ ಎಲ್ಲವೂ ರತ್ನಗಳಿಂದಲೇ ಆದದ್ದು. ಆ ರತ್ನ ಮಂದಿರಕ್ಕೆ ಹೋಗಲು ದಂಡೆಯಿಂದ ಒಂದು ಚಿಕ್ಕ ಚಿನ್ನದ ಸೇತುವೆ. ಅಲ್ಲಿ ಏರಲು

ಹವಳ ಹಚ್ಚಿದ ವೈಢೂರ್ಯದ ಮೆಟ್ಟಿಲುಗಳು. ಇಂದ್ರನೀಲಗಳ ಕಂಬಿ. ಪಚ್ಚೆಯ ಜಗಲಿ. ವಜ್ರದ ನಂದಾದೀಪ. ಇಂಥ ದೇವಸ್ಥಾನದ ಮಧ್ಯದಲ್ಲಿ ಹೆಡೆಬಿಚ್ಚಿದ ಆದಿಶೇಷನ ದಿವ್ಯ ದೇಹದ ಮೇಲೆ ಶ್ರೀ ಹರಿಯು ಪವಡಿಸಿದ್ದಾನೆ. ಅಲ್ಲಿಯೇ ಅವನ ಅಡಿಯಲ್ಲಿ ಕುಳಿತು ಶ್ರೀ ದೇವಿಯು ಕಮಲ-ಕೋಮಲವಾದ ಕೈಗಳಿಂದ ದೇವನ ಪಾದಗಳನ್ನು ಒತ್ತುತ್ತಿದ್ದಾಳೆ. ಆದಿಶೇಷನ ಹೆಡೆಯ ದಿವ್ಯರತ್ನಗಳ ಕಾಂತಿಯು ಆ ಲಕ್ಷ್ಮೀ ನಾರಾಯಣ ದಂಪತಿಗಳ ಮೇಲೆ ತನ್ನ ಪ್ರಭಾಪುಂಜವನ್ನು ಪಸರಿಸಿತ್ತು.

ಅತ್ರಿಮಹರ್ಷಿಯು ಇಂಥ ಈ ದಿವ್ಯ ಸುಂದರ ವಿಗ್ರಹವನ್ನು ತನ್ನ ಆ ಸುಂದರ ಮಣಿಮಂದಿರದಲ್ಲಿ ಸ್ಥಾಪಿಸಿದ್ದನು. ದೊರೆ ಭಗವಂತನ ಆ ಮಂಗಳಮೂರ್ತಿಯನ್ನು ಕಂಡು ಸಾಷ್ಟಾಂಗನಮಸ್ಕಾರಮಾಡಿದನು. ಭಗವಂತನ ಎದುರು ಕೈಮುಗಿದು ಕುಳಿತು ವಿಷ್ಣು ಸಹಸ್ರನಾಮ ಬಾಯಿಂದ ಉಚ್ಚರಿಸಿ ಹೃದಯ ತುಂಬಿ ಹಾಡಿದನು. ಆ ಸ್ಥಳವನ್ನು ಕಂಡು ಅವನ ಹೃದಯಕ್ಕೆ ಏನೋ ಒಂದು ಶಾಂತಿ ದೊರೆತಂತಾಯಿತು. ತಾನು ಇಲ್ಲಿಯೇ ನಿಂತು ತಪಸ್ಸನ್ನು ಮಾಡಬೇಕೆಂದು ಅವನು ನಿರ್ಧರಿಸಿದನು. ಆ ಗುಹೆಯ ಹೊರಗಡೆ ಇರುವ ಬೇರೆ ಒಂದು ಚಿಕ್ಕ ಗುಹೆಯಲ್ಲಿ ತಾನು ವಾಸಮಾಡಿ ಆ ಲಕ್ಷ್ಮೀನಾರಾಯಣನ ಸೇವೆಯನ್ನು ಮಾಡತೊಡಗಿದನು.

ಪ್ರತಿದಿನವೂ ಮೂರು ಹೊತ್ತು ಆ ಸರೋವರದಲ್ಲಿ ಸ್ನಾನ, ಔಪಾಸನ, ಅಗ್ನಿ ಹೋತ್ರ ಭಗವಂತನ ಎದುರು ಕುಳಿತೇ ಧ್ಯಾನ. ಜಪತಪ ತಪೋನುಷ್ಠಾನ ಮತ್ತು ಶಾಸ್ತ್ರೋಕ್ತ ಪದ್ಧತಿಯಿಂದ ಆ ಭಗನ್ಮೂರ್ತಿಯ ಷೋಡಶೋಪಚಾರ ಪೂಜೆಗೈದು ಆ ಪುಷ್ಕರಿಣಿಯ ನೀರನ್ನು ಮಾತ್ರ ಕುಡಿದು, ಉಳಿದ ಆಹಾರವನ್ನೆಲ್ಲ ತೊರೆದು ಭಗವತ್ಸೇವೆಯಲ್ಲಿಯೇ ಕಾಲಕಳೆಯ ತೊಡಗಿದನು. ಹೀಗೆ ಸಂಪೂರ್ಣ ಆಹಾರ ಬಿಟ್ಟರೂ ಅವನ ದೇಹವು ಸೊರಗಲಿಲ್ಲ. ಇದೇ ಪರಮಾಶ್ಚರ್ಯ. ಹೀಗೆ ಭಗವಂತನ ಧ್ಯಾನ, ಪೂಜನರೂಪವಾದ ಉಗ್ರತಪಸ್ಸನ್ನುಮಾಡುತ್ತ ಎಲ್ಲ ಸಂಸಾರವನ್ನು ಮರೆತು ಸ್ವರ್ಗ ಸಮಾನವಾದ ಆ ಪುಣ್ಯ ಆಶ್ರಮದಲ್ಲಿ ದುಃಖ ಮುಕ್ತನಾಗಿ ಕೆಲವು ಕಾಲ ತಂಗಿ ತಪಂಗೈದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಇಪ್ಪತ್ತನೆಯ ಅಧ್ಯಾಯ ಮುಗಿದುದು*

—o—

## ಶೃಂಗಾರದ ರಂಗಸ್ಥಲದಲ್ಲಿಯೇ ವೈರಾಗ್ಯದ ಮಂಗಲೋತ್ಸವ

ಅಧ್ಯಾಯ - ೧೨೧

**ಸೂತ ಉವಾಚ**

**ಸತ್ವಾಶ್ರಮಪದೇ ರಮ್ಯೇ ತ್ಯಕ್ತಾಹಾರಪರಿಚ್ಛದಃ ।**
**ಕ್ರೀಡಾವಿಹಾರಂ ಗಂಧರ್ವೈಃ ಪಶ್ಯತ್ಯಪ್ಸರಸಾಂ ಸಹ ॥**

**ಸೂತ :-** ರಮಣೀಯವಾದ ಆ ಆಶ್ರಮದಲ್ಲಿ ಪುರೂರವ ಮಹಾರಾಜನು ಆಹಾರ ವಿಹಾರ, ಹಾಸು, ಹೊದಿಕೆ ಮುಂತಾದ ಭೋಗ, ಭುಕ್ತಿಗಳನ್ನೆಲ್ಲ ಬಿಟ್ಟು ತಪಸ್ಸನ್ನುಮಾಡುತ್ತಿದ್ದಾಗ ಗಂಧರ್ವರು ಅಲ್ಲಿ ಅಪ್ಸರೆಯರೊಂದಿಗೆ ವಿವಿಧ ಕ್ರೀಡಾ ವಿಹಾರವನ್ನು ಮಾಡುತ್ತಿರುವದು ಅವನಿಗೆ ಕಾಣಿಸುತ್ತಿತ್ತು. ಅಲ್ಲಿಯ ಬನದೆಡೆಯಲ್ಲಿ ಬಿರಿದ ಸುಗಂಧಿ ಹೂಗಳನ್ನು ಕೊಯ್ದು ಆಯ್ದು ತಂದು ಮಾಲೆಮಾಡಿ ನಾರಾಯಣ ದೇವರಿಗೆ ಸಮರ್ಪಿಸುತ್ತಿದ್ದನು. ತನ್ನ ಪೂಜೆಯಾದ ಬಳಿಕ ಆ ನಿರ್ಮಾಲ್ಯ ಪುಷ್ಪಹಾರಗಳನ್ನು ಗಂಧರ್ವ ದಂಪತಿಗಳಿಗೆ ಕೊಡುತ್ತಿದ್ದನು. ಅಪ್ಸರೆಯರೊಂದಿಗೆ ತರುಣ ಗಂಧರ್ವರು ಏಕಾಂತವನಾಂತರದ ಮಂಜಲತಾಕುಂಜಗಳಲ್ಲಿ ಕಾಮಕೇಲೀ ವಿಹಾರಗಳನ್ನು ಸ್ವಚ್ಛಂದವಾಗಿ ಲೀಲಾಲೋಲುಪತೆಯಿಂದ ಮಾಡುತ್ತಿದ್ದರು. ಆ ರಸಿಕ ಪ್ರಣಯಿಗಳ ವಿವಿಧ ವಿಹಾರವಿಲಾಸಗಳನ್ನು ಕಣ್ಣಿನಿಂದ ನೋಡಿದರೂ ತನ್ನ ಎದುರೇ ಅವರ ರಾಗ, ಭೋಗ, ಕ್ರೀಡಾ ಕೌತುಕಗಳು ನಡೆದರೂ ಮಹಾರಾಜನ ಮನಸ್ಸು ಚಂಚಲವಾಗಲಿಲ್ಲ. ಅದನ್ನೆಲ್ಲ ನೋಡಿಯೂ ನೋಡದಂತೆ ನಿರ್ವಿಕಾರ ಚಿತ್ತನಾಗಿ, ತನ್ನ ಭಗವದ್ಧ್ಯಾನ, ಪೂಜನ ಜಪತಪೋನುಷ್ಠಾನಗಳಲ್ಲಿ ತತ್ಪರನಾಗುತ್ತಿದ್ದನು.

ಅವನ ಕಣ್ಣೆದುರು ನಡೆವ ಗಂಧರ್ವ ದಂಪತಿಗಳ ಶೃಂಗಾರಕೇಳಿಗಳು ಎಂಥ ತಪಸ್ವಿಯ ಮನವನ್ನೂ ಕದಡುವಂತಿದ್ದವು. ಚೆಲುವೆಯೊಬ್ಬಳ ಉಸಿರಿನ ಗಂಧಕ್ಕಾಗಿ ದುಂಬಿಗಳು ಮುಖಕ್ಕೆ ಮುಕುರಿದವು. ಆಗ ಅವಳು ದಿಗಿಲುಗೊಂಡು ಕೂಗಿದಾಗ ಅವಳ ನಲ್ಲನು ತಾನೇ ದುಂಬಿಯಾಗಿ ಉಳಿದ ಬಂಡುಣಿಗಳನ್ನು ಹೊಡೆದಟ್ಟಿದನು. ಕಾಮಿನಿಯೊಬ್ಬಳ ಕಂಗಳಲ್ಲಿ ಕಮಲದ ಕೇಶರದ ಕಣಗಳು ತುಂಬಿಕೊಂಡಾಗ ಅವಳ ಕಾಂತನು ಬಂದು ಬಾಯಿಂದ ಕಣ್ಣಲ್ಲಿ ಊದಿ ಅವಳ ಕಣ್ಣಿನ ಬಾಧೆಯನ್ನು ಪರಿಹರಿಸಿದನು. ಅನೇಕ ಗಂಧರ್ವ ತರುಣರು ಹೂವುಗಳ ಮಾಲೆಗಳನ್ನು ಕಟ್ಟಿ ಅಪ್ಸರೆಯರ ಕೇಶ ಕಲಾಪಗಳಲ್ಲಿ ತಾವಾಗಿ ಮುಡಿಸುತ್ತಿದ್ದರು. ಆ ಸರೋವರದಲ್ಲಿ ಕೆಲವು ಗಂಧರ್ವ ದಂಪತಿಗಳು ಒಬ್ಬರಿಗೊಬ್ಬರ ಮೇಲೆ ನೀರನ್ನು ಎರಚುತ್ತ ಜಲಕ್ರೀಡೆಯಾಡುತ್ತಿದ್ದರು.

ದಂಡೆಯ ಮೇಲಿನ ಬಳ್ಳಿವಾಡಗಳಲ್ಲಿ ಎಷ್ಟೋ ಬಾಲೆಯರು ತಮ್ಮ ಮನದನ್ನರೊಂದಿಗೆ ಮಧುಪಾನಮಾಡಿ ವಿಹರಿಸುತ್ತಿದ್ದರು. ಕೆಲವು ಕಡೆ ಗಂಧರ್ವ

ಕುಲದ ಸ್ತ್ರೀ-ಪುರುಷರೆಲ್ಲರೂ ಸೇರಿ ಆನಂದದಿಂದ ವೃಂದಗಾನಗೈಯುತ್ತಿದ್ದರು. ಸಾಯಂಕಾಲದಲ್ಲಿ ಅವರೆಲ್ಲರೂ ಆ ನಾರಾಯಣದೇವರ ಮುಂದೆ ಕುಳಿತು ವೀಣಾವೇಣು, ಮೃದಂಗ, ತಾಳ, ತಮಟೆಗಳೊಂದಿಗೆ ಹಾಡಿಪಾಡಿ ಸಂಗೀತಸೇವೆ ಗೈಯುತ್ತಿದ್ದರು. ಅನಂದದಿಂದ ಗೆಜ್ಜೆ ಕಟ್ಟಿಕೊಂಡು ತಾಳ ಲಯದೊಂದಿಗೆ ಹೆಜ್ಜೆ ಹಾಕುತ್ತ ನರ್ತನಮಾಡುತ್ತಿದ್ದರು.

ಈ ಎಲ್ಲ ಚಿಗರೆಗಂಗಳ ಚೆಲುವೆಯರ ಹಾವ, ಭಾವ, ಕುಣಿತ, ಮಣಿತ, ಬೆಡಗು, ಬಿನ್ನಾಣ ಕೇಳಿಲೀಲೆಗಳನ್ನು ಹಗಲಿರುಳೂ ಕಾಣುತ್ತಲಿದ್ದರೂ ಪುರೂರವನ ಚಿತ್ತವು ಮಾತ್ರ ಇನಿತೂ ವಿಕಾರವಶವಾಗಲಿಲ್ಲ. ಅವನು ಜಿತೇಂದ್ರಿಯನಾಗಿ ಜಗದೀಶನಲ್ಲಿ ದೃಢವಾಗಿ ಮನಸ್ಸನ್ನು ನೆಟ್ಟು ಎಡೆಬಿಡದೆ ಧ್ಯಾನಗೈದು, ಚಂಚಲತೆಗೆ ಅವಕಾಶಕೊಡದೆ ತನ್ನ ತಪಸ್ಸನ್ನು ಮುಂದುವರಿಸಿದ್ದನು. ಕೊನೆಗೆ ಎಲ್ಲ ಅಪ್ಸರೆಯರೂ, ಗಂಧರ್ವರೂ ಅವನ ಬಳಿಗೆ ಬಂದು ''ಮಹಾರಾಜ, ಸ್ವರ್ಗಕ್ಕೆ ಸಮಾನವಾದುದು ಈ ಸ್ಥಳ. ಸುದೈವದಿಂದ ಇಲ್ಲಿಗೆ ಬಂದ ನಿನಗೆ ಬೇಡಿದ ವರಗಳನ್ನು ನಾವು ಕೊಡುವೆವು. ನೀನು ನಮ್ಮಿಂದ ವರಪಡೆದು ಇಲ್ಲಿಯೇ ಇರಬಹುದು. ಬೇಕೆಂದರೆ ಮನೆಗೂ ಹೋಗಬಹುದು'' ಎಂದು ಹೇಳಿದರು.

**ಪುರೂರವ :-** ನಿಮ್ಮ ದರ್ಶನದಿಂದ ನಾನು ಧನ್ಯನಾದೆ. ನನ್ನ ಜನ್ಮ ಸಾರ್ಥಕ. ತಾವು ನನ್ನ ಮೇಲೆ ಸುಪ್ರೀತರಾಗಿದ್ದರೆ ಶ್ರೀ ಹರಿಯ ಪ್ರಸಾದವು ನನಗೆ ಬೇಗ ದೊರೆಯುವಂತೆ ಅನುಗ್ರಹಿಸಿರಿ, ಇದೇ ನಾನು ತಮ್ಮಲ್ಲಿ ಕೇಳುವ ವರ.'' ತಥಾಸ್ತು ಎಂದು ಹೇಳಿದರು ಆ ಗಂಧರ್ವ ಅಪ್ಸರೆಯರು. ಮತ್ತೆ ಮುಂದುವರಿಯಿತು ಮಹಾರಾಜನ ಉಗ್ರತಪಸ್ಸು. ಅವನ ಚಿತ್ತಸ್ಥೈರ್ಯ ಹಾಗೂ ಮನೋಧೈರ್ಯಗಳನ್ನು ಕಂಡು ಆ ಭೋಗಜೀವಿಗಳಿಗೆಲ್ಲ ಆಶ್ಚರ್ಯವೋ ಆಶ್ಚರ್ಯ. ನೋಡಿದ ಅವರೆಲ್ಲರೂ ಆನಂದಭರಿತರಾಗಿ ಅವನು ಕೇಳಿದ ವರವನ್ನು ಕೊಟ್ಟು ''ನಿನಗೆ ಬೇಗನೆ ಭಗವತ್ಪ್ರಸಾದವಾಗಲಿ'' ಎಂದು ಹೃದಯ ತುಂಬಿ ಹರಿಸಿದರು. ಮಹಾರಾಜನು ಆ ಪುಣ್ಯಾಶ್ರಮಕ್ಕೆ ಹೋದದ್ದು ಮಾಘಮಾಸದ ಮಧ್ಯದಲ್ಲಿ. ನಿರಾಹಾರನಾಗಿ ಅವನು ಫಾಲ್ಗುಣ ಶುಕ್ಲ ಪಕ್ಷ ಹುಣ್ಣಿಮೆಯವರೆಗೆ ಒಂದು ತಿಂಗಳ ಕಾಲ ಅಲ್ಲಿ ಉಗ್ರತಪಸ್ಸನ್ನು ಆಚರಿಸಿದನು.

ಫಾಲ್ಗುಣ ಶುದ್ಧ ಹುಣ್ಣಿಮೆ, ರಾಕಾ ರಜನಿಯ ಕೊನೆಯ ಯಾಮ. ಹಾಲು ಉಕ್ಕಿದಂತೆ ತೆರೆತುಂಬ ತಿಂಗಳ ಬೆಳಕು. ಈ ಸಂದರ್ಭದಲ್ಲಿ ಪುರೂರವ ಮಹಾರಾಜನಿಗೆ ಒಂದು ಕನಸು, ಕನಸಿನಲ್ಲಿ ತಲೆಯ ಮೇಲೆ ಕೇಶವನ ಅಭಯಹಸ್ತ. ''ರಾಜನೇ, ಈ ರಾತ್ರಿ ಕಳೆದು ಬೆಳಗಾದ ಕೂಡಲೇ ನಿನಗೆ ಅತ್ರಿ ಮಹರ್ಷಿಯ ಸಮಾಗಮ ಆಗುವದು. ಅದರಿಂದ ನಿನ್ನ ಮನೋರಥವು ಕೈಗೂಡುವದು.'' ಎಂದು ಹೇಳಿ ಭಗವಂತ ಅದೃಶ್ಯನಾದ. ಕನಸು ಕಂಡು ಎಚ್ಚೆತ್ತ ಮಹಾರಾಜನ ಮೈ ಪುಲಕಗೊಂಡಿತು. ಅದು ಬೆಳಗಿನ ಜಾವ. ಅರುಣೋದಯದ ಹೊಂಬೆಳಗು ಪೂರ್ವದ ನಿಟ್ಟಿನಲ್ಲಿ ಅನುರಾಗವನ್ನು ಸೂಸುತ್ತಿತ್ತು. ಕೂಡಲೇ ಅವನು ಎದ್ದು

ಶಾಸ್ತ್ರೋಕ್ತವಾಗಿ ಸ್ನಾನಮಾಡಿದ. ಮನಸೋಕ್ತವಾಗಿ ಹರಿಯನ್ನು ಪೂಜಿಸಿದ. ಇಷ್ಟರಲ್ಲಿ ತಪೋನಿಧಿಗಳಾದ ಅತ್ರಿಗಳು ಅಲ್ಲಿಗೆ ಬಂದರು. ಪುರೂರವನು ಆ ಮಹಾಮುನಿಗಳಿಗೆ ಸಾಷ್ಟಾಂಗಪ್ರಣಾಮಮಾಡಿದ. ಭಗವಂತನ ಸಂದೇಶವನ್ನು ಕೈಮುಗಿದು ತಿಳಿಸಿದ. ಆಗ ಅಲ್ಲಿಯೇ ನಿಂತ ದೇವತೆಗಳೆಲ್ಲರೂ ಅದು ಸರಿ ಎಂದರು. ಪುರೂರವ ರಾಜನು ಮಹರ್ಷಿಗಳನ್ನು ಪೂಜಿಸಿ ತನ್ನ ಅನುಷ್ಠಾನ, ಅಗ್ನಿ ಹೋತ್ರ, ಜಪ, ತಪಗಳನ್ನು ಪೂರೈಸಿದ. ಹೀಗೆ ನಾರಾಯಣನ ವರದಿಂದ ಅವನ ಮನೋರಥಗಳೆಲ್ಲವೂ ಪೂರ್ಣವಾದವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತೊಂದನೆಯ ಅಧ್ಯಾಯ ಮುಗಿದುದು*



ಗಂಗೆ ಹೊರಬಿದ್ದ ಸರೋವರ ಬಿಂದು.
ಏಳು ಪ್ರವಾಹವಾಗಿ ಸೇರಿದ ಸಿಂಧು.

## ಅಧ್ಯಾಯ - ೧೨೨

**ಸೂತ ಉವಾಚ**

**ತಸ್ಯಾಶ್ರಮಸ್ಯೋತ್ತರತ ಸ್ತ್ರೀಪುರಾರಿನಿಷೇವಿತಃ ।**
**ನಾನಾರತ್ನಮಯೈಃ ಶೃಂಗೈಃ ಕಲ್ಪದ್ರುಮಸಮನ್ವಿತೈಃ ॥**

**ಸೂತ :-** ಆ ಆಶ್ರಮಕ್ಕೆ ಉತ್ತರದಲ್ಲಿ ಹಿಮಪರ್ವತದ ಮೇಲ್ಗಡೆ ನಟ್ಟನಡುವೆ ಕೈಲಾಸವೆಂಬ ಪರ್ವತವುಂಟು. ಆದರೆ ಶಿಖರಗಳು ಬಗೆಬಗೆಯ ರತ್ನಗಳಿಂದಲೂ ಕಲ್ಪವೃಕ್ಷಗಳಿಂದಲೂ ರಂಜಿಸುತ್ತಿರುವವು. ಅದು ಮಹೇಶ್ವರನ ಆವಾಸಸ್ಥಾನ. ಅದರ ಸನಿಹದಲ್ಲಿಯೇ ಧನಾಧಿಪತಿಯಾದ ಕುಬೇರನು ಯಕ್ಷರೊಡಗೂಡಿ ವಾಸಿಸುತ್ತಿರುವನು. ಅವನು ಅಪ್ಸರಾಂಗನೆಯರೊಂದಿಗೆ ಅಲಕಾ ನಗರಿಯಲ್ಲಿ ಆನಂದದಿಂದ ನೆಲೆಸಿರುವನು. ಕೈಲಾಸಪರ್ವತದ ತಪ್ಪಲಿನಲ್ಲಿ ಮಂದೋದಕ ಎಂಬ ಸರೋವರ. ಮಂದಾಕಿನೀ ಎಂಬ ನದಿ. ಆ ನದೀ ತೀರದಲ್ಲಿಯೇ ನಂದನ ಎಂಬ ದಿವ್ಯ ಉದ್ಯಾನ. ಕೈಲಾಸಗಿರಿಯ ಈಶಾನ್ಯದಲ್ಲಿ ಸುವೇಲ ಎಂಬ ಪರ್ವತ. ಅದರ ಎದುರು ವೈಢೂರ್ಯರತ್ನದ ಕಾಂತಿಯನಾಂತು ನಿಂತುಕೊಂಡಿದೆ ಚಂದ್ರಪ್ರಭಬೆಟ್ಟ, ಆ ಬೆಟ್ಟದ ಬದಿಯಲ್ಲಿಯೇ ಅಚ್ಛೋದ ಸರೋವರ. ಅಚ್ಛೋದಕಾ ಎಂಬ ನದಿಯು ಅದೇ ಸರೋವರದಲ್ಲಿ ಉಗಮಿಸಿ ಹರಿಯುತ್ತಿದೆ. ಅಚ್ಛೋದ ಸರೋವರದ ತೀರದಲ್ಲಿ ಚೈತ್ರರಥ ಎಂಬ ರಮ್ಯವಾದ ಉದ್ಯಾನ. ಯಕ್ಷರ ಸೇನಾಪತಿಯಾದ ಮಣಿಭದ್ರನು ಚಂದ್ರಪರ್ವಪರ್ವತದಲ್ಲಿ ವಾಸಿಸುವನು. ಮಂದಾಕಿನೀ ಮತ್ತು ಅಚ್ಛೋದಕಾ ನದಿಗಳು ನೆಲೆದೆದೆಯ ನಟ್ಟ ನಡುವೆ ಹರಿದು ಪಡುವಲ ಕಡಲಿನ ಒಡಲನ್ನು ಸೇರುವವು.

ಸುಪೇಲ ಪರ್ವತದ ಎದುರು ಲೋಹಿತಗಿರಿ. ಅದರ ತಪ್ಪಲಿನಲ್ಲಿ ಲೋಹಿತ ಸರೋವರ. ಅದರಿಂದ ಲೌಹಿತ್ಯ ಎಂಬ ನದಿಯು ಹುಟ್ಟಿ ಹರಿದಿದೆ. ಅದರ ತೀರದಲ್ಲಿ ಇರುವ ದಿವ್ಯಾರಣ್ಯದಲ್ಲಿ ಮಣಿಧರನೇ ಮೊದಲಾದ ಧರ್ಮಿಷ್ಟ ಯಕ್ಷರು ವಾಸಿಸುತ್ತಾರೆ.

ಕೈಲಾಸಬೆಟ್ಟದ ವಾಯವ್ಯದಲ್ಲಿ ಶಿವನ ವಾಹನವಾದ ಎತ್ತಿನ ಜನ್ಮಭೂಮಿ ಎನಿಸಿದ ಕಕುದ್ಮಂತ ಎಂಬ ಪರ್ವತವಿದೆ. ಅದರ ಎದುರಿಗೇ ವೈದ್ಯುತಗಿರಿ. ಈ ವೈದ್ಯುತಬೆಟ್ಟದತಪ್ಪಲಿನಲ್ಲಿಯೇ ಮಾನಸಸರೋವರ. ಅದರಿಂದ ಉಗಮಿಸಿ ಪ್ರವಹಿಸಿದ ಸರಯೂನದಿಯ ತೀರದಲ್ಲಿ ವೈಭ್ರಾಜ ಎಂಬ ದಿವ್ಯೋದ್ಯಾನವಿದೆ. ಕುಬೇರನ ಅನುಚರನಾದ ಬ್ರಹ್ಮದತ್ತ ಎಂಬ ರಾಕ್ಷಸನು ಅಲ್ಲಿ ವಾಸಿಸುತ್ತಾನೆ. ಈ ಕೈಲಾಸಾಚಲದ ಪಶ್ಚಿಮಕ್ಕೆ ವರುಣ ಎಂಬ ಹೆಸರಿನ ಒಂದು ಬಂಗಾರದ ಬೆಟ್ಟವಿದೆ. ಇದರ ಬಂಡೆ, ಸಾನು, ಕಾನು, ಶಿಖರ ಎಲ್ಲವೂ ಚಿನ್ನಮಯ. ಆದುದರಿಂದ ಇದು ಶಿವನಿಗೆ ಬಹುಪ್ರಿಯ. ಸುವರ್ಣ ಶಿಖರಗಳಿಂದ ಮುಗಿಲಿನ ತುಂಬ ಕನಕ ರೇಖೆಗಳನ್ನು ಕೊರೆಯುವ ಈ ಶೈಲದ ಅಂಚಿನಲ್ಲಿ ಸ್ವಯಂ ಪರಮೇಶ್ವರನು ವಾಸವಾಗಿದ್ದಾನೆ. ಇದರ ತಪ್ಪಲಿನಲ್ಲಿ ಶೈಲೋದಸರೋವರ. ಅದರಿಂದ ಶೈಲೋದಕಾನದಿ. ಈ ನದಿಯು ಚಕ್ಷು ಮತ್ತು ಸೀತಾ ಎಂಬಗಂಗೆಯ ಕವಲು ನದಿಗಳ ನಡುವೆ ಹರಿದು ಪಶ್ಚಿಮ ಸಮುದ್ರವನ್ನು ಸೇರುತ್ತದೆ.

ಕೈಲಾಸದ ಉತ್ತರದಲ್ಲಿ ಗೌರಗಿರಿ. ಅದರ ಸಮ್ಮುಖದಲ್ಲಿಯೇ ಸರ್ವೌಷಧ ಎಂಬ ಸುವರ್ಣಶೈಲ. ಶ್ರೇಷ್ಠವಾದ ಗಿಡಮೂಲಿಕೆಗಳೆಲ್ಲವೂ ಈ ಬೆಟ್ಟದಲ್ಲಿವೆ. ಇದರ ತಪ್ಪಲಿನಲ್ಲಿ ಒಂದು ಸರೋವರ, ಈ ಸರೋವರದ ದಂಡೆಯ ಮೇಲೆಯೇ ಗಂಗಾವತರಣಕ್ಕಾಗಿ ಭಗೀರಥ ತಪಸ್ಸುಮಾಡಿದ್ದು. ಗಂಗಾನದಿಯು ಮೊಟ್ಟಮೊದಲು ಹುಟ್ಟಿಬಂದದ್ದು ಈ ಪ್ರದೇಶದಲ್ಲಿಯೇ, ಸ್ವರ್ಗ ಅಂತರಿಕ್ಷಗಳನ್ನು ಪಾವನಗೊಳಿಸಿದ ಗಂಗೆಯು ಇಲ್ಲಿಯೇ ಭೂಮಿಗೆ ಇಳಿದಳು. ಮುಗಿಲು ಮಾಳಿಗೆಯಿಂದ ಶಿವನ ಜಟಾಜೂಟದಲ್ಲಿ ಆ ದೇವತರಂಗಿಣಿಯ ತಡಸಲು ಧೀಂಕಿಟ್ಟು ಧುಮ್ಮಿಕ್ಕಿದಾಗ ಪರಮೇಶ್ವರನು ಆ ನೀರಿನ ಪ್ರವಾಹವನ್ನೆಲ್ಲ ತನ್ನ ಕೇಶಪಾಶಗಳಲ್ಲಿ ಕಟ್ಟಿ ಹಾಕಿದನು. ಇದರಿಂದ ಆ ದೇವನದಿಗೆ ಬಹಳ ಕೋಪ. ಸಿಡಿಮಿಡಿದು ಶಿವನ ಜಟಾಕಲಾಪದಲ್ಲಿಯೇ ಮಿಡುಕಿ ತುಡುಕಿದಳು. ಅದರಿಂದ ಕೆಲ ಹನಿಗಳು ಜಟಾಜೂಟದಿಂದ ಸಿಡಿದು ಸೋರಿ ಕೆಳಗೆ ಬಿದ್ದವು. ಆ ಜಲಬಿಂದುಗಳಿಂದ ಒಂದು ಸರೋವರವೇ ರೂಪುಗೊಂಡಿತು. ಅದೇ ಈ ಬಿಂದುಸರೋವರ.

ಮಹಾದೇವನು ತನ್ನನ್ನು ಒಮ್ಮೆಲೇ ನಿಡಿದಾದ ಜಡೆಯ ಗಡಿಯಲ್ಲಿ ತಡೆದು ನಿಲ್ಲಿಸಿದ್ದನ್ನು ಕಂಡು ಕಡುಕೋಪ ಬಂದಿತು ಆ ಗಂಗೆಗೆ. ''ಮುಗಿಲಿನಿಂದ ಜಿಗಿದು ಬಂದು ನೆಲದ ಎದೆಯನ್ನು ಸೀಳಿ ಶಿವನನ್ನೂ ತನ್ನ ಸೆಳವಿನಲ್ಲಿ ಕೊಚ್ಚಿಕೊಂಡು ಪಾತಾಳದ ಆಳಕ್ಕೆ ಇಳಿದು ಬಿಡುತ್ತೇನೆ'' ಎಂದು ಸಂಕಲ್ಪಿಸಿ ಆವಳು ಅಂತರಿಕ್ಷದಿಂದ ಭೂಮಿಯ ಬೆನ್ನಿಗೆ ಹಾರಿತೂರಿ ಇಳಿದು ಬಂದಿದ್ದಳು. ಅವಳ ಈ ದುರ್ವಿಚಾರವನ್ನು ತಿಳಿದು ಶಿವನಿಗೆ ಕೋಪ ಬಂದು ಅವನು ತನ್ನ ನಿಡಿದಾದ ಜಡೆಯ ಮುಡಿಗಳನ್ನು ಕೆದರಿ ಅದರಲ್ಲಿ ಆ ದೇವಿ ನದಿಯ ನೀರನ್ನೆಲ್ಲ ತಡೆದು ಹಿಡಿದು ಕಟ್ಟಿ ಹಾಕಿಬಿಟ್ಟನು. ಗಂಗೆಯ ಗರ್ವವನ್ನು ಅಡಗಿಸಬೇಕೆಂದು ಶಿವನು ಮಾಡಿದ ಗಂಗಾಬಂಧನದಿಂದ ಭಗೀರಥನು ಗಾಬರಿಯಾದನು. ''ನನ್ನ ಪಿತೃಗಳ ಉದ್ಧಾರಕ್ಕಾಗಿ ಆ ದೇವ

ನದಿಯನ್ನು ಮರಳಿ ಕೊಡಬೇಕು'' ಎಂದು ಅವನು ಶಂಕರನನ್ನು ಕುರಿತು ಉಗ್ರತಪಸ್ಸನ್ನು ಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಮೊದಲೇ ವರಕೊಟ್ಟಿದ್ದು ಶಂಭುವಿಗೆ ನೆನಪಾಗಿ ಬ್ರಹ್ಮದೇವರ ಅಭಿಪ್ರಾಯದಂತೆ ಗಂಗೆಯನ್ನು ತನ್ನ ಜಟಾಜೂಟದಿಂದ ಹೊರಗೆ ಬಿಟ್ಟನು. ಗಂಗಾನದಿಯ ಆ ಏಳು ಪ್ರವಾಹಗಳಲ್ಲಿ ನಲಿನಿ, ಹ್ಲಾದಿನಿ, ಪಾವನಿ ಎಂಬ ಮೂರು ಕವಲು ತೆರೆಗಳು ಪೂರ್ವಾಭಿಮುಖವಾಗಿ ಹೊರಟವು. ಸೀತಾ, ಚಕ್ಷು, ಸಿಂಧು ಎಂಬ ಮೂರು ಶಾಖಾ ಸ್ರೋತಗಳು ಪಶ್ಚಿಮದ ಕಡೆ ಹರಿದು ಹೋದವು. ಏಳನೆಯ ಪ್ರವಾಹವು ಭಗೀರಥ ಭೂಪಾಲನ ಬೆಂಬತ್ತಿ ದಕ್ಷಿಣ ದಿಶೆಯತ್ತ ಧಾವಿಸಿ ದಕ್ಷಿಣ ಸಮುದ್ರವನ್ನು ಸೇರಿತು. ಈ ಗಂಗೆಯ ಸಪ್ತಮ ಪ್ರವಾಹಕ್ಕೆ ಭಾಗೀರಥಿ ಎಂದು ಹೆಸರು. ಅಂತೂ ದೇವಗಂಗೆಯ ಈ ಏಳೂ ಕವಲು ನದಿಗಳೂ ಹುಟ್ಟಿದ್ದು, ಹೊಳೆಯಾಗಿ ಹೊಮ್ಮಿ ಹರಿದದ್ದು ಈ ಬಿಂದು ಸರೋವರದಿಂದಲೇ.

ಗಂಗಾನದಿಯ ಚಕ್ಷು ಎಂಬ ಶಾಖಾ ತರಿಂಗಿಣಿಯು ವೀರಮರು, ಕೌಲಿಕ, ಶೂಲಿಕ, ಪಹ್ಲವ, ಪಾರದ, ಶಕ, ಮುಂತಾದ ದೇಶಗಳಲ್ಲಿ ಹರಿದು ಸಮುದ್ರವನ್ನು ಸೇರುತ್ತದೆ. ಸಿಂಧು ಎಂಬ ಶಾಖಾ ನದಿಯು ದರದ, ಊರ್ಜ, ಗಾಂಧಾರ, ಸೈಂಧವ, ಶುನಾಮುಖ ಮುಂತಾದ ದೇಶಗಳಲ್ಲಿ ಹರಿಯುತ್ತದೆ. ಪೂರ್ವಾಭಿಮುಖವಾಗಿ ಹೊರಟ ಹ್ಲಾದಿನಿ ಎಂಬ ಶಾಖಾ ನದಿಯು ನಿಷಾದ, ಋಷಿಕ, ಕೇಶರ, ಕೌಲಂಜರ, ಕುಶಿಕ, ಸ್ವರ್ಗ, ಭೋಮಕ ದೇಶಗಳಲ್ಲಿ ಪ್ರವಹಿಸಿ ಸಮುದ್ರಕ್ಕೆ ಸೇರುವದು. ನಲಿನೀ ನದಿಯು ಇಂದ್ರದ್ಯುಮ್ನ ಸರೋವರಕ್ಕೆ ಜಲಪೂರಣಮಾಡಿ ಕುಪಥ, ಖರಪಥ, ಶಂಕುಪಥ ಮುಂತಾದ ದೇಶಗಳಲ್ಲಿ ಹರಿದು ಉಜ್ಯಾನಕ ಎಂಬ ಮರುಭೂಮಿಯ ನಡುವಿನ ನೆಲವನ್ನು ತೋಯಿಸಿ ಇಂದ್ರದ್ವೀಪದ ಸಮೀಪದಲ್ಲಿ ಲವಣ ಸಮುದ್ರವನ್ನು ಸಂಗಮಿಸುತ್ತದೆ.

ಪಾವನಿ ಎಂಬ ಗಂಗೆಯ ಮತ್ತೊಂದು ಶಾಖೆಯು ತೋಮರ, ಹಂಸಮಾರ್ಗ, ಸಮೂಹಕ ಮುಂತಾದ ಪೂರ್ವ ದೇಶಗಳಲ್ಲಿ, ಹರಿದು, ಹಲವಾರು ಬೆಟ್ಟಗಳನ್ನು ಕೊರೆದು ಪರ್ವತರಾಜ ಮೇರು ಎಂಬ ಬೆಟ್ಟವನ್ನು ಬಳಸಿ, ವಿದ್ಯಾಧರ ದೇಶದಲ್ಲಿ ಪ್ರವಹಿಸಿ, ಶೈಮಿಮಂಡಲದ ಕೊನೆಯಲ್ಲಿ ಒಂದು ದೊಡ್ಡ ಸರೋವರವನ್ನು ಸೇರುತ್ತದೆ. ಭಗೀರಥನನ್ನು ಬೆನ್ನಟ್ಟಿ ಬಂದುದರಿಂದ ಭಾಗೀರಥಿಯ ಏಳನೆಯ ಪ್ರವಾಹವು ದೇವ-ದಾನವ, ಗಂಧರ್ವ-ಯಕ್ಷ, ಕಿನ್ನರ-ಕಿಂಪುರುಷ ಹಾಗೂ ಮಾನವ ದೇಶಗಳಲೆಲ್ಲ ಪ್ರವಹಿಸಿ ಕಿರಾತ, ಕುರು, ಪಾಂಚಾಲ, ಕೌಶಿಕ, ಮತ್ಸ್ಯ, ಮಾಗಧ, ಅಂಗ, ಬ್ರಹ್ಮೋತ್ತರ, ತಾಮ್ರಲಿಪ್ತ ಮುಂತಾದ ಆರ್ಯರು ವಾಸಿಸುವ ಕಾಡು-ಬೀಡು ನಾಡು-ಗೂಡುಗಳನ್ನೆಲ್ಲ ಪಾವನಗೊಳಿಸಿ, ಮುಂದೆ ವಿಂಧ್ಯಾಚಲಕ್ಕೆ ಹೊಡೆದು ಅದರ ಶೈಲಶ್ರೇಣಿಗಳಿಂದ ತಡೆಯಲ್ಪಟ್ಟು ತಿರುಗಿ ದಕ್ಷಿಣ ಸಮುದ್ರಕ್ಕೆ ಹೋಗಿ ಬೀಳುವದು. ಈ ಭಾಗೀರಥಿಯ ಏಳೂ ನದಿಗಳಿಗೆ ಬೇರೆ ಬೇರೆ ನದಿಗಳೂ ಉಪನದಿಗಳೂ ಹೊಳೆ-ಹಳ್ಳಗಳೂ ಝರಿ-ತೊರೆಗಳೂ ಸಹಸ್ರಾರು ಸಂಖ್ಯೆಯಲ್ಲಿ

ಬಂದುಕೂಡುವವು. ಅವೆಲ್ಲವೂ ಪಾವನ, ಅವುಗಳ ತೀರದಲ್ಲಿ ಇಂದ್ರನು ಚೆನ್ನಾಗಿ ಮಳೆ-ಬೆಳೆ ಬರುವಂತೆ ಮಾಡುತ್ತಾನೆ.

ವಂಶೋಕಸಾರಾ ಎಂಬ ನದಿಯ ತೀರದಲ್ಲಿ ಸುರಭಿ ಎಂಬ ವನ. ಅಲ್ಲಿ ಹಿರಣ್ಯ ಶೃಂಗ ಎಂಬ ಕುಬೇರನ ಶಿಷ್ಯನು ನೆಲೆಸಿದ್ದಾನೆ. ಹೇಮಕೂಟದ ಮೇಲೆ ಸರ್ಪಸರೋವರ. ಅದರಿಂದ ಸರಸ್ವತೀ, ಜ್ಯೋತಿಷ್ಮತೀ ಎಂಬ ನದಿಗಳು ಉಗಮಿಸಿ ಪೂರ್ವ-ಪಶ್ಚಿಮ ದಿಕ್ಕಿನಲ್ಲಿ ಹರಿದು ಸಾಗರದಲ್ಲಿ ಲೀನವಾಗುತ್ತವೆ. ನಿಷಧಗಿರಿಯಲ್ಲಿಯ ವಿಷ್ಣುಪದ ಸರೋವರದಿಂದ ಗಂಧರ್ವಾ, ಅನುಕೂಲಾ ಎಂಬ ಎರಡು ನದಿಗಳು ಹುಟ್ಟಿ ಹರಿದಿವೆ. ಮೇರುಗಿರಿಯ ಬದಿಯಲ್ಲಿ ಇರುವ ಚಂದ್ರಪ್ರಭ ಸರೋವರದಿಂದ ಜಂಬೂನದಿ ಹುಟ್ಟಿ ಹರಿದಿದೆ. ನೀಲಪರ್ವತದಿಂದ ಪುಂಡರೀಕಾ, ಪಯೋದಾನದಿಗಳು. ಹಿಮಾಚಲದ ಆಚೆಯ ಉತ್ತರ ಮಾನಸಸರೋವರದಿಂದ ಜ್ಯೋತ್ಸ್ನಾಸಿ ಅಮೃತಕಾಂತಾ ನದಿಗಳು ಹುಟ್ಟಿ ಹರಿದಿದೆ. ಕುರುವರ್ಷದಲ್ಲಿ ವೈಜಯ ಎಂಬ ಹೆಸರಿನ ಸಮುದ್ರದಷ್ಟು ಅಳಗಲವಾದ ಹನ್ನೆರಡು ಮಡುಗಳು ಇವೆ. ಅವುಗಳಿಂದ ಶಾಂತಿ, ದಿವ್ಯಾ ಎಂಬ ನದಿಗಳು ಹುಟ್ಟುತ್ತವೆ.

ಕಿಂಪುರುಷ ಮೊದಲಾದ ಎಂಟು ವರ್ಷಗಳಲ್ಲಿ ಇಂದ್ರನು ಮುಗಿಲಿನಿಂದ ಮಳೆಗರೆಯುವದಿಲ್ಲ. ನೀರು ತಾನಾಗಿಯೇ ನೆಲದೆದೆಯ ಚಿಲುಮೆಯಿಂದ ಚಿಮ್ಮಿ ಬಂದು ದೊಡ್ಡದೊಡ್ಡನದಿಗಳಾಗಿ ಹರಿಯುತ್ತವೆ. ಹಿಂದೆ ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ತನ್ನ ವಜ್ರಾಯುಧದಿಂದ ಕಡಿಯತೊಡಗಿದಾಗ ಗಾಬರಿಗೊಂಡು ಬಲಾಹಕ, ವೃಷಭ, ಚಕ್ರ, ಮೈನಾಕ ಎಂಬ ನಾಲ್ಕು ಪರ್ವತಗಳು ನಾಲ್ಕೂ ದಿಕ್ಕುಗಳಲ್ಲಿ ಸಮುದ್ರದಲ್ಲಿ ಮುಳುಗಿವೆ. ಚಂದ್ರಕಾಂತ, ದ್ರೋಣ, ಮಹಾಪರ್ವತ ಎಂಬ ಗುರುತರ ಗಿರಿಗಳು ಉತ್ತರ ದಿಕ್ಕಿನಲ್ಲಿ ಹಬ್ಬಿ ಸಮುದ್ರದಲ್ಲಿ ಮುಳುಗಿವೆ. ಚಕ್ರ, ಬಧಿರಕ, ನಾರದ ಪರ್ವತಗಳು ಪಶ್ಚಿಮ ದಿಕ್ಕಿನಲ್ಲಿ ಪಸರಿಸಿ ಸಾಗರಗರ್ಭವನ್ನು ಸೇರಿರುವವು. ಜೀಮೂತ, ದ್ರಾವಣ, ಮೈನಾಕ ಹಾಗೂ ಚಂದ್ರಗಿರಿಗಳು, ದಕ್ಷಿಣಸಮುದ್ರದ ಕಡೆಗೆ ವಿಸ್ತಾರವಾಗಿ ಹಬ್ಬಿರುವವು. ಚಕ್ರ ಮತ್ತು ಮೈನಾಕ ಪರ್ವತಗಳ ಗರ್ಭದಲ್ಲಿ ಇದ್ದು ಸಂವರ್ತಕ ಎಂಬ ಅಗ್ನಿಯು ಸಮುದ್ರದ ನೀರನ್ನು ಕುಡಿಯುತ್ತದೆ. ಇದಕ್ಕೆ ಔರ್ವಾಗ್ನಿ ಬಡಬಾಗ್ನಿ ಎಂದೂ ಕರೆಯುತ್ತಾರೆ. ಈ ಪರ್ವತಗಳಿಂದ ವಿಂಗಡಿಸಲ್ಪಟ್ಟ ಭೂಖಂಡಗಳು ಉತ್ತರಕ್ಕೆ ಹೋದಹೋದಂತೆ ಆಯುಷ್ಯ, ಆರೋಗ್ಯ, ಧರ್ಮ, ಅರ್ಥ, ಕಾಮ ಮುಂತಾದ ಗುಣಗಳಲ್ಲಿ ಒಂದಕ್ಕಿಂತ ಒಂದು ಮಿಗಿಲೆನಿಸುವವು. ನಾನಾಜಾತಿಯ ಪ್ರಾಣಿಗಳೂ ಜೀವಜಂತುಗಳೂ ಇವುಗಳಲ್ಲಿ ವಾಸಿಸುವವು. ಈ ಕುಲಪರ್ವತಗಳು ಭೂಮಂಡಲವನ್ನೂ ವಿಶ್ವವನ್ನೂ ಧರಿಸುತ್ತವೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು*

—೦—

# ಶಾಕದ್ವೀಪದ ಜನ, ಜಾತಿ ಮತ್ತು ನದೀಪರ್ವತಗಳು

**ಅಧ್ಯಾಯ - ೧೨೩**

**ಸೂತ ಉವಾಚ**

**"ಶಾಕದ್ವೀಪಸ್ಯ ವಕ್ಷ್ಯಾಮಿ ಯಥಾವದಿಹನಿಶ್ಚಯಂ**
**ಕಥ್ಯಮಾನಂ ನಿಬೋಧಧ್ವಂ ಶಾಕದ್ವೀಪಂ ದ್ವಿಜೋತ್ತಮಾಃ ॥**

**ಸೂತ :-** ಬ್ರಾಹ್ಮಣೋತ್ತಮರೇ, ಶಾಕದ್ವೀಪದ ಯಥಾರ್ಥ ಸ್ವರೂಪವನ್ನು ಹೇಳುತ್ತೇನೆ ಕೇಳಿರಿ. ಶಾಕದ್ವೀಪದ ವ್ಯಾಸವು ಜಂಬೂದ್ವೀಪದ ಎರಡುಪಟ್ಟು. ಸುತ್ತಳತೆ ಮೂರುಪಟ್ಟು. ಲವಣ ಸಮುದ್ರವು ಇದನ್ನು ಸಂಪೂರ್ಣವಾಗಿ ಸುತ್ತು ಹಾಕಿದೆ. ಇಲ್ಲಿಯ ಪುಣ್ಯ ಪ್ರದೇಶಗಳಲ್ಲಿ ಜನರು ಬಹುಕಾಲದವರೆಗೆ ಸುಖದಿಂದ ಬದುಕಿ ಬಾಳುವರು. ಕ್ಷಾಮ ಡಾಮರುಗಳು ಅವರಿಗೆ ಗೊತ್ತೇ ಇಲ್ಲ. ಈ ದ್ವೀಪದಲ್ಲಿ ಮೇರುಗಿರಿ ಅಥವಾ ಉದಯಗಿರಿ, ಚಂದ್ರಗಿರಿ, ದುರ್ಗಪರ್ವತ, ಶ್ಯಾಮಪರ್ವತ, ಅಸ್ತಗಿರಿ, ಆಂಬಿಕೇಯಪರ್ವತ, ರಮ್ಯಕಗಿರಿ ಎಂಬ ಏಳುಕುಲಪರ್ವತಗಳು ಇವೆ. ಈ ಸೀಮಾ ಶೈಲಗಳಿಂದ ಉದಯವರ್ಷಾ ಅಥವಾ ಜಲಧಾರ, ಸುಕುಮಾರ ಅಥವಾ ಶೈಶಿರವರ್ಷ, ಅನೀಚಕ್ರ ಅಥವಾ ಆನಂದಕ, ಕುಸುಮೋತ್ಕರ ಅಥವಾ ಅಸಿತವರ್ಷ, ಮೈನಾಕ ಅಥವಾ ಕ್ಷೇಮಕವರ್ಷ, ಮಹಾದ್ರುಮ ಅಥವಾ ಧ್ರುವವರ್ಷ ಎಂದು ಜೋಡು ಹೆಸರಿನ ಏಳು ಭೂಖಂಡಗಳು ಏರ್ಪಟ್ಟಿವೆ. ಈ ದ್ವೀಪದ ನಟ್ಟ ನಡುವೆ ಅತಿದೊಡ್ಡದಾದ ಒಂದು ಶಾಕವೃಕ್ಷವಿದೆ. ಅದರಿಂದಲೇ ಇದಕ್ಕೆ ಶಾಕದ್ವೀಪ ಎಂಬ ಹೆಸರು.

ಶಾಕದ್ವೀಪದಲ್ಲಿರುವ ಜನರಿಗೆ ಯಾವಾಗಲೂ ದೇವತೆಗಳ ಸಾಕ್ಷಾತ್ಕಾರ. ಸಿದ್ಧಚಾರಣ ಗಂಧರ್ವರು ಅವರ ಒಡನಾಡಿಗಳು. ಅಲ್ಲಿರುವ ನಾನಾ ದೇಶಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಜಾತಿಯ ಜನರು ಆನಂದದಿಂದ ವಾಸಿಸುತ್ತಾರೆ. ಅಲ್ಲಿ ಹರಿಯುವ ಸಮುದ್ರಗಾಮಿನಿಯಾದ ಗಂಗೆಯ ಏಳು ಶಾಖಾ ನದಿಗಳಿಗೆ ಎರಡೆರಡು ಹೆಸರು. ಸುಕುಮಾರಿ, ತಪಸಿದ್ಧಿ, ನಂದಾ, ಶಿಬಿಕಾ, ಇಕ್ಷು, ವೇಣುಕಾ, ಸುಕೃತಾ, ಸುಕುಮಾರಿ, ಎಂದು ಹೆಸರು ಇವುಗಳಿಗೆ. ಇದೇ ನದಿಗಳಿಗೆ ಮುನಿತಪ್ತಾ, ಪಾವನೀ, ದ್ವಿವಿಧಾ, ಕುಹು, ಅಮೃತಾ, ಗಭಸ್ತಿ, ತಪಸ್ಸಿದ್ಧಾ ಎಂದೂ ಹೆಸರುಗಳು ಉಂಟು. ಶಾಕದ್ವೀಪದ ಏಳು ವರ್ಷಗಳಲ್ಲಿ ಈ ಏಳು ಹಿರಿಯಹೊಳೆಗಳು ಹರಿದುನಾಡಿನ ಜನರೆಲ್ಲರ ಜೀವನಾಡಿಗಳಾಗಿವೆ. ಇವಲ್ಲದೇ ಅಪಾರ ಜಲರಾಶಿಯಿಂದ ತುಂಬಿ ತುಳುಕುವ ಎಷ್ಟೋ ಹೊಳೆ, ಹಳ್ಳ, ಕೆರೆ, ಸರ, ಝರಿ, ತೊರೆಗಳು ಈ ನದಿಗಳಿಗೆ ಕೂಡಿ ನೀರು ತುಂಬಿ ಪ್ರವಹಿಸುವವು.

ಶಾಂತಭಯ, ಪ್ರಮೋದ, ಶಿವ, ಆನಂದ, ಕ್ಷೇಮಕ, ಸುಖ, ನವ ಎಂಬವು ಅಲ್ಲಿಯ ಏಳು ದೇಶಗಳು. ವರ್ಣಾಶ್ರಮ ಧರ್ಮಕ್ಕೆ ಅಲ್ಲಿ ಪ್ರಾಧಾನ್ಯ. ಜನರೆಲ್ಲರೂ ಧರ್ಮಿಷ್ಠರು. ಬಲಿಷ್ಠರು. ಅವರಿಗೆ ರೋಗವಿಲ್ಲ. ಬರಿ ಭೋಗ. ಮುಪ್ಪು ಇಲ್ಲ. ಬರೀ ಯೌವನ. ಸಾವು ಇಲ್ಲ. ಚಿರಂಜೀವಿತ್ವ ಕಲಿಪ್ರವೇಶವಿಲ್ಲ. ಅಲ್ಲಿ ಯಾವಾಗಲೂ ತ್ರೇತಾಯುಗದ ಧರ್ಮವೇ. ಅಲ್ಲಿ ಎಂದೂ ಧರ್ಮಲೋಪವಾಗುವದಿಲ್ಲ. ಜನರಲ್ಲಿ ಕೋಪ, ಕಾಲುಷ್ಯ, ಕಪಟ, ಕೃಪಣತನ, ಹೊಟ್ಟೆಕಿಚ್ಚು, ದುರಾಶೆ, ದುಷ್ಕಾಳ, ದಂಡ, ಶಾಪ ಮುಂತಾದ ಯಾವ ದುರ್ಗುಣಗಳಿಗೂ ಅಲ್ಲಿ ಅವಕಾಶವಿಲ್ಲ. ಈ ಶಾಕದ್ವೀಪದ ಮುಂದೆ ಮಂಡಲಾಕಾರದ ಬೃಹತ್ತರವಾದ ಕುಶದ್ವೀಪ. ಅಲ್ಲಿ ಸಾಕಷ್ಟು ಜಲಸಮೃದ್ಧಿ. ಅಸಂಖ್ಯ ರತ್ನದ ಖಣಿ, ಮುತ್ತಿನ ರಾಶಿ, ಹೂಹಣ್ಣುಗಳ ಸುಗ್ಗಿ, ಮಳೆಬೆಳೆಗಳ ಸಂಪತ್ತಿ. ಇದು ಕುಶದ್ವೀಪದ ವೈಶಿಷ್ಟ್ಯವಾಗಿದೆ.

## ಶಾಲ್ಮಲದ್ವೀಪ, ಕುಶದ್ವೀಪ, ಕ್ರಾಂಚದ್ವೀಪಗಳ ಸಾಮಾನ್ಯ ಸ್ಥಿತಿ, ಸ್ವರೂಪ ನಿರೂಪಣೆ

ಹಾಲ್ಗಡಲು ಈ ಹುಲ್ಲಿನ ನಡುಗಡ್ಡೆಯನ್ನು ಸುತ್ತುಹಾಕಿದೆ. ಶಾಕದ್ವೀಪದ ಎರಡು ಪಟ್ಟು ಇದೆ ಇದರ ವಿಸ್ತಾರ. ಶಾಕದ್ವೀಪದಲ್ಲಿ ಇರುವಂತೆ ಇಲ್ಲಿಯೂ ಜೋಡು ಹೆಸರಿನ ಏಳು ಕುಲಪರ್ವತಗಳು. ಕುಮುದ ಅಥವಾ ವಿದ್ಯುಮೇನೇಶಯ ಎಂಬ ಬೃಹದಾಕಾರದ ಬೆಟ್ಟವು ಭಾಸ್ಕರನಂತೆ ಬೆಳಗುವದು. ಉನ್ನತ ಅಥವಾ ಹೇಮಪರ್ವತ ಎಂಬ ಎರಡನೆಯ ಗುಡ್ಡದಲ್ಲಿ ವಿಪುಲವಾದ ಖನಿಜ ಹಾಗೂ ಹರಿದಳ ಎಂಬ ಧಾತುವಿಶೇಷಗಳು ತುಂಬಿವೆ. ಬಲಾಹಕ, ದ್ಯುತಿಮಂತ ಬೆಟ್ಟದಲ್ಲಿ ಶ್ರೇಷ್ಠವಾದ ರತ್ನಗಳು ತುಂಬಿವೆ. ಪುಷ್ಪವಂತ ಅಥವಾ ದ್ರೋಣಗಿರಿಯಲ್ಲಿ ವಿಶಲ್ಯ ಕರಣೀ, ಮೃತಸಂಜೀವಿನಿ ಎಂಬ ಗಾಯಮಾಯಿಸುವ ಮತ್ತು ಸತ್ತವರನ್ನು ಬದುಕಿಸುವ ವನಸ್ಪತಿಗಳು ಇರುತ್ತವೆ. ಕಂಕ ಅಥವಾ ಕುಶೇಶಯ ಶೈಲದಲ್ಲಿ ರತ್ನಗಳೇ ತುಂಬಿವೆ. ಮಹಿಷ ಅಥವಾ ಹರಿಪರ್ವತದಲ್ಲಿ ಮಹಿಷ ಎಂಬ ಅಗ್ನಿಯು ದೇದೀಪ್ಯಮಾನವಾಗಿದೆ. ಮಂದರ ಅಥವಾ ಕಕುದ್ಮಂತ ಎಂಬ ಏಳನೆಯ ಪರ್ವತದಲ್ಲಿ ಥಳಥಳಿಸುವ ಅಸಂಖ್ಯರತ್ನಗಳನ್ನು ಬ್ರಹ್ಮದೇವರು ತಂದಿರಿಸಿದ್ದು ದೇವೇಂದ್ರನು ಅವುಗಳನ್ನು ಕಾಯುತ್ತಾನೆ. ಈ ಏಳು ಕುಲಪರ್ವತಗಳಿಂದ ವಿಂಗಡಿಸಲ್ಪಟ್ಟ ದೇಶಗಳು ಏಳು ಇರುತ್ತವೆ. ಕುಮುದ ಪರ್ವತದಿಂದ ಉನ್ನತ ಪರ್ವತದವರೆಗೆ ಹಬ್ಬಿದ ದೇಶಕ್ಕೆ ಶ್ವೇತವರ್ಷ, ಉನ್ನತವರ್ಷ ಎಂದು ಕರೆಯುವರು. ಎರಡನೆಯದೇ ಲೋಹಿತವರ್ಷ ಅಥವಾ ವೇಣುಮಂಡಲ. ಬಲಾಹಕಗಿರಿ ಅಥವಾ ಜಿಮೂತವರ್ಷವು ಮೂರನೆಯದು. ಹರಿಕ ಅಥವಾ ಲವಣವರ್ಷವು ನಾಲ್ಕನೆಯದು. ಐದನೆಯದು ಕಕುತ ಅಥವಾ ಧೃತಿಮಂತವರ್ಷ. ಪ್ರಭಾಕರ ಅಥವಾ ಮಹಿಷವರ್ಷವೇ ಆರನೆಯದು. ಕಕುದ್ಮಿ ಅಥವಾ ಕಪಿಲ ವರ್ಷವು ಏಳನೆಯದು.

ಈ ಎಲ್ಲ ಭೂಖಂಡಗಳಲ್ಲಿಯೂ ಜೋಡು ಹೆಸರಿನ ಏಳೇಳು ನದಿಗಳು ಇರುತ್ತವೆ. ಧೂತಪಾಪಾ ಸೀತಾನಿಶಾ, ಪವಿತ್ರಾ ವಿತೃಷ್ಣಾ, ಹ್ಲಾದಿನಿ ಚಂದ್ರಪ್ರಭಾ,

ವಿದ್ಯುತ್ ಶುಕ್ಲಾ, ಪುಂಡ್ರಾ, ವಿಭಾವರಿ ಧೃತಿಮಹತಿ ಈ ಏಳು ಮಹಾನದಿಗಳಲ್ಲದೇ ಇನ್ನೂ ಸಾವಿರಾರು ನದನದಿಗಳು ಅಲ್ಲಿ ಹೊಮ್ಮಿ ಹರಿಯುತ್ತವೆ. ತುಪ್ಪದ ಸಮುದ್ರವು ಚಂದ್ರಾಕಾರವಾಗಿ ಎಲ್ಲ ಕಡೆಯೂ ಈ ಕುಶದ್ವೀಪವನ್ನು ಬಳಸಿಕೊಂಡಿದೆ. ಈ ಘೃತಸಮುದ್ರವು ಹಾಲುಗಡಲಿನ ಇಮ್ಮಡಿಅಳಗಲ ಉದ್ದಳತೆಯುಳ್ಳದ್ದು. ಇದರ ಮುಂದಿನದೇ ಕ್ರೌಂಚದ್ವೀಪ. ವೃತ್ತಾಕಾರವಾಗಿ ದುಂಡಗಿರುವ ಈ ನಡುಗಡ್ಡೆಯು ತುಪ್ಪದ ಸಾಗರವನ್ನು ಸುತ್ತು ಗಟ್ಟಿದೆ ಬಂಡಿಯಗಾಲಿಯಂತೆ. ಈ ದ್ವೀಪದಲ್ಲಿಯೂ ದೇವನಗಿರಿ ಗೋವಿಂದಗಿರಿ ಕ್ರೌಂಚ ಪಾವನಕ, ಅಂಧಕಾರಕ, ದೇವಾವೃತ್ತ, ಪುಂಡರೀಕ ಎಂಬ ಏಳು ಕುಲಪರ್ವತಗಳು. ಇವು ಉದ್ದಳತೆಯಲ್ಲಿ ಉತ್ತರೋತ್ತರ ಒಂದಕ್ಕಿಂತ ಒಂದು ಇಮ್ಮಡಿಯಾಗುತ್ತ ಹೋಗುವವು. ಕುಶಲ, ಮನೋನುಗ, ಉಷ್ಣ, ಪಾವನಕ, ಅಂಧಕಾರಕ, ಮುನಿದೇಶ, ದುಂದುಭಿಸ್ವನ ಎಂಬ ಏಳುವರ್ಷಗಳು ಆ ಏಳುಕುಲಪರ್ವತಗಳಿಂದ ನಿರ್ಮಿಸಲ್ಪಟ್ಟಿವೆ. ಈ ಏಳೂ ವರ್ಷಗಳಲ್ಲಿ ಗೌರಿ, ಕುಮುದ್ವತಿ, ಸಂಧ್ಯಾ, ರಾತ್ರಿ ಮನೋಜವಾ, ಖ್ಯಾತಿ, ಪುಂಡರೀಕಾ ಎಂದು ಏಳು ಗಂಗಾನದಿಯ ಕವಲು ಕಲ್ಲೋಲಿನಿಗಳು ಪ್ರವಹಿಸಿ ಆ ಎಲ್ಲ ಪ್ರಾಂತ ಪರಿಸರ ಪ್ರದೇಶವನ್ನು ತಮ್ಮ ಪುಣ್ಯೋದಕದಿಂದ ಪಾವನಗೈಯುತ್ತವೆ. ಇವುಗಳೊಡನೆ ಅಲ್ಲಲ್ಲಿ ಸಂಗಮಿಸಿ ತರಂಗಿಸುವ ನದಿಗಳು ನೂರಾರು. ಸಾವಿರಾರು. ಇಲ್ಲಿ ಸಿದ್ಧಚಾರಣರು ವಾಸಿಸುವರು. ಇವರೆಲ್ಲರೂ ಶ್ವೇತವರ್ಣದವರಿದ್ದು ಶುಚಿರ್ಭೂತರೂ ಸದಾಸುಖಿಗಳೂ ಆಗಿರುವರು. ಇವರಿಗೆ ಯಾವದೇ ವಿಧವಾದ ಸಾವು ನೋವು ಕಷ್ಟ ನಷ್ಟಗಳು ಇರುವುದಿಲ್ಲ. ಚಿಂತೆ ಮುಪ್ಪುಗಳು ಬರುವುದಿಲ್ಲ. ಇದು ಕ್ರೌಂಚದ್ವೀಪದ ಇಮ್ಮಡಿಯಾಗಿದೆ ಬಿತ್ತರದಲ್ಲಿ ಇದರ ಮುಂದಿನದೇ ಶಾಲ್ಮಲೀದ್ವೀಪ. ಮೊಸರಿನ ಸಮುದ್ರವನ್ನು ಇದು ಸುತ್ತಲೂ ಬಳಸಿಕೊಂಡು ನಿಂತಿದೆ. ಈ ಪುಣ್ಯಭೂಮಿಯಲ್ಲಿ ನೆಲಸಿದ ನರರಿಗೆ ಕ್ಷಾಮ ಎಂಬುದೇ ಇಲ್ಲ. ಕ್ಷೇಮ ಮಾತ್ರ ನಿರಂತರ ಉಂಟು. ಕ್ಷಮೆ ಅವರ ಮುಖ್ಯ ಗುಣ. ತೇಜೋರೂಪವೇ ಅವರು. ಚಿರಂಜೀವಿಗಳು ಅಲ್ಲಿ ಇದ್ದವರೆಲ್ಲರೂ.

ಆ ಶಾಲ್ಮಲೀದ್ವೀಪದಲ್ಲಿ ಸುಮನಸ, ಪೀತಾಚಲ, ಸೌವರ್ಣ, ಸರ್ವಮುಖ, ರೋಹಿತ, ಮೊದಲಾದ ಕುಲಪರ್ವತಗಳೂ ಸುಖೋದಕ, ರೋಹಿಣ, ಮುಂತಾದ ದೇಶಗಳೂ ಇರುತ್ತವೆ. ಇಲ್ಲಿ ಬಂಗಾರ, ಮತ್ತು ರತ್ನ ಬಗೆಬಗೆಯ ವಜ್ರ ವೈಢೂರ್ಯ ಮುಂತಾದ ಬೆಲೆಬಾಳುವ ಅನರ್ಘ್ಯ ವಸ್ತುಗಳು ಹೇರಳವಾಗಿವೆ. ಇಲ್ಲಿಯ ಬಾನಿನಲ್ಲಿ ಮೋಡವಿಲ್ಲ. ಮಳೆಯಿಲ್ಲ. ಬಿಸಿಲಿನ ಬೇಗೆ ಇಲ್ಲ. ಚಳಿ ಇಲ್ಲ. ರೋಗವಿಲ್ಲ. ಈರ್ಷ್ಯೆ, ಅಸೂಯೆ, ಭಯ, ಅಪಾಯ, ಯಾವ ದೋಷಗಳೂ ಇಲ್ಲಿ ಇಲ್ಲ. ವರ್ಣಾಶ್ರಮದ ವಿಧಿ, ನಿಷೇಧ, ನಿಯಮನಿಬಂಧನೆಗಳೂ ಇಲ್ಲಿಯ ಜನರಿಗೆ ಇಲ್ಲ. ನೆಲದೆದೆಯಿಂದಲೇ ನೀರು ಚಿಮ್ಮಿ ಬರುತ್ತದೆ. ಗಿರಿ-ಝುರಿಗಳಲ್ಲಿ ಹೊಮ್ಮಿ ಹರಿಯುತ್ತದೆ. ಜನರಿಗೆ ದಿನದಿನವೂ ದಿವ್ಯಭೋಜನ. ಬಯಸಿದ ಭಕ್ಷ್ಯಭೋಜ್ಯ. ಪ್ರಯತ್ನವಿಲ್ಲದೆ ಇಷ್ಟಾರ್ಥ ಸಿದ್ಧಿ. ಪ್ರಯಾಸವಿಲ್ಲದೆ ಸರ್ವಸುಖಸಮೃದ್ಧಿ. ಹೀಗೆ

ಬಯಸಿದ ಭೋಗ ಪಡೆದು ಆಯುಷ್ಯ, ಆರೋಗ್ಯ ಐಶ್ವರ್ಯ ಧರ್ಮ, ನೀತಿ ಸಂಪನ್ನರಾಗಿ ಮೂವತ್ತುಸಾವಿರವರ್ಷಕಾಲ ಇಲ್ಲಿಯ ಜನರು ಬಾಳುವರು. ಕುಶ, ಕ್ರೌಂಚ, ಶಾಲ್ಮಲ ಈ ಮೂರು ದ್ವೀಪಗಳಲ್ಲಿ ಎಲ್ಲೆಡೆಗೆ ಸಾಮಾನ್ಯವಾಗಿ ಇದೇ ಲಕ್ಷಣವು ಕಂಡು ಬರುವದು. ಹೀಗೆ ಜಂಬೂದ್ವೀಪ, ಶಾಕದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಶಾಲ್ಮಲದ್ವೀಪ ಎಂಬ ಐದು ದ್ವೀಪಗಳ ವೃತ್ತಾಂತವನ್ನು ನಾನು ಇಲ್ಲಿಯವರೆಗೆ ವಿವರಿಸಿದೆನು. ತುಪ್ಪದಸಮುದ್ರದ ಇಮ್ಮಡಿಯಷ್ಟಿರುವ ಮಧ್ಯದ ಸಾಗರವು ಶಾಲ್ಮಲೀ ದ್ವೀಪವನ್ನು ಚಕ್ರಾಕಾರವಾಗಿ ಸುತ್ತು ಹಾಕಿರುವದು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತಮೂರನೆಯ ಅಧ್ಯಾಯ ಮುಗಿದುದು*



## ಗೋಮೇದಖಂಡ, ಧಾತಕೀಖಂಡ, ಕುಮುದವರ್ಷ ಮತ್ತು ಪುಷ್ಕರದ್ವೀಪಗಳ ವರ್ಣನೆ

**ಅಧ್ಯಾಯ - ೧೨೪**

**ಸೂತ ಉವಾಚ**

**ಗೋಮೇದಕಂ ಪ್ರವಕ್ಷ್ಯಾಮಿ ಷಷ್ಠಂದ್ವೀಪಂ ತಪೋಧನಾಃ ।**
**ಸುರೋದಕ ಸಮುದ್ರಶ್ಚ ಗೋಮೇದೇನಸಮಾವೃತಃ ॥**

**ಸೂತ :-** ತಪೋಧನರೇ, ಆರನೆಯ ನಡುಗಡ್ಡೆಯಾದ ಗೋಮೇದಕ ದ್ವೀಪದ ಬಗೆಗೆ ನಿರೂಪಿಸುವೆ. ಶೆರೆಯ ಶರಧಿಯ ಸುತ್ತಲೂ ಹಮ್ಮಿದೆ ಈ ಗೋಮೇದಕದ್ವೀಪ. ಇದರಲ್ಲಿ ಸುಮನಸಕುಮುದ ಎಂಬ ಸರ್ವವಿಧ ಗಿಡಮೂಲಿಕೆಗಳಿಂದ ತುಂಬಿದ ಎರಡೇ ವರ್ಷ ಪರ್ವತಗಳು ಇರುತ್ತವೆ. ಈ ಗೋಮೇದಕ ದ್ವೀಪವನ್ನು ಸುರಾಸಾಗರದ ಇಮ್ಮಡಿ ಅಳತೆಯುಳ್ಳ ಕಬ್ಬಿನ ಹಾಲಿನ ಕಡಲು ಸುತ್ತುಗಟ್ಟಿದೆ. ಹವ್ಯನ ಮಕ್ಕಳಾದ ಧಾತಕಿ ಕುಮುದ ಎಂಬ ಮಹಾರಾಜರ ಹೆಸರಿನಿಂದಲೇ ಆ ದೇಶ ಪ್ರಸಿದ್ಧವಾಗಿವೆ. ಸುಮನಸಪರ್ವತದಿಂದ ಏರ್ಪಟ್ಟ ಸಾಮವರ್ಷಕ್ಕೆ ಧಾತಕೀಖಂಡ ಎಂದೂ ಕರೆಯುತ್ತಾರೆ. ಕುಮುದನಿಗೆ ಸೇರಿದ ಎರಡನೇಯ ಕುಮುದ ವರ್ಷಕ್ಕೆ ಗೋಮೇದಖಂಡ ಎನ್ನುತ್ತಾರೆ. ಇದರ ಮುಂದೆ ಏಳನೇಯ ರಮಣೀಯವಾದ ಪುಷ್ಕರದ್ವೀಪವಿದೆ. ಕಬ್ಬಿನರಸದ ಸಾಗರದ ಗುಂಟ ಈ ದ್ವೀಪವು ಹಮ್ಮಿದೆ.

ಗೋಮೇದದ್ವೀಪದ ಎರಡುಪಟ್ಟು ಇದರ ಹರವು. ಈ ದ್ವೀಪದ ಪೂರ್ವಾರ್ಧದಲ್ಲಿ ಇಪ್ಪತ್ತೇಳು ಸಾವಿರಯೋಜನವಿಸ್ತಾರ, ಇಪ್ಪತ್ತನಾಲ್ಕು ಸಾವಿರಯೋಜನ ಎತ್ತರವುಳ್ಳ ಚಿತ್ರಸಾನುಪರ್ವತವು ದಿವ್ಯರತ್ನಮಯವಾದ ಶಿಖರಗಳಿಂದ ಪ್ರಕಾಶಿಸುತ್ತದೆ. ಈ ದ್ವೀಪದ ಪಶ್ಚಿಮಾರ್ಧದಲ್ಲಿ ಅರ್ಧ ಲಕ್ಷಕ್ಕೂ ಮಿಕ್ಕಿದ ಯೋಜನ ಎತ್ತರವುಳ್ಳ ಮಾನಸಗಿರಿಯು ವರ್ತುಲಾಕಾರವಾಗಿ ಹಬ್ಬಿದೆ. ಮಹಾವೀತನೆಂಬ ಈ ಪರ್ವತದ ಪುತ್ರನು ಈ ದ್ವೀಪದ ಪಶ್ಚಿಮಾರ್ಧವನ್ನು

ರಕ್ಷಿಸುವನು. ಪುಷ್ಕರದ್ವೀಪವು ಗೋಮೇದದ್ವೀಪದ ಇಮ್ಮಡಿ ಅಳತೆಯುಳ್ಳ ಶುದ್ಧೋದಕ ಸಮುದ್ರದಿಂದ ಎಲ್ಲ ಕಡೆಯಲ್ಲಿಯೂ ಸುತ್ತುವರಿಯಲ್ಪಟ್ಟಿದೆ. ಇಲ್ಲಿ ಜೀವಿಸುವ ಜನರ ಆಯುಷ್ಯ ಮೂವತ್ತುಸಾವಿರವರ್ಷಕಾಲ. ಇವರ ಸ್ವಭಾವ ಸ್ವರೂಪಗಳು ಹಿಂದಿನ ದ್ವೀಪದಲ್ಲಿ ಹೇಳಿದಂತೆ. ಈ ರೀತಿಯಾಗಿ ಏಳು ದ್ವೀಪಗಳನ್ನು ಏಳು ಸಮುದ್ರವು ಸುತ್ತುವರಿದಿದೆ. ಒಂದು ದ್ವೀಪದ ಮುಂದಿನ ಸಮುದ್ರವು ಆ ದ್ವೀಪದಷ್ಟೇ ಇರುವದು. ಈ ರೀತಿಯಾಗಿ ದ್ವೀಪ ಮತ್ತು ಸಮುದ್ರಗಳ ಸನ್ನಿವೇಶವನ್ನೂ, ಅವುಗಳಲ್ಲಿರುವ ಅಂತರವನ್ನೂ, ಪ್ರಕಾರ ಪ್ರಭೇದಗಳನ್ನೂ, ಸರಿಯಾಗಿ ತಿಳಿದುಕೊಳ್ಳಬೇಕು. ಒಂದು ವಿಶಿಷ್ಟವಾದ ಸ್ಥಳಗಳಲ್ಲಿ ಮೇರೆ ಮೀರದೆ ಭದ್ರವಾಗಿ ಮುದ್ರಿತವಾದಂತೆ ನಿರ್ದಿಷ್ಟ ಎಲ್ಲೆ ಕಟ್ಟಿನಲ್ಲಿಯೇ ನಿರಂತರ ನಿಂತುಕೊಂಡದ್ದರಿಂದ ಸಾಗರದ ಅಪಾರಜಲರಾಶಿಗೆ ಸಮುದ್ರ ಎಂದು ಹೆಸರು ಬಂದಿದೆ. **ಋಷಿ** ಎಂದರೆ ಆನಂದವುಳ್ಳವ ಎಂದು ಅರ್ಥವಿದೆ. ಈ ಧಾತುವಿನ ಮೇಲೆ ಆನಂದಕೊಡುವ ಪ್ರದೇಶ ಎಂಬ ಅರ್ಥದಲ್ಲಿ ವರ್ಷ ಎಂಬ ಹೆಸರು ದೇಶಗಳಿಗೆ ಬಂದಿದೆ. ಉದಾಹರಣೆ ಭಾರತ ವರ್ಷ, ಕುರುವರ್ಷ, ಕಿಂಪುರುಷವರ್ಷ ಎಂದು ಆ ದೇಶಗಳಿಗೆ ಹೆಸರು ಪ್ರಾಪ್ತವಾಗಿದೆ.

ಶುಕ್ಲಪಕ್ಷದಲ್ಲಿ ಚಂದ್ರೋದಯವಾದಾಗ ಸಮುದ್ರವು ಉಕ್ಕೇರುವದು. ಕೃಷ್ಣಪಕ್ಷದಲ್ಲಿ ಚಂದ್ರನ ಕ್ಷಯಕ್ಕೆ ಅನುಸಾರವಾಗಿ ಸಾಗರದ ಪ್ರವಾಹವು ತಗ್ಗುವದು. ಈ ಎರಡು ಪಕ್ಷಗಳಲ್ಲಿ ಚಂದ್ರನ ಉದಯಾಸ್ತಗಳನ್ನು ಅನುಸರಿಸಿ ಸಮುದ್ರದ ನೀರಿನಲ್ಲಿ ಏರಿಳಿತವಿದ್ದರೂ ಅದು ಕ್ಲಿಪ್ತವಾಗಿ ಇದೆ. ಚಂದ್ರನ ವೃದ್ಧಿಕ್ಷಯಾನುಸಾರಿಯಾದ ಸಾಗರದ ಉಬ್ಬು ತಗ್ಗುಗಳು ಒಂದು ವಿಶಿಷ್ಟ ಮಿತಿಯಲ್ಲಿ ಮಾತ್ರ ನಡೆಯುತ್ತದೆ. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಸಮುದ್ರದ ನೀರು ಏರುವ ಮತ್ತು ಇಳಿಯುವ ಪ್ರಮಾಣವೆಂದರೆ ಒಂದು ಸಾವಿರದ ಐದುನೂರು ಅಂಗುಲ ಮಾತ್ರ. ಸಮುದ್ರದ ವ್ಯಾಪಾರಗಳೆಲ್ಲ ಅಪಾರ, ಅದ್ಭುತವಾಗಿದ್ದರೂ ಒಂದು ವಿಶಿಷ್ಟ ಪ್ರಮಾಣದಲ್ಲಿ ಮರ್ಯಾದಿತ ಮತ್ತು ಮುದ್ರಿತ. ಈ ಮರ್ಯಾದಾ ಮುದ್ರೆಯಿಂದಲೇ ಅದು ಸಮುದ್ರ.

ಎರಡೂ ಬದಿಗಳಲ್ಲಿ ನೀರು ಇರುವದರಿಂದ (ದ್ವಿರಾಪತ್ವಾತ್) ನಡುಗಡ್ಡೆಗೆ ದ್ವೀಪ ಎನ್ನುವರು. ಉದಕದ ನಿಧಿ ಆದುದರಿಂದ ಸಮುದ್ರಕ್ಕೆ ಉದಧಿ (ಉದ-ಧಿ) ಎಂಬ ಹೆಸರು ಬಂದಿದೆ. ಭೂಮಿಯನ್ನೆಲ್ಲ ಆಕ್ರಮಿಸಿ ನುಂಗಿದ್ದರಿಂದ ಮತ್ತು ಭೂಮಿಯು ತನ್ನ ಗರ್ಭದಲ್ಲಿ ಇದರ ಬಹುಭಾಗವನ್ನು ಗಿಳಂಕರಿಸಿದ್ದರಿಂದ ಬೆಟ್ಟಗಳಿಗೆ ಗಿರಿ ಎಂದೂ ಕಬ್ಬಿನ ಕಣ್ಣಿನಂತೆ ಅಲ್ಲಲ್ಲಿ ಪೋಚುಗಳು ಇರುವದರಿಂದ ಮತ್ತು ನೆಲಕ್ಕೆ ಬಂಧಿಸಿರುವದರಿಂದಲೂ ಪರ್ವತ ಎಂದೂ ಹೆಸರು ಬಂದಿದೆ.

ಇದರಂತೆ ಶಾಕಮರ ಇರುವದರಿಂದ ಶಾಕದ್ವೀಪ. ಕುಶಸ್ತಂಭ ಎಂದರೆ ದರ್ಭೆಯಬೊಡ್ಡೆ ಇರುವದರಿಂದ ಕುಶದ್ವೀಪ. ಕ್ರೌಂಚಗಿರಿಯಿಂದ ಕ್ರೌಂಚದ್ವೀಪ

ಶಾಲ್ಮಲೀ ಮರದಿಂದ ಶಾಲ್ಮಲದ್ವೀಪ. ಗೋಮೇದಪರ್ವತದಿಂದ ಗೋಮೇದ ದ್ವೀಪ, ಪುಷ್ಕರ ಎಂದರೆ ಕಮಲದ ಆಕಾರದ ಆಲದಮರದಿಂದ ಪುಷ್ಕರದ್ವೀಪ ಎಂದೂ ಆ ದ್ವೀಪಗಳಿಗೆ ಹೆಸರುಗಳು ಬಂದಿವೆ. ಆಲದಮರದಲ್ಲಿ ಸೃಷ್ಟಿಮಾಡಿದ ಬ್ರಹ್ಮನೂ ಮೂವತ್ಮೂರುಕೋಟಿದೇವತೆಗಳೂ, ಮಹರ್ಷಿಗಳೂ ನೆಲೆನಿಂತು ದೇವದೇವನಾದ, ಶ್ರೀ ಹರಿಯನ್ನು ಉಪಾಸನೆ ಮಾಡುತ್ತಾರೆ. ಈ ಎಲ್ಲ ದ್ವೀಪಗಳಲ್ಲಿಯೂ, ಅವುಗಳ ಒಳಗೆ ಇರುವ ವರ್ಷ ಹೆಸರಿನ ದೇಶಗಳಲ್ಲಿಯೂ ವಾಸಿಸಿರುವ ಜನರು ಧರ್ಮಿಷ್ಠರೂ, ಶಾಸ್ತ್ರಪಾರಂಗತರೂ, ಪರೋಪಕಾರಿಗಳೂ, ಆಗಿರುತ್ತಾರೆ. ಆಹಾರಕ್ಕಾಗಿ ಅವರು ಪ್ರಯತ್ನ ಮಾಡಬೇಕಿಲ್ಲ. ಷಡ್ರಸದಿಂದ ಕೂಡಿದ ಮಧುರಭೋಜನವು ಅವರಿಗೆ ಸ್ವಯಂಸಿದ್ಧ.

ಪುಷ್ಕರ ದ್ವೀಪದ ಆಚೆ ಸಿಹಿ ನೀರಿನ ಸಮುದ್ರವು. ಅದನ್ನು ಎಲ್ಲ ಕಡೆಯೂ ಬಳಸಿಕೊಂಡು ಮೊರೆಯುತ್ತಿದೆ. ಚಕ್ರವಾಕ ಅಥವಾ ಲೋಕಾಲೋಕ ಪರ್ವತವು ಆ ಪುಷ್ಕರದ್ವೀಪವನ್ನು ಸುತ್ತಲೂ ಆವರಿಸಿರುವುದು. ಬೆಳಕು ಕತ್ತಲೆ ಎರಡೂ ಗೋಚರಿಸುವದರಿಂದ ಅದಕ್ಕೆ ಲೋಕಾಲೋಕಪರ್ವತ ಎನ್ನುತ್ತಾರೆ. ಮೇರು ಪರ್ವತದಿಂದ ಲೋಕಾಲೋಕಪರ್ವತದವರೆಗೆ ಇರುವಷ್ಟೇ ಭೂಭಾಗವು ಅದರ ಹೊರಗಡೆಯೂ ಇರುವದು. ಈ ಭೂಭಾಗದ ಸುತ್ತಲೂ ಇದರ ಹತ್ತುಪಟ್ಟು ವಿಸ್ತಾರವಾದ ಜಲಭಾಗವು ಅಪರಂಪಾರಸಾಗರದ ರೂಪದಿಂದ ಅದನ್ನು ಆವರಿಸಿಕೊಂಡಿದೆ. ಈ ಜಲಕ್ಕಿಂತ ಅಗ್ನಿ ಹತ್ತುಪಟ್ಟು ಹೆಚ್ಚಾಗಿರುತ್ತದೆ. ಸ್ಥಳವನ್ನು ಜಲ ರಕ್ಷಿಸಿದಂತೆ ಜಲವನ್ನು ಅಗ್ನಿಯು ರಕ್ಷಿಸುತ್ತದೆ. ಈ ಅಗ್ನಿಯ ಹತ್ತುಪಟ್ಟು ಅಧಿಕವಾಗಿರುವ ವಾಯು ತೇಜಸ್ಸನ್ನು ರಕ್ಷಿಸುತ್ತದೆ. ಈ ವಾಯುವಿನ ಹತ್ತುಪಟ್ಟು ಅಧಿಕವಾದ ಆಕಾಶವು ಪ್ರಾಣಿಗಳಿಗೆಲ್ಲ ಆಧಾರವಾಗಿದೆ.

ಅಹಂಕಾರತತ್ವವು ಹತ್ತುಪಟ್ಟು ಮಿಗಿಲಾಗಿ ಆಕಾಶವನ್ನು ಧರಿಸಿದೆ. ಅಹಂಕಾರಕ್ಕಿಂತ ಹತ್ತುಪಟ್ಟು ಮಹತ್ತತ್ವವು ಮಹಾಭೂತಗಳಿಗೆ ಆಧಾರವಾಗಿದೆ. ಅನಂತವೂ ಅವ್ಯಕ್ತವೂ ಆದ ಮೂಲ ಪ್ರಕೃತಿಯೂ ಮಹತ್ತತ್ವದ ಸಂಧಾರಕವಾಗಿದೆ. ಈ ಎಲ್ಲ ಆಕಾಶಾದಿ ತತ್ವಗಳು ಇನ್ನೊಂದು ತತ್ವವನ್ನು ಆಧರಿಸಿ ಹುಟ್ಟಿರುವುದು ಮಾತ್ರವಲ್ಲದೇ ಬೇರೆ ತತ್ವಗಳು ತಮ್ಮಿಂದ ರೂಪಾಂತರಹೊಂದಿ ಉತ್ಪನ್ನವಾಗುವುದಕ್ಕೆ ಕಾರಣವೂ ಆಗಿವೆ. ಹೀಗೆ ಈ ತತ್ವಗಳು ಆಧಾರವೂ ಆಗಿವೆ.ಆಧೇಯವೂ ಆಗಿವೆ. ಈ ಪೃಥ್ವೀ ಮೊದಲಾದವುಗಳ ವಿಕಾರ ಎಂದು ಹೇಳುವದು ಪರಿಮಿತವಾದ ಅರ್ಥದಲ್ಲಿ ಮಾತ್ರ. ಏಕೆಂದರೆ ಮಹದಾದಿ ತತ್ವಗಳೆಲ್ಲವೂ ಮೂಲ ಪ್ರಕೃತಿಯ ವಿಕಾರಗಳೂ ಆಗಿ ತಮ್ಮ ವಿಶೇಷ ಲಕ್ಷಣಗಳನ್ನೂ ಉಳಿಸಿಕೊಂಡಿವೆ. ಹೀಗೆ ಈ ಎಲ್ಲ ತತ್ವಗಳೂ ಒಂದರಲ್ಲಿ ಒಂದು ಬೆರೆತಿದ್ದರೂ ಒಂದಕ್ಕಿಂತ ಒಂದು ವೈಶಿಷ್ಟ್ಯ ವಿಶಿಷ್ಟವಾಗಿವೆ. ಒಂದರಿಂದ ಒಂದು ಹುಟ್ಟಿ ಇನ್ನೊಂದರ ಹುಟ್ಟಿಗೆ ಸ್ವಯಂಕಾರಣವಾಗಿ ಒಂದಕ್ಕೊಂದು ಧಾರಕವೂ ಪೂರಕವೂ ಆಗಿವೆ. ಈ ಒಂದಕ್ಕೊಂದರಲ್ಲಿ ನಿಬಿಡ ಪ್ರವೇಶವಾಗಿ, ಬಂದು ಹೊಕ್ಕು

ಹೊಂದಾಣಿಕೆಯಿಂದ ಸಂಬಂಧ ಏರ್ಪಟ್ಟು ಪರಸ್ಪರ ದಾರ್ಢ್ಯ ಮತ್ತು ಸ್ಥೈರ್ಯ ಪ್ರಾಪ್ತವಾಗುವುವು. ಈ ತತ್ವಗಳು ಅವಿಶೇಷಗಳೆಂದೂ ಮಿಶ್ರಿತ ಅವಸ್ಥೆಯಲ್ಲಿ ಸವಿಶೇಷವೆಂದೂ ತಿಳಿಯಬೇಕು.

ಪೃಥ್ವಿ, ಜಲ, ತೇಜ, ಆಕಾಶ, ವಾಯು ಈ ಭೂತಗಳೆಲ್ಲವೂ ಲೋಕಾಲೋಕ ಪರ್ವತವರೆಗೆ ಮಾತ್ರ ವ್ಯಾಪಿಸಿದ್ದು ಅದರ ಆಚೆಗೆ ಎಲ್ಲ ಕಡೆಗೂ ಅಲೋಕಾಕಾಶವು ಇರುವದು. ದೊಡ್ಡ ಪಾತ್ರೆಯಲ್ಲಿ ಚಿಕ್ಕ ಚಿಕ್ಕ ಪಾತ್ರೆಗಳು ಅಡಕವಾಗುವಂತೆ ಅಲೋಕಾ ಕಾಶದಲ್ಲಿ ಉಳಿದ ಭೂತಗಳು ಅಡಗಿರುವವು. ಈ ತತ್ವಗಳು ಪರಸ್ಪರ ಒಗ್ಗೂಡಿ ವಿಕಾರವನ್ನು ಪಡೆಯುವವರೆಗೂ ಪ್ರಾಣಿಗಳ ವಿವಿಧ ವ್ಯಾಪಾರಗಳು ಪ್ರವರ್ತಿಸುವವು. ಅದು ನಿಂತ ಕೂಡಲೇ ಸೃಷ್ಟಿಯ ಪರ್ಯವಸಾನವಾದಂತೆಯೇ. ಮಹದಾದಿತತ್ವಗಳು ಕಾರ್ಯರೂಪವಾದುದು ನಿಜವಾದರೂ ವಿಕೃತವಾಗಿ ತತ್ವಾಂತರಗಳ ಉತ್ಪತ್ತಿಗೆ ಆಧಾರವಾಗುವದರಿಂದ ಕಾರಣರೂಪವೂ ಆಗಿವೆ. ಭೂಗೋಳದ ಸನ್ನಿವೇಶ, ಸಪ್ತದ್ವೀಪ ಮತ್ತು ಸಪ್ತಸಮುದ್ರಗಳ ಉದ್ದಳತೆ, ಸುತ್ತಳತೆಗಳನ್ನು ಇಂದು ನಾನು ನಿನಗೆ ತಿಳಿಸಿದ್ದೇನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು*

## ಸೂರ್ಯಚಂದ್ರರ ಸ್ಥಿತಿಗತಿ ಸಂಚಾರ ಮತ್ತು ಉದಯಾಸ್ತಗಳ ನಿರೂಪಣೆ

**ಅಧ್ಯಾಯ - ೧೨೫**

**ಅತಊರ್ಧ್ವಂ ಪ್ರವಕ್ಷ್ಯಾಮಿ ಸೂರ್ಯಚಂದ್ರಮಸೋರ್ಗತಿಂ ।**
**ಸೂರ್ಯಚಂದ್ರಮಸಾವೇತಾ ಭ್ರಾಜಂತೌ ಯಾವದೇವತು ॥**

**ಸೂತ :-** ಇನ್ನು ಮುಂದೆ ರವಿಚಂದ್ರರ ಸ್ಥಿತಿ-ಗತಿಗಳನ್ನು ತಿಳಿಸುವೆ. ಇವರಿಬ್ಬರೂ ಏಳುದ್ವೀಪ, ಏಳುಸಮುದ್ರಗಳಿದ್ದ ಭೂಮಿಯ ಭಾಗವನ್ನೆಲ್ಲ ತಮ್ಮ ಕಿರಣಕಾಂತಿಯಿಂದ ಬೆಳಗುವರು. ಭೂಮಂಡಲದ ವಿಸ್ತಾರದ ಅರ್ಧಭಾಗದಷ್ಟು ಪ್ರದೇಶವು ಲೋಕಾಲೋಕಪರ್ವತದ ಹೊರಗೂ ಇರುವದು. ಮೂರು ಲೋಕಗಳನ್ನೂ ಬೆಳಕನ್ನಿತ್ತು ರಕ್ಷಿಸುವದರಿಂದ ಅವನಿಗೆ **ರವಿ** ಎಂಬ ಹೆಸರು ಬಂದಿದೆ. ಸೂರ್ಯಮಂಡಲದ ಸುತ್ತಳತೆ ಇಪ್ಪತ್ತೇಳು ಸಾವಿರ ಯೋಜನ. ಅದರ ವಿಸ್ತಾರ ಒಂಭತ್ತುಸಾವಿರ ಯೋಜನ. ಚಂದ್ರನು ಈ ಎರಡರಲ್ಲಿಯೂ ಸೂರ್ಯನಿಗಿಂತ ಎರಡುಪಟ್ಟು ದೊಡ್ಡವನಾಗಿರುವನು. ಈ ಸಮಗ್ರ ಭೂಮಂಡಲದ ವಿಸ್ತಾರವೂ ಐವತ್ತುಕೋಟಿ ಯೋಜನ. ಮೇರುಪರ್ವತದ ಪೂರ್ವಕ್ಕೆ ಮಾನಸೋತ್ತರ ಪರ್ವತದ ಮೇಲೆ ವಸ್ತ್ವೌಕಸಾರ ಎಂಬ ದೇವೇಂದ್ರನ ಪಟ್ಟಣವಿದೆ. ದಕ್ಷಿಣದಲ್ಲಿ ಯಮದೇವರ ಸಂಯವಿನೀಪುರ, ಪಶ್ಚಿಮದಲ್ಲಿ ವರುಣನ ರಾಜಧಾನಿ ಸುಷಾಪುರಿ. ಉತ್ತರದಲ್ಲಿ ಚಂದ್ರನ ರಾಜಧಾನಿಯಾದ ವಿಭಾವರಿ. ನಾಲ್ಕು ದಿಕ್ಕಿನಲ್ಲಿಯೂ ಇದೇ ಮಾನಸೋತ್ತರ ಪರ್ವತದ ಮೇಲೆ ಲೋಕಪಾಲಕರು ಧರ್ಮವ್ಯವಸ್ಥೆಗಾಗಿ ನೆಲೆಸಿರುವರು. ಈ ಲೋಕಪಾಲಕರ

ವಾಸಸ್ಥಳಗಳ ಮೇಲೆ ದಕ್ಷಿಣಾಯನದಲ್ಲಿ ಸೂರ್ಯನು ಸಂಚರಿಸುವನು. ಅವನ ಸಂಚಾರದ ಬಗೆಯನ್ನು ತಿಳಿಸುತ್ತೇನೆ ಕೇಳಿರಿ.

ದಕ್ಷಿಣಾಯನ ಪ್ರಾರಂಭದಲ್ಲಿ ಸೂರ್ಯನು ಬಿಲ್ಲಿನಿಂದ ಬಿಟ್ಟ ಬಾಣದಂತೆ ತನ್ನ ಗುರಿಗೆ ನೇರವಾಗಿ ಸಂಚಾರಹೊರಡುತ್ತಾನೆ. ಅವನ ಜೊತೆಗೆ ಜ್ಯೋತಿಶ್ಚಕ್ರವೂ ಪರಿಭ್ರಮಿಸುತ್ತದೆ. ಇಂದ್ರನ ಅಮರಾವತಿಯಲ್ಲಿ ಸೂರ್ಯನು ನಡುನೆತ್ತಿಗೆ ಬಂದಾಗ ಯಮನ ಸಂಯಮನೀಪುರದಲ್ಲಿ ಸೂರ್ಯೋದಯ. ಚಂದ್ರನ ವಿಭಾವರಿ ನಗರದಲ್ಲಿ ಸೂರ್ಯಾಸ್ತ. ವರುಣನ ರಾಜಧಾನಿಯಾದ ಸುಷಾ ಪಟ್ಟಣದಲ್ಲಿ ಅರ್ಧರಾತ್ರಿ. ಯಮಪಟ್ಟಣದಲ್ಲಿ ಸೂರ್ಯ ನಡುನೆತ್ತಿಯ ಮೇಲೆ ಬಂದಾಗ ಸುಷಾಪುರಿಯಲ್ಲಿ ಅವನ ಉದಯವಾದಂತೆ ಕಾಣುವದು. ಆಗ ವಿಭಾವರಿಯಲ್ಲಿ ನಡುರಾತ್ರಿ. ಅಮರಾವತಿಯಲ್ಲಿ ಮುಸ್ಸಂಜೆ. ಹೀಗೆ ಅಮರಾವತಿಯಲ್ಲಿ ಮಧ್ಯಾಹ್ನವಾದಾಗ ವಿಭಾವರಿಯಲ್ಲಿ ಸೂರ್ಯೋದಯ. ಅಮರಾವತಿಯಲ್ಲಿ ಸೂರ್ಯೋದಯವಾದಾಗ ಯಮಪುರಿಯಲ್ಲಿ ನಡುರಾತ್ರಿ. ಸುಷಾಪಟ್ಟಣದಲ್ಲಿ ಸೂರ್ಯಾಸ್ತ.

ಸೂರ್ಯನು ಉರಿಯುವಕೊಳ್ಳಿಯಂತೆ ಶೀಘ್ರವಾಗಿ ತಿರುಗುತ್ತ ಪೂರ್ವದಿಂದ ಪ್ರಾರಂಭಿಸಿ ಪ್ರದಕ್ಷಿಣಾಕಾರವಾಗಿ ನಾಲ್ಕು ನಿಟ್ಟಿನಲ್ಲಿ ಸಂಚರಿಸುವನು. ಸೂರ್ಯನು ಎಲ್ಲಿ ಉದಯಿಸುವಂತೆ ತೋರುವದೋ ಅದು ಪೂರ್ವ. ಮರೆಯಾಗುವದೇ ಪಶ್ಚಿಮ. ಮೇರುಪರ್ವತವಿದ್ದುದೆ ಉತ್ತರ. ಲೋಕಾಲೋಕ ಪರ್ವತವಿದ್ದುದೆ ದಕ್ಷಿಣ. ಸೂರ್ಯನು ಲೋಕಾಲೋಕ ಪರ್ವತಬಳಿ ಬರುವಾಗ ಭೂಮಿಗೆ ಬಹಳ ದೂರವಾಗುವನು. ಆದ ಕಾರಣ ಅವನು ಕಾಣಿಸುವದೇ ಇಲ್ಲ. ಪುಷ್ಕರದ್ವೀಪದ ಮಧ್ಯ ಭಾಗಕ್ಕೆ ಅವನು ಬಂದಾಗ ಲಕ್ಷೋಪಲಕ್ಷಕಿರಣಗಳಿಂದಕೂಡಿ ಮೇಲ್ಗಡೆಯಲ್ಲಿರುವಂತೆ ಕಾಣಿಸುವನು. ಒಂದು ಮುಹೂರ್ತದಲ್ಲಿ ಅವನು ಭೂಮಿಯ ಪರಿಮಾಣದ ಮೂವತ್ತರಲ್ಲಿ ಒಂದು ಭಾಗದಷ್ಟು ಎಂದರೆ ಮೂವತ್ತೊಂದುಲಕ್ಷ ಐವತ್ತುಸಾವಿರ ಯೋಜನ ದೂರ ಸಂಚರಿಸುವನು.

ಈ ಕ್ರಮದಲ್ಲಿ ಸಂಚರಿಸುತ್ತ ಸೂರ್ಯನು ದಕ್ಷಿಣ ದಿಕ್ಕಿಗೆ ಹೋಗುವದೇ ದಕ್ಷಿಣಾಯನ. ಉತ್ತರ ದಿಕ್ಕಿಗೆ ಹೋಗವದು ಉತ್ತರಾಯಣ. ಉತ್ತರ ದಿಕ್ಕನ್ನು ಬಿಟ್ಟು ಒಂದು ತಿಂಗಳಲ್ಲಿ ಭಾಸ್ಕರನು ಪುಷ್ಕರದ್ವೀಪದ ನಡುವಿರುವ ಮಾನಸೋತ್ತರ ಪರ್ವತದ ಮೇಲ್ಗಡೆ ಬರುವನು. ಈ ಮಾನಸೋತ್ತರ ಹಾಗೂ ಮೇರುಪರ್ವತದ ನಡುವಿನ ಅಂತರ್ವಲಯ. ಬಹಿರ್ವಲಯ, ಮಧ್ಯವಲಯ ಗಳಲ್ಲಿ ಸೂರ್ಯನು ಸಂಚರಿಸುವನು. ಬಹಿರ್ವಲಯದ ಅಥವಾ ದಕ್ಷಿಣ ಮಂಡಲದ ಸುತ್ತಳತೆ ಒಂಭತ್ತುಕೋಟಿನಲವತ್ತೈದುಲಕ್ಷ ಯೋಜನ. ಇಷ್ಟು ಸಂಚಾರಕ್ಕೆ ಸೂರ್ಯನಿಗೆ ಒಂದು ಹಗಲು ಒಂದು ಇರುಳು ಸಾಕು. ದಕ್ಷಿಣದಿಂದ ಹಿಂತಿರುಗಿ ಉತ್ತರದ ಕಡೆಗೆ ಸಂಚರಿಸುತ್ತ ಸೂರ್ಯನು ಕ್ಷೀರಸಮುದ್ರದ ಮೇಲ್ಗಡೆ ಬಂದಾಗ ಮೂರುಕೋಟಿಇಪ್ಪತ್ತೊಂದುಲಕ್ಷಯೋಜನದ

ವಿಶ್ವಮಂಡಲವನ್ನು ಅರ್ಥಾತ್ ಮಧ್ಯವಲಯವನ್ನು ಸೇರುವನು. ವಿಶ್ವಮಂಡಲವನ್ನು ಬಿಟ್ಟು ಉತ್ತರ ದಿಕ್ಕಿಗೆ ಸಂಚರಿಸುತ್ತ ಮಾರ್ತಾಂಡನು ಶ್ರವಣಾ ನಕ್ಷತ್ರವನ್ನು ಸೇರುವ ವೇಳೆಗೆ ಗೋಮೇದದ್ವೀಪದ ಉತ್ತರಾರ್ಧದಲ್ಲಿರುವನು. ಉತ್ತರ ದಿಕ್ಕಿಗೆ ಈ ವಲಯದ ಪ್ರಮಾಣವು ಒಂದುಕೋಟಿಎಂಭತ್ತುಲಕ್ಷ ಐವತ್ತೆಂಟುಸಾವಿರ ಯೋಜನ.

ಸೂರ್ಯನು ನಾಗವೀಥಿ, ಅಜವೀಥಿ, ಮುಂತಾದ ನಕ್ಷತ್ರಮಾರ್ಗದಲ್ಲಿ ಸಂಚರಿಸುವನು. ಮೂರುಮೂರುನಕ್ಷತ್ರಗಳು ಸೇರಿ ಇಂಥ ವೀಥಿಗಳು ಆಗಿರುತ್ತವೆ. ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ, ಈ ಮೂರು ನಕ್ಷತ್ರಗಳು ಸೇರಿ ಅಜವೀಥಿ. ಅಭಿಜಿತ್, ಸ್ವಾತಿ, ಪೂರ್ವಾಭಾದ್ರಾ ಈ ಮೂರು ನಕ್ಷತ್ರಗಳು ಉತ್ತರದ ನಾಗವೀಥಿಗೆ ಸೇರಿದವು. ಅಶ್ವಿನೀ, ಭರಣೀ ಕೃತ್ತಿಕಾ, ಈ ಮೂರು ನಾಗವೀಥಿಯ ನಕ್ಷತ್ರಗಳು. ಇದರಂತೆ ರೋಹಿಣೀ, ಆರ್ದ್ರಾ, ಮೃಗಶಿರಾ ನಕ್ಷತ್ರಗಳೂ, ಪುನರ್ವಸು, ಪುಷ್ಯ ಮತ್ತು ಆಶ್ಲೇಷಾಗಳೂ ಐರಾವತಿಯ ಉದಯ ನಕ್ಷತ್ರಗಳು. ಈ ಮೂರೂ ವೀಥಿಗಳೂ ಉತ್ತರಮಾರ್ಗಕ್ಕೆ ಸಂಬಂಧಿಸಿದವು. ಮಘಾ, ಪುಬ್ಬೆ, ಉತ್ತರಾ ಈ ಮೂರು ಋಷಭವೀಥಿಗೂ ಪೂರ್ವಾಭಾದ್ರಾ, ಉತ್ತರಾಭಾದ್ರಾ. ರೇವತಿಗಳು ಗೋವೀಥಿಗೂ; ಶ್ರವಣಾ, ಧನಿಷ್ಠಾ, ಶತಭಿಷಾಗಳು ಜರದ್ಗವವೀಥಿಗೂ ಸಂಬಂಧಿಸಿದ್ದು, ಇದು ಮಧ್ಯಮ ಮಾರ್ಗ ಎನಿಸುತ್ತದೆ.

ಹಸ್ತಾ, ಚಿತ್ರಾ, ಸ್ವಾತಿ ಕೂಡಿ ಅಜವೀಥಿಗೆ, ವಿಶಾಖಾ, ಅನುರಾಧಾ, ಜೇಷ್ಠಾ ಮೃಗವೀಥಿಗೆ, ಮೂಲಾಪೂರ್ವಾಷಾಢಾ, ಉತ್ತರಾಷಾಢಾಗಳು ವೈಶ್ವಾನರವೀಥಿಗೂ ಸಂಬಂಧಿಸಿವೆ. ಈ ಒಂಭತ್ತು ನಕ್ಷತ್ರಗಳು ದಕ್ಷಿಣಮಾರ್ಗಕ್ಕೆ ಸೇರಿರುತ್ತವೆ. ದಕ್ಷಿಣಾಯನದಲ್ಲಿ ಸೂರ್ಯನು ಚಕ್ರದಂತೆ ಬಹಳ ವೇಗದಿಂದ ಸಂಚರಿಸುತ್ತಾನೆ. ದಕ್ಷಿಣದಿಕ್ಕಿನಲ್ಲಿ ಅಲ್ಪಕಾಲದಲ್ಲಿ ಅವನು ಹೆಚ್ಚು ಭೂಭಾಗವನ್ನು ಕ್ರಮಿಸುವನು. ಒಂದು ಹಗಲಿನಲ್ಲಿ ಹನ್ನೆರಡು ಮುಹೂರ್ತಗಳಲ್ಲಿ ಹದಿಮೂರುವರೆ ನಕ್ಷತ್ರಗಳ ದಾರಿಯನ್ನು ದಾಟಿ ಮುಂದುವರಿಯುವನು. ಉಳಿದ ನಕ್ಷತ್ರಗಳ ಪಥವನ್ನು ರಾತ್ರಿಕಾಲದಲ್ಲಿ ಕ್ರಮಿಸಿ ಬರಬೇಕಾದರೆ ಹದಿನೆಂಟು ಮುಹೂರ್ತಗಳ ಕಾಲ. ಕುಂಬಾರನ ತಿರುಗುವ ತಿಗರಿಯ ನಡುವಿನ ಗಡಿಗೆಯಂತೆ ನಿದಾನವಾಗಿ ಮಂದಗತಿಯಿಂದ ಅವನು ಚಲಿಸುವನು. ಹೀಗೆಯೇ ಉತ್ತರಾಯಣದಲ್ಲಿ ಮೆಲ್ಲಮೆಲ್ಲನೆ ಸಂಚರಿಸುವದರಿಂದ ಅವನು ಬಹುಕಾಲ ಸಂಚರಿಸಿದರೂ ಅಲ್ಪಭೂಭಾಗವನ್ನು ಮಾತ್ರ ಕ್ರಮಿಸಿರುತ್ತಾನೆ.

ಉತ್ತರಾಯಣದಲ್ಲಿ ರವಿಯು ಹದಿನೆಂಟು ಮುಹೂರ್ತಗಳ ಕಾಲ ಹಗಲು ಹೊತ್ತು ಯಾತ್ರೆಗೈದು ಹದಿಮೂರು ನಕ್ಷತ್ರಗಳನ್ನು ದಾಟುತ್ತಾನೆ. ಉಳಿದ ನಕ್ಷತ್ರಗಳನ್ನು ರಾತ್ರಿಯಲ್ಲಿ ಹನ್ನೆರಡು ಮುಹೂರ್ತಗಳ ಸಮಯದಲ್ಲಿ ಕ್ರಮಿಸುವನು. ಗಡಿಗೆ ಮಾಡುವ ತಿಗರೆಯ ನಟ್ಟನಡುವಿನ ಮಣ್ಣು ಮುದ್ದೆಯಂತೆ

ಜ್ಯೋತಿರ್ಮಂಡಲದ ಮಧ್ಯದಲ್ಲಿರುವ ಧ್ರುವನಕ್ಷತ್ರವು ಅತ್ಯಂತ ನಿಧಾನವಾದ ಗತಿಯಿಂದ ತಿರುಗುತ್ತಿದೆ. ಧ್ರುವನು ಇಡೀ ದಿನದ ಹಗಲಿರುಳಿನ ಮೂವತ್ತು ಮುಹೂರ್ತಗಳ ಕಾಲ ತನ್ನ ಅಕ್ಷದ ಸುತ್ತು ತಾನು ತಿರುಗುತ್ತ ದಕ್ಷಿಣೋತ್ತರ ದಿಕ್ಕುಗಳ ನಡುವಿನ ಉಳಿದ ಜ್ಯೋತಿರ್ಮಂಡಲಗಳನ್ನೂ ತನ್ನ ಧ್ರುವಮಂಡಲಕ್ಕೆ ಪ್ರದಕ್ಷಿಣೆ ಹಾಕಿಸುತ್ತಾನೆ. ಉತ್ತರಾಯಣದಲ್ಲಿ ರವಿಯು ಹಗಲು ಸಮಯದಲ್ಲಿ ಮಂದಗತಿಯಿಂದ ಚಲಿಸುವನು. ರಾತ್ರಿಯಲ್ಲಿ ವೇಗದಿಂದ. ದಕ್ಷಿಣಾಯನದಲ್ಲಿ ಇದಕ್ಕೆ ವಿಪರೀತವಾಗಿ, ಹಗಲು ಶೀಘ್ರಗತಿ. ರಾತ್ರಿ ಮಂದಗತಿ. ಈ ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳ ಬೆಳಕು ಲೋಕಾಲೋಕ ಪರ್ವತದ ಒಳಗಡೆಗೆ ಮಾತ್ರ. ಅದರ ಆಚೆಗೆ ನಿರಾಲೋಕ. ಅಲೋಕ.

'ಲೋಕದರ್ಶನೇ' ಎಂಬ ಧಾತುವಿನಿಂದ ಲೋಕ ಎಂದರೆ ಬೆಳಕು. ಅಲೋಕ ಎಂದರೆ ಪ್ರಕಾಶವಿಲ್ಲದ್ದು ಎಂದು ಅರ್ಥ. ಸೂರ್ಯನು ತನ್ನ ಮಂಡಲಾಕಾರವಾದ ಸಂಚಾರದಲ್ಲಿ ಉಷಾದ್ವಿಷ್ಟಿ ಎಂದರೆ ರಾತ್ರಿ ಹಗಲು. ಎರಡೂ ಸಂಧಿಸುವಂತೆ ಮಾಡುತ್ತಾನೆ. ಆದುದರಿಂದ ಈ ಹಗಲು ರಾತ್ರಿಗಳನ್ನು ಸೂರ್ಯನು ತನ್ನ ಮುಂಬೆಳಗು-ಹೊಂಬೆಳಗುಗಳಿಂದ ಕೂಡುವಂತೆ ಮಾಡುವ ನಡುವಿನ ಅವಕಾಶಕ್ಕೆ ಅಥವಾ ಸಂಧಿಕಾಲಕ್ಕೆ **ಸಂಧ್ಯಾ** ಎಂಬ ಹೆಸರು. ಮೂವತ್ತು ಕಲೆಗಳು ಒಂದು ಮುಹೂರ್ತ.

ಹದಿನೈದು ಮುಹೂರ್ತ ಒಂದು ಹಗಲು. ಸೂರ್ಯನು ಉದಯ ಹೊಂದಿದ ಬಳಿಕ ಕಾಲಚಕ್ರದ ಲೇಖಾವಲಯಗಳಲ್ಲಿ ಮೂರುಮೂಹೂರ್ತಗಳ ಕಾಲ ಕ್ರಮಿಸಿದರೆ ಪ್ರಾತಃಕಾಲವಾಗುವದು. ಅನಂತರದ ಮೂರುಮುಹೂರ್ತಗಳ ಸಮಯವು ಸಂಗವ. ತದನಂತರದ ಮೂರುಮೂಹೂರ್ತಗಳು ಕೂಡಿ ಮಧ್ಯಾಹ್ನ. ಅದರ ಮುಂದಿನದು ಅಪರಾಹ್ನ. ಕೊನೆಯ ಮೂರುಮಹೂರ್ತಗಳೇ ಸಾಯಂಕಾಲ. ಹೀಗೆ ಒಟ್ಟು ಹಗಲಿನಲ್ಲಿ ಹದಿನೈದು ಮುಹೂರ್ತಗಳು. ವಿಷವ ಕಾಲದಲ್ಲಿ ಹಗಲಿರುಳು ಸಮನಾಗಿದ್ದಾಗ ಹದಿನೈದುಮುಹೂರ್ತಗಳು ಸರಿಯಾಗಿರುವವು. ಅನಂತರ ದಕ್ಷಿಣಾಯನ ಉತ್ತರಾಯಣಗಳಲ್ಲಿ ಹಗಲಿರುಳಗಳ ಸಮಯಗಳಲ್ಲಿ ಹೆಚ್ಚು ಕಡಿಮೆಯಾಗಿ ಒಂದನ್ನೊಂದು ಅತಿಕ್ರಮಿಸುವವು. ಶರದೃತು, ವಸಂತಋತುಗಳ ಅವಧಿಯಲ್ಲಿ ತುಲಾಸಂಕ್ರಮಣ, ಮೇಷ ಸಂಕ್ರಮಣ ದಿನಗಳನ್ನು ವಿಷುವಕಾಲ ಎನ್ನುತ್ತಾರೆ. ಆಗ ಹಗಲು ರಾತ್ರಿ ಸಮವಾಗಿರುತ್ತವೆ.

ಸೂರ್ಯಚಂದ್ರರ ಬಿಸಿಲು-ಬೆಳದಿಂಗಳುಗಳು ಬೀಳುವವರೆಗಿನ ದೇಶವು ಲೋಕ. ಅವಿಲ್ಲದ ಅದರ ಹಿಂದಿನ ದೇಶವೆಲ್ಲವೂ ಅಲೋಕ.

ಲೋಕಾಲೋಕಪರ್ವತದ ಮೇಲೆ ನಾಲ್ಕೂದಿಕ್ಕುಗಳ ನಟ್ಟನಡುವೆ ಸುದಾಮ, ಕರ್ದಮ, ಹಿರಣ್ಯರೋಮ, ಕೋಟಿಮಂತ ಎಂಬ ನಾಲ್ಕು ಬ್ರಹ್ಮಚಾರಿಗಳಾದ ಲೋಕಪಾಲಕರು ಇರುವರು. ಅಗಸ್ತ್ಯಶಿಖರದ ಉತ್ತರಕ್ಕೆ ವೈಶ್ವಾನರಪಥದ ಹೊರಗೆ ಪಿತೃಯಾನ ಎಂಬ ಮಾರ್ಗವಿದೆ. ದಿವ್ಯ ಲೋಕಗಳನ್ನು ಪಡೆಯಬೇಕೆಂಬ

ಅಭಿಲಾಷೆಯಿಂದ ಯಜ್ಞಯಾಗಾದಿ ಕಾಮ್ಯಕರ್ಮಗಳನ್ನು ಮಾಡುವವರು ಮರಣಾನಂತರ ಈ ಪಿತೃಸ್ಥಾನದಿಂದ ಪ್ರಯಾಣಮಾಡುವರು. ಈ ದಾರಿಯಲ್ಲಿ ಕೆಲವು ಅಗ್ನಿಹೋತ್ರ ಅನುಷ್ಠಾನ ಪರರಾದ ಎಂಭತ್ತೆಂಟು ಸಾವಿರ ಗ್ರಹಸ್ಥ ಮುನಿಗಳು ವರ್ಣಾಶ್ರಮ ಧರ್ಮಗಳನ್ನು ಅನೂಚಾನವಾಗಿ ಅನುಸರಿಸಿ ಉಗ್ರತಪೋನುಷ್ಠಾನದಿಂದ ದೇಹದಂಡನವನ್ನು ಮಾಡುತ್ತ ಅಲ್ಲಿ ವಾಸಮಾಡುತ್ತಿದ್ದಾರೆ. ಇವರು ಧರ್ಮವು ಶಿಥಿಲವಾದಾಗ ಪ್ರತಿಯೊಂದು ಯುಗದಲ್ಲಿ ಧರ್ಮಸ್ಥಾಪನೆಮಾಡುವರು. ಇವರಿಗೆ ಲೋಕವ್ಯವಹಾರವನ್ನು ಅನುಸರಿಸಿ ಇಚ್ಛಾದ್ವೇಷ, ಕಾಮ, ಸ್ತ್ರೀಭೋಗಗಳೂ ಆದರಿಂದಾಗಿ ಜನನ ಮರಣಾದಿಗಳೂ ಆಗುವದುಂಟು.

ಆದರೆ ಎಂಭತ್ತೆಂಟು ಸಾವಿರ ಜಿತೇಂದ್ರಿಯರಾದ ಮಹಾಮಹರ್ಷಿಗಳು ಮಾತ್ರ ಈ ವ್ಯಾಪಾರಗಳಿಂದ ಜಿಗುಪ್ಸೆಗೊಂಡು ಕೋಪ, ಮೋಹ, ಕಪಟ ಮುಂತಾದ ದುರ್ಗುಣಗಳಿಂದ ದೂರರಾಗಿ ಸರ್ವಸಂಗಪರಿತ್ಯಾಗಮಾಡಿ ನಿಷ್ಕಾಮ ಕರ್ಮವನ್ನು ಭಗವತ್ಪ್ರೀತಿಯ ಉದ್ದೇಶದಿಂದ ಆಚರಿಸುತ್ತಿರುವರು. ಇವರು ದೇವಯಾನವನ್ನು ಆಶ್ರಯಿಸಿ ಪುನರ್ಜನ್ಮವಿಲ್ಲದೇ ಅಮೃತತ್ವವನ್ನು ಹೊಂದಿ ಪ್ರಳಯಕಾಲಪರ್ಯಂತರ ಭಗವದುಪಾಸನೆಯನ್ನು ಮಾಡುತ್ತ ಇರುವರು. ಧ್ರುವಮಂಡಲವು ಋಷಿಮಂಡಲದ ಮೇಲೆ ಇರುವದು. ಇದು ಅಂತರಿಕ್ಷದಲ್ಲಿಯೇ ವಿರಾಜಿಸುವ ಮೂರನೆಯ ದಿವ್ಯಲೋಕ. ಇದಕ್ಕೆ ವಿಷ್ಣುಪದ ಎನ್ನುವರು. ಇದನ್ನು ಹೊಂದಿದವರಿಗೆ ದುಃಖವೆಂಬುದೇ ಇಲ್ಲ. ಧ್ರುವ ಮೊದಲಾದವರು ಜನರ ಪುಣ್ಯಪಾಪಗಳಿಗೆಲ್ಲ ಸಾಕ್ಷಿಗಳಾಗಿ ಇರುತ್ತಾರೆ. ಸ್ವಯಂ ಧರ್ಮಿಷ್ಠರಾದ ಅವರು ಪ್ರಪಂಚದ ಮುಖ್ಯ ಧರ್ಮದರ್ಶಿಗಳೂ ಆಗಿರುತ್ತಾರೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತೈದನೆಯ ಅಧ್ಯಾಯ ಮುಗಿದುದು*

—o—

## ಗಗನ ಮಂಡಲದಲ್ಲಿ ಜ್ಯೋತಿರ್ವಲಯಗಳ ಕ್ರಮಣಭ್ರಮಣ ಕಥನ

**ಅಧ್ಯಾಯ - ೧೨೬**

**ಸೂತ ಉವಾಚ**

**ಏವಂಶ್ರುತ್ವಾಕಥಾಂ ದಿವ್ಯಾಮಬ್ರುವನ್ ಲೋಮಹರ್ಷಿಣಂ ।**
**ಸೂರ್ಯಚಂದ್ರಮಸೋಶ್ಚಾರಂ ಗ್ರಹಾಣಾಂ ಚೈವಸರ್ವಶಃ ॥**

**ಸೂತ** :- ಸೂರ್ಯ ಚಂದ್ರಾದಿ ಗ್ರಹಗಳ ರೋಮಾಂಚಕಾರಿಯಾದ ದಿವ್ಯಸಂಚಾರ ಕ್ರಮವನ್ನು ಕೇಳಿ ಋಷಿಗಳು ಸೂತ ಪುರಾಣಿಕನಿಗೆ ಕೇಳಿದರು.

**ಋಷಿಗಳು** :- ಗಗನಮಂಡಲದಲ್ಲಿ ಈ ಜ್ಯೋತಿರ್ವಲಯಗಳು ಒಂದಕ್ಕೊಂದು ತಾಕದಂತೆ ಪ್ರತ್ಯೇಕವಾಗಿ ತಮ್ಮಷ್ಟಕ್ಕೆ ತಾವೇ ಹೇಗೆ ಪರಿಭ್ರಮಿಸುತ್ತವೆ? ಈ ಸಂಚಾರ ಅಥವಾ ಪರಿಭ್ರಮಣವನ್ನು ತಾವಾಗಿಯೇ ಈ ಗ್ರಹಮಂಡಲಗಳು ಮಾಡುತ್ತವೆಯೋ ಅಥವಾ ಯಾರಾದರೂ ಹಿಂದೆ ನಿಂತುಕೊಂಡು ಇವುಗಳನ್ನು ಆಗಸದ ಅಂಗಳದಲ್ಲಿ ತಿರುಗಿಸುತ್ತಾರೋ ? ಹಾಗಿದ್ದರೆ ಈ ಎಲ್ಲ ಗ್ರಹ ನಕ್ಷತ್ರ ಲೋಕಗಳ ಸ್ಥಿತಿಗತಿ ಹಾಗೂ ಕ್ರಮಣಭ್ರಮಣಗಳಿಗೆ ಕಾರಣಪುರುಷ ಯಾರು ? ಇದನ್ನೆಲ್ಲ ಮಹಾತ್ಮರಾದ ತಾವು ನಮಗೆ ತಿಳಿಯುವಂತೆ ಅರುಹಬೇಕು.

**ಸೂತ** :- ''ಲೋಕಸಂವ್ಯವಹಾರಾರ್ಥಮೀಶ್ವರೇಣ ವಿನಿರ್ಮಿತಂ'' ಪರಿಭ್ರಮಣ ಶೀಲವಾದ ಗ್ರಹನಕ್ಷತ್ರಾದಿ ಸಂಸಾರವೆಲ್ಲವೂ ಜಗತ್ತಿನಲ್ಲಿಯ ಜೀವರಾಶಿಗಳ ಬಾಳು, ಬೆಳಕು, ಬದುಕು, ಬೆಳವಣಿಗೆಗಾಗಿ ನಿರ್ಮಿಸಲ್ಪಟ್ಟಿದೆ. ಅವನ ಆಜ್ಞೆಯಂತೆ ಶಿಂಶುಮಾರ ಚಕ್ರ, ಧ್ರುವನಕ್ಷತ್ರ, ಸೂರ್ಯಚಂದ್ರಾದಿ ಗ್ರಹ ಮಂಡಲಗಳೂ ನಿರ್ದಿಷ್ಟಕ್ರಮದಲ್ಲಿ ಅಸಂಶ್ಲಿಷ್ಟವಾಗಿ ಕ್ರಮಿಸಿ ಭ್ರಮಿಸುತ್ತಲಿರುತ್ತವೆ. ನಕ್ಷತ್ರಪುಂಜಮಯವಾದ ಶಿಂಶುಮಾರ ಚಕ್ರವು ಭಗವದಾತ್ಮಕವೇ ಆಗಿದೆ. ಈಶಿಂಶುಮಾರ ಚಕ್ರದ ಬಲತುದಿಯಲ್ಲಿ ಅಭಿಜಿನ್ನಕ್ಷತ್ರವು ಸೇರಿ ಶ್ರವಣ ಮೊದಲಾಗಿ ಪುನರ್ವಸುವಿನವರೆಗೆ ಹದಿನಾಲ್ಕು ನಕ್ಷತ್ರಗಳು ಇರುತ್ತವೆ. ಎಡಗಡೆ ಪುಷ್ಯದಿಂದ ಉತ್ತರಾಷಾಢಾದವರೆಗಿನ ಹದಿನಾಕು ನಕ್ಷತ್ರಗಳು ಇರುತ್ತವೆ. ಉತ್ತಾನಪಾದರಾಜನ ಪುತ್ರನಾದ ಧ್ರುವನುನಕ್ಷತ್ರ ರೂಪದಿಂದ ಎಲ್ಲ ಗ್ರಹನಕ್ಷತ್ರಗಳಿಗೂ ಮೇಟಿ ಕಂಬದಂತೆ ಆಶ್ರಯಭೂತನಾಗಿ ಶ್ರೀ ಹರಿಯ ಆಜ್ಞೆಯಿಂದ **ವಿಷ್ಣುಪದಿ** ಎಂಬ ಅಂತರಿಕ್ಷದ ಮೇಲ್ಭಾಗದಲ್ಲಿ ಸ್ಥಿರತಾರೆಯಾಗಿ ಹೊಳೆಯುತ್ತಿದ್ದಾನೆ. ಧ್ರುವನು ಸ್ಥಿರನಕ್ಷತ್ರದಂತೆ ತೋರಿದರೂ ಅವನಿಗೆ ಗತಿಯಿದೆ. ಮಂದಗತಿಯಿಂದ ಅವನು ತಾನು ತಿರುಗುತ್ತ ಸೂರ್ಯಚಂದ್ರಾದಿ ಗ್ರಹಗಳನ್ನೂ ಹಾಗೂ ನಭೋಮಂಡಲದ ಸಮಸ್ತ ತಾರಾಗಣವನ್ನೂ ತನ್ನ ಪರಿಭ್ರಮಣಕ್ಕೆ ಅನುಸಾರವಾಗಿ ತಿರುಗಿಸುತ್ತಿರುತ್ತಾನೆ.

ಈ ಗ್ರಹ, ನಕ್ಷತ್ರ ಮೊದಲಾದ ತೇಜೋಮಂಡಲಗಳು ವಾಯುಸ್ಕಂಧಗಳೆಂಬ ಪಾಶಗಳಿಂದ ಧ್ರುವನೊಡನೆ ಬದ್ಧವಾಗಿ ಅವನ ಇಷ್ಟದಂತೆ ತಿರುಗುತ್ತವೆ. ಈ ಎಲ್ಲ ಗ್ರಹಮಂಡಲ ನಕ್ಷತ್ರಮಂಡಲಗಳ ಸಂಘಟನ-ವಿಘಟನೆ, ಭ್ರಮಣ-ಕ್ರಮಣ, ಉದಯ ಅಸ್ತ, ಉತ್ಪಾತ-ನಿಪಾತ, ಆಯನ-ವಿಷವಸಂಕ್ರಾತಿ, ಗ್ರಹಣ ಮುಂತಾದುದೆಲ್ಲವೂ ಧ್ರುವನ ಪ್ರೇರಣೆಯಿಂದ ತದನುಸಾರವಾಗಿಯೇ ಜರಗುತ್ತವೆ.

ಪ್ರಾಣಿಪ್ರಪಂಚದ ಜೀವನಾಧಾರವಾದ ಜೀಮೂತ ಎಂಬ ಮೋಡಗಳು ಎರಡನೆಯ ವಾಯುಸ್ತಂಭವನ್ನು ಆಶ್ರಯಿಸಿಗೊಂಡಿದ್ದು, ವಾಯುಮಂಡಲದ ವ್ಯತ್ಯಾಸದಿಂದ ವಿಕಾರವಶವಾಗಿ ನೆಲದಮೇಲೆ ಮಳೆಗರೆಯುತ್ತವೆ. ಪುಷ್ಕರಾವರ್ತಕ ಎಂಬ ಮೋಡ ಪಡೆಗಳೂ ಮಳೆಸುರಿಸುತ್ತವೆ. ಪೂರ್ವಕಾಲದಲ್ಲಿ ಬೆಟ್ಟಗಳಿಗೆಲ್ಲ ರೆಕ್ಕೆಗಳಿದ್ದವು. ಅದರಿಂದ ಅವು ಬೇಕಾದಲ್ಲಿಗೆ ಹೋಗಿ ಇಳಿದು ಜನ, ದನ, ಬೆಳೆಗಳನ್ನು ನಾಶಮಾಡುತ್ತಿದ್ದವು. ದೇವೇಂದ್ರನು ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿದನು. ಆ ರೆಕ್ಕೆಗಳಿಗೆ **ಪುಷ್ಕರ** ಎನ್ನುವರು. ಅವುಗಳಿಂದ ಹುಟ್ಟಿದ ಪ್ರಯುಕ್ತ ಮೋಡಗಳಿಗೆ ಪುಷ್ಕರಾವರ್ತಕ ಎಂದು ಹೆಸರು ಬಂದಿದೆ.

ಸೃಷ್ಟಿಯ ಆದಿಕಾಲದಲ್ಲಿ ಬ್ರಹ್ಮಾಂಡದ ಮೇಲಿನ ಚಿಪ್ಪನ್ನು ಒಡೆದು ಬ್ರಹ್ಮನು ಜನಿಸಿದ ಬಳಿಕ ಕೆಳಗೆ ಉದುರಿದ ಆ ಚಿಪ್ಪಿನ ಚೂರುಗಳಿಂದ ಮೊಟ್ಟಮೊದಲು ಮೋಡಗಳ ಉತ್ಪತ್ತಿಯಾಯಿತು. ವಾಯುವಿನ ಆಧಾರದಿಂದ ನೀರು ಹೊತ್ತು ಅತ್ತಿತ್ತ ಸಂಚಾರಗೈಯುವ ಈ ಮೋಡ ಪಡೆಗಳು ಹವೆಆವಿಯಿಂದಲೂ ರೂಪಗೊಂಡು ಬಗೆಬಗೆಯ ಆಕಾರತಾಳಿ ಭಯಂಕರಧ್ವನಿಗೈಯುತ್ತ ಗುಡುಗುಹಾಕಿ ಮಳೆಗರೆಯುವವು. ನೀರಿನಿಂದ ಉತ್ಪನ್ನವಾಗುವ ಈ ಮೋಡಗಳಲ್ಲಿ ಪರ್ಜನ್ಯ ಮೋಡಗಳು ಶ್ರೇಷ್ಠವಾಗಿದ್ದು, ಮಳೆಬೆಳೆ ಮೂಲಕ ಪ್ರಾಣಿಗಳ ಆಹಾರವೃದ್ಧಿ ಮಾಡಿ ಜೀವನಾಧಾರವಾಗಿವೆ. ಪ್ರಳಯಕಾಲದಲ್ಲಿ ಭಯಂಕರ ಮಳೆ ಸುರಿಸಿ ಜಲಪ್ರಳಯವನ್ನೂ ಮೋಡಗಳೇ ಉಂಟು ಮಾಡುತ್ತವೆ.

ವಾಯುಸ್ಕಂದಗಳಲ್ಲಿ ಆರನೆಯದಾದ ಪರಿವಾಹವು ಅಮೃತದಂಥ ನೀರಿನಿಂದ ಪೂರ್ಣವಾಗಿ **ತ್ರಿಪಥಗಾ** ಎಂಬ ಹೆಸರಿನಿಂದ ಆಕಾಶಗಂಗೆಯನ್ನು ಧರಿಸಿದೆ. ಆಕಾಶಗಂಗೆಯ ತರಂಗ ತುಂತುರುಗಳನ್ನು ದಿಗ್ಗಜಗಳು ತಮ್ಮ ಸೊಂಡೆಯಿಂದ ಹೀರಿ ನೆಲಕ್ಕೆ ಸುರಿಸಿದಾಗ ಅದೇ ಮಂಜಾಗಿ ಬೀಳುತ್ತದೆ. ಹೇಮಕೂಟದ ದಕ್ಷಿಣದಲ್ಲಿ ಹಿಮಾಲಯದ ಉತ್ತರದಲ್ಲಿ ಇರುವ ಪುಂಡ್ರದೇಶದಲ್ಲಿ ಮಂಜಿನ ಮಳೆ ಬಹಳಷ್ಟು ಬಿದ್ದು ಆ ಪ್ರದೇಶವನ್ನೆಲ್ಲ ತುಂಬಿಬಿಡುವದು. ಗಾಳಿಯ ಮೂಲಕ ಅಲ್ಲಿಯ ಮಂಜು ಹಿಮಾಚಲವನ್ನು ಮುತ್ತಿ ತಟ್ಟನಿಂತ ಮೋಡಗಳಿಗೆಲ್ಲ ತಂಪು ತಗಲಿಸಿ ಧಾರಾಕಾರ ಮಳೆಗೆ ಕಾರಣವಾಗುತ್ತದೆ. ಅವೇ ಮೋಡಗಳನ್ನು ಗಾಳಿ ನೂಕಿಕೊಂಡು ಭಾರತ ದೇಶಕ್ಕೆ ಕರೆತಂದು ಸಮೃದ್ಧಮಳೆಯನ್ನು ಉಂಟುಮಾಡುತ್ತದೆ.

ಈ ಮಳೆಗಳ ಮುಖ್ಯ ಉತ್ಪತ್ತಿಗೂ ಮೋಡಗಳ ನಿರ್ಮಾಣಕ್ಕೂ ಮುಖ್ಯ ಮೂಲಕಾರಣ ಸೂರ್ಯ ಎಂದು ಅರಿಯಬೇಕು. ಚರಾಚರಾತ್ಮಕ ಪ್ರಪಂಚದಲ್ಲಿ

ಇರುವ ನೀರಿನ ಅಂಶವಿದ್ದಲ್ಲೆಲ್ಲ ತನ್ನ ಕಿರಣಗಳನ್ನು ಹರಡಿ ಕಾವುಕೊಟ್ಟು ಕಾಯಿಸಿ ಜಲಾಂಶವನ್ನು ಹೀರಿ ಆವಿಯಾಗಿಸಿ ಮೋಡಮಾಡಿ ಮಳೆಗರೆಯುವವ ಸೂರ್ಯನಾರಾಯಣನೇ. ಗಾಳಿ ಮೋಡ ಪಡೆಯನ್ನು ಜಾಲಾಡಿದಾಗ ಗುಡುಗೂ ಅಗ್ನಿಯಿಂದ ಮಿಂಚೂ ಹುಟ್ಟುತ್ತವೆ. ಮಿಹ ಧಾತುವಿನಿಂದ ಹುಟ್ಟಿದ ಮೇಘ ಶಬ್ದಕ್ಕೆ ನೀರು ಸುರಿಸು ಎಂದರ್ಥ. ಆದರಿಂದ ನೀರು ಅಕಾಲದಲ್ಲಿ ಸುರಿಯದೇ ಕ್ಲಪ್ತ ಕಾಲದಲ್ಲಿ ಮಾತ್ರ ಸುರಿಯುವದರಿಂದ ಮೋಡಕ್ಕೆ **'ಅಭ್ರ'** ಎಂದೂ ಹೆಸರು. ಧ್ರುವನ ಆಧಾರದಿಂದ ಸೂರ್ಯನು ಮಳೆ-ಮೋಡಗಳು ಮೂಡಿ, ಮಳೆಗರೆದು, ಬೆಳೆಬೆಳೆದು, ವಾತಾವರಣವು ಜೀವಿಗಳು ಬದುಕಲಿಕ್ಕೆ ಅನುಕೂಲವಾಗುವಂತೆ ಎಲ್ಲ ಏರ್ಪಾಟಿಗೂ ಕಾರಣನಾಗಿದ್ದಾನೆ. ಸೂರ್ಯನ ರಥಕ್ಕೆ ಒಂದೇ ಗಾಲಿ. ಐದು ಆರೆಗಾಲು, ಮೂರುಹೊಕ್ಕಳ. ಎಂಟುಸುತ್ತುಪಟ್ಟಿ. ಬ್ರಹ್ಮ ನಿರ್ಮಿಸಿದ ಈ ಬಂಗಾರದ ತೇರಿಗೆ ಗಾಯತ್ರೀ ಮೊದಲಾದ ಛಂದೋ ರೂಪವಾದ ಕುದುರೆಗಳನ್ನು ಹೂಡಿರುವದರಿಂದ ಗಾಳಿಗಿಂತ ವೇಗವಾಗಿ ಓಡಬಲ್ಲದು.

ಸೂರ್ಯನ ರಥವು ಕಾಲಚಕ್ರವಾಗಿದ್ದು ವರ್ಷಗಳು ಅದರ ಆರೆಗಾಲುಗಳು. ಧರ್ಮವು ಅದರ ಧ್ವಜ. ಯುಗಗಳು ಅಂಚಿನ ತುದಿ. ದಿಕ್ಕುಗಳು ಘೋಣಾ ಎಂದರೆ ಈಸು. ಕ್ಷಣಗಳು ಹಲ್ಲುಗಳು. ಹಗಲು ಅದರ ಸುಳಿ. ರಾತ್ರಿ ಮೇಲಿನ ಮುಸುಕು. ಅರ್ಥ, ಕಾಮ ಎಂಬ ಪುರುಷಾರ್ಥಗಳೇ ನೊಗ ಮತ್ತು ಅಚ್ಚಿನ ಮರದ ತುದಿಗಳು. ಗಾಯತ್ರಿ, ತ್ರಿಷ್ಟುವ, ಜಗತೀ, ಅನುಷ್ಟುಪ್, ಪಂಕ್ತಿ, ಬೃಹತೀ, ಉಷ್ಣಿಕ್ ಎಂಬ ವೇದದ ಏಳು ಛಂದೋವೃತ್ತಗಳೇ ಆ ಸೂರ್ಯ ರಥದ ಸಪ್ತಾಶ್ವಗಳಾಗಿ ವಾಯುವೇಗದಿಂದ ಅದನ್ನು ಎಳೆಯುವವು. ಚಕ್ರವು ಅಚ್ಚಿನೊಡನೆಯೂ, ಅಚ್ಚು ಧ್ರುವನೊಡನೆಯೂ, ಕೂಡಿ ಮೂರೂ ತಿರುಗುತ್ತಿರುತ್ತವೆ. ತೇರಿನ ಬಲಗಡೆಯಲ್ಲಿ ನೊಗದ ಮತ್ತು ಅಚ್ಚಿನ ತುದಿಗಳಿಗೆ ಎರಡು ವಾಯುಪಾಶಗಳು ಕಟ್ಟಲ್ಪಟ್ಟಿದ್ದು, ಅವು ತೇರಿನ (ರಥದ) ಚಕ್ರವನ್ನೂ, ನೊಗವನ್ನೂ ಬಳಸಿಕೊಂಡಿರುವವು. ಈ ರಥದ ಅಚ್ಚು ಮತ್ತು ನೊಗಗಳ ತುದಿಗೆ ಕಟ್ಟಿದ ವಾಯುಪಾಶಗಳು ಉತ್ತರಮಾರ್ಗದಲ್ಲಿ ಸೂರ್ಯನು ಸಂಚರಿಸುವಾಗ ಮಾರ್ಗದಲ್ಲಿ ಕಿರಿದಾಗುವವು. ದಕ್ಷಿಣಮಾರ್ಗದಲ್ಲಿ ತಿರುಗುವಾಗ ಉದ್ದವಾಗುವವು. ಆ ಎರಡೂ ವಾಯುಪಾಶಗಳನ್ನು ಧ್ರುವನು ತನ್ನ ಕೈಯಲ್ಲಿ ಹಿಡಿದುಕೊಂಡು ದಕ್ಷಿಣೋತ್ತರಮಾರ್ಗದಲ್ಲಿ ಒಂದೆಡೆಯಿಂದ ಇನ್ನೊಂದೆಡೆಗೆ ಸೂರ್ಯನು ಸಂಚರಿಸುವಂತೆ ಮಾಡುವನು. ಆ ಎರಡೂ ಹಗ್ಗಗಳನ್ನೂ ಧ್ರುವನು ಜಗ್ಗಿ ಹಿಡಿದಾಗ ರವಿಯು ಅಂತರ್ವಲಯದಲ್ಲಿ ಮಂಡಲಾಕಾರವಾಗಿ ಪರಿಭ್ರಮಿಸುವನು. ಎರಡನ್ನೂ ಸಡಿಲು ಬಿಟ್ಟಾಗ ಬಹಿರ್ವಲಯದಲ್ಲಿ ಎಂದರೆ ದಕ್ಷಿಣ ದಿಕ್ಕಿನ ಮಂಡಲಾಕಾರವಾದ ಮಾರ್ಗಗಳಲ್ಲಿ ತಿರುಗುವನು. ಹೀಗೆ ಎಲ್ಲ ಮಂಡಲಗಳನ್ನೂ ಬಳಸಿಕೊಂಡು ಭಾಸ್ಕರನು ಬಹು ವೇಗದಿಂದ ಸುತ್ತುತ್ತಾನೆ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತಾರನೆಯ ಅಧ್ಯಾಯ ಮುಗಿದುದು*

—o—

**ಸೂತ ಉವಾಚ**

**''ಸಪಥೋऽಧಿಷ್ಟಿತೋ ದೇವೈರ್ಮಾಸಿಮಾಸಿಯಥಾಕ್ರಮಂ ।**
**ತತೋ ಮಹತ್ಕಥಾದಿತ್ಯಂಬಹುಭಿರ್ಋಷಿಬಿಃಸಹ ॥**

**ಸೂತ** :- ಸೂರ್ಯನ ರಥದಲ್ಲಿ ಎರಡೆರಡು ತಿಂಗಳು ಬೇರೆ ಬೇರೆ ದೇವ, ಋಷಿ, ಗಂಧರ್ವ, ಅಪ್ಸರ, ಸರ್ಪ, ರಾಕ್ಷಸ ಮುಂತಾದವರು ಕುಳಿತುಕೊಳ್ಳುವರು. ಚೈತ್ರ, ವೈಶಾಖಮಾಸಗಳಲ್ಲಿ ಧಾತಾ, ಅರ್ಯ್ಯಮಾ ಎಂಬ ದೇವತೆಗಳೂ, ಪುಲಹ ಪುಲಸ್ತ್ಯ ಎಂಬ ಪ್ರಜಾಪತಿಗಳೂ, ವಾಸುಕಿ ಸಂಕೀರ್ಣ ಎಂಬ ಹಾವುಗಳೂ, ತುಂಬುರರು ನಾರದರೂ, ಕೃತಸ್ಥಲೀ, ಪುಂಜಕಸ್ಥಲೀ ಎಂಬ ಅಪ್ಸರೆಯರೂ, ರಥಕೃತ್, ರಥೌಜ ಎಂಬ ಯಕ್ಷರೂ, ಪ್ರಹೇತಿ, ರಕ್ಷೋಹೇತಿ ಎಂಬ ರಾಕ್ಷಸರೂ, ರವಿಯರಥದಲ್ಲಿ ಇರುವರು. ಜ್ಯೇಷ್ಠ, ಆಷಾಢಗಳಲ್ಲಿ ಮಿತ್ರ, ವರುಣ ದೇವತೆಗಳೂ, ಅತ್ರಿ, ವಸಿಷ್ಠಋಷಿಗಳೂ, ರಂಭ ತಕ್ಷಕ ಸರ್ಪಗಳೂ, ಮೇನಕಾ ಸಹಧನ್ಯಾ ಅಪ್ಸರೆಯರೂ ಹಾಹಾಹೂಹೂ ಗಂಧರ್ವರೂ ರಥಂತರ, ರಥಕೃತ ಯಕ್ಷರೂ ವಧ, ಪುರುಷಾದ ಎಂಬ ರಾಕ್ಷಸರೂ ಸೂರ್ಯನೊಡನೆ ರಥಾರೋಹಣ ಮಾಡುವರು. ಶ್ರಾವಣ ಭಾದ್ರಪದಗಳಲ್ಲಿ ಇಂದ್ರ, ವಿವಸ್ವಂತ ದೇವತೆಗಳೂ, ಭೃಗು ಅಂಗಿರಸ ಋಷಿಗಳೂ, ಎಲಾಪತ್ರ ಶಂಖಪಾಲ ಸರ್ಪಗಳೂ, ವಿಶ್ವಾವಸು, ಸುಷೇಣ ಗಂಧರ್ವರೂ, ಪ್ರಾತ, ರಥ ಎಂಬ ಯಕ್ಷರೂ, ಪ್ರಮ್ಲೋಚಾ ನಿಮ್ಲೋಚಾ ಎಂಬ ಅಪ್ಸರೆಯರೂ, ಹೇತಿ ವ್ಯಾಘ್ರ ಎಂಬ ರಾಕ್ಷಸರೂ ಸೂರ್ಯನೊಡನೆ ಸಂಚರಿಸುವರು. ಆಶ್ವೀನ ಕಾರ್ತೀಕ ಮಾಸಗಳಲ್ಲಿ ಪರ್ಜನ್ಯ ಪೂಷನ್‌ದೇವತೆಗಳು, ಭರದ್ವಾಜ ಗೌತಮ ಋಷಿಗಳು, ಚಿತ್ರಸೇನ ಸುರುಚಿ ಗಂಧರ್ವರೂ, ಘೃತಾಚಿ ವಿಶ್ವಾಚಿ ಅಪ್ಸರೆಯರೂ, ಐರಾವತ ಧನಂಜಯ ಸರ್ಪಗಳೂ, ಸೇನಜಿತ್ ಸುಷೇಣ ಯಕ್ಷರೂ ಚಾರ, ವಾತ ಎಂಬ ರಾಕ್ಷಸರೂ ಭಾಸ್ಕರನೊಡನೆ ಸಂಚಾರಗೈಯುವರು.

ಮಾರ್ಗಶೀಷ ಪುಷ್ಯ ತಿಂಗಳುಗಳಲ್ಲಿ ಅಂಶ, ಭಗ, ಕಶ್ಯಪ ಕ್ರತು, ಮಹಾಪದ್ಮ ಕರ್ಕೋಟಕ, ಚಿತ್ರಸೇನ ಪುಣ್ಯಾಯು, ಪೂರ್ವಚಿತ್ತಿ, ಊರ್ವಶಿ, ತಾರ್ಕ್ಷ್ಯ ಅನಿಷ್ಟನೇಮಿ, ವಿದ್ಯುತ್ ಸೂರ್ಯ ಮುಂತಾದವರು ಸೂರ್ಯದೇವನ ಯಾತ್ರೆಯ ಸಂಗಡಿಗರಾಗಿರುವರು. ಮಾಘ ಫಾಲ್ಗುಣ ಮಾಸಗಳಲ್ಲಿ ತ್ವಷ್ಟ, ವಿಷ್ಣು, ಜಮದಗ್ನಿ, ವಿಶ್ವಾಮಿತ್ರ, ಕಂಬಲ, ಅಶ್ವತಲ, ಧೃತರಾಷ್ಟ್ರ, ಸೂರ್ಯವರ್ಚಸ ರಂಭಾ, ತಿಲೋತ್ತನಾ, ಋತಜಿತ್, ಸತ್ಯಜಿತ್, ಬ್ರಹೋಪೇತ, ಯಜ್ಞೋಪೇತ ಮುಂತಾದ ದೇವ, ಋಷಿ ಸರ್ಪ ಗಂಧರ್ವ, ಅಪ್ಸರೆ ಯಕ್ಷ ರಾಕ್ಷಸರೂ ರವಿಯ ರಥದಲ್ಲಿ ಕುಳಿತು ಲೋಕಸಂಚಾರಗೈಯುವರು. ಲೋಕಸಂಚಾರದಲ್ಲಿ ರವಿಯ

ರಥಾರೋಹಣವನ್ನು ಇಬ್ಬಿಬ್ಬರಾಗಿ ಮಾಡುವ ಹನ್ನೆರಡು ಜನ ಆದಿತ್ಯರೂ ಅರ್ಥಾತ್ ದೇವತೆಗಳೂ ತಮ್ಮ ವರ್ಚಸ್ಸಿನಿಂದ ಸೂರ್ಯಮಂಡಲಕ್ಕೆ ತೇಜಃಪೂರಣ ಗೈಯ್ಯುವರು. ಋಷಿಗಳು ಅವನನ್ನು ಸ್ತುತಿಸುವರು. ಗಂಧರ್ವನು ಹಾಡಿಹೊಗಳುವರು. ಅಪ್ಸರೆಯರು ಓಲೈಸುವರು. ಯಕ್ಷರಾಕ್ಷಸ ಸರ್ಪಗಳೂ ಅಂಗರಕ್ಷಕರಾಗಿ ಅವನನ್ನು ಅನುಸರಿಸುವರು.

ವಾಲಖಿಲ್ಯ ಎಂಬ ಋಷಿಗಳು ಉದಯಾಚಲದಿಂದ ಸೂರ್ಯನನ್ನು ಸುತ್ತುಗಟ್ಟಿ ಮುಂದೆ ಕರೆದೊಯ್ಯುವರು. ಹೀಗೆ ದೇವ, ಋಷಿ, ಸರ್ಪ, ಗಂಧರ್ವ, ಅಪ್ಸರ, ಯಕ್ಷ, ರಾಕ್ಷಸ ಈ ಏಳು ಗಣಗಳಲ್ಲಿಯ ಇಬ್ಬಿಬ್ಬರು ಸೇರಿ ಒಟ್ಟು ಹದಿನಾಲ್ಕು ಜನರು ಹದಿನಾಲ್ಕು ಮನ್ವಂತರಗಳ ಕಾಲ ಸೂರ್ಯನ ರಥದಲ್ಲಿ ನೆಲೆಸಿ ವರ್ಷದ ಆರುಋತುಗಳಲ್ಲಿ ಮೂರುಕಾಲಗಳಲ್ಲಿ ಬಿಸಿಲು ಮಳೆ ಮಂಜು ಸುರಿಯುವಂತೆ ಮಾಡುತ್ತಾರೆ. ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿ ತನ್ನ ಕಿರಣಗಳಿಂದ ಪಿತೃದೇವತೆ, ಮಾನವರನ್ನು ತೃಪ್ತಿಪಡಿಸುವ ಸೂರ್ಯನಲ್ಲಿ ಇರುವ ಅಮೃತವನ್ನು ದೇವತೆಗಳು ಪಾನಮಾಡುತ್ತಾರೆ. ಸೌಮ್ಯರೂ ಕಾವ್ಯರೂ ಮೊದಲಾದ ಪಿತೃಗಳೂ ರವಿಯ ಕಿರಣದಲ್ಲಿರುವ ಅಮೃತವನ್ನು ಕುಡಿಯುತ್ತಾರೆ. ಅವನ ಕಿರಣಗಳಿಂದ ಗಿಡ, ಬಳ್ಳಿ, ವನಸ್ಪತಿಗಳು ಬೆಳೆದು ಅವನು ಸುರಿಸುವ ಮಳೆಯಿಂದ ಅಭಿವೃದ್ಧಿ ಹೊಂದಿ ಮಾನವರಿಗೆ ಆಹಾರವನ್ನು ಒದಗಿಸುತ್ತವೆ.

ಸೂರ್ಯನ ಕುದುರೆಗಳ ಬಣ್ಣ ಹಸಿರು. ಏಳು ಕುದುರೆಗಳು, ಒಂಟಿಗಾಲಿ, ಅಮಿತಮಾರ್ಗ, ಇಷ್ಟಾದರೂ ಛಂದೋಮಯನಾದ ಆ ದಿವಾಕರನ ಅಶ್ವಗಳಿಗೆ ಬಳಲಿಕೆ ಬಾಯಾರಿಕೆ ಇಲ್ಲದ್ದರಿಂದ ವೇದಪಾರಾಯಣಮಾಡುತ್ತ ದ್ವೀಪದಿಂದ ದ್ವೀಪಾಂತರಕ್ಕೆ ಬಹು ಬೇಗ ಭಾಸ್ಕರನ ತೇರನ್ನು ಎಳೆದೊಯ್ಯಲು ಅವು ಸಮರ್ಥವಾಗಿವೆ. ಕಲ್ಪದ ಪ್ರಾರಂಭದಲ್ಲಿ ರವಿಯರಥಕ್ಕೆ ಈ ಸಪ್ತಾಶ್ವಗಳನ್ನು ಹೂಡಿದ ಬಳಿಕ ನೊಗ ಇಳಿಯುವದು ಪ್ರಳಯಕಾಲಕ್ಕೇ ಸರಿ. ಅಲ್ಲಿಯವರೆಗೆ ಬಿಡುವಿಲ್ಲದೇ ಅವು ಭಾನುರಥವನ್ನು ಎಳೆಯುತ್ತ ಓಡುವವು. ಇದರಂತೆ ಚಂದ್ರನೂ ನಕ್ಷತ್ರ ಮಾರ್ಗದಲ್ಲಿ ಸಂಚಾರಗೈಯುವನು. ಅವನ ತೇರಿಗೆ ಮೂರು ಚಕ್ರ, ಹತ್ತು ಕುದುರೆ. ಈ ರಥ, ಕುದುರೆ, ಸಾರಥಿ ಎಲ್ಲರೂ ಸಮುದ್ರದಲ್ಲಿ ಜನಿಸಿ ಬಂದವರು. ಚಂದ್ರಾಶ್ವಗಳ ವೇಗ. ಮನೋವೇಗ. ಯುಗದ ಆದಿಯಲ್ಲಿ ಒಮ್ಮೆ ರಥಕ್ಕೆ ಹೂಡಿದ ಬಳಿಕ ಪ್ರಳಯಕಾಲದವರೆಗೂ ಇವು ದಣಿಯದೇ ಚಂದ್ರರಥವನ್ನು ಜಗ್ಗುತ್ತಲೇ ಇರುವವು. ಅಜ, ತ್ರಿಪಥ, ವೃಷ, ವಾಜಿ, ನರ, ಹಯ, ಅಂಶುಮಂತ, ಸಪ್ತಧಾತು, ಹಂಸ, ವ್ಯೋಮ, ಮೃಗ ಎಂದು ಆ ದಶಾಶ್ವಗಳ ಹೆಸರು. ಶ್ವೇತ ಎಂಬ ನಾಗನು ಅವನ ಸಾರಥಿ.

ಶುಕ್ಲಪಕ್ಷದ ಪ್ರಾರಂಭದಲ್ಲಿ ಹಿಂಬದಿಯಲ್ಲಿ ಸೂರ್ಯನಿದ್ದುದರಿಂದ ಚಂದ್ರನ ಚಾರು ಶರೀರವು ದಿನದಿನಕ್ಕೆ ತುಂಬುತ್ತ ಬೆಳೆಯುವದು. ಅವನಲ್ಲಿ ತುಂಬಿದ ಅಮೃತವನ್ನು ದೇವತೆಗಳು ಪಾನಮಾಡುವದರಿಂದ ಅವನು ಕ್ರಮೇಣ

ಕ್ಷೀಣವಾಗುವನು. ಕೃಷ್ಣಪಕ್ಷದ ಹದಿನೈದುದಿನ ಸುರರ ಈ ಅಮೃತಪಾನದಿಂದ ಚಂದ್ರನು ಕ್ಷಯಿಸಿ ಹೋದಕೂಡಲೇ ಸೂರ್ಯನು ತನ್ನ ಸುಷಮ್ನಾ ಎಂಬ ಕಿರಣದಿಂದ ಚಂದ್ರನಲ್ಲಿ ಅಮೃತಪೂರಣ ಮಾಡುವನು. ಅದರಿಂದ ಮತ್ತೆ ಅವನು ಶುಕ್ಲಪಕ್ಷದಲ್ಲಿ ಅಭಿವೃದ್ಧಿಹೊಂದುತ್ತ ಹೋಗುವನು. ಪೌರ್ಣಿಮೆಯ ದಿನ ಚಂದ್ರನು ರಸಪೂರ್ಣನಾದ ಬಳಿಕ ಮೂವತ್ತಾರು ಸಾವಿರದ ಮುನ್ನೂರಾ ಮೂವತ್ತಮೂರುದೇವತೆಗಳು ಅವನಲ್ಲಿಯ ಅಮೃತಮಯವಾದ ಕಲೆಗಳನ್ನು ಭಕ್ಷಣಮಾಡಿ ಅಮಾವಾಸ್ಯೆಯ ದಿನ ಹೊರಟು ಹೋಗುತ್ತಾರೆ. ಅಂದು ಅವನಲ್ಲಿ ಅವಶಿಷ್ಟವಾದ ಎರಡುಕಲೆಗಳನ್ನು ಸೌಮ್ಯ, ಬರ್ಹಿಷದ, ಅಗ್ನಿಷ್ವಾತ್ತ ಕಾವ್ಯ ಮುಂತಾದ ಪಿತೃಗಳು ಭಕ್ಷಿಸಿ ಕೃಷ್ಣಪಕ್ಷದ ಬಳಿಕ ಹೊರಟು ಹೋಗುತ್ತಾರೆ. ಅಮಾವಾಸ್ಯೆಯ ದಿನ ಅವನಲ್ಲಿಯ ಹದಿನೈದನೆಯಕಲೆ ಕ್ಷೀಣವಾದ ಕೂಡಲೇ ಹದಿನಾರನೆಯ ಕಲೆಯು ಬೆಳೆಯತೊಡಗುವದು. ಹೀಗೆ ಸೂರ್ಯನಿಂದ ಕ್ಷಯ - ವೃದ್ಧಿಗಳು ಚಂದ್ರನಲ್ಲಿ ಆಗುವವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತೇಳನೆಯ ಅಧ್ಯಾಯ ಮುಗಿದುದು*

—o—

**ಸೂತ ಉವಾಚ**

**ತಾರಾಗ್ರಹಾಣಾಂ ವಕ್ಷ್ಯಾಮಿಸ್ವರ್ಭಾನೋಸ್ತುರಥಂಪುನಃ ।**
**ಅಥತೇಜೋಮಯಃ ಶುಭ್ರಃಸೋಮಪುತ್ರಸ್ಯ ವೈರಥಃ ॥**

**ಸೂತ** :- ಗ್ರಹ ನಕ್ಷತ್ರಗಳ ಹಾಗೂ ರಾಹುವಿನರಥವನ್ನು ಬಣ್ಣಿಸುವೆನು. ಚಂದ್ರನ ಮಗನಾದ ಬುಧನರಥವು ಬೆಳ್ಳಗಾಗಿ ತೇಜೋಮಯವಾಗಿದೆ. ಅದಕ್ಕೆ ಶ್ವೇತ, ಪಿಶಂಗ, ನೀಲ, ಶ್ಯಾಮ, ವಿಲೋಹಿತ, ಶ್ವೇತ, ಹರಿತ, ಪೃಕ್ಷಿತ, ವೃಷ್ಣಿ ಎಂಬ ಹತ್ತು ಹೊಂಬಣ್ಣದ ಕುದುರೆಗಳನ್ನು ಹೂಡಿದ್ದು ಅವು ವಾಯುವೇಗದಿಂದ ಅದನ್ನು ಜಗ್ಗುತ್ತವೆ. ಮಂಗಳನರಥಕ್ಕೆ ಎಂಟು ಚಿನ್ನದ ಗಾಲಿಗಳಿದ್ದು ಎಂಟು ಅಗ್ನಿಜನ್ಯವಾದ ಕೆಂಪು ಕುದುರೆಗಳು ಅವುಗಳನ್ನು ಎಳೆಯುತ್ತವೆ. ದೇವಗುರು ಬೃಹಸ್ಪತಿಯ ಬಂಗಾರದ ತೇರನ್ನೂ ಅಗ್ನಿಪುತ್ರರಾದ ಎಂಟು ಕುದುರೆಗಳು ಹೊತ್ತುಕೊಂಡು ಓಡುತ್ತವೆ. ದೈತ್ಯಗುರು ಶುಕ್ರನರಥವನ್ನೂ ಕೂಡ ಎಂಟುಕುದುರೆಗಳು ಎಳೆಯುತ್ತವೆ. ಶನಿಯ ತೇರು ಮಾತ್ರ ಉಕ್ಕಿನದಿದ್ದು ನಿಧಾನವಾಗಿ ಚಲಿಸುತ್ತದೆ. ರಾಹುವು ವಾಯುವೇಗದ ಎಂಟುಕಪ್ಪು ಕುದುರೆಹೂಡಿದ ರಥದಲ್ಲಿ ಕುಳಿತು ಸಂಚರಿಸುವನು. ಕೇತುವಿನ ರಥಕ್ಕೂ ಹೊಗೆಬಣ್ಣದ ಎಂಟುಕುದುರೆಗಳನ್ನು ಹೂಡಿದ್ದು ಅವು ನೋಡಲಿಕ್ಕೆ ಬಡಕಲಾಗಿದ್ದರೂ ಬಹಳ ಕ್ರೂರವಾಗಿವೆ.

ಈ ಎಲ್ಲ ಕುದುರೆಗಳೂ ವಾಯುಪಾಶದಿಂದ ಧ್ರುವಮಂಡಲಕ್ಕೆ ಬಂಧಿಸಲ್ಪಟ್ಟಿವೆ. ಈ ಕುದುರೆ ಹೂಡಿದ ತೇರುಗಳಲ್ಲಿ ಕುಳಿತು ಚಂದ್ರ, ಸೂರ್ಯ, ಶನಿ ಮುಂತಾದ ಗ್ರಹಮಂಡಲಗಳು ಧ್ರುವನನ್ನು ಬಳಸಿಕೊಂಡು ಅಂತರಿಕ್ಷದಲ್ಲಿ ತಿರುಗುತ್ತಿರುವವು. ಎಣ್ಣೆಯ ಗಾಣದ ಕೊಂತವು ತಾನು ತಿರುಗಿ ತನ್ನ ಎತ್ತನ್ನೂ ತಿರುಗಿಸುವಂತೆ ಧ್ರುವ ಮಂಡಲವು ತಾನು ನಿಧಾನವಾಗಿ ಪರಿಭ್ರಮಿಸಿ ತನ್ನ ಸುತ್ತು ವಾಯುಪಾಶದಿಂದ ಬದ್ಧವಾದ ಗ್ರಹನಕ್ಷತ್ರಗಳನ್ನೂ ತಿರುಗಿಸುವದು. ಗ್ರಹಗಳ ಪರಿಭ್ರಮಣಕ್ಕೆ ಕಾರಣವಾದುದರಿಂದ ಈ ವಾಯುವಿಗೆ **ಪ್ರವಹ** ಎಂದು ಹೆಸರು. ಜ್ಯೋತಿರ್ಮಂಡಲವೆಲ್ಲವೂ ಧ್ರುವನಲ್ಲಿ ಆಶ್ರಯ ಪಡೆದಿದೆ. ಧ್ರುವಮಂಡಲವು ನಕ್ಷತ್ರಮಯವಾದ ಶಿಂಶುಮಾರ ಚಕ್ರವನ್ನು ಆಶ್ರಯಿಸಿದೆ. ಅದೂ ಕೂಡ ಧ್ರುವ ರೂಪವೇ. ರಾತ್ರಿ ಕಾಲದಲ್ಲಿ ಶಿಂಶುಮಾರ ಚಕ್ರದದರ್ಶನಮಾಡಿದರೆ ಹಗಲು ಹೊತ್ತು ಮಾಡಿದ ಪಾಪಗಳೆಲ್ಲವೂ ಪರಿಹಾರವಾಗುವವು. ಈ ಶಿಂಶುಮಾರ ಚಕ್ರವು ಸಾಕ್ಷಾದ್ ಭಗವತ್ಸ್ವರೂಪವೇ ಆಗಿದೆ. ಅದರ ಗದ್ದದ ಮೇಲ್ಭಾಗದಲ್ಲಿ

ಉತ್ತಾನಪಾದನೂ, ಕೆಳಗದ್ದದಲ್ಲಿ ಯಜ್ಞಪುರುಷನೂ ನೆಲಿಸಿರುವರು. ಈ ಶಿಂಶುಮಾರದ ಹೃದಯವೇ ನಾರಾಯಣ. ಚರಣಾಗ್ರದಲ್ಲಿ ಅಶ್ವಿನೀದೇವತೆಗಳು, ಹಿಂದೊಡೆಗಳಲ್ಲಿ ವರುಣ ಆರ್ಯಮರೂ, ಶಿಶ್ನದಲ್ಲಿ ಸಂವತ್ಸರವೂ, ಅಪಾನದಲ್ಲಿ ಮಿತ್ರ, ಬಾಲದಲ್ಲಿ ಅಗ್ನಿ, ಮಹೇಂದ್ರ, ಮರೀಚಿ, ಕಶ್ಯಪ, ಧ್ರುವರೂ ಇರುವರು. ಈ ಶಿಂಶುಮಾರ ಎಂಬ ಜ್ಯೋತಿಸ್ತಂಭಕ್ಕೆ ಉದಯ, ಅಸ್ತ ಎಂಬುದಿಲ್ಲ. ಗ್ರಹನಕ್ಷತ್ರಗಳೆಲ್ಲ ಅದಕ್ಕೆ ಅಭಿಮುಖವಾಗಿ ಚಕ್ರಾಕಾರವಾಗಿ ಸುತ್ತುತ್ತಿರುತ್ತವೆ. ಧ್ರುವನು ಈ ಎಲ್ಲ ಜ್ಯೋತಿರ್ಮಾಲೆಯನ್ನು ತಿರುಗಿಸುತ್ತ ತಾನು ಕೆಳಗೆ ದೃಷ್ಟಿಯಿಟ್ಟು ಮೇರು ಪರ್ವತವನ್ನು ನಿರುಕಿಸುತ್ತ ಅದರ ಮೇಲೆ ಸುತ್ತುತ್ತಲಿರುವನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತೆಂಟನೆಯ ಅಧ್ಯಾಯ ಮುಗಿದುದು*



## ಸೂರ್ಯಕಿರಣಗಳ ಅದ್ಭುತ ವ್ಯಾಪಾರ — ಅಧ್ಯಾಯ - ೧೨೯

**ಋಷಿಯ ಉವಾಚಃ**

**''ಯದೇತದ್‌ಭವತಾ ಪ್ರೋಕ್ತಂ ಶ್ರುತಂಸರ್ವಮಶೇಷತಃ ॥**
**ಕಥಂದೇವಗೃಹಾಣಿ ಸ್ಯುಃಪುನರ್ಜ್ಯೋತೀಂಷಿವರ್ಣಾಯ ॥**

**ಋಷಿಗಳು** :- ಸೂತ, ಈವರೆಗೆ ನೀನು ಹೇಳಿದ್ದನ್ನೆಲ್ಲ ನಾವು ಕೇಳಿ ತಿಳಿದೆವು. ಗ್ರಹನಕ್ಷತ್ರಾದಿ ಜ್ಯೋತಿರ್ಮಂಡಲಗಳು ದೇವತೆಗಳ ನೆಲೆವೀಡಾದುದೆಂತು ? ಅದನ್ನು ನಮಗೆ ಮತ್ತೀಗ ಬಣ್ಣಿಸಿ ಬಿತ್ತರಿಸು.

**ಸೂತ** :- ಸೃಷ್ಟಿಯ ಪ್ರಾರಂಭದ ಪೂರ್ವದಲ್ಲಿ ಇನ್ನೂ ಅಲ್ಲಲ್ಲಿ ಹೆಪ್ಪುಗಟ್ಟದ ಕತ್ತಲೆ. ಪಂಚಮಹಾಭೂತದಲ್ಲಿ ತೇಜಸ್ಸೊಂದನ್ನು ಬಿಟ್ಟು ಮಿಕ್ಕನಾಕು ಭೂತಗಳು ಇದ್ದವು. ಹೊಸಸೃಷ್ಟಿಯನ್ನು ಮಾಡಬೇಕೆಂದು ಕಾರ್ಯೋನ್ಮುಖನಾದ ಬ್ರಹ್ಮದೇವನು ಜಗತ್ತಿಗೆಲ್ಲ ಯಥಾರ್ಥಜ್ಞಾನವನ್ನು ಉಂಟುಮಾಡಿಕೊಡಲು ಸೂರ್ಯರೂಪದಿಂದ ಸಂಚರಿಸಿ ಪ್ರಪಂಚಕ್ಕೆಲ್ಲ ಬೆಳಕನ್ನು ಬೀರಬೇಕೆಂದು ಸಂಕಲ್ಪಿಸಿದನು. ಜಗತ್ತಿಗೆ ಪ್ರಕಾಶವನ್ನು ನೀಡುವದಕ್ಕಾಗಿ ತನ್ನಲ್ಲಿರುವ ಅಗ್ನಿಯನ್ನು ಪಾರ್ಥಿವ ಅಥವಾ ಪಾವಿಕ, ಶುಚಿ ಮತ್ತು ಜಠರಾಗ್ನಿ ಎಂದು ಮೂರು ತೆರನಾಗಿ ವಿಂಗಡಿಸಿದನು. ಈ ಜಠರಾಗ್ನಿಗೆ ವೈದ್ಯುತ, ಸಾಮ್ಯ ಎಂದೂ ಕರೆಯುವರು. ಪಾವಕಾಗ್ನಿಯು ಉರಿ ಬೆಳಕಿನಿಂದ ಗೋಚರನಾಗುತ್ತಾನೆ. ಜಠರಾಗ್ನಿಗೆ ಉರಿ, ಬೆಳಕು ಯಾವದೂ ಇಲ್ಲ. ಅದಕ್ಕೆ ಇಂಧನವೂ ಬೇಕಿಲ್ಲ. ಕಟ್ಟಿಗೆ, ಕುಳ್ಳು ಮುಂತಾದ ಸೌದೆಯಿಂದ ಜ್ವಲಿಸುವ ಅಗ್ನಿಗೆ **ನಿರ್ಮಥ್ಯ** ಎಂದೂ ಕರೆಯುವರು. ಸೂರ್ಯನು ಅಸ್ತವಾದ ಬಳಿಕ ಅವನ ತೇಜಸ್ಸಿನ ಏಕಚತುರ್ಥಾಂಶಭಾಗವು ಅಗ್ನಿಯಲ್ಲಿ ಸಂಕ್ರಾಂತವಾಗುವದು. ಅದರಿಂದಲೇ ರಾತ್ರಿ, ಅಗ್ನಿಯು

ದೇದೀಪ್ಯಮಾನವಾಗುವದು. ಮರುದಿನ ಸೂರ್ಯ ಮತ್ತೆ ಉದಯಿಸಿದಾಗ ಅವನು ಅಗ್ನಿಯಲ್ಲಿ ಇರಿಸಿದ ತೇಜೋಭಾಗವು ಮರಳಿ ಅವನಲ್ಲಿಯೇ ಬಂದು ಸೇರುವದು. ಅದರಿಂದ ಹಗಲು ಹೊತ್ತು ಸೂರ್ಯನಲ್ಲಿ ಉಷ್ಣತೆ ಹೆಚ್ಚಾಗಿ ಸುಡತೊಡಗುವದು.

ಸೂರ್ಯನು ಹಗಲು ಹರಡಿದ ತನ್ನ ನಾಡಿಗಳಂತಿರುವ ಸಹಸ್ರ ಕಿರಣಗಳಿಂದ ನದಿ, ಸಮುದ್ರ, ಕೆರೆ, ಮಡು, ಬಾವಿ ಮುಂತಾದ ಜಲಾಶಯಗಳಲ್ಲಿರುವ ನೀರನ್ನು ಹೀರಿಕುಡಿಯುತ್ತಾನೆ. ಅವುಗಳಲ್ಲಿ ಚಂದನ, ಮೇಧ್ಯ, ಕೇತನ, ಚೇತನ, ಅಮೃತ, ಜೀವನ ಎಂದು ಮುಂತಾದ ಹೆಸರುಗಳುಳ್ಳ ನಾನೂರು ಕಿರಣಗಳು ಮಳೆಯನ್ನು ಸೃಷ್ಟಿಸುತ್ತವೆ. ಮುನ್ನೂರು ಕಿರಣಗಳು ಹಿಮವನ್ನು ನಿರ್ಮಿಸುತ್ತವೆ. ಶುಕ್ಲ ಎಂಬ ಹೆಸರಿನ ಮುನ್ನೂರು ಕಿರಣಗಳು ಹಿಮಯುತವಾದ ಕಾವನ್ನು ಉತ್ಪಾದಿಸಿ ಎಲ್ಲ ಪ್ರಾಣಿಗಳನ್ನೂ ರಕ್ಷಿಸುತ್ತವೆ. ವಸಂತ - ಗ್ರೀಷ್ಮ ಋತುಗಳಲ್ಲಿ ಶುಕ್ಲಾದಿ ಮುನ್ನೂರು ಉಷ್ಣ ಕಿರಣಗಳೂ, ವರ್ಷ ಶರದೃತುಗಳಲ್ಲಿ ಚಂದನಾದಿ ನಾನೂರು ವೃಷ್ಟಿಕಾರಕ ಕಿರಣಗಳೂ ಹೇಮಂತಶಿಶಿರಗಳಲ್ಲಿ ಮುನ್ನೂರು ಅವನ ತಂಗದಿರಗಳೂ ಬಿಸಿಲು, ಮಳೆ, ಛಳಿಗಳನ್ನು ಉಂಟುಮಾಡುವವು.

ಸೂರ್ಯನು ಅಮೃತದಿಂದ ದೇವತೆಗಳನ್ನು ಔಷಧಿ ವನಸ್ಪತಿ ಬೆಳೆಗಳಿಂದ ಮಾನವರನ್ನೂ, ಸುಧೆಯಿಂದ ಪಿತೃಗಳನ್ನೂ ತೃಪ್ತಿಪಡಿಸಿ ಪೋಷಿಸುತ್ತಾನೆ. ಹೀಗೆ ಅವನ ಸಾವಿರ ಕಿರಣಗಳೂ ಲೋಕೋಪಕಾರಕವಾಗಿವೆ. ಚಂದ್ರ, ಬುಧ, ಮಂಗಳ ಮುಂತಾದ ಗ್ರಹ ನಕ್ಷತ್ರಗಳೆಲ್ಲವೂ ಸೂರ್ಯನಿಂದಲೇ ಹುಟ್ಟಿವೆ. ಸೌರಮಂಡಲವೇ ಅವುಗಳ ನೆಲೆನಿಲುವುಗಳಿಗೆ ಆಧಾರವಾಗಿದೆ. ಸೂರ್ಯನ ಸುಷುಮ್ನಾಕಿರಣ ಚಂದ್ರನನ್ನು ಪೋಷಿಸಿದರೆ ಹರಿಕೇಶವು ನಕ್ಷತ್ರಗಳ ಹುಟ್ಟಿಗೆ ಕಾರಣವಾಗಿದೆ.

ಅವನ ದಕ್ಷಿಣ ಭಾಗದ ವಿಶ್ವಕರ್ಮ ಎಂಬ ಕಿರಣವು ಬುಧನನ್ನು ಪೋಷಿಸಿ ತೃಪ್ತಿಪಡಿಸುತ್ತದೆ. ಅವನ ವಿಶ್ವಾವಸು ಕಿರಣದಿಂದ ಶುಕ್ರಗ್ರಹದ ಜನನವಾಗಿದೆ. ಸಂವರ್ಧನದಿಂದ ಮಂಗಳ, ಅಶ್ವಭೂಕಿರಣದಿಂದ ಬೃಹಸ್ಪತಿ, ಸುರಾಟಾಕಿರಣದಿಂದ ಶನಿಯು ಜನಿಸಿ ಪೋಷಿಸಲ್ಪಟ್ಟಿದೆ. ಭೂಮಿ ಅಂತರಿಕ್ಷಗಳಲ್ಲಿರುವ ಎಲ್ಲ ಜ್ಯೋತಿಃ ಪಿಂಡಗಳಿಗೆ ತೇಜಸ್ಸನ್ನು ಕಿರಣಗಳ ಮೂಲಕ ಕೊಡುವದರಿಂದ ರವಿಗೆ ಆದಿತ್ಯ ಎಂದೂ, ಪ್ರಕಾಶವು ಅವನಿಂದ ಪ್ರವಿಸುವದರಿಂದ ಸವಿತೃ ಎಂದೂ ಹೆಸರು ಬಂದಿವೆ. **'ಚದಿ'** ಆಲ್ಹಾದನೇ ಎಂಬ ಧಾತುವಿನಿಂದ ಜಗತ್ತನ್ನು ಆಲ್ಹಾದಗೊಳಿಸುವವ ಎಂಬ ಅರ್ಥದಲ್ಲಿ ಚಂದ್ರ ಶಬ್ದವು ನಿಷ್ಪನ್ನವಾಗಿದೆ. ಈ ಲೋಕದಲ್ಲಿ ಮೃತರಾದ ಪುಣ್ಯಜೀವಿಗಳನ್ನು ಸಂಸಾರದಿಂದ ತಾರಣ ಮಾಡುವದರಿಂದ, ದಾಟಿಸುವದರಿಂದ ತಾರಕ ಎಂದು ಹೆಸರು ನಕ್ಷತ್ರಗಳಿಗೆ.

ಭಗವಂತನಾದ ಸೂರ್ಯನಿಗೆ **ವಿವಸ್ವಾನ್** ಎಂದೂ ಕರೆಯುತ್ತಾರೆ. ಅವನು ಆದಿತಿಯ ಎಂಟನೇ ಪುತ್ರ. ಚಂದ್ರ ಕಾಂತಿಮಂತ. ವಸುರೂಪ. ಶುಕ್ರನು ಅಸುರರ

ಪುರೋಹಿತನಾದುದರಿಂದ ಅಸುರನೆಂದೇ ತಿಳಿಯಬೇಕು. ಅಂಗಿರಸಪುತ್ರನಾದ ಬೃಹಸ್ಪತಿ ಸುರರಿಗೆ ಗುರು. ಚಂದ್ರನ ಮಗನಾದ ಬುಧ ಅತಿ ಸುಂದರ. ಸೂರ್ಯನ ಮಡದಿಯಾದ ಸಂಜ್ಞೆಯಲ್ಲಿ ಜನಿಸಿದ ಶನಿ ಮಾತ್ರ ಕುರೂಪಿ. ಅಂಗಾರಕ ನಿತ್ಯ ತರುಣ. ರಾಹು ಸಿಂಹಿಕೆಯ ಪುತ್ರನಾಗಿದ್ದು ಪ್ರಾಣಿಹಿಂಸಕ. ಅಶ್ವಿನೀ ಮೊದಲಾದ ನಕ್ಷತ್ರಗಳು ದಕ್ಷ ಪ್ರಜಾಪತಿಯ ಹೆಣ್ಣು ಮಕ್ಕಳಾಗಿದ್ದರಿಂದ ದಾಕ್ಷಾಯಣಿ ಎನಿಸುತ್ತವೆ. ಈ ನಕ್ಷತ್ರ ಮಂಡಲಗಳು ಕರ್ಮದೇವತೆಗಳಿಗೂ ಋಷಿಗಳಿಗೂ ಆವಾಸಸ್ಥಾನಗಳಾಗಿವೆ. ಇವು ದೇವಸ್ಥಾನ ಅಥವಾ ದೇವತಾಗ್ರಹಗಳೆಂದು ಪ್ರಸಿದ್ಧವಾಗಿವೆ. ಸಹಸ್ರಕಿರಣನಾದ ಸೂರ್ಯನಸ್ಥಾನ ಶುಭ್ರ. ಅಗ್ನಿಯಂತೆ ತೇಜಃಪೂರ್ಣ.'' ಚಂದ್ರನದು ಜಲಮಯ. ತೇಜೋಯುಕ್ತ. ಬುಧನಸ್ಥಾನ ರವಿರಶ್ಮಿರಂಜಿತ. ಶುಕ್ರನಿಗೆ ಹದಿನಾರು ಕಿರಣಗಳಿದ್ದು ಅವನ ಸ್ಥಾನ ಜಲಮಯ. ಅದರಂತೆ ಅಂಗಾರಕನ ಸ್ಥಾನವೂ ಹಳದಿ ಬಣ್ಣದ್ದಿದ್ದು ಅವನಿಗೆ ಹನ್ನೆರಡು ಕಿರಣಗಳಿವೆ. ಶನಿಯ ಸ್ಥಾನವು ಕಬ್ಬಿಣದಿಂದ ರಚಿತವಾಗಿದೆ. ಕಪ್ಪಗಿದೆ. ಎಂಟು ಕಿರಣಗಳುಂಟು. ರಾಹುವಿನ ಆ ಸ್ಥಾನವೂ ಕಬ್ಬಿಣದ್ದೇ. ಮೇಲೆ ಸಂತಾಪಕಾರಕ. ನಕ್ಷತ್ರಗಳು ಮಾತ್ರ ಪುಣ್ಯಶಾಲಿಗಳಿಗೆ ಆಸ್ಥಾನವಾಗಿದ್ದು ಬಂಗಾರದ ಕಿರಣಗಳಿಂದ ಕಂಗೊಳಿಸುತ್ತವೆ.

ಸೂರ್ಯಮಂಡಲದ ವ್ಯಾಸ ಒಂಬತ್ತು ಸಾವಿರ. ಸುತ್ತಳತೆ ಇಪ್ಪತ್ತೇಳು ಸಾವಿರ. ಇದರ ಎರಡು ಪಟ್ಟು ದೊಡ್ಡದು ಚಂದ್ರಗ್ರಹ. ಈ ಎಲ್ಲ ಗ್ರಹಗಳ ಮೇಲ್ಗಡೆ ನಕ್ಷತ್ರಮಂಡಲ. ಇವಲ್ಲದೇ ಅಸಂಖ್ಯ ಜ್ಯೋತಿರ್ಮಂಡಲಗಳೂ ಅಂತರಿಕ್ಷದಲ್ಲಿ ಮಿನುಗುತ್ತಿವೆ. ಈ ನಕ್ಷತ್ರಮಂಡಲದ ಕೆಳಗೆ ಅಂಧಕಾರಮಯವಾದ ಮೂರನೆಯ ಸ್ಥಾನದಲ್ಲಿ ರಾಹುವು ಭೂಮಿಯ ಛಾಯೆ ಪಡೆದು ಸಂಚರಿಸುತ್ತಾನೆ. ಪರ್ವಕಾಲಗಳಲ್ಲಿ ಸೂರ್ಯಚಂದ್ರರನ್ನು ಅವನು ಹಿಂಸೆಪಡಿಸುವದರಿಂದ ಅವನಿಗೆ **ಸ್ವರ್ಭಾನು** ಎಂದು ಹೆಸರು ಬಂದಿದೆ. ಶುಕ್ರನು ವ್ಯಾಸ ಹಾಗೂ ಸುತ್ತಳತೆಯಲ್ಲಿ ಚಂದ್ರನಿಗಿಂತ ಹದಿನಾರು ಪಟ್ಟು ದೊಡ್ಡವ. ಬೃಹಸ್ಪತಿ ಶುಕ್ರನಿಗಿಂತ ಕಾಲು ಪಾಲು ಕಡಿಮೆ. ಮಂಗಳ, ಕೇತು ಗ್ರಹಗಳೂ ಬೃಹಸ್ಪತಿಗಿಂತ ಕಾಲುಭಾಗ ಚಿಕ್ಕವು. ಇವರಿಬ್ಬರಿಗಿಂತ ಕಾಲುಭಾಗ ಚಿಕ್ಕವ ಬುಧ. ವಿಸ್ತಾರದಲ್ಲಿ ಒಂದಕ್ಕಿಂತ ಒಂದು ಚಿಕ್ಕದಾದ ನಕ್ಷತ್ರಗಳು ಬುಧನನ್ನು ಹೋಲುತ್ತವೆ. ನಕ್ಷತ್ರಗಳ ಒಂದೊಂದು ವಿಶಿಷ್ಟ ಗುಂಪಿಗೆ ನಕ್ಷತ್ರಪುಂಜ ಅಥವಾ ನಕ್ಷತ್ರಮಂಡಲ ಎಂದು ಹೆಸರು. ಇವು ನಾಲ್ಕು ಸಾವಿರದ ಐದುನೂರ ಏಳು ಇರುತ್ತವೆ. ಇವು ಎಲ್ಲ ಗ್ರಹಮಂಡಲಗಳ ಮೇಲೆ ಇರುತ್ತವೆ. ಶನಿ, ಗುರು, ಮಂಗಳ ಗ್ರಹಗಳ ಗತಿ ಮಂದ. ಚಂದ್ರ, ಸೂರ್ಯ, ಬುಧ ಶುಕ್ರರು ಶೀಘ್ರಗತಿ. ನಕ್ಷತ್ರಗಳಂತೆ ತಾರಕಗಳೂ ಕೋಟಿ ಕೋಟಿ.

ಸೂರ್ಯನು ಎಲ್ಲ ಗ್ರಹಗಳ ಕೆಳಗೆ ಸಂಚರಿಸುವನು. ಅವನ ಮೇಲೆ ಚಂದ್ರ ಅವನ ಮೇಲೆ ಕೆಲವು ನಕ್ಷತ್ರಮಂಡಲ. ಅವುಗಳ ಮೇಲೆ ಬುಧ. ಅದರ

ಮೇಲ್ಗಡೆ ಶುಕ್ರ. ಶುಕ್ರನ ಮೇಲೆ ಅಂಗಾರಕ. ತದುಪರಿ ಬೃಹಸ್ಪತಿ. ಅದಕ್ಕಿಂತ ಎತ್ತರದಲ್ಲಿ ಶನಿ. ಶನಿ ಮೇಲೆ ಸಪ್ತರ್ಷಿಮಂಡಲ. ಸಪ್ತರ್ಷಿ ಮಂಡಲದ ಮೇಲೆ ಧ್ರುವಮಂಡಲ. ಅದು ಸ್ವರ್ಗಲೋಕಕ್ಕೂ ಆಧಾರ. ಒಂದು ಗ್ರಹದಿಂದ ಇನ್ನೊಂದು ಗ್ರಹಕ್ಕೆ ಎರಡು ಲಕ್ಷ ಯೋಜನೆಗಳಷ್ಟು ಅಂತರ. ಇವಲ್ಲದೆ ಅಸಂಖ್ಯ ಅನಂತಗ್ರಹ ನಕ್ಷತ್ರಗಳು ಅಂತರಿಕ್ಷ ಲೋಕದಲ್ಲಿ ಗೋಚರಾಗೋಚರವಾಗಿ ಇರುತ್ತವೆ. ಈ ಎಲ್ಲ ಗ್ರಹ, ನಕ್ಷತ್ರಗಳಿಗೆ ಸೂರ್ಯನಿಂದ ಗತಿ. ಧ್ರುವ ಮಂಡಲದಿಂದ ಸ್ಥಿತಿ. ಸೂರ್ಯ. ಧ್ರುವಸಹಿತವಾಗಿ ಎಲ್ಲ ಜ್ಯೋತಿಃಪುಂಜಗಳ ಸ್ಥಿತಿ, ಗತಿ, ಸನ್ನಿವೇಶ, ರಚನಾ ವಿಶೇಷಗಳ ಹುಟ್ಟು, ಅಳಿವು, ಉಳಿವುಗಳಿಗೆಲ್ಲ ಪರಮಾತ್ಮನ ಇಚ್ಛೆಯೇ ಕಾರಣ. ಇವೆಲ್ಲವುಗಳ ನಿರ್ಮಾಪಕನೇ ಅವನು. ಅವನಿಂದ ಪ್ರೇರಿತನಾಗಿ ಬ್ರಹ್ಮದೇವನು ಸೃಷ್ಟಿಯ ಆದಿಕಾಲದಲ್ಲಿ ಇದನ್ನೆಲ್ಲ ನಿರ್ಮಾಣಗೈದಿದ್ದಾನೆ. ನಾನು ಈವರೆಗೆ ಹೇಳಿದ್ದು ಒಂದು ಲೋಕದ ಜ್ಯೋತಿರ್ಮಂಡಲದ ವಿಷಯ. ಇದಲ್ಲದೇ ಇನ್ನೂ ಎಷ್ಟೆಷ್ಟೋ ಬ್ರಹ್ಮಾಂಡಗಳೂ, ಜ್ಯೋತಿಃಪಿಂಡಗಳೂ, ತೇಜೋಗೋಲಕಗಳೂ ಪ್ರಕಾಶವರ್ಷಗಳೂ ಆ ಪರಮಾತ್ಮನ ಸೃಷ್ಟಿಯಲ್ಲಿ ಉಂಟು. ಅವುಗಳೆಲ್ಲವುಗಳ ಅಳತೆ, ಪರಿಧಿ, ಪರಿಮಾಣ, ಪ್ರಮಾಣ, ಸ್ಥಿತಿ, ಗತಿ ಮುಂತಾದುದನ್ನು ಇದಮಿತ್ಥಂ ಎಂದು ಖಚಿತವಾಗಿ ಹೇಳುವದು ಯಾರಿಗೂ ಶಕ್ಯವಲ್ಲ. ಸಾಮಾನ್ಯವಾಗಿ ಮಾನವರಿಗೆ ಮೇಲಿನ ಜ್ಯೋತಿಃಪಥವು ಅಗಮ್ಯ. ಅಲ್ಲಿಗೆ ಹೋಗಲಿಕ್ಕೂ ಶಕ್ಯವಿಲ್ಲ. ಈ ಕಣ್ಣಿನಿಂದ ಅದನ್ನು ನೋಡಲಿಕ್ಕೂ ಆಗುವದಿಲ್ಲ. ತಿಳಿಯಲಿಕ್ಕೂ ಆಗುವದಿಲ್ಲ.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಿಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ಬ್ರಹ್ಮನ ವರದಿಂದ
## ಮಯಾಸುರ ನಿರ್ಮಿಸಿದ ತ್ರಿಪುರದುರ್ಗ

ಅಧ್ಯಾಯ - ೧೩೦

**ಋಷಿಯ ಉವಾಚಃ**

**ಕಥಂಜಗಾಮ ಭಗವಾನ್‌ಪುರಾರಿತ್ವಂಮಹೇಶ್ವರಃ ।**
**ದದಾಹಚಕಥಂ ದೇವಸ್ತನ್ನೋಽವಿಸ್ತರತೋಽವದ ॥**

**ಋಷಿಗಳು** :- ಭಗವಂತನಾದ ಶಂಕರನಿಗೆ ಪುರಾರಿ ಎಂದು ಹೆಸರು ಬರಲು ಕಾರಣವೇನು ? ಆ ಪುರವನ್ನು ಮಹಾದೇವನು ಸುಟ್ಟುಹಾಕಿದ್ದು ಏಕೆ ? ಹೇಗೆ ? ಈ ತ್ರಿಪುರದಹನದ ವೃತ್ತಾಂತವನ್ನು ನಮಗೆ ವಿಸ್ತಾರಪೂರ್ವಕವಾಗಿ ತಿಳಿಸಿರಿ. ಮಯಾಸುರನ ಮಾಯೆಯಿಂದ ನಿರ್ಮಿತವಾದ ಅತ್ಯಂತ ದುರ್ಗಮ ಎನಿಸಿದ ತ್ರಿಪುರವನ್ನು ತ್ರಿಲೋಚನನು ಒಂದೇ ಒಂದು ಬಾಣದಿಂದ ಸುಟ್ಟು ಬೂದಿಮಾಡಿದನಂತೆ. ಆ ತ್ರಿಪುರದಹನದ ವೃತ್ತಾಂತವನ್ನು ಕೇಳಬೇಕೆಂಬ ಕುತೂಹಲ ನಮಗೆ. ದಯವಿಟ್ಟು ಬಿತ್ತರಿಸುವಿರಾ !

**ಸೂತ** :- ಪರಮೇಶ್ವರನು ಪುರವನ್ನು ದಹಿಸಿ ಮಾಯಾವಿಗಳಾದ ದಾನವರನ್ನು ಸಂಹರಿಸಿದ ಸಮಾಚಾರವನ್ನು ತಿಳಿಸುತ್ತೇನೆ ಕೇಳಿರಿ. ಮಹಾಸುರರಲ್ಲಿ ಮಯ ಬಹು ಮಾಯಾವಿ. ಮಾಯಾವಿಗಳಿಗೆಲ್ಲ ಅವನೇ ಮೂಲ. ಸುರಪುರದ ನಾಗರಿಕರೊಡನೆ ಅವನು ಹಣಾಹಣಿಯಾಗಿ ಹೋರಾಡಿದ. ಕೊನೆಗೆ ಪರಾಜಯ ಮಯಾಸುರನ ಪದದಲ್ಲಿ. ಬಳಿಕ ಮಯನ ಘೋರತಪಸ್ಸು, ವಿದ್ಯುನ್ಮಾಲಿ ತಾರಕ ಎಂಬ ದೈತ್ಯಧುರೀಣರಿಬ್ಬರೂ ಮಯನನ್ನು ಬೆಂಬಲಿಸಿದರು. ಅವರಿಬ್ಬರದೂ ಉಗ್ರತಪದ ಪ್ರಾರಂಭ. ಮೂವರು ಮಹಾದೈತ್ಯರ ಘೋರತಪ. ಮೂರು ಬೆಂಕಿಯ ಬೆಟ್ಟಗಳೇ ತಪಸ್ಸಿಗೆ ಕುಳಿತಂತೆ. ಘೋರ ದೈತ್ಯರ ತಪಸ್ಸು ಕೂಡ ಇವರಷ್ಟೇ ದಾರುಣ. ಚಳಿಗಾಲದಲ್ಲಿ ತಣ್ಣೀರಿನಲ್ಲಿ, ಮಳೆಗಾಲದಲ್ಲಿ ಬೆಟ್ಟದ ಕೋಡುಗಲ್ಲುಗಳ ಮೇಲೇ ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ, ಅವರ ತಪಸ್ಸು ಹೀಗೆ ಅತಿ ಉಗ್ರವಾಗಿ ಸಾಗಿತು. ಗಡ್ಡೆ ಗೆಣಸು,ಗಾಳಿ, ನೀರು, ಹೂ, ಹಣ್ಣುಗಳೇ ಆವರ ಆಹಾರ. ಇದರಿಂದ ಅವರ ತೂಕ ತಗ್ಗಿತು. ದೇಹ ಕುಗ್ಗಿತು. ಮಾಂಸಖಂಡ ಕರಗಿತು. ಮೈಸೊರಗಿತು. ಮೈತುಂಬ ಎದ್ದು ಕಾಣುವ ನರಗಳು. ಈ ಮೂವರ ಅತ್ಯುಗ್ರವಾದ ತಪಸ್ಸಿನ ತಾಮಸ ಜ್ವಾಲೆಗಳಿಂದ ಮೂರು ಲೋಕಗಳೇ ಸುಟ್ಟು ಹುರಪಳಿಸತೊಡಗಿದವು. ಲೋಕಬಂಧು ಆದ ಬ್ರಹ್ಮದೇವರು ಆಗ ಅವರಿಗೆ ಪ್ರತ್ಯಕ್ಷರಾದರು. ತಪಸ್ಸಿಗೆ ಮೆಚ್ಚಿ ಸಂತೋಷಭರಿತರಾಗಿ ಅವರಿಗೆ ಹೇಳಿದರು - '' ಮಕ್ಕಳೇ , ನಿಮ್ಮ ತಪಸ್ಸಿಗೆ ನಾನು ಪ್ರಸನ್ನನಾಗಿದ್ದೇನೆ. ನಿಮಗೆ ಬೇಡಿದ ವರವನ್ನು ಕೊಡಬೇಕೆಂದು ಇಲ್ಲಿಗೆ ಆಗಮಿಸಿದ್ದೇನೆ ' ವರವನ್ನು ಬೇಡಿಕೊಳ್ಳಿರಿ.''

ಆಗ ಮಯನು ಆನಂದದಿಂದ ಕಣ್ಣುಗಳನ್ನು ಅರಳಿಸಿ ಬ್ರಹ್ಮದೇವರಿಗೆ ಕೇಳಿಕೊಂಡನು. ''ದೇವನೇ, ಹಿಂದೆ ತಾರಕಾಮಯ ಸಂಗ್ರಾಮದಲ್ಲಿ ದೇವತೆಗಳು ನಮ್ಮನ್ನು ಅಸ್ತ್ರದಿಂದ ಹೊಡೆದರು. ಶಸ್ತ್ರದಿಂದ ಬಡೆದರು. ದ್ವೇಷದಿಂದ ನಮ್ಮನ್ನು ಗೆದ್ದು ಓಡಿಸಿದರು. ನಮಗೆ ಯಾರೂ ದಿಕ್ಕು ಇಲ್ಲ. ಸುಖವಿಲ್ಲ.ಅದಕ್ಕಾಗಿ ಭಕ್ತಿಯಿಂದ ನಿನ್ನನ್ನು ಕುರಿತು ತಪಂಗೈದಿದ್ದೇವೆ. ನಿನ್ನನ್ನೇ ಮೊರೆಹೊಕ್ಕಿದ್ದೇವೆ. ಈಗ ನಾವು ಒಂದು ದೃಢವಾದ ದುರ್ಗವನ್ನು ಮಾಡಬೇಕೆಂದು ಬಯಸಿದ್ದೇವೆ. ಆ ದುರ್ಗವು ಯಾವ ದೇವತೆಗಳಿಗೂ ಕೈವಶವಾಗಬಾರದು. ಯಾವ ಆಯುಧಗಳಿಗೂ ಹಣಿಯಬಾರದು. ಎಂಥ ಶೂರರಿಗೂ ಆಕ್ರಮಿಸಲು ಬರಬಾರದು. ಋಷಿಗಳ ಶಾಪಕ್ಕೆ ಅಥವಾ ದೇವತೆಗಳ ಕೋಪಕ್ಕೆ ಅದು ಈಡಾಗಬಾರದು. ಇಂಥ ದುರ್ಲಂಘ್ಯ ದುರ್ಗವನ್ನು ಆಶ್ರಯಿಸಿದ ನಾವು ಸಾವು ನೋವುಗಳನ್ನು ಮೀರಿ ಅಜರಾಮರರಾಗಿ ಉಳಿಯಬೇಕು.'' ದೈತ್ಯಶಿಲ್ಪಿಯಾದ ಮಯಾಸುರನ ಈ ಮಾತನ್ನು ಕೇಳಿ ಬ್ರಹ್ಮದೇವರಿಗೆ ನಗೆ ಬಂದಿತು. ಆಗ ಅವರು ನಸುನಕ್ಕು ಹೇಳಿದರು.

**ಸರ್ವಾಮರತ್ವಂ ನೈವಾಸ್ತಿ ಅಸತಸ್ತ್ವಸ್ಯ ದಾನವ ॥**

''ಓ ದಾನವಾ, ನಡವಳಿಕೆ ಕೆಟ್ಟವನಿಗೆ ಯಾರಿಂದಲೂ ಮರಣವೇ ಆಗಬಾರದೆಂಬುದು ನಡೆಯದ ಮಾತು. ಇದನ್ನು ತಿಳಿದು ನೀವು ದುರ್ಗವನ್ನು ಬೇಕಾದರೆ ಕಟ್ಟಿಕೊಳ್ಳಿರಿ.'' ಇದನ್ನು ಕೇಳಿ ಮಯಾಸುರನು ಕೈಮುಗಿದು ಕಮಲದ ಕೂಸಾದ ಆ ಚತುರ್ಮುಖನಿಗೆ ಇಂತು ಬಿನ್ನವಿಸಿಕೊಂಡನು. ''ಹಾಗಾದರೆ ನಮ್ಮನ್ನು ಶಂಕರನೇ ಸಂಹರಿಸಲಿ. ಅವನು ಕೂಡ ಒಮ್ಮೆ ಬಿಟ್ಟ ಒಂದೇ ಬಾಣದಿಂದ ಈ ದುರ್ಗವನ್ನು ಸುಡಲಿ. ಮಿಕ್ಕವರು ಯಾರೂ ನಮ್ಮನ್ನು ಕೊಲ್ಲದಿರಲಿ.'' ದೈತ್ಯರ ಈ ಬೇಡಿಕೆಗೆ ಬ್ರಹ್ಮದೇವರು ''ಹಾಗೆಯೇ ಆಗಲಿ'' ಎಂದು ಹೇಳಿ ಅಲ್ಲಿಯೇ ಅದೃಶ್ಯರಾದರು. ರಾಕ್ಷಸರಿಗೆ ಬ್ರಹ್ಮದೇವರು ಬಂದದ್ದು, ವರ ಕೊಟ್ಟಿದ್ದು ಅಲ್ಲಿಯೇ ಕನಸು ಕಂಡಂತಾಯಿತು.

ಪಿತಾಮಹನು ಹೋದ ಬಳಿಕ ಆ ಮೂವರು ದೈತ್ಯರ ಮೈಯಲ್ಲಿ ಭಾಸ್ಕರನ ಬೆಳಕು, ಬೆಂಕಿಯ ಹೊಳಪು ಎರಡೂ ಮೇಳವಿಸಿದಂತಾಯಿತು. ಬ್ರಹ್ಮದೇವರ ವರದ ಮಹಿಮೆಯಿಂದ ಅವರ ಮೈಯೆಲ್ಲ ಮಿಂಚುಗೂಡಿತ್ತು. ಮೈತುಂಬ ಮಹಾಬಲವು ತುಳುಕಿದಂತಾಗಿತ್ತು. ಅವರಲ್ಲಿ ಮಯ ಬಹಳ ಬುದ್ಧಿವಂತ. ಪಿತಾಮಹನಿಂದ ವರಪಡೆದು ಅವನು ಕೂಡಲೇ ಕಾರ್ಯಪ್ರವೃತ್ತನಾದ. ತಾನು ರಚಿಸಿದ ಆ ಪುರದಲ್ಲಿ ಬೇರಾರಿಗೂ ಪ್ರವೇಶವೇ ಆಗದಂತೆ ದುರ್ಗಮವಾಗಿ ರಚಿಸಬೇಕೆಂಬುದೇ ಅವನ ಹೆಬ್ಬಯಕೆ. ಇದಕ್ಕೆ ತಾರಕ, ವಿದ್ಯುನ್ಮಾಲಿ ದೈತ್ಯದ್ವಯರದೂ ಸಕ್ರಿಯ ಬೆಂಬಲ. ಕೇಳುವದೇನು ? ಅತ್ಯಲ್ಪಕಾಲದಲ್ಲಿಯೇ ಸಿದ್ಧವಾಯಿತು ತ್ರಿಪುರ. ಅವರು ಮೂವರೂ ಕಣ್ಣಲ್ಲಿಎಣ್ಣೆ ಹಾಕಿಕೊಂಡು ಅದನ್ನು ರಕ್ಷಿಸುತ್ತಿದ್ದರು. ಇಂಥ ದುರ್ಗಮತಮವಾದ ತ್ರಿಪುರದುರ್ಗವನ್ನು ಸರ್ವಸಮರ್ಥನಾದ ಮುಕ್ಕಣ್ಣನ ಹೊರತು ಯಾರು ನಾಶಪಡಿಸಬಲ್ಲರು ?

ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಮೂವತ್ತನೆಯ ಅಧ್ಯಾಯ ಮುಗಿದುದು

## ಅಧ್ಯಾಯ - ೧೩೧

## ಭೂಮಿ, ಆಕಾಶ, ಅಂತರಿಕ್ಷ ಮೂರು ಕಡೆ ಮಯಾಸುರನಿಂದ ಕಬ್ಬಿಣ, ಬೆಳ್ಳಿ, ಬಂಗಾರದ ಮೂರುನಗರಗಳ ತ್ರಿಪುರನಿರ್ಮಾಣ

**ಸೂತ ಉವಾಚ**

**ಇತಿ ಚಿಂತ್ಯಮಯೋ ದೈತ್ಯಃ ದಿವ್ಯೋಪಾಯಪ್ರಭಾವಜಮ್ ।**
**ಚಕಾರತ್ರಿಪುರಂ ಚಿತ್ರಂಮನಃ ಸಂಚಾರಚಾರಿತಮ್ ॥**

**ಸೂತ** :- ದೈತ್ಯರ ವಿಶ್ವಕರ್ಮ ಎನಿಸಿದ ಮಯನ ಹಂಚಿಕೆಗಳು ಬಹಳ. ಅವನು ತನ್ನ ತಪಃ ಪ್ರಭಾವದಿಂದ ಆ ಮಹಾನಗರವನ್ನು ನಿರ್ಮಿಸಲು ಅನೇಕ ದಿವ್ಯೋಪಾಯಗಳನ್ನು ವಿಚಾರಿಸಿ ಕಂಡುಹಿಡಿದ. ಅವನ ಚಿಂತನ ಪ್ರಭಾವದಿಂದ ಹಾಗೂ ದಿವ್ಯ ಸಂಕಲ್ಪದಿಂದ ತ್ರಿಪುರವು ಬಹುಬೇಗ ರೂಪುಗೊಂಡಿತು. ಇದರ ರಚನೆ ಬಹು ವಿಚಿತ್ರ. ಭೂಮಿ ಆಕಾಶ ಅಂತರಿಕ್ಷ ಮೂರು ಕಡೆ ಮೂರು ವಿಧ, ನೆಲದ ಮೇಲೆ ಕಬ್ಬಿಣದ್ದು. ಆಗಸದಲ್ಲಿ ಬೆಳ್ಳಿಯದು. ಅಂತರಿಕ್ಷದಲ್ಲಿ .ಚಿನ್ನದ್ದು. ಹೀಗೇ ಮೂರು ನಗರಗಳು ಕೂಡಿ ತ್ರಿಪುರ. ಪ್ರತಿಯೊಂದು ನಗರವೂ ನೂರು ಯೋಜನ ಉದ್ದ. ಅಷ್ಟೇ ಅಗಲ. ಪುಷ್ಯನಕ್ಷತ್ರದಲ್ಲಿ ಅವುಗಳ ರಚನೆ ಆದುದರಿಂದ ಪುಷ್ಯಯೋಗವಿದ್ದಾಗ ಅವು ಮೂರೂ ಕೂಡುವುವು.

ಪ್ರತಿಯೊಂದು ನಗರದ ಮೇಲೆ ಬುರುಜು, ಕೋಟೆಕೊತ್ತಳ, ಫಿರಂಗಿ, ಚಕ್ರಶೂಲ, ಕಂಪನ ಮುಂತಾದ ಆಯುಧಗಳು. ಅಲ್ಲಲ್ಲಿ ಗಗನಚುಂಬಿತ ಗೋಪುರ. ಮುಗಿಲಟ್ಟಳೆಯ ಬಾಗಿಲು. ಒಂದೆಡೆ ಮನೆ-ಮಠಗಳ ಸಾಲು. ಪ್ರಶಸ್ತವಾದ ರಾಜಬೀದಿಗಳು. ಇನ್ನೊಂದೆಡೆ ದೇವಸ್ಥಾನ, ಉದ್ಯಾನಗಳು, ಅದೋ ಅಲ್ಲಿ ನಾಲ್ಕು ಬೀದಿಗಳು ಸಂಧಿಸುವ ಚೌಕು. ನಗರದ ನಡುನಡುವೆ ತಾವರೆಗಳು ತುಂಬಿದ ಸರೋವರಗಳು,ಚಿಕ್ಕ ದೊಡ್ಡ ಉಪವನಗಳು. ಸಭಾಸ್ಥಾನಗಳು. ಆ ಕಡೆ ಅಂತಃಪುರ. ಈ ಕಡೆ ಅರಮನೆ, ಆಚೆಗೆ ಶಿವಮಂದಿರ ಮುಂದೇನೇ ಹೊಕ್ಕರಣಿ. ಅದರ ತೀರದಲ್ಲಿ ಸುಂದರವಾದ ನಂದನವನ.

ಹೀಗೆ ಕಟ್ಟಿದ ಉಕ್ಕಿನ ಪಟ್ಟಣಕ್ಕೆ ತಾರಕ ಅಧಿಪತಿ. ಬೆಳ್ಳಿಯದಕ್ಕೆ ವಿದ್ಯುನ್ಮಾಲಿ. ಬಂಗಾರದ ನಗರಕ್ಕೆ ಸ್ವಯಂ ಮಯಾಸುರನೇ ಅಧಿಪತಿ. ಈ ಮೂರೂ ನಗರಗಳು ಅಸಂಖ್ಯ ರತ್ನರಾಶಿ ನಿಬಿಡವಾಗಿವೆ. ಪ್ರತಿಯೊಂದರಲ್ಲಿಯೂ ಏಳು-ಎಂಟು ಅಂತಸ್ತಿನ ದೊಡ್ಡ ದೊಡ್ಡ ಕಟ್ಟಡಗಳು, ಪದ್ಮಸರೋವರಗಳು, ಅನೇಕಾನೇಕ ಬಾವುಟಗಳು, ಹಾರಹೊತ್ತು ನಿಂತ ಅಂತಸ್ತಿನ ಭವ್ಯಭವನಗಳ ಮೇಲೆ ಹಾರಾಡುತ್ತಲಿವೆ. ಆ ಭವನಗಳ ಮುಂದೆ ಇಂದ್ರಚಾಪದ ತೋರಣ, ಜೋತಾಡುವ ಮುತ್ತಿನಕುಚ್ಚ,

ಹೂವಿನ ಗುಚ್ಛ. ಮಲ್ಲಿಗೆ ಜಾಜಿಮಂಟಪಗಳು, ಯಜ್ಞಮಂಟಪಗಳು, ಹೋಮಧೂಮ, ಹೋದಲ್ಲೆಲ್ಲ ಪರಿಮಳದ ದ್ರವ್ಯಗಳ ಕಂಪಿಂಪು. ಅಲ್ಲಲ್ಲಿ ಪುಷ್ಕರಣಿ, ಕೈದೋಟ, ಕನ್ಯಾಂತಃಪುರ, ವಿಹಾರಸ್ಥಳ ಮುಂತಾದ ರಮಣೀಯ ಸ್ಥಳಗಳಿಂದ ಆ ಮೂರೂ ನಗರಗಳು ದೇವಯೋಗ್ಯವಾಗಿದ್ದರೂ ದೈತ್ಯಭೋಗ್ಯ ವಾಗಿದ್ದವು. ವೀರನೂ ಶಿಲ್ಪಶಾಸ್ತ್ರಚತುರನೂ ಆದ ಮಯಾಸುರನು ಬ್ರಹ್ಮದೇವರ ವರದ ಬಲದಿಂದ ಅತ್ಯದ್ಭುತವೂ ರಮ್ಯಾಗಮ್ಯವೂ ಆದ ಮೂರು ಮಹಾನಗರಗಳನ್ನು ನಿರ್ಮಿಸಿರುವನು ಎಂದು ಹೇಳಿ ಪ್ರಪಂಚದಲ್ಲಿರುವ ಎಲ್ಲ ಶೂರವೀರಸಾಹಸಿದೈತ್ಯರು ಹಿಂಡುಹಿಂಡಾಗಿ ಬಂದು ಅಲ್ಲಿ ಆ ನಗರಗಳಲ್ಲಿ ನೆಲೆಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತೊಂದನೆಯ ಅಧ್ಯಾಯ ಮುಗಿದುದು*



## ಅನಾಚಾರ, ಪಾಪಾಚಾರಗಳಿಂದ, ದೈತ್ಯರ ಶಕ್ತಿ ಕ್ಷೀಣ | ಅಧ್ಯಾಯ - ೧೩೨

**ಸೂತ ಉವಾಚ**

"ನಿರ್ಮಿತೇ ತ್ರಿಪುರೇದುರ್ಗೇಮಯೇನಾಸುರಶಿಲ್ಪಿನಾ ।
ತದ್ದುರ್ಗಂದುರ್ಗತಾಂಪ್ರಾಪಬದ್ಧವೈರೈಃ ಸುರಾಸುರೈಃ ॥

**ಸೂತ :-** ದೈತ್ಯಶಿಲ್ಪಿಯಾದ ಮಯಾಸುರನು ನಿರ್ಮಿಸಿದ ತ್ರಿಪುರದುರ್ಗವು ನಿಜವಾಗಿಯೂ ದುರ್ಗಮವೇ ಆಗಿದ್ದಿತು. ಮಯನ ಶತ್ರುಗಳಾದ ದೇವತೆಗಳಿಗಾಗಲಿ ದೈತ್ಯರಿಗೇ ಆಗಲಿ ಅಲ್ಲಿ ಪ್ರವೇಶಿಸುವದು ಅತ್ಯಶಕ್ಯವಾಗಿದ್ದಿತು. ಅಲ್ಲಿರುವ ದೈತ್ಯರೆಲ್ಲ ಯಮ ಸದೃಶರು, ಮಹಾಕ್ರೂರಕರ್ಮಿಗಳು. ಮಯನ ಅಪ್ಪಣೆಯಿಂದಲೇ ಅವರೆಲ್ಲರೂ ಮಡದಿ ಮಕ್ಕಳೊಡನೆ ಮೊಸಳೆ ಸಾಗರದಲ್ಲಿ ಹೊಕ್ಕಂತೆ ಅಲ್ಲಿಗೆ ಬಂದು ನೆಲಸಿದ್ದರು. ಅವರನ್ನು ನೋಡಿದರೆ ಕ್ರೌರ್ಯ, ಕೋಪ, ಕಾಪಟ್ಯಗಳೇ ಮೈದಾಳಿ ಬಂದಂತೆ ಎನಿಸುತ್ತಿತ್ತು. ಇಂಥ ದುರುಳ ದಾರುಣ ದೇವವೈರಿಗಳ ದೈತ್ಯಬಳಗವೆಲ್ಲ ಕೋಟಿಗಟ್ಲೆ ಬಂದು ಆ ತ್ರಿಪುರ ನಗರಗಳಲ್ಲಿ ನೆಲೆ ನಿಂತಿತು. ಸುತಲ, ಪಾತಾಲಾದಿ ಅಧೋಲೋಕಗಳಿಂದಲೂ ಅಸಂಖ್ಯ ದೈತ್ಯರು ಬಂದು ಅಲ್ಲಿ ವಾಸ್ತವ್ಯ ಹೂಡಿದರು. ಹೀಗೆ ಕಿಕ್ಕಿರಿದು ತುಂಬಿದ ಅಪಾರ ದಾನವರ ದಟ್ಟಣೆಯಿಂದ ಆ ದೈತ್ಯ ಪಟ್ಟಣಗಳು ತುಂಬಿತುಳುಕಿದವು. ಅಲ್ಲಿರುವ ದೈತ್ಯರ ಇಷ್ಟಾರ್ಥಗಳನ್ನೆಲ್ಲ ಮಯನು ತನ್ನ ಮಾಯಾಬಲದಿಂದ ಈಡೇರಿಸುತ್ತಿದ್ದನು. ಅವರೆಲ್ಲರೂ ತಮ್ಮ ರಮಣೀಮಣಿಯರೊಂದಿಗೆ ಉದ್ಯಾನ, ಚಂದ್ರಶಾಲೆ, ಸರಸ್ತೀರ, ಲತಾಕುಂಜಗಳಲ್ಲಿ ಮಧುಚಂದ್ರ ವಿಹಾರಗೈಯುತ್ತಿದ್ದರು. ರಾಗ, ಭೋಗ, ಅನುರಾಗ, ಬೇಟ, ಕೂಟ, ಕಾಮಕೇಳಿವಿಲಾಸಗಳಲ್ಲಿ ಅಲ್ಲಿಯ ಗಂಡು ಹೆಣ್ಣು ಸದಾ ನಿರತರು. ಅಲ್ಲಿ ಅವರಿಗೆ ನಿತ್ಯಾನಂದ. ಸದಾಸುರತ. ನಿತ್ಯೋತ್ಸವ. ಹೀಗೆ ಧರ್ಮವಿರುದ್ಧವಾಗಿ ದೇವಬ್ರಾಹ್ಮಣರಿಗೆ ಅವಿಧೇಯರಾಗಿ ಅಲ್ಲಿ ದೈತ್ಯರು ಸುಖದಿಂದ ಕೆಲಕಾಲ ವಾಸಿಸಿದರು.

ಕೆಲ ದಿನಗಳ ಬಳಿಕ ಅವರಲ್ಲಿ ಕಾಮುಕತೆ ಮತ್ತು ಕೇವಲ ಲೌಕಿಕ ಸುಖಾಭಿಲಾಷೆಗಳು ಅತ್ಯುತ್ಕಟವಾದವು. ಅದರಿಂದ ಅವರಲ್ಲಿ ಧರ್ಮ ಬುದ್ಧಿ ಪೂರ್ತಿ ಮಾಯವಾಯಿತು. ದೇವ ಬ್ರಾಹ್ಮಣ ದ್ವೇಷವು ಉಲ್ಬಣಿಸಿತು. ಕೋಪ, ಅಸೂಯೆ, ಸ್ವಾರ್ಥಗಳು ಅವರಲ್ಲಿ ತುಂಬಿ ತುಳುಕಿದವು. ಆಗ ಅಲ್ಲಿ ಅಲಕ್ಷ್ಮಿಯ ಪ್ರವೇಶವಾಯಿತು. ಹಸಿವು, ಬಾಯಾರಿಕೆ, ಅಸೂಯೆ, ಕಲಿ, ಕಲಹ, ಲೋಭ, ಕಾರ್ಪಣ್ಯ ಎಲ್ಲವೂ ಒಮ್ಮೆಲೇ ರೋಗಗಳಂತೆ ತ್ರಿಪುರ ಪಟ್ಟಣದಲ್ಲಿ ಪ್ರವೇಶಿಸಿದವು. ಈ ಕಲಿ ಪ್ರವೇಶದ ದೃಶ್ಯವನ್ನು ಮಹಾಸುರನು ಒಂದು ರಾತ್ರಿ ತನ್ನ ಕನಸಿನಲ್ಲಿ ಕಂಡನು. ಮರುದಿನ ಅವನು ಎಲ್ಲ ದೈತ್ಯರ ಒಂದು ವಿರಾಟ್ ಸಭೆಯನ್ನು ಕರೆದು ಅವರಿಗೆ ತನ್ನ ಕನಸನ್ನು ವಿವರಿಸಿದನು.

''ನಾನು ಕಂಡ ಕನಸು ಅತೀಭಯಂಕರ. ಕನಸಿನಲ್ಲಿ ನಾಕು ಹೆಂಗಸರು. ಮೂರು ಗಂಡಸರು. ಏಳೂ ಜನರ ಮೋರೆಗಳು ಬೆಂಕಿಯಂತೆ ಉರಿಮುಖ. ಅವರೆಲ್ಲರೂ ನಮ್ಮ ದುರ್ಗವನ್ನು ಧ್ವಂಸಮಾಡುತ್ತ ಈ ನಮ್ಮ ನಗರದಲ್ಲಿ ಒಳಹೊಕ್ಕರು. ಕಗ್ಗತ್ತಲೆಯಲ್ಲಿ ಈ ತ್ರಿಪುರ ನಗರವೆಲ್ಲವೂ ಸಮುದ್ರದ ನೀರಿನಲ್ಲಿ ಮುಳುಗಿ ಹೋಗಿತ್ತು. ಮತ್ತೊಂದು ಚಣದಲ್ಲಿ ಒಳ್ಳೇ ಚೆಲುವೆಯಾದ ಹರೆಯದ ಹೆಣ್ಣು ಬೆತ್ತಲೆ ಮೈಯಿಂದ ಗೂಬೆಯ ಮೇಲೆ ಕುಳಿತು ನಡೆದಿದ್ದಳು. ಮೂರು ಕಣ್ಣು ನಾಕುಕಾಲುಗಳ ಮಾನವನೊಬ್ಬನು ಕತ್ತೆಯ ಮೇಲೆ ಸವಾರಿ ಹೊರಟು ಆ ಬರಿಮೈ ಬಾಲೆಯನ್ನು ನೂಕುತ್ತಿದ್ದ. ನನ್ನನ್ನೂ ಅವನೇ ಎಬ್ಬಿಸಿದ '' ಇಂಥ ಘೋರ ಕನಸು ನಮ್ಮ ದಾನವ ಕುಲಕ್ಕೆ ಏನು ಕೇಡು ತರುವದೋ ಯಾರಿಗೆ ಗೊತ್ತು ! ಭವಿಷ್ಯದಲ್ಲಿ ನಮಗೆಲ್ಲ ಭಾರೀ ಅನಿಷ್ಟಕಾದಿದೆ'' ಎನಿಸುವದು. ನಾನು ನಿಮಗೆ ಹಿತಕಾರಿಯಾದ ದೊರೆಯೆಂದು ವಿಶ್ವಾಸವಿದ್ದರೆ ನನ್ನ ಮಾತನ್ನು ಚಿತ್ತವಿಟ್ಟು ಕೇಳಿರಿ.

ಕಾಮಕ್ರೋಧಗಳನ್ನು ಬಿಡಿರಿ. ಅಸೂಯೆಆಸೆಗಳನ್ನು ತ್ಯಜಿಸಿರಿ. ಸತ್ಯವನ್ನು ನುಡಿಯಿರಿ. ಧರ್ಮದದಾರಿ ಹಿಡಿಯಿರಿ. ಶಾಂತಿಕರ್ಮಗಳನ್ನು ನೆರವೇರಿಸಿ. ಇಂದ್ರಿಯ ಗಳನ್ನು ಬಿಗಿಹಿಡಿಯಿರಿ. ಪರಮೇಶ್ವರನನ್ನು ಪೂಜಿಸಿರಿ. ಇದರಿಂದ ಈ ದುಃಸ್ವಪ್ನ ದಿಂದಾಗುವ ದುಷ್ಪರಿಣಾಮ ದುಷ್ಫಲಗಳು, ತಪ್ಪಬಹುದು. ಪರಮೇಶ್ವರನೂ ನಮ್ಮ ಮೇಲೆ ಕೋಪಿಸಿ ಕೊಳ್ಳುವದಿಲ್ಲ.'' ಆದರೆ ಮಯನ ಮಾತು ವಿನಾಶಕಾಲ ಒದಗಿ ಬಂದಿದ್ದ ಆ ದೈತ್ಯರಿಗೆ ಹಿಡಿಸಲಿಲ್ಲ. ಮೊದಲಿಗಿಂತ ಹೆಚ್ಚಾಗಿ ಅವರು ಅಕಾರ್ಯಗಳಲ್ಲಿ ಪ್ರವೃತ್ತರಾದರು. ಮಾತುಮಾತಿಗೆ ಸಿಟ್ಟು, ಬ್ರಾಹ್ಮಣರನ್ನು ಕಂಡರೆ ದ್ವೇಷ, ಧರ್ಮದಲ್ಲಿ ತಿರಸ್ಕಾರ. ಗುರುಗಳ ಬಗೆಗೆ ಅನಾದರ, ಕಂಡಕಂಡಹೆಂಗಸರೊಡನೆ ಕಾಮ ಕೇಳಿ. ಅಡಿಗಡಿಗೆ ಅಹಂಕಾರದ ಉದ್ಗಾರ, ಹಿರಿಯರ ಬಗ್ಗೆ ತಾತ್ಸಾರ.

ಇವಲ್ಲದೇ ಶಾಸ್ತ್ರ ನಿಷಿದ್ಧ ಎಂದರೆ ಅಕಾರ್ಯಮಾಡುವಲ್ಲಿ ಅವರಿಗೆ ಭಾರೀ ಉತ್ಸಾಹ ಮೂತ್ರಕ್ಕೆ ಹೋಗಿ ಬಂದ ಬಳಿಕ ಕಾಲು ತೊಳೆಯುವಂತಿಲ್ಲ. ರಾತ್ರಿ ಮೊಸರು ತಿನ್ನುವದು. ಎಂಜಲು ಕೈತೊಳೆಯದೇ ಮಲಗುವದು. ಸ್ತ್ರೀಸಂಗಮಾಡಿದ ಬಳಿಕ ಇಂದ್ರಿಯ ಶುದ್ಧಿ ಮಾಡಕೊಳ್ಳವದಿಲ್ಲ. ಸ್ನಾನಮಾಡಿ ಮಡಿಯಿಂದ ಇದ್ದವರನ್ನು ಮೈಲಿಗೆ ಮಾಡುವದು, ಯಾರಿಗೂ ಕಾಣದಂತೆ ಅನ್ಯಾಯದ ಹಾಗೂ

ಪಾಪದ ಕಾರ್ಯ ಮಾಡುವದು. ತಪಸ್ವಿಗಳಿಗೆ ತೊಂದರೆ ಕೊಡುವದು, ಹೀಗೆ ಅನೇಕ ಅನನ್ವಿತಪಾಪದಕೆಲಸಗಳಿಂದ ಆ ತ್ರಿಪುರದ ದಾನವರ ಪುಣ್ಯವೆಲ್ಲ ಕ್ಷೀಣವಾಯಿತು. ಅಲಕ್ಷ್ಮಿಯು ಮೂರು ಪುರಗಳನ್ನು ತುಂಬ ವ್ಯಾಪಿಸಿದಳು. ಅವರ ಕಾರ್ಯ ಹೆಚ್ಚಾದಂತೆ ಅವರು ಕಂಡಲ್ಲೆಲ್ಲ ಬ್ರಾಹ್ಮಣರನ್ನು ತುಂಡರಿಸಿದರು. ನಂದನ, ವೈಭ್ರಾಜ, ಚೈತ್ರರಥ, ಅಶೋಕ, ಸರ್ವರ್ತುಕ ಮುಂತಾದ ದಿವ್ಯ ಉದ್ಯಾನಗಳನ್ನೆಲ್ಲ ಹಾಳುಗೈದರು. ದೇವಸ್ಥಾನಗಳನ್ನೂ ಧ್ವಂಸಗೊಳಿಸಿದರು. ಪೂಜಾರಿಗಳನ್ನೂ ಬ್ರಾಹ್ಮಣರನ್ನೂ ಕೊಂದುಹಾಕಿದರು. ಮಿಡತೆಗಳು ಸಸ್ಯಗಳನ್ನು ಹಾಳು ಮಾಡುವಂತೆ ಪ್ರಜಾಜನರನೆಲ್ಲ ಪೀಡಿಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತೆರಡನೆಯ ಅಧ್ಯಾಯ ಮುಗಿದುದು*



## ತ್ರಿಪುರಾಸುರರಿಂದ ಸಂತ್ರಸ್ತರಾದ, ದೇವತೆಗಳೂ ಬ್ರಹ್ಮದೇವರೂ ಶಿವನನ್ನು ಮೂರುಹೊತ್ತು ಸ್ತುತಿಸಿದ್ದು

**ಅಧ್ಯಾಯ - ೧೩೩**

**ಸೂತ ಉವಾಚ**

**''ಅಶೀಲೇಷುಪ್ರದುಷ್ಟೇಷುದಾನವೇಷುದುರಾತ್ಮಸು ।**
**ಲೋಕೇಷೂತ್ಸಾದ್ಯಮಾನೇಷು ತಪೋಧನವನೇಷುಚ ॥**

**ಸೂತ :-** ನೀತಿಭ್ರಷ್ಟರಾದ ದುಷ್ಟದೈತ್ಯರು ದಾರಿಬಿಟ್ಟು, ಶೀಲಗೆಟ್ಟು, ತಪಸ್ವಿಗಳ್ನು ಕೊಂದು, ತಪೋವನಗಳನ್ನು ಹಾಳುಗೈದು ಮೂರುಲೋಕಗಳಲ್ಲಿಯ ಪ್ರಜೆಗಳನ್ನೆಲ್ಲ ಹಿಂಸಿಸತೊಡಗಿದಾಗ ಪ್ರಪಂಚವೆಲ್ಲ ತಲ್ಲಣಿಸಿ ಹೋಯಿತು. ಅವರ ಸಿಂಹನಾದದಿಂದ ಪ್ರಾಣಿಗಳೆಲ್ಲವೂ ಹೆದರಿ ಹೌಹಾರಿದವು. ಭುವನತ್ರಯವೇ ದುರುಳದಾನವರ ತಾಪದಿಂದ ಸಂಭ್ರಾಂತವಾಗಿ ದುಃಖದ ಕಾರ್ಗತ್ತಲೆಯಲ್ಲಿ ಮುಳುಗಿ ಹೋಯಿತು.

ಆಗ ದೇವ, ಪಿತೃ, ವಸು, ಸಾಧ್ಯ, ಮರುದ್ಗಣಗಳು ಸಂತ್ರಸ್ತರಾಗಿ ಬ್ರಹ್ಮದೇವರಿಗೆ ಮೊರೆಹೊಕ್ಕವು. ಬಂಗಾರದ ಕಮಲದ ಮೇಲೆ ಕುಳಿತ ಆ ಚತುರ್ಮುಖನನ್ನು ವಂದಿಸಿ, ಸ್ತುತಿಸಿ ಬೇಡಿಕೊಂಡರು. ''ಪಿತಾಮಹನೇ, ತ್ರಿಪುರವಾಸಿಗಳಾದ ದೈತ್ಯರು ನಿನ್ನ ವರದಬಲದಿಂದ ಬಲಿಷ್ಠರೂ ಗರ್ವಿಷ್ಠರೂ ಆಗಿ ನಮ್ಮನ್ನು ಹಿಂಸಿಸುತ್ತಿದ್ದಾರೆ. ದೇವಾಲಯಗಳನ್ನು ಧ್ವಂಸಿಸಿದ್ದಾರೆ. ಋಷಿಗಳ ಆಶ್ರಮಗಳನ್ನೆಲ್ಲ ಹಾಳುಗೈದಿದ್ದಾರೆ. ದೇವತೆಗಳನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿದ್ದಾರೆ. ಆ ದೈತ್ಯರಭಯದಿಂದ ದಿಕ್ಕೆಟ್ಟು ಓಡಿಹೋದ ನಮ್ಮ ಹೆಂಡಿರುಮಕ್ಕಳು ಎಲ್ಲೆಲ್ಲಿರುವರೋ ತಿಳಿಯದಂತಾಗಿದೆ. ಇಷ್ಟು ದುಷ್ಟಕಾರ್ಯಗಳನ್ನು ಮಾಡಿ

**ಲೋಕಕಂಟಕರಾಗಿದ್ದರೂ** ಆ ದೈತ್ಯರಿಗೆ ನಿನ್ನ ವರವು ಅಭಯ ಕವಚವಾಗಿದೆ. ಅದರಿಂದ ಅವರು ಅವಧ್ಯರಾಗಿದ್ದಾರೆ. ಇವರನ್ನು ಇನ್ನು ಹೀಗೇ ಬಿಟ್ಟರೆ ದೇವತೆ, ಮುನಿ, ಮನುಜ, ಪ್ರಾಣಿಗಳಾರಿಗೂ ಉಳಿಗಾಲವಿಲ್ಲ. ಇವರಿಂದ ಸತ್ಕ್ಯಾನಾಶವಾಗುವದರಲ್ಲಿ ಸಂದೇಹವಿಲ್ಲ.'' ಇಂದ್ರಾದಿದೇವತೆಗಳ ಈ ನುಡಿಕೇಳಿ ಬ್ರಹ್ಮದೇವರು ಅವರನ್ನೆಲ್ಲ ಸಂತೈಯಿಸುತ್ತ ಇಂತು ಅಪ್ಪಣೆ ಕೊಡಿಸಿದರು.

**ಬ್ರಹ್ಮ** :- ಸುರಶ್ರೇಷ್ಠರೇ, ಆ ಮಯಾಸುರನಿಗೆ ನಾನು ಕೊಟ್ಟ ವರದ ಪುಣ್ಯ ಮುಗಿಯಲಿಕ್ಕೆ ಬಂದಂತೆಯೇ ಸರಿ. ದೇವಬ್ರಹ್ಮದ್ವೇಷಪ್ರಾರಂಭಿಸಿದರೆ ವಿನಾಶ ನಿಶ್ಚಿತ ಎಂದು ಮೊದಲೇ ಅವನಿಗೆ ಎಚ್ಚರಿಕೆಯಿತ್ತಿದ್ದೇನೆ. ಆದರೆ ದಾನವ ಸಹಿತವಾಗಿ ಆ ಪುರವನ್ನು ಪುಷ್ಯನಕ್ಷತ್ರದಲ್ಲಿ ಒಂದೇ ಬಾಣಪ್ರಹಾರದಿಂದ ವಿಧ್ವಂಸಗೊಳಿಸಲು ದಕ್ಷಯಜ್ಞಭಂಗಗೈದ ಮಹಾದೇವನಹೊರತು ಮಿಕ್ಕವರಾರಿಗೂ ಸಾಮರ್ಥ್ಯವಿಲ್ಲ.'' ಹೀಗೆ ಹೇಳಿ ಬ್ರಹ್ಮದೇವನು ಎಲ್ಲ ಸುರ ಮುನಿವೃಂದದಿಂದ ಒಡಗೂಡಿ ಶಿವಸದ್ಮ ಎನಿಸಿದ ಕೈಲಾಸಪರ್ವತಕ್ಕೆ ಬಂದನು. ಅಲ್ಲಿ ಪಾರ್ವತಿಯೊಡನೆ ಪರಮೇಶ್ವರ ಮಂಡಿಸಿದ್ದ. ಹುಟ್ಟು ಸಾವುಗಳಿಲ್ಲದ ಆ ಹರನಿಗೆ ಬೆಂಕಿಯ ಬಣ್ಣ. ಬೆಂಕಿಯಂಥ ಕಣ್ಣು, ಸಾವಿರ ಸೂರ್ಯರ ತೇಜ. ಅಗ್ನಿಯ ಕಾಂತಿ. ಮುಡಿಯಲ್ಲಿ ಚಂದ್ರ. ಮುಖದಲ್ಲಿ ಚಂದ್ರಪ್ರಭೆ. ಒಟ್ಟಾರೆ ಕಂಡಕೂಡಲೇ ಆಲ್ಹಾದದಾಯಕಮೂರ್ತಿ. ಇಂಥ ಮಹಾದೇವರನ್ನು ಕಂಡಕೂಡಲೇ ದೇವತೆಗಳೆಲ್ಲರೂ ಭಕ್ತಿಯಿಂದ ಕೈಮುಗಿದು ಬಣ್ಣಿಸಿ ಸ್ತುತಿಸಿದರು.

''ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ । ಪಶೂನಾಂ ಪತಯೇ ನಿತ್ಯಮುಗ್ರಾಯ ಚ ಕಪರ್ದಿನಿ ॥ ಮಹಾದೇವಾಯ ಭೀಮಾಯ ವೇಧಸೇ ವೇಧಸಾಸ್ತುತೇ ॥ ಕುಮಾರಶತ್ರುನಿಘ್ನಾಯ ಕುಮಾರಜನಕಾಯ ಚ ॥ ವೃಷಧ್ವಜಾಯ ಚಂಡಾಯ ಜಟಿನೇ ಬ್ರಹ್ಮಚಾರಿಣೇ ॥ ತಪ್ಯಮಾನಾಯ ಸರಲೇ ಬ್ರಹ್ಮಣ್ಯಾಯ ಜಿತಾಯಚ । ವಿಶ್ವಾತ್ಮನೇ ವಿಶ್ವಸೃಜೇ ವಿಶ್ವಮಾವೃತ್ಯತಿಷ್ಠತೇ । ನಮೋಸ್ತು ದಿವ್ಯರೂಪಾಯ ಪ್ರಭವೇ ದಿವ್ಯ ಶಂಭವೇ ॥ ಅಭಿಗಮ್ಯಾಯ ಕಾಮ್ಯಾಯ ಸ್ತುತ್ಯಾರ್ಚ್ಯಾಯಚ ಸರ್ವದಾ॥ ಭಕ್ತಾನುಕಂಪಿನೇ ನಿತ್ಯಂ ದಿಶತೇಯನ್ಮನೋಗತಮ್॥

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಮಹಾದೇವನಿಂದ, ದೇವತೆಗಳಿಗೆ ಆಶ್ವಾಸನೆ | ಅಧ್ಯಾಯ - ೧೩೪

**ಸೂತ ಉವಾಚ**

**"ಬ್ರಹ್ಮಾದ್ಯೈಸ್ತೂಯಮಾನಸ್ತು ದೇವೈರ್ದೇವೋ ಮಹೇಶ್ವರಃ ।**
**ಪ್ರಜಾಪತಿಮುವಾಚೇದಂ ದೇವಾನಾಂಕ್ವಭಯಂ ಮಹತ್ ॥**

**ಸೂತ** :- ಬ್ರಹ್ಮದೇವರೇ ಮೊದಲಾದ ದೇವಾಧಿದೇವತೆಗಳು ಸ್ತೋತ್ರ ಮಾಡಿದ್ದನ್ನು ಕೇಳಿ ಮಹೇಶ್ವರನು ಚತುರ್ಮುಖನಿಗೆ ಕೇಳಿದ-

**ಶಿವ** :- "ದೇವತೆಗಳಿಗೆ ಈಗ ಯಾರ ಭೀತಿ ? ನಿಮ್ಮ ಮನೋರಥವೇನು ? ಇಲ್ಲಿ ಬಂದ ದೇವತೆಗಳಿಗೆಲ್ಲ ಸುಸ್ವಾಗತ. ನಿಮ್ಮ ಇಷ್ಟಾರ್ಥವನ್ನು ಪೂರೈಸಲು ನಾನು ಸದಾ ಸಿದ್ಧ. ದೇವತೆಗಳ ಸುಖಕ್ಕಾಗಿಯೇ ನನ್ನ ತಪಸ್ಸು, ನಿಮ್ಮ ವೈರಿ ನನ್ನ ವೈರಿ. ನಿಮಗೆ ದುಃಖ ಕೊಡುವವರು ಯಾರೇ ಇದ್ದರೂ ಅವರನ್ನು ನಾನು ಮೊದಲು ಸಂಹರಿಸಿ ನಿಮ್ಮ ರಕ್ಷಣೆ ಮಾಡುವೆನು." ಮಹಾದೇವನ, ಪ್ರೇಮಪೂರ್ಣವಾದ ಈ ನುಡಿಯನ್ನು ಕೇಳಿ ಬ್ರಹ್ಮಾದಿ ದೇವತೆಗಳು ಇಂತು ನುಡಿದರು.

"ಭಗವನ್, ಮಹಾಶೂರರಾದ ದೈತ್ಯರು ಭೀಕರವಾದ ತಪಸ್ಸನ್ನು ಮಾಡಿ ಬ್ರಹ್ಮದೇವರಿಂದ ವರಪಡೆದುಕೊಂಡು ಬಲಿಷ್ಠರಾಗಿದ್ದಾರೆ. ಅವರಿಂದ ಹೊಡೆತ ತಿಂದ ನಾವು ನಿನ್ನನ್ನು ಮೊರೆಹೊಕ್ಕಿದ್ದೇವೆ. ಅದರಲ್ಲಿಯೂ, ಮಯನೆಂಬ ದೈತ್ಯನು ಯುದ್ಧದುರ್ಮದ. ನಮ್ಮೊಡನೆ ಹೋರಾಡಿ ನಮ್ಮನ್ನು ಹೊಡೆಯುವದು ಅವನಿಗೊಂದು ಪ್ರೀತಿಯ ಆಟ. ಅವನು ತ್ರಿಪುರವೆಂಬ ಯಾರಿಗೂ ಪ್ರವೇಶ ಮಾಡಲು ಶಕ್ಯವಾಗದ ಬಿಳಿಯ ಗೋಪುರದ ದುರ್ಗವೊಂದನ್ನು ಕಟ್ಟಿಕೊಂಡಿದ್ದಾನೆ. ಅಭೇದ್ಯವಾದ ಆ ತ್ರಿಪುರಪಟ್ಟಣದಲ್ಲಿ ಇದ್ದುಕೊಂಡು ನಮ್ಮನ್ನೆಲ್ಲ ಪೀಡಿಸುತ್ತಿದ್ದಾನೆ. ಬ್ರಹ್ಮದೇವರ ವರದ ಬಲದಿಂದ ಕೊಬ್ಬಿಹೋದ ಅವನಿಗೆ ಯಾರ ಭಯವೂ ಇಲ್ಲ. ಆದರೆ ನಾವು ಮಾತ್ರ ಒಡೆಯನಿಲ್ಲದ ಸೇವಕರಂತೆ, ಅಸಹಾಯಕರಾಗಿದ್ದೇವೆ. ನಮ್ಮ ನಂದನ ಮುಂತಾದ ಉದ್ಯಾನಗಳನ್ನು ಧ್ವಂಸಮಾಡಿದ್ದಾರೆ ದೈತ್ಯರು. ರಂಭೆ ಮೊದಲಾದ ಅಪ್ಸರೆಯರನ್ನು ಅಪಹರಿಸಿದ್ದಾರೆ. ಇಂದ್ರನ ಉಚ್ಚೈಃಶ್ರವ ಎಂಬ ಕುದುರೆ, ಐರಾವತವೆಂಬ ಆನೆ, ಹಾಗೂ ಉಳಿದ ದಿಗ್ಗಜಗಳು ರಕ್ಕಸರ ಪಾಲಾಗಿವೆ. ಸ್ವರ್ಗದ ಅಗಣಿತ ಐಶ್ವರ್ಯವನ್ನೆಲ್ಲ ದುರುಳ ದೈತ್ಯರು ದೋಚಿಕೊಂಡು ಹೋಗಿದ್ದಾರೆ. ಒಟ್ಟಿನಲ್ಲಿ ನಾವು ಬದುಕುವದೇ ದುಸ್ತರವಾಗಿದೆ, ಜೀವನವೇ ದುರ್ಭರವಾಗಿದೆ.

## ಸೂರ್ಯಚಂದ್ರರೇ ಗಾಲಿ, ನಾಕುವೇದಗಳೇ ಕುದುರೆ, ಬ್ರಹ್ಮನೇ ಸಾರಥಿ, ತ್ರಿಪುರ ಸಂಹಾರಕ್ಕಾಗಿ ರುದ್ರನ ರಥಹೊರಟಿತು

ಇಂದ್ರಾದಿ ದೇವತೆಗಳ ಈ ದೀನ ವಚನವನ್ನು ಕೇಳಿ ಶಂಕರನು ಹೀಗೆ ಉತ್ತರಿಸಿದನು. ''ದೇವತೆಗಳೆ, ಆ ದುಷ್ಟದಾನವನ ಭಯವು ಇನ್ನು ನಿಮಗೆ ತಪ್ಪಿತೆಂದೇ ತಿಳಿಯಿರಿ. ನಿಮ್ಮ ಸಂಕಟವು ಇನ್ನು ದೂರವಾದಂತೆಯೇ. ಆ ತ್ರಿಪುರವನ್ನು ನಾನೇ ಸುಟ್ಟುಹಾಕುವೆನು. ಆದರೆ ಈಗ ನೀವು ನಾನು ಹೇಳಿದಂತೆ ಮಾಡಿರಿ. ಆ ದೈತ್ಯ ಪಟ್ಟಣವನ್ನು ನಾನು ಸುಡಬೇಕು ಎಂದು ನಿಮಗೆ ಅಪೇಕ್ಷೆಯಿದ್ದರೆ ನನ್ನ ಈ ಮಹಾಕಾರ್ಯಕ್ಕೆ ಉಪಯೋಗಬೀಳುವಂಥ ತಕ್ಕ ರಥವನ್ನು ಬೇಗ ಸಿದ್ಧಗೊಳಿಸಿರಿ. ತಡಮಾಡಬೇಡಿರಿ.'' ಪರಶಿವನ ಈ ಮಾತು ಕೇಳಿ ಬ್ರಹ್ಮಾದಿದೇವತೆಗಳು ಉತ್ಸಾಹದಿಂದ ಅನುಮತಿ ಇತ್ತು ಶಂಭುವಿನ ಕೋರಿಕೆಯಂತೆ, ಒಂದು ದಿವ್ಯರಥವನ್ನು ನಿರ್ಮಿಸಿದರು. ಆ ರುದ್ರರಥವು ಅತ್ಯದ್ಭುತವಾಗಿತ್ತು.

ಭೂಮಿಯೇ ತೇರು. ರುದ್ರನ ಇಬ್ಬರು ಸೇವಕರೇ ನೊಗ. ಮೇರು ಶಿಖರವೇ ಪೀಠ. ಸೂರ್ಯ ಚಂದ್ರರು ರಥದ ಎರಡು ಗಾಲಿಗಳು. ಮಂದರಗಿರಿಯೇ ಅಚ್ಚು. ಶುಕ್ಲ ಕೃಷ್ಣಪಕ್ಷಗಳೇ ಎರಡೂ ಬದಿಯ ರೆಕ್ಕೆಯ ಹಲಗೆ. ಮೇಘಗಳೇ ಗಾಲಿಯ ಪಟ್ಟಿ. ಸರ್ಪಗಳೇ ಕುದುರೆಗೆ ಹೊಡೆಯುವ ಚಾವಟಿ. ಗಂಗೆ, ಯಮುನೆ, ಸಿಂಧು, ಗಂಡಕಿ, ಸರಸ್ವತಿ, ಸರಯೂ, ಶತದ್ರೂ, ವಿಪಾಶಾ ಮುಂತಾದ ನದಿಗಳು ಬಿದಿರಿನಗಳಗಳಾದವು. ಕಂಬಳ, ಅಶ್ವತರ ಎಂಬ ಹಾವುಗಳನ್ನು ಹಗ್ಗಗಳನ್ನಾಗಿ ಮಾಡಿ ಬ್ರಹ್ಮಾದಿದೇವತೆಗಳು ನೊಗಗಳನ್ನು ರಥದ ಇನ್ನುಳಿದ ಯಂತ್ರಗಳನ್ನು ಬಿಗಿಯಾಗಿ ಬಂಧಿಸಿದರು. ನವಗ್ರಹಗಳೆಲ್ಲವೂ ಮುಗಿಲನ್ನೇ ಆ ರಥದ ಮೇಲ್‌ಮುಚ್ಚಳವನ್ನಾಗಿಮಾಡಿ ಸುಂದರವಾಗಿ ಅಲಂಕರಿಸಿದರು. ಧೃತರಾಷ್ಟ್ರ, ವಾಸುಕಿ, ರೈವತ ಮುಂತಾದ ಭೀಕರಸರ್ಪಗಳು ದರ್ಪದಿಂದ ಬಿರುಸಿನ ಬಾಣಗಳಾಗಿ ಬತ್ತಳಿಕೆಯಲ್ಲಿ ಬಂದು ನೆಲೆಸಿದವು. ಚತುರ್ವೇದಗಳು ರಥಕ್ಕೆ ಹೂಡಿದ ನಾಲ್ಕು ಕುದುರೆಗಳಾದವು. ಆರು ಋತುಗಳಿಂದ ಕೂಡಿದ ಸಂವತ್ಸರವೇ ಧನಸ್ಸು. ಪಾರ್ವತಿಯೇ ಹೆದೆ. ಕಾಲರೂಪಿ ರುದ್ರನೇ ಬಿಲ್ಲಿನ ರೂಪವನ್ನು ತಳೆದಿದ್ದನು.

ಇಂಥ ಭಯಂಕರ ಧನುಸ್ಸಿನ ಸಹಾಯದಿಂದ ಪರಮೇಶ್ವರನು ಆ ತ್ರಿಪುರವನ್ನು ಅವುಗಳಲ್ಲಿಯ ಸರ್ವಜಂತುಗಳನ್ನು ದಹಿಸುವದು ಏನು ಅಸಾಧ್ಯ? ಮುಖ್ಯವಾಗಿ ಮಹಾದೇವನು ಹೂಡಿದ ಬಾಣವು ವಿಷ್ಣು, ಸೋಮ, ಅಗ್ನಿ ಎಂಬ ಮೂರು ದೇವತಾ ಸ್ವರೂಪವಾಗಿದ್ದಿತು. ಅಗ್ನಿಯು ಬಾಣದ ಮುಖವಾಗಿದ್ದನು. ಸೋಮನು ಅದರ ಮೊನೆ; ವಿಷ್ಣುವು ಅದರಲ್ಲಿ ಸಂಹಾರಕ ಶಕ್ತಿತುಂಬಿದ ತೇಜಸ್ಸಾಗಿದ್ದನು. ವಾಸುಕಿಯು ಆ ಬಾಣದಲ್ಲಿ ತನ್ನ ತೀಕ್ಷ್ಣವಾದ ವಿಷವನ್ನು ಬಿಟ್ಟನು. ಹೀಗೆ ಸರ್ವಸನ್ನಾಹ ಸಿದ್ಧತೆಗಳಿಂದ ಕೂಡಿ ಆ ರಥವನ್ನು

ಸಜ್ಜುಗೊಳಿಸಿಕೊಂಡು ದೇವತೆಗಳು ಶಿವನಿಗೆ ಒಯ್ದು ಒಪ್ಪಿಸಿದರು. ಅದನ್ನು ನೋಡಿ ಮತ್ತೆಮತ್ತೆ ಪರಕಿಸಿ, ನಿರುಕಿಸಿ, ಚಂದ್ರಚೂಡನು ದೇವತೆಗಳ ರಥನಿರ್ಮಾಣದ ಕರಕೌಶಲ್ಯವನ್ನು ಬಾಯ್ತುಂಬಾ ಹೊಗಳಿದನು.

''ಸುರಶ್ರೇಷ್ಠರೆ, ನೀವು ನನಗಾಗಿ ನಿರ್ಮಿಸಿದ ಈ ದಿವ್ಯರಥವೇನೋ ಅತ್ಯುತ್ತಮವಾಗಿದೆ. ಆದರೆ ಈ ಅಮಾನುಷವಾದ ದೈವಿಕರಥವನ್ನು ಹೊಡೆದುಕೊಂಡು ಹೋಗುವ ಅನುರೂಪ ಸಾರಥಿಯನ್ನು ನೀವು ಅಣಿಗೊಳಿಸಿರಿ'' ಎಂದು ಹೇಳಿದನು. ಅದನ್ನು ಕೇಳಿ ದೇವತೆಗಳಿಗೆ ಬಹಳ ಚಿಂತೆ ಆಯಿತು. ಅಂತಹ ಮಹಾರಥಕ್ಕೆ ಅನುರೂಪನಾದ ಸಾರಥಿಯನ್ನು ತರುವದೆಲ್ಲಿಂದ? ಆಗ ದೇವಶ್ರೇಷ್ಠನಾದ ಬ್ರಹ್ಮದೇವರು ''ನಾನೇ ಸಾರಥಿಯಾಗುವೆನು'' ಎಂದು ಹೇಳಿ ಕಡಿವಾಣ ಹಿಡಿದು ರಥದ ಮುಂಭಾಗದಲ್ಲಿ ಕುಳಿತನು. ಅದನ್ನು ನೋಡಿ ಹಿಗ್ಗಿ ಗರಿಗೆದರಿದಂತಾದ ಸುರಪುರದ ನಾಗರಿಕರೆಲ್ಲರೂ ಉತ್ಸಾಹದಿಂದ ಜಯಘೋಷ ಮಾಡಿದರು. ಮಹಾದೇವರಿಗೂ ತನಗೆ ಅತ್ಯಂತ ಯೋಗ್ಯನಾದ ಸಾರಥಿ ದೊರಕಿದನೆಂದು ಸಂತೋಷಆಯಿತು. ಹೆಮ್ಮೆಯೂ ಎನಿಸಿತು. ರುದ್ರನು ಅತ್ಯುತ್ಸಾಹದಿಂದ ರಥಾರೋಹಣ ಮಾಡಿದನು. ಅವನ ಆರೋಹಣ ಸಂಭ್ರಮದ ಭಾರವನ್ನು ತಾಳಲಾರದೆ ಕುದುರೆಗಳು ನೆಲಕ್ಕೆ ಕುಸಿದವು. ವೇದರೂಪವಾದ ಆ ಅಶ್ವಗಳನ್ನು ಶಿವನು ಎತ್ತಿಹಿಡಿದು, ರಥವನ್ನು ಮುನ್ನಡೆಸಬೇಕೆಂದು ಬ್ರಹ್ಮದೇವರನ್ನು ಕೇಳಿಕೊಂಡನು. ಓಂಕಾರ ರೂಪವಾದ ಚಾವಟಿಯನ್ನು ಕೈಯಲ್ಲಿ ಹಿಡಿದು ಚತುರ್ಮುಖನು ರಥವನ್ನು ಮುನ್ನಡೆಸಿದನು. ಪ್ರಮಥಗಣಗಳೂ ಧಗಧಗಿಸುವ ಬೆಂಕಿಯಬೆಟ್ಟಗಳಂತೆ, ಪಾರ್ವತೀಪತಿಯನ್ನು ಹಿಂಬಾಲಿಸಿದರು. ವಶಿಷ್ಠ, ಭೃಗು, ಮರೀಚಿ, ಅತ್ರಿ ಮುಂತಾದ ಬ್ರಹ್ಮರ್ಷಿಗಳು ಬಗೆಬಗೆಯ ಸ್ತುತಿವಚನಗಳಿಂದ ಪರಮೇಶ್ವರನನ್ನು ಸ್ತುತಿಸುತ್ತಿದ್ದರು. ರೆಕ್ಕೆಹಚ್ಚಿದ ಮೇರುಪರ್ವತದಂತೆ, ಪ್ರಳಯಕಾಲದಲ್ಲಿ ಭೋರ್ಗರೆವ ಮಹಾಸಮುದ್ರದಂತೆ ಮಹಾಮಹಾದೇವತಾಧಿಷ್ಠಿತವಾದ ಆ ದಿವ್ಯರಥವು ಆಕಾಶಮಾರ್ಗದಲ್ಲಿ ವೇಗದಿಂದ ಮುನ್ನಡೆಯಿತು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಮಯಾಸುರನಿಂದ ತಪಸ್ಸು, ಶಿವನಿಂದ ವರಪ್ರದಾನ

**ಅಧ್ಯಾಯ - ೧೩೫**

**ಸೂತ ಉವಾಚ**

**ಪೂಜ್ಯಮಾನೇ ರಥೇತಸ್ಮಿನ್ ಲೋಕೈರ್ದೇವೇರಥೇಸ್ಥಿತೇ ।**
**ಪ್ರಮಥೇಷುನದತ್ಸೂಗ್ರಂ ಪ್ರವದತ್ಸುಚಸಾಧ್ವಿತಿ ॥**

ಆ ಅತ್ಯದ್ಭುತವಾದ ರಥವನ್ನು ಆರೋಹಣ ಮಾಡಿ, ಕುಳಿತ ರುದ್ರದೇವರನ್ನು ಎಲ್ಲ ದೇವತೆಗಳೂ ಪೂಜಿಸಿದರು. ಪ್ರಮಥಗಣಗಳು ಜಯಘೋಷವನ್ನು ಉಗ್ಗಡಿಸುತ್ತಿದ್ದರು. ''ಸಾಧು, ಸಾಧು... ಭಲೆ, ಭಾಪು ಶಿವನಿಗೆ ಜಯವಾಗಲಿ '' ಎಂದು ಮುಂತಾದ ಧ್ವನಿಗಳು ದಿಗಂತರಾಳದಲ್ಲಿ ದುಮುದುಮಿಸಿದವು. ಈಶ್ವರನ ಉತ್ಸಾಹದಧ್ವನಿಕೇಳಿ ಆವನ ವಾಹನವಾದ ಎತ್ತು ಗುಟುರು ಹಾಕುತ್ತಿತ್ತು. ಬ್ರಾಹ್ಮಣರು ವೇದಘೋಷಮಾಡುತ್ತಿದ್ದರು. ಕುದುರೆಗಳು ಕೆನೆಯುತ್ತಿದ್ದವು. ಈ ಸಂದರ್ಭದಲ್ಲಿ ದೇವಮುನಿ ನಾರದರು ಮಯಾಸುರನ ರಾಜಧಾನಿಯಾದ ತ್ರಿಪುರವೆಂಬ ಪಟ್ಟಣಕ್ಕೆ ಗಗನಾಂಗಣದಲ್ಲಿ ಸಂಚರಿಸುತ್ತ ಆಗಮಿಸಿದರು. ದಾನವರೆಲ್ಲರೂ ಎದ್ದುನಿಂತು ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಸುಖಾಸನದ ಮೇಲೆ ಮಹಾಮುನಿ ಮಂಡಿಸಿದ ಬಳಿಕ ಮಯಾಸುರನು ಕೇಳಿದನು.

''ಪೂಜ್ಯರಾದ ನಾರದರೆ, ನಮ್ಮ ಈ ಪಟ್ಟಣದಲ್ಲಿ ಅನೇಕ ಅಪಶಕುನಗಳು ಆಗುತ್ತಲಿವೆ. ನಮಗೆಲ್ಲ ದುಃಸ್ವಪ್ನಗಳು ಬೀಳುತ್ತಲಿವೆ. ಅನಿರೀಕ್ಷಿತ ಉತ್ಪಾತಗಳು ಸಂಭವಿಸುತ್ತಲಿವೆ. ಗಾಳಿಯಿಲ್ಲದೆ ಜಯಸ್ತಂಭಗಳು ಮುರಿದು ಬೀಳುತ್ತಲಿವೆ. ಬಾವುಟಗಳು ಹರಿದುಹಾರಿಹೋಗುತ್ತಲಿವೆ. ಎಲ್ಲ ಕಡೆಗೂ 'ಹೊಡೆ, ಬಡೆ, ಕಡಿ, ಕೊಲ್ಲು' ಎಂಬ ಕ್ರೂರನುಡಿಗಳು ಕೇಳಿಬರುತ್ತಿವೆ. ಈ ಎಲ್ಲ ಅನರ್ಥ ಸೂಚನೆಗೆ ಏನು ಕಾರಣ ? ತಮಗೆ ತಿಳಿಯದ ವಿಷಯವೇ ಇಲ್ಲ. ನಿಮಗೆ ಹಿಂದಾದದ್ದು, ಇಂದಾಗುವದು, ಮುಂದೆಸಂಭವಿಸುವದೆಲ್ಲವೂ ಗೊತ್ತಿರುತ್ತದೆ. ಈ ಅಪಶಕುನಗಳು ನಮಗೆ ಮುಂಬರುವ ಯಾವ ಮಹಾ ಭಯವನ್ನು ಸೂಚಿಸುವವು ? ತಿಳಿಸಿರಿ.''

**ನಾರದ** :- ''ದಾನವೇಂದ್ರ, ಉತ್ಪಾತಗಳ ಕಾರಣವನ್ನು ತಿಳಿಸುತ್ತೇನೆ. ಕೇಳು. 'ಧೃಞ, ಧಾರಣೇ' ಎಂಬ ಧಾತುವಿನಿಂದ ಉತ್ಪನ್ನವಾದ ಧರ್ಮಶಬ್ದವು ತನ್ನ ಶಕ್ತಿಮಹಿಮೆಯಿಂದ ಎಲ್ಲವನ್ನೂ ಧಾರಣಮಾಡುತ್ತದೆ, ಎಂಬ ಅರ್ಥದಲ್ಲಿ ಸಾರ್ಥವಾಗಿದೆ, ಧರ್ಮವು ಇಷ್ಟಾರ್ಥವನ್ನು ಕೊಡುವದು. ಅದನ್ನು ಬಿಟ್ಟರೆ ಕಷ್ಟ, ಅನಿಷ್ಟ. ಮದೋನ್ಮತ್ತರಾದ ಈ ದೈತ್ಯರೊಡನೆ ನೀನು ಅಧರ್ಮದ ರಥವನ್ನು ಏರಿ, ದೇವದ್ರೋಹಿಗಳಿಗೆ ಸಹಾಯಕನಾಗಿರುವಿ. ಧರ್ಮವಿರುದ್ಧವಾದ ಈ ನಿನ್ನ ವರ್ತನೆ

ಯಿಂದ ನಿನಗೆ ಮಹಾ ಅನಿಷ್ಟ ಕಾದಿದೆ. ಪರಮೇಶ್ವರನು ಈಗಾಗಲೇ ನಿನ್ನ ಹಾಗೂ ನಿನ್ನ ಅನುಚರರಾದ ಅಸುರರ ಮತ್ತು ನಿನ್ನ ತ್ರಿಪುರ ರಾಜಧಾನಿಯ ವಿಧ್ವಂಸಕ್ಕಾಗಿ ತೇರನ್ನು ಏರಿದ್ದಾನೆ. ಇದರಿಂದ ನಿನ್ನ ವಿನಾಶವು ಖಂಡಿತ. ಈ ಎಲ್ಲ ಉತ್ಪಾತಗಳು ಅದರದೇ ಸೂಚನೆ. ಮುಂಬರುವ ಈ ಅನರ್ಥವನ್ನು ತಪ್ಪಿಸಬೇಕೆಂದಿದ್ದರೆ ನೀನು ಈಗಲೇ ಪುತ್ರಪೌತ್ರಾದಿ ದೈತ್ಯ ಪರಿವಾರದೊಂದಿಗೆ ತೇಜೋನಿಧಿಯಾದ ಆ ಮಹೇಶ್ವರನಲ್ಲಿಗೆ ಹೋಗಿ ಅವನನ್ನೇ ಮೊರೆಹೋಗು. ಶರಣು ಬಂದವರನ್ನು ಕರುಣೆಯಿಂದ ಕಾಪಾಡುವ ಕೃಪಾಳು ಆ ಪಾರ್ವತೀ ಪತಿ'' ಎಂದು ಉಪದೇಶವಿತ್ತು ಸಮಯೋಚಿತವಾದ ಹಿತವಚನಗಳನ್ನು ಮಯ ಮೊದಲಾದ ರಾಕ್ಷಸರಿಗೆ ಹೇಳಿ ನಂತರ ನಾರದರು ಶಿವನಸನ್ನಿಧಾನಕ್ಕೆ ಐತಂದರು. ನಾರದರು ಹೋದ ಬಳಿಕ ಮಯಾಸುರನು ತನ್ನ ದೈತ್ಯದಾನವಸೇನಾಸಾಮಾನ್ಯರನ್ನೆಲ್ಲ ಕರೆದು ಅಪ್ಪಣೆಯಿತ್ತನು.

''ಶೂರ ದಾನವರೆ, ಯುದ್ಧಕ್ಕೆ ಸಿದ್ಧರಾಗಿರಿ. ದೇವತೆಗಳು ಏರಿ ಬರುತ್ತಿದ್ದಾರೆ. ಹೆದರದೆ ಹೋರಾಡಿರಿ. ಯುದ್ಧದಲ್ಲಿ ನಮ್ಮ ಭೀಕರಶಸ್ತ್ರಾದಿಗಳಿಂದ ಇಂದ್ರಾದಿ ದೇವತೆಗಳನ್ನು ಗೆದ್ದು, ಕೊಂದು ಸ್ವರ್ಗವನ್ನು ಆಕ್ರಮಿಸೋಣ. ಸುರಸಾರ್ವಭೌಮನ ಸಿಂಹಾಸನವನ್ನು ವಶಪಡಿಸಿಕೊಂಡು, ದಿವ್ಯಸುಖವನ್ನು ಅನುಭವಿಸೋಣ. ದೇವತೆಗಳು ಶೂರರೂ, ಶಸ್ತ್ರಾಸ್ತ್ರಸನ್ನದ್ಧರೂ, ಗಗನಚಾರಿಗಳೂ ಆಗಿರುವರೆಂಬುದನ್ನು ನೀವು ಬಲ್ಲಿರಿ. ಆದರೆ ಅವರಿಗಿಂತ ಹೆಚ್ಚಿನ ಬಲ ನಿಮ್ಮಲ್ಲಿದೆ. ನಿಮ್ಮ ಶಸ್ತ್ರಾಸ್ತ್ರಗಳಿಂದ ಅವರನ್ನು ಹೊಡೆದು ಬಡಿದು ಕೊಚ್ಚಿಹಾಕಿರಿ '' ಹೀಗೆ ಹೇಳಿ ಮಯಾಸುರನು ತ್ರಿಪುರ ಪಟ್ಟಣವನ್ನು ಪ್ರವೇಶಮಾಡಿದನು. ಆ ದೈತ್ಯರಾಜಧಾನಿಯಲ್ಲಿ ಒಂದು ದೊಡ್ಡ ದೇವಾಲಯ. ಅದರ ಗರ್ಭಗುಡಿಯಲ್ಲಿ ಒಂದು ಸುಂದರವಾದ ಶಿವನ ದಿಗಂಬರಮೂರ್ತಿ. ಅದು ಒಂದು ಜಾಗೃತ ದೇವತೆ. ಅಲ್ಲಿ ಹೊತ್ತಹರಕೆ ಹುಸಿ ಹೋಗಿರಲಿಲ್ಲ. ಭವಾನೀಪತಿಯ ಮೇಲಿನ ಈ ಭರವಸೆಯಿಂದ ಮಯಾಸುರನು ಅಲ್ಲಿಗೆ ಬಂದು, ಭಕ್ತಿಯಿಂದ ಭಗವಂತನನ್ನು ಸ್ತೋತ್ರಮಾಡಿದನು. ಯಮ, ಮನ್ಮಥ, ದಕ್ಷ ಮುಂತಾದವರ ಮದಮೋಹಗಳನ್ನು ಅಳಿದು ಹಾಕಿದ ಆ ಪರಮೇಶ್ವರನ ಚಾರು ಚರಣಗಳಿಗೆ ಶರಣುಹೋದನು.

ಶರಣು ಬಂದ ಆ ದೈತ್ಯರಾಜನ ಸೇವೆ ಹಾಗೂ ಭಕ್ತಿ - ಭಾವಗಳಿಂದ ಪ್ರೀತಿ ಪ್ರಸನ್ನನಾದ ಪರಮೇಶ್ವರನು ಇಷ್ಟಾರ್ಥವನ್ನು ಕರುಣಿಸಿದನು. ವರದ ಬಲದಿಂದ ಆ ದೈತ್ಯರಾಜನು ನಿಶ್ಚಿಂತನಾದನು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಮೂವತ್ತೈದನೆಯ ಅಧ್ಯಾಯ ಮುಗಿದುದು*

—o—

## ಸುರಾಸುರರ ಘೋರಸಂಗ್ರಾಮ

**ಅಧ್ಯಾಯ - ೧೩೬**

**ಸೂತ ಉವಾಚ**

**ತತೋ ರಣೇದೇವಬಲಂ ನಾರದೋऽಭ್ಯಾಗಮತ್ಪುನಃ**
**ಆಗತ್ಯ ಚೈವತ್ರಿಪುರಾತ್ಸಭಾಯಾಮಾಸ್ಥಿತಃಸ್ವಯಂ ॥**

ಅನಂತರ ನಾರದರು ತ್ರಿಪುರದಿಂದ ಹೊರಟು, ಯುದ್ಧರಂಗಕ್ಕೆ ಬಂದು ಇಳಿದರು. ದೇವಸೇನೆಯ ನಟ್ಟನಡುವಿನ ಸಭಾಸ್ಥಾನದಲ್ಲಿ ಬಂದು ನಿಂತರು. ಹಿಂದೆ ಇಲಾವೃತವರ್ಷದಲ್ಲಿ ಬಲಿಚಕ್ರವರ್ತಿಯು ಯಜ್ಞವನ್ನುಮಾಡಿ ವಟುವಾಮನನಿಂದ ವಂಚಿತನಾಗಿ ಬಂಧನಕ್ಕೊಳಗಾದ ತಾಣವೇ ಈಗ ದೇವಸೇನೆಯ ಸಭಾಂಗಣವಾಗಿದ್ದಿತು. ಅದು ದೇವತೆಗಳ ಜನ್ಮಭೂಮಿ, ಪರಮೇಶ್ವರನ ವಿಹಾರ ಸ್ಥಳ. ವಿವಾಹ, ಯಜ್ಞ, ಜಾತಕರ್ಮ ಮುಂತಾದ ಪುಣ್ಯ. ಕಾರ್ಯಗಳ ಸಾಧನಭೂಮಿ. ಮೇರು ಶಿಖರದಂತೆ ವಿರಾಜಿಸುವ ಆ ದಿವ್ಯಸ್ಥಳದಲ್ಲಿ, ಮುಡಿಯಲ್ಲಿ ಎಳೆಯ ಚಂದ್ರನನ್ನು ಧರಿಸಿದ ಮಹೇಶ್ವರನು ನಿಂತುಕೊಂಡು ಇಂದ್ರಾದಿದೇವತೆಗಳನ್ನೂ, ದೇವಕುಲದ ಸೇನಾಪತಿಗಳನ್ನೂ, ಯುದ್ಧಕ್ಕೆ ಪ್ರೋತ್ಸಾಹಿಸಿದನು. ಆಗ ಇಂದ್ರನು ಸ್ವತಃ ಮುಂದಾಗಿ ತ್ರಿಪುರ ಜಯಕ್ಕಾಗಿ ಹೊರಟನು. ದೇವತೆಗಳ ಹಾಗೂ ಪ್ರಮಥಗಣಗಳ ಬಗೆಬಗೆಯ ವಾಹನ ಹಾಗೂ ರಥಗಳು ಸುರಸಾಮ್ರಾಟನನ್ನು ಹಿಂಬಾಲಿಸಿದವು. ಅವರೆಲ್ಲರೂ ಒಕ್ಕೊರಲಿನಿಂದ ಕೂಡಿಮಾಡಿದ ಜಯಘೋಷವು ಮುಂಗಾರು ಮಳೆಯ ಗುಡುಗಿನಂತೆ ಆರ್ಭಟಿಸಿತು. ದೇವತೆಗಳ ಈ ಸಿಂಹನಾದ ಹಾಗೂ ರಣವಾದ್ಯಗಳನ್ನು ಕೇಳಿ ದೈತ್ಯವೀರರು ಉತ್ಸಾಹದಿಂದ ಕುಣಿದು ಕುಪ್ಪಳಿಸಿದರು. ಯುದ್ಧದ ಆವೇಶವು ಮೈಯಲ್ಲಿತುಂಬಿ, ಮುಗಿಲಿಗೆ ನೆಗೆದರು. ದುರ್ಗದಿಂದ ಜಿಗಿದರು. ದೇವತೆಗಳ ಜಯಘೋಷದ ಸದ್ದು ಅಡಗುವಂತೆ ಉದ್ಧಟಧ್ವನಿಯಲ್ಲಿ ಸಿಂಹನಾದಮಾಡಿ ಅಬ್ಬರಿಸಿದರು. ಚಂದ್ರೋದಯಕ್ಕೆ ಸಮುದ್ರವು ಉಕ್ಕೇರುವಂತೆ ದಾನವರ ಸೇನಾಸಾಗರವು ರಣೋತ್ಸಾಹದಿಂದ ಮೇರೆವರೆದು ಭೋರ್ಗರೆಯಿತು.

ಕೆಲವೇ ಕ್ಷಣಗಳಲ್ಲಿ ಮುಂದೆ ಎರಡು ಮಹಾಸಮುದ್ರಗಳಂತೆ ದೇವ-ದಾನವರ ಸೇನೆಗಳೆರಡೂ ಒಬ್ಬರ ಮೇಲೊಬ್ಬರು ಶಸ್ತ್ರ ಹಿರಿದು ಮುಗಿಬಿದ್ದರು. ಬೆಂಕಿಯ ಬೆಟ್ಟಗಳಂತೆ, ಪ್ರಳಯದ ಮೋಡಗಳಂತೆ ಒಬ್ಬರಿಗೊಬ್ಬರು ತಾಕಲಾಡಿ, ತುರುಸಿನಿಂದ ಹಣಾಹಣಿ ಹೋರಾಡಿದರು. ದೇವತೆಗಳ ವಜ್ರಾಯುಧ, ಶೂಲ, ಕೊಡಲಿ, ಬಿಲ್ಲು, ಬಾಣ ಮುಂತಾದ ಶಸ್ತ್ರಾಸ್ತ್ರಗಳ ಪ್ರಹಾರದಿಂದ ದೈತ್ಯರು ಗಾಜಿನ ಮನೆಗಳಂತೆ ತಲೆ ಒಡೆದು, ಕೈಕಾಲು ಸಿಡಿದು, ಕ್ಷತವಿಕ್ಷತರಾಗಿ ನೆಲಕ್ಕೆ ಉರುಳಿದರು. ಅದರಂತೆ ದಾನವರ ನಿರಂತರ ಬಾಣ-ಬಿಲ್ಲು, ಮರ, ಅಸ್ತ್ರ-ಶಸ್ತ್ರಗಳ ಪ್ರಬಲ ಪ್ರಹಾರಗಳಿಂದ

ಪ್ರಮಥಗಣಗಳ ದೇಹದಿಂದ ನೆತ್ತರು ಬಸಿಯಿತು. '' ತಾರಕನಿಗೆ ಜಯವಾಗಲಿ '' ಎಂದು ದೈತ್ಯರ ಘೋಷ, ''ರುದ್ರನಿಗೆ ಜಯವಾಗಲಿ ಎಂದೂ, ಇಂದ್ರನಿಗೆ ಜಯವಾಗಲಿ'' ಎಂದೂ ದೇವತೆಗಳ ಹಾಗೂ ಗಣಾಧೀಶರ ಸಮರಧ್ವನಿ.

ಸಂಗ್ರಾಮವು ಮುಂದುವರಿದಂತೆ ರಣರಂಗವು ಇನ್ನೂ ರುದ್ರಭೀಷಣವಾಯಿತು. ನೋಡಿದಲ್ಲೆಲ್ಲ ಹೆಣಗಳ ಹಡದಿ, ತುಂಡುತುಂಡಾದ ಕೈಕಾಲುಗಳು. ಛಿನ್ನಭಿನ್ನವಾದ ರುಂಡಮುಂಡಗಳು, ಪುಡಿಪುಡಿಯಾಗಿ ಬಿದ್ದಧ್ವಜಗಳು ! ನುಚ್ಚುನೂರಾದ ಶ್ವೇತಛತ್ರಗಳು, ರಕ್ತದ ಹೊಳೆ ! ಮಾಂಸದ ಕೊಳೆ ! ದೈತ್ಯವೀರರು ದೇವತೆಗಳ ನೆತ್ತಿಯ ಮೇಲೆ ಆಯುಧಗಳನ್ನು ಎಸೆಯಬೇಕೆಂದು ಮುಗಿಲಿಗೆ ನೆಗೆದಾಗ ದೇವತೆಗಳು ಬಾಣಬಿಟ್ಟು, ಅವರ ದೇಹಗಳನ್ನು ಸೀಳಿ ಅವರನ್ನು ಕೊಚ್ಚಿಹಾಕುತ್ತಿದ್ದರು. ಸುರ ಸೈನಿಕರ ಈ ಕರಕೌಶಲವನ್ನು ಕಂಡು, ಯುದ್ಧ ನೋಡಲು ವಿಮಾನದಲ್ಲಿ ಬಂದು ಮುಗಿಲಲ್ಲಿ ನಿಂತುಕೊಂಡು ಅಪ್ಸರೆಯರು ಹೊಗಳಿ, ಹಿಗ್ಗಿ ಹಾಡುತ್ತಿದ್ದರು. ದೇವ ಸುಂದರಿಯರ ಈ ಹೊಗಳುವಿಕೆಯಿಂದ ಹುರುಪುಕೊಂಡ ದೇವತಾ ವೀರರು ಪ್ರಳಯ ಜಲಧಿಯಂತೆ ಬೊಬ್ಬಿರಿದು, ಸಿಂಹನಾದಗಳಿಂದ ಅಬ್ಬರಿಸಿ ದೈತ್ಯ ವೀರರನ್ನೆಲ್ಲ ಕಲಿತನದಿಂದ ಕಡಿದು ಕೊಚ್ಚಿಹಾಕಿದರು. ಆಗ ದಾನವರು ದಿಕ್ಕೆಟ್ಟು ದೇವತೆಗಳ ಆ ಪ್ರಹಾರಗಳನ್ನು ತಾಳಲಾರದೆ, ಹೆದರಿ ತಮ್ಮ ತ್ರಿಪುರ ರಾಜಧಾನಿಯ ದುರ್ಗದೊಳಗೆ ಹೊಕ್ಕರು. ಉತ್ಸಾಹಿತರಾದ ದೇವತೆಗಳು ಆ ನಗರದ ಅಂತರ್ಭಾಗದಲ್ಲಿಯೇ ಹೊಕ್ಕು ದಾನವರನ್ನು ಇರಿಯತೊಡಗಿದರು.

ಇದನ್ನು ಕಂಡು ರೋಷಗೊಂಡ ಮಯ ವಿದ್ಯುನ್ಮಾಲಿ ಎಂಬ ರಾಕ್ಷಸರಿಬ್ಬರೂ ರಭಸದಿಂದ ರಣರಂಗಕ್ಕೆ ಇಳಿದರು. ವಿದ್ಯುನ್‌ಮಾಲಿಯು '' ಪರಿಘ '' ಎಂಬ ಉಕ್ಕಿನ ಆಯುಧದಿಂದ ಶಿವನ ವಾಹನವಾದ ನಂದೀಶ್ವರನನ್ನು ಜೋರಾಗಿ ಹೊಡೆದನು. ಇದರಿಂದ ನಂದಿಯ ಕಣ್ಣು ಕತ್ತಲೆಗೂಡಿದಂತಾಗಿ ಗರಗರ ತಿರುಗತೊಡಗಿದನು. ಅದನ್ನು ಕಂಡು ಘಂಟಾಕರ್ಣ, ಶಂಕುಕರ್ಣ, ಮಹಾಪಾರ್ಶ್ವ ಮುಂತಾದ ಗಣಾಧಿಪರು ಆ ದೈತ್ಯನಮೇಲೆ ಏರಿಬಂದರು. ಶೂರನಾದ ವಿದ್ಯುನ್ಮಾಲಿಯು ಅವರೆಲ್ಲರನ್ನು ಘೋರಾಯುಧದಿಂದ ಹೊಡೆದು ಉರುಳಿಸಿ, ಆಗಸಕ್ಕೆ ಅಡರಿ ಮೋಡದಂತೆ ಗುಡುಗಿದನು.ಅವನ ಸಿಂಹನಾದದಿಂದ ಎಚ್ಚೆತ್ತ ನಂದೀಶ್ವರನು ಸೇಡಿನ ಸವಾರಿ ಏರಿ, ಬೆಂಕಿಯ ಬಣವೆಯಂತೆ ಧಗಧಗಿಸುವ ವಜ್ರಾಯುಧವನ್ನು ಆ ದೈತ್ಯನ ಎದೆಗೆ ಬೀಸಿದನು. ತಕ್ಷಣವೇ ಆ ವಿದ್ಯುನ್ಮಾಲಿಯು ರಕ್ತಕಾರುತ್ತ ನೆಲಕ್ಕೆ ಬಿದ್ದನು. ಗಣಾಧಿಪರೂ ದೇವತೆಗಳೂ ಹರ್ಷೋದ್ರೇಕದಿಂದ ಕುಣಿದು ಕುಪ್ಪಳಿಸಿದರು. ಆದರೆ ದೈತ್ಯ ದಾನವವೀರರು ಮಾತ್ರ ನಿರಾಶೆಯ ನಿಟ್ಟುಸಿರು ಬಿಟ್ಟು ಕಿಂಕರ್ತವ್ಯ ಮೂಢರಾಗಿ ಒಂದುಕ್ಷಣ ದಿಗ್ಭ್ರಾಂತರಾಗಿ ನಿಂತುಕೊಂಡರು. ಮರುಚಣದಲ್ಲಿಯೇ ಕೋಪಾಟೋಪದಿಂದ ಉರಿದುಬಿದ್ದು ಕಂಡಕಂಡಂತೆ ದೇವತೆಗಳ ಮೇಲೆ ಗಿಡಗಳನ್ನು ತೂರಾಡಿದರು. ಗುಡ್ಡಗಳನ್ನೇ ತಂದು

ಈಡಾಡಿದರು. ಅವರ ಈ ಸಮರ ಸಂಭ್ರಮ ಕಂಡು ಗಣಗಳೆಲ್ಲ ತಬ್ಬಿಬ್ಬಾಗಿ ದಿಗ್ಭ್ರಮೆಗೊಂಡರು. ಇದೇ ವೇಳೆಯಲ್ಲಿ ಮಯ, ತಾರಕ ಮುಂತಾದ ದಾನವ ದೊರೆಗಳು ದರ್ಪೋದ್ಧತರಾಗಿ ಬಾಣಬಿಟ್ಟು ಬೆಂಕಿಯ ಮಳೆಯನ್ನೇ ದೇವಸೇನೆಯಲ್ಲಿ ಸುರಿಸಿದರು.

ಇದರಿಂದ ಗಣಂಗಳೆಲ್ಲ ತಲ್ಲಣಿಸಿ ತತ್ತರಿಸಿ ಹೋದಾಗ ಮಯಾಸುರನು ತನ್ನ ಮಾಯಾಯುದ್ಧವನ್ನು ಪ್ರಾರಂಭಿಸಿದನು. ಶಿವಸೇನೆಯ ನಟ್ಟ ನಡುವೆ ಕೆಲವು ಕಡೆ ಬೆಟ್ಟಗಳು ಬಂದುಬಿದ್ದರೆ, ಹಲವು ಕಡೆ ಹಿಂಡುಹಿಂಡಾಗಿ ಹುಲಿಗಳು. ಒಂದು ಕಡೆ ಸಿಂಹಗಳದೇ ಸುರಿಮಳೆ. ಇನ್ನೊಂದು ಕಡೆಗೆ ಅನೇಕ ನೀರಿನ ತಡಸಲುಗಳ ತುಳುಕಾಟ. ಮತ್ತೊಂದು ಕಡೆ ಸುಂಟರಗಾಳಿ ಬಿರುಗಾಳಿಗಳ ಅಬ್ಬರ. ಮಗದೊಂದು ಕಡೆ ಹರಿವ ಹಾವುಗಳು, ಸರಿವ ಸರ್ಪಗಳು. ಅಲ್ಲಲ್ಲಿ ಉರಿವ ಅಗ್ನಿಜ್ವಾಲೆಗಳು. ಕಚ್ಚುವ ಚಿರತೆಗಳು. ಕಡಿಯುವ ಶರಭಗಳು. ಕುಕ್ಕುವ ಹಕ್ಕಿ, ಸೀಳುವ ಆನೆಗಳು. ಸುಡುವ ಬೆಂಕಿಯ ಬಣಿವೆಗಳು. ಎತ್ತ ಹೊರಳಿದರೂ ಸಾವು; ಎಲ್ಲಿ ಉರುಳಿದರೂ ನೋವು. ಎತ್ತೆತ್ತಲ್ಲೂ ಮೃತ್ಯು ತಾಂಡವ.

ಮಯಾಸುರನ ಈ ಮಾಯಾ ಕೋಲಾಹಲ ಕಂಡು, ಗಣಪತಿಗಳು ಜಜ್ಜಿ ಬಚ್ಚಿಹೋದರು. ದೈತ್ಯರ ಸಿಂಹನಾದವು ಬ್ರಹ್ಮಾನಂದವು ಬ್ರಹ್ಮಾಂಡವನ್ನು ಭೇದಿಸಿತು.

ದೇವಸೇನೆಗೆ ಬಂದ ಈ ದುರವಸ್ಥೆಯನ್ನು ಕಂಡು,ಯಮ, ವರುಣ, ಸೂರ್ಯ, ಸ್ಕಂದ, ಇಂದ್ರ, ಚಂದ್ರ, ರುದ್ರ ಮೊದಲಾದ ದೇವತಾಧುರೀಣರೆಲ್ಲರೂ ಅಪರಂಪಾರವಾದ ದಾನವರ ಸೇನಾಸಾಗರವನ್ನು ಹೊಕ್ಕರು. ತಮ್ಮ ಅಮೋಘವಾದ ಶಸ್ತ್ರಾಸ್ತ್ರಗಳ ಭೀಕರ ಪ್ರಹಾರದಿಂದ ಸಿಂಹಗಳು ಮೃಗಗಳ ಹಿಂಡನ್ನು ಹೊಡೆದು ಹಾಕುವಂತೆ ಕಲಿತನದಿಂದ ಕಾದಾಡಿ ಜರ್ಜರಗೊಳಿಸಿದರು. ನಿರ್ಜರ ನಾಯಕರ ಭಯಂಕರವಾದ ವೀರಾವೇಶದ ಶಸ್ತ್ರಪಾತವನ್ನು ವಜ್ರಾಘಾತವನ್ನು ರಣಘೋಷವನ್ನೂ ತಾಳಲಾರದೆ ರಕ್ಕಸರೆಲ್ಲರೂ ಹೆದರಿ, ಚದುರಿ ಚಲ್ಲಾಪಿಲ್ಲಿಯಾದರು. ಅಮೋಘವಾದ ಸುರಸೇನಾಪತಿಗಳ ಬಾಣಪ್ರಹಾರದಿಂದ ದೈತ್ಯಸೇನೆಯ ಕೈಕಾಲುಗಳು ಕತ್ತರಿಸಿ, ತಲೆಗಳು ಒಡೆದು, ಕವಚಗಳು ಸಿಡಿದು, ದೇಹವೆಲ್ಲವೂ ಪಂಜರವಾಗಿ ರಕ್ತಬಸಿಯಿತು. ಎಲ್ಲರೂ ನೆಲಕ್ಕೆ ಕುಸಿದರು.

ಅಂದು ವೈರಿಗಳಾದ ಅಸುರರ ಹುಟ್ಟನ್ನೇ ಅಡಗಿಸಿ ಬಿಡಬೇಕೆಂದು ಕೋಪೋದ್ರೇಕಿತರಾದ ದೇವತೆಗಳಲ್ಲಿ ಇಂದ್ರನು ವಜ್ರ, ಸ್ಕಂದನು ಶಕ್ತಿ, ಯಮನು ಯಮದಂಡ, ವರುಣನು ಮೃತ್ಯುಪಾಶ, ಕುಬೇರನು ಶೂಲ ಮುಂತಾದ ಆಯುಧಗಳನ್ನು ಹಿಡಿದು ದೈತ್ಯಬಲವನ್ನು ತುಡುಕಿ, ತಾಕಿ, ತಡೆದು, ತಾಕಲಾಡಿ, ತುಂಡರಿಸಿದರು. ಅವರ ಶೌರ್ಯಾವೇಶಕ್ಕೆ ದೈತ್ಯಸೇನೆಯೆಲ್ಲವೂ ಗಾಸಿಗೊಂಡು ಹೊಡೆತ ತಾಳಲಾರದೆ, ತತ್ತರಿಸಿಹೋಯಿತು. ಆಗ ಮಯಾಸುರನು ಈಗ ಹೀಗೆಯೇ ಯುದ್ಧವನ್ನು ಮುಂದುವರಿಸಿದರೆ ನಮಗೆ ಸೋಲು, ಸಾವು ಎರಡೂ ಖಂಡಿತವಾಗಿ

ಬರುವವು ಎಂದು ಭಾವಿಸಿ ರಣರಂಗದಿಂದ ಹಿಂದೆಗೆಯುವ ನಿರ್ಧಾರವನ್ನು ಮಾಡಿದನು. ತಾರಕಾಸುರನ ಮಗನಾದ ತಾರಕನೆಂಬ ದೈತ್ಯ ಸೇನಾಪತಿಯನ್ನು ಕುರಿತು- ''ದೇವತೆಗಳ ಅತಿಭೀಕರವಾದ ಏಟುಗಳಿಂದ ನಮ್ಮ ದೈತ್ಯದಳವೆಲ್ಲವೂ ಸೋತುಸುಣ್ಣವಾಗಿದೆ. ಆದುದರಿಂದ ಈಗ ತುಸು ವಿಶ್ರಾಂತಿಯನ್ನು ತೆಗೆದುಕೊಂಡು, ಮರಳಿ ಬಂದು ಮತ್ತೆ ಯುದ್ಧಮಾಡೋಣ'' - ಎಂದು ಹೇಳಿ ತನ್ನ ಅಳಿದುಳಿದ ಸೇನೆಯೊಂದಿಗೆ ನಗರದ ಒಳಭಾಗವನ್ನು ಪ್ರವೇಶಿಸಿದನು. ಉತ್ಸಾಹದೊಂದಿಗೆ ಸುರಶಿವಸೇನೆಯವರು ಆನಂದದಿಂದ ಶಂಖ ತಮ್ಮಟೆ ನಗಾರಿ ಮುಂತಾದ ಜಯದುಂದುಭಿಗಳನ್ನು ಮೊಳಗಿಸುತ್ತ ಸಂತೋಷದಿಂದ ಕುಣಿದಾಡಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಮೂವತ್ತಾರನೆಯ ಅಧ್ಯಾಯ ಮುಗಿದುದು*



## ಮಯಾಸುರ ನಿರ್ಮಿಸಿದ ಅಮೃತದ ಬಾವಿಯನ್ನು ವಿಷ್ಣು, ಎತ್ತಿನರೂಪದಿಂದ ಕುಡಿದು ಬತ್ತಿಸಿದ — ಅಧ್ಯಾಯ - ೧೩೭

**ಸೂತ ಉವಾಚ :**

**ಮಯಃ ಪ್ರಹಾರಂ ಕೃತ್ವಾತು ಮಾಯಾವೀ ದಾನವರ್ಷಭಃ**
**ವಿವೇಶ ತೂರ್ಣಂ ತ್ರಿಪುರಮಭ್ರೋನೀಲಮಿವಾಂಬರಂ ॥**

**ಸೂತ** :- ದಾನವ ದೊರೆಯಾದ ಮಯಾಸುರನು ಸಮರಾಂಗಣದಿಂದ ಹಿಂತಿರುಗಿ ಹೋಗುವಾಗ ವೈರಿಸೇನೆಗೆ ಒಂದು ಬಿರುಸಿನ ಏಟವನ್ನು ಕೊಟ್ಟು ತನ್ನ ತ್ರಿಪುರವನ್ನು ಗಡಿಬಿಡಿಯಿಂದ ಪ್ರವೇಶಿಸಿದನು. ಕಪ್ಪುಮೋಡವು ಮುಗಿಲಿನಲ್ಲಿ ಮರೆಯಾದಂತಿತ್ತು. ಸಂಗ್ರಾಮದಿಂದ ವೈರಿಗಳಿಗೆ ಬೆನ್ನು ತೋರಿಸಿ ಬಂದ ಅವನಿಗೆ ಸಮಾಧಾನವಿರಲಿಲ್ಲ. ನಿಡಿದಾದ ನಿಟ್ಟುಸಿರು ಬಿಟ್ಟು, ಈ ಮೊದಲೇ, ಸಭಾಗೃಹದ ನಡುವೆ ಬಂದು ಕುಳಿತನು. ದೀನ, ದೂನ ದಾನವ ಧುರೀಣರನ್ನು ಕಂಡು ಅವನು ಚಿಂತಾಕ್ರಾಂತನಾದನು. ಒಂದುಕ್ಷಣ ಅವನು ಯೋಚಿಸಿದನು-''ಸುರಪತಿಯನ್ನು ಹೆದರಿಸುವ ನನ್ನ ಬಲಗೈಯಂತಿದ್ದ ವಿದ್ಯುನ್ಮಾಲಿಯು ಹತನಾದನು. ಈ ತ್ರಿಪುರದಂತಹ ದುರ್ಗವು ಈ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಅಭೇದ್ಯವಾದ ಈ ದುರ್ಗಮದುರ್ಗಕ್ಕೂ ಇಂತಹ ದುಃಸ್ಥಿತಿ ! ಇಂತಹ ದುರ್ಗವು ವಿಪರೀತ ಕಾಲಬಂದಾಗ ನಮ್ಮನ್ನು ರಕ್ಷಣೆ ಮಾಡಲಾರದು ! ಎಲ್ಲವೂ ಕಾಲದ ಅಧೀನ ! ಆ ಕಾಲವೇ ನಮ್ಮ ಮೇಲೆ ಮುನಿದೆದ್ದಾಗ ಕಾಯುವವರಾರು ? ಅದಕ್ಕೆ ಒಬ್ಬನೇ ಒಬ್ಬ ಸಮರ್ಥನಾದವನೆಂದರೆ ಕಾಲಾಂತಕನಾದ ಮಹೇಶ್ವರ, ಇಂದ್ರ, ಯಮ, ವರುಣ, ಕುಬೇರ ಅಥವಾ ಮತ್ತಾವ ದೇವತೆಯಿಂದಲೂ ನನಗೆ ಹೆದರಿಕೆಯಿಲ್ಲ. ನನಗೆ ಭಯವಿರುವದು ಆ ಮಹೇಶ್ವರನಿಂದ ಮಾತ್ರ. ಈ ದೇವತೆಗಳಿಗೆಲ್ಲ ಅವನೇ ಒಡೆಯ. ಅದುದರಿಂದಲೇ ಅವನು ಮಹಾದೇವ. ಅವನನ್ನು ಗೆಲ್ಲುವದು ನನ್ನಿಂದ

ಸಾಧ್ಯವಿಲ್ಲ. ಆದರೂ ನನ್ನ ಶೌರ್ಯ, ಸಂಪದವನ್ನೆಲ್ಲ ಇಂದು ತೋರಿಸುವೆನು. ನಾನು ಈಗ ಸಂಜೀವಿನಿ ಮೊದಲಾದ ದಿವ್ಯವನಸ್ಪತಿಗಳನ್ನು ಗಿಡಮೂಲಿಕೆಗಳನ್ನು ಹಾಕಿ ಒಂದು ಬಾವಿಯನ್ನು ನಿರ್ಮಿಸುವೆನು. ಅದರ ತುಂಬ ಅಮೃತಜಲ. ಸತ್ತವರನ್ನು ಮರಳಿ ಬದುಕಿಸುವ ನೀರು, ಆ ಸುಧೆಯಸರೋವರದಲ್ಲಿ ಮುಳುಗಿದರೆ ಸಾಕು ಸಾವೇ ಇಲ್ಲ. ಸತ್ತು ಹೋದವರ ಹೆಣವನ್ನು ಆ ನೀರಿನಲ್ಲಿ ಅದ್ದಿ ತೆಗೆದರೆ ಅವರು ಎದ್ದು ಕೂಡುವರು.''

ಹೀಗೆ ಯೋಚನೆಮಾಡಿ ಮಹಾ ಮಾಯಾವಿಯಾದ ಮಯಾಸುರನು ಒಂದು ದೊಡ್ಡ ಬಾವಿಯನ್ನು ನಿರ್ಮಿಸಿದನು. ಎರಡು ಯೋಜನ ಉದ್ದ. ಒಂದು ಯೋಜನ ಅಗಲ. ಹತ್ತಿ ಇಳಿಯಲು ಮಿಂಚುವ ಮೆಟ್ಟಲುಗಳು. ಆ ಕೊಳದ ತುಂಬ ಹೊನ್ನೈದಿಲೆ, ಕನ್ನೈದಿಲೆ, ತುಂಬು ತಾವರೆಗಳು. ಮೇಲೆ ತೇಲಾಡುವ ಹಂಸ ಕಾರಂಡವಗಳು, ಚಂದ್ರ ಕಿರಣದಂತೆ ತಿಳಿತಿಳಿಯಾದ ನೀರು. ಆ ನೀರು ಸ್ವರ್ಗಲೋಕದ ಸಾಕ್ಷಾತ್ ಸುಧೆಯ ಕಂಪಿಂಪು ತಂಪುಗಳ ಸೊಂಪು ಸೂಸುತ್ತಿತ್ತು. ಅಮೃತಕೂಪವು ನಿರ್ಮಿತವಾದ ಕೂಡಲೇ ವಿದ್ಯುನ್ಮಾಲಿಯ ಶವವನ್ನು ತಂದು ಆ ನೀರಿನಲ್ಲಿ ಮುಳುಗಿಸಿದರು. ಕೂಡಲೆ, ಹೋಮಾಗ್ನಿಯಂತೆ ಅವನು ದಿಗ್ಗನೇ ಎದ್ದು ಕುಳಿತ. ಮಯಾಸುರನ ಮುಂದೆ ಮೈ ಮಣಿದು ಅವನ ಕಾಲಿನ ತುದಿಗೆ ತನ್ನ ತಲೆ ತಾಗಿಸಿ-''ಅಯಂ ಅಹಂ ಭೋ ವಿದ್ಯುನ್ಮಾಲೀ, ಅಭಿವಾದಯತೆ '' ಎಂದು ನುಡಿದು ನಮಸ್ಕರಿಸಿದ. ತಾರಕನಿಗೆ ತಲೆಬಾಗಿ ವಂದಿಸಿ ಎದ್ದು ನಿಂತು ಅತ್ತಿತ್ತ ನೋಡಿ ಪ್ರಶ್ನಿಸಿದನು.

''ಪ್ರಮಥಗಣಗಳು ನರಿಗಳಂತೆ ನನ್ನ ಸುತ್ತಲೂ ನೆರೆದಿದ್ದವರು ಎಲ್ಲಿ ಹೋದರು! ನನ್ನನ್ನು ಹೊಡೆಯಬಂದ ಆ ನಂದಿ ಎಲ್ಲಿ ? ಅವರು ಇದ್ದಲ್ಲಿ ನಡೆಯಿರಿ. ಕಂಡವರನ್ನೆಲ್ಲ ಹಿಡಿಯಿರಿ. ಸಿಕ್ಕವರನ್ನೆಲ್ಲ ಕಡಿಯಿರಿ. ನಮಗೆ ದೇಹದ ಮೇಲೆ ಮೋಹವಿಲ್ಲ. ನಿಶ್ಚಯಮಾಡಿ ಗೆಲವು ಪಡೆಯೋಣ. ವೈರಿಗಳನ್ನು ಹೊಡೆಯೋಣ. ಇಲ್ಲವೆ ರಣದಲ್ಲಿ ಮಡಿಯೋಣ ''. ವಿದ್ಯುನ್ಮಾಲಿಯ ಈ ವೀರಾಲಾಪ ಕೇಳಿ ಮಯಾಸುರನು ಹರ್ಷಭರಿತನಾಗಿ ತಬ್ಬಿಕೊಂಡು -

''ಮಿತ್ರನೇ, ನೀನಿಲ್ಲದಂತಾದ ಬಳಿಕ ನನಗೆ ರಾಜ್ಯ ಬಾಳು ಬದುಕು ಎಲ್ಲವೂ ಬೇಡವಾಯಿತು. ಅದಕ್ಕಾಗಿಯೇ ಈ ಅಮೃತದಹೊಂಡವನ್ನು ಹತರಾದ ದಾನವರನ್ನು ಬದುಕಿಸಬೇಕೆಂದು ನನ್ನ ಮಾಯೆಯಿಂದ ನಿರ್ಮಿಸಿದೆನು. ಯಮಲೋಕದಿಂದ ನೀನು ಮರಳಿ ಬಂದದ್ದು ನಮ್ಮ ಪುಣ್ಯ. ನಾವು ಸಾವು ನೋವಿನಲ್ಲಿ ಇದ್ದಾಗ ದೇವತೆಗಳು ನಮ್ಮಿಂದ ಕಿತ್ತುಕೊಂಡ ಐಶ್ವರ್ಯವನ್ನೆಲ್ಲಾ ಮತ್ತೆ ನಾವು ಅವರೊಂದಿಗೆ ಕಾದಿ, ಗೆದ್ದು ಕಸಿದುಕೊಳ್ಳೋಣ. ಭೋಗ ಭಾಗ್ಯಗಳನ್ನೆಲ್ಲ ಅನುಭವಿಸೋಣ.'' ಮಯನು ಮಾಯೆಯಿಂದ ನಿರ್ಮಿಸಿದ ಸುಧಾಕೂಪವನ್ನು ಕಂಡು ದಾನವರಿಗೆಲ್ಲ ಆನಂದಬಾಷ್ಪಗಳು ಉದುರಿದವು. ಅದರಲ್ಲಿಯೂ ದೈತ್ಯದಳದಧುರೀಣರಂತೂ ಪ್ರಮೋದ ಪರವಶರಾಗಿ ಕುಣಿದಾಡಿದರು. 'ಅಸುರ ಸೇನಾಪತಿಗಳು

ಉತ್ಸಾಹಾತಿರೇಕದಿಂದ ತಮ್ಮ ಸೈನಿಕರನ್ನೆಲ್ಲ ಕರೆತಂದು, ಆ ಅಮೃತಕೂಪವನ್ನು ತೋರಿಸಿ, ''ಇದೋ ನೋಡಿ ಅಮೃತದ ಬಾವಿ. ಇಲ್ಲಿ ಶವಗಳನ್ನು ಅದ್ದಿದರೆ ಎದ್ದು ಕೂಡುವವು. ನಮಗಿನ್ನು ಸಾವಿನ ಭಯವೇ ಇಲ್ಲ. ಈಗ ಸತ್ತವರನ್ನೆಲ್ಲ ಇಲ್ಲಿ ತಂದು ತೊಳೆಯಿರಿ. ನಮ್ಮನ್ನಗಲಿದ ಮಿತ್ರರೆಲ್ಲ ಈಗಾಗಲೇ ಬದುಕಿ ಬರುವರು. ಇನ್ನು ಮುಂದೆ ನೀವೆಲ್ಲರೂ ಅಮರರಾದಿರಿ. ಮೃತ್ಯುಂಜಯರಾದಿರಿ. ನಿರ್ಭಯವಾಗಿ ಪ್ರಮಥ ಗಣದೊಂದಿಗೆ ಹೋರಾಡಿ ಅವರನ್ನೆಲ್ಲ ವಧಿಸಿರಿ. '' ಎಂದು ಹೇಳಿದರು. ದಾನವ ಬಳಗಕ್ಕೆಲ್ಲ ಅಮಿತಉತ್ಸಾಹ. ನಗಾರಿ ಬಾರಿಸಿ ವಿಜಯಘೋಷಗಳನ್ನು ಉಗ್ಗಡಿಸಿದರು. ಘೋರಾಯುಧಗಳನ್ನು ಎತ್ತಿಕೊಂಡು ಬಂದು ವೀರಾವೇಶದಿಂದ ಶಿವಸೇನೆಯ ಮೇಲೆ ಬಿದ್ದು ಕಲಿತನದಿಂದ ಕಾದತೊಡಗಿದರು. ಪ್ರಮಥರೂ ಪ್ರತಿಯಾಗಿ ಘೋರಾಯುಧದಿಂದಲೇ ಅಸುರರಿಗೆ ಸರಿಯಾಗಿ ಉತ್ತರ ಕೊಟ್ಟರು.

ಎರಡೂ ಸೇನಾಬಲಗಳ ನಡುವೆ ಒಳ್ಳೆ ನಿಕರದ ಕದನ ಮಸಗಿತು. ಮಯನ ಆದೇಶದಂತೆ ದೈತ್ಯರು ಸತ್ತವರನ್ನೆಲ್ಲ ಎತ್ತಿ ತಂದು ಸೊದೆಯ ಬಾವಿಯಲ್ಲಿ ತಂದು ಹಾಕುತ್ತಿದ್ದರು. ತಕ್ಷಣದಲ್ಲಿಯೇ ಅವರೆಲ್ಲ ನಿದ್ದೆ ತಿಳಿದು ಎದ್ದಂತೆ ಮತ್ತೆ ಪುನರ್ಜೀವನಪಡೆದು ಇಮ್ಮಡಿಸಿದ ಉತ್ಸಾಹದಿಂದ ಸಂಗ್ರಾಮಕ್ಕೆ ಅಣಿಯಾಗುತ್ತಿದ್ದರು. ಸತ್ತು ಮತ್ತೆ ಬದುಕಿ ಬಂದವರಿಗೆ ಅತಿ ಉತ್ಸಾಹ ಎನಿಸುತ್ತಿತ್ತು. ಅವರು ಹೋರಾಡುವ ಸೈನಿಕರಿಗೆಲ್ಲ ತಮ್ಮ ಪುನರ್ಜೀವನದ ಅನುಭವ ಹೇಳಿ '' ವೀರರೇ, ಏಕೆ ಉದಾಸೀನರಾಗಿರುವಿರಿ ? ಜೀವದ ಹಂಗು ದೊರೆದು ಈ ಪ್ರಮಥಗಣದವರನ್ನು ಹರಿದುಹಾಕಿರಿ. ಕೊಂದುಬಿಟ್ಟರಿ. ನೀವು ಹತರಾದರೆ ಇಲ್ಲಿಯೇ ಸಂಜೀವಿನಿ ಬಾವಿಯಿದೆ. ಹತರಾದ ನಾವೆಲ್ಲವೂ ಮತ್ತೆ ಬದುಕಿ ಬಂದಿದ್ದೇವೆ. ಮೊದಲಿನ ಹತ್ತುಪಟ್ಟು ಬಲ, ಅದಕ್ಕಿಂತ ಹೆಚ್ಚಿನ ಸೌಂದರ್ಯಕಾಂತಿ ನಮಗೆ ಬಂದಿವೆ. ನಿಮಗಾದರೂ ಈಗ ಇದ್ದುದಕ್ಕಿಂತ ಅತ್ಯಂತ ಸುಂದರದೇಹವನ್ನು ಪಡೆಯಬೇಕೆಂದಿದ್ದರೆ ವೈರಿಗಳನ್ನು ಕೊಂದು ನೀವೂ ಸಾಯಿರಿ. ದಿವ್ಯದೇಹ ಪಡೆಯಿರಿ''. ಅವರ ಮಾತು ಕೇಳಿ ದೈತ್ಯದಳಕ್ಕೆಲ್ಲ ಅಮೃತಪ್ರಾಶನ ಮಾಡಿದಂತೆ ಬಲಬಂದಿತು. ಛಲಹೊಕ್ಕಿತು. ಅವರು ಶೌರ್ಯರಸದ ಆವೇಶತುಂಬಿ ದೇವ ಸೈನ್ಯದಲ್ಲಿ ಹೊಕ್ಕು ಹೊಡೆಯಹತ್ತಿದರು. ಸಾಯುವದೂ ಒಂದು ಅವರಿಗೆ ಆಟವೆನಿಸಿತು. ಜೀವದ ಹಂಗುಬಿಟ್ಟು ವೈರಿ ವ್ಯೂಹದಲ್ಲಿಯೇ ಹೊಕ್ಕು ಪ್ರಮಥ ಸೇನೆಯನ್ನೆಲ್ಲ ಹುಚ್ಚಾಪಟ್ಟೆ ಕೊಚ್ಚಿಹಾಕಿದರು. ಪ್ರಮಥಗಣಗಳ ಹೆಣಗಳು ರಾಶಿ ರಾಶಿಯಾಗಿ ಬಿದ್ದವು.

ಆಗ ಶಂಕುಕರ್ಣನು ಶಿವನ ಬಳಿಗೆ ಹೋಗಿ ಮಯನು ಮಾಯೆಯಿಂದ ರಚಿಸಿದ ಅಮೃತಕೂಪದ ಸಮಾಚಾರವನ್ನು ತಿಳಿಸಿ '' ಸ್ವಾಮಿ, ಪ್ರಮಥರು ಕೊಂದುಹಾಕಿದ ದಾನವರೆಲ್ಲರೂ ನೀರುಹಾಕಿ ಬೆಳೆಸಿದ ಪೈರುಗಳಂತೆ ಮತ್ತೆ ಎದ್ದು ಬಂದು ಹೋರಾಡುತ್ತಾರೆ. ಹೀಗಾದರೆ ಮುಂದೇನು ಗತಿ ? ಎಂದು ಬೆಸಗೊಂಡನು. ದೇವಸೇನೆಯಲ್ಲಿ ಅಪಶಕುನಗಳು ತೋರತೊಡಗಿದವು. ರಣರಂಗದಲ್ಲಿ ನಡೆದ

ದಾನವವೀರರ ರೌದ್ರರಸಾವೇಶವನ್ನು ಕಂಡು ಶಿವಬ್ರಹ್ಮಇಂದ್ರಾದಿ ದೇವತೆಗಳೂ ಹೌಹಾರಿದರು. ಶಿವನರಥವೂ ನಿಂತಲ್ಲಿಯೇ ಕುಸಿಯಿತು. ಬ್ರಹ್ಮನು ಕೆಳಗಿಳಿದು ಅದನ್ನು ಮೇಲಕ್ಕೆತ್ತಿದನು. ಹರಿಯು ಎತ್ತಿನ ರೂಪ ತಳೆದು ನೆಲದಲ್ಲಿ ಕುಸಿದು ಬೀಳುತ್ತಿರುವ ಆ ದಿವ್ಯ ರಥವನ್ನು ಎತ್ತಿ ಹಿಡಿದನು. ಅದೇ ವೇಳೆಯಲ್ಲಿ ತಾರಕನು ಬ್ರಹ್ಮನನ್ನು ಪ್ರಹರಿಸಿದನು. ಆಗ ಬ್ರಹ್ಮನು ಏದುಸಿರುಬಿಡುತ್ತ ಚಾಟಿಯೆತ್ತಿ ಕೋಪದಿಂದ ಕಿಡಿಕಿಡಿಯಾದನು.

ದೇವತಾದಳದ ಈ ದುರವಸ್ಥೆಯನ್ನು ಕಂಡು ವೃಷಭರೂಪಿಯಾದ ಮಹಾ ವಿಷ್ಣುವು ಉನ್ಮತ್ತಗೂಳಿಯಂತೆ ದಾನವಸೈನ್ಯದಲ್ಲಿ ಒಳಹೊಕ್ಕು ದೈತ್ಯರನ್ನೆಲ್ಲ ಪುಡಿಪುಡಿಗೈದು ಅಮೃತದ ಬಾವಿ ಇದ್ದಲ್ಲಿಗೆ ಧಾವಿಸಿದನು. ನೇರವಾಗಿ ಬಾವಿಗೆ ಹೋಗಿ ಅಲ್ಲಿಯ ಅಮೃತರೂಪವಾದ ನೀರನ್ನೆಲ್ಲ ಹೀರಿ ಗಟಗಟ ಕುಡಿದು ಬಿಟ್ಟನು. ಆ ಹೊಂಡದಲ್ಲಿಯ ನೀರನ್ನೆಲ್ಲ ಪಾನಮಾಡಿ ಅದು ಪೂರ್ತಿ ಬತ್ತಿಹೋದ ಬಳಿಕ ಅಲ್ಲಿಂದ ಹೊರಟು ದೇವಸೈನ್ಯವಿದ್ದಲ್ಲಿಗೆ ಬಂದು ಮತ್ತೆ ಬಾಣವಾಗಿ ಶಿವನ ಬಿಲ್ಲಿನಲ್ಲಿ ಸೇರಿಕೊಂಡನು.

ಪ್ರಮಥರೂ ಸುರಸೈನಿಕರೂ ಹುರುಪುಗೊಂಡು ಹುಮ್ಮಸ್ಸಿನಿಂದ ಹೋರಾಡಿ ದಾನವರನ್ನು ಸೀಳಿಹಾಕಿದರು. ಅವರ ಬಲವಾದ ಪ್ರಹಾರದಿಂದ ದೈತ್ಯದಳದಲ್ಲಿ ನೆತ್ತರಿನ ನದಿಯೇ ಹರಿಯಿತು. ಹೆಣಗಳ ಹಡದಿಯನ್ನೇ ಅವರು ಹಾಸಿದರು. ಸುರರ ದಿವ್ಯಾಯುಧಗಳ ಪೆಟ್ಟು ಪ್ರಹಾರಗಳನ್ನು ತಾಳಲಾರದೆ ದೈತ್ಯದಾನವರೆಲ್ಲರೂ ದಿಕ್ಕೆಟ್ಟು ಓಡಿ ತಮ್ಮ ತ್ರಿಪುರ ಪಟ್ಟಣದಲ್ಲಿ ಹೋಗಿ ಅವಿತುಕೊಂಡರು. ಆಗ ನಂದಿ, ಇಂದ್ರ, ಸ್ಕಂದ ಮುಂತಾದ ಸುರೋತ್ತಮರು ಆನಂದದಿಂದ ಸಿಂಹನಾದಗೈದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತೇಳನೆಯ ಅಧ್ಯಾಯ ಮುಗಿದುದು*

—o—

ಸಮುದ್ರದ ತೀರಗಳಲ್ಲಿ

ಅಧ್ಯಾಯ - ೧೩೮

ಶಿವನಿಂದ ಹೊಡೆತತಿಂದ ದೈತ್ಯರು ತ್ರಿಪುರ ಸೇರಿದರು

**ಸೂತ ಉವಾಚ :**

**ಪ್ರಮಥೈಃ ಸಮರೇಭಿನ್ನಾಸ್ತ್ರೈಪುರಾಸ್ತೇಸುರಾರಯಃ ।**
**ಪುರಂಪ್ರವಿವಿಶುರ್ಭೀತಾಃ ಪ್ರಮಥೈರ್ಭಗ್ನಗೋಪುರಮ್ ॥**

**ಸೂತ :-** ತ್ರಿಪುರ ದಾನವರು ಪ್ರಮಥರೊಡನೆ ಹೋರಾಡಿ ಸೋತ ಬಳಿಕ ಹೆದರಿ ಹೌಹಾರಿ ತಮ್ಮ ತ್ರಿಪುರ ಪಟ್ಟಣದಲ್ಲಿ ಭಯಭ್ರಾಂತರಾಗಿ ಹೊಕ್ಕರಷ್ಟೇ । ಅವರು ಬರುವಷ್ಟರಲ್ಲಿ ಆ ನಗರದ ಗೋಪುರಗಳನ್ನೆಲ್ಲ ಶಿವಸೇನೆಯ ಪ್ರಮಥರು ಮುರಿದುಹಾಕಿದ್ದರು. ದೇವತೆಗಳಿಂದ ಹೊಡೆತತಿಂದ ದಾನವರು ಹಲ್ಲು ಕಿತ್ತ ಹಾವುಗಳಂತೆ, ಕೊಂಬುಮುರಿದ ಎತ್ತುಗಳಂತೆ, ರೆಕ್ಕೆಇಲ್ಲದ ಹಕ್ಕಿಗಳಂತೆ, ನೀರು ಬತ್ತಿದ ಝರಿಗಳಂತೆ ದಿಕ್ಕೆಟ್ಟು ಹೋದರು. ಅವರ ಸ್ಥಿತಿ ಕರುಣಾಜನಕವಾಗಿತ್ತು. ಮುಂದೆ ಏನು ! ಎಂತು ? ಎಂಬ ಚಿಂತೆ ಅವರ ಅಂತರಂಗವನ್ನು ಕೊರೆಯುತ್ತಿತ್ತು. ದೈತ್ಯರ ಮುಂದಾಳಾದ ಮಯಾಸುರನು ದೈತ್ಯರ ಈ ಭಯಂಕರ ಸೋಲಿಗೆ ಕಾರಣವೇನಿರಬಹುದು ಎಂದು ಯೋಚಿಸುತ್ತಿರುವಾಗಲೇ, ಆ ಅಮೃತಕೂಪದ ಕಾವಲುಗಾರರು ಬಂದು, ''ಎತ್ತಿನ ರೂಪದಿಂದ ಯಾರೋ ಬಂದು, ಬಾವಿಯಲ್ಲಿಯ ಅಮೃತವನ್ನು ಕುಡಿದು ಹೋಗಿದ್ದಾರೆ '' ಎಂದು ತಿಳಿಸಿದರು.

''ಓಹೋ ! ಹಾಗಾದರೆ ನಾವೆಲ್ಲ ಕೆಟ್ಟೆವು. ನೀವೆಲ್ಲ ಸತ್ತಿರಿ. ಈ ತ್ರಿಪುರವು ನಷ್ಟವಾದಂತೆಯೇ. ಇದು ಶ್ರೀ ವಿಷ್ಣುವಿನ ಕೆಲಸವೇ. ನಾನು ಇದನ್ನು ಎಷ್ಟು ಗುಟ್ಟಾಗಿ ಇಟ್ಟಿದ್ದರೂ, ಅವನು ಅದನ್ನು ಪತ್ತೆ ಹಚ್ಚಿ ಕುಡಿದು ಹೋಗಿಬಿಟ್ಟ. ಇನ್ನು ಮುಂದೆ ನಾವೇನು ಮಾಡಬೇಕು ? ನಾನು ಇನ್ನೊಂದು ಹಂಚಿಕೆಹಾಕುತ್ತೇನೆ. ನೀವೆಲ್ಲ ಸಮ್ಮತಿಸಿದರೆ ನಾವೆಲ್ಲರೂ ಸಮುದ್ರದಮೇಲೆ ಇದ್ದು ಪ್ರಮಥರನ್ನು ಎದುರಿಸೋಣ. ಸಾಗರದ ಮೇಲುಗಡೆ ಅವರ ಪ್ರಯತ್ನಗಳೆಲ್ಲ ಭಗ್ನವಾಗಿ ಅವರ ಉತ್ಸಾಹವೆಲ್ಲ ಅಡಗಿ ಹೋಗುವದು. ಒಂದು ವೇಳೆ ಅಲ್ಲಿಯೂ ವೈರಿಗಳು ನಮ್ಮನ್ನು ಬಲವಾಗಿ ಪ್ರಹರಿಸಿದರೆ ನಾವು ಅಪಾರ ಸಾಗರದ ಜಲಗರ್ಭದಲ್ಲಿ ಹೊಕ್ಕು ಪಾರಾಗಬೇಕು.''

ಮಯಾಸುರನು ಹೇಳಿದ ಈ ಯೋಜನೆ ಎಲ್ಲರಿಗೂ ಸಮ್ಮತವಾಯಿತು. ಕೂಡಲೇ ತ್ರಿಪುರದಜನಸಹಿತವಾಗಿ ಅವನು ಸಾಗರಕ್ಕೆ ನಡೆದನು. ತ್ರಿಪುರವು ಆಳವಾದ ಸಮುದ್ರದ ನೀರಿನಲ್ಲಿ ಇಳಿಯಿತು. ಆದರೂ ಅದರ ಬಣ್ಣ, ಶಿಖರ, ಗೋಪುರ, ಅಲಂಕಾರ ಯಾವುದು ಅಳಿಸದೆ, ಅಳಿಯದೆ ಮೊದಲಿನಂತೆ ಇದ್ದವು.

ಹೀಗೆ ಒಮ್ಮೆಲೆ ದೈತ್ಯರ ತ್ರಿಪುರಪಟ್ಟಣವು ಕಣ್ಮರೆಯಾದದ್ದನ್ನು ಕಂಡು ಪರಮೇಶ್ವರನು ತನ್ನ ರಥವನ್ನು ನಡೆಸುವ ಬ್ರಹ್ಮದೇವರನ್ನು ಕುರಿತು ''ಪೂಜ್ಯನಾದ ಪಿತಾಮಹಾ, ದಾನವರು ನಮಗೆ ಹೆದರಿ ಜಲಧಿಯನ್ನು ಆಶ್ರಯಿಸಿದ್ದಾರೆ. ತ್ರಿಪುರಸಹಿತವಾಗಿ ಆ ದೈತ್ಯರು ಓಡಿಹೋದರು. ನೆಟ್ಟಗೆ ತಮ್ಮ ರಥವನ್ನು ಹೊರಳಿಸಿರಿ. ಬೇಗನೇ ಅವರನ್ನು ಬೆನ್ನಟ್ಟಿ ಹೋಗೋಣ'' - ಎಂದು ಹೇಳಿದನು.

ಅದರಂತೆ, ಧೂರ್ಜಟಿಯ ದಿವ್ಯರಥವು ಸಾಗರಕ್ಕೆ ಅಭಿಮುಖವಾಗಿ ಹೊರಟ ಕೂಡಲೇ ಎಲ್ಲ ದೇವತೆಗಳೂ ಅದನ್ನು ಸುತ್ತುಗಟ್ಟಿ ನಡೆದು ಎಲ್ಲರೂ ಪಶ್ಚಿಮ ಸಮುದ್ರಕ್ಕೆ ಬಂದು ತಲುಪಿದರು. ಅಲ್ಲಿ ದೈತ್ಯರೆಲ್ಲರೂ ತ್ರಿಪುರದುರ್ಗದಲ್ಲಿ ಪ್ರವೇಶಿಸಿದ್ದನ್ನು ನೋಡಿ, ಇಂದ್ರನನ್ನು ಕರೆದು '' ದೇವೇಂದ್ರ, ದಾನವರು ಸಮುದ್ರದತಳಕ್ಕೂ ತ್ರಿಪುರವನ್ನು ಇಳಿಸಿ, ತಾವು ಅದರಲ್ಲಿ ಅಡಗಿಕೊಂಡಿದ್ದಾರೆ. ಯಮ, ವರುಣ, ಸ್ಕಂದ ಹಾಗೂ ಇತರ ಗಣಗಳೊಡನೆ ನಾನು ಅವರನ್ನು ಸಂಹರಿಸುತ್ತೇನೆ. ನೀನೂ ಕೆಳಗಿಳಿದು ಒಳಹೊಕ್ಕು ಅವರನ್ನು ವಧಿಸು '' ಎಂದು ಹೇಳಿ, ಶಿವನು ಶರಧಿಯ ಸಲಿಲಾಂತರಾಳದಲ್ಲಿ ಪ್ರವೇಶಿಸಿದನು. ಇಂದ್ರನು ಅವನ ಅಪ್ಪಣೆಯಂತೆ ಕಾರ್ಯಪ್ರವೃತ್ತನಾದನು. ಇದನ್ನು ನೋಡಿ ದೈತ್ಯರೆಲ್ಲರೂ ಹೊರಬಿದ್ದು ಸಮುದ್ರದ ಮೇಲೆ ಬಂದು ನಿಂತರು. ಆಗ ಪರಮೇಶ್ವರನು ಪ್ರಮಥಗಣ ಹಾಗೂ ದೇವತಾದಳದೊಂದಿಗೆ ಅವರು ಇದ್ದಲ್ಲಿಯೇ ಬಾಣಬಿಟ್ಟು ಪ್ರಹಾರಗೈಯತೊಡಗಿದರು. ದೈತ್ಯಧ್ವಂಸಕ್ಕಾಗಿ ಧೈರ್ಯೋತ್ಸಾಹದಿಂದ ಕೂಡಿದ ಕಪಾಲಿಯ ಕಣ್ಣುಗಳು ಅಗಲಿ ಅರಳಿದವು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಾಮೂವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ನಂದೀಶ್ವರನಿಂದ, ತಾರಕಾಸುರ ಸಂಹಾರ

ಅಧ್ಯಾಯ - ೧೩೯

**ಸೂತ ಉವಾಚ**

**ಮಘುವಂತು ನಿಹಂತುಂ ತಾನಸುರಾನಮರೇಶ್ವರಃ ।**
**ಲೋಕಪಾಲಾ ಯಯುಃಸರ್ವೇಗಣಪಾಲಾಶ್ಚ ಸರ್ವಶಃ ॥**

**ಸೂತ** :- ದೇವಗಣದ ದೊರೆಯಾದ ಇಂದ್ರನೂ ಲೋಕಪಾಲಕರೂ ಗಣಾಧಿಪತಿಗಳೂ ದಾನವರನ್ನು ಧ್ವಂಸಗೈಯಲು ಹೊರಟರು. ಅವರನ್ನು ಕಂಡು, ದೈತ್ಯರೆಲ್ಲರೂ ಕ್ಷಣಹೊತ್ತು ಕ್ಷುಬ್ಧರಾಗಿ, ಬಳಿಕ ರಣೋತ್ಸಾಹದಿಂದ ಹೋರಾಟಕ್ಕೆ ಅಣಿಯಾದರು. ಎರಡೂ ಸೇನೆಗಳ ನಡುವೆ ಘೋರವಾದ ಕಾಳಗವು ಮಸಗಿತು. ಚಿತ್ರವಿಚಿತ್ರವಾದ ತೀಕ್ಷ್ಣಆಯುಧಗಳಿಂದ ಮಹಾಶೂರರಾದ ದೇವತೆಗಳು ದಾನವರನ್ನು ಮುಗಿಲು ಮಾರ್ಗದಲ್ಲಿಯೇ ಕಡಿದು, ಕತ್ತರಿಸಿಹಾಕಿದರು. ತುಂಡತುಂಡಾದ ರಾಕ್ಷಸರ ಶರೀರದ ಅನೇಕ ತುಣುಕಗಳೂ ಅಸಂಖ್ಯ ರುಂಡಮುಂಡದಂಡಗಳೂ ಸಾಗರದ ನೀರಿನಲ್ಲಿ ಬಿದ್ದವು. ಅವುಗಳನ್ನು ತಿನ್ನಲು ಮೀನ, ಮೊಸಳೆ, ತಿಮಿಂಗಿಲುಗಳು ಮುಕುರುತ್ತಿದ್ದವು. ಆಕಾಶದಿಂದ ಅವಿರತವಾಗಿ ಆ ನೆತ್ತರಿನ ಕೋಡಿಯೊಂದಿಗೆ ಕಡಲಿನಾಳಕ್ಕೆ ಬೀಳುತ್ತಿದ್ದ ರಾಕ್ಷಸರ ಅಂಗಾಂಗಳನ್ನು ತಿನ್ನಲು ಸಮುದ್ರಜಂತುಗಳಲ್ಲಿ ಕಚ್ಚಾಟವೇ ನಡೆಯುತ್ತಿತ್ತು. ಮೇಲೆ ಮುಗಿಲಲ್ಲಿ ದೇವದಾನವ ಯುದ್ಧ. ಕೆಳಗೆ ಸಮುದ್ರದಲ್ಲಿ ಜಲಚರ ಪ್ರಾಣಿಗಳ ಯುದ್ಧ. ಎರಡೂ ಅಷ್ಟೇ ಭೀಕರವಾಗಿ ನಡೆದಿದ್ದವು. ಆಗಸದ ಅಂಗಳದಲ್ಲಿ ಕುಲಗಿರಿಗಳೇ ಕದನಕ್ಕಿಳಿದಂತೆ ತೋರುತ್ತಿತ್ತು. ದೈತ್ಯಕಾಯದ ಆ ದೇವಸುರರ ಯುದ್ಧ ಅತಿ ಭೀಕರವಾಗಿತ್ತು.

ದೇವೇಂದ್ರನು ದೊಡ್ಡ ಸೇನೆಯೊಂದಿಗೆ ಆ ತ್ರಿಪುರದುರ್ಗದ ಮೂಡಣ ದಿಕ್ಕಿನ ಮಹಾದ್ವಾರವನ್ನು ಮುಟ್ಟಿದನು. ಸ್ಕಂದನು ಉತ್ತರ ದ್ವಾರವನ್ನು, ಯಮ ಕುಬೇರರು ಪಶ್ಚಿಮ ಬಾಗಿಲವನ್ನೂ, ಸ್ವತಃ ಶಿವನು ದಿವ್ಯ ರಥವನ್ನು ಏರಿ, ವೈರಿಪಟ್ಟಣದ ದಕ್ಷಿಣ ದ್ವಾರವನ್ನು ಮುತ್ತಿ, ಬಾಣಗಳ ಮಳೆಗೆರೆದರು. ಆ ನಿಟ್ಟಿನ ಮನೆ, ಮಠ, ಮಂದಿರಗಳನ್ನೆಲ್ಲ ನೆಲಸಮಮಾಡಿದರು. ನಿರಾಶ್ರಯರಾದ ಹೆಂಗಸರ ಚೀರಾಟ, ಚಿಕ್ಕಮಕ್ಕಳ ಪರದಾಟ, ಮುದುಕರ ಗೋಳಾಟಗಳು ಅವರ್ಣನೀಯವಾಗಿದ್ದವು.

ಆಗ ತಾರಕಾಸುರನು ಕ್ರೋಧಾಂಧನಾಗಿ ಒಂದು ಹೆಮ್ಮರವನ್ನೇ ಕಿತ್ತು ಕೊಂಡು ನಾಗ, ಸುರ, ಪ್ರಮಥಗಣಾಧೀಶರನ್ನು ಸಂಹರಿಸುತ್ತ ಮಹಾದೇವರಮೇಲೆ ಏರಿಬಂದನು. ಅವನನ್ನು ದಾರಿಯಲ್ಲಿ ಎದುರಿಸಿದ ಆದಿಶೇಷ. ಸುಧನ್ವ ಮುಂತಾದವರು ಹೊಡೆತ ತಿಂದು, ಕಳವಳಿಸಿ ಹೋದರು. ಆಗ ಶಿವನ ಪಕ್ಕದಲ್ಲಿ ನಿಂತ ನಂದೀಶ್ವರನು ತಾರಕಾಸುರನ ಕೊಡಲಿಯ ಪ್ರಹಾರದಿಂದ ತಾಳ್ಮೆಗೆಟ್ಟು,

ಸಿಡಿದೆದ್ದನು. ತನ್ನ ಕೈಯಲ್ಲಿ ಇರುವ ಖಡ್ಗವನ್ನು ಮತ್ತೊಮ್ಮೆ ಮಸೆದು, ತಾರಕನ ಎಡಗಡೆಯ ಹೆಗಲಿನ ಮೇಲೆ ಏಟುಹಾಕಿ, ಜನಿವಾರದ ಗುಂಟ ಅವನ ದೇಹವನ್ನೆಲ್ಲ ಸೀಳಿಹಾಕಿದನು ಇದರಿಂದ ದೈತ್ಯರಿಗೆ ಬರಸಿಡಿಲು ಎರಗಿದಂತಾಯಿತು. ಇದ್ದ ಉತ್ಸಾಹವೆಲ್ಲ ಉಡುಗಿಹೋಯಿತು. ದೇವತೆಗಳು ಆನಂದದಿಂದ ಸಿಂಹನಾದ ಮಾಡುತ್ತ ಈಶ್ವರನನ್ನು ಪೂಜಿಸಿದರು.

*ಇತಿ ಮತ್ಸ್ಯ ಮಹಾಪುರಾಣ ಭಾಗ-೧ರಲ್ಲಿ ನೂರಮೂವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

## ಪುರಾಣ ಶ್ರವಣಕಾಲದಲ್ಲಿ ಅನುಸರಿಸತಕ್ಕ ನಿಯಮಗಳು

ಅಧ್ಯಾಯ - ೧೪೦

**ಶ್ರದ್ಧಾಭಕ್ತಿಸಮಾಯುಕ್ತಾ ನಾನ್ಯಕಾರ್ಯೇಷು ಲಾಲಸಾಃ ।**
**ವಾಗ್ಯತಾ ಃ ಶುಚಯೋಽವ್ಯಗ್ರಾಃ ಶ್ರೋತಾರಃ ಪುಣ್ಯ ಭಾಗಿನಃ ॥**

ಪುರಾಣವನ್ನು ಕೇಳುವವರು ಭಕ್ತಿಯಿಂದ ಕೂಡಿದವರಿರಬೇಕು. ಬೇರೆ ಕಾರ್ಯದಕಡೆಗೆ ಲಕ್ಷ್ಯಕೊಡಬಾರದು. ಶುದ್ಧಮನಸ್ಸಿನಿಂದ ಮೌನವಾಗಿ ಕೇಳಬೇಕು. ಏಕಚಿತ್ತದಿಂದ ಪುರಾಣಶ್ರವಣಮಾಡಿದಲ್ಲಿ ಪುಣ್ಯ ಲಾಭವಿದೆ.

**ಅಭಕ್ತ್ಯಾಯೇಕಥಾಂ ಪುಣ್ಯಾಂ ಶೃಣ್ವಂತಿಮನುಜಾಧಮಾಃ ।**
**ತೇಷಾಂಪುಣ್ಯಫಲಂ ನಾಸ್ತಿ ದುಃಖಂಸ್ಯಾಜ್ಜನ್ಮಜನ್ಮನಿ ॥**

ಪುಣ್ಯಕಥೆಯನ್ನು ಭಕ್ತಿಯಿಲ್ಲದೇ ಕೇಳಿದವರು ಅಧಮ ಮನುಷ್ಯರೆಂದು ತಿಳಿಯಲ್ಪಡುತ್ತಾರೆ. ಅವರಿಗೆ ಪುಣ್ಯಫಲವಿಲ್ಲ. ಅಲ್ಲದೆ ಜನ್ಮಜನ್ಮದಲ್ಲಿ ದುಃಖವೇ ಅವರಿಗೆ ಬರುವ ಪ್ರತಿಫಲ

**ಪುರಾಣಂಯೇಚಸಂಪೂಜ್ಯ ತಾಂಬೂಲಾದ್ಯೈವರುಪಾಯನೈಃ ।**
**ಶೃಣ್ವಂತಿಚಕಥಾಂಭಕ್ತ್ಯಾನ ದರಿದ್ರಾಸ್ಯುರ್ನ ಸಂಶಯಃ ॥**

ಪುರಾಣ ಹೇಳುವವರಿಗೆ ಗಂಧ, ಪುಷ್ಪ, ಧೂಪ, ದೀಪ, ತಾಂಬೂಲಾದಿಗಳನ್ನು ಅರ್ಪಿಸಿ, ಪೂಜಿಸಿ, ಭಕ್ತಿಯಿಂದ ಕೇಳತಕ್ಕವರಿಗೆ ಬಡತನವು ಎಂದೂ ಬಾರದು. ಇದರಲ್ಲಿ ಸಂಶಯವಿಲ್ಲ.

**ಕಥಾಯಾಂ ಕೀರ್ತ್ಯಮಾನಾಯಾಂ ಯೇಗಚ್ಛಂತ್ಯನ್ಯತೋ ನರಾಃ ।**
**ಭೋಗಾಂತರೇ ಪ್ರಣಶ್ಯಂತಿ ತೇಷಾಂದಾರಾಶ್ಚ ಸಂಪದಃ ॥**

ಕಥೆಯು ನಡೆದಿರುವಾಗ ಸುಖವಿಲಾಸಗಳಿಗೆ ಮನಸ್ಸು ನೀಡಿ, ನಡುವೆ ಎದ್ದು ಹೋಗುವವರು ಪತ್ನಿ ಹಾಗೂ ಸಂಪತ್ತನ್ನು ಕಳೆದುಕೊಳ್ಳುವರು.

**ಸೋಷ್ಣೀಷಮಸ್ತಕಾಯೇಚ ಕಥಾಂಶ್ರೃಣ್ವಂತಿ ಪಾವನೀಂ ।**
**ತೇಬಲಾಕಾಃ ಪ್ರಜಾಯಂತೇಪಾಪಿನೋ ಮನುಜಾಧಮಾ ಃ ॥**

ತಲೆಗೆ ರುಮಾಲು, ಟೊಪ್ಪಿಗೆ ಮುಂತಾದವುಗಳನ್ನು ಹಾಕಿಕೊಂಡು ಪುರಾಣ ಕೇಳಲು ಕೂಡಬಾರದು. ಆದರಿಂದ ಪಾಪವಿದೆ. ಅಂಥ ನೀಚಾಧಮ ಮಾನವರು ಜನ್ಮಾಂತರದಲ್ಲಿ ಕೊಕ್ಕರೆಯಾಗಿ ಹುಟ್ಟುವರು.

**ತಾಂಬೂಲಂ ಭಕ್ಷಯಂತೋ ಯೇಕಥಾಂ ಶೃಣ್ವಂತಿ ಪಾವನೀಂ ।**
**ಶ್ವವಿಷ್ಠಾಂಖಾದಯಂತ್ಯೇತಾನ್ನಯಂತೋ ಯಮಕಿಂಕರಾ ಃ ॥**

ತಾಂಬೂಲವನ್ನು ಬಾಯಿಯಲ್ಲಿ ತುಂಬಿಕೊಂಡು ಪುಣ್ಯಕಥೆಯನ್ನು ಯಾರು ಕೇಳುವರೋ, ಅವರನ್ನು ಯಮದೂತರು ಎಳೆದೊಯ್ದು ನಾಯಿಯ ಮಲವನ್ನು ತಿನ್ನಿಸುತ್ತಾರೆ.

**ಯೇಚತುಂಗಾಸನಾರೂಢಾ ಃ ಕಥಾಂಶ್ರೃಣ್ವಂತಿದಾಂಭಿಕಾಃ ।**
**ಅಕ್ಷಯ್ಯನರಕಾನ್ ಭುಕ್ತ್ವಾತೇ ಭವಂತ್ಯೇವ ವಾಯಸಾಃ ॥**

ಎತ್ತರವಾದ ಸ್ಥಾನ ಆಸನಗಳ ಮೇಲೆ ಕುಳಿತುಕೊಂಡು ಕಥೆಯನ್ನು ಕೇಳುವ ಡಂಭಾಚಾರಿಗಳು ನರಕದಲ್ಲಿ ಬಹುಕಾಲದ ತನಕ ಬಗೆಬಗೆಯ ಯಾತನೆಪಡುತ್ತಾರೆ ಬಳಿಕ ಕಾಗೆಗಳಾಗಿ ಹುಟ್ಟುತ್ತಾರೆ.

**ಯೇವ್ವೈವರಾಸನಾರೂಢಾ ಯೇಚಮಧ್ಯಾಸನ ಸ್ಥಿತಾಃ ।**
**ಶೃಣ್ವಂತಿ ಸತ್ಕಥಾಂತೇವ್ವೈಭವಂತ್ಯರ್ಜುನ ಪಾದಪಾಃ ॥**

ಸೋಫಾ, ಕುರ್ಚಿ, ಮುಂತಾದ ಉತ್ತಮ ಆಸನಗಳಲ್ಲಿ ಅಥವಾ ಬೆಂಚು, ಮಣೆ ಮುಂತಾದ ಮಧ್ಯಮಆಸನಗಳ ಮೇಲೆ ಕುಳಿತು ಪುರಾಣ ಕೇಳುವವರು ಜನ್ಮಾಂತರದಲ್ಲಿ ಅತ್ತಿಮರವಾಗಿ ಹುಟ್ಟುತ್ತಾರೆ

**ಅಸಂಪ್ರಣಮ್ಯ ಶೃಣ್ವಂತಿ ವಿಷಭಕ್ಷಾಭವಂತಿ ತೇ ।**
**ತಥಾಶಶಾನಾಃಶೃಣ್ವಂತಿ ಭವಂತ್ಯಜಗರಾ ನರಾಃ ॥**

ಬಂದಕೂಡಲೇ ಪುರಾಣ ಪುಸ್ತಕಕ್ಕೂ, ಪುರಾಣ ಹೇಳುವವರಿಗೂ ನಮಸ್ಕರಿಸದೇ ಕಥಾಶ್ರವಣಕ್ಕೆ ತೊಡಗುವವರು ವಿಷಭಕ್ಷಕರಾಗುವರು. ಅಲ್ಲದೇ ಮಲಗಿ ಕೇಳುವವರು ಆ ಪಾಪಕ್ಕಾಗಿ ಹೆಬ್ಬಾವಾಗಿ ಜನ್ಮತಳೆಯುವರು.

**ಯಃಶೃಣೋತಿಕಥಾಂವಕ್ತುಃ ಸಮಾನಾಸನಸಂಸ್ಥಿತಃ ।**
**ಗುರುತಲ್ಪಸಮಂಪಾಪಂಸಂಪ್ರಾಪ್ಯ ನರಕಂ ವ್ರಜೇತ್ ॥**

ಕಥೆಯನ್ನು ಹೇಳುವವನ ಸರಿಸಮಾನವಾದ ಆಸನದಮೇಲೆ ಕುಳಿತು ಕೇಳುವವನು ಗುರುಪತ್ನೀ ಸಮಾಗಮದ ಪಾಪಹೊಂದುತ್ತಾನೆ. ಕೊನೆಗೆ ರೌರವ ನರಕಕ್ಕೆ ಹೋಗುವನು.

**ಯೇನಿಂದಂತಿ ಪುರಾಣಜ್ಞಾನ್ ಕಥಾಂವೈಪಾಪಹಾರಿಣೀಂ।**
**ತೇವೈಜನ್ಮಶತಂ ಮರ್ತ್ಯಾ ಸೂಕರಾಃ ಸಂಭವಂತಿ ಹಿ ॥**

ಪುರಾಣಗಳ ಮರ್ಮಬಲ್ಲ ಪಂಡಿತರನ್ನೂ ಮತ್ತು ಪಾಪಪರಿಹಾರಕ ಪುರಾಣದ ಪುಣ್ಯಕಥೆಯನ್ನೂ ಯಾರು ಅಪಹಾಸ್ಯ ಮಾಡುತ್ತಾರೋ ಅವರು ನೂರುಜನ್ಮಗಳಲ್ಲಿ ಹಂದಿಗಳಾಗಿ ಹುಟ್ಟುವರು.

**ಕಥಾಯಾಂ ಕೀರ್ತ್ಯಮಾನಾಯಾಂ ಯೇವದಂತಿ ದುರುತ್ತರಂ ।**
**ತೇಗರ್ದಭಾಃ ಪ್ರಜಾಯಂತೇ ಕೃಕಲಾಸಾಸ್ತಥೈವ ಚ ॥**

ಪುರಾಣಶ್ರವಣ ಕಾಲದಲ್ಲಿ ಅಸಭ್ಯ ಮಾತುಗಳನ್ನು ಆಡುವವರು ಮುಂದಿನ ಜನ್ಮದಲ್ಲಿ ಪಾಪದ ಫಲವಾಗಿ ಕತ್ತೆ, ಕೋಳಿಗಳಾಗಿ ಜನಿಸುವರು.

**ಕದಾಚಿದಪಿಯೇಪುಣ್ಯಾಂ ನ ಶೃಣ್ವಂತಿ ಕಥಾಂನರಾಃ ।**
**ತೇಭುಕ್ತ್ವಾನರಕಾನ್ ಘೋರಾನ್‌ಭವಂತಿವನಸೂಕರಾಃ ॥**

ಒಂದು ಸಲವಾದರೂ ಪುಣ್ಯಕರವಾದ ಕಥೆಯನ್ನು ಕಿವಿಗೊಟ್ಟು ಕೇಳದವರು ರೌರವ ನರಕಕ್ಕೆ ಗುರಿಯಾಗುವರು. ಬಳಿಕ ಕಾಡುಹಂದಿಯಾಗಿ ಜನಿಸುವರು.

**ಯೇಕಥಾಮನುಮೋದಂತೇ ಕೀರ್ತ್ಯಮಾನಾಂನರೋತ್ತಮಾಃ ।**
**ಅಶೃಣ್ವಂತೋಽಪಿತೇಯಾಂತಿಶಾಶ್ವತಂ ಪರಮಂ ಪದಂ ॥**

ಸತ್ಕಥೆ ನಡೆಯಲು ಅಡ್ಡಿಮಾಡದೇ ಪೂರ್ಣಸಹಕಾರನೀಡುವವರು ಸತ್ಪುರುಷರೆನಿಸುವರು. ಅವರು ಪುರಾಣ ಕೇಳದಿದ್ದರೂ ಶಾಶ್ವತವಾದ ಸದ್ಗತಿ ಹೊಂದುವರು.

**ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂಕುರ್ವಂತಿ ಯೇಶಠಾಃ ।**
**ಕೋಟ್ಯಬ್ದಂನರಕಾನ್ ಭುಕ್ತ್ವಾ ಭವಂತಿಗ್ರಾಮಸೂಕರಾಃ ॥**

ಕಥಾ ಶ್ರವಣಕಾಲದಲ್ಲಿ ಅದಕ್ಕೆ ಅಡ್ಡಿ ತಂದೊಡ್ಡುವವರು ಮೂರ್ಖರು. ಕೋಟಿವರುಷ ಪರಿಯಂತ ನರಕದಲ್ಲಿ ದುಃಖಿಗಳಾಗಿ ಕೊರಗುವರು. ತರುವಾಯ ಊರ ಹಂದಿಗಳಾಗಿ ಜನ್ಮ ತಳೆಯುವರು.

**ಯೇಶ್ರಾವಯಂತಿಮನುಜಾನ್ ಪುಣ್ಯಾಂ ಪೌರಾಣಿಕೀಂಕಥಾಂ ।**
**ಕಲ್ಪಕೋಟಿ ಶತಂಸಾಗ್ರಂತಿಷ್ಠಂತಿ ಬ್ರಹ್ಮಣಃ ಪದೇ ॥**

ಪುಣ್ಯ ಪ್ರದಾಯಕ ಪುರಾಣಕಥೆಯನ್ನು ಜನರಿಗೆ ಹೇಳುವ ಧರ್ಮವಂತರು ಕೊಟ್ಯಾನುಕೋಟಿ ವರುಷ ಬ್ರಹ್ಮಲೋಕದಲ್ಲಿ ಸುಖದಿಂದ ಬಾಳುವರು.

**ಆಸನಾರ್ಥಂ ಪ್ರಯಚ್ಛಂತಿ ಪುರಾಣಜ್ಞಸ್ಯ ಯೇನರಾಃ ।**
**ಕಂಬಲಾಜಿನವಾಸಾಂಸಿ ಮಂಚಂ ಫಲಕಮೇವ ಚ ॥**

ಪುರಾಣ ಹೇಳುವವರಿಗೆ ಆಸನಕ್ಕಾಗಿ ಕಂಬಳಿ, ಕೃಷ್ಣಾಜಿನ, ವಸ್ತ್ರ, ಕಾಲುಮಣೆ, ಮಣೆ ಮುಂತಾದವುಗಳನ್ನು ಯಾರು ಕೊಡುತ್ತಾರೋ ಅವರು ಸ್ವರ್ಗಲೋಕ ಹೊಂದಿ, ಎಲ್ಲಸುಖಅನುಭವಿಸುವರು. ಬ್ರಹ್ಮ ಇಂದ್ರ ಮುಂತಾದ ದೇವಲೋಕದಲ್ಲಿ ಸ್ವರ್ಗಸುಖ ಅನುಭವಿಸುವರು.

**ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್‌ಯಥೇಪ್ಸಿತಾನ್ ।**
**ಸ್ಥಿತ್ವಾ ಬ್ರಹ್ಮಾದಿಲೋಕೇಷು ಪದಂಯಾಂತಿನಿರಾಮಯಂ ॥**

ಪೌರಾಣಿಕರಿಗೆ ಸಕಲವಿಧ ಮರ್ಯಾದೆ ಸಲ್ಲಿಸುವವರಿಗೆ ಈ ಜನ್ಮದಲ್ಲಿ ಸುಖಸಂಪದಗಳು ದೊರೆತು, ನಂತರ ಉಪದ್ರವ ಇಲ್ಲದೆ ಮೋಕ್ಷ ಪದವಿಯನ್ನು ಪಡೆಯುವರು.

**ಪುರಾಣಸ್ಯ ಪ್ರಯಚ್ಛಂತಿ ಯೇವರಾಸನಮುತ್ತಮಂ ।**
**ಭೋಗಿನೋ ಜ್ಞಾನಸಂಪನ್ನಾ ಭವಂತಿಚಭವೇ ಭವೇ ॥**

ಪುರಾಣ ಗ್ರಂಥಕ್ಕೆ ಒಳ್ಳೆಯ ಪೀಠವನ್ನು ತಂದುಕೊಟ್ಟವರು ಇಲ್ಲವೆ ದಾನ ಮಾಡಿದವರು ಪ್ರತಿಯೊಂದು ಜನ್ಮದಲ್ಲಿ ಸುಖಿಗಳಾಗಿ ಜ್ಞಾನವಂತರಾಗುತ್ತಾರೆ.

**ಯೇಮಹಾ ಪಾತಕೈರ್ಯುಕ್ತಾ ಉಪಪಾತಕಿನಶ್ಚಯೇ ।**
**ಪುರಾಣ ಶ್ರವಣಾದೇವ ತೇ ಪ್ರಯಾಂತಿಪರಂಪದಂ ॥**

ಮದ್ಯಪಾನ, ಸ್ವರ್ಣಸ್ತೇಯ ಮುಂತಾದ ಕೆಟ್ಟಕೆಲಸಗಳನ್ನು ಮಾಡಿದವರು, ಉಳಿದ ಸಾಮಾನ್ಯ ಪಾಪಗಳನ್ನು ಮಾಡಿದವರು ಪುರಾಣಶ್ರವಣಮಾತ್ರದಿಂದ ಮುಕ್ತರಾಗುವ್ವರು, ಸದ್ಗತಿಪಡೆಯುವರು

**ಏವಂ ವಿಧಿವಿಧಾನೇನ ಪುರಾಣಂ ಶೃಣುಯಾನ್ನರಃ ।**
**ಭುಕ್ತ್ವಾ ಭೋಗಾನ್ ಯಥಾಕಾಮಂ ವಿಷ್ಣುಲೋಕಂಪ್ರಯಾತಿ ಸಃ ॥**

ಮೇಲಿನ ನಿಯಮಗಳಂತೆ ಪುರಾಣ ಕೇಳುವವನು ತನ್ನಇಷ್ಟಬಂದ ಸುಖಭೋಗಗಳನ್ನು ಅನುಭವಿಸಿ ಕೊನೆಗೆ ವಿಷ್ಣುಲೋಕಕ್ಕೆ ತೆರಳುವನು.

**ಪುಸ್ತಕಂ ಪೂಜಯೇತ್ಪಶ್ಚಾದ್ವಸ್ತ್ರಾಲಂಕರಣಾದಿಭಿಃ ।**
**ವಾಚಕಂವಿಪ್ರಸಂಯುಕ್ತಂ ಪೂಜಯೇಚ್ಚ ಪ್ರಯತ್ನವಾನ್ ॥**

ಪುರಾಣ ಶ್ರವಣ ಮುಗಿದ ಬಳಿಕ ಪುರಾಣ ಪುಸ್ತಕವನ್ನು ವಸ್ತ್ರಾಲಂಕಾರಗಳಿಂದ ಪೂಜಿಸಬೇಕು. ಅಲ್ಲದೇ ಪುರಾಣ ಓದಿ ಹೇಳಿದ ಪೌರಾಣಿಕರನ್ನೂ ಬ್ರಾಹ್ಮಣರನ್ನೂ ಪ್ರಯತ್ನದಿಂದ ಸತ್ಕರಿಸಬೇಕು.

ಗೋಭೂಮಿ ಹೇಮವಸ್ತ್ರಾಣಿ ವಾಚಕಾಯ ನಿವೇದಯೇತ್ ॥
ಬ್ರಾಹ್ಮಣಾನ್ ಭೋಜಯೇತ್ವಶ್ಚಾನ್ಮಂಡ ಲಡ್ಡಕ ಪಾಯಸೈ : ॥

ಹಸು, ಭೂಮಿ, ಬಂಗಾರ, ಅರಿವೆ ಇವೆಲ್ಲವುಗಳನ್ನು ಪುರಾಣ ಹೇಳಿದರವರಿಗೆ ಕೊಟ್ಟು ಗೌರವಿಸಬೇಕು. ಮಂಡಿಗೆ, ಲಾಡು, ಪಾಯಸ ಮುಂತಾದ ಪಕ್ವಾನ್ನದ ಅಡುಗೆ ಮಾಡಿಸಿ, ಭೋಜನದಿಂದ ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಮಾಡಬೇಕು.

''ತ್ವಂ ವ್ಯಾಸರೂಪೀ ಭಗವನ್ ಬುದ್ಧ್ಯಾಚಾಂಗಿರಸೋಪಮಃ ।
ಪುಣ್ಯವಾನ್‌ಶೀಲಸಂಪನ್ನಃ ಸತ್ಯವಾದೀ ಜಿತೇಂದ್ರಿಯಃ ॥

ಪ್ರಸನ್ನ ಮಾನಸಂ ಕುರ್ಯಾದ್ದಾನಮಾನೋಪಚಾರತಃ ।
ತ್ವತ್‌ಪ್ರಸಾದಾ ದಿಮಾನ್ ಧರ್ಮಾನ್ ಸಂಪೂರ್ಣಾನ್ ಶ್ರುತವಾನಹಂ॥

ಏವಂಪ್ರಾರ್ಥನಕಂ ಕೃತ್ವಾವ್ಯಾಸಸ್ಯ ಪರಮಾತ್ಮನಃ ॥
ಯಶಸ್ವೀ ಚ ಭವೇನ್ನಿತ್ಯಂ ಯಃ ಕುರ್ಯಾದೇವಮಾದರಾತ್ ॥

ಪುರಾಣ ಬಲ್ಲವನಾದ ಪಂಡಿತ ಬ್ರಾಹ್ಮಣೋತ್ತಮನೇ, ನೀನು ಪರಮಪೂಜ್ಯನಾದ ಸಾಕ್ಷಾತ್ ವ್ಯಾಸನಿದ್ದಂತೆಯೇ ಸರಿ. ಬುದ್ಧಿಯಲ್ಲಿ ಬೃಹಸ್ಪತಿಗೆ ಸರಿಸಮಾನನಿರುವೆ. ನೀನು ಪುಣ್ಯವಂತ, ಸದಾಚಾರಿ, ಸತ್ಯವಂತ, ಜಿತೇಂದ್ರಿಯ. ನಿನ್ನ ಅನುಗ್ರಹದಿಂದ ಧರ್ಮದವಿಚಾರಗಳನ್ನು ನಾನು ಅರಿತೆನು'' ಎಂದು ಸ್ತುತಿಸಿ, ಪೌರಾಣಿಕನನ್ನು ವಸ್ತ್ರಭೂಷಣಾದಿಗಳಿಂದ ಆದರಿಸಬೇಕು. ದಿನವೂ ಪುರಾಣ ಶ್ರವಣ ಸಮಯದಲ್ಲಿ ಹೀಗೆ ಆದರ-ಸತ್ಕಾರಮಾಡಿ ಪ್ರಾರ್ಥಿಸಿದಲ್ಲಿ ಭಗವಂತನ ಸ್ವರೂಪನಾದ ವ್ಯಾಸಮಹರ್ಷಿಯ ಪ್ರಸಾದದಿಂದ ಆತನು ಐಶ್ವರ್ಯವಂತನೂ ಕೀರ್ತಿವಂತನೂ ಆಗಿ ಬಹುಕಾಲ ಸುಖಿಸುವನು.

ನಾರದೋಕ್ತಾನಿಮಾನ್ ಧರ್ಮಾನ್ ಯಃಕುರ್ಯಾನ್ನಿಯತೇಂದ್ರಿಯಃ ।
ಕೃತ್ಸ್ನಂಫಲಮ ವಾಪ್ನೋತಿ ಪುರಾಣಶ್ರವಣಸ್ಯ ವೈ ॥

ನಾರದ ಮುನಿಯು ಹೇಳಿದ ಈ ಧರ್ಮಗಳನ್ನು ಯಾವನು ಜಿತೇಂದ್ರಿಯನಾಗಿ ಆಚರಿಸುತ್ತಾನೋ ಅವನು ಪುರಾಣಶ್ರವಣದಿಂದ ಸಂಪೂರ್ಣ ಫಲಪಡೆಯುತ್ತಾನೆ.

॥ ಸೂತ ಉವಾಚ ॥

ಮತ್ಸ್ಯರೂಪೀ ಭಗವಾನ್ಮನವೇಬುದ್ಧಿಶಾಲಿನೇ ।
ಆವಾಪೋದ್ಘಾತಸಹಿತಮುಕ್ತ್ವಾಹ್ಯಂತರ್ದಧೌ ತದಾ ॥

ಮತ್ಸ್ಯಾವತಾರವನ್ನೆತ್ತಿದ ಪೂಜನೀಯನಾದ ವಿಷ್ಣುವು ಬಹುಪ್ರಾಜ್ಞನಾದ ವೈವಸ್ವತಮನುವಿಗೆ ಸಾದ್ಯಂತವಾಗಿ ಈ ಪುರಾಣವನ್ನು ವಿವರಿಸಿ ಅದೃಶ್ಯನಾದನು. ಶ್ರೀಕೃಷ್ಣದ್ವೈಪಾಯನ ಮಹರ್ಷಿಗಳಿಂದ ವಿರಚಿತವಾದ ಮತ್ಸ್ಯಮಹಾಪುರಾಣವು ಸಮಾಪ್ತವಾಯಿತು.

## ಮತ್ಸ್ಯಮಹಾಪುರಾಣದಲ್ಲಿಯ ಸುಭಾಷಿತಗಳು

**ಏಕಃ ಸ್ಥಾಸ್ಯಸಿದೇವೇಷು ದಗ್ಧೇಷ್ವಪಿಪರಂತಪ ।**
**ಸೋಮಸೂರ್ಯಾವಹಂ ಬ್ರಹ್ಮಾ ಚತುರ್ಲೋಕ ಸಮನ್ವಿತಃ ।**
**ನರ್ಮದಾಚನದೀ ಪುಣ್ಯಾ ಮಾರ್ಕಂಡೇಯೋ ಮಹಾನೃಷಿಃ ।**
**ಭವೋ ವೇದಾಃ ಪುರಾಣಾನಿ ವಿದ್ಯಾಭಿಃ ಸರ್ವತೋವೃತಂ ॥**

ಸೂರ್ಯ ಚಂದ್ರರು, ನಾನು ಹದಿನಾಲ್ಕು, ಲೋಕಸಹಿತನಾದ ಚತುರ್ಮುಖ, ಪುಣ್ಯನದಿನರ್ಮದೆ, ಮಹರ್ಷಿ, ಮಾರ್ಕಂಡೇಯ, ಈಶ್ವರ, ವೇದಗಳು, ಪುರಾಣಗಳು ಮತ್ತು ಸಮಸ್ತ ವಿದ್ಯಾವೃತವಾದ ಈ ಜಗತ್ತು ಇವೆಲ್ಲವೂ ಪ್ರಳಯ ಕಾಲದಲ್ಲಿ ನಿನ್ನ ಸಂಗಡ ಇರುತ್ತವೆ.

**ಯಥಾ ಭುಜಂಗಾಃ ಸರ್ಪಾಣಾಮಾಕಾಶಂ ವಿಶ್ವಪಕ್ಷಿಣಃ ।**
**ವಿದಂತಿ ಮಾರ್ಗಂ ದಿವ್ಯಾನಾಂ ದಿವ್ಯಾಏವನ ಮಾನವಾಃ ॥**

ಹಾವುಗಳ ದಾರಿಯನ್ನು ಹಾವುಗಳು, ಹಕ್ಕಿಗಳು ಆಕಾಶಮಾರ್ಗವನ್ನು ತಿಳಿಯುವಂತೆ ಮಹಾವ್ಯಕ್ತಿಗಳ ಚರಿತ್ರೆ ಮಹಾವ್ಯಕ್ತಿಗಳಿಗೆ ತಿಳಿಯುತ್ತದೆ. ಮಾನವರಿಗೆ ಸಾಧ್ಯವಿಲ್ಲ.

**ಕಾರ್ಯಾಕಾರ್ಯಾ ನ ದೇವಾನಾಂ ಶುಭಾಶುಭ ಫಲಪ್ರದಾಃ ।**
**ಯಸ್ಮಾತ್ತಸ್ಮಾನ್ನ ರಾಜೇಂದ್ರ ತದ್ವಿಚಾರೋನೃಣಾಂ ಶುಭಃ ॥**

ದೇವತೆಗಳು ಆಚರಿಸುವ ನಿಷಿದ್ಧ ಕಾರ್ಯಗಳು ಅವರಿಗೆ ಶುಭಾಶುಭ ಫಲಗಳನ್ನು ಕೊಡತಕ್ಕವು ಅಲ್ಲ. ಆದಕಾರಣ ರಾಜನೇ ಆ ವಿಷಯದ ವಿಮರ್ಶೆಯು ಮನುಷ್ಯರಿಗೆ ಅಲ್ಲ.

**ವಿರಂಚಿರ್ಯತ್ರ ಭಗವಾಂಸ್ತತ್ರ ದೇವೀಸರಸ್ವತೀ ।**
**ಭಾರತೀಯತ್ರ ಯತ್ರೈವ ತತ್ರ ತತ್ರ ಪ್ರಜಾಪತಿಃ ॥**

ಬ್ರಹ್ಮ ಸರಸ್ವತಿಯರು ಗಂಡಹೆಂಡಿರು. ಪೂಜ್ಯನಾದ ಬ್ರಹ್ಮನು ಎಲ್ಲಿ ಇರುವನೋ ಸರಸ್ವತಿ ಅಲ್ಲಿ ಇರುವಳು. ಸರಸ್ವತಿಯು ಎಲ್ಲಿ ಇರುವಳೋ ಅಲ್ಲಿ ಬ್ರಹ್ಮನಿರುವನು.

**ಯಥಾ ರವೇಶ್ಚ ರಹಿತಾ ಛಾಯಾ ನೋದೃಶ್ಯತೇ ಕ್ವಚಿತ್ ।**
**ಗಾಯತ್ರೀ ಬ್ರಹ್ಮಣಃ ಪಾರ್ಶ್ವಂ ತಥೈವ ನ ವಿಮುಂಚತಿ ॥**

ಹೇಗೆ ಛಾಯಾದೇವಿಯು ಸೂರ್ಯನನ್ನು ಅಗಲದೇ ಇರುವಳೋ ಅದರಂತೆ ಗಾಯತ್ರಿಯೂ ಬ್ರಹ್ಮನ ಸಮೀಪವನ್ನು ಬಿಡದೇ ಇರುವಳು.

**ವೇದರಾಶಿಃ ಸ್ಮೃತೋ ಬ್ರಹ್ಮಾ ಸಾವಿತ್ರೀ ತದ್ವಿಧಿಷ್ಠಿತಾ ।**
**ತಸ್ಮಾನ್ನ ಕಶ್ಚಿದ್ದೋಷಸ್ಯಾತ್ಸಾವಿತ್ರೀಗಮನೇ ವಿಭೋಃ ॥**

ಚತುರ್ಮುಖನು ವೇದರಾಶಿ. ಸಾವಿತ್ರಿಯು ಅದರ ಅಧಿದೇವತೆ. ಆದ್ದರಿಂದ ಸಾವಿತ್ರಿಯ ಸಮಾಗಮದಿಂದ ಅವನಿಗೆ ಯಾವ ದೋಷಗಳೂ ಇಲ್ಲ.

**ನಸ್ಥಾತವ್ಯಂ ನಗಂತವ್ಯಂ ವೃಕ್ಷ ಮೂಲೇಷು ಸರ್ವದಾ ।**
**ನೋಪಸ್ಕಾರೇಷೂಪವಿತೇನ್ಮುಸಲೋಲೂಖಲಾದಿಷು ॥**

**ಜಲೇಚ ನಾವಗಾಹೇತ ಶೂನ್ಯಾಗಾರಂಚ ವರ್ಜಯೇತ್ ॥**
**ವಲ್ಮೀಕಾಯಾಂನ ತೀಷ್ಠೇತನ ಚೋದ್ವಿಗ್ನಮನಾ ಭವೇತ್ ॥**

**ವಿಲಿಖೇನ್ನ ನಖೈರ್ಭೂಮಿಂ ನಾಂಗಾರೇಣ ನಭಸ್ಮನಾ ।**
**ನಶಯಾಲುಃ ಸದಾ ತಿಷ್ಠೇದ್ವ್ಯಾಯಾಮಂ ಚ ವಿವರ್ಜಯೇತ್ ॥**

**ನತುಷಾಂಗಾರಭಸ್ಮಾಸ್ಥಿಕಪಾಲೇಷು ಸಮಾವಿಶೇತ್ ।**
**ವರ್ಜಯೇತ್ಕಲಹಂ ಲೋಕೈರ್ಗಾತ್ರಭಂಗಂ ತಥೈವಚ ॥**

ಗರ್ಭಿಣಿಯಾದವಳು ಮರದ ಕೆಳಗೆ ನಿಲ್ಲಬಾರದು, ನಡೆಯಬಾರದು. ಸಾಸಿವೆ, ಮೆಣಸಿನಕಾಯಿ ಮುಂತಾದವುಗಳ ಘಾಟಕುಡಿಯಬಾರದು. ಕುಟ್ಟುವದೂ, ಅರೆಯುವುದೂ ಮಾಡಮಾರದು. ನೀರಿನಲ್ಲಿ ಇಳಿಯಬಾರದು. ಜನರಿಲ್ಲದ ಮನೆಯಲ್ಲಿ ಇರಬಾರದು. ಹುತ್ತದಮೇಲೆ ಕಾಲಿಡಬಾರದು. ಗಾಬರಿಗೊಳ್ಳಬಾರದು. ಉಗರಿನಿಂದ ನೆಲಕೆರೆಯುವದು, ಇದ್ದಲೂ ಬೂದಿಗಳಿಂದ ಬರೆಯುವದು ತಪ್ಪು. ಯಾವಾಗಲೂ ಮಲಗಿರಬಾರದು. ಆಯಾಸಕರ ವ್ಯಾಯಾಮವನ್ನು ತೆಗೆದುಕೊಳ್ಳಬಾರದು. ಹೊಟ್ಟು, ಇದ್ದಲು, ಬೂದಿ, ಮೂಳೆ, ಮತ್ತು ಮಡಕೆಯ ಚೂರುಗಳ ಮೇಲೆ ನಡೆಯಬಾರದು. ಜನರೊಡನೆ ಜಗಳವಾಡಬಾರದು. ಮೈ ಮುರಿಯುವದನ್ನು ಬಿಡಬೇಕು.

**ನಮುಕ್ತಕೇಶಾ ತಿಷ್ಠೇತ ನಾಽಶುಚಿಃ ಸ್ಯಾತ್ಕದಾಚನ ।**
**ನಶಯೀತೋತ್ತರಶಿರಾ ನಚಾಪರಶಿರಾಃ ಕ್ವಚಿತ್ ॥**

ತಲೆಯನ್ನು ಕೆದರಿಕೊಂಡಿರಬಾರದು. ಎಂದಿಗೂ ಅಶುಚಿಯಾಗಿರಕೂಡದು. ಉತ್ತರಕ್ಕೂ ಪಶ್ಚಿಮಕ್ಕೂ ತಲೆಯಿಟ್ಟು ಎಂದಿಗೂ ಮಲಗಬಾರದು.

**ನವಸ್ತ್ರಹೀನಾ ನೋದ್ವಿಗ್ನಾ ನಚಾರ್ದ್ರಚರಣಾ ಸತೀ ।**
**ನಾಽಮಂಗಲ್ಯಾಂ ವದೇದ್ವಾಚಂ ನಚಹಾಸ್ಯಾಧಿಕಾ ಭವೇತ್ ॥**

ಬಟ್ಟೆಯಿಲ್ಲದೆ ಇರಬಾರದು. ಕಳವಳದಿಂದ ಕೂಡಿಯೂ ಇರಬಾರದು. ಒದ್ದೆಯಾದ ಕಾಲನ್ನು ಒರೆಸಿಕೊಳ್ಳದೆಯೂ, ಸತಿ ಇರಬಾರದು. ಅಮಂಗಳ ಶಬ್ದ ನುಡಿಯಬಾರದು. ಹಾಸ್ಯ ಮಿತಿಮೀರಬಾರದು.

ಕುರ್ಯಾತ್ತು ಗುರು ಶುಶ್ರೂಷಾಂ ನಿತ್ಯಂ ಮಾಂಗಲ್ಯತತ್ಪರಾ
ಸರ್ವೌಷಧಿಬಿಃ ಕೋಷ್ಣೇನ ವಾರಿಣಾ ಸ್ನಾನಮಾಚರೇತ್ ॥

ಗುರುಹಿರಿಯರ ಸೇವೆಮಾಡಬೇಕು. ಯಾವಾಗಲೂ ಶುಭಕಾರ್ಯ ಮಾಡುತ್ತಿರಬೇಕು. ಎಲ್ಲ ಮೂಲಿಕೆಗಳಿಂದ ಬೆರೆತ ಸುಖೋಷ್ಣವಾದ ನೀರಿನಲ್ಲಿ ಸ್ನಾನಮಾಡಬೇಕು.

ಕೃತರಕ್ಷಾ ಸುಭೂಷಾಚವಾಸ್ತು ಪೂಜನ ತತ್ಪರಾ ।
ತಿಷ್ಠೇತ್ಪ್ರಸನ್ನವದನಾ ಭರ್ತುಃ ಪ್ರಿಯ ಹಿತೇರತಾ ॥

ರಕ್ಷಣೆಯನ್ನು ಮಾಡಿಕೊಂಡು ಸೌಮ್ಯ ಆಲಂಕಾರಗಳಿಂದ ಕೂಡಿ, ಗ್ರಹದೇವತೆ ಪೂಜೆಯಲ್ಲಿ ಮಗ್ನಳಾಗಿರಬೇಕು. ಯಾವಾಗಲೂ ನಸುನಗೆಯಿಂದ ಪತಿಯ ಸೇವೆಯಲ್ಲಿ ಕಾಲಕಳೆಯಬೇಕು.

ದಾನಶೀಲಾ ತೃತೀಯಾಯಾಂ ಪಾರ್ವಣ್ಯಂ ನಕ್ತಮಾಚರೇತ್।
ಇತಿವೃತ್ತಾ ಭವೇನ್ನಾರೀ ವಿಶೇಷೇಣತುಗರ್ಭಿಣೀ ॥

ಉದಾರ ಸ್ವಭಾವದವಳಾಗಿ ಮೂರನೆಯ ತಿಂಗಳಲ್ಲಿ (ಹುಣ್ಣಿಮೆಯಲ್ಲಿ) ರಾತ್ರಿ ಭೋಜನವ್ರತಕ್ಕೆಗೊಳ್ಳಬೇಕು. ಗರ್ಭಿಣಿಯು ಇಂತಹ ನಡತೆಯುಳ್ಳ ವಳಾಗಿರಬೇಕು.

ವಿತಾನ್ಯಪಿ ಚದೇಯಾನಿ ಪಿತೃಭ್ಯಃಪ್ರಿಯಮಿಚ್ಛತಾ ॥
ಪಿತೃನ್ ಪ್ರೀಣಾತಿ ಯೋ ಭಕ್ತ್ಯಾ ತೇ ಪುನಃ ಪ್ರೀಣಯಂತಿ ತಂ ॥

ಯಚ್ಛಂತಿ ಪಿತರಃ ಪುಷ್ಟಿಂ ಸ್ವರ್ಗಾರೋಗ್ಯಂ ಪ್ರಜಾಪತಿಃ
ದೇವಕಾರ್ಯಾದಪಿ ಪುನಃ ಪಿತೃಕಾರ್ಯಂವಿಶಿಷ್ಯತೆ ॥

ಭಕ್ತಿ ವಿಶ್ವಾಸಗಳಿಂದ ಯಾವನು ಪಿತೃಗಳನ್ನು ತೃಪ್ತಿಗೊಳಿಸುವನೋ ಅವನನ್ನು ಅವರೂ ಸಂತೋಷಪಡಿಸುವರು. ಪುಷ್ಟಿಯನ್ನು ಕರುಣಿಸುವರು, ದೇವಕಾರ್ಯಕ್ಕಿಂತಲೂ ಪಿತೃಕಾರ್ಯಹೆಚ್ಚಿನದು.

ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿಗೌರಿವ
ಶನೈರಾವರ್ತ್ಯಮಾನಸ್ತು ಮೂಲಾನ್ಯಪಿ ನಿಕೃಂತತಿ ॥

ಹುಲ್ಲು ತಿಂದ ಆಕಳು ಕೂಡಲೇ ಹಾಲು ಕೊಡುವದಿಲ್ಲ. ಅದರಂತೆ ಅಧರ್ಮವು ಕೂಡಲೇ ಫಲವನ್ನು ತೋರಿಸುವದಿಲ್ಲ. ಅದು ಮೆಲ್ಲಗೆ ವ್ಯಾಪಿಸಿ ಮೂಲ ಪುರುಷರನ್ನೂ ಇರಿಯುತ್ತದೆ.

ಯದಿನಾತ್ಮನಿ ಪುತ್ರೇಷು ನ ಚೇತ್ಪಶ್ಯತಿ ನಪ್ತ್ರಷು
ಪಾಪಮಾಚರಿತಂ ಕರ್ಮ ತ್ರಿವರ್ಗಮತಿವರ್ತತೇ ॥

ಯಜಮಾನನು ತನ್ನಲ್ಲಿ, ತನ್ನ ಮಕ್ಕಳಲ್ಲಿ ಅಥವಾ ಮೊಮ್ಮಕ್ಕಳಲ್ಲಿ ನಡೆದ ಪಾಪಕರ್ಮವನ್ನು ಗಮನಿಸದಿದ್ದರೆ ಅದು ಅವನ ಧರ್ಮಾರ್ಥಕಾಮಗಳನ್ನು ಮೆಟ್ಟಿ ತುಳಿಯುವದು. ಅಳತೆಮೀರಿ ತಿಂದ ಆಹಾರವು ಹೊಟ್ಟೆಯಲ್ಲಿ ತೊಂದರೆ ಕೊಡುವಂತೆ, ಮಾಡಿದ ಪಾಪವು ಕೊನೆಗೆ ದುಃಖವನ್ನು ಕೊಡುವದು.

**ತ್ರಯ ಏವಾಧನಾ ರಾಜನ್ ಭಾರ್ಯಾ ದಾ ಸ್ತಥಾಸುತಃ**
**ಯತ್ತೇ ಸಮಧಿಗಚ್ಛಂತಿ ಯಸ್ಯತೇತಸ್ಯತದ್ಧನಂ ॥**

ರಾಜನೇ, ಲೋಕದಲ್ಲಿ ಈ ಮೂವರಿಗೆ ಮಾತ್ರ ಸ್ವಂತ ಸ್ವತ್ತು ಎಂಬುದು ಇಲ್ಲ ಹೆಂಡತಿ, ಸೇವಕ ಮತ್ತು ಮಗ ಇವರಿಗೆ ಧನವು ಸಿಕ್ಕರೆ ಅದು ಅವರದಲ್ಲ. ಅದು ಯಾರಿಗೆ ಸಂಬಂಧಪಟ್ಟಿರುವದೊ ಅವರದು.

**ಋತಂಯೋ ಯಾಚಮಾನಾಯಾ ನದದಾತಿಪ್ರಮಾನ್ವಿತಃ ।**
**ಭ್ರೂಣಹೇತ್ಯುಚ್ಯತೇ ಬ್ರಹ್ಮನ್ ಸಚೇಹ ಬ್ರಹ್ಮವಾದಿಭಿ ಃ ॥**

ಬ್ರಹ್ಮಜ್ಞಾನಿಯೇ, ಋತುಕಾಲದಲ್ಲಿ ಸಮಾಗಮ ಅಪೇಕ್ಷಿಸುವ ಸ್ತ್ರೀಯ ಮನೋರಥವನ್ನು ಸಲ್ಲಿಸದಿರುವವನು ಭ್ರೂಣಹತ್ಯಾದೋಷಪಾತ್ರನಾಗುವನೆಂದು ವೇದಶಾಸ್ತ್ರಜ್ಞರು ಹೇಳುತ್ತಾರೆ.

*ಇತಿ ಮತ್ಸ್ಯಮಹಾಪುರಾಣ ಭಾಗ-೧ ಸಮಾಪ್ತಿ*

ಸರ್ವೇಜನಾಃ ಸುಖಿನೋ ಭವಂತು
ಓಂ ಶಾಂತಿಃ ಶಾಂತಿಃ ಶಾಂತಿಃ

—೦—

